ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೭

# ಶ್ರೀಸ್ಕಾಂದಮಹಾಪುರಾಣಂ

೪

## ಕಾಶೀಖಂಡ

(ಪೂರ್ವಾರ್ಧ–ಉತ್ತರ ಭಾಗ)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ

ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ಸಿಟಿ

೧೯೪೮

# ಶ್ರೀಸ್ಕಾಂದಮಹಾಪುರಾಣಂ

ಳ

**ಕಾಶೀಖಂಡ**

(ಪೂರ್ವಾರ್ಧ–ಉತ್ತರ ಭಾಗ)

(ಮೂಲ ಮತ್ತು ಅನುವಾದ ಸಹಿತ)

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

## ೪

## ಕಾಶೀಖಂಡ

(ಪೂರ್ವಾರ್ಧ–ಉತ್ತರ ಭಾಗ)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ಸಿಟಿ

೧೯೪೮

# ಅ ರಿ ಕೆ

ಈ ಸಂಪುಟದಲ್ಲಿ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀ ಖಂಡದ ಪೂರ್ವಾರ್ಧದಲ್ಲಿ ಉತ್ತರ ಭಾಗವು ಮುಗಿದಿರುತ್ತದೆ. ಮೂಲದಲ್ಲಿ 'ಪೂರ್ವ ಭಾಗ, ಉತ್ತರ ಭಾಗ' ಎಂದು ವಿಭಾಗವೇನೂ ಇಲ್ಲದಿದ್ದರೂ ಸಂಪುಟೀಕರಣದ ಸೌಲಭ್ಯಕ್ಕಾಗಿ ಇಲ್ಲಿ ಮಾತ್ರ ಹೀಗೆ ಭಾಗಮಾಡಲಾಗಿದೆ. ಈ ಸಂಪುಟದೊಡನೆ ಕಾಶೀಖಂಡದ ಪೂರ್ವಾರ್ಧವು ಸಮಾಪ್ತವಾಗಿರುತ್ತದೆ. ಕ್ಷೇತ್ರೋತ್ತಮವಾದ ಕಾಶಿಯ ವೈಭವವನ್ನು ವರ್ಣಿಸುವ ಈ ಕಾಶೀಖಂಡದ ಬಗ್ಗೆ ಸೂಚಿಸಬೇಕಾದ ಸಂಗತಿಗಳನ್ನು ಈ ಖಂಡದ ಮೊದಲ ಸಂಪುಟದ ಅರಿಕೆಯಲ್ಲಿ ಸಂಗ್ರಹವಾಗಿ ಕೊಡಲಾಗಿದೆ. ವಾಚಕರು ದಯವಿಟ್ಟು ಅದನ್ನೊಮ್ಮೆ ಮನಸ್ಕರಿಸಬೇಕೆಂದು ಬಿನ್ನಹ.

ಈ ಸಂಪುಟದ ಅನುವಾದಕಾರ್ಯದಲ್ಲಿ ನನಗೆ ನೆರವಾದ ವಿದ್ವಾನ್ ಶ್ರೀ ಕೆ. ನರಸಿಂಹಾಚಾರ್ಯರವರಿಗೆ ನನ್ನ ಕೃತಜ್ಞತೆಯ ವಂದನೆಗಳು.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಽಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯೆಪಾಲಿಸಿ ಸಂರಕ್ಷಿಸಲೆಂದು ಸಂಪ್ರಾರ್ಥಿಸುತ್ತೇನೆ.

ನೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ

# ವಿಷಯಾನುಕ್ರಮಣಿಕೆ

॥ ಶ್ರೀಃ ॥

**ಅಥ ಮಂಗಳಾಚರಣಶ್ಲೋಕಃ**

**ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।**
**ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥**

**ತಾತ್ಪರ್ಯ**

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

ಅಥ ಕಾಶೀಖಂಡಸ್ಯ ಪೂರ್ವಾರ್ಧೇ ಉತ್ತರಭಾಗಃ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಯೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

## ಅಥ ದ್ವಾವಿಂಶೋಽಧ್ಯಾಯಃ

### ಬ್ರಹ್ಮಕೃತ ಕಾಶೀಪ್ರಶಂಸಾವರ್ಣನಂ

**ಶಿವಶರ್ಮೋವಾಚ :—**

**ಧ್ರುವಾಖ್ಯಾನಮಿದಂ ರಮ್ಯಂ ಮಹಾಪಾತಕನಾಶನಂ ।**
**ಮಹಾಶ್ಚರ್ಯಕರಂ ಪುಣ್ಯಂ ಶ್ರುತ್ವಾ ತೃಪ್ತೋಽಸ್ಮಿ ಭೋ ಗಣೌ ॥ ೧ ॥**

**ಅಗಸ್ತ್ಯ ಉವಾಚ :—**

**ಇತ್ಥಂ ಯಾವದ್ದ್ವಿಜೋ ಬ್ರೂತೇ ವಿಮಾನಂ ವಾಯುವೇಗಗಂ ।**
**ತಾವತ್ಪ್ರಾಪ ಮಹರ್ಲೋಕಂ ಸ್ವರ್ಲೋಕಾತ್ಪರಮಾದ್ಭುತಂ ॥ ೨ ॥**

---

### ಕನ್ನಡದ ಅನುವಾದ

#### ಬ್ರಹ್ಮಕೃತ ಕಾಶೀಪ್ರಶಂಸಾವರ್ಣನ

೧. ಶಿವಶರ್ಮನು ಹೇಳುತ್ತಾನೆ:—ಎಲೈ ಗಣಗಳಿರಾ! ಬಹು ಮನೋಹರವೂ, ಮಹಾಪಾತಕನಾಶಕವೂ, ಮಹಾಶ್ಚರ್ಯಕರವೂ, ಪುಣ್ಯಕರವೂ ಆದ ಈ ಧ್ರುವಾಖ್ಯಾನವನ್ನು ನಿಮ್ಮಿಂದ ಕೇಳಿ ತೃಪ್ತನಾಗಿರುವೆನು.

೨. ಅಗಸ್ತ್ಯನು ಹೇಳುತ್ತಾನೆ:—ಎಲೌ ಲೋಪಾಮುದ್ರೆಯೆ! ಶಿವಶರ್ಮ ಬ್ರಾಹ್ಮಣನು ಈ ರೀತಿ ಹೇಳುತ್ತಿರುವಂತೆಯೆ ವಾಯುವೇಗವುಳ್ಳ ಆ ವಿಮಾನವು ಸ್ವರ್ಗಲೋಕಕ್ಕಿಂತಲೂ ಆಚೆಗಿರುವ ಮಹರ್ಲೋಕವನ್ನು ಸಮೀಪಿಸಿತು.

ದ್ವಿಜೋಽಥ ಲೋಕಂ ಸಂವೀಕ್ಷ್ಯ ಸರ್ವತೋ ಮಹಸಾವೃತಂ ।
ತೌ ಗಣೌ ಪ್ರತ್ಯುವಾಚೇದಂ ಕೋಽಯಂ ಲೋಕೋ ಮನೋಹರಃ॥ ೩ ॥
ತಾವೂಚತುಸ್ತತೋ ವಿಪ್ರಂ ನಿಶಾಮಯ ಮಹಾಮತೇ ।
ಅಯಂ ಸ ಹಿ ಮಹರ್ಲೋಕಃ ಸ್ವರ್ಲೋಕಾತ್ಪರಮಾದ್ಭುತಃ ॥ ೪ ॥
ಕಲ್ಪಾಯುಷೋ ವಸಂತ್ಯತ್ರ ತಪಸಾ ಧೂತಕಲ್ಮಷಾಃ ।
ವಿಷ್ಣುಸ್ಮರಣಸಂಕ್ಷೀಣಸಮಸ್ತಕ್ಲೇಶಸಂಚಯಾಃ ॥ ೫ ॥
ನಿರ್ವ್ಯಾಜಪ್ರಣಿಧಾನೇನ ದೃಷ್ಟ್ವಾ ತೇಜೋಮಯಂ ಜಗತ್ ।
ಮಹಾಯೋಗಸಮಾಯುಕ್ತಾ ವಸಂತ್ಯತ್ರ ಸುರೋತ್ತಮಾಃ ॥ ೬ ॥
ಇತ್ಥಂ ಕಥಾಂ ಕಥಯತೋರ್ಭಗವದ್ಗಣಯೋಃ ಪ್ರಿಯೇ ।
ಕ್ಷಣಾರ್ಧೇನ ವಿಮಾನಂ ತಜ್ಜನಲೋಕಂ ನಿನಾಯ ತಾನ್ ॥ ೭ ॥
ನಿವಸಂತ್ಯಮಲಾ ಯತ್ರ ಮಾನಸಾ ಬ್ರಹ್ಮಣಃ ಸುತಾಃ ।
ಸನಂದನಾದ್ಯಾ ಯೋಗೀಂದ್ರಾಃ ಸರ್ವೇ ತೇ ಹ್ಯೂರ್ಧ್ವರೇತಸಃ ॥ ೮ ॥
ಅನ್ಯೇ ತು ಯೋಗಿನೋ ಯೇ ವೈ ಹ್ಯಸ್ಖಲದ್ಬ್ರಹ್ಮಚಾರಿಣಃ ।
ಸರ್ವದ್ವಂದ್ವವಿನಿರ್ಮುಕ್ತಾಸ್ತೇ ವಸಂತ್ಯತಿನಿರ್ಮಲಾಃ ॥ ೯ ॥

---

೩. ಶಿವಶರ್ಮನು ಸುತ್ತಲೂ ತೇಜಸ್ಸಿನಿಂದ ಬೆಳಗುತ್ತಿರುವ ಆ ಲೋಕವನ್ನು ಕಂಡು, "ಎಲೈ ಗಣಗಳೇ! ಮನೋಹರವಾದ ಈ ಲೋಕವಾವುದು" ಎಂದು ಪ್ರಶ್ನಿಸಿದನು.

೪. ಆಗ ಆ ವಿಷ್ಣುಗಣಗಳು ಅವನನ್ನು ಕುರಿತು, "ಎಲೈ ಮಹಾಮತಿಯೆ! ಕೇಳು. ಇದು ಸ್ವರ್ಲೋಕದಾಚೆಗಿರುವ ಮಹರ್ಲೋಕವು. ಇದು ಮಹಾದ್ಭುತವಾದುದು.

೫-೬. ಪಾಪಗಳನ್ನು ತಪಶ್ಚರಣದಿಂದ ಕಳೆದವರೂ, ವಿಷ್ಣುಸ್ಮರಣೆಯಿಂದ ಕ್ಷಯಿಸಿದ ಕ್ಲೇಶಗಳುಳ್ಳವರೂ ಆದ ತಪಸ್ವಿಗಳು ಇಲ್ಲಿ ಕಲ್ಪಾಯುಷ್ಯವುಳ್ಳವರಾಗಿ ನೆಲಸಿರುತ್ತಾರೆ. ನಿಷ್ಕಪಟವಾದ ಸಮಾಧಿಯೋಗದಿಂದ ಜಗತ್ತೆಲ್ಲವನ್ನೂ ತೇಜೋಮಯವಾದ ಬ್ರಹ್ಮವನ್ನಾಗಿಯೆ ಪರಿಭಾವಿಸಿ ಮಹಾಯೋಗಿಗಳಾಗಿರುವ ಸುರೋತ್ತಮರು ಈ ಲೋಕದಲ್ಲಿ ವಾಸಮಾಡುತ್ತಾರೆ."

೭. ಎಲೌ ಲೋಪಾಮುದ್ರೆಯೆ! ವಿಷ್ಣುಗಣಗಳು ಈ ರೀತಿ ಹೇಳುತ್ತಿರುವಂತೆಯೇ ಒಂದು ಕ್ಷಣಾರ್ಧದಲ್ಲಿಯೆ ಆ ವಿಮಾನವು ಜನಲೋಕದ ಬಳಿಗೆ ಅವರನ್ನೊಯ್ಯಿತು.

೮. ಆ ಜನಲೋಕದಲ್ಲಿ ಯಾದರೊ, ಊರ್ಧ್ವರೇತಸ್ಕರೂ, ಬ್ರಹ್ಮಮಾನಸಪುತ್ರರೂ, ಯೋಗೀಂದ್ರರೂ ಆದ ಸನಕಸನಂದನಾದಿಗಳು ನೆಲಸಿರುತ್ತಾರೆ.

೯. ನಿತ್ಯಬ್ರಹ್ಮಚಾರಿಗಳೂ, ಸಮಸ್ತ ದ್ವಂದ್ವಗಳಿಂದಲೂ ಬಿಡುಗಡೆಯಾದ

ಜನಲೋಕಾತ್ತಪೋಲೋಕಸ್ತೇಷಾಂ ಲೋಚನಗೋಚರಃ ।
ಕೃತಸ್ತೇನ ವಿಮಾನೇನ ಮನೋವೇಗೇನ ಗಚ್ಛತಾ ॥ ೧೦ ॥
ವೈರಾಜಾ ಯತ್ರ ತೇ ದೇವಾ ವಸೇಯುರ್ದಾಹವರ್ಜಿತಾಃ ।
ವಾಸುದೇವೇ ಮನೋ ಯೇಷಾಂ ವಾಸುದೇವಾರ್ಪಿತಕ್ರಿಯಾಃ ॥ ೧೧ ॥
ತಪಸಾ ತೋಷ್ಯ ಗೋವಿಂದಮಭಿಲಾಷಾವಿವರ್ಜಿತಾಃ ।
ತಪೋಲೋಕಮಿಮಂ ಪ್ರಾಪ್ಯ ವಸಂತಿ ವಿಜಿತೇಂದ್ರಿಯಾಃ ॥ ೧೨ ॥
ಶಿಲೋಂಛವೃತ್ತಯೋ ಯೇ ವೈ ದಂತೋಲೂಖಲಿನಶ್ಚ ಯೇ ।
ಅಶ್ಮಕುಟ್ಟಾಶ್ಚ ಮುನಯಃ ಶೀರ್ಣಪರ್ಣಾಶಿನಶ್ಚ ಯೇ ॥ ೧೩ ॥
ಗ್ರೀಷ್ಮೇ ಪಂಚಾಗ್ನಿತಪಸೋ ವರ್ಷಾಸು ಸ್ಥಂಡಿಲೇಶಯಾಃ ।
ಹೇಮಂತಶಿಶಿರಾರ್ಧೇ ಯೇ ಕ್ಷಪಂತಿ ಸಲಿಲೇ ಕ್ಷಪಾಃ ॥ ೧೪ ॥
ಕುಶಾಗ್ರನೀರವಿಪ್ರುಷಸ್ತೃಷಿತಾ ಯತಯೋಽಪಿಬನ್ ।
ವಾತಾಶಿನೋಽತಿಕ್ಷುಧಿತಾಃ ಪಾದಾಗ್ರಾಂಗುಷ್ಠ ಭೂಸ್ಪೃಶಃ ॥ ೧೫ ॥

---

ವರೂ, ಬಹುನಿರ್ಮಲಚಿತ್ತರೂ, ಪರಿಶುದ್ಧರೂ ಆದ ಇತರ ಯೋಗಿಗಳೂ ಈ ಲೋಕದಲ್ಲಿ ವಾಸಮಾಡುತ್ತಿರುವರು.

೧೦. ಇಂತಹ ಮಹಿಮಾಸ್ಪದವಾದ ಜನಲೋಕವಾದ ತರುವಾಯ ಮನೋವೇಗದ ಆ ವಿಮಾನದಲ್ಲಿದ್ದ ಅವರಿಗೆ ತಪೋಲೋಕವು ಗೋಚರವಾಯಿತು.

೧೧. ಶ್ರೀ ವಾಸುದೇವನಲ್ಲಿಯೆ ನಟ್ಟ ಮನಸ್ಸುಳ್ಳವರೂ, ತಾವು ಮಾಡುವ ಸಮಸ್ತ ಸತ್ಕರ್ಮಗಳೆಲ್ಲವನ್ನೂ ಶ್ರೀ ವಾಸುದೇವನಲ್ಲಿಯೆ ಸಮರ್ಪಿಸಿರುವವರೂ ಆದ ವೈರಾಜರೆಂಬ ಆಹಾರವಿಹೀನರಾದ ದೇವತೆಗಳು ಈ ತಪೋಲೋಕದಲ್ಲಿ ವಾಸಮಾಡುತ್ತಿರುವರು.

೧೨. ಜಿತೇಂದ್ರಿಯರಾದ ಮಾನವರು ತಪಸ್ಸಿನಿಂದ ಗೋವಿಂದನನ್ನು ಸಂತೋಷಗೊಳಿಸಿ ಆತನಲ್ಲಿ ಭಕ್ತಿಯೊಂದನ್ನಲ್ಲದೆ ಮತ್ತಾವ ಆಕಾಂಕ್ಷೆಯೂ ಇಲ್ಲದವರಾಗಿ ಈ ಲೋಕವನ್ನು ಸೇರಿ ಸುಖಿಸುತ್ತಾರೆ.

೧೩–೨೧. ಶಿಲೋಂಛವೃತ್ತಿಯವರೂ, ಹಲ್ಲುಗಳೇ ಒರಳುಕಲ್ಲನ್ನಾಗಿಸಿ ಕೊಂಡು ಸಿದ್ಧಾನ್ನಗಳ ಗೋಜಿಗೆ ಹೋಗದೆ ದೊರೆತುದನ್ನು ಮಾತ್ರ ಹಾಗೆ ಹಾಗೆಯೆ ಭಕ್ಷಣಮಾಡಿಕೊಂಡು ತಪೋಯೋಗವನ್ನು ಮುಂದುವರಿಸುವವರೂ, ಕಲ್ಲುಗಳಿಂದಲೇ ಧಾನ್ಯಗಳನ್ನು ಕುಟ್ಟಿ ಜೀವಿಸುತ್ತ ಯೋಗವನ್ನು ಸಾಧಿಸು ವವರೂ, ಉದುರಿದ ಎಲೆಗಳನ್ನು ಮೆದ್ದು ತಪಸ್ಸನ್ನು ಸಾಗಿಸುವವರೂ, ಗ್ರೀಷ್ಮರ್ತುವಿನಲ್ಲಿ ಪಂಚಾಗ್ನಿತಪಸ್ಸನ್ನೆಸಗುವವರೂ, ವರ್ಷರ್ತುವಿನಲ್ಲಿ ನೆಲದ ಮೇಲೆ ಪವಳಿಸುವವರೂ, ಹೇಮಂತದಲ್ಲಿ ಜಲದಲ್ಲಿಯೇ ರಾತ್ರಿಗಳನ್ನು ಕಳೆಯು ವವರೂ, ಬಾಯಾರಿದಾಗ ಕುಶಾಗ್ರದಲ್ಲಿ ನಿಂತ ನೀರ್ಪನಿಗಳನ್ನು ಮಾತ್ರ ಪಾನ

ಊರ್ಧ್ವದೋಷೋ ರವಿದೃಶಸ್ತ್ವೇಕಾಂಘ್ರಿಸ್ಥಾಣುನಿಶ್ಚಲಾಃ ।
ಯೇ ವೈ ದಿವಾ ನಿರುಚ್ಛ್ವಾಸಾ ಮಾಸೋಚ್ಛ್ವಾಸಾಶ್ಚ ಯೇ ಪುನಃ॥ ೧೬ ॥
ಮಾಸೋಪವಾಸವ್ರತಿನಶ್ಚಾತುರ್ಮಾಸ್ಯವ್ರತಾಶ್ಚ ಯೇ ।
ಋತ್ವಂತತೋಯಪಾನಾ ಯೇ ಯೇ ಷಣ್ಮಾಸೋಪವಾಸಕಾಃ ॥ ೧೭ ॥
ಯೇ ಚ ವರ್ಷನಿಮೇಷಾ ವೈ ವರ್ಷಧಾರಾಂಬುತರ್ಷಕಾಃ ।
ಯೇ ಚ ಸ್ಥಾಣೂಪಮಾಂ ಪ್ರಾಪ್ತಾ ಮೃಗಕಂಡೂತಿಸೌಖ್ಯದಾಃ ॥ ೧೮ ॥
ಜಟಾಟವೀಕೋಟರಾಂತಃಕೃತನೀಡಾಂಡಜಾಶ್ಚ ಯೇ ।
ಪ್ರರೂಢವಾಮಲೂರಾಂಗಾಃ ಸ್ನಾಯುನದ್ಧಾಸ್ಥಿಸಂಚಯಾಃ ॥ ೧೯ ॥
ಲತಾಪ್ರತಾನೈಃ ಪರಿತೋ ವೇಷ್ಟಿತಾವಯವಾಶ್ಚ ಯೇ ।
ಸಸ್ಯಾನಿ ಚ ಪ್ರರೂಢಾನಿ ಯದಂಗೇಷು ಚಿರಸ್ಥಿತಿ ॥ ೨೦ ॥
ಇತ್ಯಾದಿ ಸುತಪಃಕ್ಲಿಷ್ಟವಷ್ಮಾಣೋ ಯೇ ತಪೋಧನಾಃ ।
ಬ್ರಹ್ಮಾಯುಷಸ್ತಪೋಲೋಕೇ ತೇ ವಸಂತ್ಯಕುತೋಭಯಾಃ ॥ ೨೧ ॥

---

ಮಾಡಿಕೊಂಡಿರುವ ಯತಿಗಳೂ, ಬಹುವಾಗಿ ಹಸಿದಾಗ ವಾಯುಭಕ್ಷಣೆಯನ್ನು ಮಾತ್ರ ಮಾಡುವವರೂ, ಕಾಲಹೆಬ್ಬೆರಳಲ್ಲಿ ನಿಂತು ತಪಸ್ಸನ್ನಾಚರಿಸುವವರೂ, ತೋಳುಗಳನ್ನು ಮೇಲೆತ್ತಿ ಸೂರ್ಯನನ್ನೇ ದೃಷ್ಟಿಸಿನೋಡುತ್ತ ಒಂಟಿಕಾಲಿನಲ್ಲಿ ನಿಂತು ಅತ್ತಿತ್ತ ಕದಲದೆ ತಪಸ್ಸುಮಾಡುವವರೂ, ಹಗಲು ಉಸಿರೇ ಬಿಡದೆ ಯೋಗವನ್ನು ಸಾಧಿಸುವವರೂ, ತಿಂಗಳುಕಾಲ ಉಸಿರುಕಟ್ಟಿ ಪ್ರಾಣವಾಯುವನ್ನು ಬಂಧಿಸಿರುವವರೂ, ಮಾಸೋಪವಾಸಿಗಳೂ, ಚಾತುರ್ಮಾಸ್ಯವ್ರತಿಗಳೂ, ಋತುವು ಕಳೆದ ಬಳಿಕ ಜಲಪಾನಮಾಡುವವರೂ, ಆರುತಿಂಗಳಕಾಲ ಉಪವಾಸ ವ್ರತವನ್ನಾಚರಿಸುವವರೂ, ವರ್ಷಮಧ್ಯದಲ್ಲಿಯಾಗಲಿ, ವರ್ಷದ ಅಂತ್ಯದಲ್ಲಿಯಾಗಲಿ ಕಣ್ರೆಪ್ಪೆಗಳನ್ನು ಮುಚ್ಚುವವರೂ, ಮಳೆಗಾಲದಲ್ಲಿ ಮಾತ್ರ ಗಗನದಿಂದ ನೇರವಾಗಿ ಬರುವ ಜಲವನ್ನು ಮಾತ್ರ ಕುಡಿದು ಬಾಯಾರಿಕೆಯನ್ನು ಕಳೆಯುವವರೂ, ತಪಸ್ಸುಮಾಡುತ್ತಲೇ ಕಲ್ಲಾಗಿ ಪರಿಣಮಿಸಿ ಜಿಂಕೆಗಳಿಗೆ ಸಂತೋಷವನ್ನುಂಟುಮಾಡುವ ಉಜ್ಜುಕಲ್ಲುಗಳಾಗಿರುವವರೂ, ಜಟೆಗಳಲ್ಲಿಯೇ ಹಕ್ಕಿಗಳು ಗೂಡುಕಟ್ಟಿ ವಾಸಮಾಡಲಾದವರೂ, ತಪಸ್ಸನ್ನೆಸಗುವಾಗ ಸುತ್ತಲೂ ಹುತ್ತಬೆಳೆದಂಥವರೂ, ನಾಡಿಗಳಿಂದ ಕೂಡಿದ ಎಲಬುಗಳು ಮಾತ್ರ ಉಳಿದಿರುವವರೂ, ಲತೆಗಳಿಂದ ಸುತ್ತುಬಳಸಿದ ಮೈಯುಳ್ಳವರೂ, ಬಹುಕಾಲದಿಂದಲೂ ಮೈಯಲ್ಲಿ ಬೆಳೆದು ನಿಂತಿರುವ ಸಸ್ಯಗಳುಳ್ಳವರೂ, ಇನ್ನೂ ಹೀಗೆಯೆ ಬಗೆಬಗೆಯ ತಪಸ್ಸುಗಳಿಂದ ದೇಹವನ್ನು ಕ್ಲೇಶಪಡಿಸಿದ ತಪೋಧನರೆಲ್ಲರೂ ಈ ತಪೋಲೋಕದಲ್ಲಿ ಬ್ರಹ್ಮನ ಆಯುಸ್ಸನ್ನುಳ್ಳವರಾಗಿ ಯಾವ ಭಯವೂ ಇಲ್ಲದೆ ವಾಸಮಾಡುತ್ತಿರುವರು.

ಯಾವದಿತ್ಥಂ ಸ ಪುಣ್ಯಾತ್ಮಾ ಶೃಣೋತಿ ಗಣಯೋರ್ಮುಖಾತ್ ।
ತಾವನ್ನೇತ್ರಾತಿಥೀಭೂತಃ ಸತ್ಯಲೋಕೋ ಮಹೋಜ್ಜ್ವಲಃ ॥ ೨೨ ॥
ತ್ವರಾವಂತೌ ಗಣೌ ತತ್ರ ವಿಮಾನಾದವರುಹ್ಯ ತೌ ।
ಸ್ರಷ್ಟಾರಂ ಸರ್ವಲೋಕಾನಾಂ ತೇನ ಸಾರ್ಧಂ ಪ್ರಣೇಮತುಃ ॥ ೨೩ ॥
ಬ್ರಹ್ಮೋವಾಚ :—
ಗಣಾವಸೌ ದ್ವಿಜೋ ಧೀಮಾನ್ ವೇದವೇದಾಂಗಪಾರಗಃ ।
ಸ್ಮೃತ್ಯುಕ್ತಾಚಾರಚಂಚುಶ್ಚ ಪ್ರತೀಪಃ ಪಾಪಕರ್ಮಸು ॥ ೨೪ ॥
ಅಯಿ ದ್ವಿಜ ಮಹಾಪ್ರಾಜ್ಞ ಜಾನೇ ತ್ವಾಂ ಶಿವಶರ್ಮಕ ।
ಸಾಧೂಕೃತಂ ತ್ವಯಾ ವತ್ಸ ಸುತೀರ್ಥಪ್ರಾಣಮೋಕ್ಷಣಾತ್ ॥ ೨೫ ॥
ಸತ್ವರಂ ಗತ್ವರಂ ಸರ್ವಂ ಯಚ್ಚೈತದ್ಭುವತೇಕ್ಷಿತಂ ।
ದೈನಂದಿನಪ್ರಲಯತಃ ಸೃಜಾಮಿ ಚ ಪುನಃ ಪುನಃ ॥ ೨೬ ॥
ಆವೈರಾಜಂ ಪ್ರತಿಪದಮುಪಸಂಹರತೇ ಹರಃ ।
ಕಾ ಕಥಾ ಮಶಕಾಭಾನಾಂ ನೃಣಾಂ ಮರಣಧರ್ಮಿಣಾಂ ॥ ೨೭ ॥

---

೨೨. ಎಲೌ ಲೋಪಾಮುದ್ರೆಯೆ! ಈ ಪ್ರಕಾರವಾಗಿ ವರ್ಣಿಸಿ ಹೇಳು ತ್ತಿರುವ ಆ ವಿಷ್ಣುಪಾರ್ಷದರ ಮಾತನ್ನು ಕೇಳುತ್ತಿರುವಂತೆಯೆ ಪುಣ್ಯಾತ್ಮನಾದ ಆ ಶಿವಶರ್ಮನು ಮಹೋಜ್ಜ್ವಲವಾದ ಬ್ರಹ್ಮನ ಸತ್ಯಲೋಕವನ್ನು ಕಂಡನು.

೨೩. ಆಗ ಗಣಗಳು ತ್ವರೆಗೊಂಡು ಒಡನೆಯೆ ಆ ವಿಪ್ರನೊಡನೆ ವಿಮಾನ ದಿಂದ ಇಳಿದು ಸಮಸ್ತ ಲೋಕಗಳಿಗೂ ಸೃಷ್ಟಿಕರ್ತನಾದ ಬ್ರಹ್ಮದೇವನನ್ನು ಕಂಡು ಆತನನ್ನು ನಮಸ್ಕರಿಸಿದರು.

೨೪. ಬ್ರಹ್ಮನು ಹೇಳುತ್ತಾನೆ:—ಅಯ್ಯಾ ವಿಷ್ಣುಗಣಗಳೇ! ಮಹಾ ಬುದ್ಧಿ ಶಾಲಿಯೂ, ವೇದವೇದಾಂಗ ಪಾರಂಗತನೂ, ಸ್ಮೃತ್ಯುಕ್ತವಾದ ಆಚಾರಗಳಲ್ಲಿ ಆಸಕ್ತನೂ, ಅವುಗಳ ಅನುಷ್ಠಾನದಲ್ಲಿ ಚತುರನೂ, ಪಾಪಪರಾಙ್ಮುಖನೂ ಆದ ಶಿವಶರ್ಮನೆಂಬ ದ್ವಿಜಶ್ರೇಷ್ಠನೀತನೇ ಅಲ್ಲವೆ!

೨೫. ಎಲೈ ಮಹಾಪ್ರಾಜ್ಞನಾದ ಶಿವಶರ್ಮನೇ! ನಾನು ನಿನ್ನನ್ನು ಚೆನ್ನಾಗಿ ಬಲ್ಲೆ. ವತ್ಸ! ನೀನು ಬಹಳ ಒಳ್ಳೆಯ ಕೆಲಸವನ್ನೇ ಮಾಡಿದೆ. ನೀನು ತೀರ್ಥಸ್ಥಳದಲ್ಲಿ ಪ್ರಾಣತ್ಯಾಗವನ್ನೆಸಗಿದುದು ಬಹಳ ಒಳ್ಳೆಯದಾಯಿತು.

೨೬. ನೀನು ಯಾವ ಈ ಪ್ರಪಂಚವನ್ನು ಜಾಗ್ರತೆಯಾಗಿ ಕ್ಷಯಿಸತಕ್ಕು ದೆಂದು ತಿಳಿದುಕೊಂಡೆಯೋ ಇದನ್ನೇ ನಾನು ದೈನಂದಿನ ಪ್ರಳಯವಾದೊಡನೆ ಮತ್ತೆ ಮತ್ತೆ ಸೃಜಿಸುತ್ತಿರುತ್ತೇನೆ.

೨೭. ಹರನಾದರೋ ವೈರಾಜಲೋಕಪರ್ಯಂತವಾದ ಈ ಜಗತ್ತೆಲ್ಲವನ್ನೂ ಮತ್ತೆ ಮತ್ತೆ ಉಪಸಂಹರಿಸುವನು. ಇಂತಿರುವಲ್ಲಿ ಮಶಕಪ್ರಾಯರೂ, ಮರಣ ಧರ್ಮಿಗಳೂ ಆದ ಮಾನವರ ವಿಷಯವನ್ನೇನು ಹೇಳಬೇಕು.

**ಚತುರ್ಷು ಭೂತಗ್ರಾಮೇಷು ಹ್ಯೇಕ ಏವ ಗುಣೋ ನೃಣಾಂ ।**
**ತಸ್ಮಿನ್ನೈವ ಭಾರತೇ ವರ್ಷೇ ಕರ್ಮಭೂಮೌ ಮಹೀಯಸಿ ॥ ೨೮ ॥**
**ಚಪಲಾನಿ ವಿನಿರ್ಜಿತ್ಯೇಂದ್ರಿಯಾಣಿ ಮನಸಾ ಸಹ ।**
**ವಿಹಾಯ ವೈರಿಣಂ ಲೋಭಂ ವಿಶ್ವಗ್ಗುಣಗಣಸ್ಯ ಚ ॥ ೨೯ ॥**
**ಧರ್ಮವಂಶಹರಂ ಕಾಮಮರ್ಥಸಂಚಯಹಾರಿಣಂ ।**
**ಜರಾಪಲಿತಕರ್ತಾರಂ ವಿನಿಷ್ಕೃತ್ಯ ವಿಚಾರತಃ ॥ ೩೦ ॥**
**ಜಿತ್ವಾ ಕ್ರೋಧರಿಪುಂ ಧೈರ್ಯಾತ್ತಪಸೋ ಯಶಸಃ ಶ್ರಿಯಃ ।**
**ಶರೀರಸ್ಯಾಽಪಿ ಹರ್ತಾರಂ ನೇತಾರಂ ತಾಮಸೀಂ ಗತಿಂ ॥ ೩೧ ॥**
**ಸದಾ ಮದಂ ಪರಿತ್ಯಜ್ಯ ಪ್ರಮಾದೈಕಪದಪ್ರದಂ ।**
**ಪ್ರಮಾದೈಕಶರಣ್ಯಂ ಚ ಸಂಪದಾಂ ವಿನಿವರ್ತಕಂ ॥ ೩೨ ॥**
**ಸರ್ವತ್ರ ಲಘುತಾ ಹೇತುಮಹಂಕಾರಂ ವಿಹಾಯ ಚ ।**
**ದೂಷಣಾರೋಪಣೇ ಯತ್ನಂ ಕುರ್ವಾಣಂ ಸಜ್ಜನೇಷ್ವಪಿ ॥ ೩೩ ॥**
**ಹಿತ್ವಾ ಮೋಹಂ ಮಹಾದ್ರೋಹರೋಪಣಂ ಮತಿಘಾತಿನಂ ।**
**ಅತ್ಯಂತಮಂಧೀಕರಣಮಂಧತಾಮಿಸ್ರದರ್ಶಕಂ ॥ ೩೪ ॥**

---

೨೮. ಅಯ್ಯಾ ಶಿವಶರ್ಮನೇ ! ಅಂಡಜ, ಸ್ವೇದಜ, ಜರಾಯುಜ, ಉದ್ಭಿಜ್ಜಗಳೆಂಬ ಚತುರ್ವಿಧ ಭೂತಗಳಲ್ಲಿ, ಮಹಿಮಾಸ್ಪದವೂ, ಕರ್ಮಭೂಮಿಯೂ ಆದ ಭಾರತವರ್ಷದಲ್ಲಿ ಜನ್ಮವೆತ್ತಿದ ಮಾನವರಿಗೆ ಒಂದು ಗುಣವುಂಟು.

೨೯-೩೫. ಭರತಖಂಡದಲ್ಲಿ ಜನಿಸಿದ ಮಾನವನು ಅತಿ ಚಂಚಲವಾದ ಇಂದ್ರಿಯಗಳನ್ನೂ, ಮನಸ್ಸನ್ನೂ ಜಯಿಸಿ, ಆತ್ಮವಿಜಯಕ್ಕೇ ಅಲ್ಲದೆ, ಸಮಸ್ತ ಸದ್ಗುಣಗಳಿಗೂ ವೈರಿಯಾದ ಲೋಭವನ್ನು ದೂರೀಕರಿಸಿ, ಧರ್ಮಸಂತತಿಯನ್ನು ನಾಶಗೊಳಿಸುವುದೂ, ಅರ್ಥಸಂಚಯವನ್ನೂ ಅಪಹರಿಸಿ ದೇಹಕ್ಕೆ ಜರೆ ಮತ್ತು ಸುಕ್ಕುಗಳನ್ನುಂಟುಮಾಡುವುದೂ ಆದ ಕಾಮವನ್ನು ವಿಚಾರಪೂರ್ವಕವಾಗಿ ತಿಳಿದು ಹೊರದೂಡಿ, ತಪಸ್ಸು, ಯಶಸ್ಸು, ಸಂಪತ್ತುಗಳನ್ನೂ ಹಾಳುಮಾಡುವುದೇ ಅಲ್ಲದೆ ಶರೀರವನ್ನೂ ಶಿಥಿಲಗೊಳಿಸಿ ಮಾನವನನ್ನು ತಮಸ್ಸಿಗೊಯ್ಯುವ ಕ್ರೋಧವನ್ನು ವಿವೇಕಬಲದಿಂದ ಗೆದ್ದು, ಸಕಲ ಸಂಪದಗಳನ್ನೂ ಧ್ವಂಸಗೊಳಿಸಿ ಪ್ರಮಾದಗಳೆಲ್ಲಕ್ಕೂ ಒಂದೇ ಒಂದು ನೆಲೆಯೆನಿಸಿರುವುದೂ, ಆಶ್ರಯಿಸಿದ ಮಾನವನನ್ನು ಪ್ರಮಾದಕ್ಕೇ ಸಿಲುಕಿಸುವುದೂ ಆದ ಮದವನ್ನು ಬಹಿಷ್ಕರಿಸಿ, ಎಲ್ಲೆಡೆಗಳಲ್ಲಿಯೂ ಅಪಮಾನಕ್ಕೆ ಒಳಗುಮಾಡುವುದೂ, ಸಜ್ಜನರನ್ನು ದೂಷಿಸುವಂತೆಸಗುವುದೂ ಆದ ಅಹಂಕಾರವನ್ನು ತೊರೆದು, ದ್ರೋಹಪರ್ವತಕ್ಕೇರಿಸಿ, ಮತಿಭ್ರಂಶವನ್ನುಂಟುಮಾಡಿ, ಕಣ್ಣಿದ್ದರೂ ಕುರುಡುಗೊಳಿಸಿ ಅಂಧತಾಮಿಸ್ರ ನರಕವನ್ನು ಸಂದರ್ಶನಮಾಡಿಸುವುದೂ ಆದ ಮೋಹವನ್ನು ಬಿಟ್ಟು, ಮಹಾಜನರು

ಶ್ರುತಿಸ್ಮೃತಿಪುರಾಣೋಕ್ತಂ ಪರಿಕ್ಷುಣ್ಣಂ ಮಹಾಜನೈಃ ।
ಧರ್ಮಸೋಪಾನಮಾರುಹ್ಯ ಯದಿಹಾಯಾಂತಿ ಹೇಲಯಾ ॥ ೩೫ ॥
ಕರ್ಮಭೂಮಿಂ ಸಮಾಹಂತೇ ಸರ್ವ ಸ್ವರ್ಗೌಕಸೋ ದ್ವಿಜ ।
ಯತ್ತತ್ರಾರ್ಜಿತಭೋಕ್ತಾರಃ ಪದೇಷೂಚ್ಚಾವಚೇಷ್ವಮೀ ॥ ೩೬ ॥
ನಾರ್ಯಾವರ್ತಸಮೋ ದೇಶೋ ನ ಕಾಶೀ ಸದೃಶೀ ಪುರೀ ।
ನ ವಿಶ್ವೇಶಸಮಂ ಲಿಂಗಂ ಕ್ವಾಽಪಿ ಬ್ರಹ್ಮಾಂಡಮಂಡಲೇ ॥ ೩೭ ॥
ಸಂತಿ ಸ್ವರ್ಗಾ ಬಹುವಿಧಾಃ ಸುಖೇತರವಿವರ್ಜಿತಾಃ ।
ಸುಕೃತೈಕಫಲಾಃ ಸರ್ವೇ ಯುಕ್ತಾಃ ಸರ್ವಸಮೃದ್ಧಿಭಿಃ ॥ ೩೮ ॥
ಸ್ವರ್ಲೋಕಾದಧಿಕಂ ರಮ್ಯಂ ನಹಿ ಬ್ರಹ್ಮಾಂಡಗೋಲಕೇ ।
ಸರ್ವೇ ಯತಂತೇ ಸ್ವರ್ಗಾಯ ತಪೋದಾನವ್ರತಾದಿಭಿಃ ॥ ೩೯ ॥
ಸ್ವರ್ಲೋಕಾದಪಿ ರಮ್ಯಾಣಿ ಪಾತಾಲಾನೀತಿ ನಾರದಃ ।
ಪ್ರಾಹ ಸ್ವರ್ಗಸಭಾಮಧ್ಯೇ ಪಾತಾಲೇಭ್ಯಃ ಸಮಾಗತಃ ॥ ೪೦ ॥

---

ಸೇವಿಸಿ ಕೃತಾರ್ಥರಾಗಿ ಶ್ರುತಿಸ್ಮೃತಿಪುರಾಣೋಕ್ತವಾದ ಧರ್ಮಸೋಪಾನವನ್ನೇರಿ ನನ್ನ ಲೋಕವಾದ ಈ ಸತ್ಯಲೋಕಕ್ಕೆ ಬರುತ್ತಾರೆ.

೩೬. ಎಲೈ ಬ್ರಾಹ್ಮಣನೇ! ಈ ಕಾರಣದಿಂದಲೇ ಸ್ವರ್ಗವಾಸಿಗಳಾಗಿ ಈ ಕರ್ಮಭೂಮಿಯಲ್ಲಿ ಆರ್ಜಿಸಿದ ಪುಣ್ಯದ ಸಲುವಾಗಿ ಉಚ್ಚಪದವಿಗಳನ್ನು ಅನುಭವಿಸುತ್ತಿರುವ ದೇವತೆಗಳೆಲ್ಲರೂ ಮತ್ತೆ ಇಲ್ಲಿಯೆ ಜನಿಸಲು ಅಪೇಕ್ಷಿಸುತ್ತಾರೆ.

೩೭. ಆರ್ಯಾವರ್ತಕ್ಕೆಣೆಯಾದ ದೇಶವಾಗಲಿ, ಕಾಶಿಗೆಣೆಯಾದ ಪಟ್ಟಣವಾಗಲಿ, ವಿಶ್ವೇಶ್ವರನಿಗೆಣೆಯಾದ ಶಿವಲಿಂಗವಾಗಲಿ ಬ್ರಹ್ಮಾಂಡಮಂಡಲದಲ್ಲೆಲ್ಲಿಯೂ ಇರುವುದಿಲ್ಲ.

೩೮. ಕೇವಲ ಸುಖವೊಂದೇ ಇರುವುದಾಗಿ ದುಃಖಲೇಶವೂ ಇಲ್ಲದ ಬಗೆಬಗೆಯ ಸ್ವರ್ಗಗಳಿರುವುವು. ಅವುಗಳೆಲ್ಲವೂ ಪುಣ್ಯಸಂಚಯದಿಂದ ಮಾತ್ರವೇ ಪಡೆಯತಕ್ಕುವಾಗಿರುವುವು. ಅವುಗಳಲ್ಲಿ ಪ್ರತಿಯೊಂದೂ ಸಮೃದ್ಧವಾಗಿರುವುವು.

೩೯. ಬ್ರಹ್ಮಾಂಡಮಂಡಲದಲ್ಲಿ ಸ್ವರ್ಗಲೋಕಕ್ಕಿಂತಲೂ ಮನೋಹರವಾದ ಲೋಕವೇ ಇರುವುದಿಲ್ಲ. ಸಕಲರೂ ತಪಸ್ಸು, ದಾನ ಮತ್ತು ವ್ರತಗಳಿಂದ ಈ ಸ್ವರ್ಗಪ್ರಾಪ್ತಿಗಾಗಿ ಯತ್ನಿಸುತ್ತಾರೆ.

೪೦. ಆದರೆ ಪಾತಾಳಲೋಕಗಳನ್ನು ನೋಡಿಬಂದ ನಾರದನು ಸ್ವರ್ಗಸಭೆಯಲ್ಲಿ ಪಾತಾಳಲೋಕಗಳು, ಸ್ವರ್ಗಲೋಕಕ್ಕಿಂತಲೂ ಮನೋಹರವಾದುವೆಂದು ಹೇಳಿದನು.

**ಆಹ್ಲಾದಕಾರಿಣಃ ಶುಭ್ರಾ ಮಣಯೋ ಯತ್ರ ಸುಪ್ರಭಾಃ ।**
**ನಾಗಾಂಗಾಭರಣಪ್ರೋತಾಃ ಪಾತಾಲಂ ಕೇನ ತತ್ಸಮಂ ॥ ೪೧ ॥**
**ದೈತ್ಯದಾನವಕನ್ಯಾಭಿರಿತಶ್ಚೇತಶ್ಚ ಶೋಭಿತೇ ।**
**ಪಾತಾಲೇ ಕಸ್ಯ ನ ಪ್ರೀತಿರ್ವಿಮುಕ್ತಸ್ಯಾಽಪಿ ಜಾಯತೇ ॥ ೪೨ ॥**
**ದಿವಾಽರ್ಕರಶ್ಮಯಸ್ತತ್ರ ಪ್ರಭಾಂ ತನ್ವಂತಿ ನಾಽಽತಪಂ ।**
**ಶಶಿನಶ್ಚ ನ ಶೀತಾಯ ನಿಶಿ ದ್ಯೋತಾಯ ಕೇವಲಂ ॥ ೪೩ ॥**
**ಯತ್ರ ನ ಜ್ಞಾಯತೇ ಕಾಲೋ ಗತೋಽಪಿ ದನುಜಾದಿಭಿಃ ।**
**ವನಾನಿ ನದ್ಯೋ ರಮ್ಯಾಣಿ ಸದಂಭಾಂಸಿ ಸರಾಂಸಿ ಚ ॥ ೪೪ ॥**
**ಕಲಾಃ ಪುಂಸ್ಕೋಕಿಲಾಲಾಪಾಃ ಸುಚ್ಚೈಲಾನಿ ಶುಚೀನಿ ಚ ।**
**ಭೂಷಣಾನ್ಯತಿರಮ್ಯಾಣಿ ಗಂಧಾದ್ಯಮನುಲೇಪನಂ ॥ ೪೫ ॥**
**ವೀಣಾವೇಣುಮೃದಂಗಾದಿ ನಿಸ್ವನಾಃ ಶ್ರುತಿಹಾರಿಣಃ ।**
**ಹಾಟಕೇಶಂ ಮಹಾಲಿಂಗಂ ಯತ್ರ ವೈ ಸರ್ವಕಾಮದಂ ॥ ೪೬ ॥**
**ಏತಾನ್ಯನ್ಯಾನಿ ರಮ್ಯಾಣಿ ಭೋಗಯೋಗ್ಯಾನಿ ದಾನವೈಃ ।**
**ದೈತ್ಯೋರಗೈಶ್ಚ ಭುಜ್ಯಂತೇ ಪಾತಾಲಾಂತರಗೋಚರೈಃ ॥ ೪೭ ॥**
**ಪಾತಾಲೇಭ್ಯೋಽಪಿ ವೈ ರಮ್ಯಂ ದ್ವಿಜ ವರ್ಷಮಿಲಾವೃತಂ ।**
**ರತ್ನಸಾನುಂ ಸಮಾಶ್ರಿತ್ಯ ಪರಿತಃ ಪರಿಸಂಸ್ಥಿತಂ ॥ ೪೮ ॥**

---

೪೧. ನಾಗಾಂಗನೆಯರ ಆಭರಣಗಳಲ್ಲೆಲ್ಲ ಅತ್ಯಾನಂದವನ್ನುಂಟುಮಾಡುವ ಶುಭ್ರವಾದ ಮಣಿಗಳು ಕಂಗೊಳಿಸುತ್ತಿರುವ ಆ ಪಾತಾಳಲೋಕವನ್ನು ಯಾರು ತಾನೆ ವರ್ಣಿಸಲು ಸಮರ್ಥರಾದಾರು ?

೪೨. ಅತ್ತಿತ್ತ ದೈತ್ಯದಾನವ ಕನ್ಯಕೆಯರು ಸಂಚರಿಸಿ ಶೋಭೆಗೊಂಡಿರುವ ಆ ಪಾತಾಳಲೋಕದ ವಿಷಯದಲ್ಲಿ ಯಾರಿಗೆ ತಾನ ಪ್ರೀತಿಯುಂಟಾಗದು.

೪೩. ಅಲ್ಲಿ ಹಗಲುಹೊತ್ತು ಸೂರ್ಯಕಿರಣಗಳು ಬೆಳಕನ್ನು ಬೀರುವು ದಾಗಲಿ ಬಿಸಿಲನ್ನು ಚೆಲ್ಲುವುದಿಲ್ಲ. ಚಂದ್ರನು ಕೇವಲ ರಾತ್ರಿಯ ಕಾಲವನ್ನು ಸೂಚಿಸುವುದಕ್ಕಲ್ಲದೆ ಶೈತ್ಯಕ್ಕಾಗಿ ಇರವುದಿಲ್ಲವು.

೪೪–೪೭. ಕೋಗಿಲೆಗಳ ಸುಮಧುರವಾದ ಗಾನ; ಸೊಗಸಾದ ತೆಳು ಬಟ್ಟೆಗಳು; ಅವೂ ಬಹು ಶುಭ್ರವಾದುವು; ನಿಗನಿಗನೆ ಹೊಳೆಯುವ ಆಭರಣ ಗಳು; ಬೇಕುಬೇಕಾದ ಸುಗಂಧದ್ರವ್ಯಗಳು; ಕಿವಿಗಿಂಪಾದ ವೀಣೆ, ಕೊಳಲು, ಮೃದಂಗ ಮೊದಲಾದ ವಾದ್ಯಗಳ ಧ್ವನಿಗಳು; ಸಮಸ್ತ ಇಷ್ಟಾರ್ಥಗಳನ್ನೂ ಸಲ್ಲಿಸಿಕೊಡುವ ಹಾಟಕೇಶ್ವರಲಿಂಗ; ಇಂತಹ ಅನೇಕ ಭೋಗಭಾಗ್ಯಗಳನ್ನು ಅಲ್ಲಿರುವ ದೈತ್ಯದಾನವರೂ, ನಾಗರೂ ಅನುಭವಿಸುತ್ತಾರೆ.

೪೮. ಅಯ್ಯಾ ವಿಪ್ರನೇ! ರತ್ನಸಾನುವೆನಿಸಿದ ಸುಮೇರು ಪರ್ವತವನ್ನು

ಸದಾ ಸುಕೃತಿನೋ ಯತ್ರ ಸರ್ವಭೋಗಭುಜೋ ದ್ವಿಜ ।
ನವಯೌವನಸಂಪನ್ನಾ ನಿತ್ಯಂ ಯತ್ರ ಮೃಗೀದೃಶಃ ॥ ೪೯ ॥
ಭೋಗಭೂಮಿರಿಯಂ ಪ್ರೋಕ್ತಾ ಶ್ರೇಯೋ ವಿನಿಮಯಾರ್ಜಿತಾ ।
ಭುಜ್ಯತೇ ತ್ವದ್ವಿಧೈರ್ಲೋಕೈಸ್ತೀರ್ಥಾಽಭಿತ್ಯಕ್ತದೇಹಕೈಃ ॥ ೫೦ ॥
ಅಕ್ಲೀಬಭಾಷಿಭಿಶ್ಚಾಽಪಿ ಪುತ್ರಕ್ಷೇತ್ರಾದ್ಯಹೀನಕೈಃ ।
ಪರೋಪಕಾರಸಂಕ್ಷೀಣಸುಖಾಯುರ್ಧನಸಂಚಯೈಃ ॥ ೫೧ ॥
ಸಂತಿ ದ್ವೀಪಾಹ್ಯನೇಕಾ ವೈ ಪಾರಾವಾರಾಂತರಸ್ಥಿತಾಃ ।
ಜಂಬೂದ್ವೀಪಸಮೋ ದ್ವೀಪೋ ನ ಕ್ವಾಽಪಿ ಜಗತೀತಲೇ ॥ ೫೨ ॥
ತತ್ರಾಽಪಿ ನವವರ್ಷಾಣಿ ಭಾರತಂ ತತ್ರ ಚೋತ್ತಮಂ ।
ಕರ್ಮಭೂಮಿರಿಯಂ ಪ್ರೋಕ್ತಾ ದೇವಾನಾಮಪಿ ದುರ್ಲಭಾ ॥ ೫೩ ॥

---

ಸುತ್ತುವರಿದು ವಿರಾಜಿಸುತ್ತಿರುವ ಇಳಾವೃತ್ತವೆಂಬ ಭೂಪ್ರದೇಶವು ಪಾತಾಳ ಲೋಕಗಳಿಗಿಂತಲೂ ರಮ್ಯವಾದುದು.

೪೯. ಈ ಪ್ರದೇಶದಲ್ಲಿರುವ ಜನಗಳೆಲ್ಲರೂ ಸದಾ ಪುಣ್ಯಶಾಲಿಗಳಾದವರು ; ಸಮಸ್ತ ಭೋಗಭಾಗ್ಯಗಳನ್ನನುಭವಿಸುವವರು ; ನವಯೌವನಶಾಲಿಗಳು ; ಇಲ್ಲಿ ಯಾವಾಗಲೂ ನಿತ್ಯಯುವತಿಯರಾದ ಸುಂದರಸ್ತ್ರೀಯರಿರುವರು.

೫೦. ಶ್ರೇಯಸ್ಸಿನ ವಿನಿಮಯದಿಂದಲೇ ದೊರಕುವ ಈ ಭೂಪ್ರದೇಶಗಳು ಕೇವಲ ಭೋಗಭೂಮಿಗಳೆಂದು ತಿಳಿಯಲಾಗಿವೆ. ಅಯ್ಯಾ ಶಿವಶರ್ಮನೆ! ಈ ಲೋಕಗಳು ತೀರ್ಥಯಾತ್ರೆಗಳನ್ನು ಮಾಡಿ ತೀರ್ಥಗಳಲ್ಲಿಯೇ ದೇಹವನ್ನು ತೊರೆದವರಿಂದ ಮಾತ್ರವೇ ಭೋಗಿಸಲ್ಪಡುತ್ತದೆ.

೫೧. ಸತ್ಯವಾದಿಗಳೂ, ಮಕ್ಕಳು ಮೊಮ್ಮಕ್ಕಳೂ, ಆಸ್ತಿಪಾಸ್ತಿಗಳೂ ಇರುವವರೂ, ಪರೋಪಕಾರಮಾಡುವುದರಲ್ಲಿಯೆ ಕಳೆದುಹೋದ ಸುಖ, ಆಯುಸ್ಸು, ಧನಗಳುಳ್ಳವರೂ ಆದ ಮಾನವರು ಈ ಭೂಮಿಗಳಲ್ಲಿ ಭೋಗ ಪಡುತ್ತಾರೆ.

೫೨. ಎಲೈ ಶಿವಶರ್ಮನೇ! ಸಮುದ್ರಮಧ್ಯದಲ್ಲಿ ಅನೇಕಾನೇಕ ದ್ವೀಪಗಳಿರುವುವು. ಆದರೆ ಜಂಬೂದ್ವೀಪಕ್ಕೆ ಸಮಾನವಾದ ದ್ವೀಪವು ಜಗತ್ತಿನಲ್ಲಿಯೇ ಇರುವುದಿಲ್ಲವು.

೫೩. ಆ ಜಂಬೂದ್ವೀಪದಲ್ಲಿಯೂ ಒಂಬತ್ತು ದ್ವೀಪಗಳಿರುತ್ತವೆ. (ಭದ್ರಾಶ್ವ, ಕೇತುಮಾಲ, ಭಾರತ, ಉತ್ತರಕುರು ಎಂಬೀದ್ವೀಪಗಳು ಚತುಸ್ಸಮುದ್ರಗಳಲ್ಲಿ ಸೇರಿಕೊಂಡಿರುವುವು.) ಇವುಗಳಲ್ಲಿ ಭಾರತವರ್ಷವು ಉತ್ತಮೋತ್ತಮವಾದುದು. ಇದು ಕರ್ಮಭೂಮಿಯೆಂದು ಹೇಳಲಾಗಿರುವುದಲ್ಲದೆ ದೇವತೆಗಳಿಗೂ ಇದು ದುರ್ಲಭವಾದುದು.

ಅಷ್ಟೌ ಕಿಂಪುರುಷಾದೀನಿ ದೇವಭೋಗ್ಯಾನಿ ತಾನಿ ತು ।
ತೇಷು ಸ್ವರ್ಗಾತ್ಸಮಾಗತ್ಯ ರಮಂತೇ ತ್ರಿದಿವೌಕಸಃ ॥ ೩೪ ॥
ಯೋಜನಾನಾಂ ಸಹಸ್ರಾಣಿ ನವ ವಿಸ್ತಾರತಸ್ತ್ವಿದಂ ।
ಭಾರತಂ ಪ್ರಥಮಂ ವರ್ಷಂ ಮೇರೋರ್ದಕ್ಷಿಣತಃ ಸ್ಥಿತಂ ॥ ೩೫ ॥
ತತ್ರಾಽಪಿ ಹಿಮವಿಂಧ್ಯಾದ್ರೇರಂತರಂ ಪುಣ್ಯದಂ ಪರಂ ।
ಗಂಗಾಯಮುನಯೋರ್ಮಧ್ಯೇ ಹ್ಯಂತರ್ವೇದೀಭುವಃ ಪರಾ ॥ ೩೬ ॥
ಕುರುಕ್ಷೇತ್ರಂ ಹಿ ಸರ್ವೇಷಾಂ ಕ್ಷೇತ್ರಾಣಾಮಧಿಕಂ ತತಃ ।
ತತೋಽಪಿ ನೈಮಿಷಾಽರಣ್ಯಂ ಸ್ವರ್ಗಸಾಧನಮುತ್ತಮಂ ॥ ೩೭ ॥
ನೈಮಿಷಾಽರಣ್ಯತೋಽಪೀಹ ಸರ್ವಸ್ಮಿನ್ ಕ್ಷಿತಿಮಂಡಲೇ ।
ಸರ್ವೇಭ್ಯೋಽಪಿ ಹಿ ತೀರ್ಥೇಭ್ಯಸ್ತೀರ್ಥರಾಜೋ ವಿಶಿಷ್ಯತೇ ॥ ೩೮ ॥
ಸ್ವರ್ಗದೋ ಮೋಕ್ಷದಶ್ಚೈವ ಸರ್ವಕಾಮಫಲಪ್ರದಃ ।
ಪ್ರಯಾಗಸ್ತನ್ಮಹತ್ಕ್ಷೇತ್ರಂ ತೀರ್ಥರಾಜ ಇತಿ ಸ್ಮೃತಃ ॥ ೩೯ ॥

---

೩೪. ಈ ಭರತಖಂಡವನ್ನುಳಿದು ಕಿಂಪುರುಷವೇ ಮೊದಲಾದ ಎಂಟು ದ್ವೀಪಗಳು ದೇವಭೂಮಿಗಳೆನಿಸಿದುವು. ದೇವತೆಗಳು ದೇವಲೋಕದಿಂದ ಇವುಗಳಲ್ಲಿಗೈತಂದು ಕ್ರೀಡಿಸುತ್ತಿರುತ್ತಾರೆ.

೩೫. ಎಲೈ ದ್ವಿಜನೆ! ಒಂಬತ್ತು ಸಾವಿರ ಯೋಜನಗಳ ವಿಸ್ತೀರ್ಣವುಳ್ಳುದಾಗಿ ಮೇರುಪರ್ವತಕ್ಕೆ ದಕ್ಷಿಣಕ್ಕಿರುವ ಭರತಖಂಡವು ಆ ನವದ್ವೀಪಗಳಲ್ಲಿ ಮೊತ್ತಮೊದಲನೆಯದು.

೩೬. ಭರತಖಂಡದಲ್ಲಿಯೂ ಹಿಮವತ್ಪರ್ವತಕ್ಕೂ, ವಿಂಧ್ಯಪರ್ವತಕ್ಕೂ ನಡುವಣ ಭಾರತಭೂಮಿಯು ಉತ್ಕೃಷ್ಟವಾದುದು. ಗಂಗಾಯಮುನಾನದಿಯ ನಡುವಣ ಭೂಮಿಯು ಭೂಮಿಯ ಅಂತರ್ವೇದಿಯೆನಿಸಿ ಅತ್ಯಂತ ಪಾವನವಾಗಿರುವುದು.

೩೭. ಭಾರತಾಂತರ್ಗತವಾದ ಕುರುಕ್ಷೇತ್ರವು ಎಲ್ಲ ಕ್ಷೇತ್ರಗಳಿಗಿಂತಲೂ ಶ್ರೇಷ್ಠವಾದುದು. ಅದಕ್ಕಿಂತಲೂ ನೈಮಿಷಾರಣ್ಯವು ಸ್ವರ್ಗವನ್ನು ಸಾಧಿಸಲು ಉತ್ತಮವೆನಿಸಿರುವುದು.

೩೮. ಈ ನೈಮಿಷಾರಣ್ಯಕ್ಕಿಂತಲೂ ಭೂಮಂಡಲದಲ್ಲೆಲ್ಲ ಸರ್ವತೀರ್ಥಗಳಿಗೂ ದೊರೆಯೆನಿಸಿರುವ ತೀರ್ಥರಾಜಪ್ರಯಾಗವು ವಿಶೇಷವಾದುದು.

೩೯. ಸ್ವರ್ಗವನ್ನೂ, ಮೋಕ್ಷವನ್ನೂ ದೊರಕಿಸುವುದಲ್ಲದೆ ಈ ಲೋಕದಲ್ಲಿ ಮಾನವರಿಗೆ ಸಕಲಾಭೀಷ್ಟಗಳನ್ನೂ ದೊರಕಿಸುವುದಾದುದರಿಂದ ಈ ಪ್ರಯಾಗವು ತೀರ್ಥರಾಜವೆನಿಸಿರುವುದು.

ಯಾಗಾಃ ಸರ್ವೇ ಮಯಾ ಪೂರ್ವಂ ತುಲಯಾ ವಿಧೃತಾ ದ್ವಿಜ ।
ತಚ್ಚ ತೀರ್ಥವರಂ ರಮ್ಯಂ ಕಾಮಿಕಂ ಕಾಮಪೂರಣಾತ್ ॥ ೬೦ ॥
ದೃಷ್ಟ್ವಾ ಪ್ರಕೃಷ್ಟಂ ಯಾಗೇಭ್ಯಃ ಪುಷ್ಟೇಭ್ಯೋ ದಕ್ಷಿಣಾದಿಭಿಃ ।
ಪ್ರಯಾಗಮಿತಿ ತನ್ನಾಮ ಕೃತಂ ಹರಿಹರಾದಿಭಿಃ ॥ ೬೧ ॥
ನಾಮಮಾತ್ರಸ್ಮೃತೇರ್ಯಸ್ಯ ಪ್ರಯಾಗಸ್ಯ ತ್ರಿಕಾಲತಃ ।
ಸ್ಮರ್ತುಃ ಶರೀರೇ ನೋ ಜಾತು ಪಾಪಂ ವಸತಿ ಕುತ್ರಚಿತ್ ॥ ೬೨ ॥
ಸಂತಿ ತೀರ್ಥಾನ್ಯನೇಕಾನಿ ಪಾಪತ್ರಾಣಕರಾಣಿ ಚ ।
ನ ಶಕ್ತಾನ್ಯಧಿಕಂ ದಾತುಂ ಕೃತ್ವೈನಃಪರಿಶುದ್ಧಿತಃ ॥ ೬೩ ॥
ಜನ್ಮಾಂತರೇಷ್ವಸಂಖ್ಯೇಷು ಯಃ ಕೃತಃ ಪಾಪಸಂಚಯಃ ।
ದುಷ್ಪ್ರಣೋದ್ಯೋಹಿ ನಿತರಾಂ ವ್ರತೈರ್ದಾನೈಸ್ತಪೋ ಜಪ್ಯೈಃ ॥ ೬೪ ॥
ಸ ತೀರ್ಥರಾಜಗಮನೋದ್ಯತಸ್ಯ ಶುಭಜನ್ಮನಃ ।
ಅಂಗೇಷು ವೇಪತೇಽತ್ಯಂತಂ ದ್ರುಮೋ ವಾತಾಹತೋ ಯಥಾ ॥ ೬೫ ॥
ತತಃ ಕ್ರಾಂತಾರ್ಥಮಾರ್ಗಸ್ಯ ಪ್ರಯಾಗದೃಢಚೇತಸಃ ।
ಪುಂಸಃ ಶರೀರಾನ್ನಿರ್ಯಾತುಮಪೇಕ್ಷೇತ ಪದಾಂತರಂ ॥ ೬೬ ॥

---

೬೦–೬೧. ಅಯ್ಯಾ ಬ್ರಾಹ್ಮಣನೇ! ಹಿಂದೆ ನಾನು ಸಕಲ ಯಾಗಗಳನ್ನೂ ತಕ್ಕಡಿಯಲ್ಲಿ ತೂಗಿ ನೋಡಿದ್ದೇನೆ. ಆದರೆ ಅವು ಯಾವುವೂ ಸರ್ವಕಾಮನೆಗಳನ್ನೂ ಪೂರಣಗೊಳಿಸುವುದೂ, ಮನೋಹರವೂ, ಆದ ಪ್ರಯಾಗಕ್ಕೆ ಸರಿತೂಗದೆ ಹೋದವು. ಹರಿಹರಾದಿ ದೇವತೆಗಳು ಬಹುದಕ್ಷಿಣೆಗಳುಳ್ಳ ಯಾಗಗಳಿಗಿಂತಲೂ ಅಧಿಕಾಧಿಕವಾದ ಫಲವನ್ನು ದೊರಕಿಸುವುದಾದುದರಿಂದ ಈ ತೀರ್ಥಕ್ಕೆ ಪ್ರಯಾಗವೆಂದು ನಾಮಕರಣಮಾಡಿದರು.

೬೨. ತ್ರಿಕಾಲಗಳಲ್ಲಿಯೂ ಪ್ರಯಾಗದ ಹೆಸರನ್ನು ಸ್ಮರಿಸಿದ ಮಾನವನ ಶರೀರದಲ್ಲಿ ಪಾಪಗಳು ಎಲ್ಲಿಯೂ ನೆಲಸುವುದಿಲ್ಲ.

೬೩. ಭರತಭೂಮಿಯಲ್ಲಿ ಪಾಪನಾಶಕಗಳಾದ ಅನೇಕ ತೀರ್ಥಗಳಿರುವುವು. ಆದರೆ ಅವು ಯಾವುವೂ ಮಾಡಿದ ಪಾಪವನ್ನು ಸಂಪೂರ್ಣವಾಗಿ ಕಳೆದು ಮಾನವನಿಗೆ ಅಧಿಕ ಪುಣ್ಯವನ್ನು ಕೊಡಲು ಸಮರ್ಥಗಳಾಗಿರುವುದಿಲ್ಲ.

೬೪. ಲೆಕ್ಕವಿಲ್ಲದಷ್ಟು ಜನ್ಮಗಳಲ್ಲಿ ಆರ್ಜಿಸಿದ ಪಾಪಸಮೂಹಗಳನ್ನು ವ್ರತ, ದಾನ, ತಪಸ್ಸುಗಳಿಂದ ಕಳೆಯಲು ಅಸಾಧ್ಯವಷ್ಟೆ?

೬೫. ಅಂಥ ಪಾಪಸಂಚಯವೆಲ್ಲ ಪ್ರಯಾಗಕ್ಷೇತ್ರಕ್ಕೆ ಹೋಗುವೆನೆಂದು ಪ್ರಯತ್ನಿಸುವ ಪುಣ್ಯಾತ್ಮನ ದೇಹದಲ್ಲಿ ಗಾಳಿಯ ಹೊಡೆತದಿಂದ ಮರಗಳೆಂತೋ ಅಂತು ನಡುಗಿಹೋಗುತ್ತವೆ.

೬೬. ಪ್ರಯಾಗ ಕ್ಷೇತ್ರಕ್ಕೆ ಹೋಗಬೇಕೆಂದು ದೃಢಸಂಕಲ್ಪವುಳ್ಳವನಾದ

**ಭಾಗ್ಯಾನ್ನೇತ್ರಾತಿಥೀಭೂತೇ ತೀರ್ಥರಾಜೇ ಮಹಾತ್ಮನಃ ।**
**ಪಲಾಯತೇ ದ್ರುತತರಂ ತಮಃ ಸೂರ್ಯೋದಯೇ ಯಥಾ ॥ ೬೭ ॥**
**ಸಪ್ತಧಾತುಮಯೀಭೂತತನೌ ಪಾಪಾನಿ ಯಾನಿ ವೈ ।**
**ಕೇಶೇಷು ತಾನಿ ತಿಷ್ಠಂತಿ ವಪನಾದ್ಯಾಂತಿ ತಾನ್ಯಪಿ ॥ ೬೮ ॥**
**ಏವಂ ನಿಷ್ಕಲುಷೀಭೂಯ ತತಃ ಸ್ನಾಯಾತ್ಸಿತಾಸಿತೇ ।**
**ಯಂ ಯಂ ಕಾಮಮಭಿಧ್ಯಾಯಂಸ್ತಂ ತಮಾಪ್ನೋತಿ ಸೋಽನ್ಯಥಾ ॥ ೬೯ ॥**
**ಪುಣ್ಯರಾಶಿಂ ಚ ವಿಪುಲಂ ಪುಣ್ಯಾನ್ಭೋಗಾನ್ಯಥೇಪ್ಸಿತಾನ್ ।**
**ಸ್ವರ್ಗಂ ಪ್ರಾಪ್ನೋತಿ ತತ್ಪುಣ್ಯಾನ್ನಿಷ್ಕಾಮೋ ಮೋಕ್ಷಮಾಪ್ನುಯಾತ್ ॥**
**ಸ್ನಾಯಾದ್ಯೋಽಭಿಲಷನ್ಮೋಕ್ಷಂ ಕಾಮಾನನ್ಯಾನ್ವಿಹಾಯ ಚ ।**
**ಸೋಽಪಿ ಮೋಕ್ಷಮವಾಪ್ನೋತಿ ಕಾಮದಾತ್ತೀರ್ಥರಾಜತಃ ॥ ೭೧ ॥**

---

ಮಾನವನು ಪ್ರಯಾಣಹೊರಟು ಅರ್ಧಮಾರ್ಗದಲ್ಲಿಯೆ ಬೇರೊಂದು ಸ್ಥಳಕ್ಕೆ ಹೊರಟರೂ ಅವನ ಶರೀರದಲ್ಲಿ ನೆಲಸಿರುವ ಪಾಪಗಳು ಹೊರತೆರಳಲು ಅಪೇಕ್ಷಿಸುತ್ತವೆ.

೬೭. ಭಾಗ್ಯವಶದಿಂದ ತೀರ್ಥರಾಜವಾದ ಆ ಪ್ರಯಾಗವು ಆ ಮಹಾತ್ಮನ ಕಣ್ಣಿಗೆ ಕಾಣಿಸಿದೊಡನೆಯೆ, ಸೂರ್ಯೋದಯ ಸಮಯದಲ್ಲಿ ಮಂಜಿನಂತೆ ಆ ಪಾಪಗಳೆಲ್ಲವೂ ಬಹು ಬೇಗನೆಯೆ ಓಡಿಹೋಗುತ್ತವೆ.

೬೮. ಚರ್ಮ, ಮಾಂಸ, ರಕ್ತ, ನರಗಳು, ಎಲವುಗಳು, ಮಜ್ಜೆ, ಶುಕ್ರ ಎಂಬ ಸಪ್ತ ಧಾತುಗಳಿಂದ ತುಂಬಿರುವ ದೇಹದಲ್ಲಿ ನೆಲಸಿರುವ ಪಾಪಗಳೆಲ್ಲವೂ ತಲೆಕೂದಲ ತುದಿಯಲ್ಲಿ ನಿಂತಿರುತ್ತವೆ. ಪ್ರಯಾಗದಲ್ಲಿ ತೀರ್ಥವಿಧಿಯಂತೆ ಕ್ಷೌರಮಾಡಿಸಿಕೊಂಡೊಡನೆಯೆ ಅವುಗಳೆಲ್ಲವೂ ಆ ಕೇಶಗಳೊಡನೆಯೆ ಕತ್ತರಿಸಿ ಹೋಗುತ್ತವೆ.

೬೯. ಹೀಗೆ ಯಾತ್ರಿಕನಾದ ಮಾನವನು ಪ್ರಯಾಗದಲ್ಲಿ ಮೊತ್ತಮೊದಲು ಕ್ಷೌರಮಾಡಿಸಿಕೊಂಡ ತರುವಾಯ ಗಂಗಾಯಮುನಾಸಂಗಮದ ವೇಣಿಯಲ್ಲಿ ಸ್ನಾನವನ್ನು ಮಾಡಬೇಕು. ಆ ಸಮಯದಲ್ಲಿ ಅವನು ಯಾವ ಯಾವ ಇಷ್ಟಾರ್ಥವನ್ನು ಬಯಸುವನೋ ಅವವುಗಳನ್ನೆಲ್ಲ ಪಡೆಯುತ್ತಾನೆ.

೭೦. ಆ ತೀರ್ಥಸ್ನಾನದಿಂದ ಅಪಾರವಾದ ಪುಣ್ಯರಾಶಿಯನ್ನೂ, ಅಭೀಪ್ಸಿತಗಳಾದ ಪುಣ್ಯಭೋಗಗಳನ್ನೂ, ಸ್ವರ್ಗವನ್ನೂ, ನಿಷ್ಕಾಮನಾಗಿದ್ದರೆ ಮೋಕ್ಷವನ್ನೂ ಪಡೆಯುತ್ತಾನೆ.

೭೧. ತೀರ್ಥರಾಜವಾದ ಪ್ರಯಾಗವು ಕಾಮದವೆಂದು ಪ್ರಸಿದ್ಧವಾದುದರಿಂದ ಅಲ್ಲಿ ಇತರ ಎಲ್ಲ ಕಾಮನೆಗಳನ್ನೂ ತೊರೆದು ಮೋಕ್ಷವನ್ನೇ ಬಯಸಿದರೂ ಅದನ್ನೇ ದೊರಕಿಸುವುದು.

ತೀರ್ಥರಾಜಂ ಪರಿತ್ಯಜ್ಯ ಯೋಽನ್ಯಸ್ಮಾತ್ಕಾಮಮಿಚ್ಛತಿ ।
ಭಾರತಾಖ್ಯೇ ಮಹಾವರ್ಷೇ ಸ ಕಾಮಂ ನಾಪ್ನುಯಾತ್ ಸ್ಫುಟಂ ॥ ೭೨ ॥
ಸತ್ಯಲೋಕೇ ಪ್ರಯಾಗೇ ಚ ನಾಽಂತರಂ ವೇದ್ಮ್ಯಹಂ ದ್ವಿಜ ।
ತತ್ರ ಯೇ ಶುಭಕರ್ಮಾಣಸ್ತೇ ಮಲ್ಲೋಕನಿವಾಸಿನಃ ॥ ೭೩ ॥
ತೀರ್ಥಾಽಭಿಲಾಷಿಭಿರ್ಮರ್ತ್ಯೈಃ ಸೇವ್ಯಂ ತೀರ್ಥಾಂತರಂ ನಹಿ ।
ಅನ್ಯತ್ರ ಭೂಮಿವಲಯೇ ತೀರ್ಥರಾಜಾತ್ಪ್ರಯಾಗತಃ ॥ ೭೪ ॥
ಯಥಾಂತರಂ ದ್ವಿಜಶ್ರೇಷ್ಠ ಭೂಪೇತ್ವಿತರಸೇವಕೇ ।
ದೃಷ್ಟಾಂತಮಾತ್ರಂ ಕಥಿತಂ ಪ್ರಯಾಗೇತರತೀರ್ಥಯೋಃ ॥ ೭೫ ॥
ಯಥಾ ಕಥಂಚಿತ್ತೀರ್ಥೇಽಸ್ಮಿನ್ ಪ್ರಾಣತ್ಯಾಗಂ ಕರೋತಿ ಯಃ ।
ತಸ್ಯಾತ್ಮಘಾತದೋಷೋ ನ ಪ್ರಾಪ್ನುಯಾದೀಪ್ಸಿತಾನ್ಯಪಿ ॥ ೭೬ ॥
ಯಸ್ಯ ಭಾಗ್ಯವತಶ್ಚಾಽತ್ರ ತಿಷ್ಠಂತ್ಯಸ್ಥೀನ್ಯಪಿ ದ್ವಿಜ ।
ನ ತಸ್ಯ ದುಃಖಲೇಶೋಽಪಿ ಕ್ವಾಽಪಿ ಜನ್ಮನಿ ಜಾಯತೇ ॥ ೭೭ ॥

---

೭೨. ಪವಿತ್ರವಾದ ಈ ಭರತಖಂಡದಲ್ಲಿ ತೀರ್ಥರಾಜವೆನಿಸಿದ ಪ್ರಯಾಗವನ್ನು ತೊರೆದು ಬೇರೊಂದು ತೀರ್ಥವನ್ನು ಹುಡುಕಿಕೊಂಡು ಹೋಗುವವನು ಖಂಡಿತವಾಗಿಯೂ ಇಷ್ಟಾರ್ಥವನ್ನು ಪಡೆಯುವುದಿಲ್ಲವು.

೭೩. ಅಯ್ಯಾ ವಿಪ್ರನೇ! ಸತ್ಯಲೋಕಕ್ಕೂ, ಈ ಪ್ರಯಾಗಕ್ಷೇತ್ರಕ್ಕೂ ಯಾವ ಬಗೆಯ ವ್ಯತ್ಯಾಸವೂ ಇರುವುದಿಲ್ಲವು. ಅಲ್ಲಿ ಶುಭಕರ್ಮಗಳನ್ನು ಮಾಡಿದ ಪುಣ್ಯಾತ್ಮರು ನನ್ನ ಲೋಕದಲ್ಲಿ ವಾಸಮಾಡುವರು.

೭೪. ತೀರ್ಥಯಾತ್ರೆಗಳನ್ನು ಮಾಡಬಯಸುವ ಮಾನವರು ತೀರ್ಥರಾಜವೆನಿಸಿರುವ ಪ್ರಯಾಗವನ್ನುಳಿದು ಈ ಭೂಮಂಡಲದಲ್ಲಿ ಬೇರಾವ ತೀರ್ಥವನ್ನೂ ಸೇವಿಸಬಾರದು.

೭೫. ರಾಜನಿಗೂ ಇತರ ಸೇವಕರಿಗೂ ಎಷ್ಟು ವ್ಯತ್ಯಾಸವೋ ಅಷ್ಟೇ ವ್ಯತ್ಯಾಸವು ತೀರ್ಥರಾಜವಾದ ಪ್ರಯಾಗಕ್ಕೂ ಇತರ ತೀರ್ಥಗಳಿಗೂ ಇರುವುದೆಂದು ತಿಳಿಯಬೇಕು. ಪ್ರಯಾಗಕ್ಕೂ ಇತರ ತೀರ್ಥಗಳಿಗೂ ಇರುವ ಅಂತರವನ್ನು ತಿಳಿಸಲೋಸುಗಮಾತ್ರ ಈ ದೃಷ್ಟಾಂತವನ್ನು ಕೊಟ್ಟಿದೆ.

೭೬. ಈ ಪ್ರಯಾಗತೀರ್ಥದಲ್ಲಿ ಹೇಗೆಹೇಗೆಯೋ ಪ್ರಾಣತ್ಯಾಗಮಾಡಿದವನಿಗೂ ಆತ್ಮಹತ್ಯಾದೋಷವು ಬರುವುದಿಲ್ಲವು. ಆವನಿಗೆ ಅದರ ಮಹಿಮೆಯ ಫಲವಾಗಿ ಇಷ್ಟಾರ್ಥಗಳೂ ನೆರವೇರುತ್ತವೆ.

೭೭. ಮೃತನಾದ ಯಾವ ಪುಣ್ಯಾತ್ಮನ ಅಸ್ಥಿಗಳು ಈ ತೀರ್ಥರಾಜದಲ್ಲಿರುತ್ತವೆಯೋ ಅವನಿಗೆ ಯಾವ ಜನ್ಮದಲ್ಲಿಯೂ ದುಃಖವೆಂಬುದೇ ಉಂಟಾಗುವುದಿಲ್ಲವು.

ಬ್ರಹ್ಮಹತ್ಯಾದಿ ಪಾಪಾನಾಂ ಪ್ರಾಯಶ್ಚಿತ್ತಂ ಚಿಕೀರ್ಷುಣಾ ।
ಪ್ರಯಾಗಂ ವಿಧಿವತ್ಸೇವ್ಯಂ ದ್ವಿಜವಾಕ್ಯಾನ್ನ ಸಂಶಯಃ ॥ ೭೮ ॥
ಕಿಂ ಬಹೂಕ್ತೇನ ವಿಪ್ರೇಂದ್ರ ಮಹೋದಯಮಭೀಪ್ಸುನಾ ।
ಸೇವ್ಯಂ ಸಿತಾಸಿತಂ ತೀರ್ಥಂ ಪ್ರಕೃಷ್ಟಂ ಜಗತೀತಲೇ ॥ ೭೯ ॥
ಪ್ರಯಾಗತೋಽಪಿ ತೀರ್ಥೇಶಾತ್ ಸರ್ವೇಷು ಭುವನೇಷ್ವಪಿ ।
ಅನಾಯಾಸೇನ ವೈ ಮುಕ್ತಿಃ ಕಾಶ್ಯಾಂ ದೇಹಾಽವಸಾನತಃ ॥ ೮೦ ॥
ಪ್ರಯಾಗಾದಪಿ ವೈ ರಮ್ಯಮವಿಮುಕ್ತಂ ನ ಸಂಶಯಃ ।
ಯತ್ರ ವಿಶ್ವೇಶ್ವರಃ ಸಾಕ್ಷಾತ್ಸ್ವಯಂ ಸಮಧಿತಿಷ್ಠತಿ ॥ ೮೧ ॥
ಅವಿಮುಕ್ತಾನ್ಮಹಾಕ್ಷೇತ್ರಾದ್ವಿಶ್ವೇಶಸಮಧಿಷ್ಠಿತಾತ್ ।
ನ ಚ ಕಿಂಚಿತ್ಕ್ವಚಿದ್ರಮ್ಯಮಿಹ ಬ್ರಹ್ಮಾಂಡಗೋಲಕೇ ॥ ೮೨ ॥
ಅವಿಮುಕ್ತಮಿದಂ ಕ್ಷೇತ್ರಮಪಿ ಬ್ರಹ್ಮಾಂಡಮಧ್ಯಗಂ ।
ಬ್ರಹ್ಮಾಂಡಮಧ್ಯೇ ನ ಭವೇತ್ಪಂಚಕ್ರೋಶ ಪ್ರಮಾಣತಃ ॥ ೮೩ ॥

---

೭೮. ಅಯ್ಯಾ ಶಿವಶರ್ಮನೇ! ಬ್ರಹ್ಮಹತ್ಯಾದಿ ಪಾಪಗಳಿಗೆ ಪ್ರಾಯಶ್ಚಿತ್ತವನ್ನು ಮಾಡಬಯಸುವವರು ಬ್ರಾಹ್ಮಣವಾಕ್ಯವನ್ನನುಸರಿಸಿ ಪ್ರಯಾಗತೀರ್ಥಯಾತ್ರೆಯನ್ನು ಮಾಡಬೇಕು.

೭೯. ಎಲೈ ವಿಪ್ರೇಂದ್ರನೇ! ಪ್ರಯಾಗದ ವಿಷಯದಲ್ಲಿ ಹೆಚ್ಚಾಗಿ ಹೇಳಲೇಕೆ? ಮಹೋದಯವನ್ನೂ, ಶ್ರೇಯಃಪ್ರೇಯಗಳನ್ನೂ ಪಡೆಯಬಯಸುವ ಮಾನವನು ಜಗತ್ತಿನಲ್ಲಿಯೇ ಪಾವನತಮವೆನಿಸಿದ ಗಂಗಾಯಮುನಾಸಂಗಮವೆನಿಸಿದ ಪ್ರಯಾಗವನ್ನು ಸೇವಿಸಬೇಕು.

೮೦. ಇಂತಹ ಪ್ರಯಾಗತೀರ್ಥಕ್ಕಿಂತಲೂ ಚತುರ್ದಶಭುವನಗಳಲ್ಲಿಯೂ ದೇಹಾವಸಾನವಾದ ಬಳಿಕ ಅನಾಯಾಸವಾಗಿ ಮೋಕ್ಷಪದವನ್ನು ದೊರಕಿಸುವ ಕಾಶೀಕ್ಷೇತ್ರವು ಉತ್ತಮವಾದುದು.

೮೧. ಸಾಕ್ಷಾತ್ ವಿಶ್ವೇಶ್ವರನೇ ಅಧಿಷ್ಠಿಸಿ ನೆಲಸಿರುವ ಕಾಶೀಕ್ಷೇತ್ರವು ಪ್ರಯಾಗಕ್ಕಿಂತಲೂ ರಮಣೀಯವಾದುದೆಂಬುದರಲ್ಲಿ ಸಂಶಯವಿಲ್ಲವು.

೮೨. ಈ ಬ್ರಹ್ಮಾಂಡಗೋಳಕದಲ್ಲಿ ವಿಶ್ವೇಶ್ವರನು ಅಧಿಷ್ಠಿಸಿರುವ ಅವಿಮುಕ್ತಕ್ಷೇತ್ರವೆಂದು ಪ್ರಸಿದ್ಧವಾದ ಕಾಶಿಗಿಂತಲೂ ರಮಣೀಯವಾದ ಕ್ಷೇತ್ರವಿರುವುದೇ ಇಲ್ಲವು.

೮೩. ಈ ಕ್ಷೇತ್ರವು ಬ್ರಹ್ಮಾಂಡದ ಮಧ್ಯದಲ್ಲಿರುವುದಾದರೂ ಇದು ಅವಿಮುಕ್ತವಾದುದರಿಂದ ಐದು ಕ್ರೋಶಗಳ ಪ್ರಮಾಣವುಳ್ಳುದಾಗಿ ಬ್ರಹ್ಮಾಂಡದಿಂದ ಬೇರೆಯಾಗಿಯೇ ಇರುವುದು.

ಯಥಾ ಯಥಾ ಹಿ ವರ್ಧೇತ ಜಲಮೇಕಾರ್ಣವಸ್ಯಚ ।
ತಥಾ ತಥೋನ್ನಯೇದೀಶಸ್ತತ್ಕ್ಷೇತ್ರಂ ಪ್ರಲಯಾದಪಿ ॥ ೮೪ ॥
ಕ್ಷೇತ್ರಮೇತತ್ತ್ರಿಶೂಲಾಗ್ರೇ ಶೂಲಿನಸ್ತಿಷ್ಠತಿ ದ್ವಿಜ ।
ಅಂತರಿಕ್ಷೇ ನ ಭೂಮಿಷ್ಠಂ ನೇಕ್ಷಂತೇ ಮೂಢಬುದ್ಧಯಃ ॥ ೮೫ ॥
ಸದಾ ಕೃತಯುಗಂ ಚಾಽತ್ರ ಮಹಾಪರ್ವ ಸದಾಽತ್ರ ವೈ ।
ನಗ್ರಹಾಽಸ್ತೋದಯಕೃತೋ ದೋಷೋ ವಿಶ್ವೇಶ್ವರಾಶ್ರಮೇ ॥ ೮೬ ॥
ಸದಾ ಸೌಮ್ಯಾಯನಂ ತತ್ರ ಸದಾ ತತ್ರ ಮಹೋದಯಃ ।
ಸದೈವ ಮಂಗಲಂ ತತ್ರ ಯತ್ರ ವಿಶ್ವೇಶ್ವರಸ್ಥಿತಿಃ ॥ ೮೭ ॥
ಯಥಾ ಭೂಮಿತಲೇ ವಿಪ್ರ ಪುರ್ಯಃ ಸಂತಿ ಸಹಸ್ರಶಃ ।
ತಥಾ ಕಾಶೀ ನ ಮಂತವ್ಯಾ ಕ್ವಾಽಪಿ ಲೋಕೋತ್ತರಾ ತ್ವಿಯಂ ॥ ೮೮ ॥
ಮಯಾ ಸೃಷ್ಟಾನಿ ವಿಪ್ರೇಂದ್ರ ಭುವನಾನಿ ಚತುರ್ದಶ ।
ಅಸ್ಯಾಃ ಪುರ್ಯಾ ವಿನಿರ್ಮಾತಾ ಸ್ವಯಂ ವಿಶ್ವೇಶ್ವರಃ ಪ್ರಭುಃ ॥ ೮೯ ॥

---

೮೪. ಪ್ರಳಯಕಾಲದಲ್ಲಿ ಒಂದಾಗುವ ಸಪ್ತಸಮುದ್ರಗಳ ನೀರು ಹೆಚ್ಚಿದಂತೆಲ್ಲ ಈ ಕಾಶೀಕ್ಷೇತ್ರವನ್ನು ವಿಶ್ವನಾಥನು ಮೇಲೆಮೇಲಕ್ಕೆ ಉದ್ಧರಿಸುತ್ತಲೇ ಬರುತ್ತಾನೆ.

೮೫. ಅಯ್ಯಾ ವಿಪ್ರನೇ! ಈ ಕ್ಷೇತ್ರವು ಆ ಮಹಾದೇವನ ತ್ರಿಶೂಲದ ತುದಿಯಲ್ಲಿ ನಿಂತಿರುವುದು. ಇದು ಅಂತರಿಕ್ಷದಲ್ಲಿಯೂ ಇರುವುದಿಲ್ಲ, ಭೂಮಿಯ ಮೇಲೂ ನಿಂತಿರುವುದಿಲ್ಲ.

೮೬. ಎಲೈ ಶಿವಶರ್ಮನೇ! ಈ ಕಾಶೀಕ್ಷೇತ್ರದಲ್ಲಿ ಯಾವಾಗಲೂ ಕೃತಯುಗವೇ! ಯಾವಾಗಲೂ ಪರ್ವಕಾಲವೇ. ವಿಶ್ವೇಶ್ವರನ ಆಶ್ರಮವೆನಿಸಿದ ಈ ಕ್ಷೇತ್ರದಲ್ಲಿ ಗ್ರಹಗಳ ಅಸ್ತದಿಂದುಂಟಾದ ದೋಷವೆಂಬುದೇ ಇರುವುದಿಲ್ಲವು.

೮೭. ಇಲ್ಲಿ ಯಾವಾಗಲೂ ಶುಭಕರವಾದ ಉತ್ತರಾಯನವೇ; ಯಾವಾಗಲೂ ಮಹೋದಯಪುಣ್ಯಕಾಲವೇ. ವಿಶ್ವೇಶ್ವರನು ನೆಲಸಿರುವ ಈ ಕಾಶಿಯಲ್ಲಿ ಯಾವಾಗಲೂ ಮಂಗಳವೇ ದೊರಕುತ್ತಿರುವುದು.

೮೮. ಎಲೈ ವಿಪ್ರನೇ! ಲೋಕದಲ್ಲಿ ಅಸಂಖ್ಯಾತವಾದ ಎಷ್ಟೋ ಪಟ್ಟಣಗಳಿರುವುವಾದರೂ ಈ ಕಾಶೀಕ್ಷೇತ್ರವು ಲೋಕೋತ್ತರವಾಗಿರುವುದರಿಂದ ಇದನ್ನು ಅವುಗಳಿಗೆಣೆಯಾದುವೆಂದು ಭಾವಿಸಬಾರದು.

೮೯. ಅಯ್ಯಾ ವಿಪ್ರೇಂದ್ರನೇ! ನಾನು ಜಗತ್ತಿನಲ್ಲಿ ಹದಿನಾಲ್ಕು ಲೋಕಗಳನ್ನು ಸೃಜಿಸಿರುತ್ತೇನೆ. ಆದರೆ ಈ ಕಾಶೀಪುರಿಯನ್ನು ನಿರ್ಮಿಸಿದವನು ಸಾಕ್ಷಾತ್ ವಿಶ್ವೇಶ್ವರನೇ ಆಗಿರುವನು.

ಪುರಾ ಯಮಸ್ತಪಸ್ತಪ್ತ್ವಾ ಬಹುಕಾಲಂ ಸುದುಷ್ಕರಂ ।
ತ್ರೈಲೋಕ್ಯಾಽಧಿಕೃತಿಂ ಪ್ರಾಪ್ತಸ್ತ್ಯಕ್ತ್ವಾ ವಾರಾಣಸೀಂ ಪುರೀಂ ॥ ೯೦ ॥
ಚರಾಚರಸ್ಯ ಸರ್ವಸ್ಯ ಯಾನಿ ಕರ್ಮಾಣಿ ತಾನಿವೈ ।
ಗೋಚರೇ ಚಿತ್ರಗುಪ್ತಸ್ಯ ಕಾಶೀವಾಸಿಕೃತಾದೃತೇ ॥ ೯೧ ॥
ಪ್ರವೇಶೋ ಯಮದೂತಾನಾಂ ನ ಕದಾಚಿದ್ದ್ವಿಜೋತ್ತಮ ।
ಮಧ್ಯೇ ಕಾಶೀಪುರೀಂ ಕ್ವಾಽಪಿ ರಕ್ಷಿಣಸ್ತತ್ರ ತದ್ಗಣಾಃ ॥ ೯೨ ॥
ಸ್ವಯಂ ನಿಯಂತಾ ವಿಶ್ವೇಶಸ್ತತ್ರ ಕಾಶ್ಯಾಂ ತನುತ್ಯಜಾಂ ।
ತತ್ರಾಽಪಿ ಕೃತಪಾಪಾನಾಂ ನಿಯಂತಾ ಕಾಲಭೈರವಃ ॥ ೯೩ ॥
ತತ್ರ ಪಾಪಂ ನ ಕರ್ತವ್ಯಂ ದಾರುಣಾ ರುದ್ರಯಾತನಾ ।
ಅಹೋ ರುದ್ರಪಿಶಾಚತ್ವಂ ನರಕೇಭ್ಯೋಽಪಿ ದುಃಸಹಂ ॥ ೯೪ ॥
ಪಾಪಮೇವಹಿ ಕರ್ತವ್ಯಂ ಮತಿರಸ್ತಿ ಯದೀದೃಶೀ ।
ಸುಖೇನಾಽನ್ಯತ್ರ ಕರ್ತವ್ಯಂ ಮಹೀಹ್ಯಸ್ತಿ ಮಹೀಯಸೀ ॥ ೯೫ ॥

---

೯೦. ಪೂರ್ವದಲ್ಲಿ ಯಮಧರ್ಮನು ಇಲ್ಲಿ ಅತಿ ದುಷ್ಕರವಾದ ತಪಸ್ಸನ್ನು ಬಹುಕಾಲಮಾಡಿ ಈ ವಾರಾಣಸೀಕ್ಷೇತ್ರವೊಂದನ್ನುಳಿದು, ತ್ರೈಲೋಕಾಧಿಪತ್ಯವನ್ನೂ ಪಡೆದು ಈ ಕ್ಷೇತ್ರದಿಂದ ಹೊರಟುಹೋದನು.

೯೧. ಯಮನ ಪ್ರಧಾನ ಕಿಂಕರನಾದ ಚಿತ್ರಗುಪ್ತನಿಗೆ ಈ ಕಾಶೀಕ್ಷೇತ್ರವಾಸಿಗಳನ್ನು ಬಿಟ್ಟು ಉಳಿದೆಲ್ಲ ಪ್ರಪಂಚದಲ್ಲಿರುವ ಚರಾಚರಪ್ರಾಣಿಗಳ ಸುಕೃತ ದುಷ್ಕೃತಕರ್ಮಗಳೆಲ್ಲವೂ ಗೋಚರವಾಗುವುವು.

೯೨. ಅಯ್ಯಾ ದ್ವಿಜೋತ್ತಮನೇ! ಯಮದೂತರಿಗೆ ಈ ಕಾಶೀಕ್ಷೇತ್ರಕ್ಕೆ ಪ್ರವೇಶವೇ ಇರುವುದಿಲ್ಲ. ಕಾಶೀಪಟ್ಟಣದ ಮಧ್ಯದಲ್ಲೆಲ್ಲ ಶಿವಗಣಗಳೇ ರಕ್ಷಕ ಪುರುಷರಾಗಿರುವರು.

೯೩. ಈ ಕಾಶೀಕ್ಷೇತ್ರದಲ್ಲಿ ದೇಹವನ್ನು ತೊರೆಯುವವರಿಗೆಲ್ಲ ವಿಶ್ವೇಶ್ವರನೇ ನಿಯಂತೃವಾಗಿರುವನು. ಅಲ್ಲಿಯೂ ಪಾಪಗಳನ್ನು ಮಾಡುವವರಿಗೆ ಶಿಕ್ಷಕನಾದವನು ಕಾಲಭೈರವಸ್ವಾಮಿಯು.

೯೪. ಕಾಶೀಕ್ಷೇತ್ರದಲ್ಲಿ ಯಾರೂ ಪಾಪವನ್ನು ಮಾಡಬಾರದು. ರುದ್ರನು ಅಲ್ಲಿ ವಿಧಿಸುವ ನರಕಯಾತನೆಯು ಬಹು ಭಯಂಕರವಾದುದು. ಅಬ್ಬ! ರುದ್ರಪಿಶಾಚವಾಗುವುದು ಎಲ್ಲ ನರಕಗಳಿಗಿಂತಲೂ ಬಹು ದುಸ್ಸಹವಾದುದು!!

೯೫. ಪಾಪವನ್ನುಮಾಡಬೇಕೆಂಬ ಬುದ್ಧಿಯೇ ಇರುವುದಾದರೆ ಮಾನವನು ಬೇರೆಲ್ಲಿಯಾದರೂ ಮಾಡಬಹುದು. ಪಾಪಮಾಡುವುದಕ್ಕೆ ಕಾಶಿಯನ್ನು ಬಿಟ್ಟು ಬೇಕಾದಷ್ಟು ಊರುಗಳಿರುವುವು.

**ಅಪಿ ಕಾಮಾತುರೋ ಜಂತುರೇಕಾಂ ರಕ್ಷತಿ ಮಾತರಂ ।**
**ಅಪಿ ಪಾಪಕೃತಾ ಕಾಶೀ ರಕ್ಷ್ಯಾ ಮೋಕ್ಷಾರ್ಥಿನೈಕಿಕಾ ॥ ೯೬ ॥**
**ಪರಾಽಪವಾದಶೀಲೇನ ಪರದಾರಾಽಭಿಲಾಷಿಣಾ ।**
**ತೇನ ಕಾಶೀ ನ ಸಂಸೇವ್ಯಾ ಕ್ವ ಕಾಶೀ ನಿರಯಃ ಕ್ವ ಸಃ ॥ ೯೭ ॥**
**ಅಭಿಲಷ್ಯಂತಿ ಯೇ ನಿತ್ಯಂ ಧನಂ ಚಾಽತ್ರ ಪ್ರತಿಗ್ರಹೈಃ ।**
**ಪರಸ್ವಂ ಕಪಟೈರ್ವಾಽಪಿ ಕಾಶೀ ಸೇವ್ಯಾ ನತೈರ್ನರೈಃ ॥ ೯೮ ॥**
**ಪರಪೀಡಾಕರಂ ಕರ್ಮ ಕಾಶ್ಯಾಂ ನಿತ್ಯಂ ವಿವರ್ಜಯೇತ್ ।**
**ತದೇವ ಚೇತ್ಕಿಮತ್ರಸ್ಯಾತ್ಕಾಶೀವಾಸೋ ದುರಾತ್ಮನಾಂ ॥ ೯೯ ॥**
**ತ್ಯಕ್ತ್ವಾ ವೈಶ್ವೇಶ್ವರೀಂ ಭಕ್ತಿಂ ಯೇಽನ್ಯದೇವಪರಾಯಣಾಃ ।**
**ಸರ್ವಥಾ ತೈರ್ನವಸ್ತವ್ಯಾ ರಾಜಧಾನೀ ಪಿನಾಕಿನಃ ॥ ೧೦೦ ॥**
**ಅರ್ಥಾಽರ್ಥಿನಸ್ತು ಯೇ ವಿಪ್ರ ಯೇ ಚ ಕಾಮಾರ್ಥಿನೋ ನರಾಃ ।**
**ಅವಿಮುಕ್ತಂ ನ ತೈಃ ಸೇವ್ಯಂ ಮೋಕ್ಷಕ್ಷೇತ್ರಮಿದಂ ಯತಃ ॥ ೧೦೧ ॥**
**ಶಿವನಿಂದಾಪರಾ ಯೇ ಚ ವೇದನಿಂದಾಪರಾಶ್ಚ ಯೇ ।**
**ವೇದಾಚಾರಪ್ರತೀಪಾ ಯೇ ಸೇವ್ಯಾ ವಾರಾಣಸೀ ನ ತೈಃ ॥ ೧೦೨ ॥**

---

೯೬. ಎಂತಹ ಪಾಪಿಯಾದರೂ, ಎಂತಹ ಕಾಮಾತುರನೇ ಆದರೂ ಹೆತ್ತ ತಾಯಿಯನ್ನು ರಕ್ಷಿಸದಿರನಷ್ಟೆ. ಅಂತೆಯೆ ಪಾಪಿಷ್ಠನಾದರೂ ಮೋಕ್ಷವನ್ನು ಪಡೆಯಬಯಸಿ ಈ ಕಾಶೀಕ್ಷೇತ್ರವನ್ನು ಕಾಯ್ದುಕೊಳ್ಳಬೇಕು.

೯೭. ಇತರರನ್ನು ಹಳಿಯುವ ಸ್ವಭಾವವುಳ್ಳವನೂ, ಪರಸ್ತ್ರೀಕಾಮುಕನೂ ಆದವನು ಕಾಶೀಕ್ಷೇತ್ರವನ್ನು ಸೇವಿಸಬಾರದು. ಏಕೆಂದರೆ ಪುಣ್ಯಪ್ರದವಾದ ಕಾಶೀಕ್ಷೇತ್ರವೆತ್ತ? ನರಕವೆತ್ತ?

೯೮–೧೦೦. ದಾನಗಳನ್ನು ಪ್ರತಿಗ್ರಹಮಾಡಿ ಧನಾರ್ಜನೆಮಾಡಬಯಸುವವರೂ, ಇತರರ ಸ್ವತ್ತನ್ನು ಕಪಟದಿಂದ ಅಪಹರಿಸುವ ಬುದ್ಧಿಯಿರುವವರೂ ಈ ಕಾಶೀಪಟ್ಟಣದಲ್ಲಿ ವಾಸಮಾಡಬಾರದು. ಇತರರಿಗೆ ತೊಂದರೆಯನ್ನುಂಟುಮಾಡುವ ಪಾಪಕರ್ಮವನ್ನು ಈ ಕಾಶೀಪಟ್ಟಣದಲ್ಲಿ ಖಂಡಿತವಾಗಿಯೂ ತೊರೆಯಬೇಕು. ಹಾಗೆ ಮಾಡುವ ದುರಾತ್ಮರಾದ ಮಾನವರಿಗೆ ಕಾಶೀವಾಸವೇತಕ್ಕೆ? ಪಿನಾಕಿಯ ರಾಜಧಾನಿಯಾದ ಈ ಕಾಶಿಯಲ್ಲಿ ವಿಶ್ವೇಶ್ವರನ ಭಕ್ತರಲ್ಲದವರೂ, ಅನ್ಯದೈವವನ್ನು ಆರಾಧಿಸುವವರೂ ಆದ ಮಾನವರು ಎಂದಿಗೂ ವಾಸಮಾಡಬಾರದು.

೧೦೧. ಎಲೈ ವಿಪ್ರನೇ! ಧನದಾಸೆಯುಳ್ಳವರೂ, ಕಾಮಾರ್ಥಿಗಳೂ ಆದ ಮಾನವರು ಈ ಅವಿಮುಕ್ತ ಕ್ಷೇತ್ರವನ್ನು ಸೇವಿಸಲೇಬಾರದು.

೧೦೨. ಶಿವನನ್ನು ನಿಂದಿಸುವವರೂ, ವೇದನಿಂದೆಯನ್ನುಮಾಡುವವರೂ, ವೇದಾಚಾರಗಳಿಗೆ ದೂರರಾದವರೂ ವಾರಾಣಸೀಕ್ಷೇತ್ರವನ್ನು ಸೇವಿಸಬಾರದು.

**ಪರದ್ರೋಹಧಿಯೋ ಯೇ ಚ ಪರೇಷ್ಯಾರ್ಕಾರಿಣಶ್ಚ ಯೇ ।**
**ಪರೋಪತಾಪಿನೋ ಯೇ ವೈ ತೇಷಾಂ ಕಾಶೀ ನ ಸಿದ್ಧಯೇ ॥ ೧೦೩ ॥**
**ಮನಸಾಽಪಿ ನ ಯೇ ಕಾಶೀಮಭಿನಂದಂತಿ ದುರ್ಧಿಯಃ ।**
**ತೇಷಾಂ ನಿರ್ವಾಣವಾರ್ತಾಽಪಿ ದೂರೇ ದುರ್ವೃತ್ತಚೇತಸಾಂ ॥ ೧೦೪ ॥**
**ಜ್ಞಾನೇನ ನ ವಿನಾ ಮೋಕ್ಷಃ ಕ್ವಚಿದಸ್ತೀಹ ಭೂತಲೇ ।**
**ತಜ್ಞಾನಂ ನ ವ್ರತೈರ್ಲಭ್ಯಮಪಿ ಚಾಂದ್ರಾಯಣಾದಿಭಿಃ ॥ ೧೦೫ ॥**
**ತುಲಾ ಪುರುಷಮುಖ್ಯೈಶ್ಚ ದಾನೈಶ್ಚ ಶ್ರದ್ಧಯಾನ್ವಿತೈಃ ।**
**ದೇಶೇ ಕಾಲೇ ಚ ವಿಧಿನಾ ಪಾತ್ರೇಭ್ಯಃ ಪ್ರತಿಪಾದಿತೈಃ ॥ ೧೦೬ ॥**
**ನ ಯಮೈರ್ಬ್ರಹ್ಮಚರ್ಯಾದ್ಯೈರ್ನಿಯಮೈರ್ನಾಽರ್ಚನಾದಿಭಿಃ ।**
**ಶರೀರ ಶೋಷಣೈರುಗ್ರೈರ್ನ ತಪೋಭಿರ್ದ್ವಿಜೋತ್ತಮ ॥ ೧೦೭ ॥**
**ನ ಮಹಾಮಂತ್ರ ಜಪ್ಯೈಶ್ಚ ಗುರುಭಿಃ ಪ್ರತಿಪಾದಿತೈಃ ।**
**ನ ಸ್ವಾಧ್ಯಾಯೈರ್ಯಥೋಕ್ತೈಶ್ಚ ನಾಽಗ್ನಿಶುಶ್ರೂಷಣಾ ಪರೈಃ ॥ ೧೦೮ ॥**
**ನ ಸೇವಯಾ ಗುರೂಣಾಂ ಚ ನ ಶ್ರಾದ್ಧೈರ್ದೇವತಾರ್ಚನೈಃ ।**
**ನ ನಾನಾತೀರ್ಥಯಾತ್ರಾಭಿರ್ಜ್ಞಾನಂ ಸಮಧಿಗಮ್ಯತೇ ॥ ೧೦೯ ॥**

---

೧೦೩. ಇತರರಿಗೆ ದ್ರೋಹಮಾಡಬಯಸುವವರೂ, ಇತರರನ್ನು ನೋಡಿ ಅಸೂಯೆಪಡುವವರೂ, ಇತರರಿಗೆ ಹಿಂಸೆಯನ್ನುಂಟುಮಾಡುವವರೂ ಆದ ಮಾನವರಿಗೆ ಕಾಶೀಕ್ಷೇತ್ರವಾಸವು ತಕ್ಕುದಲ್ಲ.

೧೦೪–೧೦೬. ಮನಸ್ಸಿನಿಂದಲಾದರೂ ಕಾಶೀಕ್ಷೇತ್ರವನ್ನು ಸ್ಮರಿಸದ ದುಷ್ಟ ಮಾನವರಿಗೆ ಮುಕ್ತಿಯೆಂಬ ವಾರ್ತೆಯೂ ದೂರವಾಗಿರುತ್ತದೆಯಲ್ಲದೆ, ಅವರಿಗೆ ಯಾವ ಗತಿಯೂ ಇರುವುದಿಲ್ಲವು. ಈ ಲೋಕದಲ್ಲಿ ಜ್ಞಾನವಿಲ್ಲದೆ ಮೋಕ್ಷವೆಂಬು ದಿಲ್ಲವೇ ಇಲ್ಲವು. ಆ ಜ್ಞಾನವು ಕೃಛ್ರಚಾಂದ್ರಾಯಣಾದಿವ್ರತಗಳಿಂದಾಗಲಿ, ಇತರ ವ್ರತಗಳಿಂದಲಾಗಲಿ ಲಭ್ಯವಾಗುವುದಿಲ್ಲವು. ದೇಶಕಾಲ ಪಾತ್ರಗಳನ್ನು ನೋಡಿ ಅರಿತುಕೊಂಡು ತುಲಾಪುರುಷವೇ ಮೊದಲಾದ ದಾನಗಳನ್ನು ಶ್ರದ್ಧೆ ಯಿಂದ ಮಾಡುವುದರಿಂದಲೂ ಆ ಜ್ಞಾನವು ಲಭಿಸುವುದಿಲ್ಲವು.

೧೦೭. ಅಯ್ಯಾ ದ್ವಿಜೋತ್ತಮನೇ! ಯಮದಿಂದಲೂ, ಬ್ರಹ್ಮಚರ್ಯ ದಿಂದಲೂ, ದೇವತಾರ್ಚನೆಯಿಂದಲೂ, ಶರೀರಶೋಷಣಮಾಡುವ ಉಪವಾ ಸಾದಿಗಳಿಂದಲೂ ಅದು ಲಭಿಸುವುದಿಲ್ಲವು.

೧೦೮. ಗುರುಗಳು ಉಪದೇಶಮಾಡಿದ ಮಹಾಮಂತ್ರ ಜಪದಿಂದಲಾಗಲಿ, ಯಥೋಕ್ತಗಳಾದ ವೇದಾಧ್ಯಯನ ಮತ್ತು ಅಗ್ನಿಹೋತ್ರಗಳಿಂದಾಗಲಿ ಅದು ಎಂದಿಗೂ ಲಭ್ಯವಾಗದು.

೧೦೯. ಗುರುಸೇವೆ, ಶ್ರಾದ್ಧಗಳು, ದೇವತಾರ್ಚನೆ, ನಾನಾ ತೀರ್ಥಗಳಿಗೆ ಯಾತ್ರೆಹೋಗುವುದು ಇವುಗಳಿಂದ ಜ್ಞಾನವು ದೊರಕುವುದಿಲ್ಲವು.

ನ ಯೋಗೇನ ವಿನಾ ಜ್ಞಾನಂ ಯೋಗಸ್ತತ್ತ್ವಾರ್ಥಶೀಲನಂ ।
ಗುರೂಪದಿಷ್ಟಮಾರ್ಗೇಣ ಸದಾಽಭ್ಯಾಸ ವಶೇನ ಚ ॥ ೧೧೦ ॥
ತಸ್ಯಾಂತರಾಯಾ ಬಹವಃ ಸುದೂರಶ್ರವಣಾದಯಃ ।
ಅತೋ ನ ಪ್ರಾಪ್ಯತೇ ಜ್ಞಾನಂ ಯೋಗಾದೇಕೇನ ಜನ್ಮನಾ ॥ ೧೧೧ ॥
ವಿನಾ ತಪೋ ಜಪಾದ್ಯೈಶ್ಚ ವಿನಾಯೋಗೇನ ಸುವ್ರತ ।
ನಿಃಶ್ರೇಯೋ ಲಭ್ಯತೇ ಕಾಶ್ಯಾಮಿಹೈಕೇನೈವ ಜನ್ಮನಾ ॥ ೧೧೨ ॥
ತ್ವಯಾ ಶುದ್ಧಧಿಯಾ ಕಾಶ್ಯಾಂ ಯಚ್ಛ್ರೇಯಃ ಸಮುಪಾರ್ಜಿತಂ ।
ತಚ್ಛ್ರೇಯಸೋಽಪ್ಯುದರ್ಕಸ್ತೇ ಮಹಾನಸ್ತಿ ದ್ವಿಜೋತ್ತಮ ॥ ೧೧೩ ॥
ಉಕ್ತ್ವೇತಿ ವಿರರಾಮಾಜಃ ಶೃಣ್ವತೋರ್ಗಣಯೋಸ್ತಯೋಃ ।
ಸೋಽಪಿ ಪ್ರಮುದಿತಶ್ಚಾಽಭೂಚ್ಛಿವಶರ್ಮಾ ಮಹಾಮನಾಃ ॥ ೧೧೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಬ್ರಹ್ಮಕೃತ ಕಾಶೀಪ್ರಶಂಸಾವರ್ಣನಂ"
ನಾಮ ದ್ವಾವಿಂಶೋಽಧ್ಯಾಯಃ

---

೧೧೦. ಯೋಗವಿಲ್ಲದೆ ಜ್ಞಾನವು ದೊರಕದು. ಆ ಯೋಗವಾದರೋ ತತ್ತ್ವಾರ್ಥವಿವೇಚನೆಯ ರೂಪವಾದುದು. ಆ ತತ್ತ್ವಾರ್ಥವಿವೇಚನೆಯು ಗುರೂಪದಿಷ್ಟವಾದ ಮಾರ್ಗದಲ್ಲಿ ಅಭ್ಯಾಸಮಾಡುವುದರಿಂದ ಲಭಿಸುವುದು.

೧೧೧. ಆದರೆ ಆ ಯೋಗಸಿದ್ಧಿಗೆ ಅನೇಕ ಅಡಚಣೆಗಳುಂಟು. ಆದುದರಿಂದ ಒಂದೇ ಜನ್ಮದಲ್ಲಿ ಯೋಗವು ಸಿದ್ಧಿಸಿ ಜ್ಞಾನಲಾಭವಾಗುವುದಿಲ್ಲವು.

೧೧೨. ತಪಸ್ಸು, ಜಪ ಮೊದಲಾದವುಗಳಿಲ್ಲದೆಯೂ, ಯೋಗವಿಲ್ಲದೆಯೂ ಒಂದೇ ಜನ್ಮದಲ್ಲಿಯೇ ಈ ಕಾಶೀಕ್ಷೇತ್ರದಲ್ಲಿ ಯಾನವನಿಗಾದರೂ ಆತ್ಯಂತಿಕವಾದ ಶ್ರೇಯಸ್ಸು ಲಭಿಸುತ್ತದೆ.

೧೧೩. ಅಯ್ಯಾ ಶಿವಶರ್ಮನೇ! ದ್ವಿಜೋತ್ತಮನಾದ ನೀನು ಕಾಶೀಕ್ಷೇತ್ರದಲ್ಲಿ ಆರ್ಜಿಸಿದ ಪುಣ್ಯದ ಫಲವಾಗಿ ನಿನಗೆ ಇಂತಹ ಶ್ರೇಯಸ್ಸು ಲಭಿಸಿರುವುದು."

೧೧೪. ಬ್ರಹ್ಮದೇವನು ಆ ವಿಷ್ಣುಪಾರ್ಷದರು ಕೇಳುತ್ತಿರುವಂತೆ ಈ ಪ್ರಕಾರವಾಗಿ ಹೇಳಿ ಸುಮ್ಮನಾದನು. ಮಹಾತ್ಮನಾದ ಶಿವಶರ್ಮನೂ ಆ ಮಾತುಗಳನ್ನು ಕೇಳಿ ಅಪರಿಮಿತವಾದ ಆನಂದವನ್ನು ಪಡೆದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಬ್ರಹ್ಮಕೃತ ಕಾಶೀಪ್ರಶಂಸಾವರ್ಣನ"ವೆಂಬ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯೋವಿಂಶೋಽಧ್ಯಾಯಃ

## ಚತುರ್ಭುಜಾಭಿಷೇಕವರ್ಣನಂ

**ಶಿವಶರ್ಮೋವಾಚ :—**

**ಸತ್ಯಲೋಕೇಶ್ವರ ವಿಧೇ ಸರ್ವೇಷಾಂ ಪ್ರಪಿತಾಮಹ ।**
**ಕಿಂಚಿದ್ವಿಜ್ಞಪ್ತುಕಾಮೋಽಸ್ಮಿ ನ ಭಯಾದ್ವಕ್ತುಮುತ್ಸಹೇ ॥ ೧ ॥**

**ಬ್ರಹ್ಮೋವಾಚ :—**

**ಯತ್ತ್ವಂ ಪ್ರಷ್ಟುಮನಾ ವಿಪ್ರ ಜ್ಞಾತಂ ತೇ ತನ್ಮನೋಗತಂ ।**
**ಪಿಪೃಚ್ಛಿಷುಸ್ತ್ವಂ ನಿರ್ವಾಣಂ ಗಣೌ ತತ್ಕಥಯಿಷ್ಯತಃ ॥ ೨ ॥**
**ನೈತಯೋರ್ವಿಷ್ಣುಗಣಯೋರಗೋಚರಮಿಹಾಽಸ್ತಿಹಿ ।**
**ಸರ್ವಮೇತೌ ವಿಜಾನೀತೋ ಯತ್ಕಿಂಚಿದ್ಬ್ರಹ್ಮಗೋಲಕೇ ॥ ೩ ॥**
**ಇತ್ಯುಕ್ತ್ವಾ ಸತ್ಕೃತಾಸ್ತೇ ವೈ ಬ್ರಹ್ಮಣಾ ಭಗವದ್ಗಣಾಃ ।**
**ಪ್ರಣಮ್ಯ ಲೋಕಕರ್ತಾರಂ ತೇಽಪಿ ಹೃಷ್ಟಾಃ ಪ್ರತಸ್ಥಿರೇ ॥ ೪ ॥**

---

## ಕನ್ನಡದ ಅನುವಾದ

### ಚತುರ್ಭುಜಾಭಿಷೇಕವರ್ಣನ

೧. ಶಿವಶರ್ಮನು ಹೇಳುತ್ತಾನೆ :—"ಸತ್ಯಲೋಕೇಶ್ವರನಾದ ವಿಧಾತನೇ ! ಸಮಸ್ತ ಜೀವರಾಶಿಗಳಿಗೂ ಪ್ರಪಿತಾಮಹನಾದ ನಿನ್ನಲ್ಲಿ ಸ್ವಲ್ಪ ವಿಜ್ಞಾಪಿಸಿಕೊಳ್ಳಬೇಕೆಂದಿದ್ದೇನೆ. ಆದರೆ ಅದನ್ನು ಹೇಳುವುದಕ್ಕೆ ಮಾತ್ರ ಭಯವಾಗಿದೆ."

೨. ಬ್ರಹ್ಮನು ಹೇಳುತ್ತಾನೆ:—"ಅಯ್ಯಾ ವಿಪ್ರನೇ ! ನೀನೇನನ್ನು ಕೇಳಬೇಕೆಂದಿರುವೆಯೋ ಅದು ನನಗೆ ತಿಳಿದಿದೆ. ನೀನು ಮುಕ್ತಿವಿಚಾರವನ್ನು ಕುರಿತು ಪ್ರಶ್ನಿಸಬಯಸಿರುವೆಯಷ್ಟೆ. ಅದನ್ನು ಈ ವಿಷ್ಣುಪಾರ್ಷದರೇ ನಿನಗೆ ತಿಳಿಯ ಹೇಳುತ್ತಾರೆ.

೩. ಇವರಿಗೆ ಈ ಜಗತ್ತಿನಲ್ಲಿ ತಿಳಿಯದಿರುವ ಸಂಗತಿಯಾವುದೂ ಇರುವುದಿಲ್ಲ. ಬ್ರಹ್ಮಾಂಡಗೋಳಕದಲ್ಲಿಯೇ ಆದರೂ ಇವರಿಗೆ ಗೋಚರವಾಗದಿರುವ ಏನೂ ಇರುವುದಿಲ್ಲವು."

೪. ಬ್ರಹ್ಮದೇವನು ಆ ವಿಷ್ಣುಪಾರ್ಷದರನ್ನು ಸತ್ಕರಿಸಿದ ಬಳಿಕ ಅವರೂ ಆ ಲೋಕಕರ್ತಾರನನ್ನು ನಮಸ್ಕರಿಸಿ ಸಂತುಷ್ಟಾಂತರಂಗರಾಗಿ ಅಲ್ಲಿಂದ ಶಿವಶರ್ಮನೊಡಗೊಂಡು ತೆರಳಿದರು.

ಪುನಃ ಸ್ವಯಾನಮಾರುಹ್ಯ ವೈಕುಂಠಮಭಿತೋ ಯಯುಃ ।
ಗಚ್ಛತಾಽಪಿ ಪುನಸ್ತತ್ರ ದ್ವಿಜೇನಾಪೃಚ್ಛಿತೌ ಗಣೌ ॥ ೫ ॥

ಶಿವಶರ್ಮೋವಾಚ :—

ಕಿಯದ್ದೂರಂ ವಯಂ ಪ್ರಾಪ್ತಾ ಗಂತವ್ಯಂ ಚ ಕಿಯತ್ಪುನಃ ।
ಪೃಚ್ಛಾಮ್ಯನ್ಯಚ್ಚ ವಾಂ ಭದ್ರೌ ಬ್ರೂತಂ ಪ್ರೀತ್ಯಾ ತದಪ್ಯಹೋ ॥ ೬ ॥
ಕಾಂಚ್ಯವಂತೀ ದ್ವಾರವತೀ ಕಾಶ್ಯಯೋಧ್ಯಾ ಚ ಪಂಚಮೀ ।
ಮಾಯಾಪುರೀ ಚ ಮಥುರಾಪುರ್ಯಃ ಸಪ್ತ ವಿಮುಕ್ತಿದಾಃ ॥ ೭ ॥
ವಿಹಾಯ ಷಟ್ಪುರೀಶ್ಚಾನ್ಯಾಃ ಕಾಶ್ಯಾಮೇವ ಪ್ರತಿಷ್ಠಿತಾ ।
ಮುಕ್ತಿರ್ವಿಶ್ವಸೃಜಾ ತತ್ಕಿಂ ಮಮ ಮುಕ್ತಿರ್ನ ಸಂಪ್ರತಿ ॥ ೮ ॥
ಇತಿ ಸರ್ವಂ ಮಮ ಪುರಃ ಪ್ರಸಾದಾದ್ವಕ್ತುಮರ್ಹತಂ ।
ಇತಿ ತದ್ವಾಕ್ಯಮಾಕರ್ಣ್ಯ ಗಣಾವೂಚತುರಾದರಾತ್ ॥ ೯ ॥

ಗಣಾವೂಚತುಃ :—

ಯಥಾರ್ಥಂ ಕಥಯಾವಸ್ತೇ ಯತ್ಪೃಷ್ಟಂ ಭವತಾಽನಘ ।
ವಿಷ್ಣುಪ್ರಸಾದಾಜ್ಜಾನೀವೋ ಭೂತಂ ಭಾವಿ ಭವತ್ತಥಾ ॥ ೧೦ ॥

---

೫. ಅವರು ಮತ್ತೆ ದಿವ್ಯವಿಮಾನವನ್ನೇರಿ ಮುಂದುವರಿದು ವೈಕುಂಠ ಲೋಕದ ಸಮೀಪಕ್ಕೆ ಬಂದರು. ಆಗ ಶಿವಶರ್ಮನು ಮತ್ತೆ ಆ ಗಣಗಳನ್ನು ಹೀಗೆ ಪ್ರಶ್ನಿಸಿದನು.

೬. ಶಿವಶರ್ಮನು ಪ್ರಶ್ನಿಸುತ್ತಾನೆ:—"ಎಲೈ ಪಾರ್ಷದರೆ! ಈಗ ನಾವು ಭೂಮಂಡಲದಿಂದ ಎಷ್ಟುದೂರ ಬಂದೆವು; ಇನ್ನೂ ಎಷ್ಟುದೂರ ಹೋಗ ಬೇಕಾಗಿದೆ? ಎಲೈ ಮಂಗಳಕರರೆ! ನಿಮ್ಮನ್ನು ಇನ್ನೊಂದು ವಿಷಯವಾಗಿಯೂ ಪ್ರಶ್ನಿಸಬೇಕೆಂದಿರುವೆನು. ನೀವು ನನ್ನ ಮೇಲಣ ಪ್ರೀತಿಯಿಂದ ಹೇಳಬೇಕು.

೭–೮. ಕಾಂಚಿ, ಅವಂತಿ, ದ್ವಾರಕೆ, ಕಾಶೀ, ಅಯೋಧ್ಯೆ, ಮಾಯಾಪುರಿ, ಮಥುರೆ ಎಂಬಿವು ಮುಕ್ತಿದಾಯಕಗಳಾದ ಸಪ್ತಪುರಿಗಳೆಂದು ಪ್ರಸಿದ್ಧವಾಗಿರುವುವಷ್ಟೆ? ಆದರೆ ಬ್ರಹ್ಮದೇವನು ಈ ಸಪ್ತಪುರಿಗಳಲ್ಲಿ ಆರನ್ನುಬಿಟ್ಟು ಕಾಶೀಪಟ್ಟಣದಲ್ಲಿ ಮಾತ್ರವೇ ಮುಕ್ತಿಯು ಪ್ರತಿಷ್ಠಿತವಾಗಿದೆಯೆಂದು ಹೇಳಿದುದೇತಕ್ಕೆ? ಹಾಗಾದರೆ ಕಾಶೀಕ್ಷೇತ್ರದಲ್ಲಲ್ಲದೆ ಬೇರೊಂದೆಡೆಯಲ್ಲಿ ಅಸುದೊರೆದ ನನಗೆ ಮುಕ್ತಿಯು ದೊರಕುವುದಿಲ್ಲವೆ?

೯. ಎಲೈ ವಿಷ್ಣುಕಿಂಕರರೇ! ನೀವು ಈ ಎಲ್ಲ ವಿಷಯಗಳನ್ನೂ ನನಗೆ ತಿಳಿಸುವ ಅನುಗ್ರಹವನ್ನುಮಾಡಿರಿ." ಇಂತು ನುಡಿದ ಆ ವಿಪ್ರನ ಮಾತುಗಳನ್ನು ಕೇಳಿ ಆ ವಿಷ್ಣುಕಿಂಕರರು ಅವನಲ್ಲಿಯ ಆದರದಿಂದ ಹೇಳತೊಡಗಿದರು.

೧೦. ಗಣಗಳು ಹೇಳುತ್ತಾರೆ:—ಎಲೈ ನಿರ್ದುಷ್ಟನೇ! ನಿನಗೀಗ ಯಥಾರ್ಥ

ವಿಸ್ತಾರಾವಭಾಸತೇ ಯಾವತ್ಕಿರಣೈಃ ಪುಷ್ಪವಂತಯೋಃ ।
ತಾವತೀ ಭೂಃ ಸಮುದ್ದಿಷ್ಟಾ ಸಸಮುದ್ರಾದ್ರಿಕಾನನಾ ॥ ೧೧ ॥
ವಿಯಚ್ಚ ತಾವದುಪರಿ ವಿಸ್ತಾರಪರಿಮಂಡಲಂ ।
ಯೋಜನಾನಾಂ ಚ ನಿಯುತೇ ಭೂಮೇರ್ಭಾನುರ್ವ್ಯವಸ್ಥಿತಃ ॥ ೧೨ ॥
ಭಾನೋಃ ಸಕಾಶಾದುಪರಿ ಲಕ್ಷೇ ಲಕ್ಷ್ಯಃ ಕ್ಷಪಾಕರಃ ।
ನಕ್ಷತ್ರಮಂಡಲಂ ಸೋಮಾಲ್ಲಕ್ಷಯೋಜನಮುಚ್ಛ್ರಿತಂ ॥ ೧೩ ॥
ಉಡುಮಂಡಲತಃ ಸೌಮ್ಯ ಉಪರಿಷ್ಟಾದ್ದ್ವಿಲಕ್ಷತಃ ।
ದ್ವಿಲಕ್ಷೇತು ಬುಧಾಚ್ಛುಕ್ರಃ ಶುಕ್ರಾದ್ಭೌಮೋದ್ವಿಲಕ್ಷಕೇ ॥ ೧೪ ॥
ಮಾಹೇಯಾದುಪರಿಷ್ಟಾಚ್ಚ ಸುರೇಜ್ಯೋ ನಿಯುತದ್ವಯೇ ।
ದ್ವಿಲಕ್ಷಯೋಜನೋತ್ಸೇಧಃ ಸೌರಿರ್ದೇವಪುರೋಹಿತಾತ್ ॥ ೧೫ ॥
ದಶಾಯುತಸಮುಚ್ಛ್ರಾಯಂ ಸೌರೇಃ ಸಪ್ತರ್ಷಿಮಂಡಲಂ ।
ಸಪ್ತರ್ಷಿಭ್ಯಃ ಸಹಸ್ರಾಣಾಂ ಶತಾದೂರ್ಧ್ವಂ ಧ್ರುವಃ ಸ್ಥಿತಃ ॥ ೧೬ ॥

---

ವಾದ ಸಂಗತಿಯನ್ನು ತಿಳಿಸುತ್ತೇವೆ. ನೀನು ಕೇಳಿದ ವಿಷಯವನ್ನು ನಾವು ವಿಷ್ಣುವಿನ ಪ್ರಸಾದದಿಂದರಿತಿರುವೆವು. ಇಷ್ಟೆಯಲ್ಲದೆ ಭೂತಭವಿಷ್ಯದ್ವರ್ತಮಾನ ಕಾಲಿಕ ವಿಚಾರವೂ ಆ ಪರಮಾತ್ಮನ ಅನುಗ್ರಹದಿಂದಲೇ ನಮಗೆ ತಿಳಿದಿದೆ.

೧೧. ಎಲೈ ವಿಪ್ರನೇ! ಎನುವರೆಗೆ ಸೂರ್ಯಚಂದ್ರರ ಕಿರಣಗಳು ಪ್ರಸರಿಸಿ ಪ್ರಕಾಶಗೊಳಿಸುತ್ತವೆಯೋ ಅದುವರೆಗೆ ಮಾತ್ರ ಸಮುದ್ರ ಪರ್ವತಾರಣ್ಯ ಪರಿವೃತವಾದ ಭೂಮಿಯೆಂದು ಗೊತ್ತಾಗಿದೆ.

೧೨–೧೩. ಅಲ್ಲಿಂದ ಮೇಲಕ್ಕೆ ವಿಸ್ತಾರವೂ, ಗುಂಡಗೂ ಇರುವ ಈ ಪ್ರದೇಶವೆಲ್ಲವೂ ಆಕಾಶವು. ಇಲ್ಲಿರುವ ಸೂರ್ಯನಿಗೂ ಭೂಮಿಗೂ ನಿಯುತಯೋಜನಗಳ ದೂರವಿರುವುದು. ಈ ಸೂರ್ಯನಿಗೆ ಮೇಲ್ಭಾಗದಲ್ಲಿ ಒಂದುಲಕ್ಷ ಯೋಜನಗಳ ದೂರದಲ್ಲಿ ಚಂದ್ರನೂ, ಅವನಿಂದ ಒಂದುಲಕ್ಷ ಯೋಜನಗಳ ಮೇಲ್ಭಾಗದಲ್ಲಿ ನಕ್ಷತ್ರಮಂಡಲವೂ ಇರುವುದು.

೧೪. ಈ ಉಡುಮಂಡಲಕ್ಕೆ ಎರಡುಲಕ್ಷ ಯೋಜನಗಳ ಮೇಲ್ಭಾಗದಲ್ಲಿ ಬುಧನೂ, ಅಲ್ಲಿಂದ ಎರಡುಲಕ್ಷಯೋಜನಗಳಲ್ಲಿ ಶುಕ್ರನೂ, ಅಲ್ಲಿಗೆ ಎರಡು ಲಕ್ಷ ಯೋಜನಗಳಲ್ಲಿ ಮಂಗಲನೂ ಇರುವರು.

೧೫. ಮಂಗಲನಿಗೆ ಎರಡು ಲಕ್ಷ ಯೋಜನಗಳಲ್ಲಿ ಬೃಹಸ್ಪತಿಯೂ, ಅಲ್ಲಿಂದ ಎರಡುಲಕ್ಷ ಯೋಜನಗಳಲ್ಲಿ ಶನಿಯೂ ಇರುವರು.

೧೬. ಶನಿಮಂಡಲದಿಂದ ಲಕ್ಷಯೋಜನಗಳ ಮೇಲ್ಭಾಗದಲ್ಲಿ ಸಪ್ತರ್ಷಿ ಮಂಡಲವೂ, ಅಲ್ಲಿಂದ ಒಂದುಲಕ್ಷಯೋಜನಗಳ ಮೇಲ್ಭಾಗದಲ್ಲಿ ಧ್ರುವ ಮಂಡಲವೂ ನೆಲಸಿರುವುವು.

ಪಾದಗಮ್ಯಂ ಹಿ ಯತ್ಕಿಂಚಿದ್ವಸ್ತ್ವಸ್ತಿ ಧರಣೀತಲೇ ।
ತದ್ಭೂರ್ಲೋಕ ಇತಿ ಖ್ಯಾತಃ ಸಾಬ್ಧಿದ್ವೀಪಾದ್ರಿಕಾನನಂ ॥ ೧೭ ॥
ಭೂರ್ಲೋಕಾಚ್ಚ ಭುವರ್ಲೋಕೋ ಬ್ರಧ್ನಾವಧಿರುದಾಹೃತಃ ।
ಆದಿತ್ಯಾದಾಧ್ರುವಂ ವಿಪ್ರ ಸ್ವರ್ಲೋಕ ಇತಿ ಗೀಯತೇ ॥ ೧೮ ॥
ಮಹರ್ಲೋಕಃ ಕ್ಷಿತೇರೂರ್ಧ್ವಮೇಕಕೋಟಿಪ್ರಮಾಣತಃ ।
ಕೋಟಿದ್ವಯೇತು ಸಂಖ್ಯಾತೋ ಜನೋ ಭೂರ್ಲೋಕತೋ ಜನೈಃ॥೧೯॥
ಚತುಷ್ಕೋಟಿಪ್ರಮಾಣಸ್ತು ತಪೋಲೋಕೋಽಸ್ತಿ ಭೂತಲಾತ್ ।
ಉಪರಿಷ್ಟಾತ್ ಕ್ಷಿತೇರಷ್ಟೌ ಕೋಟಯಃ ಸತ್ಯಮೀರಿತಂ ॥ ೨೦ ॥
ಸತ್ಯಾದುಪರಿ ವೈಕುಂಠೋ ಯೋಜನಾನಾಂ ಪ್ರಮಾಣತಃ ।
ಭೂರ್ಲೋಕಾತ್ಪರಿಸಂಖ್ಯಾತಃ ಕೋಟಿ ಷೋಡಶಸಂಮಿತಃ ॥ ೨೧ ॥
ಯತ್ರಾಸ್ತೇ ಶ್ರೀಪತಿಃ ಸಾಕ್ಷಾತ್ಸರ್ವೇಷಾಮಭಯಪ್ರದಃ ।
ತತಸ್ತು ಷೋಡಶಗುಣಃ ಕೈಲಾಸೋಽಸ್ತಿ ಶಿವಾಲಯಃ ॥ ೨೨ ॥
ಪಾರ್ವತ್ಯಾ ಸಹಿತಃ ಶಂಭುರ್ಗಜಾಸ್ಯಸ್ಕಂದನಂದಿಭಿಃ ।
ಯತ್ರ ತಿಷ್ಠತಿ ವಿಶ್ವೇಶಃ ಸಕಲಃ ಸಪರಃ ಸ್ಮೃತಃ ॥ ೨೩ ॥

---

೧೭. ಕಾಲ್ನಡಿಗೆಯಿಂದ ನಡೆಯಬಹುದಾದುದು, ಭೂಮಂಡಲದಲ್ಲಿ ಎಷ್ಟಿರುವುದೋ ಅಷ್ಟು ಪ್ರದೇಶವೂ ಭೂಲೋಕವೆನಿಸುವುದು. ಅದು ಸಮುದ್ರ, ಪರ್ವತ, ಕಾನನಗಳಿಂದ ಪರಿವೃತವಾದುದು.

೧೮. ಭೂಲೋಕದಿಂದ ಮೊದಲುಗೊಂಡು ಸೂರ್ಯಮಂಡಲದವರೆಗಣ ಪ್ರದೇಶವು ಭುವರ್ಲೋಕವೆನಿಸುವುದು. ಸೂರ್ಯನಿಂದ ಮೊದಲಾಗಿ ಧ್ರುವ ಮಂಡಲದವರೆಗಣ ಪ್ರದೇಶವೇ ಸ್ವರ್ಲೋಕವು.

೧೯. ಭೂಲೋಕಕ್ಕೆ ಒಂದುಕೋಟಿ ಯೋಜನಗಳ ದೂರದಲ್ಲಿ ಮಹರ್ಲೋಕವಿರುವುದು; ಎರಡುಕೋಟಿ ಯೋಜನಗಳ ದೂರದಲ್ಲಿ ಜನೋಲೋಕವಿರುವುದೆಂದು ಹೇಳಲಾಗಿದೆ.

೨೦. ಭೂತಲದಿಂದ ನಾಲ್ಕುಕೋಟಿ ಯೋಜನಗಳ ದೂರದಲ್ಲಿ ತಪೋಲೋಕವೂ, ಎಂಟುಕೋಟಿ ಯೋಜನಗಳ ಮೇಲೆ ಸತ್ಯಲೋಕವೂ ಇರುವುದು.

೨೧. ಸತ್ಯಲೋಕದ ಮೇಲ್ಭಾಗದಲ್ಲಿ ಭೂಲೋಕದಿಂದ ಹದಿನಾರು ಕೋಟಿ ಯೋಜನಗಳ ದೂರದಲ್ಲಿ ವೈಕುಂಠಲೋಕವಿರುವುದೆಂದು ತಿಳಿಯಲಾಗಿರುವುದು.

೨೨. ಆ ವೈಕುಂಠಲೋಕದಲ್ಲಿ ಸಮಸ್ತ ಜೀವರಾಶಿಗಳಿಗೂ ಅಭಯ ಪ್ರದನಾದ ಶ್ರೀಪತಿಯು ನೆಲಸಿರುವನು. ವೈಕುಂಠಲೋಕದಿಂದ ಹದಿನಾರು ಕೋಟಿ ಯೋಜಗಳ ದೂರದಲ್ಲಿ ಪರಶಿವನ ನೆಲೆಮನೆಯಾದ ಕೈಲಾಸಲೋಕವಿರುವುದು.

೨೩. ಅಲ್ಲಿ ಶ್ರೀಮತ್ಪರಶಿವನು ಪಾರ್ವತಿಯಿಂದಲೂ, ಗಣೇಶ, ಸ್ಕಂದ,

**ತಸ್ಯ ದೇವಸ್ಯ ಖೇಲೋಽಯಂ ಸ್ವಲೀಲಾಮೂರ್ತಿಧಾರಿಣಃ ।**
**ಸ ವಿಶ್ವೇಶ ಇತಿ ಖ್ಯಾತಸ್ತಸ್ಯಾಜ್ಞಾಕೃದಿದಂ ಜಗತ್ ॥ ೨೪ ॥**
**ಸರ್ವೇಷಾಂ ಶಾಸಕಶ್ಚಾಽಸೌ ತಸ್ಯ ಶಾಸ್ತಾ ನಚಾಽಪರಃ ।**
**ಸ್ವಯಂ ಸೃಜತಿ ಭೂತಾನಿ ಸ್ವಯಂ ಪಾತಿ ತಥಾಽತ್ತಿ ಚ ॥ ೨೫ ॥**
**ಸರ್ವಜ್ಞ ಏಕಃ ಸಪ್ರೋಕ್ತಃ ಸ್ವೇಚ್ಛಾಧೀನವಿಚೇಷ್ಟಿತಃ ।**
**ತಸ್ಯ ಪ್ರವರ್ತಕಃ ಕೋಽಪಿ ನಹಿ ನೈವ ನಿವರ್ತಕಃ ॥ ೨೬ ॥**
**ಅಮೂರ್ತಂ ಯತ್ಪರಂ ಬ್ರಹ್ಮ ಸಮೂರ್ತಂ ಶ್ರುತಿಚೋದಿತಂ ।**
**ಸರ್ವವ್ಯಾಪಿ ಸದಾ ನಿತ್ಯಂ ನಿತ್ಯಂ ದ್ವೈತವಿವರ್ಜಿತಂ ॥ ೨೭ ॥**
**ಸರ್ವೇಭ್ಯಃ ಕಾರಣೇಭ್ಯಶ್ಚ ಪರಾತ್ಪರತರಂ ಪರಂ ।**
**ಆನಂದಂ ಬ್ರಹ್ಮಣೋರೂಪಂ ಶ್ರುತಯೋ ಯತ್ಪ್ರಚಕ್ಷತೇ ॥ ೨೮ ॥**

---

ನಂದಿಗಳಿಂದಲೂ ಸಹಿತನಾಗಿ ಸತತವೂ ನೆಲಸಿರುವನು. ಆ ವಿಶ್ವೇಶ್ವರನೇ ಸಕಲನೂ (ಸರ್ವಸ್ವರೂಪನೂ), ಪರಾತ್ಪರನೂ ಆಗಿರುವನು.

೨೪. ತನ್ನ ಲೀಲೆಗೋಸುಗವಾಗಿಯೆ ಮಾಯಾಮಯಶರೀರವನ್ನು ಧರಿಸಿರುವ ಆ ದೇವದೇವನ ಕ್ರೀಡೆಯೇ ಈ ಬ್ರಹ್ಮಾಂಡವು. ಈ ಪ್ರಪಂಚವೆಲ್ಲವೂ ಆತನ ಆಜ್ಞೆಯನ್ನೇ ನಡೆಸುತ್ತಿರುವುದು.

೨೫. ಆ ಪರಮೇಶ್ವರನೇ ಸಮಸ್ತರಿಗೂ ಶಾಸಕನಾದವನು. ಆತನಿಗೆ ಶಾಸಕನಾದವನಾರೂ ಇರುವುದಿಲ್ಲವು. ಆತನು ತಾನೇ ಈ ಚತುರ್ವಿಧ ಭೂತಗಳನ್ನು ಸೃಜಿಸಿ, ತಾನೇ ಪಾಲಿಸಿ, ತಾನೇ ಅವುಗಳನ್ನು ಭಕ್ಷಿಸಿ ಲಯಗೊಳಿಸುತ್ತಾನೆ.

೨೬. ಅವನೊಬ್ಬನೇ ಸರ್ವಜ್ಞನು. ಅವನು ಮಾಡುವ ಪ್ರತಿಯೊಂದು ಕಾರ್ಯವೂ ಅವನ ಇಚ್ಛೆಗೆ ಅಧೀನವಾದುದೇ ಹೊರತು ಯಾರೊಬ್ಬರ ಇಚ್ಛಾನುವರ್ತಿಯೂ ಅಲ್ಲ, ಅವನನ್ನು ಹೀಗೆ ಮಾಡೆಂದು ಕಾರ್ಯಗಳಲ್ಲಿ ಪ್ರವರ್ತನಗೊಳಿಸುವವನಾಗಲಿ, ಅವನು ಮಾಡುವ ಕಾರ್ಯಗಳನ್ನು ತಡೆದು ನಿವರ್ತನಗೊಳಿಸುವವನಾಗಲಿ ಯಾರೂ ಇಲ್ಲ.

೨೭. ವಾಯ್ವಾಕಾಶಾದಿ ಪಂಚಭೂತಗಳ ಸ್ವರೂಪದಲ್ಲಿ ಕಂಗೊಳಿಸುವವನಾಗಿ ಶ್ರುತಿಪ್ರತಿಪಾದಿತಗಳಾದ ಕಾರಣಪರಂಪರೆಗಳಿಂದ ಅಂತು ಅಮೂರ್ತನಾಗಿದ್ದರೂ, ಮೂರ್ತಸ್ವರೂಪದಿಂದ ಪರಬ್ರಹ್ಮಸ್ವರೂಪನಾಗಿ, ಸಮಸ್ತ ಬ್ರಹ್ಮಾಂಡದಲ್ಲಿಯೂ ತಾನೇತಾನಾಗಿ ವ್ಯಾಪಿಸಿ, ನಿತ್ಯನೂ ಸತ್ಯಸ್ವರೂಪನೂ ದ್ವೈತವಿವರ್ಜಿತನೂ ಆಗಿರುವವನು ಆ ಭಗವಂತನೊಬ್ಬನೇ.

೨೮. ಆನಂದವೇ ಪರಬ್ರಹ್ಮನ ಸ್ವರೂಪವೆಂದು ಶ್ರುತಿಗಳು ಸಾರುತ್ತವೆ.

ಸಂವಿದಂತೇ ನ ಯಂ ವೇದಾ ವಿಷ್ಣುರ್ವೇದ ನ ವೈ ವಿಧಿಃ ।
ಯತೋ ವಾಚೋ ನಿವರ್ತಂತೇ ಹ್ಯಪ್ರಾಪ್ಯ ಮನಸಾ ಸಹ ॥ ೨೯ ॥
ಸ್ವಯಂ ವೇದ್ಯಃ ಪರಂಜ್ಯೋತಿಃ ಸರ್ವಸ್ಯ ಹೃದಿ ಸಂಸ್ಥಿತಃ ।
ಯೋಗಿಗಮ್ಯಸ್ತ್ವನಾಖ್ಯೇಯೋ ಯಃ ಪ್ರಮಾಣೈಕ ಗೋಚರಃ ॥ ೩೦ ॥
ನಾನಾರೂಪೋಽಪ್ಯರೂಪೋ ಯಃ ಸರ್ವಗೋಽಪಿ ನ ಗೋಚರಃ ।
ಅನಂತೋಽಪ್ಯಂತಕವಪುಃ ಸರ್ವನಿತ್ಕರ್ಮವರ್ಜಿತಃ ॥ ೩೧ ॥
ತಸ್ಯೇದಮೈಶ್ವರಂ ರೂಪಂ ಖಂಡಚಂದ್ರಾವತಂಸಕಂ ।
ತಮಾಲಶ್ಯಾಮಲಗಲಂ ಸ್ಫುರದ್ಭಾಲವಿಲೋಚನಂ ॥ ೩೨ ॥
ಲಸದ್ವಾಮಾರ್ಧನಾರೀಕಂ ಕೃತ ಶೇಷಶುಭಾಂಗದಂ ।
ಗಂಗಾತರಂಗಸತ್ಸಂಗಸದಾಧೌತಜಟಾತಟಂ ॥ ೩೩ ॥

---

ಅದೇ ಸಮಸ್ತ ಕಾರಣಗಳಿಗೂ ಪರಾತ್ಪರತರವೆನಿಸಿ ಮಹಾಶ್ರೇಷ್ಠವೂ ಆಗಿರುವುದು ; ಆ ಆನಂದವೇ ಈತನು.

೨೯. ಈತನನ್ನು ವಿಷ್ಣುವಾಗಲಿ ಬ್ರಹ್ಮನಾಗಲಿ ಸಾಕ್ಷಾತ್ಕರಿಸಿಕೊಂಡಿರುವುದಿಲ್ಲ. ಈತನು ವಿಷಯಾದಿಗಳಿಗೆ ದೂರನು. ಮಾತುಗಳಿಗೂ ಈತನು ನಿಲುಕುವವನಲ್ಲ. ಮನಸ್ಸಿಗೂ ಗೋಚರನಾಗುವವನಲ್ಲ. ಆದುದರಿಂದಲೇ ಶ್ರುತಿಗಳು "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ" ಎಂದು ಸಾರುತ್ತಿವೆ.

೩೦. ಸಮಸ್ತ ಪ್ರಾಣಿಗಳ ಹೃದಯಗಳಲ್ಲಿಯೂ ನೆಲೆಗೊಂಡು ಪರಂಜ್ಯೋತಿಸ್ವರೂಪನಾಗಿ ಪ್ರಕಾಶಿಸುತ್ತ, ಸಮಸ್ತಪ್ರಮಾಣಗಳಿಗೂ ಪ್ರಮಾಣಭೂತನಾಗಿ ಯೋಗವೊಂದರಿಂದಲೆ ತಿಳಿಯಲು ಸಾಧ್ಯನಾಗಿರುವ ಈ ಪರಮಾತ್ಮನು ಸ್ವಯಂವೇದ್ಯನಾಗಿರುವನು. ಈತನನ್ನು ಇಂತೆಂದು ಹೇಳಲಸದಳ.

೩೧. ಬಹುರೂಪನಾದರೂ ರೂಪವೇ ಇಲ್ಲದವನಾಗಿ, ಎಲ್ಲೆಲ್ಲಿಯೂ ವ್ಯಾಪಿಸಿದ್ದರೂ ಬಾಹ್ಯಚಕ್ಷುವಿಗೆ ಅಗೋಚರನಾಗಿ, ಅನಂತನಾಗಿದ್ದರೂ (ಮಾಯೆಯಿಂದ ಪರಿಚ್ಛಿನ್ನವಾದ ಸ್ವರೂಪವುಳ್ಳವನಾದರೂ) ಸಮಸ್ತ ಬ್ರಹ್ಮಾಂಡಕ್ಕೂ ಕಾಲಯಮಸ್ವರೂಪನಾಗಿ, ಎಲ್ಲವನ್ನೂ ಬಲ್ಲವನಾದರೂ ಯಾವ ಕೆಲಸವನ್ನೂ ಮಾಡದವನಾಗಿ ವಿರಾಜಿಸುವವನೂ ಈತನೇ.

೩೨–೩೩. ಅಂಥ ಈ ಪರಮೇಶ್ವರನ ಸ್ವರೂಪವೇ ಈ ರೂಪದಿಂದಿರುವುದು : ಚಂದ್ರಖಂಡವೇ ಕಿರೀಟವಾಗಿ, ತಮಾಲಶ್ಯಾಮಲವಾದ ಕಂಠವುಳ್ಳುದಾಗಿ, ಜಾಜ್ವಲ್ಯಮಾನವಾಗಿ ಬೆಳಗುತ್ತಿರುವ ಫಾಲನಯನದಿಂದೊಪ್ಪಿ, ವಾಮಭಾಗದಲ್ಲಿ ಕಂಗೊಳಿಸುತ್ತಿರುವ ಉಮಾದೇವಿಯುಳ್ಳುದಾಗಿ, ಆದಿಶೇಷನನ್ನೆ ಬಾಹುಜಿಗೆ

ಸ್ಮರಾಂಗಜರಜಃಪುಂಜಪೂಜಿತಾಽವಯವೋಜ್ಜ್ವಲಂ ।
ವಿಚಿತ್ರಗಾತ್ರ ವಿಧೃತ ಮಹಾವ್ಯಾಲವಿಭೂಷಣಂ ॥ ೩೪ ॥
ಮಹೋಕ್ಷಸ್ಯಂದನಗಮಂ ವಿರುತಾಜಗವಾಯುಧಂ ।
ಗಜಾಽಜಿನೋತ್ತರಾಸಂಗಂ ದಶಾಽರ್ಧವದನಂ ಶುಭಂ ॥ ೩೫ ॥
ಉತ್ತ್ರಾಸಿತಮಹಾಮೃತ್ಯುಮಹಾಬಲಗಣಾವೃತಂ ।
ಶರಣಾರ್ಥಿ ಕೃತತ್ರಾಣಂ ನತನಿರ್ವಾಣಕಾರಣಂ ।
ಮನೋರಥಪಥಾಽತೀತಂ ವರದಾನಪರಾಯಣಂ ॥ ೩೬ ॥
ತಸ್ಯ ತತ್ತ್ವಸ್ವರೂಪಸ್ಯ ರೂಪಾತೀತಸ್ಯ ಭೋ ದ್ವಿಜ ।
ಪರಾವರೇ ರುದ್ರರೂಪೇ ಸರ್ವಂ ವ್ಯಾಪ್ಯಾಽವತಿಷ್ಠತಃ ॥ ೩೭ ॥
ನಿರಾಕಾರೋಽಪಿ ಸಾಕಾರಃ ಶಿವ ಏವ ಹಿ ಕಾರಣಂ ।
ಮುಕ್ತಯೇ ಭುಕ್ತಯೇ ವಾಽಪಿ ನ ಶಿವಾನ್ಮೋಕ್ಷದೋಽಪರಃ ॥ ೩೮ ॥

---

ಯನ್ನಾಗಿ, ಗಂಗಾತರಂಗಗಳ ಸಂಸರ್ಗದಿಂದ ಸತತವೂ ಶುಭ್ರಗೊಳ್ಳುತ್ತಿರುವ ಜಟಾಮಂಡಲದಿಂದ ಶೋಭಿಸಿ, ಮದನನ್ನು ಸುಟ್ಟ ಭಸ್ಮದಿಂದ ಉದ್ಧೂಳಿತವಾದ ಸಕಲಾವಯವಗಳಿಂದ ಬೆಳಗಿ, ವಿಚಿತ್ರವಾದ ಭುಜಾದಿ ಅವಯವಗಳಲ್ಲಿ ಆಭರಣಗಳಾಗಿ ಧರಿಸಿದ ಮಹಾಸರ್ಪಗಳುಳ್ಳುದಾಗಿ, ಮಹಾವೃಷಭವೆಂಬ ರಥವೇರಿ ಹೋಗುವುದಾಗಿ, ಗಜಾಜಿನವನ್ನುಟ್ಟು ಅಜಗವ (ಪಿನಾಕ) ವೆಂಬ ಧನುಸ್ಸನ್ನು ಧರಿಸಿ ಪಂಚಮುಖಗಳಿಂದ ಮಂಗಳಕರವಾಗಿ ತೋರುತ್ತಿರುವುದು.

೩೬. ಈ ಮಹಾರೂಪವು ಮಹಾಮೃತ್ಯುವನ್ನೂ ಬೆದರಿಸುವುದಾಗಿ, ಮಹಾಬಲಿಷ್ಠವಾದ ಭೂತಗಣಗಳಿಂದ ಆವೃತವಾಗಿ, ಶರಣೆಂದು ಬಂದ ಭಕ್ತಸಮೂಹಕ್ಕೆ ರಕ್ಷಣೆಯನ್ನು ನೀಡಿ, ನಮಸ್ಕರಿಸಿದ ಸಮಸ್ತರ ಮುಕ್ತಿ ಲಾಭಕ್ಕೂ ಕಾರಣವಾಗಿ, ಬೇಡಿದ ಭಕ್ತರಿಗೆ ಅವರ ಮನೋರಥದ ಹಾದಿಯನ್ನು ಮೀರಿ ವರಗಳನ್ನು ನೀಡುವುದರಲ್ಲಿಯೆ ಪರಾಯಣವೆನಿಸಿರುವುದು.

೩೭. ಅಯ್ಯಾ ಬ್ರಾಹ್ಮಣನೆ, ಕೇವಲ ತತ್ತ್ವಸ್ವರೂಪವಾಗಿ ರೂಪಾತೀತವೆನಿಸಿ ಸಗುಣ ನಿರ್ಗುಣ ಬ್ರಹ್ಮರೂಪಗಳಿಂದ ಕಂಗೊಳಿಸುತ್ತ, ಸಂಸಾರದುಃಖವನ್ನು ನಾಶಗೊಳಿಸುವುದೆಂಬ ಅನ್ವರ್ಥವಾದ ಅರ್ಥದಿಂದಲೇ (ರುತ್-ಸಂಸಾರಂ ತದ್ರಾತಿ-ನಾಶಯತಿ ಇತಿ ರುದ್ರಃ) ಸರ್ವವ್ಯಾಪಕನಾದ ಈ ಮಹೇಶ್ವರನು ಪ್ರತಿಷ್ಠಿತನಾಗಿರುವನು.

೩೮. ನಿರಾಕಾರನಾದರೂ ಸಾಕಾರನಾಗಿರುವವನು ಈ ಶಿವನು. ಇವನೇ ಸಮಸ್ತ ಜೀವರಾಶಿಗಳ ಭುಕ್ತಿಮುಕ್ತಿಗಳಿಗೆ ಆದಿಕಾರಣಸ್ವರೂಪನು. ಈ ಶಿವನಿಗಿಂತಲೂ ಮೋಕ್ಷಪ್ರದಾಯಕನೆನಿಸಿದವನು ಬೇರೊಬ್ಬನಾವನೂ ಇಲ್ಲ.

ಯಥಾ ತೇನಾಽಖಿಲಂ ಹ್ಯೇತತ್ಪಾರ್ವತೀಪತಿಸಾತ್ಕೃತಂ ।
ಇದಂ ಚರಾಚರಂ ಸರ್ವಂ ದೃಶ್ಯಾದೃಶ್ಯಸ್ವರೂಪಿಣಾ ॥ ೩೯ ॥
ತಥಾ ಮೃಡಾನೀಕಾಂತೇನ ವಿಷ್ಣುಸಾದಖಿಲಂ ಜಗತ್ ।
ವಿಧಾಯ ಕ್ರೀಡ್ಯತೇ ವಿಪ್ರ ನಿತ್ಯಂ ಸ್ವಚ್ಛಂದಲೀಲಯಾ ॥ ೪೦ ॥
ಯಥಾ ಶಿವಸ್ತಥಾ ವಿಷ್ಣುರ್ಯಥಾ ವಿಷ್ಣುಸ್ತಥಾಶಿವಃ ।
ಅಂತರಂ ಶಿವವಿಷ್ಣ್ವೋಶ್ಚ ಮನಾಗಪಿ ನ ವಿದ್ಯತೇ ॥ ೪೧ ॥
ಆಹೂಯ ಪೂರ್ವಂ ಬ್ರಹ್ಮಾದೀನ್ ಸಮಸ್ತಾನ್ದೇವತಾಗಣಾನ್ ।
ವಿದ್ಯಾಧರೋರಗಾದೀಂಶ್ಚ ಸಿದ್ಧಗಂಧರ್ವಚಾರಣಾನ್ ॥ ೪೨ ॥
ನಿಜಸಿಂಹಾಸನಸಮಂ ಕೃತ್ವಾ ಸಿಂಹಾಸನಂ ಶುಭಂ ।
ಉಪವೇಶ್ಯ ಹರಿಂ ತತ್ರ ಛತ್ರಂ ಕೃತ್ವಾ ಮನೋಹರಂ ॥ ೪೩ ॥
ಶ್ಲಕ್ಷ್ಣಂ ಕೋಟಿಶಲಾಕಂ ಚ ವಿಶ್ವಕರ್ಮವಿನಿರ್ಮಿತಂ ।
ಪಾಂಡುರಂ ರತ್ನದಂಡಂ ಚ ಸ್ಥೂಲಮುಕ್ತಾಽವಲಂಬಿತಂ ॥ ೪೪ ॥
ಕಲಶೇನ ವಿಚಿತ್ರೇಣ ಹ್ಯುಪರಿಷ್ಟಾದ್ವಿರಾಜಿತಂ ।
ಸಹಸ್ರಯೋಜನಾಯಾಮಂ ಸರ್ವರತ್ನಮಯಂ ಶುಭಂ ॥ ೪೫ ॥

---

೩೯. ಚರಾಚರಾತ್ಮಕವಾದ ಈ ಜಗತ್ತೆಲ್ಲವೂ ಅದೃಶ್ಯರೂಪಿಯೂ ಪಾರ್ವತೀ ಪತಿಯೂ ಆದ ಈ ಪರಮೇಶ್ವರನಲ್ಲಿಯೇ ಪ್ರಳಯಕಾಲದಲ್ಲಿ ಹುದುಗಿ ಹೋಗುವುದು.

೪೦. ಈತನು ಇಂಥ ಜಗತ್ತನ್ನು ಸಂರಕ್ಷಣಾರ್ಥವಾಗಿ ವಿಷ್ಣುವಿನ ಅಧೀನಕ್ಕೆ ಒಳಪಡಿಸಿ ತಾನು ಮಾತ್ರ ಸ್ವಚ್ಛಂದವಾದ ಲೀಲೆಯಿಂದಲೆ ಸತತವೂ ವಿನೋದವಾಗಿ ಕ್ರೀಡಿಸುತ್ತಿರುತ್ತಾನೆ.

೪೧. ಶಿವನೆಂತೊ ವಿಷ್ಣುವೂ ಅಂತೆಯೆ. ವಿಷ್ಣುವೆಂತೊ ಶಿವನೂ ಅಂತೆಯೆ. ಈ ಶಿವವಿಷ್ಣುಗಳಿಗೆ ಸ್ವಲ್ಪವೂ ಅಂತರವೆಂಬುದಿಲ್ಲ.

೪೨–೫೩. ಅಯ್ಯಾ ವಿಪ್ರನೆ, ಪೂರ್ವದಲ್ಲಿ ಈ ಪರಮೇಶ್ವರನು ಮಹಾ ವಿಷ್ಣುವಿಗೆ ಸಮಸ್ತಬ್ರಹ್ಮಾಂಡರಾಜ್ಯಸಿಂಹಾಸನವಿತ್ತು ಪಟ್ಟಾಭಿಷೇಕ ಮಹೋತ್ಸವವನ್ನು ಆಗಗೊಳಿಸಿರುವನು. ಒಮ್ಮೆ ಈತನು ಬ್ರಹ್ಮಾದಿ ಸಮಸ್ತ ದೇವತಾಗಣಗಳನ್ನೂ ವಿದ್ಯಾಧರ ಉರಗ ಸಿದ್ಧ ಗಂಧರ್ವ ಚಾರಣರನ್ನೂ ಆಹ್ವಾನಿಸಿ ತನ್ನ ಸಿಂಹಾಸನಕ್ಕನುಗುಣವಾದ ಮಂಗಳಕರವಾದ ಬೇರೊಂದು ಸಿಂಹಾಸನವನ್ನು ನಿರ್ಮಿಸಿ ಆ ಮಹಾವಿಷ್ಣುವನ್ನು ಅದರ ಮೇಲೆ ಕುಳ್ಳಿರಿಸಿದನು ; ಮೃದುವಾದ ತೆಳ್ಳನೆಯ ಧವಳಾಂಬರದಿಂದ ಸೊಗಸುಗೊಂಡು, ಕೋಟಿ ಶಲಾಕೆ ಗಳಿಂದೊಪ್ಪಿ, ತೋರಮುತ್ತುಗಳ ಮಾಲೆಗಳಿಂದ ಕಂಗೊಳಿಸಿ, ರತ್ನ ದಂಡ ಸಮನ್ವಿತವಾಗಿ ಮೇಲ್ಭಾಗದಲ್ಲಿ ವಿಚಿತ್ರವಾದ ಕಳಶದಿಂದ ವಿರಾಜಿಸುತ್ತ ಸರ್ವ

ಪಟ್ಟಸೂತ್ರಮಯೈ ರಮ್ಯೈಶ್ಚಾಮರೈಶ್ಚ ಪರಿಷ್ಕೃತಂ ।
ರಾಜಾಽಭಿಷೇಕಯೋಗ್ಯೈಶ್ಚ ದ್ರವ್ಯೈಃ ಸರ್ವೌಷಧಾದಿಭಿಃ ॥ ೪೬ ॥
ಪ್ರತ್ಯಕ್ಷತೀರ್ಥಪಾಥೋಭಿಃ ಪಂಚಕುಂಭೈರ್ಮನೋಹರೈಃ ।
ಸಿದ್ಧಾರ್ಥಾಕ್ಷತದೂರ್ವಾಭಿರ್ಮಂತ್ರೈಃ ಸ್ವಯಮುಪಸ್ಥಿತೈಃ ॥ ೪೭ ॥
ದೇವಾನಾಂ ಚ ತಥರ್ಷೀಣಾಂ ಸಿದ್ಧಾನಾಂ ಫಣಿನಾಮಪಿ ।
ಆನೀಯ ಮಂಗಲಕರಾಃ ಕನ್ಯಾಃ ಷೋಡಶ ಷೋಡಶ ॥ ೪೮ ॥
ವೀಣಾಮೃದಂಗಾಬ್ಜಭೇರೀಮರುಡಿಂಡಿಮ ಝುರ್ಝುರೈಃ ।
ಆನಕೈಃ ಕಾಂಸ್ಯತಾಲಾದ್ಯೈರ್ವಾದ್ಯೈರ್ಲಲಿತಗಾಯನೈಃ ॥ ೪೯ ॥
ಬ್ರಹ್ಮಘೋಷಮಹಾರಾವೈರಾಪೂರಿತನಭೋಽಂಗಣೇ ।
ಶುಭೇ ತಿಥೌ ಶುಭೇ ಲಗ್ನೇ ತಾರಾಚಂದ್ರಬಲಾಽನ್ವಿತೇ ॥ ೫೦ ॥
ಆಬದ್ಧಮುಕುಟಂ ರಮ್ಯಂ ಕೃತಕೌತುಕಮಂಗಲಂ ।
ಮೃಡಾನೀಕೃತಶೃಂಗಾರಂ ಸುಶ್ರಿಯಾ ಸುಶ್ರಿಯಾ ಯುತಂ ॥ ೫೧ ॥
ಅಭಿಷಿಚ್ಯ ಮಹೇಶೇನ ಸ್ವಯಂ ಬ್ರಹ್ಮಾಂಡಮಂಡಪೇ ।
ದತ್ತಂ ಸಮಸ್ತಮೈಶ್ವರ್ಯಂ ಯನ್ನಿಜಂ ನಾಽನ್ಯಗಾಮಿ ಚ ॥ ೫೨ ॥

---

ರತ್ನಮಯವಾಗಿ, ಸಹಸ್ರ ಯೋಜನಗಳ ಅಗಲವಿರುವ, ವಿಶ್ವಕರ್ಮನು ಸ್ವಂತವಾಗಿ ನಿರ್ಮಿಸಿದ ಮನೋಹರವಾದ ಶ್ವೇತಚ್ಛತ್ರದಿಂದ ಆ ಸಿಂಹಾಸನವನ್ನು ಅಲಂಕರಿಸಿದನು; ಪಟ್ಟಸೂತ್ರಗಳನ್ನೊಡಗೊಂಡು ಬಹು ರಮಣೀಯವಾಗಿ ಕಂಗೊಳಿಸುವ ಚಾಮರಗಳನ್ನು ಅದಕ್ಕೆ ಅಳವಡಿಸಿದನು; ರಾಜಾಭಿಷೇಕಯೋಗ್ಯವಾದ ದ್ರವ್ಯಗಳಿಂದಲೂ ಸಮಸ್ತ ಓಷಧಿಗಳಿಂದಲೂ ಪ್ರತ್ಯಕ್ಷವಾದ ಸಮಸ್ತ ತೀರ್ಥೋದಕಗಳಿಂದಲೂ ಮನೋಹರವಾದ ಸಿದ್ಧಾರ್ಥಾಕ್ಷತೆ, ದೂರ್ವೆಗಳನ್ನು ಹಾಕಿ ಅಭಿಮಂತ್ರಿಸಿ ತಾನಾಗಿಯೆ ಸಿದ್ಧಗೊಂಡ ಪಂಚಕುಂಭಗಳನ್ನು ಅಲ್ಲಿ ನೆರೆದಿದ್ದ ದೇವತೆಗಳ, ಋಷಿಗಳ, ಸಿದ್ಧನಾಗರ ಸಮಕ್ಷದಲ್ಲಿ ಉಭಯ ಪಾರ್ಶ್ವಗಳಲ್ಲಿಯೂ ಹದಿನಾರು ಹದಿನಾರು ಮಂದಿ ಮಂಗಳಾಂಗಿಯರಾದ ಕನ್ನಿಕೆಯರು ಕೊಂಡುಬರಲು, ಎತ್ತೆತ್ತಲೂ ವೀಣೆ, ಮೃದಂಗ, ಶಂಖ, ಭೇರಿ, ಡಮರು, ಡಿಂಡಿಮ, ಝಲ್ಲರಿ, ತಮ್ಮಟೆ, ತಾಳ ಮೊದಲಾದ ವಾದ್ಯಗಳು ಭೋರ್ಗರೆಯುತ್ತಿರಲು, ಕಿವಿಗಿಂಪಾಗಿ ಮೃದುಮಧುರವಾದ ಗಾಯನವು ನಡೆಯುತ್ತಿರಲು, ನಭೋಂಗಣವೆಲ್ಲವೂ ಮಹರ್ಷಿಗಳ ಬ್ರಹ್ಮಘೋಷದಿಂದ ತುಂಬಿಹೋಗಿರಲು, ಶುಭತಿಥಿಯಲ್ಲಿ, ಶುಭಲಗ್ನದಲ್ಲಿ ತಾರಾಬಲ ಚಂದ್ರಬಲಗಳನ್ನು ನೋಡಿ ಕೌತುಕ ಮಂಗಲಪುರಸ್ಸರವಾಗಿ ಆ ಮಹಾವಿಷ್ಣುವಿನ ಶಿರಸ್ಸಿನ ಮೇಲೆ ರಮಣೀಯವಾದ ಕಿರೀಟವನ್ನು ತೊಡಿಸಿದನು; ಅಲ್ಲದೆ, ತನ್ನನ್ನುಳಿದು ಮತ್ತೆಲ್ಲಿಗೂ ಹೋಗದ, ತನ್ನದೇ ಆದ ಅಖಂಡೈಶ್ವರ್ಯವನ್ನೂ ಆತನಿಗೆ ದಯಪಾಲಿಸಿದನು. ತರುವಾಯ

ತತಸ್ತುಷ್ಟಾವ ದೇವೇಶಃ ಪ್ರಮಥೈಃ ಸಹ ಶಾರ್ಙ್ಗಿಣಂ ।
ಬ್ರಹ್ಮಾಣಂ ಲೋಕಕರ್ತಾರಮುವಾಚ ಚ ವಚಸ್ತ್ವಿದಂ ॥ ೫೩ ॥
ಮಮ ವಂದ್ಯಸ್ತ್ವಯಂ ವಿಷ್ಣುಃ ಪ್ರಣಮ ತ್ವಮಮುಂ ಹರಿಂ ।
ಇತ್ಯುಕ್ತ್ವಾಽಥ ಸ್ವಯಂ ರುದ್ರೋ ನನಾಮ ಗರುಡಧ್ವಜಂ ॥ ೫೪ ॥
ತತೋ ಗಣೇಶ್ವರೈಃ ಸರ್ವೈರ್ಬ್ರಹ್ಮಣಾ ಚ ಮರುದ್ಗಣೈಃ ।
ಯೋಗಿಭಿಃ ಸನಕಾದ್ಯೈಶ್ಚ ಸಿದ್ಧೈರ್ದೇವರ್ಷಿಭಿಸ್ತಥಾ ॥ ೫೫ ॥
ವಿದ್ಯಾಧರೈಃ ಸ ಗಂಧರ್ವೈರ್ಯಕ್ಷರಕ್ಷೋಽಪ್ಸರೋಗಣೈಃ ।
ಗುಹ್ಯಕೈಶ್ಚಾರಣೈರ್ಭೂತೈಃ ಶೇಷವಾಸುಕಿತಕ್ಷಕೈಃ ॥ ೫೬ ॥
ಪತತ್ರಿಭಿಃ ಕಿನ್ನರೈಶ್ಚ ಸರ್ವೈಃ ಸ್ಥಾವರಜಂಗಮೈಃ ।
ತತೋ ಜಯ ಜಯೇತ್ಯುಕ್ತ್ವಾ ನಮೋಽಸ್ತ್ವಿತಿ ನಮೋಽಸ್ತ್ವಿತಿ ॥ ೫೭ ॥
ತತೋ ಹರಿರ್ಮಹೇಶೇನ ಸಂಸದಿ ದ್ಯುಸದಾಂ ತದಾ ।
ಏತೈರ್ಮಹಾರ್ಹೈ ರತ್ನೈಶ್ಚಾನರ್ಚಿ ಪರಮಾರ್ಚಿಷಾ ॥ ೫೮ ॥
ತ್ವಂ ಕರ್ತಾ ಸರ್ವಭೂತಾನಾಂ ಪಾತಾ ಹರ್ತಾ ತ್ವಮೇವ ಚ ।
ತ್ವಮೇವ ಜಗತಾಂ ಪೂಜ್ಯಸ್ತ್ವಮೇವ ಜಗದೀಶ್ವರಃ ॥ ೫೯ ॥

---

ಆ ದೇವೇಶ್ವರನು ಪ್ರಮಥಗಣಗಳೊಡಗೂಡಿ ಆ ಶಾರ್ಙ್ಗಿಯನ್ನು ಸ್ತುತಿಸಿದನು. ಇದಾದ ಬಳಿಕ ಆ ಶಂಕರನು ಲೋಕಕರ್ತೃವಾದ ಬ್ರಹ್ಮನನ್ನು ಕುರಿತು ಈ ಪ್ರಕಾರವಾಗಿ ಹೇಳಿದನು.

೫೪. "ಅಯ್ಯಾ ಬ್ರಹ್ಮನೆ, ಈ ವಿಷ್ಣುವು ನನಗೆ ವಂದ್ಯನು. ಆದುದರಿಂದ ಈ ಹರಿಯನ್ನು ನೀನೂ ನಮಸ್ಕರಿಸು." ಇಂತು ನುಡಿದ ಬಳಿಕ ಆ ರುದ್ರನು ತಾನೇ ಮೊದಲು ಆ ಗರುಡಧ್ವಜನನ್ನು ನಮಸ್ಕರಿಸಿದನು.

೫೫–೫೮. ತರುವಾಯ ಗಣಾಧೀಶ್ವರರೂ, ಬ್ರಹ್ಮನೂ, ಮರುದ್ಗಣಗಳೂ, ಸನಕಾದಿ ಯೋಗಿವರರೂ, ಸಿದ್ಧರೂ, ದೇವರ್ಷಿಗಳೂ, ಗಂಧರ್ವರೊಡಗೂಡಿದ ವಿದ್ಯಾಧರರೂ, ಯಕ್ಷರಾಕ್ಷಸರೂ, ಅಪ್ಸರರೂ, ಗುಹ್ಯಕರೂ, ಚಾರಣರೂ, ಭೂತಗಣಗಳವರೂ, ಶೇಷ ವಾಸುಕಿ ತಕ್ಷಕಾದಿ ಪನ್ನಗರೂ, ವಿಹಂಗಮ ಕಿನ್ನರರೂ, ಸ್ಥಾವರಜಂಗಮರೂ ಜಯಜಯಕಾರಗಳನ್ನು ಮಾಡಿ ಅನಂತಾನಂತ ನಮಸ್ಕಾರಗಳನ್ನೆಸಗಿದರು. ಆ ಬಳಿಕ ಆ ಮಹಾದೇವಸದಸ್ಸಿನಲ್ಲಿ ನೆರೆದಿದ್ದ ಸಮಸ್ತರೂ ಹರ್ಷಾತಿರೇಕದಿಂದ ಕೋಲಾಹಲಧ್ವನಿಯನ್ನೆಸಗುತ್ತಿರಲು ಆ ಮಹಾವಿಷ್ಣುವಿಗೆ ಸಾಕ್ಷಾತ್ ಪರಮೇಶ್ವರನೇ ಪೂಜೆಯನ್ನು ಸಲ್ಲಿಸಿದನು.

೫೯. "ಅಯ್ಯಾ ಮಹಾವಿಷ್ಣುವೆ, ಇಂದಿನಿಂದ ನೀನೇ ಈ ಪ್ರಪಂಚದ ಕರ್ತೃವು. ಸಮಸ್ತ ಭೂತಗಳನ್ನು ಸಂರಕ್ಷಿಸುವವನೂ ನೀನೇ. ಈ ಪ್ರಪಂಚವನ್ನು ಲಯಗೊಳಿಸುವವನೂ ನೀನೇ. ನೀನೇ ಜಗತ್ಪೂಜ್ಯನು, ಜಗದೀಶ್ವರನು.

ದಾತಾ ಧರ್ಮಾರ್ಥಕಾಮಾನಾಂ ಶಾಸ್ತಾ ದುರ್ನಯಕಾರಿಣಾಂ ।
ಅಜೇಯಸ್ತ್ವಂ ಚ ಸಂಗ್ರಾಮೇ ಮಮಾಽಪಿ ಹಿ ಭವಿಷ್ಯಸಿ ॥ ೬೦ ॥
ಇಚ್ಛಾಶಕ್ತಿಃ ಕ್ರಿಯಾಶಕ್ತಿರ್ಜ್ಞಾನಶಕ್ತಿಸ್ತಥೋತ್ತಮಾ ।
ಶಕ್ತಿತ್ರಯಮಿದಂ ವಿಷ್ಣೋ ಗೃಹಾಣ ಸ್ಥಾಪಿತಂ ಮಯಾ ॥ ೬೧ ॥
ತ್ವದ್ದ್ವೇಷ್ಟಾರೋ ಹರೇ ನೂನಂ ಮಯಾ ಶಾಸ್ಯಾಃ ಪ್ರಯತ್ನತಃ ।
ತ್ವದ್ಭಕ್ತಾನಾಂ ಮಯಾ ವಿಷ್ಣೋ ದೇಯಂ ನಿರ್ವಾಣಮುತ್ತಮಂ ॥ ೬೨ ॥
ಮಾಯಾಂ ಚಾಽಪಿ ಗೃಹಾಣೇಮಾಂ ದುಷ್ಪ್ರಣೋದ್ಯಾಂ ಸುರಾಽಸುರೈಃ ।
ಯಯಾ ಸಂಮೋಹಿತಂ ವಿಶ್ವಮಕಿಂಚಿಜ್ಜ್ಞಂ ಭವಿಷ್ಯತಿ ॥ ೬೩ ॥
ವಾಮಬಾಹುರ್ಮದೀಯಸ್ತ್ವಂ ದಕ್ಷಿಣೋಽಸೌ ಪಿತಾಮಹಃ ।
ಅಸ್ಯಾಽಪಿ ಹಿ ವಿಧೇಃ ಪಾತಾ ಜನಿತಾಽಪಿ ಭವಿಷ್ಯಸಿ ॥ ೬೪ ॥
ವೈಕುಂಠೈಶ್ವರ್ಯಮಾಸಾದ್ಯ ಹರೇರಿತ್ಥಂ ಹರಃ ಸ್ವಯಂ ।
ಕೈಲಾಸೇ ಪ್ರಮಥೈಃ ಸಾರ್ಧಂ ಸ್ವೈರಂ ಕ್ರೀಡತ್ಯುಮಾಪತಿಃ ॥ ೬೫ ॥

---

೬೦. ಜಗತ್ತಿನಲ್ಲಿ ಸಮಸ್ತರಿಗೂ ಧರ್ಮಾರ್ಥಕಾಮಗಳನ್ನು ನೀಡುವವನು ನೀನು. ಮಾರ್ಗವನ್ನು ಮೀರಿ ನಡೆಯುವ ದುರಾತ್ಮಕರನ್ನು ನಿಗ್ರಹಿಸುವವನೂ ನೀನೇ. ಸಂಗ್ರಾಮಗಳೊದಗಿದಂದು ಶತ್ರುಗಳಿಗಂತಿರಲಿ, ನನಗೂ ನೀನು ಅಜೇಯನಾಗಿರುವೆ.

೬೧. ಅಯ್ಯಾ ವಿಷ್ಣುವೆ, ಇದೊ, ಇಚ್ಛಾಶಕ್ತಿ ಕ್ರಿಯಾಶಕ್ತಿ ಉತ್ತಮೋತ್ತಮವಾದ ಜ್ಞಾನಶಕ್ತಿ—ಈ ಮೂರು ಶಕ್ತಿಗಳನ್ನೂ ನಿನಗೆ ಒಳಪಡಿಸಿದ್ದೇನೆ. ಪರಿಗ್ರಹಿಸುವವನಾಗು.

೬೨. ಅಯ್ಯಾ ಹರಿಯೆ, ನಿನ್ನನ್ನು ದ್ವೇಷಿಸುವ ಎಲ್ಲರೂ ನನಗೆ ಪ್ರಯತ್ನಪೂರ್ವಕವಾಗಿ ದಂಡ್ಯರೆನಿಸುತ್ತಾರೆ. ನಿನ್ನ ಭಕ್ತರಿಗೆ ನಾನು ಉತ್ತಮ ಕೈವಲ್ಯವನ್ನು ನೀಡತಕ್ಕವನು.

೬೩. ಇದೊ, ಸುರಾಸುರರಿಂದಲೂ ಜಯಿಸಲಸದಳವಾದ ಈ ಮಾಯೆಯನ್ನು ಸ್ವೀಕರಿಸುವವನಾಗು. ಇದರಿಂದ ಮೋಹಗೊಳ್ಳುವ ವಿಶ್ವವೇ ಅಜ್ಞಾನಭೂಯಿಷ್ಠವಾಗುವುದು.

೬೪. ನೀನು ನನ್ನ ಎಡತೋಳು. ಈ ಬ್ರಹ್ಮನೇ ನನಗೆ ಬಲಭುಜ. ಇಂಥ ಬ್ರಹ್ಮನಿಗೂ ನೀನೇ ಉತ್ಪತ್ತಿಕಾರಣನೂ ರಕ್ಷಕನೂ ಆಗುವೆ.

೬೫. ಅಯ್ಯಾ ಬ್ರಾಹ್ಮಣೋತ್ತಮನೆ, ಈ ಪ್ರಕಾರವಾಗಿ ಪರಮಶಿವನು ಮಹಾವಿಷ್ಣುವಿಗೆ ವೈಕುಂಠೈಶ್ವರ್ಯವನ್ನು ಅನುಗ್ರಹಿಸಿ ಕೈಲಾಸದಲ್ಲಿ ಪ್ರಮಥಗಣಗಳೊಡನೆ ತಾನೇ ತಾನಾಗಿ ಉಮೆಯೊಡನೆ ಕ್ರೀಡಿಸುತ್ತಿರುವನು.

ತದಾ ಪ್ರಭೃತಿ ದೇವೋಽಸೌ ಶಾರ್ಙ್ಗಧನ್ವಾ ಗದಾಧರಃ ।
ತ್ರೈಲೋಕ್ಯಮಖಿಲಂ ಶಾಸ್ತಿ ದಾನವಾಂತಕರೋ ಹರಿಃ ॥ ೬೬ ॥
ಇತಿ ತೇ ಕಥಿತಾ ವಿಪ್ರ ಲೋಕಾನಾಂ ಚ ಪರಿಸ್ಥಿತಿಃ ।
ಇದಾನೀಂ ಕಥಯಿಷ್ಯಾಮಸ್ತವ ನಿರ್ವಾಣಕಾರಣಂ ॥ ೬೭ ॥
ಇದಂ ತು ಪರಮಾಖ್ಯಾನಂ ಶೃಣುಯಾದ್ಯಃ ಸಮಾಹಿತಃ ।
ಸ್ವರ್ಲೋಕಮಭಿಗಮ್ಯಾಽಥ ಕಾಶ್ಯಾಂ ನಿರ್ವಾಣಮಾಪ್ನುಯಾತ್ ॥ ೬೮ ॥
ಯಜ್ಞೋತ್ಸವೇ ವಿವಾಹೇ ಚ ಮಂಗಲೇಷ್ವಖಿಲೇಷ್ವಪಿ ।
ರಾಜ್ಯಾಭಿಷೇಕಸಮಯೇ ದೇವಸ್ಥಾಪನಕರ್ಮಣಿ ॥ ೬೯ ॥
ಸರ್ವಾಧಿಕಾರದಾನೇಷು ನವವೇಶ್ಮಪ್ರವೇಶನೇ ।
ಪಠಿತವ್ಯಂ ಪ್ರಯತ್ನೇನ ತತ್ಕಾರ್ಯಪರಿಸಿದ್ಧಯೇ ॥ ೭೦ ॥
ಅಪುತ್ರೋ ಲಭತೇ ಪುತ್ರಮಧನೋ ಧನವಾನ್ಭವೇತ್ ।
ವ್ಯಾಧಿತೋ ಮುಚ್ಯತೇ ರೋಗಾದ್ಬದ್ಧೋ ಮುಚ್ಯೇತ ಬಂಧನಾತ್॥ ೭೧ ॥

---

೬೬. ಅಂದಿನಿಂದ ಶಾರ್ಙ್ಗಧನುರ್ಧಾರಿಯೂ, ಗದಾಧರನೂ ಆದ ಆ ಶ್ರೀಹರಿಯು ದೈತ್ಯದಾನವರನ್ನು ನಿಗ್ರಹಿಸುತ್ತ ಈ ಮೂರುಲೋಕಗಳನ್ನೂ ಆಳುತ್ತಿರುವನು.

೬೭. ಹೀಗೆ ನಿನಗೆ ಸಮಸ್ತ ಲೋಕಗಳ ಪರಿಸ್ಥಿತಿಯನ್ನೂ ತಿಳಿಯ ಹೇಳಿದ್ದಾಯಿತು. ಇನ್ನು ನಿನಗೆ ಮುಕ್ತಿಹೇತುವಾವುದೆಂಬುದನ್ನು ಹೇಳುತ್ತೇನೆ.

೬೮. ಇದು ಅತ್ಯುತ್ತಮವಾದ ಆಖ್ಯಾನವಾಗಿರುವುದರಿಂದ ಶ್ರದ್ಧೆಯಿಂದ ಸಮಾಹಿತಮನಸ್ಕನಾಗಿ ಯಾವನು ಇದನ್ನು ಕೇಳುವನೊ ಅವನು ಸ್ವರ್ಗಲೋಕವನ್ನು ಸೇರಿ ಅಲ್ಲಿ ಕ್ಷೀಣಪುಣ್ಯನಾಗಿ ಭೂಲೋಕಕ್ಕೆ ಬಂದ ತರುವಾಯ ಕಾಶೀಕ್ಷೇತ್ರದಲ್ಲಿಯೆ ಜನ್ಮವನ್ನೆತ್ತಿ ಮೋಕ್ಷವನ್ನು ಪಡೆಯುತ್ತಾನೆ.

೬೯–೭೦. ಯಜ್ಞಗಳಲ್ಲಿಯೂ ಉತ್ಸವಗಳಲ್ಲಿಯೂ ವಿವಾಹಾದಿ ಸಮಸ್ತ ಮಂಗಳಕಾರ್ಯಗಳಲ್ಲಿಯೂ ರಾಜ್ಯಾಭಿಷೇಕ ದೇವತಾಪ್ರತಿಷ್ಠಾದಿ ಸಮಸ್ತ ಶುಭಸಮಯಗಳಲ್ಲಿಯೂ ಸರ್ವಾಧಿಕಾರದಾನ, ನೂತನಗೃಹಪ್ರವೇಶ ಸಮಯಗಳಲ್ಲಿಯೂ ಆಯಾ ಕಾರ್ಯಗಳು ನಿರ್ವಿಘ್ನವಾಗಿ ನಡೆದು ಸಫಲಗೊಳ್ಳಲೋಸುಗ ಈ ಆಖ್ಯಾನವನ್ನು ಪಠಿಸತಕ್ಕದ್ದು.

೭೧. ಈ ಆಖ್ಯಾನವನ್ನು ಪಠಿಸುವುದರಿಂದ ಅಪುತ್ರನು ಪುತ್ರಲಾಭವನ್ನೂ ದರಿದ್ರನು ಧನಲಾಭವನ್ನೂ ರೋಗಿಯು ಆರೋಗ್ಯಲಾಭವನ್ನೂ ಪಡೆಯುತ್ತಾನೆ.

**ಜಪ್ಯಮೇತತ್ಪ್ರಯತ್ನೇನ ಸತತಂ ಮಂಗಲಾರ್ಥಿನಾ ।**
**ಅಮಂಗಲಾನಾಂ ಶಮನಂ ಹರನಾರಾಯಣಪ್ರಿಯಂ ॥ ೭೨ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಚತುರ್ಭುಜಾಽಭಿಷೇಕವರ್ಣನಂ" ನಾಮ ತ್ರಯೋವಿಂಶೋಽಧ್ಯಾಯಃ**

---

೭೨. ಅಯ್ಯಾ ಶಿವಶರ್ಮನೆ, ಸಮಸ್ತ ಅಮಂಗಳಗಳನ್ನೂ ನಾಶಗೊಳಿಸುವಂಥದೂ, ಶಿವಕೇಶವರಿಗೆ ಅತ್ಯಂತ ಪ್ರಿಯವಾದುದೂ ಆದ ಈ ಆಖ್ಯಾನವನ್ನು ಶುಭಾಪೇಕ್ಷಿಯಾದವನು ಪ್ರಯತ್ನಪೂರ್ವಕವಾಗಿ ಸತತವೂ ಪಾರಾಯಣಮಾಡತಕ್ಕದ್ದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ಚತುರ್ಭುಜಾಭಿಷೇಕವರ್ಣನ"ವೆಂಬ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು

*

॥ ಶ್ರೀಃ ॥

# ಅಥ ಚತುರ್ವಿಂಶೋಽಧ್ಯಾಯಃ

## ಶಿವಶರ್ಮನಿರ್ವಾಣವರ್ಣನಂ

**ಗಣಾವೂಚತುಃ :—**

**ಶಿವಶರ್ಮನ್ನುದರ್ಕಂ ತೇ ಕಥಯಾವೋ ನಿಶಾಮಯ ।**
**ತ್ವಮತ್ರ ವೈಷ್ಣವೇ ಲೋಕೇ ಭುಕ್ತ್ವಾ ಭೋಗಾನ್ ಸುಪುಷ್ಕಲಾನ್ ॥ ೧ ॥**
**ಬ್ರಹ್ಮಣೋ ವತ್ಸರಂ ಪೂರ್ಣಂ ರಮಮಾಣೋಽಪ್ಸರೋಗಣೈಃ ।**
**ಸುತೀರ್ಥಮರಣೋಪಾತ್ತಪುಣ್ಯಶೇಷೇಣ ವೈ ಪುನಃ ॥ ೨ ॥**
**ಭವಿಷ್ಯಸಿ ಮಹೀಪಾಲೋ ನಗರೇ ನಂದಿವರ್ಧನೇ ।**
**ರಾಜ್ಯಂ ಪ್ರಾಪ್ಯಾಽಸಪತ್ನಂ ಚ ಸಮೃದ್ಧಬಲವಾಹನಂ ॥ ೩ ॥**
**ಕೃಷ್ಟಿಭಿರ್ಹೃಷ್ಟಪುಷ್ಟೈಶ್ಚ ರಮ್ಯಹಾಟಕಭೂಷಣೈಃ ।**
**ಸಂಜುಷ್ಟಮಿಷ್ಟಾಪೂರ್ತಾನಾಂ ಧರ್ಮಾಣಾಂ ನಿತ್ಯಕರ್ತೃಭಿಃ ॥ ೪ ॥**
**ಸದಾಸಂಪನ್ನಸಸ್ಯಂ ಚ ಸೂರ್ವರಕ್ಷೇತ್ರಸಂಕುಲಂ ।**
**ಸುದೇಶಂ ಸುಪ್ರಜಂ ಸುಸ್ಥಂ ಸುತೃಣಂ ಬಹುಗೋಧಸಂ ॥ ೫ ॥**

---

### ಕನ್ನಡದ ಅನುವಾದ

#### ಶಿವಶರ್ಮನಿರ್ವಾಣವರ್ಣನ

೧—೩. ಗಣಗಳು ಹೇಳುತ್ತಾರೆ :—ಆಯ್ಯಾ ಶಿವಶರ್ಮನೆ, ನಿನಗೆ ಭವಿಷ್ಯತ್ತಿನಲ್ಲಿ ದೊರಕುವ ಸುಕೃತಫಲವನ್ನು ಈಗ ಹೇಳುತ್ತೇವೆ; ಕೇಳು. ನೀನು ಈ ವಿಷ್ಣುಲೋಕದಲ್ಲಿ ಬ್ರಹ್ಮಾಯುಸ್ಸಿನ ಒಂದು ಸಂವತ್ಸರದ ಕಾಲ ಪೂರ್ತಿಯಾಗಿ, ಪುಣ್ಯತೀರ್ಥದಲ್ಲಿ ಮರಣವಾಂತುದರ ಫಲವಾಗಿ ದೊರೆತ ಪುಣ್ಯದಿಂದ ಅಪ್ಸರೋಗಣಗಳೊಡನೆ ಬಹು ಭೋಗ ಭಾಗ್ಯಗಳನ್ನನುಭವಿಸಿ ಅದೇ ಪುಣ್ಯ ವಿಶೇಷದಿಂದಲೆ ಭೂಲೋಕದಲ್ಲಿ ನಂದಿವರ್ಧನವೆಂಬ ನಗರದ ಮಹಾರಾಜನಾಗಿ ಜನಿಸುತ್ತೀಯೆ. ಅಲ್ಲಿ ಬಲವಾಹನಾದಿಗಳಿಂದ ಸಮೃದ್ಧನಾಗಿ ಅಸಪತ್ನವಾದ ಅಖಂಡರಾಜ್ಯಾಧಿಪತ್ಯವನ್ನು ಪಡೆಯುತ್ತೀಯೆ.

೪. ಇಷ್ಟಾಪೂರ್ತವೇ ಮೊದಲಾದ ಧರ್ಮಕಾರ್ಯಗಳನ್ನು ಸತತವೂ ನಡಸುತ್ತಿರುವ ಧರ್ಮಾತ್ಮರಿಂದ, ಸುವರ್ಣಭೂಷಣಗಳಿಂದ ಸಂತೋಷಗೊಳಿಸಲ್ಪಟ್ಟು ಹೃಷ್ಟರೂ ಪುಷ್ಟರೂ ಆಗಿರುವ ಪಂಡಿತಪ್ರಕಾಂಡರಿಂದಲೂ ಆ ರಾಜ್ಯವು ಸಂಸೇವಿತವಾಗಿರುವುದು.

೫. ಸರ್ವಋತುಗಳಲ್ಲಿಯೂ ಸಸ್ಯಸಂಪನ್ನವಾಗಿ ಬಹುಸೊಗಸಾದ ಗದ್ದೆಯ ಭೂಮಿಗಳಿಂದೊಡಗೂಡಿ ಒಳ್ಳೆಯ ದೇಶವೆಂದೆನಿಸಿ, ಸನ್ಮಾರ್ಗಗಾಮಿಗಳಾದ

ದೇವತಾಯತನಾನಾಂ ಚ ರಾಜಿಭಿಃ ಪರಿರಾಜಿತಂ ।
ಸುಯೂಪಾ ಯತ್ರ ವೈ ಗ್ರಾಮಾಃ ಸುವಿತ್ತರ್ಧಿವಿರಾಜಿತಾಃ ॥ ೬ ॥
ಸುಪುಷ್ಪಕೃತ್ರಿಮೋದ್ಯಾನಾಃ ಸಸದಾಫಲಪಾದಪಾಃ ।
ಸಪದ್ಮಿನೀಕಕಾಸಾರಾ ಯತ್ರ ರಾಜಂತಿ ಭೂಮಯಃ ॥ ೭ ॥
ಸದಂಭಾ ನಿಮ್ನಗಾರಾಜಿರ್ನಯತ್ರ ಜನತಾ ಕ್ವಚಿತ್ ।
ಕುಲಾನ್ಯೇವ ಕುಲೀನಾನಿ ನ ಚಾಽನ್ಯಾಯಧನಾನಿ ಚ ॥ ೮ ॥
ವಿಭ್ರಮೋ ಯತ್ರ ನಾರೀಷು ನವಿದ್ವತ್ಸು ಚ ಕರ್ಹಿಚಿತ್ ।
ನದ್ಯಃ ಕುಟಿಲಗಾಮಿನ್ಯೋ ನಯತ್ರ ವಿಷಯೇ ಪ್ರಜಾಃ ॥ ೯ ॥
ತಮೋಯುಕ್ತಾಃ ಕ್ಷಪಾ ಯತ್ರ ಬಹುಲೇಷು ನ ಮಾನವಾಃ ।
ರಜೋಯುಜಃ ಸ್ತ್ರಿಯೋ ಯತ್ರ ನ ಧರ್ಮಬಹುಲಾ ನರಾಃ ॥ ೧೦ ॥

---

ಪ್ರಜೆಗಳಿಂದ ನಿಬಿಡವಾಗಿ, ಸುಭಿಕ್ಷಭೂಯಿಷ್ಠವಾಗಿ, ಎತ್ತೆತ್ತಲೂ ತಾನೇತಾನಾಗಿ ಬೆಳೆದಿರುವ ತೃಣಸಮೃದ್ಧಿಯನ್ನೊಡಗೊಂಡು ಅಪರಿಮಿತವಾದ ಗೋಧನದಿಂದ ಶೋಭಿಸುತ್ತಿರುವುದು.

೬. ದೇವಾಲಯಗಳ ಸಾಲುಗಳಿಂದ ಕಂಗೊಳಿಸಿ ಅಲ್ಲಿಯ ಗ್ರಾಮಗಳೆಲ್ಲವೂ ಯಜ್ಞಾನುಷ್ಠಾನದ ಕುರುಹಾದ ಯೂಪಸ್ತಂಭಗಳಿಂದೊಪ್ಪಿ ಧನಧಾನ್ಯಸಮೃದ್ಧವಾಗಿರುವುವು.

೭. ಬಗೆಬಗೆಯ ಸುಪುಷ್ಪಗಳ ಕೃತ್ರಿಮೋದ್ಯಾನಗಳೂ (ಕೈದೋಟಗಳೂ), ಯಾವಾಗಲೂ ಫಲಭರಿತಗಳೇ ಆಗಿರುವ ವೃಕ್ಷವಿಶೇಷಗಳೂ, ಕಮಲ ಸರೋವರಗಳೂ ಆ ರಾಜ್ಯದ ಭೂಪ್ರದೇಶದಲ್ಲಿ ವಿರಾಜಿಸುತ್ತಿರುವುವು.

೮. ನಿರ್ಮಲೋದಕವಿಲ್ಲದ ನದೀವೃಂದವಾಗಲಿ, ಧರ್ಮವನ್ನು ಮೀರಿ ನಡೆಯುವ ಜನತೆಯಾಗಲಿ, ಪರಿಶುದ್ಧವಾದ ಕುಲಗೋತ್ರಗಳಿಲ್ಲದ ಮನೆತನಗಳಾಗಲಿ, ಇತರರು ಭೂಮಿಯಲ್ಲಿ ಹುದುಗಿಸಿಟ್ಟ ಧನಗಳಾಗಲಿ ಆರಾಜ್ಯದಲ್ಲಿರುವುದಿಲ್ಲ.

೯. ಅಲ್ಲಿ ಹೆಂಗಸರಲ್ಲಿ ಮಾತ್ರ ವಿಭ್ರಮ (ಅಜ್ಞಾನ, ವಿಲಾಸ)ವೆಂಬುದಿರುವುದೇ ಹೊರತು ವಿದ್ವಾಂಸರಲ್ಲಿ ಅದು ಸ್ವಲ್ಪಮಾತ್ರವೂ ಇರುವುದಿಲ್ಲ. ಅಲ್ಲಿ ನದಿಗಳು ವಕ್ರಮಾರ್ಗಗಳಲ್ಲಿ ಹರಿಯುತ್ತಿರುವುವಾಗಲಿ ಜನರೆಂದಿಗೂ ವಕ್ರಮಾರ್ಗಾವಲಂಬಿಗಳಾಗಿರುವುದಿಲ್ಲ.

೧೦. ಬಹುಳ ಪಕ್ಷದ ರಾತ್ರಿಗಳು ಮಾತ್ರ ಕತ್ತಲು ಕವಿದು ಕಾಣುತ್ತಿರುವುವಾಗಲಿ ಮಾನವರಿಗೆಂದಿಗೂ ಅಜ್ಞಾನವೆಂಬ ಕತ್ತಲೆಯಿರುವುದಿಲ್ಲ. ನಾರಿಯರು ರಜೋದೋಷಯುಕ್ತರಾಗಿರುವರಲ್ಲದೆ ಪುರುಷರು ಆ ದೋಷಕ್ಕೆ ಒಳಗಾಗಿ ಧರ್ಮಬಾಹಿರರಾಗಿರುವುದಿಲ್ಲ.

ಧನೈರನಂಧೋ ಯತ್ರಾಽಸ್ತಿ ಮನೋ ನೈವಚ ಭೋಜನಂ ।
ಅನಯಃ ಸ್ಯಂದನಂ ಯತ್ರ ನ ಚ ವೈ ರಾಜಪೂರುಷಃ ॥ ೧೧ ॥
ದಂಡಃ ಪರಶುಕುದ್ದಾಲವಾಲವ್ಯಜನರಾಜಿಷು ।
ಆತಪತ್ರೇಷು ನಾಽನ್ಯತ್ರ ಕ್ವಚಿತ್ಕ್ರೋಧಾಽಪರಾಧಜಃ ॥ ೧೨ ॥
ಅನ್ಯತ್ರಾಕ್ಷಿಕವೃಂದೇಭ್ಯಃ ಕ್ವಚಿನ್ನ ಪರಿದೇವನಂ ।
ಆಕ್ಷಿಕಾ ಏವ ದೃಶ್ಯಂತೇ ಯತ್ರ ಪಾಶಕಪಾಣಯಃ ॥ ೧೩ ॥
ಜಾಡ್ಯವಾರ್ತಾ ಜಲೇಷ್ವೇವ ಸ್ತ್ರೀಮಧ್ಯಾ ಏವ ದುರ್ಬಲಾಃ ।
ಕಠೋರಹೃದಯಾ ಯತ್ರ ಸೀಮಂತಿನ್ಯೋ ನ ಮಾನವಾಃ ॥ ೧೪ ॥
ಔಷಧೇಷ್ವೇವ ಯತ್ರಾಽಸ್ತಿ ಕುಷ್ಠಯೋಗೋ ನ ಮಾನವೇ ।
ವೇಧೋಽಪ್ಯಂತಃ ಸುರತ್ನೇಷು ಶೂಲಂ ಮೂರ್ತಿಕರೇಷು ವೈ ॥ ೧೫ ॥

---

೧೧. ಸಕಲೈಶ್ವರ್ಯಸಮನ್ವಿತನಾದರೂ ಗರ್ವದಿಂದ ಕುರುಡಾಗುವವನೂ, ಭುಕ್ತಿಗೆ ಮಾರ್ಗವಿಲ್ಲದಿರುವವನೂ, ಹಿತಮಿತವಾದ ಭೋಜನವಿಲ್ಲದಿರುವವನೂ, ನೀತಿಬಾಹಿರನೂ, ಸ್ಯಂದನಾದಿ ಭೋಗಶೂನ್ಯನೂ, ರಾಜಪುರುಷನಲ್ಲದವನೂ ಆ ರಾಜ್ಯದಲ್ಲಿರುವುದಿಲ್ಲ.

೧೨. ದಂಡವೆಂಬುದು ಆ ರಾಜ್ಯದಲ್ಲಿ ಕೊಡಲಿ, ಛತ್ರ, ಚಾಮರಗಳು, ಬೀಸಣಿಗೆ, ನೇಗಿಲು, ಮುಂತಾದುವುಗಳಲ್ಲಿ ಮಾತ್ರ ಕಾಣುತ್ತಿರುವುದಾಗಲಿ ಕ್ರೋಧದ ಮೂಲಕ ಅಪರಾಧಕ್ಕನುಗುಣವಾಗಿ ಎಲ್ಲಿಯೂ ವಿಧಿಸುವುದಾಗಿ ಕಂಡುಬರುವುದಿಲ್ಲ.

೧೩. ಜೂಜುಗಾರರ ಗುಂಪಿನಲ್ಲಿ ಪರಿದೇವನವೆ(ಜೂಜೆ)ಂಬುದು ಇರುವುದಾಗಲಿ ಬೇರೊಂದೆಡೆಯಲ್ಲಿ ಇರುವುದಿಲ್ಲ. ಅಲ್ಲಿಯ ನಗರರಕ್ಷಾಪುರುಷರು ಕೇವಲ ಕಣ್ಣುಳ್ಳವರಾಗಿರುವರೆ ಹೊರತು, ಪಾಶಪಾಣಿಗಳಾಗಿ ಅಪರಾಧಿಗಳನ್ನು ಹಿಡಿಯುವವರಾಗಿರಲಿಲ್ಲ.

೧೪–೧೫. ಜಾಡ್ಯದ ಸುದ್ಧಿಯು ಆ ರಾಜ್ಯದ ಜಲಗಳಲ್ಲಿ ಮಾತ್ರವೆ ಇರುತ್ತದೆಯಾಗಲಿ ಮತ್ತೆಲ್ಲಿಯೂ ಇರುವುದಿಲ್ಲ. ದುರ್ಬಲತೆಯೆಂಬುದು ಸ್ತ್ರೀಯರ ಮಧ್ಯಪ್ರದೇಶದಲ್ಲಿ ಮಾತ್ರ ಇರುವುದಾಗಲಿ ಬೇರೊಂದು ಪ್ರದೇಶದಲ್ಲಿರುವುದಿಲ್ಲ. ಕಾಠಿನ್ಯವೆಂಬುದು ಸ್ತ್ರೀಯರ ಸ್ತನಗಳಲ್ಲಿರುವುದಾಗಲಿ ಮಾನವರು ಕಠಿನ ಹೃದಯರಾಗಿರುವುದಿಲ್ಲ. ಆ ರಾಜ್ಯದಲ್ಲಿ ಕುಷ್ಠವೆಂಬುದು ಔಷಧಯೋಗವನ್ನು ನಿರೂಪಿಸುವ ಶಾಸ್ತ್ರದಲ್ಲಿರುವುದಾಗಲಿ ಮಾನವರಲ್ಲಿರುವುದಿಲ್ಲ. ಛಿದ್ರವೆಂಬುದು ಒಳ್ಳೊಳ್ಳೆಯ ರತ್ನಗಳಲ್ಲಿರುವುದಾಗಲಿ ಮತ್ತೆಲ್ಲಿಯೂ ಕಾಣುವುದಿಲ್ಲ. ಶೂಲವೆಂಬುದು ವಿಶ್ವೇಶ್ವರನ ಮೂರ್ತಿಗಳಲ್ಲಿ ಕಂಗೊಳಿಸುತ್ತಿರುವುದಲ್ಲದೆ ಮತ್ತಾರಲ್ಲಿಯೂ ತೋರಿಬರುವುದಿಲ್ಲ.

ಕಂಪಃ ಸಾತ್ವಿಕಭಾವೋತ್ಥೋ ನ ಭಯಾತ್ಕ್ವಾಽಪಿ ಕಸ್ಯಚಿತ್ ।
ಸಂಜ್ವರಃ ಕಾಮಜೋ ಯತ್ರ ದಾರಿದ್ರ್ಯಂ ಕಲುಷಸ್ಯ ಚ ॥ ೧೬ ॥
ದುರ್ಲಭತ್ವಂ ಸದಾ ತಸ್ಯ ಸುಕೃತೇನ ಚ ವಸ್ತುನಃ ।
ಇಭಾ ಏವ ಪ್ರಮತ್ತಾ ವೈ ಯುದ್ಧಂ ವೀಚ್ಯೋರ್ಜಲಾಶಯೇ ॥ ೧೭ ॥
ದಾನಹಾನಿರ್ಗಜೇಷ್ವೇವ ದ್ರುಮೇಷ್ವೇವಹಿ ಕಂಟಕಾಃ ।
ಜನೇಷ್ವೇವ ವಿಹಾರಾ ಹಿ ನ ಕಸ್ಯಚಿದುರಃಸ್ಥಲೀ ॥ ೧೮ ॥
ಬಾಣೇಷು ಗುಣವಿಶ್ಲೇಷೋ ಬಂಧೋಕ್ತಿಃ ಪುಸ್ತಕೇ ದೃಢಾ ।
ಸ್ನೇಹತ್ಯಾಗಃ ಸದೈವಾಽಸ್ತಿ ಯತ್ರ ಪಾಶುಪತೇ ಜನೇ ॥ ೧೯ ॥
ದಂಡವಾರ್ತಾ ಸದಾ ಯತ್ರ ಕೃತಸನ್ಯಾಸಕರ್ಮಣಾಂ ।
ಮಾರ್ಗಣಾಶ್ಚಾಪಕೇಷ್ವೇವ ಭಿಕ್ಷುಕಾ ಬ್ರಹ್ಮಚಾರಿಣಃ ॥ ೨೦ ॥

---

೧೬–೧೭. ಕಂಪವೆಂಬುದು ಭಾರ್ಯಾಭರ್ತೃಗಳಲ್ಲಿ ಪರಸ್ಪರ ಪ್ರೇಮಾಧಿಕ್ಯದಿಂದ ಸ್ಪರ್ಶಾದಿಗಳ ಮೂಲಕವೆ ಮೂಡಿಬರುವುದಾಗಲಿ ಭಯದಿಂದ ಎಲ್ಲಿಯೂ ಹುಟ್ಟುವುದಿಲ್ಲ. ಸ್ತ್ರೀಪುರುಷರ ಪರಸ್ಪರ ಪ್ರೇಮಯೋಗದ ಸಲುವಾಗಿ ಜ್ವರಕ್ಷೋಭೆಯು ಕಂಡುಬರುವುದಾಗಲಿ ಧನಕನಕ ಧಾನ್ಯಾದಿಗಳ ನಿಮಿತ್ತವಾಗಿ ಎಲ್ಲಿಯೂ ಇರುವುದಿಲ್ಲ. ಪಾಪಕ್ಕೆ ದಾರಿದ್ರ್ಯವಿರುವುದಲ್ಲದೆ ಯಾರಿಗೂ ಯಾವ ಬಗೆಯ ದಾರಿದ್ರ್ಯವೂ ಇರುವುದಿಲ್ಲ. ಅಲ್ಲಿ ಎಲ್ಲರೂ ಪುಣ್ಯಸಂಪಾದನೆಗಾಗಿಯೆ ಧನವ್ಯಯವನ್ನು ಮಾಡುತ್ತಿರುವರು. ಅಲ್ಲಿ ಆನೆಗಳು ಮಾತ್ರ ಮದಿಸುವುವೇ ಹೊರತು ಮಾನವರು ಮದಿಸುವುದಿಲ್ಲ. ಯುದ್ಧವೆಂಬ ಹೆಸರೇ ಅಲ್ಲಿ ಇಲ್ಲ. ಅದು ಸಮುದ್ರದ ಅಲೆಗಳಲ್ಲಿ ಮಾತ್ರ ಕಂಡುಬರುತ್ತಿರುವುದು.

೧೮. ದಾನಹಾನಿಯೆಂಬುದು ಆನೆಗಳಲ್ಲಿಯೂ, ಕಂಟಕವೆಂಬುದು ಗಿಡಮರಗಳಲ್ಲಿಯೂ, ವಿಹಾರವೆಂಬುದು ಜನಗಳಲ್ಲಿಯೂ ಕಂಡುಬರುವುದಲ್ಲದೆ ಮತ್ತೆಲ್ಲಿಯೂ ಕಂಡುಬರುವುದಿಲ್ಲ. ಅಲ್ಲಿ ಪ್ರತಿಯೊಬ್ಬನೂ ಹಾರಾದಿ ಆಭರಣಗಳಿಂದ ಶೂನ್ಯವಾದ ವಕ್ಷಸ್ಥಲವುಳ್ಳವನಾಗಿರುವುದು ಗೋಚರವಾಗದು.

೧೯. ಗುಣತ್ಯಾಗವೆಂಬುದು ಬಿಲ್ಲಿನಿಂದ ಹೊರಡುವ ಬಾಣಗಳಲ್ಲಿರುವುದಾಗಲಿ ಜನಗಳಲ್ಲಿರುವುದಿಲ್ಲ. ಅಂತೆಯೇ ಬಂಧೋಕ್ತಿ (ಹಿಡಿ, ಕಟ್ಟು, ಹೊಡಿ, ಕೊಲ್ಲು) ಯೆಂಬುದು ಪುಸ್ತಕದಲ್ಲಿ ಮಾತ್ರ ದೃಢವಾಗಿರುವುದಲ್ಲದೆ ಮತ್ತೆಲ್ಲಿಯೂ ಕೇಳಿ ಬರುವುದಿಲ್ಲ. ಸ್ನೇಹ (ಮಮತೆ) ತ್ಯಾಗವೆಂಬುದು ಪಾಶುಪತವ್ರತದೀಕ್ಷಿತರಾದ ಜನರಲ್ಲಿ ಕಾಣುವುದಲ್ಲದೆ ಇತರ ಜನರಲ್ಲಿ ಆ ಸ್ನೇಹ (ತೈಲಾಭ್ಯಂಜನಾದಿ) ತ್ಯಾಗವು ಕಾಣುವುದಿಲ್ಲ.

೨೦. ದಂಡವಾರ್ತೆಯೆಂಬುದು ಆ ರಾಜ್ಯದಲ್ಲಿರುವ ಏಕದಂಡಿ, ತ್ರಿದಂಡಿ, ಸಂನ್ಯಾಸಿಗಳ ವಂಶದಂಡಗಳ ವಿಷಯದಲ್ಲಿ ಕೇಳಿಬರುವುದಾಗಲಿ ಇನ್ನೆಲ್ಲಿಯೂ ಕೇಳಿಬರುವುದಿಲ್ಲ. ಧನುಸ್ಸುಗಳಲ್ಲಿ ಮಾತ್ರ ಮಾರ್ಗಣ (ಬಾಣ, ಯಾಚಕ)

ಯತ್ರ ಕ್ಷಪಣಕಾ ಏವ ದೃಶ್ಯಂತೇ ಮಲಧಾರಿಣಃ ।
ಪ್ರಾಯೋ ಮಧುವ್ರತಾ ಏವ ಯತ್ರ ಚಂಚಲವೃತ್ತಯಃ ॥ ೨೧ ॥
ಇತ್ಯಾದಿ ಗುಣವದ್ದೇಶೇ ತ್ವಯಿ ರಾಜ್ಯಂ ಪ್ರಶಾಸತಿ ।
ಧರ್ಮೇಣ ರಾಜಧರ್ಮಜ್ಞ ಶೌಂಡೀರ್ಯಗುಣಶಾಲಿನಿ ॥ ೨೨ ॥
ಸೌಭಾಗ್ಯಭಾಜರೂಪಾಢ್ಯೇ ಶೌರ್ಯೌದಾರ್ಯ ಗುಣಾನ್ವಿತೇ ।
ಸೀಮಂತಿನೀನಾಂ ರಮ್ಯಾಣಾಂ ಲಾವಣ್ಯಾರ್ಜಿತಸುಶ್ರಿಯಾಂ ॥ ೨೩ ॥
ರಾಜ್ಞೀನಾಮಯುತಂ ಭಾವಿ ಕುಮಾರಾಣಾಂ ಶತತ್ರಯಂ ।
ವೃದ್ಧಕಾಲ ಇತಿಖ್ಯಾತ ಉಗ್ರಃ ಪರಪುರಂಜಯಃ ॥ ೨೪ ॥
ನಿಜಿತಾಽನೇಕ ಸಮರಃ ಶ್ರೀಸಂತರ್ಪಿತಮಾರ್ಗಣಃ ।
ಅನೇಕಗುಣಸಂಪೂರ್ಣಃ ಪೂರ್ಣಚಂದ್ರನಿಭದ್ಯುತಿಃ ॥ ೨೫ ॥
ಸಂತತಾಽವಭೃಥಕ್ಲಿನ್ನಮೂರ್ಧಜಃ ಕ್ಷಿತಿಪರ್ಷಭಃ ।
ಪ್ರಜಾಪಾಲನಸಂಪನ್ನಃ ಕೋಶಪ್ರೀಣಿತಭೂಸುರಃ ॥ ೨೬ ॥

---

ಗಳಿಪುವುದಾಗಲಿ ಜನಗಳಲ್ಲಿರಲಿಲ್ಲ. ಅಲ್ಲಿರುವ ಬ್ರಹ್ಮಚಾರಿಗಳೆಲ್ಲರೂ ತಮ್ಮ ಆಶ್ರಯಕ್ಕುಚಿತವಾದ ಭಿಕ್ಷಾರ್ಜನೆಯಲ್ಲಿಯೆ ಆಸಕ್ತರಾಗಿ ತಮ್ಮ ವ್ಯಾಸಂಗವನ್ನು ಮುಂದುವರಿಸುತ್ತಿರುವರಲ್ಲದೆ ಅವರನ್ನುಳಿದು ಭಿಕ್ಷುಕರಾರೂ ಇರುವುದಿಲ್ಲ.

೨೧. ಆ ರಾಜ್ಯದಲ್ಲಿ ಅವಧೂತಾಶ್ರಮಿಗಳು ಮಾತ್ರ ದೇಹಮಲಧಾರಿಗಳಾಗಿರುವರೇ ಹೊರತು ಇತರರಾರೂ ಹಾಗಿರುವುದಿಲ್ಲ. ಅಲ್ಲಿ ಭ್ರಮರಗಳು ಮಾತ್ರ ಚಂಚಲವಾದ ಚಿತ್ತವೃತ್ತಿಯುಳ್ಳವುಗಳಾಗಲಿ ಇತರರಾರೂ ಅಲ್ಲ.

೨೨. ಅಯ್ಯಾ ಶಿವಶರ್ಮನೆ, ಇವೇ ಮೊದಲಾದ ಸದ್ಗುಣಸಂಪತ್ತಿಯುಳ್ಳ ಆ ದೇಶದಲ್ಲಿ ನೀನು ರಾಜನಾಗಿ ಜನಿಸಿ ಸಮಸ್ತ ರಾಜಧರ್ಮಗಳನ್ನೂ ಅರಿತವನಾಗಿ ವೀರ್ಯಸ್ಥೈರ್ಯಾದಿ ಗುಣಸಂಪನ್ನನಾಗಿ ರಾಜ್ಯವನ್ನಾಳುವೆ.

೨೩–೨೪. ನಿನಗೆ ಸಕಲ ಸೌಭಾಗ್ಯಗಳೂ ಸಮೃದ್ಧವಾಗಿರುತ್ತವೆ. ಸ್ಪೃಹಣೀಯವಾದ ರೂಪ, ಶೌರ್ಯ, ಔದಾರ್ಯ ಮೊದಲಾದ ಗುಣಗಳು ನಿನ್ನಲ್ಲಿ ತುಂಬಿದ್ದು ಲಾವಣ್ಯದಿಂದಲಿ ಅನುಪಮವಾದ ಸೌಂದರ್ಯಗಳನ್ನೊಳಗೊಂಡು, ಮನೋಹರಿಯರೂ, ಸೀಮಂತಿನಿಯರೂ ಆದ ಹತ್ತುಸಾವಿರ ಮಂದಿ ಸ್ತ್ರೀಯರು ನಿನಗೆ ರಾಣಿಯರಾಗುವರು. ಅವರಲ್ಲಿ ನಿನಗೆ ಮುನ್ನೂರು ಮಂದಿ ಕುಮಾರರು ಉದಿಸುತ್ತಾರೆ. ಪರಪುರಂಜಯನಾಗಿ ಶತ್ರುಗಳಿಗೆ ಮಾತ್ರ ಉಗ್ರನೆನಿಸುವ ನೀನು ಆ ಜನ್ಮದಲ್ಲಿ ವೃದ್ಧಕಾಲನೆಂದು ಹೆಸರುಗೊಳ್ಳುವೆ.

೨೫–೨೬. ಅಯ್ಯಾ ವಿಪ್ರೋತ್ತಮನೆ, ಆಗ ನೀನು ಅನೇಕ ಯುದ್ಧಗಳನ್ನು ಗೆದ್ದು, ನಿನ್ನ ಸಂಪತ್ತಿಗನುಗುಣವಾಗಿ ಯಾಚಕರಿಗೆ ತೃಪ್ತಿಯನ್ನುಂಟುಮಾಡಿ ಅನೇಕ ಶುಭ ಗುಣಗಳಿಗೆ ಗಣಿಯೆನಿಸಿ, ಪೂರ್ಣಚಂದ್ರನಂತೆ ಸಂಪೂರ್ಣ ಕಾಂತಿ

ಪದಾರವಿಂದಂ ಶ್ರೀವಿಷ್ಣೋಃ ಹೃದಿಧ್ಯಾಯನ್ನತಂದ್ರಿತಃ ।
ವಾಸುದೇವಕಥಾಲಾಪಪರಿಕ್ಷಿಪ್ತದಿನಕ್ಷಪಃ ॥ ೨೭ ॥
ಕದಾಚಿದುಪವಿಷ್ಟಃ ಸನ್ ಮಧ್ಯೇ ರಾಜಸಭಂ ದ್ವಿಜ ।
ದೂರಾತ್ಕಾರ್ಪಟಿಕೈರ್ದೃಷ್ಟೋ ವಾರಾಣಸ್ಯಾಃ ಸಮಾಗತೈಃ ॥ ೨೮ ॥
ತತ್ಕರ್ಮಭಾವಿಸದೃಶೈಸ್ತದಾ ತ್ವಮಭಿನಂದಿತಃ ।
ತೈಃ ಸರ್ವೈ ರಾಜಶಾರ್ದೂಲ ಸ್ವಾಶೀರ್ವಾದೈರನೇಕಶಃ ॥ ೨೯ ॥
ಶ್ರೀಮದ್ವಿಶ್ವೇಶ್ವರೋ ದೇವೋ ವಿಶ್ವೇಷಾಂ ಜಗತಾಂ ಗುರುಃ ।
ಕಾಶೀನಾಥೇಸ್ತು ತೇ ಕುರ್ಯಾತ್ಕುಮತೇರಪವರ್ಜನಂ ॥ ೩೦ ॥
ನೈಃಶ್ರೇಯಸೀಂ ಚ ಸಂಪತ್ತಿಂ ಯೋ ದೇಯಾತ್ಸ್ಮರಣಾದಪಿ ।
ಕಾಶೀನಾಥಃ ಸ ತೇ ದಿಶ್ಯಾಜ್ಜ್ಞಾನಂ ಮಲವಿವರ್ಜಿತಂ ॥ ೩೧ ॥
ಯೇನ ಪುಣ್ಯೇನ ತೇ ಪ್ರಾಪ್ತಂ ರಾಜ್ಯಂ ಪ್ರಾಜ್ಯಮಕಂಟಕಂ ।
ತತ್ಪುಣ್ಯಶೇಷತೋ ಭೂಯಾದ್ವಿಶ್ವನಾಥೇ ಮತಿಸ್ತವ ॥ ೩೨ ॥

---

ಯಿಂದ ಕಂಗೊಳಿಸುತ್ತ, ಅನವರತವೂ ಯಾಗಯಜನಾದಿಗಳನ್ನು ಮಾಡಿ ಅವಭೃಥಸ್ನಾನದಿಂದ ತೊಯ್ದು ತಲೆಗೂದಲುಳ್ಳವನಾಗಿ, ಕ್ಷಿತಿಪೋತ್ತಮನೆನಿಸಿ, ಪ್ರಜೆಗಳನ್ನು ಸಂರಕ್ಷಿಸುವುದರಲ್ಲಿ ದಕ್ಷನೆನಿಸಿ, ಇರುವ ಧನ ಕೋಶದಿಂದ ಭೂಸುರರನ್ನು ದಕ್ಷಿಣಾದಿಗಳನ್ನಿತ್ತು ತೃಪ್ತಿಗೊಳಿಸಿ, ಯಾವೊಂದು ಈತಿಬಾಧೆಗಳೂ ಇಲ್ಲದೆ ಚಿತ್ತಸ್ಥೈರ್ಯವುಳ್ಳವನಾಗಿ ಹೃತ್ಪದ್ಮದಲ್ಲಿ ಗೋವಿಂದನ ಪಾದಪದ್ಮಗಳನ್ನೇ ಧ್ಯಾನಿಸುತ್ತ ಆ ವಾಸುದೇವನ ಲೀಲಾವಿನೋದಗಳನ್ನೊಳಗೊಂಡ ಸತ್ಕಥಾಲಾಪಗಳಿಂದಲೆ ಹಗಲಿರುಳುಗಳನ್ನು ಕಳೆಯುತ್ತ, ಒಮ್ಮೆ ರಾಜಸಭಾಮಧ್ಯದಲ್ಲಿ ಸುಖೋಪವಿಷ್ಟನಾಗಿ ಕಾಶೀಪಟ್ಟಣದಿಂದೈತರುವ ಸಂನ್ಯಾಸಿಗಳನ್ನು ದೂರದಿಂದಲೆ ಕಂಡು, ಅಂದು ನೀನು ಪುಣ್ಯತೀರ್ಥಗಳಲ್ಲಿ ಮಿಂದ ಪುಣ್ಯದ ಫಲವಾಗಿ ಅವರಿಂದ ಆಶೀರ್ವಾದಗಳನ್ನು ಅನೇಕ ಪ್ರಕಾರವಾಗಿ ಪಡೆಯುವೆ.

೩೦–೩೧. "ಅಯ್ಯಾ ವೃದ್ಧಕಾಲರಾಜನೆ, ವಿಶ್ವವೆಲ್ಲಕ್ಕೂ ಗುರುವಾಗಿ ಸಕಲೈಶ್ವರ್ಯಸಂಪನ್ನನಾಗಿರುವ ವಿಶ್ವೇಶ್ವರನು ಕಾಶೀಪಟ್ಟಣಕ್ಕೆ ಒಡೆಯನಾಗಿರುವನು. ಅವನು ನಿನ್ನಲ್ಲಿರುವ ಅನ್ಯಥಾಬುದ್ಧಿಯನ್ನು ದೂರಮಾಡಲಿ. ಸ್ಮರಣಮಾತ್ರದಿಂದಲೆ ಯಾವ ಸ್ವಾಮಿಯು ಮೋಕ್ಷಪದವಿಯನ್ನು ಭಕ್ತರಿಗೆ ಅನುಗ್ರಹಿಸುವನೊ ಆ ಕಾಶೀನಾಥನು ನಿನಗೆ ಆಣವ ಮಲವರ್ಜಿತವಾದ ಜ್ಞಾನವನ್ನು ಉಪದೇಶಮಾಡಲಿ.

೩೨. ಯಾವ ಪುಣ್ಯದಿಂದ ನಿನಗೆ ಅಕಂಟಕವಾದ ಈ ರಾಜ್ಯವೆಲ್ಲವೂ ದೊರೆತಿರುವುದೊ ಅದೇ ಪುಣ್ಯವಿಶೇಷದಿಂದಲೆ ನಿನಗೆ ಆ ವಿಶ್ವೇಶ್ವರನಲ್ಲಿ ಭಕ್ತಿಭಾವವೂ ಉಂಟಾಗಲಿ.

ಯಸ್ಯ ಪ್ರಸಾದಾತ್ಸುಲಭಮಾಯುಃ ಪುತ್ರಾಽಂಬರಾಽಂಗನಾಃ ।
ಸಮೃದ್ಧಯಃ ಸ್ವರ್ಗಮೋಕ್ಷೌ ಸ ವಿಶ್ವೇಶಃ ಪ್ರಸೀದತು ॥ ೩೩ ॥
ನಾಮಶ್ರವಣಮಾತ್ರೇಣ ಯಸ್ಯ ವಿಶ್ವೇಶಿತುರ್ವಿಭೋಃ ।
ಮಹಾಪಾತಕವಿಚ್ಛೇದಃ ಸ ವಿಶ್ವೇಶೋಽಸ್ತು ತೇ ಹೃದಿ ॥ ೩೪ ॥
ತ್ವಂ ವೃದ್ಧಕಾಲೋ ಭೂಪಾಲಃ ಶ್ರುತ್ವೇತ್ಯಾಶೀಃಪರಂಪರಾಂ ।
ಸ್ಮರಿಷ್ಯಸೀದಂ ವೃತ್ತಾಂತಂ ಪುಲಕಾಂಕವಪುಸ್ತದಾ ॥ ೩೫ ॥
ಆಕಾರಗೋಪನಂ ಕೃತ್ವಾ ತೇಭ್ಯೋ ದತ್ವಾ ಧನಂ ಬಹು ।
ಸುಮುಹೂರ್ತಮನುಪ್ರಾಪ್ಯ ಸುತೇ ರಾಜ್ಯಂ ವಿಧಾಯಚ ॥ ೩೬ ॥
ಅನಂಗಲೇಖಯಾ ರಾಜ್ಞ್ಯಾ ತತಃ ಕಾಶೀಂ ಗಮಿಷ್ಯಸಿ ।
ದತ್ವಾ ದಾನಾನಿ ಭೂರೀಣಿ ಪ್ರೀಣಯಿತ್ವಾಽರ್ಥಿನೋ ಜನಾನ್ ॥ ೩೭ ॥
ಸ್ವನಾಮ್ನಾ ತತ್ರ ಸಂಸ್ಥಾಪ್ಯ ಲಿಂಗಂ ನಿರ್ವಾಣಕಾರಣಂ ।
ಪ್ರಾಸಾದಂ ತತ್ರ ಕೃತ್ವೋಚ್ಚೈಸ್ತದಗ್ರೇ ಕೂಪಮುತ್ತಮಂ ॥ ೩೮ ॥

---

೩೩. ಯಾವನ ಅನುಗ್ರಹದಿಂದ ಆಯುಸ್ಸು, ಕಳತ್ರಪುತ್ರ ಅಂಬರಾದಿಗಳೂ, ಸಕಲೈಶ್ವರ್ಯಸಮೃದ್ಧಿಯೂ, ಸ್ವರ್ಗಮೋಕ್ಷಗಳೂ ದೊರಕುವುವೊ, ಆ ವಿಶ್ವೇಶ್ವರನು ನಿನಗೆ ಪ್ರಸನ್ನನಾಗಲಿ.

೩೪. ಯಾವನ ನಾಮಸಂಕೀರ್ತನ ಶ್ರವಣಮಾತ್ರದಿಂದಲೆ ಮಹಾಪಾತಕಗಳೂ ಹರಿದುಹೋಗುವುವೊ, ಆ ವಿಶ್ವೇಶ್ವರಸ್ವಾಮಿಯು ನಿನ್ನ ಹೃದಯದಲ್ಲಿ ನೆಲಸಲಿ.''

೩೫–೩೬. ಅಯ್ಯಾ ಶಿವಶರ್ಮನೆ, ವೃದ್ಧಕಾಲಮಹಾರಾಜನಾಗುವ ನೀನು ಇಂತು ನುಡಿವ ಆ ಸಂನ್ಯಾಸಿಗಳ, ಆಶಿಷಪರಂಪರೆಗಳನ್ನು ಕೇಳಿ ಪುಲಕಾಂಕಿತಗಾತ್ರನಾಗಿ, ನಾವು ಹೇಳಿರುವ ಈ ಭವಿಷ್ಯತ್ ವೃತ್ತಾಂತವೆಲ್ಲವನ್ನೂ ನೀನು ಸ್ಮರಿಸುವೆ. ಆ ಸಮಯದಲ್ಲಿ ನೀನು ನಿನ್ನಲ್ಲಿ ತಲೆದೋರಿದ ಅಭಿಪ್ರಾಯವನ್ನು ಹೊರಗೆಡಹದೆ ಆ ಯಾತ್ರಿಕರಿಗೆ ಬಹುಧನವನ್ನಿತ್ತು ಆ ಬಳಿಕ ಒಳ್ಳೆಯ ಮುಹೂರ್ತವನ್ನು ನೋಡಿ ನಿನ್ನ ಮಗನಿಗೆ ರಾಜ್ಯಾಭಿಷೇಕವನ್ನು ಮಾಡುವೆ.

೩೭. ತರುವಾಯ ನಿನ್ನ ಪಟ್ಟಮಹಿಷಿಯಾದ ಅನಂಗಲೇಖಾದೇವಿಯೊಡನೆ ಕಾಶೀಪಟ್ಟಣಕ್ಕೆ ಹೋಗುವೆ. ಅಲ್ಲಿ ಅನೇಕ ದಾನಗಳನ್ನು ಮಾಡಿ ಅರ್ಥಿಗಳಾದ ಜನರನ್ನು ಸಂತೋಷಗೊಳಿಸುವೆ.

೩೮. ಅನಂತರ ಆ ಕ್ಷೇತ್ರದಲ್ಲಿಯೇ ನಿನ್ನ ಹೆಸರಿನಿಂದ ಮೋಕ್ಷವನ್ನು ಕೈಗೂಡಿಸಲು ಕಾರಣವೆನಿಸುವ ವೃದ್ಧಕಾಲೇಶ್ವರವೆಂಬ ಲಿಂಗವನ್ನು ಪ್ರತಿಷ್ಠಿಸಿ ಅದಕ್ಕೊಂದು ದೇವಾಲಯವನ್ನೂ ನಿರ್ಮಿಸಿ ಅದರ ಮುಂಗಡೆಯೆ ಒಂದು ಕೊಳವನ್ನು ತೋಡಿಸುತ್ತೀಯೆ.

ವಿಧಾಯ ವಿಧಿವತ್ತತ್ರ ಕಲಶಾರೋಪಣಾದಿಕಂ ।
ಮಣಿಮಾಣಿಕ್ಯಚಾಂಪೇಯದುಕೂಲೇಭಾಽಶ್ವ ಗೋಧನಂ ॥ ೩೯ ॥
ಮಹಾಧ್ವಜಪತಾಕಾಶ್ಚ ಛತ್ರಚಾಮರದರ್ಪಣಂ ।
ದೇವೋಪಕರಣಂ ಭೂರಿ ವಿಶ್ರಾಣ್ಯ ಶ್ರಮವರ್ಜಿತಃ ॥ ೪೦ ॥
ವ್ರತೋಪವಾಸನಿಯಮೈಃ ಪರಿಕ್ಷೀಣಕಲೇವರಃ ।
ಮಧ್ಯಾಹ್ನೇ ನಿರ್ಜನೇ ತತ್ರ ದ್ರಕ್ಷ್ಯಸ್ಯೇಕಂ ತಪೋಧನಂ ॥ ೪೧ ॥
ಅತೀವ ಜೀರ್ಣವಪುಷಂ ಪರಿಪಿಂಗಜಟಾನ್ವಿತಂ ।
ಮೂರ್ತಿಮಂತಮಿವ ಪ್ರಾಂಶುಂ ಧರ್ಮಂ ಜನಮನೋಹರಂ ॥ ೪೨ ॥
ಭಾರಂ ಶರೀರಯಷ್ಟೇಶ್ಚ ದೃಢಯಷ್ಟ್ಯಾಂ ಸಮರ್ಪ್ಯಚ ।
ಗರ್ಭಾಗಾರಾದ್ವಿನಿಷ್ಕ್ರಮ್ಯಾಭ್ಯಾಯಾಂತಂ ರಂಗಮಂಡಪೇ ॥ ೪೩ ॥
ಉಪವಿಶ್ಯ ಸಮೀಪೇ ತೇ ಪ್ರಕ್ಷ್ಯತ್ಯೇವಮನುಕ್ರಮಾತ್ ।
ಕೋಽಸಿ ತ್ವಂ ಕಿಮಿಹಾಽಸಿ ತ್ವಂ ದ್ವಿತೀಯ ಇವ ಕಸ್ತ್ವಯಂ ॥ ೪೪ ॥
ಪ್ರಾಸಾದಃ ಕಾರಿತಃ ಕೇನ ಜಾನಾಸ್ಯೇಷ ತತೋ ವದ ।
ಅಸ್ಯ ಲಿಂಗಸ್ಯ ಕಿನ್ನಾಮ ಪ್ರಾಯೋ ಜಾನೇ ನ ವಾರ್ಧಕಾತ್ ॥ ೪೫ ॥

---

೩೯–೪೦. ಇಷ್ಟೇ ಅಲ್ಲದೆ ಶಾಸ್ತ್ರೋಕ್ತ ರೀತಿಯಿಂದ ಆ ದೇವಾಲಯಕ್ಕೆ ಕಲಶಾರೋಪಣಾದಿ ಕಾರ್ಯಗಳನ್ನು ಆಗಗೊಳಿಸಿ ಮಣಿಮಾಣಿಕ್ಯ ಚಾಂಪೇಯ ದುಕೂಲಗಳನ್ನೂ, ಆನೆ ಕುದುರೆಗಳನ್ನೂ, ಗೋಧನವನ್ನೂ, ಮಹಾಧ್ವಜ ಪತಾಕೆಗಳನ್ನೂ ಛತ್ರ ಚಾಮರ ದರ್ಪಣಗಳನ್ನೂ ಇತರ ಪೂಜೋಪಕರಣಗಳನ್ನೂ ಯಾವ ಶ್ರಮವೂ ಇಲ್ಲದೆ ಬಹು ಸುಲಭವಾಗಿಯೆ ಆ ಸ್ವಾಮಿಗೆ ಸಮರ್ಪಣೆ ಮಾಡುವೆ.

೪೧. ತರುವಾಯ, ಅಲ್ಲಿಯೆ ಇದ್ದು ವ್ರತೋಪವಾಸನಿಯಮಗಳಿಂದ ಸವೆದ ಶರೀರವುಳ್ಳವನಾಗಿ ಒಂದಾನೊಂದು ದಿನದ ಮಧ್ಯಾಹ್ನ ಯಾರೂ ಇಲ್ಲದಿರುವಾಗ ಒಬ್ಬಾನೊಬ್ಬ ತಪೋಧನನನ್ನು ಕಾಣುವೆ.

೪೨. ಆತನು ಬಹಳ ಹಣ್ಣಾದ ಮೈಯುಳ್ಳವನಾಗಿ ಕೆಂಜೆಡೆಗಳೊಡಗೂಡಿ ಸಾಕ್ಷಾತ್ ಧರ್ಮವೇ ಮೂರ್ತಿಮಂತವಾಗಿ ಬಂದಿರುವುದೊ ಎಂಬಂತೆ ಮನೋಹರವಾಗಿ ಕಂಗೊಳಿಸುವನು.

೪೩–೪೫. ಆ ತಪಸ್ವಿಯು ಶರೀರಕಾಷ್ಠದ ಭಾರವನ್ನೆಲ್ಲ ಗಟ್ಟಿಯಾದ ಕೈಗೋಲಿನಮೇಲೆ ಊರಬಿಟ್ಟು ಗರ್ಭಾಗಾರದಿಂದ ಹೊರಬಂದು ಅಂತರಂಗ ಮಂಡಪದಲ್ಲಿ ನಿನ್ನ ಸಮೀಪದಲ್ಲಿ ಕುಳಿತು, "ಅಯ್ಯಾ, ನೀನಾರು? ಏಕಿಲ್ಲಿರುವೆ? ನಿನ್ನ ಜೊತೆಯಲ್ಲಿರುವ ಈಕೆ ಯಾರು? ಈ ದೇವಾಲಯವನ್ನು ನಿರ್ಮಿಸಿದವನು ಯಾರು? ಇದನ್ನು ನೀನು ತಿಳಿದಿರುವೆಯಾದರೆ, ನನಗೆ ತಿಳಿಸುವವನಾಗು.

ಪೃಷ್ಟಸ್ತ್ವಮಿತಿ ತೇನಾಽಥ ತದಾ ವೃದ್ಧತಪಸ್ವಿನಾ ।
ಕಥಯಿಷ್ಯಸ್ಯಹಂ ರಾಜಾ ವೃದ್ಧಕಾಲ ಇತಿ ಶ್ರುತಃ ॥ ೪೬ ॥
ದಾಕ್ಷಿಣಾತ್ಯ ಇಹಪ್ರಾಪ್ತಸ್ತ್ವೇತಯಾ ಸಹ ಕಾಂತಯಾ ।
ಧ್ಯಾಯಾಮಿ ಲಿಂಗಮೇತಚ್ಚ ಪ್ರಾರ್ಥಯಾಮಿ ನ ಕಿಂಚನ ॥ ೪೭ ॥
ಪ್ರಾಸಾದಸ್ಯಾಸ್ಯ ಜಟಿಲ ಸ್ವಯಂ ಕಾರಯಿತಾ ಶಿವಃ ।
ವಿಶೇಷತೋಽಸ್ಯ ಲಿಂಗಸ್ಯ ನಾಮ ನೋ ವೇದ್ಮಿ ನಿಶ್ಚಿತಂ ॥ ೪೮ ॥
ಇತಿ ಶ್ರುತ್ವಾ ನರಪತೇರ್ವಾಕ್ಯಂ ಪ್ರಾಹ ಜಟಾಧರಃ ।
ಸತ್ಯಮುಕ್ತಂ ತ್ವಯೈಕಂ ಹಿ ಲಿಂಗನಾಮ ನ ವೇತ್ಸಿ ಯತ್ ॥ ೪೯ ॥
ಪಶ್ಯೇಯಂ ತ್ವಾಮಹಂ ನಿತ್ಯಮುಪವಿಷ್ಟಂ ಸುನಿಶ್ಚಲಂ ।
ಶ್ರುತೋ ಭವಿಷ್ಯತಿ ತವ ಪ್ರಾಸಾದೋ ಯೇನ ಕಾರಿತಃ ॥ ೫೦ ॥
ಮಮಾಗ್ರೇ ತತ್ಸಮಾಚಕ್ಷ್ವ ಯದಿ ಜಾನಾಸಿ ತತ್ವತಃ ।
ಆಕರ್ಣ್ಯೇತಿ ವಚಸ್ತಸ್ಯ ಪುನಃ ಪ್ರಾಹ ಭವಾನಿತಿ ॥ ೫೧ ॥

---

ಈ ಲಿಂಗದ ಹೆಸರೇನು? ನನಗೆ ಮುಪ್ಪಡಸಿರುವುದರಿಂದ ಇದರ ಹೆಸರೇ ನನಗೆ ತಿಳಿಯದಾಗಿದೆ'' ಎಂದು ಪ್ರಶ್ನೆಮಾಡುವನು.

೪೬–೪೮. ಅಯ್ಯಾ ವಿಪ್ರನೆ, ತಪಸ್ವಿಯಾದ ಆ ವೃದ್ಧನಿಂತು ಪ್ರಶ್ನಿಸಲು ನೀನು, ''ಅಯ್ಯಾ, ನನ್ನನ್ನು ವೃದ್ಧಕಾಲರಾಜನೆಂದು ಹೇಳುತ್ತಾರೆ. ನಾನು ದಕ್ಷಿಣದೇಶದವನು. ಇವಳು ನನ್ನ ಹೆಂಡತಿ. ಈಕೆಯೊಡನೆ ನಾನು ಇಲ್ಲಿಗೆ ಬಂದಿದ್ದೇನೆ. ಇದೋ ಈ ಲಿಂಗವನ್ನೇ ನಾನೂ ಧ್ಯಾನಿಸುತ್ತೇನೆ. ಇದನ್ನೇ ಪ್ರಾರ್ಥಿಸುತ್ತಿರುವೆನಲ್ಲದೆ ಬೇರಾವ ದೈವವನ್ನೂ ಎಣಿಸುವುದಿಲ್ಲ. ಇನ್ನು ಈ ಪ್ರಾಸಾದವನ್ನು ನಿರ್ಮಿಸಿದವರಾದರೊ ಜಟಾಧಾರಿಯಾದ ಸಾಕ್ಷಾತ್ ಪರಮಶಿವನು. ಈ ಲಿಂಗದ ಹೆಸರೇನೆಂಬುದನ್ನೇ ನಾನು ಚೆನ್ನಾಗಿ ತಿಳಿದಿಲ್ಲ.'' ಎಂದು ಉತ್ತರ ಕೊಡುವೆ.

೪೯–೫೧. ಜಟಾಧರನಾದ ಆ ವೃದ್ಧತಾಪಸನು ಈ ನಿನ್ನ ಉತ್ತರವನ್ನು ಕೇಳಿ, ''ಅಯ್ಯಾ, ನೀನು ದಿಟವನ್ನೇ ನುಡಿದೆ. ಈ ಲಿಂಗವೊಂದರ ಹೆಸರೇನೆಂಬುದನ್ನು ನೀನು ತಿಳಿಯದೆ ಹೋಗಿರುವೆ. ನೀನು ಪ್ರತಿನಿತ್ಯವೂ ಇಲ್ಲಿ ಕಟ್ಟಕಡಲದೆ ಕುಳಿತಿರುವುದನ್ನು ನಾನು ನೋಡುತ್ತಿದ್ದೇನೆ. ಆದುದರಿಂದ ಈ ದೇವಾಲಯವನ್ನು ಯಾರು ಕಟ್ಟಿಸಿದರೆಂಬುದನ್ನು ನೀನು ಕೇಳಿರಬೇಕು. ದಿಟವಾಗಿಯೂ ನೀನಿದನ್ನು ತಿಳಿದಿರುವೆಯಾದರೆ ಆ ವಿಷಯವನ್ನು ನನಗೆ ಹೇಳು.'' ಎಂದು ಕೇಳುವನು. ಇಂತೆಂದ ಅವನ ಮಾತನ್ನು ಕೇಳಿ ನೀನು ಮತ್ತೆ ಈ ಪ್ರಕಾರವಾಗಿ ಹೇಳುವೆ.

ಕರ್ತಾ ಕಾರಯಿತಾ ಶಂಭುಃ ಕಿಮಸತ್ಯಂ ಬ್ರವೀಮ್ಯಹಂ ।
ಅಥವಾ ಚಿಂತಯಾ ಕಿಂ ಮೇ ತಪಸ್ವಿನ್ನನಯಾ ವಿಭೋ ॥ ೫೨ ॥
ಇತಿ ತ್ವಯಿ ಸ್ಥಿತೇ ಜೋಷಂ ಸಪುನರ್ವೃದ್ಧತಾಪಸಃ ।
ಪಿಪಾಸುರಸ್ಮಿ ಪಾನೀಯಮಾನೀಯಾಶು ಪ್ರಯಚ್ಛ ಮೇ ॥ ೫೩ ॥
ಇತಿ ತೇನ ಚ ನುನ್ನಸ್ತ್ವಂ ವಾರ್ಯಾನೀಯ ಚ ಕೂಪತಃ ।
ಪಾಯಯಿಷ್ಯಸಿ ತಂ ವೃದ್ಧಂ ತಾಪಸಂ ತತ್ಕ್ಷಣಾಚ್ಚ ಸಃ ॥ ೫೪ ॥
ತದಂಬುಪಾನತೋ ಭೂಯಾತ್ಸಪಾರ್ವಣಶಶಿಪ್ರಭಃ ।
ತರುಣೋ ರೂಪಸಂಪನ್ನಃ ಕೋಶೋನ್ಮುಕ್ತೋರಗೋ ಯಥಾ ॥ ೫೫ ॥
ಜಾತಾಶ್ಚರ್ಯೇಣ ಭವತಾ ಪುನರೇವಾಽಭ್ಯಭಾಷಿ ಸಃ ।
ಕಃ ಪ್ರಭಾವೋ ಹಿ ಭಗವನ್ನೇಷ ಯೇನ ಭವಾನ್ಪುನಃ ॥ ೫೬ ॥
ಪರಿತ್ಯಜ್ಯಾತ್ರ ಜರಸಂ ನವೋ ಭ್ರಾಜಸಿ ಸಾಂಪ್ರತಂ ।
ಅಸ್ತಿ ಚೇದವಕಾಶಸ್ತೇ ತತೋ ಬ್ರೂಹಿ ತಪೋಧನ ॥ ೫೭ ॥

ತಪೋಧನ ಉವಾಚ :—

ವೃದ್ಧಕಾಲಕ್ಷಿತಿಪತೇ ಜಾನೇ ತ್ವಾಂ ಸುಮಹಾಮತೇ ।
ಇಮಾಮಪಿ ಚ ಜಾನೇಽಹಂ ತವಪತ್ನೀಂ ಪತಿವ್ರತಾಂ ॥ ೫೮ ॥

---

೫೨. "ಅಯ್ಯಾ, ಮಾಡುವವನೂ ಮಾಡಿಸುವವನೂ ಆ ಶಂಭುವೆ. ಇದು ನಿಜವು. ಇದೊಂದನ್ನುಳಿದು ನಾನು ಅಸತ್ಯವಾದ ಮತ್ತೇನನ್ನು ತಾನೇ ಹೇಳಲಿ. ಅಥವಾ ಈ ಚಿಂತೆಯಾದರೂ ನನಗೇಕೆ ?"

೫೩. ಇಷ್ಟು ಮಾತ್ರ ನುಡಿದು ನೀನು ಸುಮ್ಮನಾಗಲು ಆ ವೃದ್ಧತಾಪಸನು "ಅಯ್ಯಾ, ನಾನು ಬಹಳ ಬಾಯಾರಿದ್ದೇನೆ. ಜಾಗ್ರತೆಯಾಗಿ ಸ್ವಲ್ಪ ನೀರನ್ನು ತಂದು ಕೊಡು" ಎಂದು ಕೇಳುವನು.

೫೪–೫೫. ಹೀಗೆ ಪ್ರೇರೇಪಿಸಲು ನೀನು ಆ ದೇವಾಲಯದ ಮುಂಗಡೆ ಇರುವ ಕೊಳದಿಂದ ನೀರನ್ನು ತಂದು ಆತನಿಗೆ ಕುಡಿಸುವೆ. ಕೂಡಲೆ ಆ ನೀರನ್ನು ಕುಡಿದುದರಿಂದ ಆ ವೃದ್ಧನು ಪೊರೆಬಿಟ್ಟ ಹಾವಿನಂತೆ, ಹುಣ್ಣಿಮೆಯ ಪೂರ್ಣಚಂದ್ರನಂತೆ ಕಾಂತಿವಂತನೂ, ತರುಣನೂ, ರೂಪಸಂಪನ್ನನೂ ಆಗುವನು.

೫೬–೫೭. ಆಗ ನಿನಗೆ ಪರಮಾಶ್ಚರ್ಯವಾಗಿ, "ಎಲೈ ಪೂಜ್ಯನೆ, ನೀನು ಯಾವುದರ ಪ್ರಭಾವದಿಂದ ಮುದಿತನವನ್ನು ತೊರೆದು ನವಯುವಕನಾಗಿ ಬೆಳಗುತ್ತಿರುವೆ? ಅಯ್ಯಾ ತಪೋಧನನೆ, ನಿನಗೆ ಅವಕಾಶವಿರುವುದಾದರೆ ಈ ವಿಷಯವನ್ನು ನನಗೆ ತಿಳಿಸುವವನಾಗು" ಎನ್ನುವೆ.

೫೮. ತಪೋಧನನು ಹೇಳುತ್ತಾನೆ:—"ಅಯ್ಯಾ ವೃದ್ಧಕಾಲರಾಜನೆ, ಮಹಾ ಬುದ್ಧಿಶಾಲಿಯಾದ ನಿನ್ನನ್ನು ನಾನು ಚೆನ್ನಾಗಿ ಬಲ್ಲೆ. ನಿನ್ನ ಪತ್ನಿಯೂ ಮಹಾ ಪತಿವ್ರತೆಯೂ ಆದ ಈ ಅನಂಗಲೇಖೆಯನ್ನೂ ನಾನು ಬಲ್ಲೆ.

ಜನ್ಮನೋಽಸ್ಮಾದಿಯಂ ರಾಜನ್ನಾಸೀದ್ವಿಪ್ರಸ್ಯ ಕನ್ಯಕಾ ।
ತುರ್ವಸೋರ್ವೇದವಪುಷಃ ಶುಭಾಚಾರಾ ಶುಭಾನನಾ ॥ ೫೯ ॥
ತೇನ ದತ್ತಾ ವಿವಾಹಾರ್ಥಂ ನೈಧ್ರುವಾಯ ಮಹಾತ್ಮನೇ ।
ಸ ಚ ಕಾಲವಶಂ ಪ್ರಾಪ್ತೋ ನೈಧ್ರುವೋಽಪ್ರಾಪ್ತಯೌವನಃ ॥ ೬೦ ॥
ವೈಧವ್ಯಂ ಪಾಲಯಂತ್ಯೇಷಾ ಮೃತಾಽವಂತ್ಯಾಂ ಶುಭವ್ರತಾ ।
ತೇನ ಪುಣ್ಯೇನ ಸಂಜಾತಾ ಪಾಂಡ್ಯಸ್ಯ ನೃಪತೇಃ ಸುತಾ ॥ ೬೧ ॥
ಪರಿಣೀತಾ ತ್ವಯಾ ರಾಜನ್ ಪತಿವ್ರತರತಾ ಸದಾ ।
ತ್ವಯಾ ಸಹೇಹ ಸಂಪ್ರಾಪ್ತಾ ಮುಕ್ತಿಂ ಪ್ರಾಪ್ಸ್ಯತ್ಯನುತ್ತಮಾಂ ॥ ೬೨ ॥
ಅಯೋಧ್ಯಾಯಾಮಥಾಽವಂತ್ಯಾಂ ಮಥುರಾಯಾಮಥಾಽಪಿ ವಾ ।
ದ್ವಾರವತ್ಯಾಂ ಚ ಕಾಂಚ್ಯಾಂ ವಾ ಮಾಯಾಪುರ್ಯಾಮಥೋ ನೃಪ ॥
ಅಪಿ ಪಾತಕಿನೋ ಯೇ ಚ ಕಾಲೇನ ನಿಧನಂ ಗತಾಃ ।
ತೇಹಿ ಸ್ವರ್ಗಾದಿಹಾಗತ್ಯ ಕಾಶ್ಯಾಂ ಮೋಕ್ಷಮವಾಪ್ನುಯುಃ ॥ ೬೪ ॥
ಅವೈಮಿ ತ್ವಾಮಪಿ ನೃಪ ದ್ವಿಜೋಽಭೂಃ ಪೂರ್ವಜನ್ಮನಿ ।
ಮಾಥುರಃ ಶಿವಶರ್ಮಾಖ್ಯೋ ಮಾಯಾಪುರ್ಯಾಂ ಭವಾನ್ಮೃತಃ॥ ೬೫ ॥

---

೫೯. ಈಕೆಯು ಈ ಹಿಂದಣ ಜನ್ಮದಲ್ಲಿ ದೇವಶರೀರಿಯೆನಿಸಿದ ತುರ್ವಸುವೆಂಬ ವಿಪ್ರೋತ್ತಮನಿಗೆ ಮಗಳಾಗಿದ್ದಳು. ಶುಭಾನನೆಯಾದ ಈಕೆಯು ಶುಭಾಚಾರೆಯೂ ಆಗಿದ್ದಳು.

೬೦–೬೨. ತುರ್ವಸುವಾದರೊ ಈಕೆಯನ್ನು ಮಹಾತ್ಮನಾದ ನೈಧ್ರುವನಿಗೆ ಮದುವೆಮಾಡಿಕೊಟ್ಟನು. ಆ ನೈಧ್ರುವನಾದರೊ ಯೌವನವನ್ನು ತಳೆಯದೆಯೆ ಮೃತಿಯೊಂದಿದನು. ತರುವಾಯ ಈ ಶುಭವ್ರತೆಯು ವೈಧವ್ಯವನ್ನು ಪಡೆದು ಅದನ್ನೇ ವಿಧ್ಯುಕ್ತವಾಗಿ ಪಾಲಿಸಿಕೊಂಡು ಬಾಳನ್ನು ನೂಕುತ್ತಿದ್ದು ಅವಂತಿಯಲ್ಲಿ ಕಾಲವಾದಳು. ಆ ಪುಣ್ಯದ ಪ್ರಭಾವದಿಂದ ಈಕೆಯು ಈ ಜನ್ಮದಲ್ಲಿ ಪಾಂಡ್ಯರಾಜನ ಮಗಳಾಗಿ ಜನಿಸಿದಳು. ಪತಿವ್ರತೆಯಾದ ಈಕೆಯು ಈಗ ನಿನ್ನ ಮಡದಿಯಾಗಿ ನಿನ್ನೊಡನೆ ಇಲ್ಲಿಗೈತಂದಿರುವಳು. ನಿನ್ನೊಡನೆಯೆ ಈಕೆಯು ಉತ್ತಮೋತ್ತಮವಾದ ಮುಕ್ತಿಯನ್ನು ಪಡೆಯಲುಳ್ಳವಳು.

೬೩–೬೪. ಅಯ್ಯಾ ರಾಜನೆ, ಅಯೋಧ್ಯೆ, ಅವಂತಿ, ಮಧುರೆ, ದ್ವಾರವತಿ, ಕಾಂಚಿ, ಮಾಯಾವತಿ ಈ ಪಟ್ಟಣಗಳಲ್ಲಿ ಕಾಲಕ್ರಮದಿಂದ ಮೃತಿಯೊಂದುವ ಪಾತಕಿಗಳೂ ಸ್ವರ್ಗವನ್ನು ಸೇರಿ ಆ ಬಳಿಕ ಕ್ಷೀಣಪುಣ್ಯರಾಗಿ ಭೂಲೋಕಕ್ಕೆ ಬಂದು ಈ ಕಾಶೀ ಪಟ್ಟಣದಲ್ಲಿ ಮೋಕ್ಷವನ್ನು ಪಡೆಯುತ್ತಾರೆ.

೬೫–೬೬. ಎಲೈ ಮಹಾರಾಜನೆ, ನಿನ್ನನ್ನೂ ನಾನು ಬಲ್ಲೆನು. ನೀನು ಪೂರ್ವಜನ್ಮದಲ್ಲಿ ಮಧುರಾಪಟ್ಟಣದಲ್ಲಿ ಶಿವಶರ್ಮನೆಂದು ಹೆಸರಾದ ಬ್ರಾಹ್ಮಣ

ತತ್ಪುಣ್ಯಾತ್ಪ್ರಾಪ್ಯ ವೈಕುಂಠಂ ಭುಕ್ತ್ವಾ ಭೋಗಾನ್ಮನೋರಮಾನ್ ।
ತತ್ಪುಣ್ಯಶೇಷಾತ್ಕ್ಷಿತಿಪೋ ಜಾತಸ್ತ್ವಂ ನಂದಿವರ್ಧನೇ ॥ ೬೬ ॥
ವೃದ್ಧಕಾಲಾಽವನೀಪಾಲ ತೇನೈವ ಸುಕೃತೇನ ಚ ।
ಮೋಕ್ಷಕ್ಷೇತ್ರಮಿದಂ ಪ್ರಾಪ್ತೋ ಮುಕ್ತಿಂ ಪ್ರಾಪ್ಸ್ಯಸ್ಯನುತ್ತಮಾಂ॥ ೬೭ ॥
ಅನ್ಯಚ್ಚ ಶೃಣು ರಾಜೇಂದ್ರ ತ್ವಯಾ ಯತ್ಸಮುದೀರಿತಂ ।
ಕರ್ತಾ ಕಾರಯಿತಾ ಶಂಭುಃ ಪ್ರಾಸಾದಸ್ಯೇತಿ ತತ್ ಸ್ಫುಟಂ ॥ ೬೮ ॥
ಸುಕೃತಂ ನೈವ ಸತತಮಾಖ್ಯಾತವ್ಯಂ ಕದಾಚನ ।
ಕೃತಂ ಮಯೇತಿ ಕಥನಾತ್ಪುಣ್ಯಂ ಕ್ಷಯತಿ ತತ್ಕ್ಷಣಾತ್ ॥ ೬೯ ॥
ತಸ್ಮಾತ್ಸರ್ವಪ್ರಯತ್ನೇನ ಗೋಪನೀಯಂ ನಿದಾನವತ್ ।
ಸುಕೃತಂ ಕೀರ್ತನಾದ್ವ್ಯರ್ಥಂ ಭವೇದ್ಭಸ್ಮಹುತಂ ತಥಾ ॥ ೭೦ ॥
ನಿಶ್ಚಿತಂ ವಿಶ್ವನಾಥೇನ ಪ್ರೇರಿತೇನ ತ್ವಯಾಽನಘ ।
ಕೃತಂ ಹಿ ಕೃತಕೃತ್ಯೇನ ಪ್ರಾಸಾದಾದಿಹ ವೇದ್ಮ್ಯಹಂ ॥ ೭೧ ॥
ವೃದ್ಧಕಾಲೇಶ್ವರಂ ನಾಮ ಲಿಂಗಮೇತನ್ಮಹೀಪತೇ ।
ಜಾನೀಹ್ಯನಾದಿಸಂಸಿದ್ಧಂ ನಿಮಿತ್ತಂ ಕಿಂ ತು ವೈ ಭವಾನ್ ॥ ೭೨ ॥

---

ನಾಗಿದ್ದೆ. ನೀನು ಮಾಯಾಪುರಿಯಲ್ಲಿ ಮೃತಿಯನ್ನು ಪಡೆದೆ. ಆ ಪುಣ್ಯಪ್ರಭಾವದಿಂದ ವೈಕುಂಠವನ್ನು ಸೇರಿ ಮನೋಹರವಾದ ಭೋಗಗಳನ್ನು ಅನುಭವಿಸಿದ ಬಳಿಕ ಅದೇ ಪುಣ್ಯಶೇಷದಿಂದಲೇ ಈ ಜನ್ಮದಲ್ಲಿ ನಂದಿವರ್ಧನ ನಗರದ ರಾಜನಾಗಿ ಜನಿಸಿರುವೆ.

೬೭–೬೮. ಎಲೈ ವೃದ್ಧಕಾಲರಾಜನೆ, ಆ ಪುಣ್ಯವಿಶೇಷದಿಂದಲೆ ನೀನು ಮೋಕ್ಷಕ್ಷೇತ್ರವಾದ ಕಾಶೀಕ್ಷೇತ್ರವನ್ನು ಹೊಂದಿರುವೆ. ರಾಜೇಂದ್ರ, ಮತ್ತೊಂದು ವಿಚಾರವನ್ನೂ ಹೇಳುವೆನು ಕೇಳು. ನೀನು ಈ ಪ್ರಾಸಾದವನ್ನು ಮಾಡಿದವನೂ ಮಾಡಿಸಿದವನೂ ಶಂಭುವೆಂದು ಯಾವ ಮಾತನ್ನಾಡಿದೆಯೊ ಆ ಮಾತು ಸತ್ಯವಾದುದು.

೬೯–೭೧. ಎಂದಿಗೂ ತಾನುಮಾಡಿದ ಸುಕೃತವನ್ನು ತಾನು ಹೇಳಬಾರದು. ನಾನು ಮಾಡಿದೆನೆಂದು ಹೇಳಿದರೆ ಆ ಪುಣ್ಯವೆಲ್ಲವೂ ತತ್‌ಕ್ಷಣದಲ್ಲಿಯೆ ಕ್ಷಯಿಸಿ ಹೋಗುತ್ತದೆ. ಆದುದರಿಂದ ಮಾಡಿದ ಪುಣ್ಯವಿಚಾರವನ್ನು ಬಹಿರಂಗಗೊಳಿಸದೆ ಪ್ರಯತ್ನಪೂರ್ವಕವಾಗಿ ನಿಧಿಯಂತೆ ರಹಸ್ಯವಾಗಿಸತಕ್ಕದ್ದು. ಅದನ್ನು ಬಹಿರಂಗಪಡಿಸುವುದರಿಂದ ಬೂದಿಯಲ್ಲಿ ಮಾಡಿದ ಹೋಮದಂತೆ ಅದು ವ್ಯರ್ಥವಾಗಿ ಹೋಗುವುದು. ಕೃತಕೃತ್ಯನಾದ ನೀನು ವಿಶ್ವನಾಥನ ಪ್ರೇರಣೆಯಿಂದಲೆ ಈ ಪ್ರಾಸಾದವನ್ನು ರಚಿಸಿರುವೆಯೆಂಬುದನ್ನು ನಾನು ಬಲ್ಲೆನು.

೭೨. ಎಲೈ ಮಹೀಪತಿಯೆ, ಈ ವೃದ್ಧಕಾಲೇಶ್ವರಲಿಂಗವು ಅನಾದಿಕಾಲ

ದರ್ಶನಾತ್ಸ್ಪರ್ಶನಾತ್ತಸ್ಯ ಪೂಜನಾಚ್ಛ್ರವಣಾನ್ನತೇಃ ।
ವೃದ್ಧಕಾಲೇಶಲಿಂಗಸ್ಯ ಸರ್ವಂ ಪ್ರಾಪ್ನೋತಿ ವಾಂಛಿತಂ ॥ ೨೩ ॥
ಕೂಪಃ ಕಾಲೋದಕೋ ನಾಮ ಜರಾವ್ಯಾಧಿವಿಘಾತಕೃತ್ ।
ಯದೀಯ ಜಲಪಾನೇನ ಮಾತುಃ ಸ್ತನ್ಯಮಪಾನವಾನ್ ॥ ೨೪ ॥
ಕೃತಕೂಪೋದಕಸ್ನಾನಃ ಕೃತ್ವೈತಲ್ಲಿಂಗಪೂಜನಃ ।
ವರ್ಷೇಣ ಸಿದ್ಧಿಮಾಪ್ನೋತಿ ಮನಸೋಽಭಿಲಷಿತಾಂ ನರಃ ॥ ೨೫ ॥
ನ ಕುಷ್ಟಂ ನ ಚ ವಿಸ್ಫೋಟಾ ನರಂಘಾ ನ ವಿಚರ್ಚಿಕಾ ।
ಪೀತಾತ್ಸ್ಪೃಷ್ಟಾತ್ಪ್ರತಿಷ್ಠಂತಿ ಕಫಃ ಕಾಲತನೋದಕಾತ್ ॥ ೨೬ ॥
ನಾಽಗ್ನಿಮಾಂದ್ಯಂ ನೈವ ಶೂಲಂ ನ ಮೇಹೋ ನ ಪ್ರವಾಹಿಕಾ ।
ನ ಮೂತ್ರಕೃಚ್ಛ್ರಂ ನೋಪಾಮಾ ಪಾನೀಯಸ್ಯಾಽಸ್ಯ ಸೇವನಾತ್॥ ೨೭ ॥
ಭೂತಜ್ವರಾಶ್ಚ ಯೇ ಕೇಚಿದ್ಯೇ ಕೇಚಿದ್ವಿಷಮಜ್ವರಾಃ ।
ತೇ ಕ್ಷಿಪ್ರಮುಪಶಾಮ್ಯಂತಿ ಹ್ಯೇತತ್ಕೂಪೋದಸೇವನಾತ್ ॥ ೨೮ ॥
ತವಾಽಗ್ರತೋ ಮಮ ಜರಾ ಪಲಿತಂ ಚ ಯಥಾ ವಿಧಿ ।
ಏತತ್ಕೂಪೋದಪಾನೇನ ಕ್ಷಣಾನ್ನಷ್ಟಂ ನವೋಽಭವಂ ॥ ೨೯ ॥

---

ದಿಂದಲೂ ಪ್ರತಿಷ್ಠಿತವಾಗಿದ್ದಿತೆಂದು ತಿಳಿ. ನೀನು ಇವರ ಪ್ರತಿಷ್ಠೆಗೆ ಕೇವಲ ನಿಮಿತ್ತಮಾತ್ರನು.

೨೩. ಮಾನವನು ಈ ವೃದ್ಧಕಾಲೇಶ್ವರನ ದರ್ಶನ ಸ್ಪರ್ಶನ ಪೂಜನ ಮಾಹಾತ್ಮ್ಯಶ್ರವಣ ಮತ್ತು ಪ್ರಣಮನಾದಿಗಳಿಂದ ಸಮಸ್ತ ಇಷ್ಟಾರ್ಥವನ್ನೂ ಪಡೆಯುತ್ತಾನೆ.

೨೪. ಈ ಪ್ರಾಸಾದದ ಮುಂಗಡೆ ಇರುವ ಕಾಲೋದಕವೆಂಬ ಈ ಕೊಳವು ಸ್ನಾನಮಾತ್ರದಿಂದ ಮಾನವನ ಮುಪ್ಪನ್ನೂ ಇತರ ವ್ಯಾಧಿಗಳನ್ನೂ ನಿವಾರಣೆ ಮಾಡುತ್ತದೆ. ಅಲ್ಲದೆ ಇದರ ಜಲವನ್ನು ಪಾನಮಾಡುವುದರಿಂದ ಮಾನವನು ಮತ್ತೆ ಮಾತೃಸ್ತನ್ಯವನ್ನು ಪಾನಮಾಡುವುದಿಲ್ಲ. ಅವನು ಮುಕ್ತನೇ ಆಗುತ್ತಾನೆ.

೨೫. ಎಲೈ ದೊರೆಯೆ, ಈ ಕಾಲೋದಕಕೂಪದಲ್ಲಿ ಮಿಂದು ವೃದ್ಧಕಾಲೇಶ್ವರ ಲಿಂಗವನ್ನರ್ಚಿಸಿದ ಮಾನವನು ಒಂದು ವರ್ಷದಲ್ಲಿಯೆ ಸಿದ್ಧಿಯನ್ನು ಪಡೆದು ಸರ್ವಾಭೀಷ್ಟಗಳನ್ನೂ ಹೊಂದಿದ ಬಳಿಕ ಮೋಕ್ಷಸಿದ್ಧಿಯನ್ನು ಪಡೆಯುತ್ತಾನೆ.

೨೬—೨೮. ಈ ಕಾಲೋದಕಕೂಪದ ಜಲವನ್ನು ಪಾನಮಾಡುವುದರಿಂದಲೂ ಸ್ಪರ್ಶಮಾಡುವುದರಿಂದಲೂ ಕುಷ್ಠ, ವಿಸ್ಫೋಟ, ರಂಘಿಣಿ, ವಿಚರ್ಚಿಕೆ, ಅಗ್ನಿಮಾಂದ್ಯ, ಉದರಶೂಲೆ, ಮೇಹ, ಪ್ರವಾಹಿಕೆ, ಮೂತ್ರಕೃಚ್ಛ್ರ, ಉಪಾಮಾ, ಭೂತಜ್ವರ, ವಿಷಮಜ್ವರ ಮೊದಲಾದ ಸಕಲರೋಗಗಳೂ ನಿವಾರಣೆಯಾಗುವುವು.

೨೯—೩೦. ಈ ಕೂಪೋದಕಸ್ನಾನದಿಂದ ಒಂದು ಕ್ಷಣಕಾಲದಲ್ಲಿಯೆ ನೀನು ನೋಡುತ್ತಿರುವಂತೆ ನನ್ನ ಮುಪ್ಪು ನರೆಯೂ ಕಳೆದುಹೋಗಿ ಯುವಕನಾದೆನು.

ವೃದ್ಧಕಾಲೇಶ್ವರೇ ಲಿಂಗೇ ಸೇವಿತೇ ನ ದರಿದ್ರತಾ ।
ನೋಪಸರ್ಗಾ ನವಾ ರೋಗಾ ನ ಪಾಪಂ ನಾಽಘಜಂ ಫಲಂ ॥ ೮೦ ॥
ಉತ್ತರೇ ಕೃತ್ತಿವಾಸಸ್ಯ ವಾರಾಣಸ್ಯಾಂ ಪ್ರಯತ್ನತಃ ।
ವೃದ್ಧಕಾಲೇಶ್ವರಂ ಲಿಂಗಂ ದ್ರಷ್ಟವ್ಯಂ ಸಿದ್ಧಿಕಾಮುಕೈಃ ॥ ೮೧ ॥
ಇತ್ಯುಕ್ತ್ವಾ ತಂ ಮಹೀಪಾಲಂ ಹಸ್ತೇ ಧೃತ್ವಾ ತಪೋಧನಃ ।
ಸಾಽನಂಗಲೇಖಾರಾಜ್ಞೀಕಂ ತಸ್ಮಿಂಲ್ಲಿಂಗೇ ಲಯಂ ಯಯೌ ॥ ೮೨ ॥
ಮಹಾಕಾಲ ಮಹಾಕಾಲ ಮಹಾಕಾಲೇತಿ ಕೀರ್ತನಾತ್ ।
ಶತಧಾ ಮುಚ್ಯತೇ ಪಾಪೈರ್ನಾಽತ್ರ ಕಾರ್ಯಾ ವಿಚಾರಣಾ ॥ ೮೩ ॥
ಇತ್ಥಂ ಭವಿತ್ರೀ ತೇ ಮುಕ್ತಿಃ ಕೈಟಭಾರಾತಿದರ್ಶನಾತ್ ।
ಭೋಗಾನ್ಭುಕ್ತ್ವಾ ಬಹುವಿಧಾನ್ ವೈಕುಂಠನಗರೇ ಶುಭೇ ॥ ೮೪ ॥
ಇತಿ ಸಂಹೃಷ್ಟತನೂರುಹಃ ಸ ವಿಪ್ರೋ
ಭಗವತ್ತದ್ಗಣ ವಕ್ತ್ರತೋ ನಿಶಮ್ಯ ।
ಸ್ವಮುದರ್ಕಮಥಾಽರ್ಕಕೋಟಿರಮ್ಯಂ
ಹರಿಲೋಕಂ ಪರಿಲೋಕಯಾಂ ಚಕಾರ ॥ ೮೫ ॥

---

ವೃದ್ಧಕಾಲೇಶ್ವರನ ಸೇವೆಯಿಂದ ದಾರಿದ್ರ್ಯವೂ, ವಿಘ್ನಾದಿ ಭಯಗಳೂ, ರೋಗರುಜಿನಾದಿಗಳೂ, ಪಾಪಗಳೂ, ಅವುಗಳಿಂದುಂಟಾದ ಫಲಗಳೂ ಕ್ಷಯಿಸಿ ಹೋಗುವುವು.

೮೧. ಮೋಕ್ಷಸಿದ್ಧಿಯನ್ನಪೇಕ್ಷಿಸುವ ಮಾನವರು ಈ ವಾರಾಣಸಿಯಲ್ಲಿ ಕೃತ್ತಿವಾಸೇಶ್ವರನಿಗೆ ಉತ್ತರದಿಕ್ಕಿಗಿರುವ ವೃದ್ಧಕಾಲೇಶ್ವರಲಿಂಗವನ್ನು ಪ್ರಯತ್ನ ಪೂರ್ವಕವಾಗಿ ಸಂದರ್ಶಿಸಬೇಕು.

೮೨–೮೩. ಅಯ್ಯಾ ವಿಪ್ರನೆ, ಆ ತಪೋಧನನು ಮಹೀಪಾಲನಾಗಿರುವ ನಿನಗೆ ಈ ರೀತಿಯಾಗಿ ತಿಳಿಸಿದ ತರುವಾಯ, ಅನಂಗಲೇಖೆಯೊಡಗೂಡಿ ನಿನ್ನನ್ನು ಕೈಹಿಡಿದು ಕರೆದೊಯ್ದು ಆ ವೃದ್ಧಕಾಲೇಶ್ವರಲಿಂಗದಲ್ಲಿಯೆ ಲಯವನ್ನು ಪಡೆಯುತ್ತಾನೆ. ಮಹಾಕಾಲ ಎಂಬ ಪರಮೇಶ್ವರನಾಮವನ್ನು ಸತತವೂ ಕೀರ್ತಿಸುವುದರಿಂದ ಮಾನವನು ನೂರುನೂರು ಬಾರಿಗೂ ಪಾಪಗಳಿಂದ ಖಂಡಿತ ವಾಗಿಯೂ ಬಿಡುಗಡೆಹೊಂದುವನು.

೮೪. ಅಯ್ಯಾ ಶಿವಶರ್ಮನೆ, ಈ ಪ್ರಕಾರವಾಗಿ ನೀನು ವೈಕುಂಠವನ್ನು ಸೇರಿ ಕೈಟಭಾರಾತಿಯಾದ ಆ ಮಹಾವಿಷ್ಣುವನ್ನು ಸಂದರ್ಶಿಸಿ, ಮಂಗಳಕರವಾದ ಆ ವೈಕುಂಠನಗರದ ವಿವಿಧ ಭೋಗಗಳನ್ನು ಬಹುಕಾಲ ಭೋಗಿಸಿದ ತರುವಾಯ ಭವಿಷ್ಯತ್ತಿನಲ್ಲಿ ನಿನಗೆ ಈ ಪ್ರಕಾರವಾಗಿ ಮುಕ್ತಿಯು ಲಭಿಸುವುದು.

೮೫. ಹೀಗೆ ಆ ಶಿವಶರ್ಮದ್ವಿಜನು ವಿಷ್ಣುಪಾರ್ಷದರಿಂದ ತನ್ನ ಭವಿಷ್ಯತ್

ಮೈತ್ರಾವರುಣಿರುವಾಚ :—

ಲೋಪಾಮುದ್ರೇ ಸ ವಿಪ್ರೇಂದ್ರೋ ಭೋಗಾನ್ ಭುಕ್ತ್ವಾ ಮನೋರಮಾನ್।
ಮಾಯಾಪುರ್ಯಾಂ ಕೃತಪ್ರಾಣತ್ಯಾಗಪುಣ್ಯಬಲೇನ ಚ ॥ ೮೬ ॥
ವೈಕುಂಠಲೋಕಾದಾಗತ್ಯ ಪತ್ತನೇ ನಂದಿವರ್ಧನೇ ।
ಭೌಮಾನಿ ಭುಕ್ತ್ವಾ ಸೌಖ್ಯಾನಿ ಪುತ್ರಾನುತ್ಪಾದ್ಯ ಸುಂದರಾನ್ ॥ ೮೭ ॥
ತೇಷು ರಾಜ್ಯಂ ವಿನಿಕ್ಷಿಪ್ಯ ಪ್ರಾಪ್ಯ ವಾರಾಣಸೀಂ ಪುರೀಂ ।
ವಿಶ್ವೇಶ್ವರಂ ಸಮಾರಾಧ್ಯ ನಿರ್ವಾಣಪದಮಾಯಿವಾನ್ ॥ ೮೮ ॥
ಏತತ್ಪುಣ್ಯತಮಾಖ್ಯಾನಂ ವಿಪ್ರಸ್ಯ ಶಿವಶರ್ಮಣಃ ।
ಶ್ರುತ್ವಾ ಪಾಪವಿನಿರ್ಮುಕ್ತೋ ಜ್ಞಾನಂ ಪರಮಮೃಚ್ಛತಿ ॥ ೮೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಶಿವಶರ್ಮನಿರ್ವಾಣವರ್ಣನಂ"
ನಾಮ ಚತುರ್ವಿಂಶೋಽಧ್ಯಾಯಃ

---

ಕಥಾನಕವನ್ನು ಕೇಳಿ ಪುಳಕಾಂಕಿತಗಾತ್ರನಾಗಿ ಮುಂದುವರಿಯುತ್ತ ಕೋಟಿ ಸೂರ್ಯಪ್ರಕಾಶಮಾನವಾಗಿ ವಿರಾಜಿಸುತ್ತಿರುವ ಮನೋಹರವಾದ ವೈಕುಂಠ ಲೋಕವನ್ನು ಕಂಡನು.

೮೬–೮೮. ಅಗಸ್ತ್ಯನು ಹೇಳುತ್ತಾನೆ:— ಎಲೌ ಲೋಪಾಮುದ್ರೆಯೆ! ಆ ಶಿವಶರ್ಮದ್ವಿಜನು ಮಾಯಾಪುರಿಯಲ್ಲಿ ಮೃತಿಯೊಂದಿದ ಪುಣ್ಯಬಲದಿಂದ ಆ ವೈಕುಂಠಲೋಕದಲ್ಲಿ ಮನೋಹರವಾದ ಅಖಂಡಭೋಗಗಳನ್ನು ಅನುಭವಿಸಿದ ತರುವಾಯ ಅಲ್ಲಿಂದ ಭೂಲೋಕಕ್ಕೈತಂದು ನಂದಿವರ್ಧನಪಟ್ಟಣದಲ್ಲಿ ವೃದ್ಧ ಕಾಲರಾಜನಾಗಿ ಜನಿಸಿ ಭೂಲೋಕದ ಭೋಗಭಾಗ್ಯಗಳೆಲ್ಲವನ್ನೂ ಅನುಭವಿಸಿ ಸುಂದರರಾದ ಪುತ್ರರನ್ನು ಪಡೆದು ಅವರಿಗೆ ರಾಜ್ಯಭಾರವನ್ನೊಪ್ಪಿಸಿ ವಾರಾಣಸೀ ಪಟ್ಟಣವನ್ನು ಸೇರಿ ವಿಶ್ವೇಶ್ವರನನ್ನರ್ಚಿಸಿ ನಿರ್ವಾಣಪದವಿಯನ್ನು ಪಡೆದನು.

೮೯. ಶಿವಶರ್ಮದ್ವಿಜನ ಪುಣ್ಯತಮವಾದ ಈ ಆಖ್ಯಾನವನ್ನು ಆಲಿಸುವ ಮಾನವನು ಪಾಪವಿಮುಕ್ತನಾಗಿ ಮುಕ್ತಿಯನ್ನು ದೊರಕಿಸುವ ಉತ್ತಮಜ್ಞಾನ ವನ್ನು ಪಡೆಯುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಶಿವಶರ್ಮನಿರ್ವಾಣವರ್ಣನ"ವೆಂಬ
ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚವಿಂಶೋಽಧ್ಯಾಯಃ

### ಸ್ಕಂದಾಗಸ್ತ್ಯ ದರ್ಶನವರ್ಣನಂ

ವ್ಯಾಸ ಉವಾಚ:—

ಶೃಣು ಸೂತ ಪ್ರವಕ್ಷ್ಯಾಮಿ ಕಥಾಂ ಕಲಶಜನ್ಮನಃ ।
ಯಾಮಾಕರ್ಣ್ಯ ನರೋ ಭೂಯಾದ್ವಿರಜಾ ಜ್ಞಾನಭಾಜನಂ ॥ ೧ ॥
ಗಿರಿಂ ಪ್ರದಕ್ಷಿಣೀಕೃತ್ಯ ಶ್ರೀಸಂಜ್ಞಂ ಕಲಶೋದ್ಭವಃ ।
ಸಪತ್ನೀಕೋ ದದರ್ಶಾಽಥ ರಮ್ಯಂ ಸ್ಕಂದವನಂ ಮಹತ್ ॥ ೨ ॥
ಸರ್ವರ್ತುಕುಸುಮಾಢ್ಯಂ ಚ ರಸವತ್ಫಲಪಾದಪಂ ।
ಸುಸೇವ್ಯಕಂದಮೂಲಾಢ್ಯಂ ಸುವಲ್ಕಲಮಹೀರುಹಂ ॥ ೩ ॥
ನಿರ್ವೀತಶ್ವಾಪದಗಣಂ ಸಸರಿತ್ಪಲ್ವಲಾವೃತಂ ।
ಸ್ವಚ್ಛಗಂಭೀರಕಾಸಾರಂ ಸಾರಂ ಸರ್ವಭುವಃ ಪರಂ ॥ ೪ ॥
ನಾನಾಪತತ್ರಿಸಂಘುಷ್ಟಂ ನಾನಾಮುನಿಜನೋಷಿತಂ ।
ತಪಃಸಂಕೇತನಿಲಯಮಿವೈಕಂ ಸಂಪದಾಂ ಪದಂ ॥ ೫ ॥

---

### ಕನ್ನಡದ ಅನುವಾದ

#### ಸ್ಕಂದಾಗಸ್ತ್ಯದರ್ಶನವರ್ಣನ

೧. ವ್ಯಾಸನು ಹೇಳುತ್ತಾನೆ:—ಎಲೈ ಸೂತನೆ, ಈಗ ಕುಂಭಸಂಭವನಾದ ಅಗಸ್ತ್ಯನ ಕಥೆಯನ್ನು ನಿನಗೆ ತಿಳಿಯಹೇಳುತ್ತೇನೆ ಕೇಳು. ಇದನ್ನು ಕೇಳುವುದರಿಂದ ಮಾನವನು ಕೇವಲ ಸಾತ್ತ್ವಿಕನಾಗಿ ಜ್ಞಾನವನ್ನು ಪಡೆಯುತ್ತಾನೆ.

೨. ಆ ಕಲಶೋದ್ಭವನು ಆ ತರುವಾಯ ಶ್ರೀಶೈಲವನ್ನು ಸಪತ್ನೀಕನಾಗಿ ಪ್ರದಕ್ಷಿಣೆಗೈದು ಸುಂದರವಾದ ಸ್ಕಂದಮಹಾವನವನ್ನು ನೋಡುವವನಾದನು.

೩. ಆ ವನವಾದರೊ ಸಮಸ್ತ ಋತುಗಳ ಕುಸುಮಸಮೃದ್ಧಿಯಿಂದೊಡಗೂಡಿ ರಸವತ್ತಾದ ಫಲವನ್ನುನೀಡುವ ಪಾದಪಗಳಿಂದೊಪ್ಪಿ ಕಂದಮೂಲಗಳಿಂದಲೂ ನಾರುಡೆಯನ್ನು ನೀಡುವ ವೃಕ್ಷವಿಶೇಷಗಳಿಂದಲೂ ತುಂಬಿ ತುಳುಕುತ್ತಿದ್ದಿತು.

೪. ಹಿಂಸ್ರಗಳಾದ ದುಷ್ಟಮೃಗಗಳಿಂದ ದೂರವಾಗಿ, ಕೊಳ ಕುಂಟೆಗಳಿಂದಲೂ, ನಿರ್ಮಲವೂ, ಆಳವೂ ಆಗ ಜಲಸಮೃದ್ಧಿಯನ್ನೊಳಗೊಂಡ ಸರಸ್ಸುಗಳಿಂದುಪರಂಜಿಸಿ, ಸಮಸ್ತಭೂಮಂಡಲದ ಉತ್ಕೃಷ್ಟವಾದ ಸಾರಸರ್ವಸ್ವಭೂಮಿಯೆನಿಸಿದ್ದಿತು.

೫. ಬಗೆಬಗೆಯ ಪಕ್ಷಿಸಂಕುಲಗಳಿಂದ ಸಂಸೇವಿತವಾಗಿ ಹಲವು ಬಗೆಯ

**ಲೋಹಿತೋ ನಾಮ ತತ್ರಾಽಸ್ತಿ ಗಿರಿಃ ಸ್ವರ್ಣಗಿರಿಪ್ರಭಃ ।**
**ಸುಕಂದರಪ್ರಸ್ರವಣಃ ಸ್ವಸಾನುಶಿಖರಪ್ರಭಃ ॥ ೬ ॥**
**ಕೈಲಾಸಸ್ಯೈಕಶಕಲಂ ಕರ್ಮಭೂಮಾವಿಹಾಗತಂ ।**
**ತಪಸ್ತಪ್ತುಮಿವ ಪ್ರೋಚ್ಚೈರ್ನಾನಾಶ್ಚರ್ಯಸಮನ್ವಿತಂ ॥ ೭ ॥**
**ತತ್ರಾಽದ್ರಾಕ್ಷೀನ್ಮುನಿಶ್ರೇಷ್ಠೋಽಗಸ್ತ್ಯಃ ಸಾಕ್ಷಾತ್ ಷಡಾನನಂ ।**
**ಪ್ರಣಮ್ಯ ದಂಡವದ್ಭೂಮೌ ಸಪತ್ನೀಕೋ ಮಹಾತಪಾಃ ॥ ೮ ॥**
**ತುಷ್ಟಾವ ಗಿರಿಜಾಸೂನುಂ ಸೂಕ್ತೈಃ ಶ್ರುತಿಸಮುದ್ಭವೈಃ ।**
**ತಥಾ ಸ್ವಕೃತಯಾ ಸ್ತುತ್ಯಾ ಪ್ರಬದ್ಧಕರಸಂಪುಟಃ ॥ ೯ ॥**

**ಅಗಸ್ತಿರುವಾಚ :—**

**ನಮೋಽಸ್ತು ವೃಂದಾರಕವೃಂದವಂದ್ಯ**
**ಪಾದಾಽರವಿಂದಾಯ ಸುಧಾಕರಾಯ ।**
**ಷಡಾನನಾಯಾಽಮಿತವಿಕ್ರಮಾಯ**
**ಗೌರೀಹೃದಾನಂದಸಮುದ್ಭವಾಯ ॥ ೧೦ ॥**

---

ತಪಸ್ಸುಗಳಲ್ಲಿ ತೊಡಗಿರುವ ಮುನಿಜನರಿಂದ ನಿಬಿಡವಾಗಿ ತಪಸ್ಸಿನ ಸಂಕೇತಕ್ಕೆ ನೆಲೆಮನೆಯೆನಿಸಿದ್ದಿತಲ್ಲದೆ ಸಕಲಸಂಪತ್ತಿಗೂ ನೆಲೆಯಾಗಿದ್ದಿತು.

೬. ಅಲ್ಲಿ ಅನೇಕ ಗುಹೆಗಳಿಂದಲೂ, ಝರಿಗಳಿಂದಲೂ **ಕೂಡಿ ಶಿಖರಗಳ** ಮತ್ತು ತಪ್ಪಲುಗಳ ಕಾಂತಿಯಿಂದುಪರಂಜಿಸಿ ಸ್ವರ್ಣಗಿರಿಯಾದ ಸುಮೇರು ಪರ್ವತದಂತಿರುವ ಲೋಹಿತವೆಂಬ ಗಿರಿವರವಿರುವುದು.

೭. ಅದು ಕೈಲಾಸಪರ್ವತದ ಒಂದು ಭಾಗವೇ ಈ ಕರ್ಮಭೂಮಿಗೆ ತಪಸ್ಸಿಗಾಗಿ ಬಂದಿರುವುದೊ ಎಂಬಂತೆ ಅನೇಕ ಆಶ್ಚರ್ಯಗಳಿಂದ ಒಪ್ಪಿ ಮೆರೆಯುತ್ತಿರುವುದು.

೮–೯. ಅಲ್ಲಿಯೇ ಮುನಿಶ್ರೇಷ್ಠನಾದ ಅಗಸ್ತ್ಯನು ಸಾಕ್ಷಾತ್ ಷಣ್ಮುಖ ಸ್ವಾಮಿಯನ್ನು ಕಂಡನು. ಒಡನೆಯೆ ಪತ್ನೀಸಮೇತನಾದ ಆ ಮುನಿಯು ಆ ಗುಹನಿಗೆ ಸಾಷ್ಟಾಂಗದಂಡಪ್ರಣಾಮವನ್ನು ಮಾಡಿ ಆ ಗಿರಿಜಾಕುಮಾರನನ್ನು ಶ್ರುತ್ಯುಕ್ತಗಳಾದ ಸೂಕ್ತಿಗಳಿಂದಲೂ, ತಾನೇ ರಚಿಸಿದ ಕೃತಿಗಳಿಂದಲೂ ಬದ್ಧಾಂಜಲಿಪುಟನಾಗಿ ಸ್ತುತಿಸಿ ಸಂತೋಷಗೊಳಿಸಿದನು.

೧೦. ಅಗಸ್ತ್ಯನು ಸ್ತುತಿಸುತ್ತಾನೆ:—ಸಮಸ್ತದೇವತೆಗಳಿಂದಲೂ **ನಮಸ್ಕೃತ**ವಾದ ಪಾದಕಮಲಗಳುಳ್ಳವನಾಗಿ ಪರಮಾನಂದಸ್ವರೂಪನಾಗಿಯೂ, ಅರ್ರೋಗನಾಗಿಯೂ, ಅಪಾರ ಪರಾಕ್ರಮವುಳ್ಳವನಾಗಿಯೂ, ಪರಮಾನಂದಸ್ವರೂಪನಾಗಿಯೂ, ಮಹೇಶ್ವರನ ಮಡದಿಯಾದ ಪಾರ್ವತಿಯ ಹೃದಯದ ಆನಂದಕ್ಕೆ **ಕಾರಣನಾಗಿಯೂ ಇರುವ ಓ ಸ್ವಾಮಿಯೆ, ನಿನಗೆ ನಮಸ್ಕಾರವಿರಲಿ.**

ನಮೋಽಸ್ತು ತುಭ್ಯಂ ಪ್ರಣತಾರ್ತಿಹಂತ್ರೇ
ಕರ್ತ್ರೇ ಸಮಸ್ತಸ್ಯ ಮನೋರಥಾನಾಂ ।
ದಾತ್ರೇ ರಥಾನಾಂ ಪರತಾರಕಸ್ಯ
ಹಂತ್ರೇ ಪ್ರಚಂಡಾಽಸುರತಾರಕಸ್ಯ ॥ ೧೧ ॥
ಅಮೂರ್ತಮೂರ್ತಾಯ ಸಹಸ್ರಮೂರ್ತಯೇ
ಗುಣಾಯ ಗುಣ್ಯಾಯ ಪರಾತ್ಪರಾಯ ।
ಅಪಾರಪಾರಾಯ ಪರಾಽಪರಾಯ
ನಮೋಽಸ್ತು ತುಭ್ಯಂ ಶಿಖಿವಾಹನಾಯ ॥ ೧೨ ॥
ನಮೋಽಸ್ತು ತೇ ಬ್ರಹ್ಮವಿದಾಂ ವರಾಯ
ದಿಗಂಬರಾಯಾಽಂಬರಸಂಸ್ಥಿತಾಯ ।
ಹಿರಣ್ಯವರ್ಣಾಯ ಹಿರಣ್ಯಬಾಹವೇ
ನಮೋ ಹಿರಣ್ಯಾಯ ಹಿರಣ್ಯರೇತಸೇ ॥ ೧೩ ॥
ತಪಃಸ್ವರೂಪಾಯ ತಪೋಧನಾಯ
ತಪಃಫಲಾನಾಂ ಪ್ರತಿಪಾದಕಾಯ ।
ಸದಾ ಕುಮಾರಾಯ ಹಿ ಮಾರಮಾರಿಣೇ
ತೃಣೀಕೃತೈಶ್ವರ್ಯವಿರಾಗಿಣೇ ನಮಃ ॥ ೧೪ ॥

---

೧೧. ಶರಣಾಗತರ ದುಃಖಗಳನ್ನು ಕಳೆಯುವವನಾಗಿ, ಭಕ್ತವೃಂದದ ಮನೋರಥಗಳೆಲ್ಲವನ್ನೂ ಈಡೇರಿಸುವವನಾಗಿ, ಇತರರನ್ನು ವಂಚಿಸುವ ದುರಾತ್ಮರ ಮನೋರಥಗಳನ್ನು ಖಂಡಿಸುವವನೂ, ತಾರಕಾಸುರವಿಧ್ವಂಸಿಯೂ ಆದ ಎಲೈ ಕುಮಾರಸ್ವಾಮಿಯೆ, ಪ್ರಣವಮಂತ್ರಸ್ವರೂಪಿಯಾಗಿ ನಂಬಿದ ಭಕ್ತರಿಗೂ ಆ ಮಂತ್ರರಾಜವನ್ನೇ ಅನುಗ್ರಹಿಸುವವನಾದ ನಿನಗೆ ನಮಸ್ಕಾರವು.

೧೨. ಅಮೂರ್ತಗಳಾದ ವಾಯು ಆಕಾಶಗಳ, ಮೂರ್ತಗಳಾದ ಪೃಥಿವಿ ಅಪ್ಪು ತೇಜಸ್ಸುಗಳ ಸ್ವರೂಪನಾಗಿ ಪ್ರಧಾನಕ್ಕಿಂತಲೂ ಅತ್ಯಂತ ಶ್ರೇಷ್ಠನೂ ಅಪರಿಚ್ಛಿನ್ನನೂ, ಮಹಾಮಾಹಾತ್ಮ್ಯಯುಕ್ತನೂ ಮಯೂರವಾಹನನೂ ಆದ ನಿನಗೆ ನಮೋ ನಮಃ!

೧೩. ಬ್ರಹ್ಮವಿತ್ತುಗಳಲ್ಲೆಲ್ಲ ಉತ್ತಮೋತ್ತಮನೆನಿಸಿ ದಿಗ್ವಾಸನಾಗಿ, ಅಂಬರಮಧ್ಯದಲ್ಲಿಯೆ ನೆಲಸಿದವನಾಗಿ, ಸ್ವರ್ಣಕಾಂತಿಯನ್ನು ತಳೆದು ಸ್ವರ್ಣಬಾಹುಗಳುಳ್ಳವನಾಗಿ, ಸ್ವರ್ಣವರ್ಣಸಮನ್ವಿತನಾಗಿ ಸ್ವರ್ಣರೇತನೆನಿಸಿದ ನಿನಗೆ ನಮೋ ನಮಃ.

೧೪. ಸಾಕ್ಷಾತ್ ತಪಸ್ಸ್ವರೂಪಿಯೇ ಆಗಿ ಸ್ವಯಂತಪೋಧನನೆನಿಸಿ, ತಪೋಧನರ ತಪಸ್ಸಿಗೆ ಫಲಗಳನ್ನನುಗ್ರಹಿಸುವವನಾಗಿ, ಯಾವಾಗಲೂ ಐದು

ನಮೋಽಸ್ತು ತುಭ್ಯಂ ಶರಜನ್ಮನೇ ವಿಭೋ
ಪ್ರಭಾತಸೂರ್ಯಾರುಣದಂತಪಂಕ್ತಯೇ ।
ಬಾಲಾಯ ಚಾಬಾಲಪರಾಕ್ರಮಾಯ
ಷಾಣ್ಮಾತುರಾಯಾಲಮನಾತುರಾಯ ॥ ೧೫ ॥
ಮೀಢುಷ್ಟಮಾಯೋತ್ತರಮೀಢುಷೇ ನಮೋ
ನಮೋ ಗಣಾನಾಂ ಪತಯೇಽಗಣಾಯ ।
ನಮೋಽಸ್ತು ತೇ ಜನ್ಮಜರಾತಿಗಾಯ
ನಮೋ ವಿಶಾಖಾಯ ಸುಶಕ್ತಿಪಾಣಯೇ ॥ ೧೬ ॥
ಸರ್ವಸ್ಯ ನಾಥಸ್ಯ ಕುಮಾರಕಾಯ
ಕ್ರೌಂಚಾರಯೇ ತಾರಕಮಾರಕಾಯ ।
ಸ್ವಾಹೇಯ ಗಾಂಗೇಯ ಚ ಕಾರ್ತಿಕೇಯ
ಶೈವೇಯ ತುಭ್ಯಂ ಸತತಂ ನಮೋಽಸ್ತು ॥ ೧೭ ॥
ಇತ್ಥಂ ಪರಿಷ್ಟುತ್ಯ ಸ ಕಾರ್ತಿಕೇಯಂ
ನಮೋ ನಮಸ್ತ್ವಿತ್ಯಭಿಭಾಷಮಾಣಃ ।
ದ್ವಿಸ್ತ್ರಿಃ ಪರಿಕ್ರಮ್ಯ ಪುರೋ ನಿವೇಶ
ಸ್ಥಿತೋ ಮುನೀಶೋಽಪವಿಶೇತಿ ಚೋಕ್ತಃ ॥ ೧೮ ॥

---

ವರ್ಷಗಳ ಬಾಲಕನಾಗಿಯೆ ವಿರಾಜಿಸುತ್ತ ಮನ್ಮಥನನ್ನು ಜಯಿಸಿ ಅಖಂಡೈಶ್ವರ್ಯವನ್ನೂ ಹುಲ್ಲುಕಡ್ಡಿಯಂತೆ ಭಾವಿಸುವ ವೈರಾಗ್ಯಸಂಪನ್ನನಾದ ನಿನಗೆ ನಮಸ್ಕಾರವು.

೧೫. ಎಲೈ ಪ್ರಭುವೆ, ಶರವಣದಲ್ಲಿ ಜನ್ಮವೆತ್ತಿದವನೂ ಉದ್ಯತ್ ಸೂರ್ಯನಿಗೆ ಸಮಾನವಾದ ಅರುಣದಂತಪಂಕ್ತಿಯುಳ್ಳವನೂ ಕೇವಲ ಬಾಲಕನೂ ಅಪಾರ ಪರಾಕ್ರಮಶಾಲಿಯೂ ಷಟ್‌ಕೃತ್ತಿಕೆಯರೇ ತಾಯಿಯರಾಗಿರುವವನೂ ಅತ್ಯಂತ ದಕ್ಷನೂ ಆದ ನಿನಗೆ ನಮೋ ನಮಃ!

೧೬. ಫಲಪ್ರದರಾದವರಲ್ಲಿ ಅತ್ಯುತ್ತಮನೆನಿಸಿ ಭವಿಷ್ಯತ್ಫಲಗಳನ್ನೂ ಅನುಗ್ರಹಿಸುವವನಾಗಿ, ಶಿವಗಣಗಳಿಗೆಲ್ಲ ಒಡೆಯನಾಗಿ ದೇವಸೇನಾಪತಿಯೂ, ಜಗತ್ಪ್ರಭುವೂ, ಹುಟ್ಟು ಮುಪ್ಪು ಸಾವುಗಳಿಗೆ ಸಿಲುಕದವನೂ, ವಿಶಾಖನೂ ಶಕ್ತ್ಯಾಯುಧವನ್ನು ಕೈಯಲ್ಲಿ ಧರಿಸಿದವನೂ ಆದ ಎಲೈ ಷಣ್ಮುಖನೆ, ನಿನಗೆ ನಮಸ್ಕಾರವು.

೧೭. ಸರ್ವೇಶ್ವರನಾದ ಪರಮೇಶ್ವರನ ಕುಮಾರನೂ ಕ್ರೌಂಚಶತ್ರುವೂ ತಾರಕವಿಧ್ವಂಸಿಯೂ ಸ್ವಾಹಾ ಗಂಗಾ ಷಟ್‌ಕೃತ್ತಿಕೆಯರು ಪಾರ್ವತಿ ಎಂಬಿವರ ಕುಮಾರನೆನಿಸಿದವನೂ ಆದ ನಿನಗೆ ಈ ಸತತ ನಮಸ್ಕಾರವಾಗಿರಲಿ.

೧೮. ಎಲೈ ಸೂತನೆ, ಆ ಅಗಸ್ತ್ಯಮುನೀಶ್ವರನು ಈ ಪ್ರಕಾರವಾಗಿ

**ಕಾರ್ತಿಕೇಯ ಉವಾಚ :—**

**ಕ್ಷೇಮೋಽಸ್ತಿ ಕುಂಭಜ ಮುನೇ ತ್ರಿದಶೈಕಸಹಾಯಕೃತ್ ।**
**ಜಾನೇ ತ್ವಾಮಿಹ ಸಂಪ್ರಾಪ್ತಂ ತಥಾ ವಿಂಧ್ಯಾಚಲೋನ್ನತಿಂ ॥ ೧೯ ॥**
**ಅವಿಮುಕ್ತೇ ಮಹಾಕ್ಷೇತ್ರೇ ಕ್ಷೇಮಂ ತ್ರ್ಯಕ್ಷೇಣ ರಕ್ಷಿತೇ ।**
**ಯತ್ರ ಕ್ಷೀಣಾಯುಷಾಂ ಸಾಕ್ಷಾದ್ವಿರೂಪಾಕ್ಷೋಽಸ್ತಿ ಮೋಕ್ಷದಃ ॥ ೨೦ ॥**
**ಭೂರ್ಭುವಃ ಸ್ವಸ್ತಲೇ ನಾಽಪಿ ನ ಪಾತಾಲತಲೇಮಲಂ ।**
**ನೋರ್ಧ್ವಲೋಕೇ ಮಯಾ ದೃಷ್ಟಂ ತಾದೃಕ್ ಕ್ಷೇತ್ರಂ ಕ್ವಚಿನ್ಮುನೇ ॥**
**ಅಹಮೇಕಚರೋಽಪ್ಯತ್ರ ತತ್ಕ್ಷೇತ್ರಪ್ರಾಪ್ತಯೇ ಮುನೇ ।**
**ತಪ್ಯೇ ತಪಾಂಸಿ ನಾಽದ್ಯಾಽಪಿ ಫಲೇಯುರ್ಮೇ ಮನೋರಥಾಃ ॥ ೨೨ ॥**
**ನ ತತ್ಪುಣ್ಯೈರ್ನತದ್ದಾನೈರ್ನ ತಪೋಭಿರ್ನ ತಜ್ಜಪೈಃ ।**
**ನ ಲಭ್ಯಂ ವಿವಿಧೈರ್ಯಜ್ಞೈರ್ಲಭ್ಯಮೈಶಾದನುಗ್ರಹಾತ್ ॥ ೨೩ ॥**

---

ಕಾರ್ತಿಕೇಯನನ್ನು ಸ್ತುತಿಸಿ ನಮೋನಮಃ ಎಂದು ಅಡಿಗಡಿಗೂ ಹೇಳುತ್ತ, ಎರಡು ಮೂರಾವೃತ್ತಿ ಆತನಿಗೆ ಪ್ರದಕ್ಷಿಣವನ್ನು ಮಾಡಿದ ತರುವಾಯ, ಕುಳಿತು ಕೊಳ್ಳಲು ಆ ಸ್ವಾಮಿಯಿಂದ ಆಜ್ಞಪ್ತನಾಗಿ ಅವನ ಮುಂಗಡೆಯೇ ಕುಳಿತು ಕೊಂಡನು.

೧೯. ಕಾರ್ತಿಕೇಯನು ಹೇಳುತ್ತಾನೆ:— "ಅಯ್ಯಾ, ಕುಂಭೋದ್ಭವ ಮುನಿಯೆ, ನಿನಗೆ ಕ್ಷೇಮವೆ? ನೀನು ದೇವತೆಗಳಿಗೆ ಸಹಾಯವನ್ನು ಮಾಡು ವವನಾಗಿ ಇಲ್ಲಿಗೈತಂದುದನ್ನು ನಾನು ಬಲ್ಲೆ. ಅಂತೆಯೆ, ವಿಂಧ್ಯಪರ್ವತವು ವರ್ಧಿಸಿದುದನ್ನೂ ಬಲ್ಲೆನು.

೨೦. ತ್ರಿಣೇತ್ರನಾದ ಸಾಕ್ಷಾತ್ ಪರಮೇಶ್ವರನಿಂದ ಸುರಕ್ಷಿತನಾದ ಕಾಶೀ ಕ್ಷೇತ್ರದಲ್ಲಿ ಎಲ್ಲವೂ ಕ್ಷೇಮವೆ ಆಗಿರುವುದು. ಅಲ್ಲಿ ಮೃತಿಗೊಂಡವರಿಗೆಲ್ಲ ಸಾಕ್ಷಾತ್ ವಿರೂಪಾಕ್ಷನೇ ಮೋಕ್ಷದಾಯಕನಾಗಿರುವನಷ್ಟೆ.

೨೧. ಎಲೈ ಮುನಿಯೆ, ಅಧೋಭಾಗದಲ್ಲಿರುವ ಅತಲವಿತಲಾದಿ ಸಪ್ತಲೋಕ ಗಳಲ್ಲಿಯಾಗಲಿ, ಭೂರ್ಭುವರಾದಿ ಸಪ್ತ ಊರ್ಧ್ವಲೋಕಗಳಲ್ಲಿಯಾಗಲಿ ಇಂಥ ಪವಿತ್ರವಾದ ಕ್ಷೇತ್ರವನ್ನು ನಾನು ನೋಡಿರುವುದಿಲ್ಲ.

೨೨. ನಾನು ಈ ಅರಣ್ಯದಲ್ಲಿ ಒಬ್ಬೊಂಟಿಗನಾಗಿ ಕುಳಿತು ಆ ಕ್ಷೇತ್ರ ಪ್ರಾಪ್ತಿಗೋಸ್ಕರವಾಗಿಯೆ ಇಂದಿಗೂ ತಪಸ್ಸನ್ನಾಚರಿಸುತ್ತಿರುವೆನು. ಆದರೂ ನನ್ನ ಮನೋರಥವು ಈಡೇರಿರುವುದಿಲ್ಲ.

೨೩. ಪುಣ್ಯಕರ್ಮಗಳಿಂದಾಗಲಿ, ಉತ್ತಮ ದಾನಗಳಿಂದಾಗಲಿ, ವಿವಿಧ ತಪಸ್ಸುಗಳಿಂದಾಗಲಿ, ಜಪಗಳಿಂದಲೂ ವಿವಿಧ ಯಜ್ಞಗಳಿಂದಲೇ ಆಗಲಿ ಆ ಕ್ಷೇತ್ರವು ಯಾರಿಗೂ ಲಭ್ಯವಾಗುವುದಿಲ್ಲ. ಅದಕ್ಕೆ ಈಶ್ವರಾನುಗ್ರಹವೇ ಬೇಕು.

ಈಶ್ವರಾಽನುಗ್ರಹಾದೇವ ಕಾಶೀವಾಸಃ ಸುದುರ್ಲಭಃ ।
ಸುಲಭಃ ಸ್ಯಾನ್ಮನೇ ನೂನಂ ನ ವೈ ಸುಕೃತಕೋಟಿಭಿಃ ॥ ೨೪ ॥
ಅನ್ಯೈವ ಕಾಚಿತ್ಸಾ ಸೃಷ್ಟಿರ್ವಿಧಾತುರ್ಯಾಽತಿರೇಕಿಣೀ ।
ನ ತತ್ಕ್ಷೇತ್ರಗುಣಾನ್ವಕ್ತುಮೀಶ್ವರೋಽಪೀಶ್ವರೋ ಯತಃ ॥ ೨೫ ॥
ಅಹೋ ಮತೇಃ ಸುದೌರ್ಬಲ್ಯಮಹೋ ಭಾಗ್ಯಸ್ಯ ದೌರ್ವಿಧಂ ।
ಅಹೋ ಮೋಹಸ್ಯ ಮಾಹಾತ್ಮ್ಯಂ ಯತ್ಕಾಶೀಹ ನ ಸೇವ್ಯತೇ ॥ ೨೬ ॥
ಶರೀರಂ ಜೀರ್ಯತೇ ನಿತ್ಯಂ ಸಂಜೀರ್ಯಂತೀಂದ್ರಿಯಾಣ್ಯಪಿ ।
ಆಯುರ್ಮೃಗೋ ಮೃಗಯುನಾ ಕೃತಲಕ್ಷ್ಯೋ ಹಿ ಮೃತ್ಯುನಾ ॥ ೨೭ ॥
ಸಾಪದಂ ಸಂಪದಂ ಜ್ಞಾತ್ವಾ ಸಾಽಪಾಯಂ ಕಾಯಮುಚ್ಚಕೈಃ ।
ಚಪಲಾಚಪಲಂ ಚಾಯುರ್ಜ್ಞಾತ್ವಾ ಕಾಶೀಂ ಸಮಾಶ್ರಯೇತ್ ॥ ೨೮ ॥
ಯಾವನ್ನೈತ್ಯಾಯುಷಶ್ಶಾಂತಸ್ತಾವತ್ಕಾಶೀ ನ ಮುಚ್ಯತೇ ।
ಕಾಲಃ ಕಲಾಲವಸ್ಯಾಽಪಿ ಸಂಖ್ಯಾತುಂ ನೈವ ವಿಸ್ಮರೇತ್ ॥ ೨೯ ॥
ಜರಾನಿಕಟನಿಕ್ಷಿಪ್ತಾ ಬಾಧಂತೇ ವ್ಯಾಧಯೋ ಭೃಶಂ ।
ತಥಾಽಪಿ ದೇಹೋ ಸಾನೇಹೋ ನಾಽಹೋ ಕಾಶೀಂ ಸಮೀಹತೇ॥ ೩೦ ॥

---

೨೪. ಈಶ್ವರಾನುಗ್ರಹದಿಂದಲೇ ಮಹಾ ದುರ್ಲಭವಾದ ಕಾಶೀವಾಸವು ಸುಲಭವಾಗುವುದಾಗಲಿ ಸುಕೃತಕೋಟಿಗಳಿಂದಲೂ ಆಗುವುದಿಲ್ಲವೆಂಬುದು ದಿಟವು.

೨೫. ಆ ಕ್ಷೇತ್ರವು ಬ್ರಹ್ಮಸೃಷ್ಟಿಗಿಂತಲೂ ವಿಲಕ್ಷಣವಾದುದು. ಆ ಕ್ಷೇತ್ರದ ಗುಣಗಳನ್ನು ಹೇಳಲು ಸಾಕ್ಷಾದೀಶ್ವರನೇ ಸಮರ್ಥನಾಗಿರುವುದಿಲ್ಲ.

೨೬. ಕಾಶೀಕ್ಷೇತ್ರವನ್ನು ಸೇವಿಸದಿದ್ದ ಮೇಲೆ ನಮ್ಮ ಬುದ್ಧಿಯ ದುರ್ಬಲತೆಯನ್ನೂ, ದೌರ್ಭಾಗ್ಯವನ್ನೂ, ಅಜ್ಞಾನದ ಮಹಿಮೆಯನ್ನೂ ಎಷ್ಟೆಂದು ಹೇಳೋಣ.

೨೭. ಶರೀರವು ಜರೆಯನ್ನೈದುತ್ತದೆ. ಇಂದ್ರಿಯಗಳು ಪ್ರತಿನಿತ್ಯವೂ ಕುಗ್ಗಿ ಹೋಗುತ್ತವೆ. ಆಯುಸ್ಸೆಂಬ ಮೃಗವನ್ನು ಮೃತ್ಯುವೆಂಬ ಬೇಡನು ತನ್ನ ಬಾಣಕ್ಕೆ ಲಕ್ಷ್ಯವನ್ನಾಗಿಸುತ್ತಾನೆ.

೨೮–೨೯. ಈ ಲೋಕದ ಸಂಪತ್ತುಗಳೆಲ್ಲವೂ ವಿಪತ್ತುಗಳೊಡಗೂಡಿದುವೇ ಎಂದು ಬಗೆದು ಶರೀರವು ಅಪಾಯಕ್ಕೊಳಗಾಗತಕ್ಕುದೆಂದು ತಿಳಿದು, ಆಯುಸ್ಸು ಚಪಲಾತಿಚಪಲವೆಂದರಿತು ಪ್ರತಿ ಮಾನವನೂ ಕಾಶೀಕ್ಷೇತ್ರವನ್ನು ಆಶ್ರಯಿಸತಕ್ಕದ್ದು. ಆಯುಸ್ಸು ಕಳೆದುಹೋಗುವವರೆಗೂ ಕಾಶೀಕ್ಷೇತ್ರವನ್ನು ತೊರೆಯದಿದ್ದಲ್ಲಿ ಯಮನು ಒಂದು ಲವವನ್ನೂ ಎಣಿಸಲು ಸಮರ್ಥನಾಗುವುದಿಲ್ಲ.

೩೦. ಜರೆಯು ಸಮೀಪಿಸಿದೊಡನೆ ಅನೇಕ ವ್ಯಾಧಿಗಳು ಶರೀರವನ್ನು

**ತೀರ್ಥಸ್ನಾನೇನ ಜಪ್ಯೇನ ಪರೋಪಕರಣೋಕ್ತಿಭಿಃ ।**
**ವಿನಾಽರ್ಥಂ ಲಭ್ಯತೇ ಧರ್ಮೋ ಧರ್ಮಾದರ್ಥಃ ಸ್ವಯಂ ಭವೇತ್ ॥ ೩೧ ॥**
**ವಿನೈವಾರ್ಥಾರ್ಜನೋಪಾಯಂ ಧರ್ಮಾದರ್ಥೋ ಭವೇದ್ಧ್ರುವಂ ।**
**ಅತೋಽರ್ಥಚಿಂತಾಮುತ್ಸೃಜ್ಯ ಧರ್ಮಮೇಕಂ ಸಮಾಶ್ರಯೇತ್ ॥ ೩೨ ॥**
**ಧರ್ಮಾದರ್ಥೋಽರ್ಥತಃ ಕಾಮಃ ಕಾಮಾತ್ಸರ್ವಸುಖೋದಯಃ ।**
**ಸ್ವರ್ಗೋಽಪಿ ಸುಲಭೋ ಧರ್ಮಾತ್ಕಾಶೀಕಾ ದುರ್ಲಭಾ ಪರಂ ॥ ೩೩ ॥**
**ಉಪಾಯತ್ರಯಮೇವಾತ್ರ ಸ್ಥಾಣುರ್ನಿರ್ವಾಣಕಾರಣಂ ।**
**ಶರ್ವಾಣ್ಯಗ್ರೇ ಬಭಾಣಾದ್ಧಾ ಪರಿನಿರ್ಣೀಯ ಸರ್ವತಃ ॥ ೩೪ ॥**
**ಪೂರ್ವಂ ಪಾಶುಪತೋ ಯೋಗಸ್ತತಸ್ತೀರ್ಥಂ ಸಿತಾಽಸಿತಂ ।**
**ತತೋಽಪ್ಯೇಕಮನಾಯಾಸಮವಿಮುಕ್ತಂ ವಿಮುಕ್ತಿದಂ ॥ ೩೫ ॥**

---

ಬಾಧಿಸತೊಡಗುತ್ತವೆ. ಆದರೂ ಈ ದೇಹವು ಅನೇಕ ವ್ಯಾಪಾರಗಳಲ್ಲಿ ಆಸಕ್ತವಾಗುವುದಾಗಲಿ ಕಾಶೀಕ್ಷೇತ್ರವನ್ನು ಅಪೇಕ್ಷಿಸುವುದಿಲ್ಲ. ಇದು ದುಃಖಕರವಾದ ವಿಷಯವೇ ಸರಿ.

೩೧. ತೀರ್ಥಸ್ನಾನದಿಂದಲೂ, ಮಂತ್ರಜಪದಿಂದಲೂ, ಇತರರಿಗೆ ಉಪಕಾರ ಮಾಡುವ ಹಿತೋಕ್ತಿಗಳಿಂದಲೂ ಹಣವಿಲ್ಲದೆಯೆ ಬಹು ಸುಲಭವಾಗಿ ಪುಣ್ಯ ಸಂಪಾದನೆಯಾಗುತ್ತದೆ. ಆ ಧರ್ಮದಿಂದ ಅರ್ಥವೆಂಬುದೂ ತಾನಾಗಿಯೆ ಸಂಪಾದನೆಯಾಗುತ್ತದೆ.

೩೨. ಅರ್ಥಾರ್ಜನೆಗೆ ಯಾವ ಉಪಾಯವನ್ನೂ ಮಾಡದಿದ್ದರೂ ಧರ್ಮವೊಂದನ್ನು ಅನುಷ್ಠಾನಮಾಡುತ್ತಿದ್ದರೆ ಅರ್ಥವು ತಾನಾಗಿಯೆ ಲಭಿಸುತ್ತದೆ ಎಂಬುದರಲ್ಲಿ ಯಾವ ಸಂಶಯವೂ ಇರುವುದಿಲ್ಲ. ಆದುದರಿಂದ ಮಾನವನು ಅರ್ಥಚಿಂತೆಯನ್ನು ತೊರೆದು ಧರ್ಮವೊಂದನ್ನೇ ಆಶ್ರಯಿಸಬೇಕು.

೩೩. ಧರ್ಮಾನುಷ್ಠಾನದಿಂದ ಅರ್ಥವೂ, ಅರ್ಥದಿಂದ ಇಷ್ಟಪ್ರಾಪ್ತಿಯೂ ತನ್ಮೂಲಕವಾಗಿ ಸಮಸ್ತ ಸುಖಗಳೂ ದೊರಕುತ್ತವೆ. ಧರ್ಮಾನುಷ್ಠಾನದಿಂದ ಸ್ವರ್ಗವೂ ಸುಲಭವಾಗಿ ದೊರೆಯುತ್ತದೆ. ಆದರೆ ಕಾಶೀಕ್ಷೇತ್ರವೊಂದೇ ಅತ್ಯಂತ ದುರ್ಲಭವಾದುದು.

೩೪. ಪೂರ್ವದಲ್ಲಿ ಸಾಕ್ಷಾತ್ ವಿಶ್ವೇಶ್ವರನು ಸಮಸ್ತ ಶಾಸ್ತ್ರಾರ್ಥಗಳನ್ನೂ ಪರ್ಯಾಲೋಚಿಸಿ ನಿಶ್ಚಯಿಸಿ ತನ್ನ ಪ್ರೇಯಸಿಯಾದ ಪಾರ್ವತಿಯ ಸಮ್ಮುಖದಲ್ಲಿ ಈ ಕಾಶೀಕ್ಷೇತ್ರವನ್ನು ಹೊಂದಲು ಮೂರು ಉಪಾಯಗಳನ್ನು ಹೇಳಿರುವನು.

೩೫. ಮೊದಲನೆಯದಾಗಿ ಪಾಶುಪತಯೋಗ, ಎರಡನೆಯದೇ ಗಂಗಾ ಯಮುನಾ ಸಂಗಮದಲ್ಲಿ ಸ್ನಾನ. ಕಡೆಯದು ಮೋಕ್ಷಪ್ರದವಾದ ಕಾಶೀಕ್ಷೇತ್ರವನ್ನು ಸೇರಿ ಅಲ್ಲಿಯೆ ವಾಸವಾಗಿರುವುದು.

ಶ್ರೀಶೈಲಹಿಮಶೈಲಾದ್ಯಾ ನಾನಾನ್ಯಾಯತನಾನಿ ಚ ।
ತ್ರಿದಂಡಧಾರಣಂ ಚಾಽಪಿ ಸಂನ್ಯಾಸಃ ಸರ್ವಕರ್ಮಣಾಂ ॥ ೩೬ ॥
ತಪಾಂಸಿ ನಾನಾರೂಪಾಣಿ ವ್ರತಾನಿ ನಿಯಮಾ ಯಮಾಃ ।
ಸಿಂಧೂನಾಮಪಿ ಸಂಭೇದಾ ಅರಣ್ಯಾನಿ ಬಹೂನ್ಯಪಿ ॥ ೩೭ ॥
ಮಾನಸಾನ್ಯಪಿ ಭೌಮಾನಿ ಧಾರಾತೀರ್ಥಾದಿಕಾನಿ ಚ ।
ಊಷರಾಶ್ಚಾಽಪಿ ಪೀಠಾನಿ ಹ್ಯಚ್ಛಿನ್ನಾಮ್ನಾಯಪಾಠನಂ ॥ ೩೮ ॥
ಜಪಶ್ಚಾಽಪಿ ಮನೂನಾಂ ಚ ತಥಾಽಗ್ನಿಹವನಾನಿ ಚ ।
ದಾನಾನಿ ನಾನಾಕ್ರತವೋ ದೇವತೋಪಾಸನಾನಿ ಚ ॥ ೩೯ ॥
ತ್ರಿರಾತ್ರಂ ಪಂಚರಾತ್ರಾಣಿ ಸಾಂಖ್ಯಯೋಗಾದಯಸ್ತಥಾ ।
ವಿಷ್ಣೋರಾರಾಧನಂ ಶ್ರೇಷ್ಠಂ ಮುಕ್ತಯೇಽಭಿಹಿತಂ ಕಿಲ ॥ ೪೦ ॥
ಪುರ್ಯಶ್ಚಾಽಪಿ ಸಮಾಖ್ಯಾತಾ ಮೃತಜಂತುವಿಮುಕ್ತಿದಾಃ ।
ಕೈವಲ್ಯಸಾಧನಾನೀಹ ಭವಂತ್ಯೇವ ವಿನಿಶ್ಚಿತಂ ॥ ೪೧ ॥
ಏತಾನಿ ಯಾನಿ ಪ್ರೋಕ್ತಾನಿ ಕಾಶೀಪ್ರಾಪ್ತಿಕರಾಣಿ ಚ ।
ಪ್ರಾಪ್ಯ ಕಾಶೀಂ ಭವೇನ್ಮುಕ್ತೋ ಜಂತುರ್ನಾಽನ್ಯತ್ರ ಕುತ್ರಚಿತ್ ॥ ೪೨ ॥

---

೩೬–೪೦. ಶ್ರೀಶೈಲ ಹಿಮಶೈಲವೇ ಮೊದಲಾದ ಅನೇಕ ಪರ್ವತಗಳೂ, ಅಸಂಖ್ಯಾತಗಳಾದ ದೇವಾಲಯಗಳೂ, ತ್ರಿದಂಡವನ್ನು ಧರಿಸಿ ಸರ್ವಕರ್ಮ ಸಂನ್ಯಾಸವೂ, ತಪಸ್ಸುಗಳೂ, ಹಲವು ಬಗೆಯ ವ್ರತಗಳೂ, ಯಮನಿಯಮಗಳೂ, ಅನೇಕ ಸಂಗಮಕ್ಷೇತ್ರಗಳೂ, ಅರಣ್ಯಗಳೂ, ಮಾನಸಗಳೂ, ಭೂಸಂಬಂಧಗಳೂ ಆದ ತೀರ್ಥಕ್ಷೇತ್ರಾದಿಗಳೂ, ದಕ್ಷಿಣದೇಶದಲ್ಲಿ ಪ್ರಸಿದ್ಧವಾಗಿರುವ ಕೌಮಾರತೀರ್ಥವೂ, ಊಷರ ರೇಣುಕ ಮೊದಲಾದ ನವಪೀಠಗಳೂ, ಸಂತತವಾದ ವೇದಪರಾಯಣವೂ, ಮಹಾ ಮಂತ್ರಗಳ ಜಪವೂ, ಯಜ್ಞಯಾಗಾದಿಗಳೂ, ಮಹಾ ದಾನಾದಿಗಳೂ, ದೇವತೋಪಾಸನಗಳೂ, ತ್ರಿರಾತ್ರ ಪಂಚರಾತ್ರಗಳೂ, ಆತ್ಮಾನಾತ್ಮ ವಿವೇಕವೂ, ಅಷ್ಟಾಂಗಯೋಗವೂ, ಸರ್ವ ಶ್ರೇಷ್ಠವಾದ ವಿಷ್ಣುವಿನ ಆರಾಧನೆಯೂ ಮುಕ್ತಿಹೇತುಗಳಾದುವೆಂದು ಉಕ್ತವಾಗಿರುವುದಷ್ಟೆ.

೪೧. ಅಂತೆಯೆ, ಅಯೋಧ್ಯಾದಿ ಪುಣ್ಯಪಟ್ಟಣಗಳು ಮೃತಿಗೊಂಡ ಜಂತುವಿಗೆ ಮೋಕ್ಷವನ್ನು ಕೊಡತಕ್ಕುವೆಂದೂ ಕೈವಲ್ಯಕ್ಕೆ ಸಾಧನಗಳಾಗುತ್ತವೆಂಮೂ ನಿಶ್ಚಿತವಾಗಿವೆ.

೪೨. ಈ ಮೇಲೆ ಹೇಳಿದ ಸಮಸ್ತವೂ ಕಾಶೀಕ್ಷೇತ್ರವನ್ನು ಹೊಂದಿಸುವ ಫಲವನ್ನು ಕೊಡತಕ್ಕುವೆಂದು ಹೇಳಲ್ಪಟ್ಟಿವೆ. ಜೀವಿಯು ಕಾಶಿಯನ್ನು ಹೊಂದಿದ ರೇನೇ ಮುಕ್ತಿಯನ್ನು ಪಡೆಯುತ್ತಾನೆಯಾಗಲಿ ಮತ್ತೆಲ್ಲಿಯೂ ಅಲ್ಲ.

ಅತ ಏವ ಹಿ ತತ್ಕ್ಷೇತ್ರಂ ಪವಿತ್ರಮತಿಚಿತ್ರಕೃತ್ ।
ವಿಶ್ವೇಶಿತುಃ ಪ್ರಿಯಂ ನಿತ್ಯಂ ವಿಷ್ವಗ್ಬ್ರಹ್ಮಾಂಡಮಂಡಲೇ ॥ ೪೩ ॥
ಇದಮೇವ ಹಿ ತತ್ಕ್ಷೇತ್ರಂ ಕುಶಲಪ್ರಶ್ನಕಾರಣಂ ।
ಏಹ್ಯೇಹಿ ದೇಹಿ ಮೇ ಸ್ಪರ್ಶಂ ನಿಜಗಾತ್ರಸ್ಯ ಸುವ್ರತ ॥ ೪೪ ॥
ಅಪಿ ಕಾಶ್ಯಾಃ ಸಮಾಗಚ್ಛತ್ ಸ್ಪರ್ಶವತ್ ಸ್ಪರ್ಶ ಇಷ್ಯತೇ ।
ಮಯಾತ್ರ ತಿಷ್ಠತಾ ನಿತ್ಯಂ ಕಿಂ ತು ತ್ವಂ ತತ ಆಗತಃ ॥ ೪೫ ॥
ತ್ರಿರಾತ್ರಮಪಿ ಯೇ ಕಾಶ್ಯಾಂ ವಸಂತಿ ನಿಯತೇಂದ್ರಿಯಾಃ ।
ತೇಷಾಂ ಪುನಂತಿ ನಿಯತಂ ಸ್ಪೃಷ್ಟಾಶ್ಚರಣರೇಣವಃ ॥ ೪೬ ॥
ತ್ವಂ ತು ತತ್ರ ಕೃತಾವಾಸಃ ಕೃತಪುಣ್ಯಮಹೋಚ್ಚಯಃ ।
ಉತ್ತರಪ್ರವಹಾಸ್ನಾನಜಾತಪಿಂಗಲಮೂರ್ಧಜಃ ॥ ೪೭ ॥
ತವ ತತ್ರ ತು ಯತ್ಕುಂಡಮಗಸ್ತ್ಯೇಶ್ವರಸನ್ನಿಧೌ ।
ತತ್ರ ಸ್ನಾತ್ವಾ ಚ ಪೀತ್ವಾ ಚ ಕೃತಸರ್ವೋದಕಕ್ರಿಯಃ ॥ ೪೮ ॥

---

೪೩. ಆದುದರಿಂದಲೆ ಆ ಕ್ಷೇತ್ರವು ಪರಮಪವಿತ್ರವೂ, ಕೈವಲ್ಯಪ್ರದವೂ ಈ ಬ್ರಹ್ಮಾಂಡಮಂಡಲದಲ್ಲಿಯೆ ವಿಶ್ವೇಶ್ವರನಿಗೆ ಸತತವೂ ಪ್ರಿಯಂಕರವೂ ಆಗಿ ವಿರಾಜಿಸುತ್ತಿರುವುದು.

೪೪. ಅಯ್ಯಾ ಅಗಸ್ತ್ಯನೆ, ಈಗ ನಿನ್ನನ್ನು ಕುರಿತು ಕೇಳಿದ ಕುಶಲಪ್ರಶ್ನೆಗೂ ಈ ಕ್ಷೇತ್ರವೇ ಕಾರಣ. ಅಯ್ಯಾ ಸುವ್ರತನೆ, ಬಾ. ನನಗೆ ನಿನ್ನ ದೇಹ ಸಂಸ್ಪರ್ಶದ ಭಾಗ್ಯವನ್ನು ಕೊಡುವವನಾಗು.

೪೫. ಕಾಶೀಕ್ಷೇತ್ರದಿಂದ ಸುಳಿದು ಬರುವ ವಾಯುವಿನ ಸ್ಪರ್ಶವೂ ಅಪೇಕ್ಷಣೀಯವಾದುದೆಂದಮೇಲೆ, ಅಲ್ಲಿಂದಲೆ ಸಾಕ್ಷಾತ್ತಾಗಿ ಚಿತ್ತೈಸಿರುವ ನಿನ್ನ ಸ್ಪರ್ಶದ ವಿಷಯದಲ್ಲಿ ಹೇಳತಕ್ಕುದೇನು? ನಾನಾದರೊ ಯಾವಾಗಲೂ ಇಲ್ಲಿಯೆ ನೆಲಸಿರುವವನು. ನೀನು ಆ ಕ್ಷೇತ್ರದಿಂದ ಬಂದವನು.

೪೬. ಜಿತೇಂದ್ರಿಯರಾದ ಯಾವ ಮಾನವರು ಕಾಶಿಯಲ್ಲಿ ಮೂರು ರಾತ್ರಿಗಳು ವಾಸಮಾಡಿ ಬರುವರೊ ಅವರ ಪಾದಧೂಳಿಯ ಸ್ಪರ್ಶನದಿಂದ ತೃಣಗುಲ್ಮ, ಲತಾದಿಗಳೂ ಪಾವನಗೊಳ್ಳುವುವೆಂದಮೇಲೆ ನಾನು ಪಾವನಗೊಳ್ಳುವುದಿಲ್ಲವೆ?

೪೭. ನಿನ್ನ ಪುಣ್ಯವನ್ನು ಎಷ್ಟೆಂದು ಹೇಳಲಿ! ನೀನು ಆ ಕಾಶೀಕ್ಷೇತ್ರದಲ್ಲಿ ವಾಸಮಾಡುತ್ತಿದ್ದು ದೊಡ್ಡದೊಂದು ಪುಣ್ಯರಾಶಿಯನ್ನೇ ಗಳಿಸಿರುವೆಯಲ್ಲದೆ, ಉತ್ತರವಾಹಿನಿಯಾದ ಗಂಗೆಯಲ್ಲಿ ಮಿಂದು, ಪಿಂಗಳವರ್ಣವುಳ್ಳ ತಲೆಗೂದಲುಳ್ಳವನಾಗಿರುವೆ.

೪೮–೪೯. ಆ ಕಾಶೀಕ್ಷೇತ್ರದಲ್ಲಿ ವಿರಾಜಿಸುತ್ತಿರುವ ಅಗಸ್ತ್ಯೇಶ್ವರನ ಸನ್ನಿಧಿಯಲ್ಲಿ ನಿನ್ನಿಂದ ನಿರ್ಮಿತವಾಗಿ ನಿನ್ನ ಹೆಸರಿನಿಂದಲೇ ಪ್ರಸಿದ್ಧಿಗೊಂಡಿರುವ ಕುಂಡ

ಪಿತೄನ್ಪಿಂಡೈಃ ಸಮಭ್ಯರ್ಚ್ಯ ಶ್ರದ್ಧಾಶ್ರಾದ್ಧವಿಧಾನತಃ ।
ಕೃತಕೃತ್ಯೋ ಭವೇಜ್ಜಂತುರ್ವಾರಾಣಸ್ಯಾಃ ಫಲಂ ಲಭೇತ್ ॥ ೪೯ ॥
ಇತ್ಯುಕ್ತ್ವಾ ಸರ್ವಗಾತ್ರಾಣಿ ಸ್ಪೃಷ್ಟ್ವಾ ಕುಂಭೋದ್ಭವಸ್ಯ ಚ ।
ಸ್ಕಂದೋಽಮೃತಸರೋವಾರಿ ವಿಗಾಹ್ಯ ಸುಖಮಾಪ್ತವಾನ್ ॥ ೫೦ ॥
ಜಯ ವಿಶ್ವೇಶ ನೇತ್ರಾಣಿ ವಿನಿಮೀಲ್ಯ ವದನ್ನಪಿ ।
ತತಃ ಕಿಂಚಿತ್ ಕ್ಷಣಂ ದಧ್ಯೌ ಗುಹಃ ಸ್ಥಾಣುಃ ಸುನಿಶ್ಚಲಃ ॥ ೫೧ ॥
ಸ್ಕಂದೇ ವಿಸರ್ಜಿತಧ್ಯಾನೇ ಸುಪ್ರಸನ್ನಮನೋಮುಖೇ ।
ಪ್ರತೀಕ್ಷ್ಯ ವಾಗವಸರಂ ಪಪ್ರಚ್ಛಾಽಥ ಮುನಿರ್ಗುಹಂ ॥ ೫೨ ॥

ಅಗಸ್ತಿರುವಾಚ :—

ಸ್ವಾಮಿನ್ಯಥಾ ಭಗವತಾ ಭಗವತ್ಯೈ ಪುರಾಽಕಥಿ ।
ವಾರಾಣಸ್ಯಾಸ್ತು ಮಹಿಮಾ ಹಿಮಶೈಲಭುವೇ ಮುದಾ ॥ ೫೩ ॥
ತ್ವಯಾ ಯಥಾ ಸಮಾಕರ್ಣಿ ತದುತ್ಸಂಗನಿವಾಸಿನಾ ।
ತಥಾ ಕಥಯ ಷಡ್ವಕ್ತ್ರ ತತ್ಕ್ಷೇತ್ರಂ ಮೇಽತಿರೋಚತೇ ॥ ೫೪ ॥

---

ದಲ್ಲಿ ಸ್ನಾನಾಚಮನಗಳನ್ನು ಮಾಡಿ ಪಿತೃಗಳಿಗೆ ತರ್ಪಣವನ್ನಿತ್ತು ಶ್ರದ್ಧೆಯಿಂದ ಶ್ರಾದ್ಧವನ್ನು ಮಾಡಿ ಪಿಂಡಗಳನ್ನು ಸಮರ್ಪಿಸಿದ ಮಾನವನು ಕೃತಕೃತ್ಯನಾಗುತ್ತಾನೆ. ಅಲ್ಲದೆ ಅವನಿಗೆ ವಾರಾಣಸೀಕ್ಷೇತ್ರವಾಸದ ಫಲವು ದೊರಕುತ್ತದೆ.''

೫೦. ಅಯ್ಯಾ ಸೂತನೇ, ಈ ಪ್ರಕಾರವಾಗಿ ನುಡಿದ ತರುವಾಯ ಆ ಸ್ಕಂದನು ಕುಂಭೋದ್ಭವನ ಸರ್ವಗಾತ್ರಗಳನ್ನೂ ಸ್ಪರ್ಶಿಸಿ ಅಮೃತಸರೋವರದ ಜಲದಲ್ಲಿ ಮಿಂದವನಂತೆ ಆತ್ಮಾನಂದವನ್ನು ಪಡೆದವನಾದನು.

೫೧. ಅವನು ಕಣ್ಣುಗಳನ್ನು ಮುಗಿದುಕೊಂಡು 'ವಿಶ್ವೇಶ್ವರಾ, ಜಯ ಜಯ!' ಎಂದು ನುಡಿಯುತ್ತಿದ್ದರೂ ಕೆಲವು ಕ್ಷಣಗಳ ಕಾಲ ಸ್ಥಾಣುವಿನಂತೆ ನಿಶ್ಚಲನಾಗಿ ಕುಳಿತು ಅವಾಙ್ಮಾನಸಗೋಚರವಾದ ವಿಶ್ವೇಶ್ವರನ ಸ್ವರೂಪವನ್ನು ಕುರಿತು ಧ್ಯಾನಿಸಿದನು.

೫೨. ಆತನು ಧ್ಯಾನದಿಂದ ಬಹಿರ್ಮುಖನಾದ ತರುವಾಯ ಆತನ ಮನಸ್ಸೂ ಮುಖವೂ ಸುಪ್ರಸನ್ನವಾಗಲು, ವಚನಾವಸರವನ್ನು ನೋಡಿ ಅಗಸ್ತ್ಯ ಮುನಿಪುಂಗವನು ಆತನನ್ನು ಕುರಿತು ಈ ರೀತಿ ಪ್ರಶ್ನಿಸಿದನು.

೫೩–೫೪. ಅಗಸ್ತ್ಯನು ಹೇಳುತ್ತಾನೆ:—ಎಲೈ ಸ್ವಾಮಿಯೆ, ಪೂರ್ವದಲ್ಲಿ ಪರಮೇಶ್ವರನು ಹಿಮಶೈಲಕುಮಾರಿಯಾದ ಪಾರ್ವತಿಗೆ ವಿವರಿಸಿ ಹೇಳಿದ ವಾರಾಣಸೀ ಕ್ಷೇತ್ರಮಹಿಮೆಯನ್ನು ಆ ದೇವಿಯ ತೊಡೆಯಲ್ಲಿಯೇ ಕುಳಿತಿದ್ದ ನೀನು ಕೇಳಿದಂತೆಯೇ ನನಗೆ ತಿಳಿಯ ಹೇಳುವವನಾಗು. ಕಾಶೀಕ್ಷೇತ್ರವು ನನಗೆ ಅತ್ಯಂತ ಪ್ರಿಯಕರವಾದುದು.

ಸ್ಕಂದ ಉವಾಚ :—

ಶೃಣುಷ್ವ ಮೈತ್ರಾವರುಣೇ ಯಥಾ ಭಗವತಾಽಕಥಿ ।
ತತ್ಕ್ಷೇತ್ರಸ್ಯಾಽವಿಮುಕ್ತಸ್ಯ ಮಮ ಮಾತುಃ ಪುರಃ ಪುರಾ ॥ ೫೫ ॥
ಶ್ರುತಂ ಚ ಯತ್ತದುತ್ಸಂಗೇ ಸ್ಥಿತೇನ ಸ್ಥಿರಚೇತಸಾ ।
ಮಾಹಾತ್ಮ್ಯಂ ತಚ್ಛೃಣು ಮುನೇ ಕಥ್ಯಮಾನಂ ಮಯಾಽನಘ ॥ ೫೬ ॥
ಗುಹ್ಯಾನಾಂ ಪರಮಂ ಗುಹ್ಯಮವಿಮುಕ್ತಮಿಹೇರಿತಂ ।
ತತ್ರ ಸನ್ನಿಹಿತಾ ಸಿದ್ಧಿಸ್ತತ್ರ ನಿತ್ಯಂ ಸ್ಥಿತೋ ವಿಭುಃ ॥ ೫೭ ॥
ಭೂಲೋಕೇನೈವ ಸಂಲಗ್ನಂ ತತ್ಕ್ಷೇತ್ರಂ ತ್ವಂತರಿಕ್ಷಗಂ ।
ಅಯೋಗಿನೋ ನ ವೀಕ್ಷಂತೇ ಪಶ್ಯಂತ್ಯೇವ ಚ ಯೋಗಿನಃ ॥ ೫೮ ॥
ಯಸ್ತತ್ರ ನಿವಸೇದ್ವಿಪ್ರ ಸಂಯತಾತ್ಮಾ ಸಮಾಹಿತಃ ।
ತ್ರಿಕಾಲಮಪಿ ಭುಂಜಾನೋ ವಾಯುಭಕ್ಷಸಮೋ ಭವೇತ್ ॥ ೫೯ ॥
ನಿಮೇಷಮಾತ್ರಮಪಿ ಯೋ ಹ್ಯವಿಮುಕ್ತೇಽತಿಭಕ್ತಿಭಾಕ್ ।
ಬ್ರಹ್ಮಚರ್ಯಸಮಾಯುಕ್ತಂ ತೇನ ತಪ್ತಂ ಮಹತ್ತಪಃ ॥ ೬೦ ॥

---

೫೫. ಸ್ಕಂದನು ಹೇಳುತ್ತಾನೆ:—ಅಯ್ಯಾ ಮಿತ್ರಾವರುಣನಂದನನಾದ ಅಗಸ್ತ್ಯಮುನಿಯೆ, ನನ್ನ ತಾಯಿಯ ಮುಂಗಡೆ ಷಡ್ಗುಣೈಶ್ವರ್ಯ ಪರಿಪೂರ್ಣನಾದ ಆ ಶಂಕರನು ನುಡಿದ ಕಾಶೀಮಾಹಾತ್ಮ್ಯವನ್ನು ಇದೀಗ ಕೇಳುವವನಾಗು.

೫೬. ಅದನ್ನು ನಾನು ನನ್ನ ತಾಯಿಯ ತೊಡೆಯಮೇಲಿದ್ದು ಸ್ಥಿರಬುದ್ಧಿಯಿಂದ ಕೇಳಿದ್ದೇನೆ. ಅದನ್ನೇ ನಿರ್ದುಷ್ಟನಾದ ನಿನಗೆ ಈಗ ಹೇಳುವೆನು. ಸಾವಧಾನಮನಸ್ಕನಾಗಿ ಕೇಳು.

೫೭. ಅವಿಮುಕ್ತಕ್ಷೇತ್ರನಾದ ಆ ಕಾಶಿಯು ರಹಸ್ಯಾತಿರಹಸ್ಯವಾದುದೆಂದು ಹೇಳಲಾಗಿದೆ. ಸಿದ್ಧಿಯೆಂಬುದು ಅಲ್ಲಿ ಯಾವಾಗಲೂ ಸನ್ನಿಹಿತವಾಗಿಯೇ ಇರುತ್ತದೆ. ವಿಭುವಾದ ವಿಶ್ವೇಶ್ವರನು ಯಾವಾಗಲೂ ಅಲ್ಲಿಯೆ ನೆಲಸಿರುತ್ತಾನೆ.

೫೮. ಆ ಕ್ಷೇತ್ರವು ಭೂಲೋಕಕ್ಕೇ ಅಂಟಿಕೊಂಡಂತೆ ಕಾಣುವುದಾದರೂ ಅಂತರಿಕ್ಷದಲ್ಲಿರುವುದು. ಇದನ್ನು ಯೋಗಿಗಳಲ್ಲದವರು ಕಾಣುವುದಿಲ್ಲ. ಯೋಗಿಗಳು ಮಾತ್ರ ಸಂಪೂರ್ಣವಾಗಿ ಸಾಕ್ಷಾತ್ಕರಿಸಿಕೊಳ್ಳುತ್ತಾರೆ.

೫೯. ಅಯ್ಯಾ ವಿಪ್ರನೆ, ಆ ಕ್ಷೇತ್ರದಲ್ಲಿ ಸ್ಥಿರಮನಸ್ಕನಾಗಿ ಯಾವನು ವಾಸಮಾಡುವನೊ ಅವನು ಮೂರು ಹೊತ್ತು ಊಟಮಾಡುವವನಾದರೂ ವಾಯುಭಕ್ಷಣಮಾಡಿಕೊಂಡು ತಪಸ್ಸನ್ನೆಸಗುವ ಮುನಿಗೆ ಸಮಾನನೆನಿಸುತ್ತಾನೆ.

೬೦. ಅವಿಮುಕ್ತಕ್ಷೇತ್ರದಲ್ಲಿ ನಿರತಿಶಯವಾದ ಭಕ್ತಿಯಿಂದ ಒಂದುನಿಮಿಷ ಕಾಲವಾದರೂ ಯಾವನು ಬ್ರಹ್ಮಚರ್ಯವನ್ನು ಆಚರಿಸುತ್ತಾನೆಯೊ ಅವನು ಮಹತ್ತರವಾದ ತಪಸ್ಸನ್ನೆಸಗಿದಂತೆಯೆ ತಿಳಿಯತಕ್ಕದ್ದು.

ಯಸ್ತು ಮಾಸಂ ವಸೇದ್ಧೀರೋ ಲಘ್ವಾಹಾರೋ ಜಿತೇಂದ್ರಿಯಃ ।
ಸರ್ವಂ ತೇನ ವ್ರತಂ ಚೀರ್ಣಂ ದಿವ್ಯಂ ಪಾಶುಪತಂ ಭವೇತ್ ॥ ೬೧ ॥
ಸಂವತ್ಸರಂ ವಸಂಸ್ತತ್ರ ಜಿತಕ್ರೋಧೋ ಜಿತೇಂದ್ರಿಯಃ ।
ಅಪರಸ್ವವಿಪುಷ್ಟಾಂಗಃ ಪರಾऽನ್ನಪರಿವರ್ಜಕಃ ॥ ೬೨ ॥
ಪರಾऽಪವಾದರಹಿತಃ ಕಿಂಚಿದ್ದಾನಪರಾಯಣಃ ।
ಸಮಾಃ ಸಹಸ್ರಮನ್ಯತ್ರ ತೇನ ತಪ್ತಂ ಮಹತ್ತಪಃ ॥ ೬೩ ॥
ಯಾವಜ್ಜೀವಂ ವಸೇದ್ಯಸ್ತು ಕ್ಷೇತ್ರಮಾಹಾತ್ಮ್ಯವಿನ್ನರಃ ।
ಜನ್ಮಮೃತ್ಯುಭಯಂ ಹಿತ್ವಾ ಸ ಯಾತಿ ಪರಮಾಂ ಗತಿಂ ॥ ೬೪ ॥
ನ ಯೋಗೈರ್ಯಾಗತಿರ್ಲಭ್ಯಾ ಜನ್ಮಾಂತರಶತೈರಪಿ ।
ಅನ್ಯತ್ರ ಹೇಲಯಾ ಸಾऽತ್ರ ಲಭ್ಯೇಶಸ್ಯ ಪ್ರಸಾದತಃ ॥ ೬೫ ॥
ಬ್ರಹ್ಮಹಾ ಯೋऽಭಿಗಚ್ಛೇದ್ವೈ ದೈವಾದ್ವಾರಾಣಸೀಂ ಪುರೀಂ ।
ತಸ್ಯ ಕ್ಷೇತ್ರಸ್ಯ ಮಾಹಾತ್ಮ್ಯಾತ್ ಬ್ರಹ್ಮಹತ್ಯಾ ನಿವರ್ತತೇ ॥ ೬೬ ॥

---

೬೧. ಆ ಕ್ಷೇತ್ರದಲ್ಲಿ ಲಘುವಾದ ಆಹಾರವನ್ನು ತೆಗೆದುಕೊಂಡು ಜಿತೇಂದ್ರಿಯನಾಗಿ ಒಂದು ತಿಂಗಳಕಾಲ ವಾಸಮಾಡುವ ಮಾನವನು ಸಮಸ್ತ ವ್ರತಗಳನ್ನೂ ಮಾಡಿದವನೇ ಆಗುವುದಲ್ಲದೆ ಅವನಿಗೆ ದಿವ್ಯವಾದ ಪಾಶುಪತ ಯೋಗವು ಲಭಿಸುತ್ತದೆ.

೬೨–೬೩. ಕಾಮಕ್ರೋಧಾದಿಗಳನ್ನು ಜಯಿಸಿ ಇಂದ್ರಿಯ ನಿಗ್ರಹದಿಂದ ಒಂದು ಸಂವತ್ಸರಕಾಲ ಇತರರ ಸೊತ್ತುಗಳಿಂದ ದೇಹಗಳನ್ನು ಬೆಳಸದೆ ಪರಾನ್ನವನ್ನು ತ್ಯಜಿಸಿ, ಪರನಿಂದೆಯನ್ನುಳಿದು ತನಗಿರುವುದರಲ್ಲಿ ಸ್ವಲ್ಪಮಟ್ಟಿಗಾದರೂ ದಾನಧರ್ಮಗಳನ್ನು ಮಾಡುತ್ತ ಯಾವನು ವಾಸಮಾಡುವನೊ ಆತನು ಬೇರೊಂದು ಕಡೆ ಒಂದು ಸಾವಿರ ವರ್ಷಗಳ ಕಾಲ ಮಹತ್ತರವಾದ ತಪಸ್ಸನ್ನೇ ಮಾಡಿದವನೆಂದು ತಿಳಿಯಬೇಕು.

೬೪. ಯಾವನು ಆ ಕ್ಷೇತ್ರದ ಮಾಹಾತ್ಮ್ಯವನ್ನು ಚೆನ್ನಾಗಿ ತಿಳಿದುಕೊಂಡು ಹುಟ್ಟುಸಾವುಗಳ ಹೆದರಿಕೆಯನ್ನು ತೊರೆದು ಆಜೀವವೂ ಅಲ್ಲಿ ವಾಸಮಾಡುವನೊ ಅವನು ಪರಮಗತಿಯನ್ನೇ ಪಡೆಯುತ್ತಾನೆ.

೬೫. ನೂರು ಜನ್ಮಗಳನ್ನೆತ್ತಿ ಯೋಗವನ್ನಾಚರಿಸಿದರೂ ದೊರಕದ ಸದ್ಗತಿಯು ಈ ಕಾಶೀಕ್ಷೇತ್ರದಲ್ಲಿ ಪರಮೇಶ್ವರನ ಪ್ರಸಾದದಿಂದ ಯಾವ ಕಷ್ಟವೂ ಇಲ್ಲದೆ ಲೀಲಾಜಾಲವಾಗಿಯೆ ಲಭ್ಯವಾಗುತ್ತದೆ.

೬೬. ಬ್ರಹ್ಮಹತ್ಯವನ್ನು ಮಾಡಿದವನು ಅದೃಷ್ಟವಿಶೇಷದಿಂದ ಈ ವಾರಾಣಸೀ ಪುರಿಯನ್ನು ಸೇರಿದಲ್ಲಿ ಆ ಕ್ಷೇತ್ರದ ಮಾಹಾತ್ಮ್ಯದಿಂದಲೆ ಅವನ ಬ್ರಹ್ಮಹತ್ಯೆಯು ನಿವಾರಣೆಯಾಗುತ್ತದೆ.

ಆದೇಹಪತನಂ ಯಾವದ್ಯೋಽವಿಮುಕ್ತಂ ನ ಮುಂಚತಿ ।
ನ ಕೇವಲಂ ಬ್ರಹ್ಮಹತ್ಯಾ ಪ್ರಕೃತಿಶ್ಚ ನಿವರ್ತತೇ ॥ ೬೭ ॥
ಅನನ್ಯಮಾನಸೋ ಭೂತ್ವಾ ತತ್ಕ್ಷೇತ್ರಂ ಯೋ ನ ಮುಂಚತಿ ।
ಸ ಮುಂಚತಿ ಜರಾಮೃತ್ಯುಂ ಗರ್ಭವಾಸಂ ಸುದುಃಸಹಂ ॥ ೬೮ ॥
ಅವಿಮುಕ್ತಂ ನಿಷೇವೇತ ದೇವರ್ಷಿಗಣಸೇವಿತಂ ।
ಯದೀಚ್ಛೇನ್ಮಾನವೋ ಧೀಮಾನ್ ನ ಪುನರ್ಜನನಂ ಭುವಿ ॥ ೬೯ ॥
ಅವಿಮುಕ್ತಂ ನ ಮುಂಚೇತ ಸಂಸಾರಭಯಮೋಚನಂ ।
ಪ್ರಾಪ್ಯ ವಿಶ್ವೇಶ್ವರಂ ದೇವಂ ನ ಸ ಭೂಯೋಽಭಿಜಾಯತೇ ॥ ೭೦ ॥
ಕೃತ್ವಾ ಪಾಪಸಹಸ್ರಾಣಿ ಪಿಶಾಚತ್ವಂ ವರಂತ್ವಿಹ ।
ನ ತು ಕ್ರತುಶತಪ್ರಾಪ್ಯಃ ಸ್ವರ್ಗಃ ಕಾಶೀಪುರೀಂ ವಿನಾ ॥ ೭೧ ॥
ಅಂತ್ಯಕಾಲೇ ಮನುಷ್ಯಾಣಾಂ ಛಿದ್ಯಮಾನೇಷು ಮರ್ಮಸು ।
ವಾತೇನಾತುದ್ಯಮಾನಾನಾಂ ಸ್ಮೃತಿರ್ನೈವೋಪಜಾಯತೇ ॥ ೭೨ ॥
ತತ್ರೋತ್ಕ್ರಮಣಕಾಲೇ ತು ಸಾಕ್ಷಾದ್ವಿಶ್ವೇಶ್ವರಃ ಸ್ವಯಂ ।
ವ್ಯಾಚಷ್ಟೇ ತಾರಕಂ ಬ್ರಹ್ಮ ಯೇನಾಽಸೌ ತನ್ಮಯೋ ಭವೇತ್ ॥ ೭೩ ॥

---

೬೭. ದೇಹಪತನವಾಗುವವರೆಗೂ ಅವನು ಅವಿಮುಕ್ತಕ್ಷೇತ್ರವನ್ನು ಸೇವಿಸುತ್ತಾ ಅಲ್ಲಿಯೇ ನೆಲಸಿದ್ದರೆ ಬ್ರಹ್ಮಹತ್ಯೆಯು ಕಳೆದುಹೋಗುವುದೂ ಅಲ್ಲದೆ ಸ್ವಭಾವವೇ ಮಾರ್ಪಡುತ್ತದೆ.

೬೮. ಅನನ್ಯಮನಸ್ಕನಾಗಿ ಯಾವನು ಆ ಕ್ಷೇತ್ರವನ್ನು ಬಿಡದೆ ಸೇವಿಸುತ್ತಾನೆಯೊ ಅವನು ಮುಪ್ಪು ಸಾವುಗಳನ್ನು ಗೆಲ್ಲುವುದು ಮಾತ್ರವೇ ಅಲ್ಲದೆ ದುರ್ಭರವಾದ ಗರ್ಭವಾಸದ ದುಃಖವನ್ನೂ ಹೊಂದುವುದಿಲ್ಲ.

೬೯. ಪುನರ್ಜನ್ಮವನ್ನು ಪಡೆಯಬಾರದೆಂದು ಬಯಸುವ ಬುದ್ಧಿವಂತನಾದ ಮಾನವನು ದೇವತೆಗಳೂ ಋಷಿಗಣಗಳೂ ಸತತವೂ ಸೇವಿಸುತ್ತಿರುವ ಅವಿಮುಕ್ತ ಕ್ಷೇತ್ರವನ್ನು ಸೇವಿಸಬೇಕು.

೭೦. ಯಾವ ಮಾನವನೂ ಸಂಸಾರ ಭಯವನ್ನು ನಿವಾರಣೆಮಾಡುವ ಕಾಶೀಕ್ಷೇತ್ರವನ್ನು ಬಿಡಬಾರದು. ಕಾಶೀಕ್ಷೇತ್ರವನ್ನು ಸೇರಿ ದೇವದೇವನಾದ ವಿಶ್ವೇಶ್ವರನನ್ನು ಸೇವಿಸಿದವನು ಮತ್ತೆ ಜನ್ಮವನ್ನೆತ್ತುವುದಿಲ್ಲ.

೭೧. ಸಾವಿರಾರು ಪಾಪಗಳನ್ನು ಮಾಡಿ ಕಾಶೀಕ್ಷೇತ್ರದಲ್ಲಿ ಪಿಶಾಚವಾಗುವುದಾದರೂ ಮೇಲು. ಕಾಶೀಪಟ್ಟಣವನ್ನುಳಿದು ಬೇರೊಂದೆಡೆಯಲ್ಲಿ ನೂರು ಯಜ್ಞಗಳನ್ನು ಮಾಡಿ ಸ್ವರ್ಗಲೋಕವನ್ನು ಪಡೆಯುವುದೂ ಉತ್ತಮವೆನಿಸದು.

೭೨–೭೩. ಮರಣಕಾಲದಲ್ಲಿ ಸಮಸ್ತ ಮರ್ಮಪ್ರದೇಶಗಳೂ ಒಡೆದುಹೋಗಿ ಪ್ರಾಣವಾಯುವಿನಿಂದ ತಿವಿಯಲ್ಪಡುತ್ತಿರುವಾಗ ಮಾನವರಿಗೆ ಸ್ಮೃತಿಯೆಂಬುದೇ ಇರುವುದಿಲ್ಲ. ಆದರೆ, ಈ ಕಾಶೀಕ್ಷೇತ್ರದಲ್ಲಿ ಸ್ವಾಮಿಯಾದ

ಅಶಾಶ್ವತಮಿದಂ ಜ್ಞಾತ್ವಾ ಮಾನುಷ್ಯಂ ಬಹುಕಿಲ್ಬಿಷಂ ।
ಅವಿಮುಕ್ತಂ ನಿಷೇವೇತ ಸಂಸಾರಭಯನಾಶನಂ ॥ ೭೪ ॥
ವಿಘ್ನೈರಾಲೋಡ್ಯಮಾನೋಽಪಿ ಯೋಽವಿಮುಕ್ತಂ ನ ಮುಂಚತಿ ।
ನೈಃಶ್ರೇಯಸೀಂ ಶ್ರಿಯಂ ಪ್ರಾಪ್ಯ ದುಃಖಾಂತಂ ಸೋಽಧಿಗಚ್ಛತಿ ॥ ೭೫ ॥
ಮಹಾಪಾಪೌಘಶಮನೀಂ ಪುಣ್ಯೋಪಚಯಕಾರಿಣೀಂ ।
ಭುಕ್ತಿಮುಕ್ತಿಪ್ರದಾಮಂತೇ ಕೋ ನ ಕಾಶೀಂ ಸುಧೀಃ ಶ್ರಯೇತ್ ॥ ೭೬ ॥
ಏವಂ ಜ್ಞಾತ್ವಾ ತು ಮೇಧಾವೀ ನಾಽವಿಮುಕ್ತಂ ತ್ಯಜೇನ್ನರಃ ।
ಅವಿಮುಕ್ತಪ್ರಸಾದೇನ ವಿಮುಕ್ತೋ ಜಾಯತೇ ಯತಃ ॥ ೭೭ ॥
ಅವಿಮುಕ್ತಸ್ಯ ಮಾಹಾತ್ಮ್ಯಂ ಷಡ್ಭಿರ್ವಕ್ತ್ರೈಃ ಕಥಂ ಮಯಾ ।
ವಕ್ತುಂ ಶಕ್ಯಂ ನ ಶಕ್ನೋತಿ ಸಹಸ್ರಾಸ್ಯೋಽಪಿ ಯತ್ಪರಂ ॥ ೭೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಸ್ಕಂದಾಽಗಸ್ತ್ಯದರ್ಶನವರ್ಣನಂ"
ನಾಮ ಪಂಚವಿಂಶೋಽಧ್ಯಾಯಃ

---

ವಿಶ್ವೇಶ್ವರನು ಮಾನವನ ಉತ್ಕ್ರಮಣಕಾಲದಲ್ಲಿ ತಾನೇ ಸಾಕ್ಷಾತ್ತಾಗಿ ಬಂದು ಅವನಿಗೆ ತಾರಕಮಂತ್ರವನ್ನು ಉಪದೇಶಮಾಡುತ್ತಾನೆ. ಅದರಿಂದ ಅವನು ತನ್ಮಯನಾಗಿ ಹೋಗುತ್ತಾನೆ.

೭೪. ಮಹಾಪಾಪಭೂಯಿಷ್ಠವಾದ ಈ ಮಾನುಷ್ಯವು ಅಶಾಶ್ವತವೆಂಬುದನ್ನು ತಿಳಿದು ಸಂಸಾರಭಯನಾಶಕವಾದ ಅವಿಮುಕ್ತಕ್ಷೇತ್ರವನ್ನು ಸೇವಿಸಬೇಕು.

೭೫. ಅನೇಕ ವಿಘ್ನಗಳಿಂದ ತೊಂದರೆಗೊಳಗಾದರೂ ಯಾವನು ಅವಿಮುಕ್ತವನ್ನು ತೊರೆಯುವುದಿಲ್ಲವೋ ಅವನು ಮೋಕ್ಷಲಕ್ಷ್ಮಿಯನ್ನು ಹೊಂದಿ ದುಃಖಾಂತವನ್ನು ಪಡೆಯುತ್ತಾನೆ.

೭೬. ಮಹಾಪಾಪಸಮೂಹಗಳನ್ನು ಶಮನಮಾಡುವುದಾಗಿ ಪುಣ್ಯರಾಶಿಯನ್ನು ಗಳಿಸಿಕೊಡುವುದಾಗಿ ಭುಕ್ತಿಮುಕ್ತಿಗಳೆರಡನ್ನೂ ನೀಡುವುದಾಗಿರುವ ಈ ಕಾಶೀಕ್ಷೇತ್ರವನ್ನು ಬುದ್ಧಿಶಾಲಿಯಾದ ಯಾವನು ತಾನೆ ಆಶ್ರಯಿಸುವುದಿಲ್ಲ?

೭೭. ಕಾಶೀಕ್ಷೇತ್ರದ ಅನುಗ್ರಹದಿಂದ ಮಾನವನು ವಿಮುಕ್ತನೇ ಆಗುವುದರಿಂದ ಈ ತತ್ತ್ವವನ್ನು ತಿಳಿದು ಬುದ್ಧಿಶಾಲಿಯಾಗಿ ಅವನು ಅದನ್ನು ತೊರೆಯಲೇಬಾರದು.

೭೮. ಸಹಸ್ರಮುಖಗಳುಳ್ಳ ಆದಿಶೇಷನೇ ಕಾಶೀಮಾಹಾತ್ಮ್ಯವನ್ನು ಹೇಳಲು ಸಮರ್ಥನಲ್ಲದಿರುವಾಗ ಕೇವಲ ಆರೇ ಮುಖಗಳುಳ್ಳ ನಾನು ಹೇಗೆ ತಾನೆ ಹೇಳುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಸ್ಕಂದಾಗಸ್ತ್ಯದರ್ಶನವರ್ಣನ"ವೆಂಬ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಡ್ವಿಂಶೋಽಧ್ಯಾಯಃ

## ಮಣಿಕರ್ಣಿಕಾಖ್ಯಾನವರ್ಣನಂ

**ಅಗಸ್ತಿರುವಾಚ :—**

**ಪ್ರಸನ್ನೋಽಸಿ ಯದಿ ಸ್ಕಂದ ಮಯಿ ಪ್ರೀತಿರನುತ್ತಮಾ ।**
**ತತ್ಸಮಾಚಕ್ಷ್ವ ಭಗವಂಶ್ಚಿರಂ ಯನ್ಮೇ ಹೃದಿ ಸ್ಥಿತಂ ॥ ೧ ॥**
**ಅವಿಮುಕ್ತಮಿದಂ ಕ್ಷೇತ್ರಂ ಕದಾಽಽರಭ್ಯ ಭುವಸ್ತಲೇ ।**
**ಪರಾಂ ಪ್ರಥಿತಿಮಾಪನ್ನಂ ಮೋಕ್ಷದಂ ಚಾಽಭವತ್ಕಥಂ ॥ ೨ ॥**
**ಕಥಮೇಷಾ ತ್ರಿಲೋಕೇಡ್ಯಾ ಗೀಯತೇ ಮಣಿಕರ್ಣಿಕಾ ।**
**ತತ್ರಾಸೀತ್ಕಿಂ ಪುರಾ ಸ್ವಾಮಿನ್ಯದಾ ನಾಮರನಿಮ್ನಗಾ ॥ ೩ ॥**
**ವಾರಾಣಸೀತಿ ಕಾಶೀತಿ ರುದ್ರಾವಾಸ ಇತಿ ಪ್ರಭೋ ।**
**ಅವಾಪ ನಾಮಧೇಯಾನಿ ಕಥಮೇತಾನಿ ಸಾ ಪುರೀ ।**
**ಆನಂದಕಾನನಂ ರಮ್ಯಮವಿಮುಕ್ತಮನಂತರಂ ॥ ೪ ॥**
**ಮಹಾಶ್ಮಶಾನ ಇತಿ ಚ ಕಥಂ ಖ್ಯಾತಂ ಶಿಖಿಧ್ವಜ ।**
**ಏತದಿಚ್ಛಾಮ್ಯಹಂ ಶ್ರೋತುಂ ಸಂದೇಹಂ ಮೇಽಪನೋದಯ ॥ ೫ ॥**

---

## ಕನ್ನಡದ ಅನುವಾದ

### ಮಣಿಕರ್ಣಿಕಾಖ್ಯಾನವರ್ಣನ

೧. ಅಗಸ್ತ್ಯನು ಹೇಳುತ್ತಾನೆ:—ಎಲೈ ಸ್ಕಂದಸ್ವಾಮಿಯೆ, ನನ್ನ ವಿಷಯದಲ್ಲಿ ನೀನು ಪ್ರಸನ್ನನಾಗಿರುವೆಯಾದರೆ, ನನ್ನಲ್ಲಿ ನಿನಗೆ ಅತಿಶಯವಾದ ಪ್ರೀತಿಯೂ ಇರುವುದಾದರೆ, ನನ್ನ ಮನಸ್ಸಿನಲ್ಲಿ ಬಹುಕಾಲದಿಂದಲೂ ಇರುವ ಈ ಸಂಶಯವನ್ನು ಪರಿಹರಿಸುವವನಾಗು.

೨. ಅವಿಮುಕ್ತಕ್ಷೇತ್ರವು ಭೂಲೋಕದಲ್ಲಿ ಎಂದಿನಿಂದ ಪ್ರಸಿದ್ಧವಾಗಿರುವುದು? ಇದಕ್ಕೆ ಅವಿಮುಕ್ತವೆಂದು ಹೆಸರು ಬರಲು ಕಾರಣವೇನು? ಇದು ಮೋಕ್ಷಪ್ರದವಾದುದು ಹೇಗೆ?

೩. ಎಲೈ ಪ್ರಭುವೆ, ಅವಿಮುಕ್ತಕ್ಷೇತ್ರದಲ್ಲಿರುವ ಈ ಮಣಿಕರ್ಣಿಕೆಯು ತ್ರಿಲೋಕ ಪೂಜ್ಯವೆನಿಸಿದುದು ಹೇಗೆ? ಅಮರಗಂಗಾನದಿಯು ಇರದಿದ್ದಾಗಲೆ ಈ ಮಣಿಕರ್ಣಿಕೆಯು ಈ ಕ್ಷೇತ್ರದಲ್ಲಿದ್ದಿತೆ?

೪–೫. ಈ ಕ್ಷೇತ್ರಕ್ಕೆ ವಾರಾಣಸಿ, ಕಾಶಿ, ರುದ್ರಾವಾಸ ಎಂಬ ಹೆಸರುಗಳು ಬಂದುದು ಹೇಗೆ? ಆನಂದಕಾನನವೆಂದೂ ಮನೋಹರವಾದ ಅವಿಮುಕ್ತವೆಂದೂ ಮಹಾಶ್ಮಶಾನವೆಂದೂ ಇದು ಪ್ರಖ್ಯಾತಿಯನ್ನು ಹೊಂದಿದುದು ಹೇಗೆ? ಎಲೈ

ಸ್ಕಂದ ಉವಾಚ :—

ಪ್ರಶ್ನಭಾರೋಽಯಮತುಲಸ್ತ್ವಯಾ ಯಃ ಸಮುದಾಹೃತಃ ।
ಕುಂಭಯೋನೇಽಮುಮೇವಾರ್ಥಮಪ್ರಾಕ್ಷೀದಂಬಿಕಾ ಹರಂ ॥ ೬ ॥
ಯಥಾ ಚ ದೇವದೇವೇನ ಸರ್ವಜ್ಞೇನ ನಿವೇದಿತಂ ।
ಜಗನ್ಮಾತುಃ ಪುರಸ್ತಾಚ್ಚ ತಥೈವ ಕಥಯಾಮಿ ತೇ ॥ ೭ ॥
ಮಹಾಪ್ರಲಯಕಾಲೇ ಚ ನಷ್ಟೇ ಸ್ಥಾವರಜಂಗಮೇ ।
ಆಸೀತ್ತಮೋಮಯಂ ಸರ್ವಮನರ್ಕಗ್ರಹತಾರಕಂ ॥ ೮ ॥
ಅಚಂದ್ರಮನಹೋರಾತ್ರಮನಗ್ನ್ಯನಿಲ ಭೂತಲಂ ।
ಅಪ್ರಧಾನಂ ವಿಯಚ್ಛೂನ್ಯಮನ್ಯತೇಜೋವಿವರ್ಜಿತಂ ॥ ೯ ॥
ದ್ರಷ್ಟೃತ್ವಾದಿವಿಹೀನಂ ಚ ಶಬ್ದಸ್ಪರ್ಶಸಮುಜ್ಝಿತಂ ।
ವ್ಯಪೇತಗಂಧರೂಪಂ ಚ ರಸತ್ಯಕ್ತಮದಿಙ್ಮುಖಂ ॥ ೧೦ ॥
ಇತ್ಥಂ ಸತ್ಯಂಧತಮಸಿ ಸೂಚೀಭೇದ್ಯೇ ನಿರಂತರೇ ।
ತತ್ಸದ್ಬ್ರಹ್ಮೇತಿ ಯಚ್ಛ್ರುತ್ಯಾ ಸದೈಕಂ ಪ್ರತಿಪಾದ್ಯತೇ ॥ ೧೧ ॥

---

ಷಣ್ಮುಖನೇ, ಈ ವಿಷಯವನ್ನು ಕೇಳಲು ನನಗೆ ಕುತೂಹಲವಾಗಿದೆ. ನನ್ನ ಸಂದೇಹವನ್ನು ನೀನೇ ಕಳೆಯಬೇಕು.

೬. ಸ್ಕಂದನು ಹೇಳುತ್ತಾನೆ:—ಎಲೈ ಕುಂಭೋದ್ಭವನೆ, ನೀನು ಕೇಳಿದ ಪ್ರಶ್ನೆಗಳ ಭಾರವು ಬಹಳವಾಗಿರುವುದು. ಇದೇ ವಿಷಯವನ್ನೇ ಪೂರ್ವದಲ್ಲಿ ಜಗದಂಬಿಕೆಯು ಪರಮೇಶ್ವರನನ್ನು ಕುರಿತು ಪ್ರಶ್ನಿಸಿದಳು.

೭. ದೇವದೇವನೂ ಸರ್ವಜ್ಞನೂ ಆದ ಆ ಮಹಾದೇವನು ಆ ಜಗನ್ಮಾತೆಗೆ ಈ ವಿಷಯವನ್ನು ಹೇಗೆ ನಿರೂಪಿಸಿದನೊ ಹಾಗೆಯೇ ನಿನಗೂ ತಿಳಿಸುವೆನು.

೮. ಪರಮೇಶ್ವರನು ಹೇಳುತ್ತಾನೆ:—ಎಲೌ ಪಾರ್ವತಿಯೆ, ಮಹಾಪ್ರಳಯ ಕಾಲದಲ್ಲಿ ಸ್ಥಾವರ ಜಂಗಮಗಳೆಲ್ಲವೂ ಅಳಿದುಹೋಗಿ, ಸೂರ್ಯನೂ ಇತರ ಗ್ರಹಗಳೂ ಇಲ್ಲದೆ ಸಮಸ್ತ ಬ್ರಹ್ಮಾಂಡವೂ ಅಂಧಕಾರಮಯವಾಗಿದ್ದಿತು.

೯. ಚಂದ್ರನೂ ಇರಲಿಲ್ಲ. ಹಗಲಿರುಳುಗಳೂ ಇರಲಿಲ್ಲ. ಅಲ್ಲಿ ವಾಯುಗಳಾಗಲಿ ಇತರ ತೇಜಸ್ಸುಗಳಿಂದ ವರ್ಧಿತವಾಗಿ ಅಪ್ರಧಾನವಾದ ಭೂತಲವಾಗಲಿ ಆಕಾಶವಾಗಲಿ ಎಲ್ಲವೂ ಶೂನ್ಯವಾಗಿದ್ದಿತು.

೧೦–೧೩. ದ್ರಷ್ಟೃತ್ವ ಶ್ರೋತೃತ್ವ ಗುಣಗಳಿಲ್ಲದೆಯೂ ಶಬ್ದಸ್ಪರ್ಶವಿವರ್ಜಿತವಾಗಿಯೂ, ಗಂಧರೂಪರಹಿತವಾಗಿಯೂ, ರಸಹೀನವಾಗಿಯೂ, ದಿಗಂತಗಳೇ ಕಾಣದಾಗಿಯೂ ಎತ್ತೆತ್ತಲೂ ಸೂಜಿಮೊನೆಯಷ್ಟೂ ಅವಕಾಶವಿಲ್ಲದೆ ಗಾಢಾಂಧಕಾರವೇ ಆವರಿಸಿರಲು, ಪ್ರಸಿದ್ಧವೂ, ಸದ್ರೂಪವೂ, ಕಾಲತ್ರಯಾಬಾಧ್ಯವೂ ಆದ

ಅಮನೋಗೋಚರೋ ವಾಚಾಂ ವಿಷಯಂ ನ ಕಥಂಚನ ।
ಅನಾಮರೂಪವರ್ಣಂ ಚ ನ ಸ್ಥೂಲಂ ನ ಚ ಯತ್ಕೃಶಂ ॥ ೧೨ ॥
ಅಹ್ರಸ್ವದೀರ್ಘಮಲಘು ಗುರುತ್ವಪರಿವರ್ಜಿತಂ ।
ನ ಯತ್ರೋಪಚಯಃ ಕಶ್ಚಿತ್ತಥಾ ಚಾಪಚಯೋಽಪಿ ಚ ॥ ೧೩ ॥
ಅಭಿಧತ್ತೇ ಸಚಕಿತಂ ಯದಸ್ತೀತಿ ಶ್ರುತಿಃ ಪುನಃ ।
ಸತ್ಯಂ ಜ್ಞಾನಮನಂತಂ ಚ ಯದಾನಂದಪರಂ ಮಹಃ ॥ ೧೪ ॥
ಅಪ್ರಮೇಯಮನಾಧಾರಮವಿಕಾರಮನಾಕೃತಿ ।
ನಿರ್ಗುಣಂ ಯೋಗಿಗಮ್ಯಂ ಚ ಸರ್ವವ್ಯಾಪ್ಯೇಕಕಾರಣಂ ॥ ೧೫ ॥
ನಿರ್ವಿಕಲ್ಪಂ ನಿರಾರಂಭಂ ನಿರ್ಮಾಯಂ ನಿರುಪದ್ರವಂ ।
ಯಸ್ಯೇತ್ಥಂ ಸಂವಿಕಲ್ಪ್ಯಂತೇ ಸಂಜ್ಞಾಃ ಸಂಜ್ಞೋದಿತಸ್ಯ ವೈ ॥ ೧೬ ॥
ತಸ್ಯೈಕಲಸ್ಯ ಚರತೋ ದ್ವಿತೀಯೇಚ್ಛಾಽಭವತ್ಕಿಲ ।
ಅಮೂರ್ತೇನ ಸ್ವಮೂರ್ತಿಶ್ಚ ತೇಽನಾಕಲ್ಪಿ ಸ್ವಲೀಲಯಾ ॥ ೧೭ ॥

---

ಯಾವ ಒಂದೇ ಒಂದು ಬ್ರಹ್ಮವು ಶ್ರುತಿಗಳಲ್ಲಿ ಪ್ರತಿಪಾದಿಸಲ್ಪಡುತ್ತವೆಯೊ, ಮನಸ್ಸಿಗೂ ಮಾತಿಗೂ ಎಂದಿಗೂ ನಿಲುಕದ, ನಾಮರೂಪವರ್ಣಗಳಾಗಲಿ ಸ್ಥೂಲಸೂಕ್ಷ್ಮಾದಿ ಲಕ್ಷಣಗಳಾಗಲಿ ಹ್ರಸ್ವ ದೀರ್ಘ ಲಘುತ್ವ ಗುರುತ್ವಗಳಾಗಲಿ ವೃದ್ಧಿಕ್ಷಯಗಳಾಗಲಿ ಇಲ್ಲದ, ಆ ಬ್ರಹ್ಮವಸ್ತುವೊಂದೇ ಇದ್ದಿತು.

೧೪. ಸತ್ಯವೂ, ಜ್ಞಾನಸ್ವರೂಪವೂ, ಅನಂತವೂ, ಆನಂದಲಕ್ಷಣವುಳ್ಳದೂ ಆದ ಆ ಪರಬ್ರಹ್ಮವು ಇರುವುದೆಂದು ಶ್ರುತಿಗಳು ಸಂಶಯವುಂಟಾಗುವಂತೆಯೆ ಹೇಗೆಯೊ ಪ್ರತಿಪಾದಿಸುತ್ತವೆ.

೧೫. ಅದೇ ಪ್ರಮಾಣಕ್ಕೆ ಸಿಲುಕದುದಾಗಿ, ಆಧಾರರಹಿತವಾಗಿ, ಷಡ್ಭಾವ ವಿಕಾರಗಳಿಲ್ಲದುದಾಗಿ, ಶರೀರಶೂನ್ಯವಾಗಿ, ಸುಖದುಃಖಾದಿ ದ್ವಂದ್ವಗುಣಗಳಿಗೆ ಆಶ್ರಯವಲ್ಲದುದಾಗಿ, ಯೋಗಿಗಳಿಂದ ಮಾತ್ರವೆ ತಿಳಿದುಕೊಳ್ಳಲು ಸಾಧ್ಯವೆನಿಸಿ, ಸರ್ವವ್ಯಾಪಕವೂ ಸಮಸ್ತಕ್ಕೂ ಏಕೈಕಕಾರಣವೂ ಆಗಿರುವುದು.

೧೬–೧೭. ಇಷ್ಟೇ ಅಲ್ಲದೆ, ಅದು ಭೇದಶೂನ್ಯವೂ, ಸೃಷ್ಟ್ಯಾದಿ ವ್ಯಾಪಾರ ರಹಿತವೂ, ಮಾಯೆಯೇ ಇಲ್ಲದುದಾಗಿಯೂ, ಸರ್ವಾನರ್ಥರಹಿತವೂ ಆಗಿರುವುದು. ಹೀಗೆ ಕೇವಲ ಸಂಜ್ಞಾಸ್ವರೂಪದಿಂದಲೆ ಉದಿಸಿದ ಆ ಪರಬ್ರಹ್ಮನ ಅನೇಕ ಸಂಜ್ಞೆಗಳನ್ನು ಈ ಹಿಂದೆ ಹೇಳಿದ ರೀತಿಯಲ್ಲಿ ಜ್ಞಾನಿಗಳಾದವರು ವಿಕಲ್ಪಿಸಿ ಹೇಳುತ್ತಾರೆ. ಹೀಗೆ ಸಂಜ್ಞಾಮಾತ್ರಲಕ್ಷಣವಾದ ಆ ಪರಬ್ರಹ್ಮಕ್ಕೆ ಎರಡನೆಯದರ ಅಪೇಕ್ಷೆಯೊಂದುಂಟಾಯಿತು. ಆಗ ಆ ಬ್ರಹ್ಮವು ತನ್ನ ಲೀಲೆಯಿಂದಲೆ ಅಮೂರ್ತವಾದ ತನ್ನ ಸ್ವರೂಪವನ್ನು ಮೂರ್ತವನ್ನಾಗಿಸಿತು.

ಸರ್ವೈಶ್ವರ್ಯಗುಣೋಪೇತಾ ಸರ್ವಜ್ಞಾನಮಯೀ ಶುಭಾ ।
ಸರ್ವಗಾ ಸರ್ವರೂಪಾ ಚ ಸರ್ವದೃಕ್ಸರ್ವಕಾರಿಣೀ ॥ ೧೮ ॥
ಸರ್ವೈಕವಂದ್ಯಾ ಸರ್ವಾದ್ಯಾ ಸರ್ವದಾ ಸರ್ವಸಂಕೃತಿಃ ।
ಪರಿಕಲ್ಪ್ಯೇತಿ ತಾಂ ಮೂರ್ತಿಮೀಶ್ವರೀಂ ಶುದ್ಧರೂಪಿಣೀಂ ॥ ೧೯ ॥
ಅಂತರ್ದಧೇ ಪರಾಖ್ಯಂ ಯದ್ಬ್ರಹ್ಮ ಸರ್ವಗಮವ್ಯಯಂ ॥ ೨೦ ॥
ಅಮೂರ್ತಂ ಯತ್ಪರಾಖ್ಯಂ ವೈ ತಸ್ಯ ಮೂರ್ತಿರಹಂ ಪ್ರಿಯೇ ।
ಅರ್ವಾಚೀನಾ ಪರಾಚೀನಾ ಈಶ್ವರಂ ಮಾಂ ಜಗುರ್ಬುಧಾಃ ॥ ೨೧ ॥
ತತಸ್ತದೈಕಲೇನಾಽಪಿ ಸ್ವೈರಂ ವಿಹರತಾ ಮಯಾ ।
ಸ್ವವಿಗ್ರಹಾತ್ಸ್ವಯಂ ಸೃಷ್ಟಾ ಸ್ವಶರೀರಾನಪಾಯಿನೀ ॥ ೨೨ ॥
ಪ್ರಧಾನಂ ಪ್ರಕೃತಿಂ ತ್ವಾಂ ಚ ಮಾಯಾಂ ಗುಣವತೀಂ ಪರಾಂ ।
ಬುದ್ಧಿತತ್ತ್ವಸ್ಯ ಜನನೀಮಾಹುರ್ವಿಕೃತಿವರ್ಜಿತಾಂ ॥ ೨೩ ॥
ಯುಗಪಚ್ಚ ತ್ವಯಾ ಶಕ್ತ್ಯಾ ಸಾಕಂ ಕಾಲಸ್ವರೂಪಿಣಾ ।
ಮಯಾಽದ್ಯ ಪುರುಷೇಣೈತತ್ಕ್ಷೇತ್ರಂ ಚಾಽಪಿ ವಿನಿರ್ಮಿತಂ ॥ ೨೪ ॥

---

೧೮–೨೦. ಆ ರೂಪವಾದರೊ, ಸರ್ವೈಶ್ವರ್ಯಗುಣಸಮನ್ವಿತವಾಗಿ ಸರ್ವಜ್ಞಾನಮಯವೂ, ಮಂಗಳಕರವೂ, ಸರ್ವವ್ಯಾಪಕವೂ, ಸರ್ವರೂಪಸಮನ್ವಿತವೂ, ಸರ್ವದೃಷ್ಟಿಯೂ, ಸಮಸ್ತಕಾರ್ಯನಿರ್ವಾಹಕವೂ, ಸರ್ವಜಗಕ್ಕೂ ನಮಸ್ಕಾರಾರ್ಹವಾದ ಏಕಮಾತ್ರದೈವವೂ, ಸರ್ವಕ್ಕೂ ಆದಿಯೆನಿಸಿ, ಆಶ್ರಯಿಸಿದ ಸಮಸ್ತರಿಗೂ ಸರ್ವಪ್ರದವೆನಿಸಿ, ಸಮಸ್ತವನ್ನೂ ಉಚಿತರೀತಿಯಲ್ಲಿ ನಿರ್ವಹಣ ಮಾಡುವುದಾಗಿ ಶೋಭಿಸುತ್ತಿದ್ದಿತು. ಇಂತಹ ಈಶ್ವರಸಂಬಂಧವೂ, ಅತ್ಯಂತ ಶುದ್ಧವೂ ಆದ ಸಗುಣಬ್ರಹ್ಮವನ್ನು ನಿರ್ಮಿಸಿದ ಬಳಿಕ, ಅವ್ಯಯವೂ ಸರ್ವವ್ಯಾಪಕವೂ ಆದ ಆ ಪರಬ್ರಹ್ಮವು ಅಂತರ್ಧಾನವನ್ನೈದಿತು.

೨೧. ಎಲೌ ಪ್ರಿಯಳೆ, ಅಮೂರ್ತವೂ ಪರಾತ್ಪರವೂ ಆದ ಆ ನಿರ್ಗುಣಬ್ರಹ್ಮಮೂರ್ತಿಯು ನಾನೇ. ಅಂದಿನ ಇಂದಿನ ಜ್ಞಾನಿಗಳು ನನ್ನನ್ನು ಈಶ್ವರನೆಂದು ಹೇಳುತ್ತಾರೆ.

೨೨–೨೩. ಇದಾದಮೇಲೆ ಸ್ವೇಚ್ಛೆಯಿಂದ ವಿಹರಿಸುತ್ತಿದ್ದ ಸಗುಣ ಬ್ರಹ್ಮನಾದ ನಾನು ನನ್ನ ಶರೀರದಿಂದಲೇ ಅನಪಾಯಿನಿಯೂ, ಪ್ರಧಾನಪ್ರಕೃತಿಯೂ, ಗುಣವತಿಯೂ, ಉತ್ತಮಳೂ, ಮಾಯೆಯೂ, ಬುದ್ಧಿತತ್ತ್ವದ ಜನನಿಯೂ, ವಿಕೃತಿರಹಿತೆಯೂ ಎಂದು ಹೇಳಲ್ಪಡುವ ನಿನ್ನನ್ನು ಸೃಜಿಸಿದೆನು.

೨೪. ಕಾಲಸ್ವರೂಪಿಯೂ, ಪರಮಪುರುಷನೂ ಆದ ಆ ನಾನು ಶಕ್ತಿಸ್ವರೂಪಿಣಿಯಾದ ನಿನ್ನನ್ನೂ, ಈ ಕಾಶೀಕ್ಷೇತ್ರವನ್ನೂ ಒಂದೇ ತಡವೆಯೆ ನಿರ್ಮಿಸಿದೆನು. ಆದುದರಿಂದ ನೀನೆಂತೊ ಅಂತೆಯೆ ಈ ಕ್ಷೇತ್ರವೂ ಅನಾದಿಯಾದುದು.

ಸ್ಕಂದ ಉವಾಚ:—

ಸಾ ಶಕ್ತಿಃ ಪ್ರಕೃತಿಃ ಪ್ರೋಕ್ತಾ ಸ ಪುಮಾನೀಶ್ವರಃ ಪರಃ ।
ತಾಭ್ಯಾಂ ಚ ರಮಮಾಣಾಭ್ಯಾಂ ತಸ್ಮಿನ್ಕ್ಷೇತ್ರೇ ಘಟೋದ್ಭವ ॥ ೨೫ ॥
ಪರಮಾನಂದರೂಪಾಭ್ಯಾಂ ಪರಮಾನಂದರೂಪಿಣೇ ।
ಪಂಚಕ್ರೋಶಪರೀಮಾಣೇ ಸ್ವಪಾದತಲನಿರ್ಮಿತೇ ॥ ೨೬ ॥
ಮುನೇ ಪ್ರಲಯಕಾಲೇಽಪಿ ನ ತತ್ಕ್ಷೇತ್ರಂ ಕದಾಚ ।
ವಿಮುಕ್ತಂ ಹಿ ಶಿವಾಭ್ಯಾಂ ಯದವಿಮುಕ್ತಂ ತತೋ ವಿದುಃ ॥ ೨೭ ॥
ನ ಯದಾ ಭೂಮಿವಲಯಂ ನಯದಾಽಪಾಂ ಸಮುದ್ಭವಃ ।
ತದಾ ವಿಹರ್ತುಮೀಶೇನ ಕ್ಷೇತ್ರಮೇತದ್ವಿನಿರ್ಮಿತಂ ॥ ೨೮ ॥
ಇದಂ ರಹಸ್ಯಂ ಕ್ಷೇತ್ರಸ್ಯ ವೇದ ಕೋಽಪಿ ನ ಕುಂಭಜ ।
ನಾಸ್ತಿಕಾಯ ನ ವಕ್ತವ್ಯಂ ಕದಾಚಿಚ್ಚರ್ಮಚಕ್ಷುಷೇ ॥ ೨೯ ॥
ಶ್ರದ್ಧಾಲವೇ ವಿನೀತಾಯ ತ್ರಿಕಾಲಜ್ಞಾನಚಕ್ಷುಷೇ ।
ಶಿವಭಕ್ತಾಯ ಶಾಂತಾಯ ವಕ್ತವ್ಯಂ ಚ ಮುಮುಕ್ಷವೇ ॥ ೩೦ ॥
ಅವಿಮುಕ್ತಂ ತದಾರಭ್ಯ ಕ್ಷೇತ್ರಮೇತದುದೀರ್ಯತೇ ।
ಪರ್ಯಂಕಭೂತಂ ಶಿವಯೋರ್ನಿರಂತರಸುಖಾಸ್ಪದಂ ॥ ೩೧ ॥

---

೨೫—೨೭. ಸ್ಕಂದನು ಹೇಳುತ್ತಾನೆ:—ಅಯ್ಯಾ ಅಗಸ್ತ್ಯನೆ, ಆ ಶಕ್ತಿಯೇ ಪ್ರಕೃತಿಯೆಂದೂ, ಆ ಪುರುಷನೇ ಪರಮೇಶ್ವರನೆಂದೂ ಹೇಳಲಾಗಿದೆ. ಅಯ್ಯಾ ಘಟೋದ್ಭವನೆ, ಈ ಪ್ರಕೃತಿಪುರುಷರಿಬ್ಬರೂ ಪರಮಾನಂದರೂಪಿಗಳಾಗಿ ಕ್ರೀಡಿಸುತ್ತಿರಲು, ಪಂಚಕ್ರೋಶಪರಿಮಿತವಾಗಿ ಆ ಪರಮಪುರುಷನ ಪದತಲದಿಂದಲೆ ನಿರ್ಮಿತವಾಗಿರುವ ಆನಂದ ರೂಪವೇ ಆದ ಈ ಕಾಶೀ ಕ್ಷೇತ್ರವು ಈ ಮನ್ವಂತರ ಪ್ರಳಯದಲ್ಲಿಯೂ ಆ ಪಾರ್ವತೀ ಪರಮೇಶ್ವರರಿಂದ ಅಗಲಿರುವುದಿಲ್ಲ. ಆದುದರಿಂದಲೆ ಜ್ಞಾನಿಗಳಾದ ಮಹಾ ಮುನಿಗಳು ಇದನ್ನು ಅವಿಮುಕ್ತವೆಂದು ತಿಳಿದಿರುತ್ತಾರೆ.

೨೮—೩೦. ಭೂಮಂಡಲವೇ ಇಲ್ಲದಿದ್ದು, ಜಲವೇ ಸೃಷ್ಟಿಯಾಗದಿದ್ದಂದು ಆ ಪರಮೇಶ್ವರನು ಈ ಕ್ಷೇತ್ರವನ್ನು ನಿರ್ಮಿಸಿದನು. ಎಲೈ ಕುಂಭಜನೆ, ಇದು ಈ ಕ್ಷೇತ್ರದ ರಹಸ್ಯವು. ಇದನ್ನಾರೂ ತಿಳಿದಿರುವುದಿಲ್ಲ. ಈ ರಹಸ್ಯವನ್ನು ನಾಸ್ತಿಕನಿಗೂ, ಚರ್ಮಚಕ್ಷುಷಿಗೂ ಎಂದಿಗೂ ಹೇಳತಕ್ಕದ್ದಲ್ಲ. ಶ್ರದ್ಧಾಳುವಾಗಿ ವಿನಯ ವಿಧೇಯತೆಗಳಿದ್ದು ಭೂತಭವಿಷ್ಯದ್ವರ್ತಮಾನ ಕಾಲಗಳ ಆಗುಹೋಗುಗಳನ್ನು ನೋಡಬಲ್ಲ ಜ್ಞಾನನೇತ್ರವುಳ್ಳವನಾಗಿ ಶಿವಭಕ್ತನೂ, ಶಾಂತನೂ, ಮೋಕ್ಷಾಪೇಕ್ಷಿಯೂ ಆದವನಿಗೆ ಮಾತ್ರ ಇದನ್ನು ಹೇಳತಕ್ಕದ್ದು.

೩೧. ಪಾರ್ವತೀಪರಮೇಶ್ವರರಿಗೆ ಹಂಸತೂಲಿಕಾತಲ್ಪವೆನಿಸಿ, ನಿರಂತರವೂ

ಅಭಾವಃ ಕಲ್ಪ್ಯತೇ ಮೂಢೈರ್ಯದಾ ಚ ಶಿವಯೋಸ್ತಯೋಃ ।
ಕ್ಷೇತ್ರಸ್ಯಾಽಸ್ಯ ತದಾ ಭಾವಃ ಕಲ್ಪ್ಯೋಽನಿರ್ವಾಣಕಾರಿಣಃ ॥ ೩೨ ॥
ಅನಾರಾಧ್ಯ ಮಹೇಶಾನಮನವಾಪ್ಯ ಚ ಕಾಶಿಕಾಂ ।
ಯೋಗಾದ್ಯುಪಾಯ ವಿಜ್ಞೋಽಪಿ ನ ನಿರ್ವಾಣಮವಾಪ್ನುಯಾತ್ ॥ ೩೩ ॥
ಅಸ್ಯಾನಂದವನಂ ನಾಮ ಪುರಾಽಕಾರಿ ಪಿನಾಕಿನಾ ।
ಕ್ಷೇತ್ರಸ್ಯಾನಂದಹೇತುತ್ವಾದವಿಮುಕ್ತಮನಂತರಂ ॥ ೩೪ ॥
ಆನಂದಕಂದಬೀಜಾನಾಮಂಕುರಾಣಿ ಯತಸ್ತತಃ ।
ಜ್ಞೇಯಾನಿ ಸರ್ವಲಿಂಗಾನಿ ತಸ್ಮಿನ್ನಾನಂದಕಾನನೇ ॥ ೩೫ ॥
ಅವಿಮುಕ್ತಮಿತಿಖ್ಯಾತಮಾಸೀದಿತ್ಥಂ ಘಟೋದ್ಭವ ।
ತಥಾಚಾಖ್ಯಾಮಥ ಮುನೇ ಯಥಾಸೀನ್ಮಣಿಕರ್ಣಿಕಾ ॥ ೩೬ ॥
ಪ್ರಾಗಾನಂದವನೇ ತತ್ರ ಶಿವಯೋ ರಮಮಾಣಯೋಃ ।
ಇಚ್ಛೇತ್ಯಭೂತ್ಕಲಶಜ ಸೃಜ್ಯಃ ಕೋಽಪ್ಯಪರಃ ಕಿಲ ॥ ೩೭ ॥

---

ಸುಖಾಸ್ಪದವಾಗಿರುವ ಈ ಕ್ಷೇತ್ರವು ಅದು ಮೊದಲುಗೊಂಡು ಅವಿಮುಕ್ತವೆಂದು ಹೇಳಲ್ಪಡುತ್ತಿದೆ.

೩೨-೩೩. ನೈಯಾಯಿಕರು ತಿಳಿವಳಿಕೆಯಿಲ್ಲದೆ ಪ್ರತಿಪಾದಿಸುವ ಕಾರ್ಯಮಾತ್ರದ ಪ್ರಳಯವನ್ನು ಪಾರ್ವತೀಪರಮೇಶ್ವರರಿಗೂ ಅನ್ವಯಿಸುವುದಾದರೆ ಆಗ ಮಾತ್ರ ಮೋಕ್ಷಪ್ರಾಪಕವಾದ ಈ ಕ್ಷೇತ್ರಕ್ಕೂ ಪ್ರಳಯವನ್ನು ಭಾವಿಸಬಹುದು. ಮಹೇಶ್ವರನನ್ನು ಆರಾಧಿಸದೆಯೂ ಕಾಶೀಕ್ಷೇತ್ರವನ್ನು ಹೊಂದದೆಯೂ ಇರುವ ಮಾನವನು ಯೋಗಾದಿ ವಿಜ್ಞಾನ ಸಂಪನ್ನನಾಗಿದ್ದರೂ ಮೋಕ್ಷವನ್ನು ಪಡೆಯುವುದಿಲ್ಲ.

೩೪. ಪೂರ್ವದಲ್ಲಿ ಪಿನಾಕಧರನಾದ ಪರಮೇಶ್ವರನು ಈ ಕ್ಷೇತ್ರವು ಆನಂದಕ್ಕೆ ನಿಧಾನವಾಗಿದ್ದುದರಿಂದ ಇದನ್ನು ಆನಂದಕಾನನವೆಂದು ಕರೆದನು. ಆಮೇಲೆ ಇದಕ್ಕೆ ಅವಿಮುಕ್ತವೆಂದು ಹೆಸರು ಬಂದಿತು.

೩೫. ಆನಂದಕಂದಬೀಜಗಳು (ಬ್ರಹ್ಮಾತ್ಮಗಳ ಐಕ್ಯಲಕ್ಷಣವಾದ ಜ್ಞಾನವು) ಮೊಳೆತಿರುವುವೊ ಎಂಬಂತೆ ಪ್ರಕಾಶಿಸುವ ಈ ಆನಂದಕಾನನದ ಸಮಸ್ತಶಿವಲಿಂಗಗಳನ್ನೂ ತಿಳಿದುಕೊಳ್ಳಬೇಕು.

೩೬. ಅಯ್ಯಾ ಘಟೋದ್ಭವನೆ, ಈ ಕ್ಷೇತ್ರಕ್ಕೆ ಅವಿಮುಕ್ತವೆಂಬ ಹೆಸರು ಪ್ರಸಿದ್ಧವಾದುದು ಹೀಗೆ. ಇನ್ನು ಮಣಿಕರ್ಣಿಕಾತೀರ್ಥವು ಉದ್ಭವಿಸಿದುದು ಹೇಗೆಂಬ ಕಥೆಯನ್ನು ಹೇಳುತ್ತೇನೆ, ಕೇಳು.

೩೭. ಹಿಂದೆ ಈ ಆನಂದಕಾನನದಲ್ಲಿ ಪಾರ್ವತೀಪರಮೇಶ್ವರರು ಕ್ರೀಡಿಸುತ್ತಿರುವಾಗ ಆ ಪರಮೇಶ್ವರನಿಗೆ ಮತ್ತೊಂದನ್ನು ಸೃಜಿಸಬೇಕೆಂಬ ಇಚ್ಛೆಯುಂಟಾಯಿತು.

ಯಸ್ಮಿನ್ನ್ಯಸ್ತೇ ಮಹಾಭಾರೇ ಆವಾಂ ಸ್ವಃ ಸ್ವೈರಚಾರಿಣೌ ।
ನಿರ್ವಾಣಶ್ರಾಣನಂ ಕುರ್ವಃ ಕೇವಲಂ ಕಾಶಿಶಾಯಿನಾಂ ॥ ೩೮ ॥
ಸ ಏವ ಸರ್ವಂ ಕುರುತೇ ಸ ಏವ ಪರಿಪಾತಿ ಚ ।
ಸ ಏವ ಸಂವೃಣೋತ್ಯಂತೇ ಸರ್ವೈಶ್ವರ್ಯನಿಧಿಃ ಸ ಚ ॥ ೩೯ ॥
ಚೇತಃಸಮುದ್ರಮಾಕುಂಚ್ಯ ಚಿಂತಾಕಲ್ಲೋಲದೋಲಿತಂ ।
ಸತ್ವರತ್ನಂ ತಮೋಗ್ರಾಹಂ ರಜೋ ನಿದ್ರುಮವಲ್ಲಿತಂ ॥ ೪೦ ॥
ಯಸ್ಯ ಪ್ರಸಾದಾತ್ತಿಷ್ಠಾವಃ ಸುಖಮಾನಂದಕಾನನೇ ।
ಪರಿಕ್ಷಿಪ್ತಮನೋವೃತ್ತೌ ಕ್ವ ಹಿ ಚಿಂತಾತುರೇ ಸುಖಂ ॥ ೪೧ ॥
ಸಂಪ್ರಧಾರ್ಯೇತಿ ಸ ವಿಭುಃ ಸರ್ವತಶ್ಚಿತ್ಸ್ವರೂಪಯಾ ।
ತಯಾ ಸಹ ಜಗದ್ಧಾತ್ರ್ಯಾ ಜಗದ್ಧಾತಾಽಥ ಧೂರ್ಜಟಿಃ ॥ ೪೨ ॥
ಸವ್ಯೇ ವ್ಯಾಪಾರಯಾಂಚಕ್ರೇ ದೃಶಮಂಗೇ ಸುಧಾಮುಚಂ ।
ತತಃ ಪುಮಾನಾವಿರಾಸೀದೇಕಸ್ತ್ರೈಲೋಕ್ಯಸುಂದರಃ ॥ ೪೩ ॥

---

೩೮. "ಯಾವುದರಲ್ಲಿ ಸಮಸ್ತಜೀವಿಗಳಿಗೂ ಮೋಕ್ಷವನ್ನು ನೀಡುವ ಕಾರ್ಯಭಾರವನ್ನು ನ್ಯಾಸಮಾಡಿದರೆ ನಾವೀರ್ವರೂ ನಮ್ಮ ಇಷ್ಟಬಂದಂತೆ ಸಂಚರಿಸುವವರಾಗಿ ಕಾಶೀಕ್ಷೇತ್ರದಲ್ಲಿ ಮೃತಿಯೊಂದಿದವರಿಗೆ ಮಾತ್ರ ಮೋಕ್ಷವನ್ನು ಅನುಗ್ರಹಿಸುವೆವೊ ಅಂತಹದೊಂದನ್ನು ಸೃಜಿಸಬೇಕು.

೩೯. ಅದೇ ಸಮಸ್ತ ಕಾರ್ಯಭಾರವನ್ನು ನಿರ್ವಹಿಸುತ್ತದೆ. ಸಮಸ್ತವನ್ನೂ ಪರಿಪಾಲಿಸುತ್ತದೆ. ಅಂತೆಯೆ ಸಮಸ್ತವನ್ನೂ ಸಂಹರಿಸುತ್ತದೆ. ಅದೇ ಸರ್ವೈಶ್ವರ್ಯಕ್ಕೂ ನಿಧಿಯಾಗಿರುವುದು.

೪೦—೪೧. ಇಂತು ಯೋಚಿಸಿ ಆ ಪರಮೇಶ್ವರನು ಚಿಂತೆಯೆಂಬ ತರಂಗಗಳಿಂದ ಆಂದೋಳಿತವಾಗಿ, ಸತ್ತ್ವವೆಂಬ ರತ್ನವನ್ನೊಳಗೊಂಡುದೂ, ಅಂಧಕಾರವೆಂಬ ಮೊಸಳೆಗಳುಳ್ಳುದೂ, ರಜೋಗುಣವೆಂಬ ಹವಳದ ಬಳ್ಳಿಗಳಿಂದಲಂಕೃತವಾದುದೂ ಆದ ಚಿತ್ತವೆಂಬ ಸಮುದ್ರವನ್ನು ಸ್ಥಿರೀಕರಿಸಿಕೊಂಡು, "ಯಾವುದರ ಪ್ರಸಾದದಿಂದ ಈ ಆನಂದಕಾನನದಲ್ಲಿ ನಾವೀರ್ವರೂ ಸುಖವಾಗಿರುವಂತಾಗುವುದೊ? ಮನಸ್ಸು ಅತ್ತಿತ್ತ ಚಲಿಸಿಹೋಗಿ, ಭೋಗವೊಂದರಲ್ಲಿಯೆ ಚಿಂತೆಯುಳ್ಳ ಪುರುಷನಿಗೆ ಎಲ್ಲಿಯೂ ಸುಖವೆಂಬುದಿರುವುದಿಲ್ಲ."

೪೨—೪೩. ಎಲೈ ಅಗಸ್ತ್ಯನೆ, ಜನದ್ಧಾತೃವೂ ಧೂರ್ಜಟಿಯೂ ಸರ್ವಾಂತರ್ಯಾಮಿಯೂ ಆದ ಆ ವಿಶ್ವೇಶ್ವರನು ಜಗದಂಬಿಕೆಯೊಡನೆ ಈ ಪ್ರಕಾರವಾಗಿ ನಿಶ್ಚಯಿಸಿ, ಆ ಬಳಿಕ ತನ್ನ ದಕ್ಷಿಣಾಂಗದಲ್ಲಿ ಅಮೃತವರ್ಷಿಯಾದ ದೃಷ್ಟಿಯನ್ನು ಪಸರಿಸಿದನು. ಒಡನೆಯೆ ತ್ರೈಲೋಕ್ಯಸುಂದರನಾದ ಓರ್ವ ಪುರುಷನು ಆ ಪರಮೇಶ್ವರನ ದಕ್ಷಿಣಾಂಗದಲ್ಲಿ ಉದ್ಭವಿಸಿದನು.

ಶಾಂತಃ ಸತ್ತ್ವಗುಣೋದ್ರಿಕ್ತೋ ಗಾಂಭೀರ್ಯಜಿತಸಾಗರಃ ।
ತಥಾ ಚ ಕ್ಷಮಯಾ ಯುಕ್ತೋ ಮುನೇಽಲಬ್ಧೋಪಮೋಽಭವತ್ ॥ ೪೪ ॥
ಇಂದ್ರನೀಲದ್ಯುತಿಃ ಶ್ರೀಮಾನ್ ಪುಂಡರೀಕೋತ್ತಮೇಕ್ಷಣಃ ।
ಸುವರ್ಣಾಕೃತಿ ಸುಚ್ಛಾಯದುಕೂಲಯುಗಲಾವೃತಃ ॥ ೪೫ ॥
ಲಸತ್ಪ್ರಚಂಡದೋರ್ದಂಡಯುಗಲದ್ವಯರಾಜಿತಃ ।
ಉಲ್ಲಸತ್ಪರಮಾಮೋದನಾಭೀಹ್ರದಕುಶೇಶಯಃ ॥ ೪೬ ॥
ಏಕಃ ಸರ್ವಗುಣಾವಾಸಸ್ತ್ವೇಕಃ ಸರ್ವಕಲಾನಿಧಿಃ ।
ಏಕಃ ಸರ್ವೋತ್ತಮೋ ಯಸ್ಮಾತ್ತತೋ ಯಃ ಪುರುಷೋತ್ತಮಃ ॥ ೪೭ ॥
ತತೋ ಮಹಾಂತಂ ತಂ ವೀಕ್ಷ್ಯ ಮಹಾಮಹಿಮಭೂಷಣಂ ।
ಮಹಾದೇವ ಉವಾಚೇದಂ ಮಹಾವಿಷ್ಣುರ್ಭವಾಽಚ್ಯುತ ॥ ೪೮ ॥
ತವ ನಿಃಶ್ವಸಿತಂ ವೇದಾಸ್ತೇಭ್ಯಃ ಸರ್ವಮವೈಷ್ಯಸಿ ।
ವೇದದೃಷ್ಟೇನ ಮಾರ್ಗೇಣ ಕುರು ಸರ್ವಂ ಯಥೋಚಿತಂ ॥ ೪೯ ॥
ಇತ್ಯುಕ್ತ್ವಾ ತಂ ಮಹೇಶಾನೋ ಬುದ್ಧಿತತ್ತ್ವಸ್ವರೂಪಿಣಂ ।
ಶಿವಯಾ ಸಹಿತೋ ರುದ್ರೋ ವಿವೇಶಾನಂದಕಾನನಂ ॥ ೫೦ ॥

---

೪೪-೪೭. ಆತನು ಶಾಂತನೂ, ಸತ್ತ್ವಗುಣದಿಂದ ಕೂಡಿದವನೂ, ಗಾಂಭೀರ್ಯದಿಂದ ಸಾಗರವನ್ನೇ ಜಯಿಸಿದವನೂ ಕ್ಷಮಾಗುಣದಿಂದ ಅನುಪಮನೂ ಆಗಿದ್ದನಲ್ಲದೆ, ಇಂದ್ರನೀಲಮಣಿಕಾಂತಿಯುಳ್ಳವನಾಗಿ ಮಹಾತೇಜಸ್ಸಂಪನ್ನನಾಗಿ ಕಮಲದಂತೆ ವಿಶಾಲವಾದ ನೇತ್ರಗಳಿಂದೊಪ್ಪಿ, ಚಿನ್ನದ ಪುತ್ಥಳಿಯಂತೆ ಹೊಳೆಯುತ್ತಿರುವ, ಚೀನಾಂಬರವನ್ನು ಹೊದೆದು ಪ್ರಕಾಶಮಾನವೂ, ಪ್ರಚಂಡವೂ ಆದ ಬಾಹುದಂಡಯುಗಳದಿಂದ ಪ್ರಕಾಶಿಸುತ್ತ, ಅರಳಿ ಗಮಗಮಿಸುತ್ತಿರುವ ನಾಭೀಪದ್ಮವುಳ್ಳವನಾಗಿ, ಸಮಸ್ತಕಲ್ಯಾಣಗುಣಗಳಿಗೂ ಮುಖ್ಯವಾದ ವಾಸಸ್ಥಾನವಾಗಿ, ಸಮಸ್ತಕಲೆಗಳಿಗೂ ನಿಧಿಸ್ವರೂಪನಾಗಿ ಸರ್ವೋತ್ತಮನೂ ಪುರುಷೋತ್ತಮನೂ ಆಗಿದ್ದನು.

೪೮. ತರುವಾಯ ಆ ಮಹಾದೇವನು ಅಮಿತ ಮಾಹಾತ್ಮ್ಯವನ್ನೊಳಗೊಂಡಿರುವ ಆ ಪುರುಷೋತ್ತಮನನ್ನು ಕಂಡು, "ಅಯ್ಯಾ ಪುರುಷನೆ, ನೀನು ಅಚ್ಯುತನು; ಇಂದಿನಿಂದ ನೀನು ವಿಷ್ಣುವಾಗು.

೪೯. ನಿನ್ನ ನಿಶ್ವಾಸವೇ ವೇದಗಳು. ಅವುಗಳಿಂದಲೆ ನೀನು ವೇದ್ಯನಾಗುವೆಯಲ್ಲದೆ ಸಮಸ್ತವನ್ನೂ ತಿಳಿಯುವೆ. ಆ ವೇದಗಳಲ್ಲಿ ಕಂಡುಬರುವ ಮಾರ್ಗದಲ್ಲಿಯೇ ನಡೆದು ಸೃಷ್ಟಿಸ್ಥಿತಿಲಯಾದಿಗಳೆಲ್ಲವನ್ನೂ ಯಥೋಚಿತವಾಗಿ ನಡೆಸುವವನಾಗಿ."

೫೦. ಎಲೈ ಅಗಸ್ತ್ಯನೆ, ಆ ಮಹೇಶ್ವರನು ಬುದ್ಧಿತತ್ತ್ವಸ್ವರೂಪಿಯಾದ

**ತತಃ ಸ ಭಗವಾನ್ ವಿಷ್ಣುರ್ಮೌಲಾವಾಜ್ಞಾಂ ನಿಧಾಯ ಚ ।**
**ಕ್ಷಣಂ ಧ್ಯಾನಪರೋ ಭೂತ್ವಾ ತಪಸ್ಯೇವ ಮನೋ ದಧೌ ॥ ೫೧ ॥**
**ಖನಿತ್ವಾ ತತ್ರ ಚಕ್ರೇಣ ರಮ್ಯಾಂ ಪುಷ್ಕರಿಣೀಂ ಹರಿಃ ।**
**ನಿಜಾಂಗಸ್ವೇದಸಂದೋಹಸಲಿಲೈಸ್ತಾಮಪೂರಯತ್ ॥ ೫೨ ॥**
**ಸಮಾಃ ಸಹಸ್ರಂ ಪಂಚಾಶತ್ತಪ ಉಗ್ರಂ ಚಚಾರ ಸಃ ।**
**ಚಕ್ರಪುಷ್ಕರಿಣೀತೀರೇ ತತ್ರ ಸ್ಥಾಣುಸಮಾಕೃತಿಃ ॥ ೫೩ ॥**
**ತತಃ ಸ ಭಗವಾನೀಶೋ ಮೃಡಾನ್ಯಾ ಸಹಿತೋ ಮೃಡಃ ।**
**ದೃಷ್ಟ್ವಾ ಜ್ವಲಂತಂ ತಪಸಾ ನಿಶ್ಚಲಂ ಮೀಲಿತೇಕ್ಷಣಂ ॥ ೫೪ ॥**
**ತಮುವಾಚ ಹೃಷೀಕೇಶಂ ಮೌಲಿಮಾಂದೋಲಯನ್ಮುಹುಃ ।**
**ಅಹೋ ಮಹತ್ವಂ ತಪಸಸ್ತ್ವಹೋ ಧೈರ್ಯಂ ಚ ಚೇತಸಃ ॥ ೫೫ ॥**
**ಅಹೋ ಅನಿಂಧನೋ ವಹ್ನಿರ್ಜ್ವಲತ್ಯೇಷ ನಿರಂತರಂ ।**
**ಅಲಂ ತಪಸ್ತ್ವಾ ಮಹಾವಿಷ್ಣೋ ವರಂ ವರಯ ಸತ್ತಮ ॥ ೫೬ ॥**

---

ಆ ವಿಷ್ಣುವನ್ನು ಕುರಿತು ಈ ರೀತಿ ಹೇಳಿದ ತರುವಾಯ ಶಿವೆಯೊಡಗೂಡಿ ಆನಂದಕಾನನವನ್ನು ಪ್ರವೇಶಿಸಿದನು.

೫೧. ತರುವಾಯ ಷಡ್ಗುಣೈಶ್ವರ್ಯಪರಿಪೂರ್ಣನಾದ ಆ ವಿಷ್ಣುವಾದರೋ ಪರಮೇಶ್ವರನ ಆಣತಿಯನ್ನು ಶಿರಸಾ ಧಾರಣೆಮಾಡಿದವನಾಗಿ, ಒಂದು ಕ್ಷಣ ಕಾಲ ಧ್ಯಾನದಲ್ಲಿ ಮಗ್ನನಾಗಿದ್ದು, ತರುವಾಯ ತಪಶ್ಚರಣದಲ್ಲಿಯೆ ಮನಸ್ಸನ್ನು ನೆಲೆಗೊಳಿಸಿದನು.

೫೨. ಆ ಹರಿಯು ತನ್ನ ಚಕ್ರಾಯುಧದಿಂದ ಮನೋಹರವಾದ ಪುಷ್ಕರಿಣಿಯೊಂದನ್ನು ತೋಡಿ, ತನ್ನ ಮೈಯ್ಯ ಬೆಮರ ನೀರಿನಿಂದ ಅದನ್ನು ತುಂಬಿಸಿದನು

೫೩. ಆ ಚಕ್ರಪುಷ್ಕರಿಣೀತೀರದಲ್ಲಿ ಆತನು ಸ್ಥಾಣುವಿನಂತೆ ಕಟ್ಟಕಡಲದ ಐವತ್ತು ಸಾವಿರ ವರ್ಷಗಳ ಕಾಲ ಉಗ್ರವಾದ ತಪಸ್ಸನ್ನು ಮಾಡಿದನು.

೫೪–೫೬. ಬಳಿಕ ಪರಮೇಶ್ವರನು ಪಾರ್ವತೀಸಹಿತನಾಗಿ, ನಿಶ್ಚಲನಾಗಿ ಕುಳಿತು, ಕಣ್ಣುಗಳನ್ನು ಮುಗಿದುಕೊಂಡು ತಪಸ್ಸಿನಿಂದ ಪ್ರಜ್ವಲಿಸುತ್ತಿದ್ದ ಅವನನ್ನು ಕಂಡು, ಶಿರಸ್ಸನ್ನು ಅಡಿಗಡಿಗೂ ಅಲುಗಾಡಿಸಿ, ಅವನನ್ನು ಕುರಿತು "ಆಹ, ಎಂತಹ ಮಹತ್ತರವಾದ ತಪಸ್ಸನ್ನಾಚರಿಸಿದೆ! ನಿನ್ನ ಚಿತ್ತಸ್ಥೈರ್ಯವು ಆಶ್ಚರ್ಯಕರವಾದುದು. ಈ ನಿನ್ನ ತಪಸ್ಸನ್ನು ನೋಡಿದರೆ ಸಾಕ್ಷಾದಗ್ನಿಯು ಕಾಷ್ಠಗಳಿಲ್ಲದೆಯೆ ನಿರಂತರವೂ ಜ್ವಲಿಸುತ್ತಿರುವಂತಿದೆ. ಎಲೈ ಮಹಾವಿಷ್ಣುವೆ ಇನ್ನು ಈ ತಪಸ್ಸನ್ನು ಸಾಕುಮಾಡು. ಎಲೈ ಶ್ರೇಷ್ಠನೆ, ನಿನಗೆ ಬೇಕಾದ ವರವನ್ನು ಕೇಳಿಕೊ" ಎಂದು ಹೇಳಿದನು.

ಮೃಡಸ್ಯಾಮ್ರೇಡಿತಮಿದಂ ಪ್ರತ್ಯಭಿಜ್ಞಾಯ ಭಾಷಿತಂ ।
ಉನ್ಮೀಲಿತದೃಗಂಭೋಜಃ ಸಮುತ್ತಸ್ಥೌ ಚತುರ್ಭುಜಃ ॥ ೫೭ ॥
ಶ್ರೀ ವಿಷ್ಣುರುವಾಚ :—
ಯದಿ ಪ್ರಸನ್ನೋ ದೇವೇಶ ದೇವದೇವ ಮಹೇಶ್ವರ ।
ಭವಾನ್ಯಾ ಸಹಿತಂ ತ್ವಾಂ ತು ದ್ರಷ್ಟುಮಿಚ್ಛಾಮಿ ಸರ್ವದಾ ॥ ೫೮ ॥
ಸರ್ವಕರ್ಮಸು ಸರ್ವತ್ರ ತ್ವಾಮೇವ ಶಶಿಶೇಖರ ।
ಪುರಶ್ಚರಂತಂ ಪಶ್ಯಾಮಿ ಯಥಾ ತನ್ಮೇ ವರಸ್ತಥಾ ॥ ೫೯ ॥
ತ್ವದೀಯಚರಣಾಂಭೋಜಮಕರಂದಮಧೂತ್ಸುಕಃ ।
ಮಚ್ಚೇತೋಭ್ರಮರೋ ಭ್ರಾಂತಿಂ ವಿಹಾಯಾಸ್ತು ಸುನಿಶ್ಚಲಃ ॥ ೬೦ ॥
ಶ್ರೀ ಶಿವ ಉವಾಚ :—
ಏವಮಸ್ತು ಹೃಷೀಕೇಶ ಯತ್ತ್ವಯೋಕ್ತಂ ಜನಾರ್ದನ ।
ಅನ್ಯಂ ವರಂ ಪ್ರಯಚ್ಛಾಮಿ ತಮಾಕರ್ಣಯ ಸುವ್ರತ ॥ ೬೧ ॥
ತ್ವದೀಯಸ್ಯಾಸ್ಯ ತಪಸೋ ಮಹೋಪಚಯದರ್ಶನಾತ್ ।
ಯನ್ಮಯಾಂದೋಲಿತೋ ಮೌಲಿರಹಿಶ್ರವಣಭೂಷಣಃ ॥ ೬೨ ॥

---

೫೭. ಪರಮೇಶ್ವರನು ಮತ್ತೆ ಮತ್ತೆ ನುಡಿದ ಈ ಮಾತುಗಳನ್ನು ಕೇಳಿ ಆ ಚತುರ್ಭುಜನು. ತನ್ನ ತಾವರೆಗಣ್ಣುಗಳನ್ನು ಅರಳಿಸಿ ಆ ಸ್ವಾಮಿಯನ್ನು ಕಂಡು ದಿಗ್ಗನೆದ್ದು ನಿಂತನು.

೫೮–೬೦. ಶ್ರೀ ವಿಷ್ಣುವು ಹೇಳುತ್ತಾನೆ:—"ದೇವೇಶ್ವರ, ಮಹೇಶ್ವರನಾದ ನೀನು ನನ್ನಲ್ಲಿ ಪ್ರಸನ್ನನಾಗಿರುವೆಯಾದರೆ, ಭವಾನೀಸಹಿತನಾದ ನಿನ್ನನ್ನು ಸರ್ವಕಾಲಗಳಲ್ಲಿಯೂ ನೋಡುತ್ತಿರಲಪೇಕ್ಷಿಸುತ್ತೇನೆ. ನಾನು ಮಾಡುವ ಸಮಸ್ತ ಕರ್ಮಗಳಲ್ಲಿಯೂ, ನಾನು ಸಂಚರಿಸುವ ಸಮಸ್ತ ಪ್ರದೇಶಗಳಲ್ಲಿಯೂ ಶಶಿಶೇಖರನಾದ ನೀನೇ ಮುಂದಾಗಿರುವುದನ್ನು ನೋಡಬಯಸುತ್ತೇನೆ. ನನಗೆ ಈ ವರವನ್ನುಮಾತ್ರ ಅನುಗ್ರಹಿಸು. ನನ್ನ ಚಿತ್ತವೆಂಬ ಭ್ರಮರವು ನಿನ್ನ ಚರಣ ಕಮಲದ ಮಕರಂದವೆಂಬ ಮಧುವನ್ನು ಪಾನಮಾಡುವುದರಲ್ಲಿಯೆ ಆಸಕ್ತವಾಗಿ ಮತ್ತೆಲ್ಲಿಯೂ ಹೋಗದೆ ನಿಶ್ಚಲವಾಗಿರಲಿ."

೬೧. ಶ್ರೀ ಶಿವನು ಹೇಳುತ್ತಾನೆ:—"ಅಯ್ಯಾ ಹೃಷೀಕೇಶನೇ, ನೀನು ಕೇಳಿದಂತೆಯೆ ಆಗಲಿ. ಎಲೈ ಸುವ್ರತನೆ, ನಾನು ನಿನಗೆ ಮತ್ತೊಂದು ವರವನ್ನೂ ಕೊಡುವೆನು ಕೇಳು.

೬೨–೬೩. ಈ ನಿನ್ನ ತಪಸ್ಸನ್ನು ನೋಡಿದ ನಾನು ನಾಗಕುಂಡಲಗಳಿಂದ ಅಲಂಕೃತವಾದ ಕಿವಿಗಳಿಂದೊಪ್ಪುತ್ತಿರುವ ಈ ಶಿರಸ್ಸನ್ನು ಆಶ್ಚರ್ಯದಿಂದ

ತದಾಂದೋಲನತಃ ಕರ್ಣಾತ್ಪಪಾತ ಮಣಿಕರ್ಣಿಕಾ ।
ಮಣಿಭಿಃ ಖಚಿತಾ ರಮ್ಯಾ ತತೋಽಸ್ತು ಮಣಿಕರ್ಣಿಕಾ ॥ ೬೩ ॥
ಚಕ್ರಪುಷ್ಕರಿಣೀತೀರ್ಥಂ ಪುರಾ ಖ್ಯಾತಮಿದಂ ಶುಭಂ ।
ತ್ವಯಾ ಚಕ್ರೇಣ ಖನನಾಚ್ಛಂಖಚಕ್ರಗದಾಧರ ॥ ೬೪ ॥
ಮಮ ಕರ್ಣಾತ್ಪಪಾತೇಯಂ ಯದಾ ಚ ಮಣಿಕರ್ಣಿಕಾ ।
ತದಾ ಪ್ರಭೃತಿ ಲೋಕೇಽತ್ರ ಖ್ಯಾತಾಽಸ್ತು ಮಣಿಕರ್ಣಿಕಾ ॥ ೬೫ ॥

ಶ್ರೀ ವಿಷ್ಣುರುವಾಚ :—

ಮುಕ್ತಾಕುಂಡಲಪಾತೇನ ತವಾಽದ್ರಿತನಯಾಪ್ರಿಯ ।
ತೀರ್ಥಾನಾಂ ಪರಮಂ ತೀರ್ಥಂ ಮುಕ್ತಿಕ್ಷೇತ್ರಮಿಹಾಽಸ್ತು ವೈ ॥ ೬೬ ॥
ಕಾಶತೇಽತ್ರ ಯತೋ ಜ್ಯೋತಿಸ್ತದನಾಖ್ಯೇಯಮೀಶ್ವರಃ ।
ಅತೋ ನಾಮಾಽಪರಂ ಚಾಽಸ್ತು ಕಾಶೀತಿ ಪ್ರಥಿತಂ ವಿಭೋ ॥ ೬೭ ॥
ಅನ್ಯಂ ವರಂ ವರೇ ದೇವ ದೇಯಃ ಸೋಽಪ್ಯವಿಚಾರಿತಂ ।
ಸ ತೇ ಪರೋಪಕಾರಾರ್ಥಂ ಜಗದ್ರಕ್ಷಾಮಣೇ ಶಿವ ॥ ೬೮ ॥

---

ತೂಗಿದೆನಷ್ಟೆ. ಆ ಕಾರಣದಿಂದ ರತ್ನಖಚಿತವಾದ ಮಣಿಕರ್ಣಿಕೆಯು ನನ್ನ ಕಿವಿಯಿಂದ ಜಾರಿ ಬಿದ್ದಿತು. ಆದುದರಿಂದ ಈ ಸರಸ್ಸು ಮಣಿಕರ್ಣಿಕೆಯೆಂದು ಪ್ರಸಿದ್ಧವಾಗಲಿ.

೬೪. ಈ ಸರಸ್ಸು ಪೂರ್ವದಲ್ಲಿ, ನೀನು ಚಕ್ರದಿಂದ ತೋಡಿ ನಿರ್ಮಿಸಿದುದಾಗಿ ಚಕ್ರಪುಷ್ಕರಿಣೀತೀರ್ಥವೆಂದು ಪ್ರಸಿದ್ಧವಾಗಿದ್ದಿತು.

೬೫. ಶಂಖಚಕ್ರಗದಾಧರನಾದ ಎಲೈ ವಿಷ್ಣುವೆ, ಈಗ ನನ್ನ ಕಿವಿಯಿಂದ ಮಣಿಕರ್ಣಿಕೆಯು ಇಲ್ಲಿ ಜಾರಿಬಿದ್ದುದರಿಂದ ಇಂದು ಮೊದಲುಗೊಂಡು ಲೋಕದಲ್ಲಿ ಈ ತೀರ್ಥವು ಮಣಿಕರ್ಣಿಕೆಯೆಂದು ಪ್ರಖ್ಯಾತಿಗೊಳ್ಳಲಿ.

೬೬. ಶ್ರೀವಿಷ್ಣುವು ಹೇಳುತ್ತಾನೆ:—ಎಲೈ ಪಾರ್ವತೀಪ್ರಿಯನಾದ ಶಂಕರನೆ, ನಿನ್ನ ಮುತ್ತಿನೋಲೆಯು ಇಲ್ಲಿ ಬಿದ್ದುದರಿಂದ ಈ ತೀರ್ಥವು ಅತ್ಯುತ್ತಮವಾದ ತೀರ್ಥವಾಗಲಿ. ಇಲ್ಲಿನ ಕ್ಷೇತ್ರವೆಲ್ಲವೂ ಮುಕ್ತಿಕ್ಷೇತ್ರವಾಗಲಿ.

೬೭. ಅನಿರ್ವಾಚ್ಯವಾದ ಈಶ್ವರನೆಂಬ ಜ್ಯೋತಿಯು ಇಲ್ಲಿ ಸತತವಾಗಿ ಪ್ರಕಾಶಿಸುತ್ತಿರುವುದರಿಂದ ಎಲೈ ವಿಭುವೆ, ಈ ಕ್ಷೇತ್ರಕ್ಕೆ ಕಾಶೀ ಎಂಬ ಮತ್ತೊಂದು ಹೆಸರು ಪ್ರಸಿದ್ಧವಾಗಲಿ.

೬೮. ಎಲೈ ಸ್ವಾಮಿಯೆ, ಇನ್ನೊಂದು ವರವನ್ನೂ ನಾನು ಬೇಡುವೆನು. ಅದನ್ನೂ ನೀನು ಯಾವ ವಿಚಾರವನ್ನೂ ಮಾಡದೆ ನನಗೆ ಅನುಗ್ರಹಿಸಬೇಕು. ಎಲೈ ಶಿವನೆ, ಜಗದ್ರಕ್ಷಾಮಣಿಯೆ, ನಾನು ಈ ವರವನ್ನು ಪರೋಪಕಾರಕ್ಕಾಗಿ ನಿನ್ನನ್ನು ಕೇಳುತ್ತಿರುವೆನು.

ಆಬ್ರಹ್ಮಸ್ತಂಬಪರ್ಯಂತಂ ಯತ್ಕಿಂಚಿಜ್ಜಂತುಸಂಜ್ಞಿತಂ ।
ಚತುರ್ಷು ಭೂತಗ್ರಾಮೇಷು ಕಾಶ್ಯಾಂ ತನ್ಮುಕ್ತಿಮಾಪ್ನುತು ॥ ೧೯ ॥
ಅಸ್ಮಿಂಸ್ತೀರ್ಥವರೇ ಶಂಭೋ ಮಣಿಶ್ರವಣಭೂಷಣೇ ।
ಸಂಧ್ಯಾಂ ಸ್ನಾನಂ ಜಪಂ ಹೋಮಂ ವೇದಾಽಧ್ಯಯನಮುತ್ತಮಂ ।
ತರ್ಪಣಂ ಪಿಂಡದಾನಂ ಚ ದೇವತಾನಾಂ ಚ ಪೂಜನಂ ॥ ೨೦ ॥
ಗೋ ಭೂ ತಿಲ ಹಿರಣ್ಯಾಽಶ್ವ ದೀಪಾಽನ್ನಾಽಂಬರ ಭೂಷಣಂ ।
ಕನ್ಯಾದಾನಂ ಪ್ರಯತ್ನೇನ ಸಪ್ತತಂತೂನನೇಕಶಃ ॥ ೨೧ ॥
ವ್ರತೋತ್ಸರ್ಗಂ ವೃಷೋತ್ಸರ್ಗಂ ಲಿಂಗಾದಿಸ್ಥಾಪನಂ ತಥಾ ।
ಕರೋತಿ ಯೋ ಮಹಾಪ್ರಾಜ್ಞೋ ಜ್ಞಾತ್ವಾಽಽಯುಃ ಕ್ಷಣಗತ್ವರಂ ॥ ೨೨ ॥
ವಿಪತ್ತಿಂ ವಿಪುಲಾಂ ಚಾಽಪಿ ಸಂಪತ್ತಿಮತಿಭಂಗುರಾಂ ।
ಅಕ್ಷಯಾ ಮುಕ್ತಿರೇಕಾಸ್ತು ವಿಪಾಕಸ್ತಸ್ಯ ಕರ್ಮಣಃ ॥ ೨೩ ॥
ಅನ್ಯಚ್ಚಾಽಪಿ ಶುಭಂ ಕರ್ಮ ಯದತ್ರ ಶ್ರದ್ಧಯಾ ಕೃತಂ ।
ವಿನಾತ್ಮಘಾತಮೀಶಾನ ತ್ಯಕ್ತ್ವಾ ಪ್ರಾಯೋಪವೇಶನಂ ॥ ೨೪ ॥
ನೈಃಶ್ರೇಯಸ್ಯಾಃ ಶ್ರಿಯೋ ಹೇತುಸ್ತದಸ್ತು ಜಗದೀಶ್ವರ ।
ನಾಽನುಶೋಚತಿ ನಾಖ್ಯಾತಿ ಕೃತ್ವಾ ಕಾಲಾಂತರೇಽಪಿ ಯತ್ ॥ ೨೫ ॥

---

೧೯. ಆಬ್ರಹ್ಮಸ್ತಂಭಪರ್ಯಂತವಾಗಿ ಚತುರ್ವಿಧ ಭೂತಗ್ರಾಮಗಳಲ್ಲಿ ಜಂತುಸಂಜ್ಞಿತವಾದ ಯಾವ ಯಾವ ಪ್ರಾಣಿಯು ಈ ಕಾಶಿಯಲ್ಲಿ ಇರುವುದೊ ಅದೆಲ್ಲವೂ ಮುಕ್ತಿಯನ್ನು ಪಡೆಯಲಿ.

೨೦–೨೩. ಎಲೈ ಶಂಭುವೆ, ನಿನ್ನ ಮಣಿಕರ್ಣಿಕೆಯಿಂದಲಂಕೃತವಾಗಿ ಆ ಹೆಸರಿನಿಂದಲೆ ವಿರಾಜಿಸುತ್ತಿರುವ ಈ ತೀರ್ಥಶ್ರೇಷ್ಠದಲ್ಲಿ ಸ್ನಾನ, ಸಂಧ್ಯಾವಂದನೆ, ಜಪ, ಹೋಮ, ಉತ್ತಮವಾದ ವೇದಾಧ್ಯಯನ, ಪಿತೃರ್ಷಿತರ್ಪಣಗಳು, ಪಿತೃಗಳಿಗೆ ಪಿಂಡದಾನಗಳು, ದೇವತಾಪೂಜನ, ಗೋವು, ಭೂಮಿ, ತಿಲ, ಹಿರಣ್ಯ, ಅಶ್ವ, ದೀಪ, ಅನ್ನ, ವಸ್ತ್ರ, ಭೂಷಣ, ಕನ್ಯೆ ಮೊದಲಾದ ದಾನಗಳು, ಅಗ್ನಿಷ್ಟೋಮಾದಿ ಯಾಗಗಳು, ವ್ರತಸಮಾಪನ, ವೃಷೋತ್ಸರ್ಗ, ಶಿವಲಿಂಗಾದಿ ಪ್ರತಿಷ್ಠೆಗಳು ಮೊದಲಾದುವುಗಳನ್ನು ಮಹಾಪ್ರಾಜ್ಞನಾದ ಯಾವ ಮಾನವನು, ಆಯುಸ್ಸು ಕ್ಷಣಿಕವೆಂಬ ಸಂಗತಿಯನ್ನು ಅರಿತುಕೊಂಡು, ಬಾಳಿನಲ್ಲಿ ವಿಪತ್ತುಗಳೇ ಅಧಿಕವೆಂಬುದನ್ನೂ, ತನಗಿರುವ ಸಂಪತ್ತು ಅತಿಚಂಚಲವೆಂಬುದನ್ನೂ ತಿಳಿದು ಮಾಡುತ್ತಾನೆಯೊ ಅವನಿಗೆ ಆಯಾ ಕರ್ಮಗಳ ಫಲವಾಗಿ ಅಕ್ಷಯವಾದ ಮುಕ್ತಿಯೊಂದೇ ದೊರಕಲಿ.

೨೪–೨೬. ಎಲೈ ಶಂಭುವೆ, ಇಷ್ಟೇ ಅಲ್ಲದೆ ಈ ಮಣಿಕರ್ಣಿಕಾತೀರ್ಥದಲ್ಲಿ ಪ್ರಾಯೋಪವೇಶವನ್ನು ಮಾಡಿ ಆತ್ಮಹತ್ಯೆಯೊಂದನ್ನುಳಿದು, ಮಾನವನು ಶ್ರದ್ಧಾ

ತದಿಹಾಽಕ್ಷಯತಾಮೇತು ತಸ್ಯೇಶ ತ್ವದನುಗ್ರಹಾತ್ ।
ತವ ಪ್ರಸಾದಾತ್ತಸ್ಯೇಶ ಸರ್ವಮಕ್ಷಯಮಸ್ತು ತತ್ ॥ ೭೬ ॥
ಯದಸ್ತಿ ತದ್ಭವಿಷ್ಯಚ್ಚ ಯದ್ಭೂತಂ ಚ ಸದಾಶಿವ ।
ತಸ್ಮಾದೇತಚ್ಚ ಸರ್ವಸ್ಮಾತ್ಕ್ಷೇತ್ರಮಸ್ತು ಶುಭೋದಯಂ ॥ ೭೭ ॥
ಯಥಾ ಸದಾಶಿವ ತ್ವತ್ತೋ ನ ಕಿಂಚಿದಧಿಕಂ ಶಿವಂ ।
ತಥಾಽಽನಂದವನಾದಸ್ಮಾತ್ಕಿಂಚಿನ್ಮಾಸ್ತ್ವಧಿಕಂ ಕ್ವಚಿತ್ ॥ ೭೮ ॥
ವಿನಾ ಸಾಂಖ್ಯೇನ ಯೋಗೇನ ವಿನಾ ಸ್ವಾತ್ಮಾಽವಲೋಕನಂ ।
ವಿನಾ ವ್ರತತಪೋದಾನೈಃ ಶ್ರೇಯೋಽಸ್ತು ಪ್ರಾಣಿನಾಮಿಹ ॥ ೭೯ ॥
ಶಶಕಾ ಮಶಕಾಃ ಕೀಟಾಃ ಪತಂಗಾಸ್ತುರಗೋರಗಾಃ ।
ಪಂಚಕ್ರೋಶ್ಯಾಂ ಮೃತಾಃ ಕಾಶ್ಯಾಂ ಸಂತು ನಿರ್ವಾಣದೀಕ್ಷಿತಾಃ ॥ ೮೦ ॥
ನಾಮಾಽಪಿ ಗೃಹ್ಣತಾಂ ಕಾಶ್ಯಾಃ ಸದೈವಾಸ್ತ್ವೇನಸಃ ಕ್ಷಯಃ ॥ ೮೧ ॥

ಯುಕ್ತನಾಗಿ ಯಾವುದೇ ಶುಭಕರ್ಮವನ್ನು ಆಚರಿಸಿದರೂ ಅದು ಮುಕ್ತಿ ಪ್ರಾಪ್ತಿಗೆ ಕಾರಣವಾಗಿ ಪರಿಣಮಿಸಲಿ. ಮಾನವನು ಶುಭಕರ್ಮವನ್ನೆಸಗಿ ಆಮೇಲೆ ಮರುಗದೆಯೂ, ಕಾಲಾಂತರದಲ್ಲಿ ಅದನ್ನು ಬೇರೊಬ್ಬರಿಗೆ ತಿಳಿಸದೆಯೂ ಇದ್ದಲ್ಲಿ ಆ ಕರ್ಮವು ಇಲ್ಲಿ ಪರಮೇಶ್ವರನಾದ ನಿನ್ನ ಅನುಗ್ರಹದಿಂದ ಅಕ್ಷಯ ವೆನಿಸಲಿ. ಆ ಕರ್ಮವೊಂದೇ ಅಲ್ಲದೆ ನಿನ್ನ ಅನುಗ್ರಹದಿಂದಲೆ ಅವನಿಗೆ ಸೇರಿದ ಸರ್ವಸ್ವವೂ ಅಕ್ಷಯವಾಗಲಿ.

೭೭. ಯಾವುದಿರುವುದೊ, ಯಾವುದು ಆಗುವುದೊ, ಯಾವುದು ಆಗಿದ್ದಿತೊ ಅವೆಲ್ಲಕ್ಕಿಂತಲೂ ಈ ಕಾಶೀಕ್ಷೇತ್ರವು ಉತ್ತಮವೆನಿಸಿ ಸಮಸ್ತ ಶುಭಗಳಿಗೂ ಜನ್ಮ ಭೂಮಿಯೆನಿಸಲಿ.

೭೮. ಎಲೈ ಶಿವನೆ, ಈ ಪ್ರಪಂಚದಲ್ಲಿ ನಿನಗಿಂತಲೂ ಮಂಗಳಕರವಾದ ಏನೊಂದೂ ಇಲ್ಲದಿರುವುದರಿಂದ ನೀನು ನೆಲಸಿರುವ ಆನಂದವನವೆಂದು ಪ್ರಸಿದ್ಧ ನಾದ ಈ ಕಾಶೀಕ್ಷೇತ್ರಕ್ಕಿಂತಲೂ ಅಧಿಕವಾದದ್ದು ಯಾವುದೂ ಇಲ್ಲದಿರಲಿ.

೭೯. ಆತ್ಮಾನಾತ್ಮವಿವೇಕಮೂಲವಾದ ಸಾಂಖ್ಯಶಾಸ್ತ್ರದ ಪರಿಚಯ, ಅಷ್ಟಾಂಗಸಹಿತವಾದ ಯೋಗಶಾಸ್ತ್ರಾಭ್ಯಾಸ, ಜೀವಬ್ರಹ್ಮರ ಐಕ್ಯಾನುಸಂಧಾನ, ವಿವಿಧ ವ್ರತಗಳು, ತಪಸ್ಸು, ದಾನ ಈ ಮೊದಲಾದುವೇನನ್ನೂ ಮಾಡದೆ ಇದ್ದರೂ ಈ ಕ್ಷೇತ್ರನಿವಾಸಿಗಳಾದ ಪ್ರಾಣಿಗಳಿಗೆ ಸತತವೂ ಶ್ರೇಯಸ್ಸೇ ಲಭಿಸಲಿ.

೮೦-೮೧. ಐದು ಕ್ರೋಶಗಳ ಪರಿಮಿತಿಯುಳ್ಳ ಈ ಕಾಶಿಯಲ್ಲಿ ಮೃತಿ ಹೊಂದುವ ಮೊಲ, ಸೊಳ್ಳೆ, ಸಣ್ಣಪುಟ್ಟಕ್ರಿಮಿಗಳು, ಪತಂಗದ ಹುಳುಗಳು, ಕುದುರೆ, ಸರ್ಪಗಳು, ಎಲ್ಲವೂ ಮುಕ್ತಿಗೆ ಸಲ್ಲಲಿ. ಕಾಶಿಯ ಹೆಸರನ್ನು ಹೇಳಿ ಕೊಳ್ಳುವ ಮಾನವರಿಗೂ ಪಾಪಕ್ಷಯವಾಗಿ ಶ್ರೇಯಸ್ಸು ಲಭಿಸಲಿ.

ಸದಾ ಕೃತಯುಗಂ ಚಾಽಸ್ತು ಸದಾಚಾಽಸ್ತೂತ್ತರಾಯಣಂ ।
ಸದಾ ಮಹೋದಯಶ್ಚಾಽಸ್ತು ಕಾಶ್ಯಾಂ ನಿವಸತಾಂ ಸತಾಂ ॥ ೮೩ ॥
ಯಾನಿ ಕಾನಿ ಪವಿತ್ರಾಣಿ ಶ್ರುತ್ಯುಕ್ತಾನಿ ಸದಾ ಶಿವ ।
ತೇಭ್ಯೋಽಧಿಕತರಂ ಚಾಽಸ್ತು ಕ್ಷೇತ್ರಮೇತತ್ತ್ರಿಲೋಚನ ॥ ೮೪ ॥
ಚತುರ್ಣಾಮಪಿ ವೇದಾನಾಂ ಪುಣ್ಯಮಧ್ಯಯನಾಚ್ಚ ಯತ್ ।
ತತ್ಪುಣ್ಯಂ ಜಾಯತಾಂ ಕಾಶ್ಯಾಂ ಗಾಯತ್ರೀಲಕ್ಷಜಾಪ್ಯತಃ ॥ ೮೫ ॥
ಅಷ್ಟಾಂಗ ಯೋಗಾಽಭ್ಯಾಸೇನ ಯತ್ಪುಣ್ಯಮಪಿ ಜಾಯತೇ ।
ತತ್ಪುಣ್ಯಂ ಸಾಽಧಿಕಂ ಭೂಯಾಚ್ಛ್ರದ್ಧಾ ಕಾಶೀನಿಷೇವಣಾತ್ ॥ ೮೬ ॥
ಕೃಚ್ಛ್ರಚಾಂದ್ರಾಯಣಾದ್ಯೈಶ್ಚ ಯಚ್ಛ್ರೇಯಃ ಸಮುಪಾರ್ಜ್ಯತೇ ।
ತದೇಕೇನೋಪವಾಸೇನ ಭವತ್ವಾನಂದಕಾನನೇ ॥ ೮೭ ॥
ಅನ್ಯತ್ರ ಯತ್ತಪಸ್ತಪ್ತ್ವಾ ಶ್ರೇಯಃ ಸ್ಯಾಚ್ಛರದಾಂ ಶತಂ ।
ತದಸ್ತು ಕಾಶ್ಯಾಂ ವರ್ಷೇಣ ಭೂಮಿಶಯ್ಯಾವ್ರತೇನ ಹಿ ॥ ೮೮ ॥
ಆಜನ್ಮಮೌನವ್ರತತೋ ಯದನ್ಯತ್ರ ಫಲಂ ಸ್ಮೃತಂ ।
ತದಸ್ತು ಕಾಶ್ಯಾಂ ಪಕ್ಷಾಽಹಃ ಸತ್ಯವಾಕ್ಪರಿಭಾಷಣಾತ್ ॥ ೮೯ ॥

---

೮೩. ಈ ಕ್ಷೇತ್ರದಲ್ಲಿ ವಾಸಮಾಡುವವರಿಗೆ ಯಾವಾಗಲೂ ಕೃತಯುಗವೇ ಆಗಿರಲಿ. ಯಾವಾಗಲೂ ಉತ್ತರಾಯಣವೇ ನಡೆಯಲಿ. ಯಾವಾಗಲೂ ಮಹೋದಯಪುಣ್ಯಕಾಲವೇ ಆಗಿರಲಿ.

೮೪. ಎಲೈ ತ್ರಿಲೋಚನನೆ, ಶ್ರುತಿಗಳಲ್ಲಿ ಹೇಳಿರುವ ಸಮಸ್ತ ಪವಿತ್ರವಸ್ತುಗಳಿಗಿಂತಲೂ ಈ ಕಾಶೀಕ್ಷೇತ್ರವು ಉತ್ತಮೋತ್ತಮವೆನಿಸಲಿ.

೮೫. ನಾಲ್ಕುವೇದಗಳಅಧ್ಯಯನದಿಂದ ಲಭ್ಯವಾಗುವ ಪುಣ್ಯವು ಈ ಕಾಶೀಕ್ಷೇತ್ರದಲ್ಲಿ ಒಂದು ಲಕ್ಷ ಗಾಯತ್ರೀಜಪವನ್ನು ಮಾಡುವುದರಿಂದಲೇ ಲಭಿಸಲಿ.

೮೬. ಅಷ್ಟಾಂಗಸಹಿತವಾದ ಯೋಗವನ್ನು ಅಭ್ಯಾಸಮಾಡುವುದರಿಂದ ಯಾವ ಪುಣ್ಯವುಂಟಾಗುತ್ತದೆಯೊ ಅದಕ್ಕಿಂತಲೂ ಹೆಚ್ಚಾದ ಪುಣ್ಯವು ಈ ಕಾಶೀಕ್ಷೇತ್ರವನ್ನು ಶ್ರದ್ಧಾಭಕ್ತಿಗಳಿಂದ ಸೇವಿಸುವಷ್ಟರಿಂದಲೆ ದೊರಕುವುದಾಗಲಿ.

೮೭. ಕೃಚ್ಛ್ರಚಾಂದ್ರಾಯಣಾದಿ ವ್ರತಗಳನ್ನು ಮಾಡುವುದರಿಂದ ಯಾವ ಶ್ರೇಯಸ್ಸು ಸಂಪಾದನೆಯಾಗುತ್ತದೆಯೊ ಅದು ಆನಂದಕಾನನವಾದ ಈ ಕಾಶಿಯಲ್ಲಿ ಒಂದೇ ಒಂದು ಉಪವಾಸದಿಂದಲೆ ಉಂಟಾಗಲಿ.

೮೮. ಬೇರೊಂದು ಕಡೆ ಒಂದು ನೂರು ಸಂವತ್ಸರಗಳಕಾಲ ತಪಸ್ಸನ್ನೆಸಗಿದರೆ ಯಾವ ಶ್ರೇಯಸ್ಸುಂಟಾಗುವುದೊ ಅದು ಈ ಕಾಶೀಕ್ಷೇತ್ರದಲ್ಲಿ ಒಂದು ವರ್ಷಕಾಲ ಭೂಶಯನವ್ರತವನ್ನು ಮಾಡುವುದರಿಂದ ಲಭ್ಯವಾಗಲಿ.

೮೯. ಎಲೈ ಪರಮೇಶ್ವರನೆ, ಬೇರೊಂದು ಕಡೆ ಆಜನ್ಮವೂ ಮೌನವ್ರತ

**ಅನ್ಯತ್ರ ದತ್ವಾ ಸರ್ವಸ್ವಂ ಸುಕೃತಂ ಯತ್ಸಮೀರಿತಂ ।**
**ಸಹಸ್ರ ಭೋಜನಾತ್ಕಾಶ್ಯಾಂ ತದ್ಭೂಯಾದಯುತಾಧಿಕಂ ॥ ೮೯ ॥**
**ಮುಕ್ತಿಕ್ಷೇತ್ರಾಣಿ ಸರ್ವಾಣಿ ಯತ್ಸಂಸೇವ್ಯೋದಿತಂ ಫಲಂ ।**
**ಪಂಚರಾತ್ರಾತ್ತದತ್ರಾಸ್ತು ನಿಷೇವ್ಯ ಮಣಿಕರ್ಣಿಕಾಂ ॥ ೯೦ ॥**
**ಪ್ರಯಾಗಸ್ನಾನಪುಣ್ಯೇನ ಯತ್ಪುಣ್ಯಂ ಸ್ಯಾಚ್ಛಿವಪ್ರದಂ ।**
**ಕಾಶೀದರ್ಶನಮಾತ್ರೇಣ ತತ್ಪುಣ್ಯಂ ಶ್ರದ್ಧಯಾಽಸ್ತ್ವಿಹ ॥ ೯೧ ॥**
**ಯತ್ಪುಣ್ಯಮಶ್ವಮೇಧೇನ ಯತ್ಪುಣ್ಯಂ ರಾಜಸೂಯತಃ ।**
**ಕಾಶ್ಯಾಂ ತತ್ಪುಣ್ಯಮಾಪ್ನೋತು ತ್ರಿರಾತ್ರಶಯನಾದ್ಯಮೀ ॥ ೯೨ ॥**
**ತುಲಾಪುರುಷದಾನೇನ ಯತ್ಪುಣ್ಯಂ ಸಮ್ಯಗಾಪ್ಯತೇ ।**
**ಕಾಶೀದರ್ಶನಮಾತ್ರೇಣ ತತ್ಪುಣ್ಯಂ ಶ್ರದ್ಧಯಾಽಸ್ತು ವೈ ॥ ೯೩ ॥**
**ಇತಿ ವಿಷ್ಣೋರ್ವರಂ ಶ್ರುತ್ವಾ ದೇವದೇವೋ ಜಗತ್ಪತಿಃ ।**
**ಉವಾಚ ಚ ಪ್ರಸನ್ನಾತ್ಮಾ ತಥಾಽಸ್ತು ಮಧುಸೂದನ ॥ ೯೪ ॥**

---

ವನ್ನಾಚರಿಸುವುದರಿಂದ ಯಾವ ಪುಣ್ಯವುಂಟೆಂದು ತಿಳಿಯಲಾಗಿದೆಯೊ ಅದೇ ಫಲವು ಈ ಕ್ಷೇತ್ರದಲ್ಲಿ ಒಂದು ಪಕ್ಷದಿನಗಳ ಕಾಲ ಸತ್ಯವನ್ನೇ ನುಡಿಯುವುದರಿಂದ ಲಭಿಸುವುದಾಗಲಿ.

೮೯–೯೦. ಇತರ ಪ್ರದೇಶಗಳಲ್ಲಿ ಸರ್ವಸ್ವವನ್ನೂ ವಿನಿಯೋಗಿಸುವುದರಿಂದ ಯಾವ ಫಲವುಂಟೆಂದು ಹೇಳಿದೆಯೊ ಅದಕ್ಕೆ ಹತ್ತುಸಾವಿರ ಮಡಿಯಾದ ಫಲವು ಈ ಕಾಶೀಕ್ಷೇತ್ರದಲ್ಲಿ ಸಹಸ್ರಬ್ರಾಹ್ಮಣ ಸಂತರ್ಪಣೆ ಮಾಡುವುದರಿಂದ ದೊರಕುವುದಾಗಲಿ. ಭೂಮಂಡಲದಲ್ಲಿರುವ ಸಮಸ್ತ ಮುಕ್ತಿಕ್ಷೇತ್ರಗಳನ್ನೂ ಸೇವಿಸುವುದರಿಂದ ಉಂಟಾಗುವ ಶ್ರೇಯಸ್ಸು ಈ ಅವಿಮುಕ್ತ ಕ್ಷೇತ್ರವನ್ನು ಐದುದಿನಗಳ ಕಾಲ ಸೇವಿಸುವುದರಿಂದಲೆ ಉಂಟಾಗಲಿ.

೯೧. ಪ್ರಯಾಗಕ್ಷೇತ್ರದಲ್ಲಿ ಸ್ನಾನಮಾಡುವುದರಿಂದ ಯಾವ ಪುಣ್ಯವುಂಟೆಂದೂ ಎಷ್ಟು ಮಂಗಳಪ್ರದವೆಂದೂ ಹೇಳಲಾಗಿರುವುದೊ ಅದು ಈ ಕಾಶೀಕ್ಷೇತ್ರವನ್ನು ಶ್ರದ್ಧೆಯಿಂದ ಸಂದರ್ಶಿಸುವ ಮಾತ್ರದಿಂದಲೆ ಉಂಟಾಗಲಿ.

೯೨. ಅಶ್ವಮೇಧಯಾಗದಿಂದಲೂ ರಾಜಸೂಯಯಾಗದಿಂದಲೂ ಯಾವ ಫಲವು ದೊರಕುತ್ತದೆಯೊ ಅದೇ ಫಲವು ಇಂದ್ರಿಯ ನಿಗ್ರಹವುಳ್ಳವನಾಗಿ ಮಾನವನು ಈ ಕಾಶೀಕ್ಷೇತ್ರದಲ್ಲಿ ಮೂರು ರಾತ್ರಿಗಳು ಮಲಗುವುದರಿಂದಲೆ ದೊರಕುತ್ತದೆ.

೯೩. ತುಲಾಪುರುಷದಾನದಿಂದ ಲಭಿಸುವ ಪುಣ್ಯವು ಶ್ರದ್ಧೆಯಿಂದ ಈ ಕಾಶೀಕ್ಷೇತ್ರವನ್ನು ಸಂದರ್ಶಿಸುವುದರಿಂದಲೆ ಉಂಟಾಗಲಿ.''

೯೪. ಈ ಪ್ರಕಾರವಾಗಿ ಪ್ರಾರ್ಥಿಸಿದ ಆ ಮಧುಸೂದನನ ವರವನ್ನು ಕೇಳಿ

ಶ್ರೀ ಮಹಾದೇವ ಉವಾಚ :—
ಶೃಣು ವಿಷ್ಣೋ ಮಹಾಬಾಹೋ ಜಗತಃ ಪ್ರಭವಾಪ್ಯಯ ।
ವಿಧೇಹಿ ಸೃಷ್ಟಿಂ ವಿವಿಧಾಂ ಯಥಾವತ್ತ್ವಂ ಶ್ರುತೀರಿತಾಂ ॥ ೯೫ ॥
ಪಿತೇವ ಸರ್ವಭೂತಾನಾಂ ಧರ್ಮತಃ ಪಾಲಕೋ ಭವ ।
ವಿಧ್ವಂಸನೀಯಾ ವಿವಿಧಾ ಧರ್ಮಧ್ವಂಸವಿಧಾಯಿನಃ ॥ ೯೬ ॥
ಧರ್ಮೇತರಪಥಸ್ಥಾನಾಮುಪಸಂಹೃತಯೇ ಹರೇ ।
ಹೇತುಮಾತ್ರಂ ಭವಾನ್ ಯಸ್ಮಾತ್ಸ್ವಕರ್ಮನಿಹತಾಹಿತೇ ॥ ೯೭ ॥
ಯಥಾ ಪರಿಣತಂ ಸಸ್ಯಂ ಪತೇತ್ಪ್ರಸವಬಂಧನಾತ್ ।
ತೇ ಪರೀಣತಪಾಪ್ಮಾನಃ ಪತಿಷ್ಯಂತಿ ತಥಾ ಸ್ವಯಂ ॥ ೯೮ ॥
ಯೇ ಚ ತ್ವಾಮವಮನ್ಯಂತೇ ದರ್ಪಿತಾಃ ಸ್ವ ತಪೋಬಲೈಃ ।
ತೇಷಾಂ ಚೈವೋಪಸಂಹೃತ್ಯೈ ಪ್ರಭವಿಷ್ಯಾಮ್ಯಹಂ ಹರೇ ॥ ೯೯ ॥
ಉಪಪಾತಕಿನೋ ಯೇ ಚ ಮಹಾಪಾತಕಿನಶ್ಚ ಯೇ ।
ತೇಽಪಿ ಕಾಶೀಂ ಸಮಾಸಾದ್ಯ ಭವಿಷ್ಯಂತಿ ಗತೈನಸಃ ॥ ೧೦೦ ॥

---

ದೇವದೇವನಾದ ಆ ಜಗತ್ಪತಿಯು ಪ್ರಸನ್ನಚಿತ್ತನಾಗಿ, "ಅಯ್ಯಾ ವಿಷ್ಣುವೆ, ಅಂತೆಯೇ ಆಗಲಿ" ಎಂದು ನುಡಿದು ಮತ್ತೂ ಹೇಳತೊಡಗಿದನು.

೯೫. ಶ್ರೀ ಮಹಾದೇವನು ಹೇಳುತ್ತಾನೆ :—"ಜಗತ್ತಿನ ಸ್ಥಿತಿಲಯಗಳಿಗೆ ನಿಯಾಮಕನೂ, ಮಹಾಬಾಹುವೂ ಆದ ಎಲೈ ಮಹಾವಿಷ್ಣುವೆ, ಕೇಳು. ನೀನು ಶ್ರುತಿಯಲ್ಲಿ ಹೇಳಿರುವಂತೆ ವಿವಿಧ ಸೃಷ್ಟಿಯನ್ನು ಮಾಡುವವನಾಗು.

೯೬. ಸಮಸ್ತಭೂತಗಳಿಗೂ, ತಂದೆಯಂತೆ ಧರ್ಮಪರಿಪಾಲಕನಾಗಿರು. ಧರ್ಮವನ್ನು ಕೆಡಿಸುವ ದೈತ್ಯದಾನವಾದಿ ವಿವಿಧ ವಿದ್ವೇಷಿಗಳನ್ನು ಧ್ವಂಸಗೊಳಿಸು.

೯೭. ಧರ್ಮವಲ್ಲದ ಮಾರ್ಗದಲ್ಲಿ ನಡೆಯುವ ಮಾನವರ ಅಧೋಗತಿಗೂ ನೀನೇ ಕಾರಣನಾಗಿರು. ಪ್ರಾಣಿಗಳ ಕರ್ಮಾನುಗುಣವಾಗಿ ಅಹಿತಗಳು ಸಂಭವಿಸುವುದರಿಂದ ನೀನು ಈ ವಿಷಯದಲ್ಲಿ ಕೇವಲ ನಿಮಿತ್ತಮಾತ್ರನು.

೯೮. ಪರಿಪಕ್ವಸ್ಥಿತಿಗೆ ಬಂದ ಸಸ್ಯವು ಪ್ರಸವಬಂಧನದಿಂದ ಎಂತು ಬಿದ್ದುಹೋಗುವುದೊ ಅಂತೆಯೆ ತುಂಬಿಬಂದ ಪಾಪಗಳುಳ್ಳ ಮಾನವರು ತಾವಾಗಿಯೇ ಬಿದ್ದುಹೋಗುತ್ತಾರೆ.

೯೯. ಯಾವ ಮಾನವರು ತಮ್ಮ ತಪೋಬಲದಿಂದ ಗರ್ವಗೊಂಡು ನಿನ್ನನ್ನು ಅಪಮಾನಗೊಳಿಸುತ್ತಾರೆಯೊ ಅವರ ಸಂಹಾರಕ್ಕಾಗಿ ನಾನು ಸಮರ್ಥನೇ ಆಗಿರುತ್ತೇನೆ.

೧೦೦. ಸಣ್ಣಪುಟ್ಟ ಪಾಪಗಳನ್ನು ಮಾಡಿರುವವರೂ, ಪಂಚಮಹಾಪಾತಕ

ಇದಂ ಮಮ ಪ್ರಿಯಂ ಕ್ಷೇತ್ರಂ ಪಂಚಕ್ರೋಶೀ ಪರೀಮಿತಂ ।
ಮಮಾಜ್ಞಾ ಪ್ರಭವೇದತ್ರ ನಾಽನ್ಯಾಜ್ಞಾ ಪ್ರಭವೇದಿಹ ॥ ೧೦೧ ॥
ಪುನರ್ವಿಷ್ಣುರ್ಮಯಾ ಪ್ರೋಕ್ತೋ ಮೃಡಾನಿ ಶುಭಲೋಚನೇ ।
ಅತ್ಯುಗ್ರತೇಜಸಾ ತೇಜೋ ಭ್ರಮಂಸ್ತ್ರೈಲೋಕ್ಯವಿಭ್ರಮಃ ॥ ೧೦೨ ॥
ಪಾಪಿನಾಮಪಿ ಜಂತೂನಾಮವಿಮುಕ್ತನಿವಾಸಿನಾಂ ।
ನಾಽನ್ಯಃ ಶಾಸಯಿತಾ ವಿಷ್ಣೋ ತೇಷಾಂ ಶಾಸ್ತಾಽಹಮೇವ ಹಿ ॥ ೧೦೩ ॥
ಯೋಜನಾನಾಂ ಶತಸ್ಥೋಽಪಿ ಯೋಽವಿಮುಕ್ತಂ ಸ್ಮರೇದ್ಧೃದಿ ।
ಬಹುಪಾತಕಪೂರ್ಣೋಽಪಿ ನ ಸ ಪಾಪೈಃ ಪ್ರಬಾಧ್ಯತೇ ॥ ೧೦೪ ॥
ಮಮ ಪ್ರಿಯಸ್ಯ ಕ್ಷೇತ್ರಸ್ಯ ಯೋಽವಿಮುಕ್ತಸ್ಯ ಸಂಸ್ಮರೇತ್ ।
ಪ್ರಾಣಪ್ರಯಾಣಸಮಯೇ ದೂರಗೋಽಪ್ಯಘವಾನಪಿ ॥ ೧೦೫ ॥
ಸ ಪಾಪಪೂಗಮುತ್ಸೃಜ್ಯ ಸ್ವರ್ಗಭೋಗಾನ್ಸಮಶ್ನುತೇ ।
ಕಾಶೀಸ್ಮರಣಪುಣ್ಯೇನ ಸ್ವರ್ಗಾದ್ಭ್ರಷ್ಟೋ ಹಿ ಜಾಯಂತೇ ॥ ೧೦೬ ॥

---

ಗಳೂ ಕಾಶೀಕ್ಷೇತ್ರವನ್ನು ಹೊಂದಿ ಆ ಪಾಪಗಳೆಲ್ಲವನ್ನೂ ಕಳೆದುಕೊಂಡು ಪುಣ್ಯ ಶಾಲಿಗಳಾಗುತ್ತಾರೆ.

೧೦೧. ಐದು ಕ್ರೋಶಗಳ ಪರಿಮಿತಿಯುಳ್ಳ ಈ ಕಾಶೀಕ್ಷೇತ್ರವು ನನಗೆ ಅತ್ಯಂತಪ್ರಿಯವಾದುದು. ಇಲ್ಲಿ ನನ್ನ ಆಜ್ಞೆಯೊಂದೇ ನಡೆಯುತ್ತದೆಯಲ್ಲದೆ ಮತ್ತಾರ ಆಜ್ಞೆಯೂ ನಡೆಯುವುದಿಲ್ಲ.''

೧೦೨. ಎಲೌ ಶುಭಲೋಚನೆಯಾದ ಮೃಡಾನಿಯೆ, ನಾನು ಮಹಾ ವಿಷ್ಣುವನ್ನು ಕುರಿತು ಮತ್ತೆ ಹೇಳಿದೆನು. ''ಅಯ್ಯಾ ವಿಷ್ಣುವೆ, ನಾನು ಈ ಕ್ಷೇತ್ರದಲ್ಲಿ ಅತ್ಯುಗ್ರವಾದ ತೇಜಸ್ಸನ್ನು ಪ್ರಸರಿಸಿ ಮೂರು ಲೋಕಗಳಿಗೂ ಆಶ್ಚರ್ಯಕರವಾಗುವಂತೆ ಕೇವಲ ತೇಜೋರೂಪದಿಂದಲೆ ಸಂಚರಿಸುತ್ತಿರುವೆನು.

೧೦೩. ಈ ಅವಿಮುಕ್ತಕ್ಷೇತ್ರದಲ್ಲಿ ವಾಸಮಾಡುವ ಪಾಪಿಷ್ಠವಾದ ಜಂತು ಗಳಿಗೂ ನಾನೇ ಶಾಸಕನಾಗಿರುವೆನಲ್ಲದೆ ಬೇರೊಬ್ಬನಿರುವುದಿಲ್ಲವೆಂದು ತಿಳಿ.

೧೦೪. ಒಂದುನೂರು ಯೋಜನಗಳ ದೂರದಲ್ಲಿದ್ದರೂ ಯಾರು ಈ ಕಾಶೀ ಕ್ಷೇತ್ರವನ್ನು ಮನಸ್ಸಿನಲ್ಲಿಯೆ ಧ್ಯಾನಿಸುತ್ತಾರೆಯೊ ಅವರು ಅನೇಕ ಪಾತಕಗಳಿಂದ ದೂಷಿತರಾಗಿದ್ದರೂ ಆ ಪಾತಕಗಳ ಕೋಟಲೆಗೆ ಒಳಗಾಗುವುದಿಲ್ಲ.

೧೦೫-೧೦೬. ನನಗೆ ಅತ್ಯಂತ ಪ್ರಿಯಕರವಾದ ಈ ಅವಿಮುಕ್ತಕ್ಷೇತ್ರವನ್ನು ಬಹಳ ದೂರದಲ್ಲಿದ್ದರೂ, ಮಹಾಪಾಪಿಯೇ ಆಗಿದ್ದರೂ ಯಾವ ಮಾನವನು ಪ್ರಾಣೋತ್ಕ್ರಮಣ ಸಮಯದಲ್ಲಿ ಸ್ಮರಿಸುತ್ತಾನೆಯೊ ಅವನು ಆ ಪಾಪದ ತೊಡಿಗೆಯನ್ನು ತೊರೆದು ಸ್ವರ್ಗದ ಸಮಸ್ತ ಭೋಗಗಳನ್ನೂ ಅನುಭವಿಸುತ್ತಾನೆ. ಅಲ್ಲದೆ ಆ ಕಾಶೀಸ್ಮರಣಪುಣ್ಯದಿಂದಲೆ ಸ್ವರ್ಗದಿಂದ ಜಾರಿದಮೇಲೆ ಭೂಮಂಡಲ

ಪೃಥಿವ್ಯಾಮೇಕರಾಡ್ಭೂತ್ವಾ ಭುಕ್ತ್ವಾ ಭೋಗಾನನೇಕಶಃ ।
ಪ್ರಾಪ್ಯಾಽವಿಮುಕ್ತಂ ತತ್ಪುಣ್ಯಾನ್ನಿರ್ವಾಣಪದಭಾಗ್ಭವೇತ್ ॥ ೧೦೭ ॥
ಬಹುಕಾಲಮುಷಿತ್ವಾಽತ್ರ ನಿಯತೇಂದ್ರಿಯಮಾನಸಃ ।
ಯದ್ಯನ್ಯತ್ರ ವಿಪದ್ಯೇತ ದೈವಯೋಗಾಚ್ಛುಚಿಸ್ಮಿತೇ ॥ ೧೦೮ ॥
ಸೋಽಪಿ ಸ್ವರ್ಗಸುಖಂ ಭುಕ್ತ್ವಾ ಭೂತ್ವಾ ಕ್ಷಿತಿಪತೀಶ್ವರಃ ।
ಪುನಃ ಕಾಶೀಮವಾಪ್ಯಾಽಥ ವಿಂದೇನ್ನೈಃಶ್ರೇಯಸೀಂ ಶ್ರಿಯಂ ॥ ೧೦೯ ॥
ವಿಷ್ಣೋಽವಿಮುಕ್ತೇ ಸಂವಾಸಃ ಕರ್ಮನಿರ್ಮೂಲನಕ್ಷಮಃ ।
ದ್ವಿತ್ರಾಣಾಂ ಹಿ ಪವಿತ್ರಾಣಾಂ ನಿರ್ವಾಣಾಯೇಹ ಜಾಯತೇ ॥ ೧೧೦ ॥

ವಿಷ್ಣುರುವಾಚ :—

ದೇವೇಶ ಕ್ಷೇತ್ರಮಾಹಾತ್ಮ್ಯಂ ಯೋ ನ ಜಾನಾತಿ ತತ್ವತಃ ।
ನ ಶ್ರದ್ದಧಾತಿ ಶೃಣುತೇ ಮೃತೇ ತಸ್ಯೇಹ ಕಾ ಗತಿಃ ॥ ೧೧೧ ॥

ಶಿವ ಉವಾಚ :—

ಅನ್ಯತ್ರ ಕೃತ್ವಾ ಪಾಪಾನಿ ಬಹೂನಿ ಸುಮಹಾಂತಿ ಚ ।
ಅಶ್ರದ್ದಧಾನೋಽತತ್ತ್ವಜ್ಞೋ ಯದ್ಯತ್ರ ಚ ವಿಪದ್ಯತೇ ॥ ೧೧೨ ॥

ದಲ್ಲಿ ಏಕಚ್ಛತ್ರಾಧಿಪತಿಯಾದ ರಾಜನಾಗಿ ಜನಿಸಿ ಅನೇಕ ಪ್ರಕಾರವಾದ ಭೋಗಗಳನ್ನು ಅನುಭವಿಸಿದ ಬಳಿಕ ಈ ಅವಿಮುಕ್ತಕ್ಷೇತ್ರಕ್ಕೆ ಬಂದು ಅದನ್ನು ಸೇವಿಸಿ ಆ ಪುಣ್ಯದ ಪ್ರಭಾವದಿಂದಲೆ ಮೋಕ್ಷಪದವಿಗೆ ಭಾಗಿಯಾಗುತ್ತಾನೆ.

೧೦೮–೧೦೯. ಎಲೆ ಶುಚಿಸ್ಮಿತೆಯೆ, ಈ ಕಾಶೀಕ್ಷೇತ್ರದಲ್ಲಿ ನಿಯತವಾದ ಇಂದ್ರಿಯಗಳೂ, ಮನಸ್ಸೂ ಉಳ್ಳವನಾಗಿ ಬಹುಕಾಲ ನೆಲಸಿದ್ದು ಆ ತರುವಾಯ ದೈವಯೋಗದಿಂದ ಬೇರೊಂದೆಡೆಯಲ್ಲಿ ಮೃತಿಯೊಂದುವ ಮಾನವನೂ ಸ್ವರ್ಗಸುಖಗಳನ್ನು ಅನುಭವಿಸಿ ಅಲ್ಲಿಂದ ಭೂಲೋಕಕ್ಕೈತಂದು ಸಾರ್ವಭೌಮನಾಗಿ ಜನಿಸಿದ್ದು ಮತ್ತೆ ಕಾಶೀಕ್ಷೇತ್ರಕ್ಕೈತಂದು ಕಡೆಗೆ ಮೋಕ್ಷವನ್ನೇ ಪಡೆಯುತ್ತಾನೆ.

೧೧೦. ಎಲೈ ವಿಷ್ಣುವೆ, ಸಕಲ ಕರ್ಮಬೀಜಗಳನ್ನೂ ನಿರ್ಮೂಲಗೊಳಿಸಲು ಸಮರ್ಥವಾದ ಕಾಶೀಕ್ಷೇತ್ರವಾಸವು ಲೋಕವಲ್ಲಿ ಯಾರೋ ಒಬ್ಬಿಬ್ಬರಿಗೆ ಮಾತ್ರ ಲಭ್ಯವಾಗುತ್ತದೆ.

೧೧೧. ಶ್ರೀ ವಿಷ್ಣುವು ಹೇಳುತ್ತಾನೆ:—ಎಲೈ ದೇವೇಶ್ವರನೆ, ಯಾವನು ಈ ಕಾಶೀಕ್ಷೇತ್ರಮಾಹಾತ್ಮ್ಯವನ್ನು ದಿಟವಾಗಿಯೂ ತಿಳಿದುಕೊಳ್ಳದೆಯೂ ಅದನ್ನು ಹೇಳುವವರಿದ್ದೂ ಕೇಳಿ ನಂಬದೆಯೂ ಇರುವವನಿಗೆ ಯಾವ ಗತಿಯುಂಟಾಗುವುದು?

೧೧೨–೧೧೩. ಶ್ರೀಶಿವನು ಹೇಳುತ್ತಾನೆ:— ಅಯ್ಯಾ ಕೇಶವನೆ, ಬೇರೆ ಕಡೆಗಳಲ್ಲಿ ಮಹತ್ತರಗಳಾದ ಅನೇಕಪಾಪಗಳನ್ನು ಮಾಡಿ, ಕಾಶೀಕ್ಷೇತ್ರದಲ್ಲಿಯೂ

ಮಹಿಮನ್ಯನಭಿಜ್ಞೋಽಪಿ ಕ್ಷೇತ್ರಸ್ಯಾಽಸ್ಯ ಜನಾರ್ದನ ।
ತಸ್ಯ ಯಾ ಗತಿರುದ್ದಿಷ್ಟಾ ತಾಂ ನಿಶಾಮಯ ಸುವ್ರತ ॥ ೧೧೩ ॥
ಪಂಚಕ್ರೋಶೀಂ ಪ್ರವಿಶತಸ್ತಸ್ಯ ಪಾತಕಸಂತತಿಃ ।
ಬಹಿರೇವ ಪ್ರತಿಷ್ಠೇತ ನಾಽಂತರ್ನಿರ್ವಿಶತೇ ಕ್ವಚಿತ್ ॥ ೧೧೪ ॥
ಭಯಾದ್ಬಹಿಃ ಸ್ಥಿತಾಯಾಂ ಚ ತಸ್ಯ ಪಾತಕಸಂತತೌ ।
ತ್ರಿಶೂಲಪಾಶಪಾಣೀನಾಂ ಗಣಾನಾಂ ಸೀಮಚಾರಿಣಾಂ ॥ ೧೧೫ ॥
ಪ್ರವೇಶಮಾತ್ರಾದನಘ ಸರ್ವೈರೇನೋಭಿರುಜ್ಝಿತಃ ।
ಸಂಸ್ನಾಯ ಮಣಿಕರ್ಣಿಕಾಯಾಂ ಪುಣ್ಯಂ ಪ್ರಾಪ್ನೋತ್ಯನುತ್ತಮಂ ॥ ೧೧೬ ॥
ಸರ್ವತೀರ್ಥೇಷು ಸಂಸ್ನಾನಾದ್ಯತ್ಪುಣ್ಯಂ ಸಮವಾಪ್ಯತೇ ।
ತತ್ಪುಣ್ಯಮಾಪ್ಯತೇ ಸಮ್ಯಙ್ಮಣಿಕರ್ಣ್ಯೇಕಮಜ್ಜನಾತ್ ॥ ೧೧೭ ॥
ವಿಧಿನಾ ತತ್ರ ಸಂಸ್ನಾಯ ಮೃದ್ಗೋಮಯಕುಶಾದಿಭಿಃ ।
ಸ್ವಶಾಖಾ ವಾರುಣೈರ್ಮಂತ್ರೈರ್ದೂರ್ವಾಽಪಾಮಾರ್ಗದರ್ಭಕೈಃ ॥ ೧೧೮ ॥
ಸರ್ವತೀರ್ಥೇಷು ಯತ್ಪುಣ್ಯಂ ಸರ್ವದಾನೇಷು ಯತ್ಫಲಂ ।
ಮಣಿಕರ್ಣ್ಯಾಂ ವಿಧಿಸ್ನಾತಃ ಶ್ರದ್ಧಯಾ ತದವಾಪ್ನುಯಾತ್ ॥ ೧೧೯ ॥

---

ನಂಬಿಕೆಯನ್ನಿಡದೆ ಕೇವಲ ಅಜ್ಞಾನಿಯಾಗಿ ಇಲ್ಲಿಯೇ ಹೇಗೋ ಮೃತಿಯೊಂದಿದರೂ ಅವನು ಈ ಕ್ಷೇತ್ರದ ಮಹಿಮೆಯನ್ನೇನೂ ತಿಳಿಯದಿದ್ದರೂ ಅವನಿಗೆ ಎಂತಹ ಸದ್ಗತಿಯು ಪ್ರಾಪ್ತವಾಗುವುದೆಂಬುದನ್ನು ಕೇಳು.

೧೧೪. ಪಂಚಕ್ರೋಶಿಯೆಂದು ಪ್ರಸಿದ್ಧವಾಗಿರುವ ಈ ಕಾಶೀಕ್ಷೇತ್ರವನ್ನು ಪ್ರವೇಶಿಸಿದೊಡನೆ ಮಾನವನೆಸಗಿದ ಸಕಲ ಪಾಪಗಳೂ ಈ ಕ್ಷೇತ್ರದ ಹೊರಗಡೆಯೇ ನಿಲ್ಲುತ್ತವೆಯಲ್ಲದೆ ಎಂದಿಗೂ ಒಳಕ್ಕೆ ಬರುವುದಿಲ್ಲ.

೧೧೫–೧೧೬. ಎಲೈ ಅನಘನೆ, ಕಾಶೀಕ್ಷೇತ್ರದ ಹೊರವಳಯದಲ್ಲಿ ಗಡಿಗಳನ್ನು ಸಂರಕ್ಷಿಸುತ್ತ ಸಂಚರಿಸುತ್ತಿರುವ ತ್ರಿಶೂಲಧಾರಿಗಳಾದ ನನ್ನ ಗಣನಾಯಕರ ಭೀತಿಯಿಂದ ಆ ಪಾಪಸಂತಾನಗಳು ತಾವು ಆಶ್ರಯಿಸಿರುವ ಮಾನವನು ಕ್ಷೇತ್ರವನ್ನು ಪ್ರವೇಶಿಸಿದೊಡನೆಯೆ ಅವನನ್ನು ಬಿಟ್ಟು ಹೊರಟುಹೋಗುವುವು. ಬಳಿಕ ಆ ಮಾನವನು ಮಣಿಕರ್ಣಿಕಾತೀರ್ಥದಲ್ಲಿ ಸ್ನಾನಮಾಡಿದುದಾದರೆ ಉತ್ತಮವಾದ ಪುಣ್ಯವನ್ನು ಪಡೆಯುತ್ತಾನೆ.

೧೧೭. ಭೂಲೋಕದಲ್ಲಿರುವ ಸಮಸ್ತತೀರ್ಥಗಳಲ್ಲಿ ಸ್ನಾನವನ್ನಾಚರಿಸುವುದರಿಂದ ಯಾವ ಪುಣ್ಯವು ದೊರಕುತ್ತದೆಯೊ ಆ ಪುಣ್ಯವು ಮಣಿಕರ್ಣಿಕಾತೀರ್ಥದಲ್ಲಿ ಒಂದೇ ಒಂದು ಬಾರಿ ಸ್ನಾನಮಾಡುವುದರಿಂದ ದೊರಕುವುದು.

೧೧೮–೧೨೦. ಶಾಸ್ತ್ರವಿಧಿಯನ್ನನುಸರಿಸಿ ಮಾನವನು ಮೃತ್ತಿಕೆ, ಗೋಮಯ, ಕುಶ ಮೊದಲಾದುವುಗಳಿಂದ ಕೂಡಿದವನಾಗಿ ತನ್ನ ಶಾಖೆಗೆ

ಅಶ್ರದ್ಧಯಾಽಪಿ ಯಃ ಸ್ನಾತೋ ಮಣಿಕರ್ಣ್ಯಾಂ ವಿಧಾನತಃ ।
ಸೋಽಪಿ ಪುಣ್ಯಮವಾಪ್ನೋತಿ ಸ್ವರ್ಗಪ್ರಾಪ್ತಿಕರಂ ಪರಂ ॥ ೧೨೦ ॥
ಶ್ರದ್ಧಯಾ ವಿಧಿವತ್ ಸ್ನಾತ್ವಾ ಕೃತ್ವಾ ದೇವಾದಿತರ್ಪಣಂ ।
ತಿಲಬರ್ಹಿರ್ಯವೈಃ ಸಮ್ಯಕ್ಸರ್ವಯಜ್ಞಫಲಂ ಲಭೇತ್ ॥ ೧೨೧ ॥
ಶ್ರದ್ಧಧಾನೋ ವಿಧಿಸ್ನಾತಃ ಕೃತಸರ್ವೋದಕಕ್ರಿಯಃ ।
ಜಪನ್‌ದೇವಾನ್ ಸಮಭ್ಯರ್ಚ್ಯ ಸರ್ವಮಂತ್ರಫಲಂ ಲಭೇತ್ ॥ ೧೨೨ ॥
ಸ್ನಾತ್ವಾ ಮೌನೇನ ವಿಶ್ವೇಶದರ್ಶನಾನ್ನಿಯತೇಂದ್ರಿಯಃ ।
ಸರ್ವವ್ರತಕೃತಂ ಶ್ರೇಯೋ ಲಭೇದ್ವಾಚಂಯಮಃ ಶಿವೇ ॥ ೧೨೩ ॥
ಸ್ನಾನೇ ದೇವಾರ್ಚನೇ ಜಪ್ಯೇ ಮಲಮೂತ್ರವಿಸರ್ಜನೇ ।
ಮೌನಂ ಕುರ್ಯಾತ್ಪ್ರಯತ್ನೇನ ದಂತಧಾವನಹೋಮಯೋಃ ॥ ೧೨೪ ॥
ವಿಶ್ವೇಶ್ವರಂ ಸಮಭ್ಯರ್ಚ್ಯ ಸೂಪಚಾರೈರ್ವಿಧಾನತಃ ।
ಯಾವಜ್ಜೀವಂ ಶಿವಾರ್ಚಾಯಾಃ ಫಲಮಾಪ್ನೋತಿ ವೈ ಸಕೃತ್ ॥ ೧೨೫ ॥

---

ಸಂಬಂಧಿಸಿದ ವರುಣಮಂತ್ರಗಳನ್ನುಚ್ಚರಿಸಿಕೊಂಡು ಗರಿಕೆ, ಅಪಾಮಾರ್ಗಪತ್ರೆ, ದರ್ಭೆಗಳಿಂದ ಮಣಿಕರ್ಣಿಕಾಜಲದಲ್ಲಿ ಸ್ನಾನಮಾಡಿದುದಾದರೆ ಸರ್ವತೀರ್ಥ ಸ್ನಾನಗಳಿಂದಲೂ, ಸರ್ವದಾನಗಳಿಂದಲೂ ದೊರಕುವ ಪುಣ್ಯಫಲವನ್ನು ಪಡೆಯುತ್ತಾನೆ. ಶ್ರದ್ಧೆಯಿಲ್ಲದಿದ್ದರೂ ವಿಧಿಪೂರ್ವಕವಾಗಿ ಮಣಿಕರ್ಣಿಕೆಯಲ್ಲಿ ಸ್ನಾನ ಮಾಡಿದವನು ಸಹ ಸ್ವರ್ಗಪ್ರಾಪ್ತಿಕರವಾದ ಉತ್ತಮಪುಣ್ಯವನ್ನೇ ಪಡೆಯುತ್ತಾನೆ.

೧೨೧. ಎಲೈ ಅಚ್ಯುತನೆ, ಶ್ರದ್ಧಾಸಮನ್ವಿತವಾಗಿ ಶಾಸ್ತ್ರೋಕ್ತವಿಧಿಯನ್ನನುಸರಿಸಿ ಮಣಿಕರ್ಣಿಕಾತೀರ್ಥದಲ್ಲಿ ಮಿಂದು, ತಿಲ, ಬರ್ಹಿಸ್ಸು, ಯವ ಮೊದಲಾದುವುಗಳಿಂದ ಸಮೀಚೀನವಾಗಿ ದೇವಪಿತೃಋಷಿ ತರ್ಪಣಗಳನ್ನು ಮಾಡಿದ ಮಾನವನು ಸಮಸ್ತ ಯಜ್ಞಗಳ ಫಲವನ್ನೂ ಪಡೆಯುವನು.

೧೨೨. ನಂಬಿಕೆಯನ್ನಿಟ್ಟು ವಿಧಿಪೂರ್ವಕವಾಗಿ ಸ್ನಾನವನ್ನಾಚರಿಸಿ ದೇವರ್ಷಿ ಪಿತೃಗಳಿಗೆ ಉದಕಕ್ರಿಯೆಯನ್ನೆಸಗಿ, ಗಾಯತ್ರಿಯೆ ಮೊದಲಾದ ಮಂತ್ರಜಪ ಗಳನ್ನು ಮಾಡಿ ದೇವತೆಗಳನ್ನು ಪೂಜಿಸಿದ ಮಾನವನು ಸಕಲಮಂತ್ರಾನುಷ್ಠಾನದ ಫಲವನ್ನು ಪಡೆಯುತ್ತಾನೆ.

೧೨೩. ಜಿತೇಂದ್ರಿಯನಾಗಿ ಮೌನವ್ರತವನ್ನವಲಂಬಿಸಿ ಮಣಿಕರ್ಣಿಕೆಯಲ್ಲಿ ಮಿಂದು ವಿಶ್ವೇಶ್ವರನನ್ನು ಸಂದರ್ಶಿಸಿದುದಾದರೆ ಸಮಸ್ತಕ್ರತುಗಳನ್ನೂ ಮಾಡುವುದರಿಂದುಂಟಾಗುವ ಶ್ರೇಯಸ್ಸನ್ನೇ ಅಲ್ಲದೆ ಮುನಿತ್ವವನ್ನೂ ಪಡೆಯುತ್ತಾನೆ.

೧೨೪. ಮಾನವನು ಸ್ನಾನ, ದೇವತಾರ್ಚನಗಳಲ್ಲಿಯೂ, ಜಪಕಾಲಗಳಲ್ಲಿಯೂ, ಹೋಮಕಾಲಗಳಲ್ಲಿಯೂ, ಮಲಮೂತ್ರವಿಸರ್ಜನಕಾಲಗಳಲ್ಲಿಯೂ, ದಂತಧಾವನ ಕಾಲಗಳಲ್ಲಿಯೂ ಮೌನವಾಗಿರತಕ್ಕದ್ದು.

೧೨೫. ಶಾಸ್ತ್ರವಿಧಿಯನ್ನನುಸರಿಸಿ ವಿವಿಧೋಪಚಾರಗಳಿಂದ ವಿಶ್ವೇಶ್ವರನನ್ನು

ದತ್ವಾಽಲ್ಪಮಪಿ ದೇವೇಶಿ ನ್ಯಾಯೇನೋಪಾರ್ಜಿತಂ ಧನಂ ।
ಅವಿಮುಕ್ತೇ ಮಮ ಕ್ಷೇತ್ರೇ ನ ದರಿದ್ರೋ ಭವೇತ್ಕ್ವಚಿತ್ ॥ ೧೨೬ ॥
ವಿವಿಧಂ ಧನಮಾವರ್ಜ್ಯ ಯೋಽವಿಮುಕ್ತೇ ನ ಯಚ್ಛತಿ ।
ಸಂಪ್ರಾಪ್ಯ ನಿಧನಂ ಮೂಢೋಽನ್ಯತ್ರ ಶೋಚತಿ ಸರ್ವದಾ ॥ ೧೨೭ ॥
ರಮ್ಯಾಣಿ ಯಾನಿ ರತ್ನಾನಿ ಗೋ ಗಜಾಽಶ್ವಾಂಬರಾಣ್ಯಪಿ ।
ಕೃತಾನಿ ತಾನಿ ಶ್ರೇಯೋರ್ಥಮವಿಮುಕ್ತನಿವಾಸಿನಾಂ ॥ ೧೨೮ ॥
ವಿಶ್ವೇಶಪ್ರೀಣನಾರ್ಥಾಯ ಧನಂ ನಿಧನಮೇವ ವಾ ।
ನ್ಯಾಯೇನ ಕಾಶ್ಯಾಂ ಯಃ ಕುರ್ಯಾತ್ಸಧನಃ ಸ ಚ ಧರ್ಮವಿತ್ ॥೧೨೯॥
ಯೋಽಸೌ ವಿಶ್ವೇಶ್ವರೋ ದೇವಃ ಕಾಶೀಪುರ್ಯಾಮುಮೇ ಸ್ಥಿತಃ ।
ಲಿಂಗರೂಪಧರಃ ಸಾಕ್ಷಾನ್ಮಮ ಶ್ರೇಯಾಸ್ಪದಂ ಹಿ ತತ್ ॥ ೧೩೦ ॥
ಅವಿಮುಕ್ತಂ ಮಹತ್ಕ್ಷೇತ್ರಂ ಪಂಚಕ್ರೋಶಪರೀಮಿತಂ ।
ಜ್ಯೋತಿರ್ಲಿಂಗಂ ತದೇಕಂ ಹಿ ಜ್ಞೇಯಂ ವಿಶ್ವೇಶ್ವರಾಽಭಿಧಂ ॥ ೧೩೧ ॥

---

ಪೂಜಿಸಿದ ಮಾನವನು ಯಾವಜ್ಜೀವವೂ ಶಿವಾರ್ಚನೆಯನ್ನು ಮಾಡಿದುದರಿಂದುಂಟಾಗುವ ಪುಣ್ಯಫಲವನ್ನು ಒಂದೇ ತಡವೆಯೆ ಪಡೆಯುತ್ತಾನೆ.

೧೨೬. ಎಲೌ ಪಾರ್ವತಿಯೆ, ಈ ಅವಿಮುಕ್ತಕ್ಷೇತ್ರದಲ್ಲಿ ಯಾವ ಮಾನವನು ನ್ಯಾಯವಾಗಿ ಸಂಪಾದಿಸಿದ ಧನವನ್ನು ಸ್ವಲ್ಪಮಟ್ಟಿಗಾದರೂ ದಾನಮಾಡುವನೊ ಅವನು ಎಂದಿಗೂ ದರಿದ್ರನಾಗುವುದಿಲ್ಲ.

೧೨೭. ಬಗೆಬಗೆಯ ಐಶ್ವರ್ಯಗಳನ್ನು ಸಂಪಾದಿಸಿಯೂ, ಯಾವನು ಈ ಕ್ಷೇತ್ರದಲ್ಲಿ ಸ್ವಲ್ಪಮಾತ್ರವೂ ದಾನವನ್ನೇ ಮಾಡುವುದಿಲ್ಲವೊ, ಅವನು ಮೃತಿಯೊಂದಿದಮೇಲೆ ಪರಲೋಕದಲ್ಲಿಯೂ ನಿರಂತರದುಃಖಿಯಾಗುತ್ತಾನೆ.

೧೨೮–೧೨೯. ಸೃಷ್ಟಿಕರ್ತನು ಮನೋಹರವಾದ ರತ್ನಗಳನ್ನೂ ಗೋವು, ಗಜ, ಅಶ್ವ, ಅಂಬರಾದಿಗಳನ್ನೂ ಅವಿಮುಕ್ತಕ್ಷೇತ್ರದಲ್ಲಿ ವಾಸವಾಗಿರುವ ಸತ್ಪಾತ್ರರಿಗೆ ದಾನಮಾಡುವುದಕ್ಕಾಗಿಯೆ ಸೃಷ್ಟಿಮಾಡಿರುವನು. ಅದರಿಂದ ವಿಶ್ವೇಶ್ವರನಿಗೆ ತೃಪ್ತಿಯುಂಟಾಗುವುದು. ಹಾಗೆ ವಿಶ್ವೇಶ್ವರನ ಪ್ರೀತಿಗಾಗಿ ವಿನಿಯೋಗಿಸದ ಧನವು ನಿಧನಪ್ರಾಯವೇ ಸರಿ. ಆದುದರಿಂದ ಧರ್ಮವನ್ನು ಬಲ್ಲ ಯಾವನು ಕಾಶೀಕ್ಷೇತ್ರದಲ್ಲಿ ನ್ಯಾಯವಾಗಿ ತಾನು ಆರ್ಜಿಸಿದ ಧನವನ್ನು ದಾನಮಾಡುವನೊ ಅವನೇ ಧನ್ಯನು.

೧೩೦. ಎಲೌ ಪಾರ್ವತಿಯೆ, ಈ ಕಾಶೀಕ್ಷೇತ್ರದಲ್ಲಿ ಲಿಂಗರೂಪಧರನಾಗಿ ನೆಲಸಿರುವ ದೇವದೇವನಾದ ವಿಶ್ವೇಶ್ವರನು ಸಮಸ್ತ ಪ್ರಾಣಿಗಳಿಗೂ ಸಾಕ್ಷಾತ್ ಶೈವಶ್ರೇಯಸ್ಸನ್ನು ಅನುಗ್ರಹಿಸತಕ್ಕವನಾಗಿರುವನು.

೧೩೧. ಪಂಚಕ್ರೋಶ ಪರಿಮಿತವಾದ ಈ ಅವಿಮುಕ್ತವು ಮಹಾಕ್ಷೇತ್ರವು,

ಏಕದೇಶಸ್ಥಿತಮಪಿ ಯಥಾ ಮಾರ್ತಂಡಮಂಡಲಂ ।
ದೃಶ್ಯತೇ ಸರ್ವಗಂ ಸರ್ವೈಃ ಕಾಶ್ಯಾಂ ವಿಶ್ವೇಶ್ವರಸ್ತಥಾ ॥ ೧೩೨ ॥
ನಿಷ್ಪ್ರತ್ಯೂಹೇನ ಯೋಗೇನ ನಾನಾಜನ್ಮಾರ್ಜಿತೇನ ಚ ।
ಯತ್ಫಲಂ ಲಭ್ಯತೇಽನ್ಯತ್ರ ತತ್ಕಾಶ್ಯಾಂ ತ್ಯಜತಸ್ತನುಂ ॥ ೧೩೩ ॥
ತಪ್ತ್ವಾ ತಪಾಂಸಿ ಸರ್ವಾಣಿ ಬಹುಕಾಲಂ ಜಿತೇಂದ್ರಿಯೈಃ ।
ಯತ್ಫಲಂ ಲಭ್ಯತೇಽನ್ಯತ್ರ ತತ್ಕಾಶ್ಯಾಮೇಕರಾತ್ರತಃ ॥ ೧೩೪ ॥
ಅಕ್ಷೇತ್ರಮಹಿಮಜ್ಞೋಽಪಿ ಶ್ರದ್ಧಾಹೀನೋಽಪಿ ಕಾಲತಃ ।
ಕಾಶೀಪ್ರವೇಶಾದನಘೋಽಮೃತತ್ವಂ ಲಭತೇ ಮೃತಃ ॥ ೧೩೫ ॥
ಕೃತ್ವಾಪ್ಯೇನಾಂಸಿ ಚೋಗ್ರಾಣಿ ಕಾಲಾತ್ಪ್ರಾಪ್ಯಾಥ ಕಾಶಿಕಾಂ ।
ತ್ಯಕ್ತ್ವಾ ತನುಂ ಪ್ರಸಾದಾನ್ಮೇ ಮಾಮೇವ ಪ್ರತಿಪದ್ಯತೇ ॥ ೧೩೬ ॥
ವಿನಾ ಮಮ ಪ್ರಸಾದಂ ವೈ ಕಃ ಕಾಶೀಂ ಪ್ರತಿಪದ್ಯತೇ ।
ವಿನಾ ಬ್ರಧ್ನಂ ವಿಶಾಲಾಕ್ಷಿ ದಿನಕೃತ್ಕ ಇಹೋಚ್ಯತೇ ॥ ೧೩೭ ॥

---

ಇಲ್ಲಿರುವ ವಿಶ್ವೇಶ್ವರನಾಮಕವಾದ ಲಿಂಗವೊಂದೇ ಜ್ಯೋತಿರ್ಲಿಂಗವೆಂದು ಸಮಸ್ತರೂ ತಿಳಿಯತಕ್ಕದ್ದು.

೧೩೨. ಒಂದೇ ಕಡೆ ಇದ್ದರೂ ಸೂರ್ಯಮಂಡಲವು ಎಲ್ಲೆಲ್ಲಿಯೂ ಸಂಚರಿಸುವುದಾಗಿ ಎಲ್ಲರಿಗೂ ಕಾಣುವುದಾಗಿ ಹೇಗಿರುವುದೊ ಹಾಗೆಯೆ ಈ ಕ್ಷೇತ್ರದಲ್ಲಿ ವಿರಾಜಿಸುತ್ತಿರುವ ವಿಶ್ವೇಶ್ವರಲಿಂಗವೆಂದು ತಿಳಿದುಕೊಳ್ಳಬೇಕು.

೧೩೩. ಅನೇಕ ಜನ್ಮಗಳಲ್ಲಿ ಯಾವ ವಿಘ್ನವೂ ಇಲ್ಲದೆ ಸಂತತವಾಗಿ ಆರ್ಜಿಸಿದ ಯೋಗದಿಂದ ಯಾವ ಫಲವು ದೊರಕುತ್ತದೆಯೊ ಅದು ಈ ಕಾಶೀ ಕ್ಷೇತ್ರದಲ್ಲಿ ದೇಹತ್ಯಾಗಮಾಡುವುದರಿಂದಲೆ ದೊರಕುತ್ತದೆ.

೧೩೪. ಜಿತೇಂದ್ರಿಯರಾದವರು ಬಹಳಕಾಲದವರೆಗೆ ಸಕಲತಪಸ್ಸುಗಳನ್ನೂ ತಪಿಸಿ ಯಾವ ಪುಣ್ಯಫಲವನ್ನು ಪಡೆಯುವರೊ ಅದನ್ನು ಮಾನವರು ಇಲ್ಲಿ ಒಂದುರಾತ್ರಿ ವಾಸಮಾಡುವುದರಿಂದಲೆ ಪಡೆಯುತ್ತಾರೆ.

೧೩೫. ಕ್ಷೇತ್ರಮಹಿಮೆಯನ್ನು ತಿಳಿಯದವನಾದರೂ, ಶ್ರದ್ಧೆಯಿಲ್ಲದವನಾದರೂ ಕಾಲಕರ್ಮಸಂಯೋಗದಿಂದ ಕಾಶೀಕ್ಷೇತ್ರವನ್ನು ಪ್ರವೇಶಿಸಿದೊಡನೆಯೆ ನಿಷ್ಪಾಪನಾಗಿ, ಮೃತಿಯೊಂದಿದ ಮೇಲೆ ಅಮೃತತ್ವವನ್ನು ಪಡೆಯುತ್ತಾನೆ.

೧೩೬. ಮಾನವನು ಭಯಂಕರಗಳಾದ ಪಾಪಗಳನ್ನೆಸಗಿದ್ದರೂ ಅದೃಷ್ಟವಶದಿಂದ ಕಾಶಿಯನ್ನು ಸೇರಿ ಅಲ್ಲಿಯೇ ಇದ್ದು ಮೃತಿಯೊಂದಿದ ತರುವಾಯ ನನ್ನ ಅನುಗ್ರಹದಿಂದ ನನ್ನನ್ನೇ ಸೇರುತ್ತಾನೆ.

೧೩೭. ಎಲೌ ವಿಶಾಲಾಕ್ಷಿಯೆ, ನನ್ನ ಅನುಗ್ರಹವಿಲ್ಲದೆ ಯಾವನು ತಾನೆ

ಅಪ್ರಾಪ್ಯ ಕಾಶೀಂ ಕೋ ದೇವಿ ನಿರಂತರಸುಖಂ ಲಭೇತ್ ।
ಬ್ರಹ್ಮಾದ್ಯಾಃ ಪ್ರಾಕೃತೈಃ ಪಾಶೈರ್ಯತೋ ಬದ್ಧಾ ನಿರಂತರಂ ॥ ೧೩೮ ॥
ಚತುರ್ವಿಂಶತಿಭಿಃ ಪಾಶೈಸ್ತ್ರಿಗುಣೈಃ ಕ್ರಿಯಯಾ ದೃಢೈಃ ।
ಕಂಠೇ ಬದ್ಧಾ ವಿಮುಚ್ಯಂತೇ ಕಥಂ ಕಾಶೀಂ ವಿನಾ ಜನಾಃ ॥ ೧೩೯ ॥
ಬಹೂಪಸರ್ಗೋ ಯೋಗೋಽಯಂ ಕೃಚ್ಛ್ರಸಾಧ್ಯಂ ತಪೋ ಹಿ ಯತ್ ।
ಯೋಗಾದ್ಭ್ರಷ್ಟಸ್ತಪೋಭ್ರಷ್ಟೋ ಗರ್ಭಕ್ಲೇಶಸಹಃ ಪುನಃ ॥ ೧೪೦ ॥
ಕೃತ್ವಾಽಪಿ ಕಾಶ್ಯಾಂ ಪಾಪಾನಿ ಕಾಶ್ಯಾಮೇವ ಮ್ರಿಯೇತ ಚೇತ್ ।
ಭೂತ್ವಾ ರುದ್ರಪಿಶಾಚೋಽಪಿ ಪುನರ್ಮುಕ್ತಿಮವಾಪ್ಸ್ಯತಿ ॥ ೧೪೧ ॥
ಕಾಶ್ಯಾಂ ಮೃತಾನಾಂ ಜಂತೂನಾಂ ದೈವಾತ್ಪಾಪಕೃತಾಮಪಿ ।
ನ ಪಾತೋ ನರಕೇ ತೇಷಾಂ ತೇಷಾಂ ಶಾಸ್ತಾಽಹಮೇವ ಯತ್॥ ೧೪೨ ॥

---

ಈ ಕಾಶೀಕ್ಷೇತ್ರವನ್ನು ಹೊಂದಿಯಾನು? ಸೂರ್ಯನನ್ನುಳಿದು ಯಾವನನ್ನು ತಾನೆ ದಿನಕರನೆನ್ನಲಾದೀತು.

೧೩೮. ಬ್ರಹ್ಮಾದಿದೇವತೆಗಳೂ ಪ್ರಾಕೃತಗಳಾದ ಮಾಯಾಪಾಶಗಳಿಂದ ಬದ್ಧರಾಗಿರುತ್ತಾರೆ. ಎಂದಮೇಲೆ ಮಾನವರ ಪಾಡೇನು? ಅಂತಹರು ಕಾಶಿಯನ್ನು ಹೊಂದದೆ ನಿರಂತರ ಸುಖವನ್ನು ಪಡೆಯುವುದೆಂತು?

೧೩೯. ಆ ಮಾಯಾಪಾಶಗಳಾದರೊ ಬಹಳ ವಿಚಿತ್ರಗಳಾದುವು. ಅವು ಪ್ರಕೃತಿ, ಮಹತ್ತು, ಅಹಂಕಾರ, ಪಂಚತನ್ಮಾತ್ರೆಗಳು, ಷೋಡಶವಿಕಾರಗಳು ಎಂಬ ಇಪ್ಪತ್ತನಾಲ್ಕು ಸಂಖ್ಯೆಯುಳ್ಳದ್ದಾಗಿರುವುವು. ಸತ್ತ್ವ ರಜಸ್ಸು ತಮಸ್ಸುಗಳೆಂಬ ಮೂರು ಹುರಿಗಳಿಂದ ಹೊಸೆದುದಾಗಿರುವುವು. ಧರ್ಮಾರ್ಥಕಾಮಾದಿಗಳೇ ಲಕ್ಷಣವಾಗಿ ಬಹುದೃಢವಾಗಿರುವಂಥವು. ಇಂಥ ಬಲವತ್ತರವಾದ ಮಾಯಾಪಾಶಗಳನ್ನು ಕೊರಳಿಗೆ ಬಿಗಿದುಕೊಂಡೂ ಕಾಶೀಕ್ಷೇತ್ರವನ್ನು ಸೇವಿಸದೆ ಮಾನವರು ಮುಕ್ತಿಯನ್ನು ಪಡೆಯುವುದು ಹೇಗೆ?

೧೪೦. ಯೋಗವೆಂಬುದು ಅನೇಕ ವಿಘ್ನಗಳನ್ನು ಗೆದ್ದರೆ ಮಾತ್ರ ಸಾಧ್ಯವಾಗುವಂಥದು. ಕೃಚ್ಛ್ರ ಚಾಂದ್ರಾಯಣಾದಿ ವ್ರತಗಳಿಂದ ಮಾತ್ರ ತಪಸ್ಸು ಸಾಧ್ಯವಾಗುತ್ತದೆ. ಇಂಥ ಯೋಗದಿಂದಾಗಲಿ ತಪಸ್ಸಿನಿಂದಾಗಲಿ ಮಾನವನು ಭ್ರಷ್ಟನಾದಲ್ಲಿ ಮತ್ತೆ ಮಾತೃಗರ್ಭದಲ್ಲಿ ಬಿದ್ದು ಯಾತನೆಯನ್ನು ಸಹಿಸಬೇಕಾಗುತ್ತದೆ.

೧೪೧. ಆದರೆ ಕಾಶಿಯಲ್ಲಿ ಜನಿಸಿ ಪಾಪಗಳನ್ನುಮಾಡಿ ಅಲ್ಲಿಯೇ ಮೃತಿಯೊಂದಿ ರುದ್ರಪಿಶಾಚವಾಗಿಹೋದರೂ ಕಡೆಗೆ ಮಾನವನು ಮುಕ್ತಿಯನ್ನೇ ಪಡೆಯುತ್ತಾನೆ.

೧೪೨. ಕಾಶಿಯಲ್ಲಿ ಮೃತಿಯೊಂದುವ; ದುರ್ದೈವವಶದಿಂದ ಪಾಪಗಳನ್ನು

ಕಾಯಂ ವಿಜ್ಞಾಯ ಸಾಽಪಾಯಂ ಸ್ಮೃತ್ವಾ ಗರ್ಭಸ್ಯ ವೇದನಾಂ ।
ತ್ಯಕ್ತ್ವಾ ರಾಜ್ಯಮಪಿ ಪ್ರಾಜ್ಯಂ ಸೇವ್ಯಾ ಕಾಶೀ ನಿರಂತರಂ ॥ ೧೪೩ ॥
ಅತರ್ಕಿತಂ ಸಮಭ್ಯೇತ್ಯ ಯಮದೂತಾಃ ಸುದಾರುಣಾಃ ।
ಬದ್ಧ್ವಾ ಪಾಶೈರ್ಹನಿಷ್ಯಂತಿ ಕ್ಷಿಪ್ರಂ ಕಾಶೀಂ ತತಃ ಶ್ರಯೇತ್ ॥ ೧೪೪ ॥
ನ ಪಾಪೇಭ್ಯೋ ಭಯಂ ಯತ್ರ ನ ಭಯಂ ಯತ್ರ ವೈ ಯಮಾತ್ ।
ನ ಗರ್ಭವಾಸಭೀರ್ಯತ್ರ ತಾಂ ಕಾಶೀಂ ಕೋ ನ ಸಂಶ್ರಯೇತ್ ॥೧೪೫॥
ಅದ್ಯ ಪ್ರಾತಃ ಪರಶ್ವೋ ವಾ ಮರಣಂ ಪ್ರಾಪ್ಯಮೇವ ಚ ।
ಯಾವತ್ಕಾಲವಿಲಂಬೋಽಸ್ತಿ ತಾವತ್ಕಾಶೀಂ ಸಮಾಶ್ರಯೇತ್ ॥ ೧೪೬ ॥
ಪ್ರಾಪ್ತೇ ತು ಮರಣೇ ಪುಂಸಾಂ ಪುನರ್ಜನ್ಮ ಪುನರ್ಮೃತಿಃ ।
ಅಪುನರ್ಭವಭೂಮಿಂ ಚ ತಸ್ಮಾತ್ಕಾಶೀಂ ಶ್ರಯೇದ್ಬುಧಃ ॥ ೧೪೭ ॥
ಪುತ್ರಕ್ಷೇತ್ರಕಲತ್ರಾಖ್ಯಾಂ ತ್ಯಕ್ತ್ವಾ ಮಾಯಾಂ ಹಿ ವೈಷ್ಣವೀಂ ।
ಭವಾಂತರೇಽನೇಕರೂಪಾಂ ಭವಘ್ನೀಂ ಕಾಶಿಕಾಂ ಶ್ರಯೇತ್ ॥ ೧೪೮ ॥

---

ಮಾಡುವ ಜಂತುಗಳಿಗೆಲ್ಲ ನರಕಪತನವೆಂಬುದಿಲ್ಲವೇ ಇಲ್ಲ. ಏಕೆಂದರೆ, ಅವರೆಲ್ಲರನ್ನೂ ಶಾಸನಮಾಡುವವನು ನಾನೇ ಆಗಿರುತ್ತೇನೆ.

೧೪೩. ಎಲೌ ದೇವಿಯೆ, ಈ ಕಾಯವೆಂಬುದು ಅಪಾಯಸಹಿತವಾದುದೆಂಬುದನ್ನೂ, ಗರ್ಭವಾಸವು ಬಹು ವೇದನಾಮಯವಾದುದೆಂಬುದನ್ನೂ ಅರಿತು ಸಕಲೈಶ್ವರ್ಯಸಮನ್ವಿತವಾದ ರಾಜ್ಯಾಧಿಪತ್ಯವನ್ನು ತೊರೆದು ನಿರಂತರವೂ ಕಾಶೀಕ್ಷೇತ್ರವನ್ನು ಸೇವಿಸತಕ್ಕದ್ದು.

೧೪೪. ಮಹಾ ಭಯಂಕರರಾದ ಯಮಭಟರು ಇದ್ದಕ್ಕಿದ್ದಂತೆಯೆ ಬಂದು ಪಾಶಗಳನ್ನುಹಾಕಿ ಬಿಗಿದು ಪ್ರಾಣಿಗಳೆಲ್ಲರನ್ನೂ ಸೆಳೆದೊಯ್ಯುತ್ತಾರೆ. ಆದುದರಿಂದ ಎಲ್ಲರೂ ಜಾಗ್ರತೆಯಾಗಿ ಕಾಶಿಯನ್ನು ಆಶ್ರಯಿಸತಕ್ಕದ್ದು.

೧೪೫. ಎಲ್ಲಿ ಪಾಪಭೀತಿಯೇ ಇಲ್ಲವೊ, ಎಲ್ಲಿ ಯಮನ ಭಯವೂ ಇರುವುದಿಲ್ಲವೊ, ಎಲ್ಲಿ ಗರ್ಭವಾಸದ ಭಯವೆಂಬುದು ಇಲ್ಲವೇಇಲ್ಲವೊ ಆ ಕಾಶೀಕ್ಷೇತ್ರವನ್ನು ಯಾರುತಾನೆ ಆಶ್ರಯಿಸುವುದಿಲ್ಲ?

೧೪೬. ಈಗಲೊ, ನಾಳೆಬೆಳಗ್ಗೆಯೊ, ನಾಡಿದ್ದೊ ಮೃತಿಯೊಂದಲೇಬೇಕು. ಕಾಲಾವಕಾಶವಿರುವಷ್ಟರಲ್ಲಿಯೇ ಮಾನವನು ಈ ಕಾರಣದಿಂದ ಕಾಶಿಯನ್ನು ಆಶ್ರಯಿಸಲೇಬೇಕು.

೧೪೭. ಮಾನವನು ಒಮ್ಮೆ ಮೃತಿಯೊಂದಿದನೆಂದರೆ ಮತ್ತೆ ಹುಟ್ಟಬೇಕು. ಹುಟ್ಟಿದ ಮೇಲೆ ಸಾವು ಸಿದ್ಧ. ಆದುದರಿಂದ ಜ್ಞಾನಿಯಾದವನು ಎಲ್ಲಿ ನೆಲಸಿದರೆ ಮತ್ತೆ ಹುಟ್ಟುವಿಕೆಯೇ ಇರುವುದಿಲ್ಲವೊ ಆ ಕಾಶೀಕ್ಷೇತ್ರವನ್ನು ಆಶ್ರಯಿಸಬೇಕು.

೧೪೮. ಪುತ್ರ ಕ್ಷೇತ್ರ ಕಲತ್ರರೂಪವಾಗಿ ಭವಿಷ್ಯಜ್ಜನ್ಮಗಳಲ್ಲಿ ಅನೇಕ ರೂಪ

ಸ್ಕಂದ ಉವಾಚ :—

ದೂರಂ ಮೇ ಮರಣಂ ಯುವಾಽಹಮಧುನಾ ಧಾರ್ಯಂ ನ ಚಿತ್ತೇತ್ವಿತಿ
ಶ್ರೋತವ್ಯೋ ನಿಭೃತಂ ಕೃತಾಂತಮಹಿಷಗ್ರೈವೇಯ ಘಂಟಾರವಃ ।
ನೈಕಟ್ಯಾತ್ಪ್ರಕಟೋತ್ಕಟಶ್ರಮಘಟಾಮಪ್ರಾಪ್ಯ ಹಿತ್ವಾ ದ್ರುತಂ
ಜೀರ್ಣಾಂ ಪರ್ಣಕುಟೀಂ ತತಃ ಪಟುಮತಿರ್ಗಚ್ಛೇತ್ಪುರೀಂಧೂರ್ಜಟೇಃ॥

ವ್ಯಾಸ ಉವಾಚ :—

ಅಗಸ್ತ್ಯಸ್ಯ ಪುರಃ ಸೂತ ಕಥಯಿತ್ವಾ ಕಥಾಮಿಮಾಂ ।
ಸರ್ವಪಾಪಪ್ರಶಮನೀಂ ಪುನಃ ಸ್ಕಂದ ಉವಾಚ ಹ ॥ ೧೫೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಮಣಿಕರ್ಣಿಕಾಖ್ಯಾನವರ್ಣನಂ"
ನಾಮ ಷಡ್ವಿಂಶೋಽಧ್ಯಾಯಃ

---

ವಾಗಿ ಬೆಳಗುವ ಈ ವೈಷ್ಣವ ಮಾಯೆಯನ್ನು ತೊರೆದು ಭವನಾಶಿನಿಯೆನಿಸಿದ ಕಾಶಿಯನ್ನು ಆಶ್ರಯಿಸಬೇಕು.

೧೪೯. ಸ್ಕಂದನು ಹೇಳುತ್ತಾನೆ:—ಎಲೈ ಕುಂಭೋದ್ಭವನಾದ ಅಗಸ್ತ್ಯ ಮಹಾಮುನಿಯೆ, ಲೋಕದಲ್ಲಿ ಯಾವ ಮಾನವನೂ, "ಈಗ ನಾನು ಯುವಕನಾಗಿದ್ದೇನೆ. ನನಗೆ ಸಾವೆಂಬುದು ಇನ್ನೂ ಬಹುದೂರದಲ್ಲಿದೆ" ಎಂದು ನಿರ್ಧರಿಸಬಾರದು. ವಿಷಯಾಂತರಗಳಲ್ಲಿ ಆಸಕ್ತಿಯನ್ನು ತೊರೆದು ಏಕಾಗ್ರಚಿತ್ತವುಳ್ಳವನಾಗಿ, ಬಹು ರಹಸ್ಯವಾಗಿ ಕುಳಿತು ಯಮಧರ್ಮರಾಜನ ವಾಹನವಾದ ಮಹಿಷದ ಕೊರಳಗಂಟೆಯ ದನಿಯನ್ನಾಲಿಸತಕ್ಕದ್ದು. ಆ ಒಡನೆಯೆ "ಯಮನು ಮಹಿಷವನ್ನೇರಿ ನನ್ನನ್ನು ಕರೆದೊಯ್ಯಲು ಬಂದ"ನೆಂದೇ ಭಾವಿಸಬೇಕು. ಆದುದರಿಂದ ಮುಪ್ಪು ಬಾರದಿರುವುದಕ್ಕೆ ಮುಂಚೆ ಜಾಗ್ರತೆಗೊಂಡು ಅಧಿಕವಾದ ಆಯಾಸಪರಂಪರೆಗಳನ್ನು ತಂದೊಡ್ಡುವ ತರಗೆಲೆಗಳ ಮನೆಗೆ ಸಾಟಿಯೆನಿಸಿದ ಸ್ವಂತ ಮನೆಯನ್ನು ತೊರೆದು ಪಟುಮತಿಯೆನಿಸಿ ಧೂರ್ಜಟಿಯ ಪಟ್ಟಣವಾದ ಕಾಶಿಯನ್ನು ಸೇರತಕ್ಕದ್ದು.

೧೫೦. ವ್ಯಾಸನು ಹೇಳುತ್ತಾನೆ:—ಅಯ್ಯಾ ಸೂತಪುರಾಣಿಕನೆ, ಈ ಪ್ರಕಾರವಾಗಿ ಸ್ಕಂದನು ಅಗಸ್ತ್ಯಮುನಿಯ ಮುಂಗಡೆ ಸಮಸ್ತಪಾಪಗಳನ್ನೂ ಶಮನಗೊಳಿಸುವ ಈ ಪುಣ್ಯಕಥೆಯನ್ನು ಹೇಳಿ ಮತ್ತೆ ಹೇಳತೊಡಗಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಮಣಿಕರ್ಣಿಕಾಖ್ಯಾನವರ್ಣನ"ವೆಂಬ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತವಿಂಶೋಽಧ್ಯಾಯಃ

## ದಶಹರಾಸ್ತೋತ್ರಕಥನಂ

ಸ್ಕಂದ ಉವಾಚ :—

ವಾರಾಣಸೀತಿ ಪ್ರಥಿತಂ ಯಥಾ ಚಾನಂದಕಾನನಂ ।
ತಥಾ ಚ ಕಥಯಾಮಾಸ ದೇವದೇವೇನ ಭಾಷಿತಂ ॥ ೧ ॥

ಈಶ್ವರ ಉವಾಚ :—

ನಿಶಾಮಯ ಮಹಾಬಾಹೋ ವಿಷ್ಣೋ ತ್ರೈಲೋಕ್ಯಸುಂದರ ।
ಪ್ರಾಪ್ತಂ ವಾರಾಣಸೀತ್ಯಾಖ್ಯಾಮವಿಮುಕ್ತಂ ಯಥಾ ತಥಾ ॥ ೨ ॥
ನಿರ್ದಗ್ಧಾನ್ಸಾಗರಾಂಛ್ರುತ್ವಾ ಕಪಿಲಕ್ರೋಧವಹ್ನಿನಾ ।
ಅಶ್ವಮೇಧಾಶ್ವಸಂಯುಕ್ತಾನ್ಪೂರ್ವಜಾನ್ಸ್ವಾನ್ಭಗೀರಥಃ ॥ ೩ ॥
ಸೂರ್ಯವಂಶೇ ಮಹಾತೇಜಾ ರಾಜಾ ಪರಮಧಾರ್ಮಿಕಃ ।
ಆರಿರಾಧಯಿಷುರ್ಗಂಗಾಂ ತಪಸೇ ಕೃತನಿಶ್ಚಯಃ ॥ ೪ ॥
ಹಿಮವಂತಂ ನಗಶ್ರೇಷ್ಠಮಮಾತ್ಯನ್ಯಸ್ತರಾಜ್ಯಧೂಃ ।
ಜಗಾಮ ಯಶಸಾಂ ರಾಶಿರುದ್ದಿಧೀರ್ಷುಃ ಪಿತಾಮಹಾನ್ ॥ ೫ ॥
ಬ್ರಹ್ಮಶಾಪಾಗ್ನಿನಿರ್ದಗ್ಧಾನ್ ಮಹಾದುರ್ಗತಿಗಾನಪಿ ।
ವಿನಾ ತ್ರಿಮಾರ್ಗಗಾಂ ವಿಷ್ಣೋ ಕೋ ಜಂತೂಂಸ್ತ್ರಿದಿವಂ ನಯೇತ್ ॥೬॥

## ಕನ್ನಡದ ಅನುವಾದ

### ದಶಹರಾಸ್ತೋತ್ರಕಥನ

೧. ಸ್ಕಂದನು ಹೇಳುತ್ತಾನೆ:—ವಾರಣಸಿಯು ಆನಂದವನ್ನು ಬೀರುವ (ಆನಂದ) ಕಾನನವೆಂದು ಮಹೇಶ್ವರನು ಹೇಳಿದ ಮಾತನ್ನು ಈಗ ಹೇಳುವೆನು.

೨. ಈಶ್ವರನು ಹೇಳುತ್ತಾನೆ:—"ತ್ರಿಭುವನಸುಂದರನೂ, ಮಹಾಬಾಹುವೂ ಆದ ವಿಷ್ಣುವೆ! ಅವಿಮುಕ್ತಕ್ಷೇತ್ರವು ವಾರಾಣಸೀ ಎಂದು ಹೆಸರಾಗಲು ಕಾರಣವನ್ನು ಕೇಳು.

೩–೫. ಸೂರ್ಯವಂಶದಲ್ಲಿ ಅತಿ ತೇಜಸ್ವಿಯೂ, ಅತ್ಯಂತ ಧಾರ್ಮಿಕನೂ ಆದ ಭಗೀರಥರಾಜನು ತನ್ನ ಹಿಂದಿನವರಾದ ಸಗರಪುತ್ರರು ಅಶ್ವಮೇಧದ ಕುದುರೆಯೊಡನೆ ಕಪಿಲನ ಕ್ರೋಧಾಗ್ನಿಯಿಂದ ಬೂದಿಯಾದುದನ್ನು ಕೇಳಿ ಗಂಗೆಯನ್ನು ಪೂಜಿಸಲೆಳಸಿ ತಪಸ್ಸನ್ನು ಮಾಡಲು ನಿಶ್ಚೈಯಿಸಿ ಮಂತ್ರಿಗಳಲ್ಲಿ ರಾಜ್ಯಭಾರವನ್ನಿಟ್ಟು ಆ ಪಿತಾಮಹರನ್ನು ಉದ್ಧರಿಸಲು ಹಿಮಾಲಯಕ್ಕೆ ತೆರಳಿದನು.

೬. ವಿಷ್ಣುವೆ! ಬ್ರಾಹ್ಮಣನ ಶಾಪಾಗ್ನಿಯಿಂದ ದಗ್ಧರಾದವರನ್ನೂ, ಅತ್ಯಂತ ದುರವಸ್ಥೆಯನ್ನು ಹೊಂದಿದವರನ್ನೂ ಗಂಗೆಯನ್ನು ಬಿಟ್ಟು ಯಾವ ತೀರ್ಥವು ತಾನೇ ಸ್ವರ್ಗವನ್ನೇರಿಸುವುದು ?

ಮಮೈವ ಸಾಽಪರಾ ಮೂರ್ತಿಸ್ತೋಯರೂಪಾ ಶಿವಾತ್ಮಿಕಾ ।
ಬ್ರಹ್ಮಾಂಡಾನಾಮನೇಕಾನಾಮಾಧಾರಃ ಪ್ರಕೃತಿಃ ಪರಾ ॥ ೭ ॥
ಶುದ್ಧವಿದ್ಯಾಸ್ವರೂಪಾ ಚ ತ್ರಿಶಕ್ತಿಃ ಕರುಣಾತ್ಮಿಕಾ ।
ಆನಂದಾಮೃತರೂಪಾಚ ಶುದ್ಧಧರ್ಮಸ್ವರೂಪಿಣೀ ॥ ೮ ॥
ಯಾಮೇತಾಂ ಜಗತಾಂ ಧಾತ್ರೀಂ ಧಾರಯಾಮಿ ಸ್ವಲೀಲಯಾ ।
ವಿಶ್ವಸ್ಯ ರಕ್ಷಣಾರ್ಥಾಯ ಪರಬ್ರಹ್ಮಸ್ವರೂಪಿಣೀಂ ॥ ೯ ॥
ತ್ರೈಲೋಕ್ಯೇ ಯಾನಿ ತೀರ್ಥಾನಿ ಪುಣ್ಯಕ್ಷೇತ್ರಾಣಿ ಯಾನಿ ಚ ।
ಸರ್ವತ್ರ ಸರ್ವೇ ಯೇ ಧರ್ಮಾಃ ಸರ್ವಯಜ್ಞಾಃ ಸ ದಕ್ಷಿಣಾಃ ॥ ೧೦ ॥
ತಪಾಂಸಿ ವಿಷ್ಣೋ ಸರ್ವಾಣಿ ಶ್ರುತಿಃ ಸಾಂಗಾ ಚತುರ್ವಿಧಾ ।
ಅಹಂ ಚ ತ್ವಂ ಚ ಕಶ್ಚಾಽಪಿ ದೇವತಾನಾಂ ಗಣಾಶ್ಚ ಯೇ ॥ ೧೧ ॥
ಪುರುಷಾರ್ಥಾಶ್ಚ ಸರ್ವೇ ವೈ ಶಕ್ತಯೋ ವಿವಿಧಾಶ್ಚ ಯಾಃ ।
ಗಂಗಾಯಾಂ ಸರ್ವ ಏವೈತೇ ಸೂಕ್ಷ್ಮರೂಪೇಣ ಸಂಸ್ಥಿತಾಃ ॥ ೧೨ ॥
ಸಸ್ನಾತಃ ಸರ್ವತೀರ್ಥೇಷು ಸರ್ವಕ್ರತುಷು ದೀಕ್ಷಿತಃ ।
ಚೀರ್ಣಸರ್ವವ್ರತಃ ಸೋಽಪಿ ಯಸ್ತು ಗಂಗಾಂ ನಿಷೇವತೇ ॥ ೧೩ ॥
ತಪಾಂಸಿ ತೇನ ತಪ್ತಾನಿ ಸರ್ವದಾನಪ್ರದಃ ಸ ಚ ।
ಸ ಪ್ರಾಪ್ತ ಯೋಗನಿಯಮೋ ಯಸ್ತು ಗಂಗಾಂ ನಿಷೇವತೇ ॥ ೧೪ ॥

---

೭–೮. ಆ ಗಂಗೆಯು ಅನೇಕ ಬ್ರಹ್ಮಾಂಡಗಳಿಗೆ ಆಧಾರವೂ, ಶುದ್ಧವಿದ್ಯಾ ರೂಪವೂ, ತ್ರಿಶಕ್ತಿಸ್ವರೂಪವೂ, ದಯಾಳುವೂ, ಆನಂದಾಮೃತಮಯವೂ, ಶುದ್ಧಧರ್ಮರೂಪವೂ, ಉತ್ತಮಪ್ರಕೃತಿಯೂ ಆದ ನನ್ನ ಶಿವಾತ್ಮಕಮೂರ್ತಿಯೂ ಆಗಿರುವುದು.

೯. ಜಗದ್ಧಾತ್ರಿಯೂ, ಪರಬ್ರಹ್ಮಸ್ವರೂಪಿಣಿಯೂ ಆದ ಈ ಗಂಗೆಯನ್ನು ಪ್ರಪಂಚದ ರಕ್ಷಣೆಗಾಗಿ ಲೀಲೆಯಿಂದ ಧರಿಸುವೆನು.

೧೦–೧೨. ಮೂರು ಲೋಕಗಳಲ್ಲಿರುವ ಪುಣ್ಯಕ್ಷೇತ್ರಗಳೂ, ತೀರ್ಥಗಳೂ, ಎಲ್ಲೆಡೆಯಲ್ಲಿರುವ ಧರ್ಮಗಳೂ, ದಕ್ಷಿಣಾಸಹಿತವಾದ ಸಮಸ್ತ ಯಜ್ಞಗಳೂ, ಸಮಸ್ತ ತಪಸ್ಸುಗಳೂ, ನಾಲ್ಕು ಸಾಂಗವೇದಗಳೂ, ನಾನೂ, ನೀನೂ, ಬ್ರಹ್ಮನೂ, ದೇವತೆಗಳ ಸಮೂಹವೂ, ಸಕಲ ಪುರುಷಾರ್ಥಗಳೂ, ವಿವಿಧ ಶಕ್ತಿಗಳೂ ಈ ಗಂಗೆಯಲ್ಲಿ ಸೂಕ್ಷ್ಮರೂಪದಿಂದಿರುವುವು.

೧೩–೧೪. ಗಂಗೆಯನ್ನು ಸೇವಿಸುವವನು ಸಕಲತೀರ್ಥಗಳಲ್ಲಿ ಮಿಂದವನೂ, ಸಮಸ್ತ ಯಜ್ಞಗಳಲ್ಲಿ ದೀಕ್ಷೆಗೊಂಡವನೂ, ಸಮಸ್ತ ವ್ರತವನ್ನಾಚರಿಸಿದವನೂ ಆಗುವನು. ಮತ್ತು ತಪಸ್ಸನ್ನಾಚರಿಸಿದವನೂ, ಸಮಸ್ತದಾನಗಳನ್ನಿತ್ತವನೂ, ಯೋಗನಿಯಮವನ್ನು ಹೊಂದಿರುವವನೂ ಆಗುವನು.

ಸರ್ವವರ್ಣಾಶ್ರಮೇಭ್ಯಶ್ಚ ವೇದವಿದ್ಭ್ಯಶ್ಚ ವೈ ತಥಾ ।
ಶಾಸ್ತ್ರಾರ್ಥಪಾರಗೇಭ್ಯಶ್ಚ ಗಂಗಾಸ್ನಾಯೀ ವಿಶಿಷ್ಯತೇ ॥ ೧೫ ॥
ಮನೋವಾಕ್ಕಾಯಜೈರ್ದೋಷೈರ್ದುಷ್ಟೋ ಬಹುವಿಧೈರಪಿ ।
ವೀಕ್ಷ್ಯ ಗಂಗಾಂ ಭವೇತ್ಪೂತಃ ಪುರುಷೋ ನಾತ್ರ ಸಂಶಯಃ ॥ ೧೬ ॥
ಕೃತೇ ಸರ್ವತ್ರ ತೀರ್ಥಾನಿ ತ್ರೇತಾಯಾಂ ಪುಷ್ಕರಂ ಪರಂ ।
ದ್ವಾಪರೇ ತು ಕುರುಕ್ಷೇತ್ರಂ ಕಲೌ ಗಂಗೈವ ಕೇವಲಂ ॥ ೧೭ ॥
ಪೂರ್ವಜನ್ಮಾಂತರಾಭ್ಯಾಸ ವಾಸನಾವಶತೋ ಹರೇ ।
ಗಂಗಾತೀರೇ ನಿವಾಸಃ ಸ್ಯಾನ್ಮದನುಗ್ರಹತಃ ಪರಾತ್ ॥ ೧೮ ॥
ಧ್ಯಾನಂ ಕೃತೇ ಮೋಕ್ಷಹೇತುಸ್ತ್ರೇತಾಯಾಂ ತಚ್ಚ ವೈ ತಪಃ ।
ದ್ವಾಪರೇ ತದ್ದ್ವಯಂ ಯಜ್ಞಾಃ ಕಲೌ ಗಂಗೈವ ಕೇವಲಂ ॥ ೧೯ ॥
ಯೋ ದೇಹಪತನಾದ್ಯಾವದ್ಗಂಗಾತೀರಂ ನ ಮುಂಚತಿ ।
ಸ ಹಿ ವೇದಾಂತವಿದ್ಯೋಗೀ ಬ್ರಹ್ಮಚರ್ಯವ್ರತೀ ಸದಾ ॥ ೨೦ ॥
ಕಲೌ ಕಲುಷಚಿತ್ತಾನಾಂ ಪರದ್ರವ್ಯರತಾತ್ಮನಾಂ ।
ವಿಧಿಹೀನಕ್ರಿಯಾಣಾಂ ಚ ಗತಿರ್ಗಂಗಾಂ ವಿನಾ ನಹಿ ॥ ೨೧ ॥

೧೫. ಗಂಗೆಯಲ್ಲಿ ಮಿಂದವನು ಸಮಸ್ತ ವರ್ಣಾಶ್ರಮಗಳು, ವೇದಜ್ಞರು, ಶಾಸ್ತ್ರಾರ್ಥಪಾರಂಗತರು ಇವರಿಗಿಂತಲೂ ಉತ್ತಮನಾಗುವನು.

೧೬. ಗಂಗಾದರ್ಶನಗೈದವನು ಮನಸ್ಸು, ವಾಕ್ ಶರೀರಗಳಿಂದುಂಟಾದ ಬಹುವಿಧ ದೋಷಗಳಿಂದ ನಿಜವಾಗಿಯೂ ಪವಿತ್ರನಾಗುವನು.

೧೭. ಕೃತಯುಗದಲ್ಲಿ ಸಕಲ ತೀರ್ಥಗಳೂ, ತ್ರೇತಾಯುಗದಲ್ಲಿ ಪುಷ್ಕರವೂ, ದ್ವಾಪರಯುಗದಲ್ಲಿ ಕುರುಕ್ಷೇತ್ರವೂ, ಕಲಿಯುಗದಲ್ಲಿ ಗಂಗೆಯೂ ಉತ್ತಮವಾದುವು.

೧೮. ಹರಿಯೆ! ನನ್ನ ಉತ್ತಮಾನುಗ್ರಹದಿಂದುಂಟಾದ ಪೂರ್ವಜನ್ಮಗಳ ವಾಸನಾಬಲದಿಂದ ಗಂಗಾತೀರದಲ್ಲಿ ವಾಸವು ಲಭಿಸುವುದು.

೧೯. ಕೃತಯುಗದಲ್ಲಿ ಧ್ಯಾನವೂ, ತ್ರೇತಾಯುಗದಲ್ಲಿ ಧ್ಯಾನತಪಸ್ಸುಗಳೂ, ದ್ವಾಪರಯುಗದಲ್ಲಿ ಧ್ಯಾನ, ತಪಸ್ಸು, ಯಜ್ಞಗಳೂ, ಕಲಿಯುಗದಲ್ಲಿ ಕೇವಲ ಗಂಗೆಯೂ ಮೋಕ್ಷಕ್ಕೆ ಕಾರಣಗಳು.

೨೦. ಮರಣಕಾಲದವರೆಗೆ ಗಂಗಾತೀರವನ್ನು ತ್ಯಜಿಸದವನು ವೇದಾಂತಜ್ಞನೂ, ಯೋಗಿಯೂ ಯಾವಾಗಲೂ ಬ್ರಹ್ಮಚಾರಿಯೂ ಆಗುವನು.

೨೧. ಕಲಿಯುಗದಲ್ಲಿ ಪಾಪಬುದ್ಧಿಯುಳ್ಳವರಿಗೂ, ಪರದ್ರವ್ಯನಿರತರಿಗೂ, ವಿಧಿಯಿಲ್ಲದೆ ಕರ್ಮಮಾಡುವವರಿಗೂ ಗಂಗೆಯನ್ನು ಬಿಟ್ಟರೆ ಬೇರೆ ಸದ್ಗತಿ ಸಾಧನವಿಲ್ಲ.

ಅಲಕ್ಷ್ಮೀಃ ಕಾಲಕರ್ಣೀ ಚ ದುಃಸ್ವಪ್ನೋ ದುರ್ವಿಚಿಂತಿತಂ ।
ಗಂಗಾ ಗಂಗೇತಿ ಜಪನಾತ್ತಾನಿ ನೋಪವಿಶಂತಿ ಹಿ ॥ ೨೨ ॥
ಗಂಗಾ ಹಿ ಸರ್ವಭೂತಾನಾಮಿಹಾಽಮುತ್ರ ಫಲಪ್ರದಾ ।
ಭಾವಾನುರೂಪತೋ ವಿಷ್ಣೋ ಸದಾ ಸರ್ವಜಗದ್ಧಿತಾ ॥ ೨೩ ॥
ಯಜ್ಞದಾನತಪೋಯೋಗಜಪಾಃ ಸ ನಿಯಮಾ ಯಮಾಃ ।
ಗಂಗಾಸೇವಾ ಸಹಸ್ರಾಂಶಂ ನ ಲಭಂತೇ ಕಲೌ ಹರೇ ॥ ೨೪ ॥
ಕಿಮಷ್ಟಾಂಗೇನ ಯೋಗೇನ ಕಿಂ ತಪೋಭಿಃ ಕಿಮಧ್ವರೈಃ ।
ವಾಸ ಏವ ಹಿ ಗಂಗಾಯಾಂ ಬ್ರಹ್ಮಜ್ಞಾನಸ್ಯ ಕಾರಣಂ ॥ ೨೫ ॥
ಅಪಿ ದೂರಸ್ಥಿತಸ್ಯಾಽಪಿ ಗಂಗಾಮಾಹಾತ್ಮ್ಯವೇದಿನಃ ।
ಅಯೋಗ್ಯಸ್ಯಾಽಪಿ ಗೋವಿಂದಭಕ್ತ್ಯಾ ಗಂಗಾ ಪ್ರಸೀದತಿ ॥ ೨೬ ॥
ಶ್ರದ್ಧಾಧರ್ಮಃ ಪರಃ ಸೂಕ್ಷ್ಮಃ ಶ್ರದ್ಧಾ ಜ್ಞಾನಂ ಪರಂ ತಪಃ ।
ಶ್ರದ್ಧಾ ಸ್ವರ್ಗಶ್ಚ ಮೋಕ್ಷಶ್ಚ ಶ್ರದ್ಧಯಾ ಸಾ ಪ್ರಸೀದತಿ ॥ ೨೭ ॥
ಅಜ್ಞಾನರಾಗಲೋಭಾದ್ಯೈಃ ಪುಂಸಾಂ ಸಂಮೂಢಚೇತಸಾಂ ।
ಶ್ರದ್ಧಾ ನ ಜಾಯತೇ ಧರ್ಮೇ ಗಂಗಾಯಾಂ ಚ ವಿಶೇಷತಃ ॥ ೨೮ ॥

೨೨. ದಾರಿದ್ರ್ಯ, ದುರ್ಮರಣ, ದುಸ್ಸ್ವಪ್ನ, ದುಶ್ಚಿಂತೆ ಇವುಗಳು ಗಂಗೆಯೆಂದು ಜಪಿಸುವವರನ್ನು ಸಮೀಪಿಸುವುದಿಲ್ಲ.

೨೩. ವಿಷ್ಣುವೆ! ಗಂಗೆಯು ಸಕಲ ಪ್ರಾಣಿಗಳಿಗೆ ಇಹಪರಗಳಲ್ಲಿ ಇಷ್ಟಾರ್ಥವನ್ನು ನೀಡುವುವು. ಭಕ್ತ್ಯನುಗುಣವಾಗಿ ಸಮಸ್ತ ಜಗತ್ತಿಗೂ ಹಿತವಾದುದು.

೨೪. ಹರಿಯೆ! ಕಲಿಯುಗದಲ್ಲಿ ಯಜ್ಞ, ದಾನ, ತಪಸ್ಸು, ಯೋಗ, ಜಪ ನಿಯಮ, ಯಮ ಇವುಗಳು ಗಂಗಾಸೇವೆಯ ಸಾವಿರದ ಒಂದಂಶವನ್ನೂ ಹೊಂದುವುದಿಲ್ಲ.

೨೫. ಅಷ್ಟಾಂಗಯೋಗ, ತಪಸ್ಸು, ಯಜ್ಞ, ಇವುಗಳಿಂದೇನು ಪ್ರಯೋಜನ? ಗಂಗಾವಾಸವೇ ಬ್ರಹ್ಮಜ್ಞಾನಕ್ಕೆ ಕಾರಣವು.

೨೬. ಗಂಗಾ ಮಾಹಾತ್ಮ್ಯವನ್ನರಿತವನು ದೂರದೇಶದಲ್ಲಿದ್ದು ಅಯೋಗ್ಯನಾಗಿದ್ದರೂ ಗೋವಿಂದನ ಭಕ್ತನಾಗಿದ್ದರೆ ಗಂಗೆಯು ಪ್ರಸನ್ನಳಾಗುವಳು.

೨೭. ಶ್ರದ್ಧೆಯು ಸೂಕ್ಷ್ಮವಾದ ಉತ್ತಮ ಧರ್ಮವೂ, ಜ್ಞಾನವೂ, ತಪಸ್ಸೂ, ಸ್ವರ್ಗವೂ, ಮೋಕ್ಷವೂ ಆಗಿರುವುದು. ಈ ಶ್ರದ್ಧೆಯಿಂದ ಗಂಗೆಯು ಪ್ರಸನ್ನಳಾಗುವಳು.

೨೮. ಅಜ್ಞಾನ, ವಿಷಯಾಭಿಲಾಷೆ, ಲೋಭ ಮೊದಲಾದುವುಗಳಿಂದ ಮೂಢಮನಸ್ಕರಾದ ಮಾನವರಿಗೆ ಧರ್ಮದಲ್ಲಿಯೂ, ಗಂಗೆಯಲ್ಲಿಯೂ ವಿಶೇಷವಾಗಿ ಶ್ರದ್ಧೆಯುಂಟಾಗುವುದಿಲ್ಲ.

ಬಹಿಃಸ್ಥಿತಂ ಜಲಂ ಯದ್ವನ್ನಾರಿಕೇಲಾಂತರೇ ಸ್ಥಿತಂ ।
ತಥಾ ಬ್ರಹ್ಮಾಂಡಬಾಹ್ಯಸ್ಥಂ ಪರಬ್ರಹ್ಮಾಂಬು ಜಾಹ್ನವೀ ॥ ೨೯ ॥
ಗಂಗಾಲಾಭಾತ್ಪರೋ ಲಾಭಃ ಕ್ವಚಿದನ್ಯೋ ನ ವಿದ್ಯತೇ ।
ತಸ್ಮಾದ್ಗಂಗಾಮುಪಾಸೀತ ಗಂಗೈವ ಪರಮಃ ಪುಮಾನ್ ॥ ೩೦ ॥
ಶಕ್ತಸ್ಯ ಪಂಡಿತಸ್ಯಾಪಿ ಗುಣಿನೋ ದಾನಶಾಲಿನಃ ।
ಗಂಗಾಸ್ನಾನವಿಹೀನಸ್ಯ ಹರೇ ಜನ್ಮ ನಿರರ್ಥಕಂ ॥ ೩೧ ॥
ವೃಥಾ ಕುಲಂ ವೃಥಾ ವಿದ್ಯಾ ವೃಥಾ ಯಜ್ಞಾ ವೃಥಾ ತಪಃ ।
ವೃಥಾ ದಾನಾನಿ ತಸ್ಯೇಹ ಕಲೌ ಗಂಗಾಂ ನ ಯೋ ಭಜೇತ್ ॥ ೩೨ ॥
ಗುಣವತ್ಪಾತ್ರಪೂಜಾಯಾಂ ನಸ್ಯಾದ್ವೈ ತಾದೃಶಂ ಫಲಂ ।
ಯಥಾ ಗಂಗಾಜಲಸ್ನಾನಪೂಜನೇ ವಿಧಿನಾ ಫಲಂ ॥ ೩೩ ॥
ಮಮ ತೇಜೋಽಗ್ನಿಗರ್ಭೇಯಂ ಮಮ ವೀರ್ಯಾತಿಸಂವೃತಾ ।
ದಾಹಿಕಾ ಸರ್ವದೋಷಾಣಾಂ ಸರ್ವಪಾಪವಿನಾಶಿನೀ ॥ ೩೪ ॥
ಸ್ಮರಣಾದೇವ ಗಂಗಾಯಾಃ ಪಾಪಸಂಘಾತಪಂಜರಂ ।
ಶತಧಾ ಭೇದಮಾಯಾತಿ ಗಿರಿರ್ವಜ್ರಹತೋ ಯಥಾ ॥ ೩೫ ॥

೨೯. ಹೊರಗಿನ ನೀರು ತೆಂಗಿನಕಾಯಿಯೊಳಗೆ ಹೇಗಿರುವುದೊ, ಹಾಗೆಯೇ ಗಂಗೆಯು ಬ್ರಹ್ಮಾಂಡದ ಹೊರಗಿರುವ ಬ್ರಹ್ಮನೆಂಬ ನೀರುಳ್ಳುದು.

೩೦. ಗಂಗೆಗಿಂತಲೂ ಉತ್ತಮ ಲಾಭವು ಎಲ್ಲಿಯೂ ಇರುವುದಿಲ್ಲ. ಆದುದರಿಂದ ಗಂಗೆಯನ್ನು ಸೇವಿಸಬೇಕು. ಗಂಗೆಯೆ ಉತ್ತಮ ಪುರುಷನು.

೩೧. ಹರಿಯೆ! ಶಕ್ತಿಯುಳ್ಳವನೂ, ಜ್ಞಾನಿಯೂ, ಗುಣಶಾಲಿಯೂ, ದಾನಮಾಡುವವನೂ ಆಗಿದ್ದರೂ ಮಾನವನು ಗಂಗೆಯಲ್ಲಿ ಸ್ನಾನಮಾಡದಿದ್ದರೆ ಅವನ ಜನ್ಮವು ನಿಷ್ಫಲವು.

೩೨. ಕಲಿಯುಗದಲ್ಲಿ ಗಂಗೆಯನ್ನು ಭಜಿಸದವನ ಕುಲ, ವಿದ್ಯಾ, ಯಜ್ಞ, ತಪಸ್ಸು, ದಾನ ಇವುಗಳು ನಿಷ್ಫಲವಾದುವು.

೩೩. ಗಂಗೆಯಲ್ಲಿ ಮಿಂದು ವಿಧಿಯಿಂದ ಪೂಜಿಸಿದ ಫಲವು ಗುಣಶಾಲಿಯಾದ ಸತ್ಪಾತ್ರನ ಪೂಜೆಯಿಂದುಂಟಾಗುವುದಿಲ್ಲ.

೩೪. ನನ್ನ ತೇಜಸ್ಸುಳ್ಳುದೂ, ನನ್ನ ವೀರ್ಯದಿಂದ ಕೂಡಿದುದೂ ಆದ ಈ ಗಂಗೆಯು ಸಕಲ ದೋಷಗಳನ್ನು ಸುಡುವುದೂ, ಸಮಸ್ತ ಪಾಪಗಳನ್ನು ನೀಗಿಸುವುದೂ ಆಗಿರುವುದು.

೩೫. ಗಂಗಾಸ್ಮರಣೆಯಿಂದಲೇ ಪಾಪಸಮೂಹವೆಂಬ ಪಂಜರವು ವಜ್ರತಾಡಿತವಾದ ಪರ್ವತದಂತೆ ಅನೇಕ ಬಗೆಯಾಗಿ ಭಿನ್ನವಾಗುವುದು.

ಗಂಗಾಂ ಗಚ್ಛತಿ ಯಸ್ತ್ವೇಕೋ ಯಸ್ತು ಭಕ್ತ್ಯಾಽನುಮೋದಯೇತ್ ।
ತಯೋಸ್ತುಲ್ಯಂ ಫಲಂ ಪ್ರಾಹುರ್ಭಕ್ತಿರೇವಾಽತ್ರಕಾರಣಂ ॥ ೩೬ ॥
ಗಚ್ಛಂಸ್ತಿಷ್ಠನ್ ಜಪನ್ಧ್ಯಾಯನ್ಭುಂಜನ್ ಜಾಗ್ರತ್ಸ್ವಪನ್ವದನ್ ।
ಯಃ ಸ್ಮರೇತ್ಸತತಂ ಗಂಗಾಂ ಸಹಿ ಮುಚ್ಯೇತ ಬಂಧನಾತ್ ॥ ೩೭ ॥
ಪಿತೄನುದ್ದಿಶ್ಯ ಯೋ ಭಕ್ತ್ಯಾ ಪಾಯಸಂ ಮಧು ಸಂಯುತಂ ।
ಗುಡಸರ್ಪಿಸ್ತಿಲೈಃ ಸಾರ್ಧಂ ಗಂಗಾಽಂಭಸಿ ವಿನಿಕ್ಷಿಪೇತ್ ॥ ೩೮ ॥
ತೃಪ್ತಾ ಭವಂತಿ ಪಿತರಸ್ತಸ್ಯ ವರ್ಷಶತಂ ಹರೇ ।
ಯಚ್ಛಂತಿ ವಿವಿಧಾನ್ಕಾಮಾನ್ ಪರಿತುಷ್ಟಾಃ ಪಿತಾಮಹಾಃ ॥ ೩೯ ॥
ಲಿಂಗೇ ಸಂಪೂಜಿತೇ ಸರ್ವಮರ್ಚಿತಂ ಸ್ಯಾಜ್ಜಗದ್ಯಥಾ ।
ಗಂಗಾಸ್ನಾನೇನ ಲಭತೇ ಸರ್ವತೀರ್ಥಫಲಂ ತಥಾ ॥ ೪೦ ॥
ಗಂಗಾಯಾಂ ತು ನರಃ ಸ್ನಾತ್ವಾ ಯೋ ಲಿಂಗಂ ನಿತ್ಯಮರ್ಚತಿ ।
ಏಕೇನ ಜನ್ಮನಾ ಮುಕ್ತಿಂ ಪರಾಂ ಪ್ರಾಪ್ನೋತಿ ಸ ಧ್ರುವಂ ॥ ೪೧ ॥
ಅಗ್ನಿಹೋತ್ರಂ ಚ ಯಜ್ಞಾಶ್ಚ ವ್ರತದಾನತಪಾಂಸಿ ಚ ।
ಗಂಗಾಯಾಂ ಲಿಂಗಪೂಜಾಯಾಃ ಕೋಟ್ಯಂಶೇನಾಽಪಿ ನೋ ಸಮಾಃ ॥
ಗಂಗಾಂ ಗಂತುಂ ವಿನಿಶ್ಚಿತ್ಯ ಕೃತ್ವಾ ಶ್ರಾದ್ಧಾದಿಕಂ ಗೃಹೇ ।
ಸ್ಥಿತಸ್ಯ ಸಮ್ಯಕ್ಸಂಕಲ್ಪಾತ್ತಸ್ಯ ನಂದಂತಿ ಪೂರ್ವಜಾಃ ॥ ೪೩ ॥

---

೩೬. ಗಂಗೆಗೆ ಹೋದವನೂ, ಅವನನ್ನು ಅನುಮೋದಿಸಿದವನೂ ಸಮ ಫಲವುಳ್ಳವರಾಗುವರು. ಭಕ್ತಿಯೇ ಈ ವಿಷಯದಲ್ಲಿ ಕಾರಣವು.

೩೭. ಹೋಗುತ್ತ, ನಿಲ್ಲುತ್ತ, ಜಪಿಸುತ್ತ, ಧ್ಯಾನಿಸುತ್ತ, ಭುಜಿಸುತ್ತ, ಜಾಗರಣೆಗೈಯುತ್ತ, ನಿದ್ರಿಸುತ್ತ, ಮಾತನಾಡುತ್ತ ಗಂಗೆಯನ್ನು ಸ್ಮರಿಸುವವನು ಸಂಸಾರಬಂಧದಿಂದ ಮುಕ್ತನಾಗುವನು.

೩೮–೩೯. ಪಿತೃಗಳನ್ನುದ್ದೇಶಿಸಿ ಭಕ್ತಿಯಿಂದ ಗಂಗೆಯಲ್ಲಿ ಪಾಯಸ, ಜೇನು, ಬೆಲ್ಲ, ತುಪ್ಪ, ಎಳ್ಳು ಇವುಗಳನ್ನು ಹಾಕಿದವನ ಪಿತೃಗಳು ನೂರುವರ್ಷ ಕಾಲ ತೃಪ್ತರಾಗಿ ವಿವಿಧೇಷ್ಟಗಳನ್ನು ಕೊಡುತ್ತಾರೆ.

೪೦. ಶಿವಲಿಂಗವನ್ನು ಪೂಜಿಸಿದರೆ ಪ್ರಪಂಚವನ್ನೇ ಪೂಜಿಸಿದಂತಾಗುವಂತೆ ಗಂಗಾಸ್ನಾನದಿಂದ ಸಕಲ ತೀರ್ಥಫಲವು ದೊರೆಯುವುದು.

೪೧. ಗಂಗೆಯಲ್ಲಿ ಮಿಂದು ನಿತ್ಯವೂ ಶಿವಲಿಂಗವನ್ನರ್ಚಿಸುವವನು ಒಂದೇ ಜನ್ಮದಲ್ಲಿ ಉತ್ತಮ ಮುಕ್ತಿಯನ್ನು ಪಡೆಯುವನು.

೪೨. ಅಗ್ನಿಹೋತ್ರ, ಯಜ್ಞ, ವ್ರತ, ದಾನ, ತಪಸ್ಸು ಇವುಗಳು ಗಂಗೆಯಲ್ಲಿರುವ ಲಿಂಗಪೂಜೆಯ ಕೋಟ್ಯಂಶಕ್ಕೂ ಸಮವಲ್ಲ.

೪೩. ಗಂಗಾಯಾತ್ರೆಗೆ ಹೋಗಲು ಸಂಕಲ್ಪಿಸಿ ಮನೆಯಲ್ಲಿ ಶ್ರಾದ್ಧಾದಿಗಳನ್ನು ಮಾಡಿದವನ ಹಿಂದಿನ ಪಿತೃಗಳು ಆನಂದಪಡುವರು.

ಪಾಪಾನಿ ಚ ರುದಂತ್ಯಾಶು ಹಾ ಕ್ವ ಯಾಸ್ಯಾಮ ಇತ್ಯಲಂ ।
ಲೋಭಮೋಹಾದಿಭಿಃ ಸಾರ್ಧಂ ಮಂತ್ರಯಂತಿ ಪುನಃ ಪುನಃ ॥ ೪೪ ॥
ಯಥಾ ಸ ಗಂಗಾಂ ಯಾತ್ಯೇಷ ತಥಾ ವಿಘ್ನಂ ಪ್ರಕುರ್ಮಹೇ ।
ಗಂಗಾಂ ಗತೋ ಯಥಾ ಚೈಷ ನ ಉಚ್ಛಿತ್ತಿಂ ವಿಧಾಸ್ಯತಿ ॥ ೪೫ ॥
ಗೃಹಾದ್ಗಂಗಾಽವಗಾಹಾರ್ಥಂ ಗಚ್ಛತಸ್ತು ಪದೇ ಪದೇ ।
ನಿರಾಶಾನಿ ವ್ರಜಂತ್ಯೇವ ಪಾಪಾನ್ಯಸ್ಯ ಶರೀರತಃ ॥ ೪೬ ॥
ಪೂರ್ವಜನ್ಮಕೃತೈಃ ಪುಣ್ಯೈಸ್ತ್ಯಕ್ತ್ವಾ ಲೋಭಾದಿಕಂ ಹರೇ ।
ವ್ಯುದಸ್ಯ ಸರ್ವವಿಘ್ನೌಘಾನ್ ಗಂಗಾಂ ಪ್ರಾಪ್ನೋತಿ ಪುಣ್ಯವಾನ್ ॥ ೪೭ ॥
ಅನುಷಂಗೇಣ ಮೌಲ್ಯೇನ ವಾಣಿಜ್ಯೇನಾಽಪಿ ಸೇವಯಾ ।
ಕಾಮಾಸಕ್ತೋಽಪಿ ವಾ ಮರ್ತ್ಯೋ ಗಂಗಾಸ್ನಾತೋ ದಿವಂ ವ್ರಜೇತ್ ॥
ಅನಿಚ್ಛಯಾಽಪಿ ಸಂಸ್ಪೃಷ್ಟೋ ದಹನೋ ಹಿ ಯಥಾ ದಹೇತ್ ।
ಅನಿಚ್ಛಯಾಽಪಿ ಸಂಸ್ನಾತಾ ಗಂಗಾ ಪಾಪಂ ತಥಾ ದಹೇತ್ ॥ ೪೯ ॥
ತಾವದ್ಭ್ರಮತಿ ಸಂಸಾರೇ ಯಾವದ್ಗಂಗಾಂ ನ ಸೇವತೇ ।
ಸಂಸೇವ್ಯ ಗಂಗಾಂ ನೋ ಜಂತುರ್ಭವಕ್ಲೇಶಂ ಪ್ರಪಶ್ಯತಿ ॥ ೫೦ ॥

---

೪೪. ಪಾಪಗಳು 'ನಾವು ಎಲ್ಲಿಗೆ ಹೋಗೋಣ' ಎಂದು ಲೋಭಮೋಹಗಳೊಡನೆ ಬಾರಿಬಾರಿಗೂ ಆಲೋಚಿಸುವುವು.

೪೫. ಅವು, 'ಇವನು ಗಂಗೆಗೆ ಹೋಗಿ ನಮ್ಮನ್ನು ನಾಶಗೊಳಿಸದಂತೆ ಪ್ರಯಾಣಕ್ಕೆ ಅಡ್ಡಿಯನ್ನುಂಟುಮಾಡುವೆವು' ಎಂದು ಆಲೋಚಿಸುವುವು.

೪೬. ಮನೆಯಿಂದ ಗಂಗಾಸ್ನಾನಕ್ಕಾಗಿ ಹೋಗುವವನ ಶರೀರದಿಂದ ಪಾಪಗಳು ಪ್ರತಿ ಹೆಜ್ಜೆಯಲ್ಲಿಯೂ ಆಶೆಯಿಲ್ಲದವುಗಳಾಗಿ ಹೊರಟುಹೋಗುವುವು.

೪೭. ಪುಣ್ಯವಂತನು ಪೂರ್ವಜನ್ಮಕೃತವಾದ ಸುಕೃತಗಳಿಂದ ಲೋಭಾದಿಗಳನ್ನು ತ್ಯಜಿಸಿ ಸಕಲ ವಿಘ್ನಗಳನ್ನೂ ದೂರಮಾಡಿ ಗಂಗೆಯನ್ನು ಸೇರುವನು.

೪೮. ಕ್ರಯ ವಿಕ್ರಯ, ಸೇವೆ, ಕಾಮ ಇವುಗಳಲ್ಲಿ ಆಸಕ್ತನಾದವನೂ ಗಂಗೆಯಲ್ಲಿ ಮಿಂದರೆ ಸ್ವರ್ಗಲೋಕಕ್ಕೆ ತೆರಳುವನು.

೪೯. ಮನಸ್ಸಿಲ್ಲದೆ ಮುಟ್ಟಿದರೂ ಅಗ್ನಿಯು ಸುಡುವಂತೆ, ಆಸಕ್ತಿಯಿಲ್ಲದೆ ಮಿಂದರೂ ಗಂಗೆಯು ಪಾಪವನ್ನು ದಹಿಸುವುದು.

೫೦. ಗಂಗೆಯನ್ನು ಸೇವಿಸದಿರುವವರೆಗೆ ಮನುಷ್ಯನು ಸಂಸಾರದಲ್ಲಿ ತೊಳಲುವನು. ಗಂಗೆಯನ್ನು ಸೇವಿಸಿದ ಪ್ರಾಣಿಯು ಸಂಸಾರಕ್ಲೇಶವನ್ನು ಕಾಣುವುದಿಲ್ಲ.

ಯೋ ಗಂಗಾಂಭಸಿ ನಿಸ್ನಾತೋ ಭಕ್ತ್ಯಾ ಸಂತ್ಯಕ್ತಸಂಶಯಃ ।
ಮನುಷ್ಯಚರ್ಮಣಾ ನದ್ಧಃ ಸ ದೇವೋ ನಾಽತ್ರ ಸಂಶಯಃ ॥ ೫೧ ॥
ಗಂಗಾಸ್ನಾನಾರ್ಥಮುದ್ಯುಕ್ತೋ ಮಧ್ಯೇ ಮಾರ್ಗಂ ಮೃತೋ ಯದಿ ।
ಗಂಗಾಸ್ನಾನಫಲಂ ಸೋಽಪಿ ತದಾಪ್ನೋತಿ ನ ಸಂಶಯಃ ॥ ೫೨ ॥
ಮಾಹಾತ್ಮ್ಯಂ ಯೇ ಚ ಗಂಗಾಯಾಃ ಶೃಣ್ವಂತಿ ಚ ಪಠಂತಿ ಚ ।
ತೇಽಪ್ಯಶೇಷೈರ್ಮಹಾಪಾಪೈರ್ಮುಚ್ಯಂತೇ ನಾಽತ್ರ ಸಂಶಯಃ ॥ ೫೩ ॥
ದುರ್ಬುದ್ಧಯೋ ದುರಾಚಾರಾ ಹೈತುಕಾ ಬಹುಸಂಶಯಾಃ ।
ಪಶ್ಯಂತಿ ಮೋಹಿತಾ ವಿಷ್ಣೋ ಗಂಗಾಮನ್ಯನದೀಮಿವ ॥ ೫೪ ॥
ಜನ್ಮಾಂತರಕೃತೈರ್ದಾನೈಸ್ತಪೋಭಿರ್ನಿಯಮೈರ್ವ್ರತೈಃ ।
ಇಹ ಜನ್ಮನಿ ಗಂಗಾಯಾಂ ನೃಣಾಂ ಭಕ್ತಿಃ ಪ್ರಜಾಯತೇ ॥ ೫೫ ॥
ಗಂಗಾಭಕ್ತಿಮತಾಮರ್ಥೇ ಮಹೇಂದ್ರಾದಿಪುರೇಷು ಚ ।
ಹರ್ಮ್ಯಾಣಿ ರಮ್ಯಭೋಗಾನಿ ನಿರ್ಮಿತಾನಿ ಸ್ವಯಂಭುವಾ ॥ ೫೬ ॥
ಸಿದ್ಧಯಃ ಸಿದ್ಧಲಿಂಗಾನಿ ಸ್ಪರ್ಶಲಿಂಗಾನ್ಯನೇಕಶಃ ।
ಪ್ರಾಸಾದಾ ರತ್ನರಚಿತಾಶ್ಚಿಂತಾಮಣಿಗಣಾ ಅಪಿ ॥ ೫೭ ॥
ಗಂಗಾ ಜಲಾಂತಸ್ತಿಷ್ಠಂತಿ ಕಲಿಕಲ್ಮಷ ಭೀತಿತಃ ।
ಅತ ಏವ ಹಿ ಸಂಸೇವ್ಯಾ ಕಲೌ ಗಂಗೇಷ್ಟಸಿದ್ಧಿದಾ ॥ ೫೮ ॥

---

೫೧. ಸಂಶಯವಿಲ್ಲದೆ ಭಕ್ತಿಯಿಂದ ಗಂಗಾಜಲದಲ್ಲಿ ಮಿಂದ ಮಾನವನು ಮನುಷ್ಯಚರ್ಮವನ್ನು ಹೊದೆದ ದೇವತೆಯೇ ಸರಿ.

೫೨. ಗಂಗಾಸ್ನಾನಕ್ಕಾಗಿ ಉದ್ಯುಕ್ತನಾದವನು ಮಾರ್ಗಮಧ್ಯದಲ್ಲಿ ಮೃತನಾದರೂ ಗಂಗಾಸ್ನಾನದ ಫಲವನ್ನು ನಿಜವಾಗಿಯೂ ಪಡೆಯುವನು.

೫೩. ಗಂಗಾಮಾಹಾತ್ಮ್ಯವನ್ನು ಕೇಳುವವರೂ, ಹೇಳುವವರೂ ಸಕಲ ಪಾಪಮುಕ್ತರಾಗುವರು.

೫೪. ವಿಷ್ಣುವೆ! ದುರ್ಬುದ್ಧಿಯುಳ್ಳವರೂ, ದುರ್ನಡತೆಯುಳ್ಳವರೂ, ಯುಕ್ತಿವಾದಿಗಳೂ, ಸಂಶಯಗ್ರಸ್ತರೂ, ಮೋಹದಿಂದ ಗಂಗೆಯನ್ನು ಇತರ ನದಿಯಂತೆ ನೋಡುವರು.

೫೫. ಮಾನವರಿಗೆ ಈ ಜನ್ಮದಲ್ಲಿ ಇತರ ಜನ್ಮಗಳಲ್ಲೆಸಗಿದ ದಾನ, ತಪಸ್ಸು, ನಿಯಮ, ವ್ರತ ಇವುಗಳಿಂದ ಗಂಗೆಯಲ್ಲಿ ಭಕ್ತಿಯುಂಟಾಗುವುದು.

೫೬. ಬ್ರಹ್ಮನು ಗಂಗಾಭಕ್ತರಿಗಾಗಿ ಅಮರಾವತಿ ಮೊದಲಾದುವುಗಳಲ್ಲಿ ಸೌಧಗಳನ್ನೂ, ಸುಖಭೋಗಗಳನ್ನೂ ನಿರ್ಮಿಸಿರುವನು.

೫೭–೫೮. ಗಂಗೆಯ ಜಲದಲ್ಲಿ ಅಷ್ಟಸಿದ್ಧಿಗಳೂ, ಸಿದ್ಧಲಿಂಗಗಳೂ, ಸ್ಪರ್ಶ ಲಿಂಗಗಳೂ, ರತ್ನನಿರ್ಮಿತವಾದ ಅರಮನೆಗಳೂ, ಚಿಂತಾಮಣಿಗಳೂ ಕಲಿಯ

ಸೂರ್ಯೋದಯೇ ತಮಾಂಸೀವ ವಜ್ರಪಾತಭಯಾನ್ನಗಾಃ ।
ತಾರ್ಕ್ಷ್ಯೇಕ್ಷಣಾದ್ಯಥಾ ಸರ್ಪಾ ಮೇಘಾ ವಾತಾಹತಾ ಇವ ॥ ೫೯ ॥
ತತ್ತ್ವಜ್ಞಾನಾದ್ಯಥಾ ಮೋಹಃ ಸಿಂಹಂ ದೃಷ್ಟ್ವಾ ಯಥಾ ಮೃಗಾಃ ।
ತಥಾ ಸರ್ವಾಣಿ ಪಾಪಾನಿ ಯಾಂತಿ ಗಂಗೇಕ್ಷಣಾತ್ಕ್ಷಯಂ ॥ ೬೦ ॥
ದಿವ್ಯೌಷಧೈರ್ಯಥಾ ರೋಗಾ ಲೋಭೇನ ಚ ಯಥಾ ಗುಣಾಃ ।
ಯಥಾ ಗ್ರೀಷ್ಮೋಷ್ಮಸಂಪತ್ತಿರಗಾಧಹ್ರದಮಜ್ಜನಾತ್ ॥ ೬೧ ॥
ತೂಲಶೈಲಃ ಸ್ಫುಲಿಂಗೇನ ಯಥಾ ನಶ್ಯತಿ ತತ್ಕ್ಷಣಾತ್ ।
ತಥಾ ದೋಷಾಃ ಪ್ರಣಶ್ಯಂತಿ ಗಂಗಾಂಭಃಸ್ಪರ್ಶನಾದ್ಧ್ರುವಂ ॥ ೬೨ ॥
ಕ್ರೋಧೇನಚ ತಪೋ ಯದ್ವತ್ಕಾಮೇನ ಚ ಯಥಾ ಮತಿಃ ।
ಅನಯೇನ ಯಥಾ ಲಕ್ಷ್ಮೀರ್ವಿದ್ಯಾ ಮಾನೇನ ವೈ ಯಥಾ ॥ ೬೩ ॥
ದಂಭಕೌಟಿಲ್ಯಮಾಯಾಭಿರ್ಯಥಾ ಧರ್ಮೋ ವಿನಶ್ಯತಿ ।
ತಥಾ ನಶ್ಯಂತಿ ಪಾಪಾನಿ ಗಂಗಾಯಾ ದರ್ಶನೇನ ತು ॥ ೬೪ ॥
ಮಾನುಷ್ಯಂ ದುರ್ಲಭಂ ಪ್ರಾಪ್ಯ ವಿದ್ಯುತ್ಸಂಪಾತಚಂಚಲಂ ।
ಗಂಗಾಂ ಯಃ ಸೇವತೇ ಸೋಽತ್ರ ಬುದ್ಧೇಃ ಪಾರಂ ಪರಂಗತಃ ॥ ೬೫ ॥

---

ಪಾಪದ ಭಯದಿಂದಿರುವುವು. ಆದ್ದರಿಂದ ಕಲಿಯುಗದಲ್ಲಿ ಇಷ್ಟಸಿದ್ಧಿಯನ್ನೀಯುವ ಗಂಗೆಯನ್ನು ಸೇವಿಸಬೇಕು.

೫೯–೬೦. ಗಂಗೆಯ ದರ್ಶನದಿಂದ ಸೂರ್ಯೋದಯವಾಗಲು ಕತ್ತಲೆಯಂತೆಯೂ, ವಜ್ರಪಾತದ ಭಯದಿಂದ ಪರ್ವತಗಳಂತೆಯೂ, ಗರುಡನ ದರ್ಶನದಿಂದ ಸರ್ಪಗಳಂತೆಯೂ, ಗಾಳಿಯಿಂದ ಹೊಡೆಯಲ್ಪಟ್ಟ ಮೇಘಗಳಂತೆಯೂ, ತತ್ತ್ವಜ್ಞಾನದಿಂದ ಅಜ್ಞಾನದಂತೆಯೂ, ಸಿಂಹವನ್ನುನೋಡಿ ಮೃಗಗಳಂತೆಯೂ ಸಮಸ್ತಪಾಪಗಳೂ ನಾಶವಾಗುವುವು.

೬೧–೬೨. ದಿವ್ಯೌಷಧಗಳಿಂದ ರೋಗದಂತೆಯೂ, ಲೋಭದಿಂದ ಗುಣಗಳಂತೆಯೂ, ಆಳವಾದ ಮಡುವಿನಲ್ಲಿ ಸ್ನಾನಮಾಡುವುದರಿಂದ ಗ್ರೀಷ್ಮಕಾಲದ ಉಷ್ಣದಂತೆಯೂ, ಬೆಂಕಿಯ ಕಿಡಿಗಳಿಂದ ಹತ್ತಿಯ ರಾಶಿಯಂತೆಯೂ ಗಂಗಾಜಲಸ್ಪರ್ಶದಿಂದ ದೋಷಗಳೆಲ್ಲ ಕೂಡಲೆ ನಾಶವಾಗುವುವು.

೬೩–೬೪. ಕೋಪದಿಂದ ತಪಸ್ಸಿನಂತೆಯೂ, ಕಾಮದಿಂದ ಬುದ್ಧಿಯಂತೆಯೂ, ಅನೀತಿಯಿಂದ ಸಂಪತ್ತಿನಂತೆಯೂ, ಅಹಂಕಾರದಿಂದ ವಿದ್ಯೆಯಂತೆಯೂ, ದಂಭ, ವಂಚನೆ, ಮಾಯೆಗಳಿಂದ ಧರ್ಮದಂತೆಯೂ ಗಂಗೆಯನ್ನು ನೋಡಿದಕೂಡಲೆ ಪಾಪಗಳು ನಶಿಸುವುವು.

೬೫. ಮಿಂಚಿನಂತೆ ಚಂಚಲವೂ, ದುರ್ಲಭವೂ ಆದ ಮನುಷ್ಯನ ಜನ್ಮವನ್ನಾಂತು ಗಂಗೆಯನ್ನು ನೋಡುವವನು ಜ್ಞಾನಪಾರಂಗತನಾಗುವನು.

ವಿಧೂತಪಾಪಾ ಯೇ ಮರ್ತ್ಯಾಃ ಪರಂಜ್ಯೋತಿಃಸ್ವರೂಪಿಣೀಂ ।
ಸಹಸ್ರಸೂರ್ಯಪ್ರತಿಮಾಂ ಗಂಗಾಂ ಪಶ್ಯಂತಿ ತೇ ಭುವಿ ॥ ೬೬ ॥
ಸಾಧಾರಣಾಂಭಸಾಪೂರ್ಣಾಂ ಸಾಧಾರಣನದೀಮಿವ ।
ಪಶ್ಯಂತಿ ನಾಸ್ತಿಕಾ ಗಂಗಾಂ ಪಾಪೋಪಹತಲೋಚನಾಃ ॥ ೬೭ ॥
ಸಂಸಾರಮೋಚಕಶ್ಚಾಹಂ ಜನಾನಾಮನುಕಂಪಯಾ ।
ಗಂಗಾತರಂಗರೂಪೇಣ ಸೋಪಾನಂ ನಿರ್ಮಮೇ ದಿವಃ ॥ ೬೮ ॥
ಸರ್ವ ಏವ ಶುಭಃ ಕಾಲಃ ಸರ್ವೋ ದೇಶಸ್ತಥಾ ಶುಭಃ ।
ಸರ್ವೋ ಜನೋ ದಾನಪಾತ್ರಂ ಶ್ರೀಮತೀ ಜಾಹ್ನವೀ ತಟೇ ॥ ೬೯ ॥
ಯಥಾಶ್ವಮೇಧೋ ಯಜ್ಞಾನಾಂ ನಗಾನಾಂ ಹಿಮವಾನ್ಯಥಾ ।
ವ್ರತಾನಾಂ ಚ ಯಥಾ ಸತ್ಯಂ ದಾನಾನಾಮಭಯಂ ಯಥಾ ॥ ೭೦ ॥
ಪ್ರಾಣಾಯಾಮಶ್ಚ ತಪಸಾಂ ಮಂತ್ರಾಣಾಂ ಪ್ರಣವೋ ಯಥಾ ।
ಧರ್ಮಾಣಾಮಪ್ಯಹಿಂಸಾ ಚ ಕಾಮ್ಯಾನಾಂ ಶ್ರೀರ್ಯಥಾ ವರಾ ॥ ೭೧ ॥
ಯಥಾತ್ಮವಿದ್ಯಾ ವಿದ್ಯಾನಾಂ ಸ್ತ್ರೀಣಾಂ ಗೌರೀ ಯಥೋತ್ತಮಾ ।
ಸರ್ವದೇವಗಣಾನಾಂ ಚ ಯಥಾ ತ್ವಂ ಪುರುಷೋತ್ತಮ ॥ ೭೨ ॥
ಸರ್ವೇಷಾಮೇವ ಪಾತ್ರಾಣಾಂ ಶಿವಭಕ್ತೋ ಯಥಾ ವರಃ ।
ತಥಾ ಸರ್ವೇಷು ತೀರ್ಥೇಷು ಗಂಗಾ ತೀರ್ಥಂ ವಿಶಿಷ್ಯತೇ ॥ ೭೩ ॥

---

೬೬–೬೭. ಪ್ರಪಂಚದಲ್ಲಿ ಪಾಪರಹಿತರಾದ ಮಾನವರು ಗಂಗೆಯನ್ನು ಪರಂಜ್ಯೋತಿಸ್ವರೂಪಿಣಿಯನ್ನಾಗಿಯೂ, ಸಹಸ್ರಸೂರ್ಯನಂತಿರುವಳನ್ನಾಗಿಯೂ ನೋಡುವರು. ಪಾಪದಿಂದ ಮುಚ್ಚಿದ ಕಣ್ಣುಗಳುಳ್ಳ ನಾಸ್ತಿಕರು ಗಂಗೆಯನ್ನು ಸಾಮಾನ್ಯವಾದ ನೀರಿನಿಂದ ತುಂಬಿದ ಸಾಮಾನ್ಯನದಿಯಂತೆ ನೋಡುವರು.

೬೮. ಸಂಸಾರವನ್ನು ನೀಗಿಸುವ ನಾನು ಜನರಲ್ಲಿ ದಯೆಯಿಂದ ಸ್ವರ್ಗಕ್ಕೆ ಗಂಗೆಯ ಅಲೆಯರೂಪವಾದ ಮೆಟ್ಟಲನ್ನು ನಿರ್ಮಿಸಿರುವೆನು.

೬೯. ಪವಿತ್ರವಾದ ಗಂಗೆಯದಡದಲ್ಲಿ ಸಮಸ್ತಕಾಲ ದೇಶಗಳೂ ಶುಭಕರವಾಗಿರುವುವು. ಸಕಲ ಜನರೂ ದಾನಪಾತ್ರರೇ ಆಗಿರುವರು.

೭೦–೭೩. ಯಜ್ಞಗಳಲ್ಲಿ ಅಶ್ವಮೇಧದಂತೆಯೂ, ಪರ್ವತಗಳಲ್ಲಿ ಹಿಮಾಲಯದಂತೆಯೂ, ವ್ರತಗಳಲ್ಲಿ ಸತ್ಯದಂತೆಯೂ, ದಾನಗಳಲ್ಲಿ ಅಭಯದಂತೆಯೂ, ತಪಸ್ಸುಗಳಲ್ಲಿ ಪ್ರಾಣಾಯಾಮದಂತೆಯೂ, ಮಂತ್ರಗಳಲ್ಲಿ ಪ್ರಣವದಂತೆಯೂ, ಧರ್ಮಗಳಲ್ಲಿ ಅಹಿಂಸೆಯಂತೆಯೂ, ಇಷ್ಟವಸ್ತುಗಳಲ್ಲಿ ಸಂಪತ್ತಿನಂತೆಯೂ, ವಿದ್ಯೆಗಳಲ್ಲಿ ಬ್ರಹ್ಮವಿದ್ಯೆಯಂತೆಯೂ, ಹೆಂಗಸರಲ್ಲಿ ಗೌರಿಯಂತೆಯೂ, ಸಕಲ ದೇವತೆಗಳಲ್ಲಿ ಪುರುಷೋತ್ತಮನಾದ ನಿನ್ನಂತೆಯೂ, ಸಕಲಪಾತ್ರರಲ್ಲಿಯೂ ಶಿವಭಕ್ತನಂತೆಯೂ ಗಂಗಾತೀರ್ಥವು ಸರ್ವತೀರ್ಥಗಳಲ್ಲಿಯೂ ಉತ್ತಮವಾದುದು.

ಹರೇ ಯಶ್ಚಾವಯೋರ್ಭೇದಂ ನ ಕರೋತಿ ಮಹಾಮತಿಃ ।
ಶಿವಭಕ್ತಃ ಸ ವಿಜ್ಞೇಯೋ ಮಹಾಪಾಶುಪತಶ್ಚ ಸಃ ॥ ೭೪ ॥
ಪಾಪಪಾಂಸುಮಹಾವಾತ್ಯಾ ಪಾಪದ್ರುಮಕುಠಾರಿಕಾ ।
ಪಾಪೇಂಧನದವಾಗ್ನಿಶ್ಚ ಗಂಗೇಯಂ ಪುಣ್ಯವಾಹಿನೀ ॥ ೭೫ ॥
ನಾನಾರೂಪಾಶ್ಚ ಪಿತರೋ ಗಾಥಾ ಗಾಯಂತಿ ಸರ್ವದಾ ।
ಅಪಿ ಕಶ್ಚಿತ್ಕುಲೇಽಸ್ಮಾಕಂ ಗಂಗಾಸ್ನಾಯಿೀ ಭವಿಷ್ಯತಿ ॥ ೭೬ ॥
ದೇವರ್ಷೀನ್ಪರಿಸಂತರ್ಪ್ಯ ದೀನಾಽನಾಥಾಂಶ್ಚ ದುಃಖಿತಾನ್ ।
ಶ್ರದ್ಧಯಾ ವಿಧಿನಾ ಸ್ನಾತ್ವಾ ದಾಸ್ಯತೇ ಸಲಿಲಾಂಜಲಿಂ ॥ ೭೭ ॥
ಅಪಿ ನಃ ಸ ಕುಲೇ ಭೂಯಾಚ್ಛಿವೇ ವಿಷ್ಣೌ ಚ ಸಾಮ್ಯದೃಕ್ ।
ತದಾಲಯಕರೋ ಭಕ್ತ್ಯಾ ತಸ್ಯ ಸಂಮಾರ್ಜನಾದಿಕೃತ್ ॥ ೭೮ ॥
ಅಕಾಮೋ ವಾ ಸ ಕಾಮೋ ವಾ ತಿರ್ಯಗ್ಯೋನಿಗತೋಽಪಿವಾ ।
ಗಂಗಾಯಾಂ ಯೋ ಮೃತೋ ಮರ್ತ್ಯೋ ನರಕಂ ಸ ನಪಶ್ಯತಿ ॥ ೭೯ ॥
ತೀರ್ಥಮನ್ಯತ್ಪ್ರಶಂಸಂತಿ ಗಂಗಾತೀರೇ ಸ್ಥಿತಾಶ್ಚ ಯೇ ।
ಗಂಗಾಂ ನ ಬಹುಮನ್ಯಂತೇ ತೇಽಸ್ಯುರ್ನಿರಯಗಾಮಿನಃ ॥ ೮೦ ॥

---

೭೪. ವಿಷ್ಣುವೆ! ನಮ್ಮೀರ್ವರಲ್ಲಿ ಭೇದವನ್ನೆಣಿಸದ ಪಾಶುಪತೋತ್ತಮನಾದ ಜ್ಞಾನಿಯನ್ನು ಶಿವಭಕ್ತನೆಂದು ತಿಳಿಯಬೇಕು.

೭೫. ಪುಣ್ಯನದಿಯಾದ ಈ ಗಂಗೆಯು ಪಾಪವೆಂಬ ದೂಳಿಗೆ ಸುಂಟರಗಾಳಿಯೂ, ಪಾಪವೆಂಬ ಮರಕ್ಕೆ ಕೊಡಲಿಯೂ, ಪಾಪವೆಂಬ ಕಟ್ಟಿಗೆಗೆ ಕಾಳ್ಗಿಚ್ಚೂ ಆಗಿರುವುದು.

೭೬–೭೮. ಅನೇಕ ರೂಪರಾದ ಪಿತೃಗಳು, ಗಂಗೆಯಲ್ಲಿ ಸ್ನಾನಮಾಡುವವನೂ, ಮಿಂದು ಶ್ರದ್ಧೆಯಿಂದ ದೇವರ್ಷಿಗಳನ್ನೂ, ದೀನಾನಾಥ ದುಃಖಿತರನ್ನೂ ತರ್ಪಣೋದಕದಿಂದ ತೃಪ್ತಿಗೊಳಿಸುವವನೂ, ಶಿವವಿಷ್ಣುಗಳನ್ನು ಸಮರೆಂದು ಭಾವಿಸುವವನೂ, ಅವರ ಆಲಯವನ್ನು ಕಟ್ಟಿಸುವವನೂ, ಅದನ್ನು ಗುಡಿಸುವವನೂ ಆದ ಪುತ್ರನು ನಮ್ಮ ವಂಶದಲ್ಲಿ ಜನಿಸಿಯಾನೇ ಎಂದು ಹಂಬಲಿಸುತ್ತಿರುವರು.

೭೯. ಮಾನವನು ಪಶುಪಕ್ಷಿಜಾತಿಗಳಲ್ಲಿ ಜನಿಸಿದ್ದರೂ ಬುದ್ಧಿಪೂರ್ವಕವಾಗಿಯಾಗಲಿ, ಅಲ್ಲದೆಯಾಗಲಿ ಗಂಗೆಯಲ್ಲಿ ಮೃತನಾದರೆ ನರಕವನ್ನು ನೋಡುವುದಿಲ್ಲ.

೮೦. ಗಂಗೆಯ ದಡದಲ್ಲಿ ವಾಸಿಸುತ್ತ, ಆ ಗಂಗೆಯನ್ನು ಬಹುಮಾನಿಸದೆ ಇತರ ತೀರ್ಥಗಳನ್ನು ಹೊಗಳುವವರು ನರಕವನ್ನೈದುವರು.

ಮಾಂ ಚ ತ್ವಾಂ ಚೈವ ಯೋ ದ್ವೇಷ್ಟಿ ಗಂಗಾಂ ಚ ಪುರುಷಾಧಮಃ ।
ಸ್ವಕೀಯೈಃ ಪುರುಷೈಃ ಸಾರ್ಧಂ ಸ ಘೋರಂ ನರಕಂ ವ್ರಜೇತ್ ॥ ೮೧ ॥
ಷಷ್ಟಿರ್ಗಣಸಹಸ್ರಾಣಿ ಗಂಗಾಂ ರಕ್ಷಂತಿ ಸರ್ವದಾ ।
ಅಭಕ್ತಾನಾಂ ಚ ಪಾಪಾನಾಂ ವಾಸೇ ವಿಘ್ನಂ ಪ್ರಕುರ್ವತೇ ॥ ೮೨ ॥
ಕಾಮಕ್ರೋಧಮಹಾಮೋಹಲೋಭಾದಿನಿಶಿತೈಃ ಶರೈಃ ।
ಘ್ನಂತಿ ತೇಷಾಂ ಮನಸ್ತತ್ರ ಸ್ಥಿತಿಂ ಚಾಽಪನಯಂತಿ ಚ ॥ ೮೩ ॥
ಗಂಗಾಂ ಸಮಾಶ್ರಯೇದ್ಯಸ್ತು ಸ ಮುನಿಃ ಸ ಚ ಪಂಡಿತಃ ।
ಕೃತಕೃತ್ಯಃ ಸ ವಿಜ್ಞೇಯಃ ಪುರುಷಾರ್ಥಚತುಷ್ಟಯೇ ॥ ೮೪ ॥
ಗಂಗಾಯಾಂ ಚ ಸಕೃತ್ಸ್ನಾತೋ ಹಯಮೇಧಫಲಂ ಲಭೇತ್ ।
ತರ್ಪಯಂಶ್ಚ ಪಿತೄಂಸ್ತತ್ರ ತಾರಯೇನ್ನರಕಾರ್ಣವಾತ್ ॥ ೮೫ ॥
ನೈರಂತರ್ಯೇಣ ಗಂಗಾಯಾಂ ಮಾಸಂ ಯಃ ಸ್ನಾತಿ ಪುಣ್ಯವಾನ್ ।
ಶಕ್ರಲೋಕೇ ಸ ವಸತಿ ಯಾವಚ್ಛಕ್ರಃ ಸ ಪೂರ್ವಜಃ ॥ ೮೬ ॥
ಅಬ್ದಂ ಯಃ ಸ್ನಾತಿ ಗಂಗಾಯಾಂ ನೈರಂತರ್ಯೇಣ ಪುಣ್ಯಭಾಕ್ ।
ವಿಷ್ಣೋರ್ಲೋಕಂ ಸಮಾಸಾದ್ಯ ಸಸುಖಂ ಸಂವಸೇನ್ನರಃ ॥ ೮೭ ॥

---

೮೧. ನನ್ನನ್ನೂ, ನಿನ್ನನ್ನೂ, ಗಂಗೆಯನ್ನೂ ದ್ವೇಷಿಸುವ ನೀಚಪುರುಷನು ತನ್ನವರೆಲ್ಲರೊಡನೆ ಘೋರನರಕಕ್ಕೆ ತೆರಳುವನು.

೮೨. ಅರುವತ್ತುಸಾವಿರ ಶಿವಗಣಗಳು ಯಾವಾಗಲೂ ಪಾಪಿಗಳಾದ ಅಭಕ್ತರ ವಾಸಕ್ಕೆ ಅಡ್ಡಿಮಾಡುತ್ತ ಗಂಗೆಯನ್ನು ರಕ್ಷಿಸುತ್ತಿರುವರು.

೮೩. ಆ ಗಣಗಳು ಪಾಪಿಗಳ ಮನಸ್ಸನ್ನು ಕಾಮ, ಕ್ರೋಧ, ಮೋಹ, ಲೋಭ ಮೊದಲಾದ ತೀಕ್ಷ್ಣಬಾಣಗಳಿಂದ ಕೆಡಿಸಿ ಅವರ ವಾಸವನ್ನು ನಿರೋಧಿಸುತ್ತವೆ.

೮೪. ಗಂಗೆಯನ್ನು ಆಶ್ರಯಿಸಿದವನು ಮುನಿಯೂ, ಪಂಡಿತನೂ, ಚತುರ್ವಿಧಪುರುಷಾರ್ಥಗಳಲ್ಲಿ ಕೃತಕೃತ್ಯನೂ ಆಗಿರುವನೆಂದು ತಿಳಿಯಬೇಕು.

೮೫. ಗಂಗೆಯಲ್ಲಿ ಒಂದುಸಾರಿ ಮಿಂದವನು ಅಶ್ವಮೇಧಯಾಗದ ಫಲವನ್ನು ಪಡೆಯುವನು. ಪಿತೃಗಳಿಗೆ ತರ್ಪಣಗೈದವನು ಅವರನ್ನು ನರಕಸಮುದ್ರದಿಂದ ಉದ್ಧರಿಸುವನು.

೮೬. ಗಂಗೆಯಲ್ಲಿ ಒಂದು ತಿಂಗಳು ಎಡೆಬಿಡದೆ ಮಿಂದ ಪುಣ್ಯವಂತನು ಇಂದ್ರನಿರುವವರೆಗೆ ತನ್ನ ಹಿಂದಿನವರೊಡನೆ ಇಂದ್ರಲೋಕದಲ್ಲಿ ವಾಸಮಾಡುವನು.

೮೭. ಒಂದು ವರ್ಷ ಎಡೆಬಿಡದೆ ಗಂಗೆಯಲ್ಲಿ ಮಿಂದ ಪುಣ್ಯವಂತನು ವಿಷ್ಣುಲೋಕವನ್ನು ಹೊಂದಿ ಸುಖವಾಗಿ ವಾಸಿಸುವನು.

ಗಂಗಾಯಾಂ ಸ್ನಾತಿ ಯೋ ಮರ್ತ್ಯೋ ಯಾವಜ್ಜೀವಂ ದಿನೇ ದಿನೇ ।
ಜೀವನ್ಮುಕ್ತಃ ಸ ವಿಜ್ಞೇಯೋ ದೇಹಾಂತೇ ಮುಕ್ತ ಏವ ಸಃ ॥ ೮೮ ॥
ತಿಥಿನಕ್ಷತ್ರಪರ್ವಾದಿ ನಾಽಪೇಕ್ಷ್ಯಂ ಜಾಹ್ನವೀಜಲೇ ।
ಸ್ನಾನಮಾತ್ರೇಣ ಗಂಗಾಯಾಂ ಸಂಚಿತಾಽಘಂ ವಿನಶ್ಯತಿ ॥ ೮೯ ॥
ಪಂಡಿತೋಽಪಿ ಸ ಮೂರ್ಖಃ ಸ್ಯಾಚ್ಛಕ್ತಿಯುಕ್ತೋಽಪ್ಯಶಕ್ತಿಕಃ ।
ಯಸ್ತು ಭಾಗೀರಥೀತೀರಂ ಸುಖಸೇವ್ಯಂ ನ ಸಂಶ್ರಯೇತ್ ॥ ೯೦ ॥
ಕಿಂ ವಾಯುಷಾಪ್ಯರೋಗೇಣ ವಿಕಾಸಿನ್ಯಾಽಥ ಕಿಂ ಶ್ರಿಯಾ ।
ಕಿಂ ವಾ ಬುದ್ಧ್ಯಾ ವಿಮಲಯಾ ಯದಿ ಗಂಗಾಂ ನ ಸೇವತೇ ॥ ೯೧ ॥
ಯಃ ಕಾರಯೇದಾಯತನಂ ಗಂಗಾಪ್ರತಿಕೃತೇರ್ನರಃ ।
ಭುಕ್ತ್ವಾ ಸ ಭೋಗಾನ್ಪ್ರೇತ್ಯಾಽಪಿ ಯಾತಿ ಗಂಗಾಸಲೋಕತಾಂ ॥ ೯೨ ॥
ಶೃಣ್ವಂತಿ ಮಹಿಮಾನಂ ಯೇ ಗಂಗಾಯಾ ನಿತ್ಯಮಾದರಾತ್ ।
ಗಂಗಾಸ್ನಾನಫಲಂ ತೇಷಾಂ ವಾಚಕಪ್ರೀಣನಾದ್ಧನೈಃ ॥ ೯೩ ॥
ಪಿತೄನುದ್ದಿಶ್ಯ ಯೋ ಲಿಂಗಂ ಸ್ನಪಯೇದ್ಗಾಂಗವಾರಿಣಾ ।
ತೃಪ್ತಾಃಸ್ಯುಸ್ತಸ್ಯ ಪಿತರೋ ಮಹಾನಿರಯಗಾ ಅಪಿ ॥ ೯೪ ॥

---

೮೮. ಬದುಕಿರುವವರೆಗೆ ಪ್ರತಿದಿನವೂ ಗಂಗೆಯಲ್ಲಿ ಮಿಂದವನು ಜೀವನ್ಮುಕ್ತನೇ ಆಗುವನು. ಅವನು ದೇಹಾವಸಾನದಲ್ಲಿ ಮುಕ್ತನೇ ಆಗುವನು.

೮೯. ಜಾಹ್ನವೀಜಲದಲ್ಲಿ ಸ್ನಾನಮಾಡಲು ತಿಥಿ, ನಕ್ಷತ್ರ, ಪರ್ವಾದಿಗಳನ್ನು ನೋಡಬೇಕಾಗಿರುವುದಿಲ್ಲ. ಅಲ್ಲಿ ಸ್ನಾನಮಾಡುವುದರಿಂದಲೇ ಸಂಚಿತ ಪಾಪವೆಲ್ಲ ಪರಿಹಾರವಾಗುವುದು.

೯೦. ಸುಖವಾಗಿ ಸೇವಿಸಲರ್ಹವಾದ ಭಾಗೀರಥೀತೀರವನ್ನು ಸೇವಿಸದ ಪಂಡಿತನೂ ಮೂರ್ಖನೇ ಆಗುವನು. ಶಕ್ತನೂ ಅಶಕ್ತನೇ ಆಗುವನು.

೯೧. ಗಂಗೆಯನ್ನು ಸೇವಿಸದಿದ್ದರೆ ರೋಗವಿಲ್ಲದ ಆಯುಷ್ಯದಿಂದಲೂ, ವಿಕಾಸಗೊಳ್ಳುವ ಸಂಪತ್ತಿನಿಂದಲೂ, ಶುದ್ಧವಾದ ಬುದ್ಧಿಯಿಂದಲೂ ಏನು ಪ್ರಯೋಜನ?

೯೨. ಗಂಗಾಮೂರ್ತಿಗೆ ದೇವಾಲಯವನ್ನು ನಿರ್ಮಿಸಿದವನು ಸುಖಗಳನ್ನನುಭವಿಸಿ ಮರಣಾನಂತರದಲ್ಲಿ ಗಂಗೆಯ ಲೋಕವನ್ನು ಹೊಂದುವನು.

೯೩. ನಿತ್ಯವೂ ವಿಶ್ವಾಸದಿಂದ ಗಂಗೆಯ ಮಹಿಮೆಯನ್ನು ಕೇಳಿ ಪೌರಾಣಿಕನನ್ನು ಧನದಿಂದ ಸಂತೋಷಗೊಳಿಸುವವನು ಗಂಗಾಸ್ನಾನದ ಫಲವನ್ನು ಪಡೆಯುವನು.

೯೪. ಗಂಗಾಜಲದಿಂದ ಶಿವಲಿಂಗಕ್ಕೆ ಅಭಿಷೇಕ ಮಾಡಿದವನ ಪಿತೃಗಳು ನರಕದಲ್ಲಿದ್ದರೂ ತೃಪ್ತರಾಗುವರು.

ಅಷ್ಟಕೃತ್ವೋ ಮಂತ್ರಜಪ್ತೈರ್ವಸ್ತ್ರಪೂತೈಃ ಸುಗಂಧಿಭಿಃ ।
ಪ್ರೋಚ್ಚುರ್ಗಾಂಗಜಲೈಃ ಸ್ನಾನಂ ಘೃತಸ್ನಾನಾಽಧಿಕಂ ಬುಧಾಃ ॥ ೯೫ ॥
ಅಷ್ಟದ್ರವ್ಯವಿಮಿಶ್ರೇಣ ಗಂಗಾತೋಯೇನ ಯಃ ಸಕೃತ್ ।
ಮಾಗಧಪ್ರಸ್ಥಮಾತ್ರೇಣ ತಾಮ್ರಪಾತ್ರಸ್ಥಿತೇನ ಚ ॥ ೯೬ ॥
ಭಾನವೇಽರ್ಘ್ಯಂ ಪ್ರದದ್ಯಾಚ್ಚ ಸ್ವಕೀಯಪಿತೃಭಿಃ ಸಹ ।
ಸೋಽತಿ ತೇಜೋ ವಿಮಾನೇನ ಸೂರ್ಯಲೋಕೇ ಮಹೀಯತೇ ॥ ೯೭ ॥
ಆಪಃ ಕ್ಷೀರಂ ಕುಶಾಗ್ರಾಣಿ ಘೃತಂ ಮಧು ಗವಾಂ ದಧಿ ।
ರಕ್ತಾನಿ ಕರವೀರಾಣಿ ರಕ್ತಚಂದನಮಿತ್ಯಪಿ ॥ ೯೮ ॥
ಅಷ್ಟಾಂಗಾರ್ಘ್ಯಮುದ್ದಿಷ್ಟಸ್ತ್ವತೀವ ರವಿತೋಷಣಃ ।
ಗಾಂಗೈರ್ವಾರ್ಭಿಃ ಕೋಟಿಗುಣೋ ಜ್ಞೇಯೋ ವಿಷ್ಣೋಽನ್ಯವಾರಿತಃ ॥
ಗಂಗಾತೀರೇ ಸ್ವಶಕ್ತ್ಯಾ ಯಃ ಕುರ್ಯಾದ್ದೇವಾಲಯಂ ಸುಧೀಃ ।
ಅನ್ಯತೀರ್ಥಪ್ರತಿಷ್ಠಾತೋ ಭವೇತ್ಕೋಟಿಗುಣಂ ಫಲಂ ॥ ೧೦೦ ॥
ಅಶ್ವತ್ಥವಟಚೂತಾದಿ ವೃಕ್ಷಾರೋಪೇಣ ಯತ್ಫಲಂ ।
ಕೂಪವಾಪೀತಡಾಗಾದಿ ಪ್ರಪಾಸತ್ರಾದಿಭಿಸ್ತಥಾ ॥ ೧೦೧ ॥

---

೯೫. ಎಂಟುಸಾರಿ ಮಂತ್ರಗಳಿಂದ ಜಪಿಸಿ, ಬಟ್ಟೆಯಿಂದ ಶೋಧಿಸಿದ ಸುಗಂಧಯುತವಾದ ಗಂಗಾಜಲದಿಂದ ಭಗವಂತನಾದ ನನಗೆ ಮಾಡಿದ ಅಭಿಷೇಕವು ಘೃತಾಭಿಷೇಕಕ್ಕಿಂತಲೂ ಅಧಿಕವಾಗುವುದು.

೯೬–೯೭. ಮಗಧದೇಶದ ಪ್ರಸ್ಥಪರಿಮಾಣದ ತಾಮ್ರಪಾತ್ರೆಯಲ್ಲಿ ಎಂಟು ದ್ರವ್ಯಗಳಿಂದ ಕೂಡಿದ ಗಂಗಾಜಲದಿಂದ ಒಂದುಸಾರಿ ಪಿತೃಗಳೊಡನೆ ಸೂರ್ಯನಿಗೆ ಅರ್ಘ್ಯವನ್ನು ಕೊಡುವವನು ಅತ್ಯಂತ ತೇಜಸ್ಸುಳ್ಳ ವಿಮಾನದಿಂದ ಸೂರ್ಯಲೋಕವನ್ನು ಸೇರಿ ಪೂಜ್ಯನಾಗುವನು.

೯೮–೯೯. ನೀರು, ದರ್ಭಾಗ್ರಗಳು, ಜೇನುತುಪ್ಪ, ಗೋವಿನಹಾಲು ಮೊಸರು, ತುಪ್ಪ, ಕೆಂಪುಕಣಗಲೆ ಹೂವು, ಕೆಂಪುಗಂಧ ಇವುಗಳಿಂದ ಕೂಡಿರುವುದು ಸೂರ್ಯನನ್ನು ಸಂತೋಷಗೊಳಿಸುವ ಅಷ್ಟಾಂಗಾರ್ಘ್ಯವು. ಎಲೈ ವಿಷ್ಣುವೆ! ಈ ಅರ್ಘ್ಯವನ್ನು ಬೇರೆ ನೀರಿಗಿಂತ ಗಂಗಾಜಲದಿಂದ ಕೊಟ್ಟರೆ ಕೋಟಿಯಷ್ಟು ಹೆಚ್ಚುಫಲವು ದೊರೆಯುವುದು.

೧೦೦. ವಿದ್ವಾಂಸನು ತನ್ನ ಶಕ್ತ್ಯನುಸಾರ ಗಂಗಾತೀರದಲ್ಲಿ ದೇವಾಲಯವನ್ನು ಕಟ್ಟಿಸಿದರೆ ಇತರ ತೀರ್ಥದಲ್ಲಿ ಪ್ರತಿಷ್ಠೆಮಾಡಿದ್ದಕ್ಕಿಂತ ಕೋಟಿಯಷ್ಟು ಅಧಿಕಫಲವು ಲಭಿಸುವುದು.

೧೦೧–೧೦೨. ಅಶ್ವತ್ಥ, ಆಲ, ಮಾವು ಮೊದಲಾದ ವೃಕ್ಷಗಳನ್ನು ಬೆಳಸುವುದರಿಂದಲೂ, ಬಾವಿ, ಕೊಳ, ಕೆರೆ, ಅರವಟ್ಟಿಗೆಗಳನ್ನು ನಿರ್ಮಿಸುವುದ

ಅನ್ಯತ್ರ ಯದ್ಭವೇತ್ಪುಣ್ಯಂ ತದ್ಗಂಗಾ ದರ್ಶನಾದ್ಭವೇತ್ ।
ಪುಷ್ಪವಾಟ್ಯಾದಿಭಿಶ್ಚಾಽಪಿ ಗಂಗಾಸ್ಪರ್ಶಂ ತತೋಽಧಿಕಂ ॥ ೧೦೩ ॥
ಕನ್ಯಾದಾನೇನ ಯತ್ಪುಣ್ಯಂ ಯತ್ಪುಣ್ಯಂ ಗೋಽನ್ನದಾನತಃ ।
ತತ್ಪುಣ್ಯಂ ಸ್ಯಾಚ್ಛತಗುಣಂ ಗಂಗಾಗಂಡೂಷಪಾನತಃ ॥ ೧೦೩ ॥
ಚಾಂದ್ರಾಯಣಸಹಸ್ರೇಣ ಯತ್ಪುಣ್ಯಂ ಸ್ಯಾಜ್ಜನಾರ್ದನ ।
ತತೋಽಧಿಕಫಲಂ ಗಂಗಾಮೃತಪಾನಾದವಾಪ್ನುಯಾತ್ ॥ ೧೦೪ ॥
ಭಕ್ತ್ಯಾ ಗಂಗಾಽವಗಾಹಸ್ಯ ಕಿಮನ್ಯತ್ಫಲಮುಚ್ಯತೇ ।
ಅಕ್ಷಯಃ ಸ್ವರ್ಗವಾಸೋಽಪಿ ನಿರ್ವಾಣಮಥವಾ ಹರೇ ॥ ೧೦೫ ॥
ಗಂಗಾಯಾಃ ಪಾದುಕಾಯುಗ್ಮಂ ನಿತ್ಯಮರ್ಚತಿ ಯೋ ನರಃ ।
ಆಯುಃ ಪುಣ್ಯಂ ಧನಂ ಪುತ್ರಾನ್ ಸ್ವರ್ಗಮೋಕ್ಷೌ ಚ ವಿಂದತಿ ॥ ೧೦೬ ॥
ನಾಽಸ್ತಿ ಗಂಗಾಸಮಂ ತೀರ್ಥಂ ಕಲಿಕಲ್ಮಷನಾಶನಂ ।
ನಾಸ್ತಿ ಮುಕ್ತಿಪ್ರದಂ ಕ್ಷೇತ್ರಮವಿಮುಕ್ತಸಮಂ ಹರೇ ॥ ೧೦೭ ॥
ಗಂಗಾಸ್ನಾನರತಂ ಮರ್ತ್ಯಂ ದೃಷ್ಟ್ವೈವ ಯಮಕಿಂಕರಾಃ ।
ದಿಶೋ ದಶ ಪಲಾಯಂತೇ ಸಿಂಹಂ ದೃಷ್ಟ್ವಾ ಯಥಾ ಮೃಗಾಃ ॥ ೧೦೮ ॥

---

ರಿಂದಲೂ ಉಂಟಾಗುವ ಫಲವು ಗಂಗಾದರ್ಶನದಿಂದಾಗುವುದು. ಪುಷ್ಪೋದ್ಯಾನಾದಿಗಳನ್ನು ನಿರ್ಮಿಸುವುದಕ್ಕಿಂತಲೂ ಗಂಗಾಸ್ಪರ್ಶವು ಅಧಿಕವಾದುದು.

೧೦೩. ನಿಯಮದಿಂದ ಮಾಡುವ ಕನ್ಯಾ, ಗೋವು, ಅನ್ನದಾನಗಳ ಪುಣ್ಯಕ್ಕಿಂತಲೂ ಗಂಗೆಯ ಗಂಡೂಷಪಾನದಿಂದ ನೂರರಷ್ಟು ಅಧಿಕಪುಣ್ಯವು ದೊರೆಯುವುದು.

೧೦೪. ಗಂಗಾಮೃತಪಾನದಿಂದ ಸಹಸ್ರಚಾಂದ್ರಾಯಣವ್ರತದ ಪುಣ್ಯಕ್ಕಿಂತ ಅಧಿಕವಾದ ಫಲವುಂಟಾಗುವುದು.

೧೦೫. ಭಕ್ತಿಯಿಂದ ಗಂಗೆಯಲ್ಲಿ ಮಿಂದುದಕ್ಕೆ ಸಾಟಿಯಾದ ಬೇರೆ ಯಾವ ಫಲವನ್ನು ಹೇಳಲಿ; ಶಾಶ್ವತ ಸ್ವರ್ಗವಾಸವಾಗಲಿ, ಮೋಕ್ಷವಾಗಲಿ ದೊರೆಯುವುದು.

೧೦೬. ಗಂಗೆಯ ಪಾದುಕಾದ್ವಯವನ್ನು ಯಾವಾಗಲೂ ಅರ್ಚಿಸಿದ ಮಾನವನು ಆಯುಸ್ಸು, ಪುಣ್ಯ, ಧನ, ಪುತ್ರ, ಸ್ವರ್ಗ, ಮೋಕ್ಷ ಇವುಗಳನ್ನು ಪಡೆಯುವನು.

೧೦೭. ಕಲಿದೋಷವನ್ನು ನಿವಾರಿಸುವ ಗಂಗೆಗೆ ಸಮಾನವಾದ ತೀರ್ಥವಿಲ್ಲ. ಹರಿಯೆ! ಅಂತೇ ಅವಿಮುಕ್ತಕ್ಕೆ ಸಮವಾದ ಮುಕ್ತಿಕ್ಷೇತ್ರವಿಲ್ಲ.

೧೦೮. ಯಮಕಿಂಕರರು ಗಂಗಾಸ್ನಾನದಲ್ಲಿ ನಿರತನಾದ ಮಾನವನನ್ನು ನೋಡಿ, ಸಿಂಹವನ್ನು ನೋಡಿ ಮೃಗಗಳು ಓಡುವಂತೆ ಹತ್ತು ದಿಕ್ಕುಗಳಿಗೂ ಓಡುವರು.

**ಗಂಗಾ ಭಜನಶೀಲಸ್ಯ ಗಂಗಾತಟನಿವಾಸಿನಃ ।**
**ಅರ್ಚಾಂ ಕೃತ್ವಾ ಯಥಾ ನ್ಯಾಯಮಶ್ವಮೇಧಫಲಂ ಲಭೇತ್ ॥ ೧೦೯ ॥**
**ಗೋಭೂಹಿರಣ್ಯದಾನೇನ ಭಕ್ತ್ಯಾ ಗಂಗಾತಟೇ ಶುಭೇ ।**
**ನರೋ ನ ಜಾಯತೇ ಭೂಯಃ ಸಂಸಾರೇ ದುಃಖಕಂಟಕೇ ॥ ೧೧೦ ॥**
**ದೀರ್ಘಾಯುಷ್ಯಂ ಚ ವಾಸೋಭಿರ್ಜ್ಞಾನಂ ಪುಸ್ತಕದಾನತಃ ।**
**ಅನ್ನದಾನೇನ ಸಂಪತ್ತಿಂ ಕೀರ್ತಿಂ ಕನ್ಯಾಪ್ರದಾನತಃ ॥ ೧೧೧ ॥**
**ಅನ್ಯತ್ರ ಯತ್ಕೃತಂ ಕರ್ಮ ವ್ರತಂ ದಾನಂ ಜಪಸ್ತಪಃ ।**
**ಗಂಗಾತಟೇ ತು ತತ್ಸರ್ವಂ ಹರೇ ಕೋಟಿಗುಣಂ ಭವೇತ್ ॥ ೧೧೨ ॥**
**ಧೇನುಂ ಸವತ್ಸಾಂ ಯೋ ದದ್ಯಾದ್ಗಂಗಾತೀರೇ ವಿಧಾನತಃ ।**
**ಗೋರೋಮಸಂಖ್ಯಯಾ ವಿಷ್ಣೋ ಯುಗಾನ್ಸರ್ವಸಮೃದ್ಧಿಮಾನ್ ॥**
**ಗೋಲೋಕೇ ಮಮ ಲೋಕೇ ವಾ ಕಾಮಧೇನುಪ್ರದಾನತಃ ।**
**ಭುಂಜಾನಃ ಸರ್ವಕಾಮಾಂಸ್ತು ದಿವ್ಯಾನ್ನಾನಾವಿಧಾನ್ಬಹೂನ್ ॥ ೧೧೪ ॥**
**ದೇವಾನಾಮಪ್ಯಲಭ್ಯಾಂಶ್ಚ ಭುಕ್ತ್ವಾ ತು ಸಹಬಾಂಧವೈಃ ।**
**ಪಿತೃಭಿಶ್ಚ ಸುಹೃದ್ಭಿಶ್ಚ ಸರ್ವರತ್ನವಿಭೂಷಿತಃ ॥ ೧೧೫ ॥**

---

೧೦೯. ಗಂಗೆಯನ್ನು ಸೇವಿಸುವವನೂ, ಗಂಗೆಯ ದಡದಲ್ಲಿ ವಾಸಿಸುವವನೂ ಆದ ಮಾನವನ ಪೂಜೆಯನ್ನು ವಿಧಿಪೂರ್ವಕವಾಗಿ ಮಾಡಿದವನು ಅಶ್ವಮೇಧಯಾಗದ ಫಲವನ್ನು ಹೊಂದುವನು.

೧೧೦. ಗಂಗಾತಟದಲ್ಲಿ ಗೋವು, ಭೂಮಿ, ಸುವರ್ಣಗಳನ್ನು ಭಕ್ತಿಯಿಂದ ದಾನಮಾಡಿದ ಮಾನವನು ದುಃಖದಿಂದ ತುಂಬಿರುವ ಸಂಸಾರದಲ್ಲಿ ಮರಳಿ ಜನಿಸುವುದಿಲ್ಲ.

೧೧೧. ಗಂಗಾತೀರದಲ್ಲಿ ವಸ್ತ್ರದಾನದಿಂದ ದೀರ್ಘಾಯುಷ್ಯವೂ, ಪುಸ್ತಕ ದಾನದಿಂದ ಜ್ಞಾನವೂ, ಅನ್ನದಾನದಿಂದ ಸಂಪತ್ತೂ, ಕನ್ಯಾದಾನದಿಂದ ಕೀರ್ತಿಯೂ ದೊರೆಯುವುದು.

೧೧೨. ಇತರ ಕಡೆಗಳಲ್ಲಿ ಮಾಡಿದ ವ್ರತ, ದಾನ, ಜಪ, ತಪಸ್ಸುಗಳೆಲ್ಲ ಗಂಗಾತಟದಲ್ಲಿ ಕೋಟಿಯಷ್ಟು ಹೆಚ್ಚುವುವು.

೧೧೩. ವಿಷ್ಣುವೆ! ಗಂಗಾತೀರದಲ್ಲಿ, ಕರುವಿನಿಂದ ಸಹಿತವಾದ ಧೇನುವನ್ನು ವಿಧ್ಯುಕ್ತವಾಗಿ ದಾನಮಾಡಿದವನು ಗೋರೋಮಸಂಖ್ಯೆಯಷ್ಟುಕಾಲ ಸಮಸ್ತ ಸಮೃದ್ಧಿಯುಳ್ಳವನಾಗುವನು.

೧೧೪–೧೧೮. ಕಾಮಧೇನುವನ್ನು ದಾನಮಾಡುವುದರಿಂದ ಮಾನವನು ಗೋಲೋಕದಲ್ಲಾಗಲಿ, ನನ್ನ ಲೋಕದಲ್ಲಾಗಲಿ ಬಾಂಧವರು, ಪಿತೃಗಳು, ಮಿತ್ರರು ಇವರೊಡನೆ ಸಮಸ್ತ ರತ್ನಭೂಷಿತನಾಗಿ ದೇವದುರ್ಲಭವಾದ

ಜಾಯತೇ ಸತ್ಕುಲೇ ಪಶ್ಚಾದ್ಧನಧಾನ್ಯಸಮಾಕುಲೇ ।
ರತ್ನಕಾಂಚನಸಂಪನ್ನೇ ಶೀಲವಿದ್ಯಾಸಮನ್ವಿತೇ ॥ ೧೧೬ ॥
ಭುಕ್ತ್ವಾ ಸ ವಿಪುಲಾನ್ಭೋಗಾನ್ಪುತ್ರಪೌತ್ರಸಮನ್ವಿತಃ ।
ಪುನರ್ಗಂಗಾಂ ಸಮಾಸಾದ್ಯ ಕಾಶ್ಯಾಮುತ್ತರವಾಹಿನೀಂ ॥ ೧೧೭ ॥
ವಿಶ್ವೇಶ್ವರಂ ಸಮಾರಾಧ್ಯ ಪ್ರಾಗ್ಜನ್ಮವಾಸನಾವಶಾತ್ ।
ಕಾಲಾದ್ದೇಹಾಂತಮಾಸಾದ್ಯ ಬ್ರಹ್ಮಸಂಪದ್ಯತೇ ತತಃ ॥ ೧೧೮ ॥
ವಿವರ್ತನದ್ವಯಮಪಿ ಭೂಮೇರ್ಭಾಗೀರಥೀತಟೇ ।
ನರೋ ದದಾತಿ ಯೋ ಭಕ್ತ್ಯಾ ತಸ್ಯ ಪುಣ್ಯಫಲಂ ಶೃಣು ॥ ೧೧೯ ॥
ತದ್ಭೂಮಿತ್ರಸರೇಣೂನಾಂ ಸಂಖ್ಯಯಾ ಯುಗಮಾನಯಾ ।
ಮಹೇಂದ್ರಚಂದ್ರಲೋಕೇಷು ಭುಕ್ತ್ವಾ ಭೋಗಾನ್ಮನಃಪ್ರಿಯಾನ್ ॥
ಸಪ್ತದ್ವೀಪಪತಿರ್ಭೂತ್ವಾ ಮಹಾಧರ್ಮಪರಾಯಣಃ ।
ನರಕಸ್ಥಾನ್ಪಿತೄನ್ಸರ್ವಾನ್ ಪ್ರಾಪಯೇತ್ತ್ರಿದಿವಂ ಹರೇ ॥ ೧೨೧ ॥
ಸ್ವರ್ಗಸ್ಥಾಂಶ್ಚ ಪಿತೄನ್ಸರ್ವಾನ್ ಮೋಚಯಿತ್ವಾ ಮಹಾದ್ಯುತಿಃ ।
ಅಂತೇ ಜ್ಞಾನಾಽಸಿನಾ ಛಿತ್ವಾ ಹ್ಯವಿದ್ಯಾಂ ಪಾಂಚಭೌತಿಕೀಂ ॥ ೧೨೨ ॥
ಪರಂ ವೈರಾಗ್ಯಮಾಪನ್ನೋ ಯುಂಜಾನೋ ಯೋಗಮುತ್ತಮಂ ।
ಪ್ರಾಪ್ಯಾಽಥವಾಽವಿಮುಕ್ತಂ ಚ ಪರಂ ಬ್ರಹ್ಮಾಽಧಿಗಚ್ಛತಿ ॥ ೧೨೩ ॥

---

ಸಮಸ್ತಕಾಮಗಳನ್ನೂ ಅನುಭವಿಸುತ್ತ ಅನಂತರ ಧನಧಾನ್ಯಗಳಿಂದಲೂ, ಸುವರ್ಣ ರತ್ನಗಳಿಂದಲೂ, ಸತ್ಸ್ವಭಾವವಿದ್ಯೆಗಳಿಂದಲೂ ತುಂಬಿರುವ ಒಳ್ಳೆಯ ವಂಶದಲ್ಲಿ ಜನಿಸಿ, ಪುತ್ರಪೌತ್ರರೊಡನೆ ವಿಪುಲ ಸುಖಗಳನ್ನನುಭವಿಸಿ ಕಾಶಿಯಲ್ಲಿ ಉತ್ತರ ದಿಕ್ಕಿಗೆ ಹರಿಯುವ ಗಂಗೆಯನ್ನು ಹೊಂದಿ ಹಿಂದಿನ ಜನ್ಮದ ಸಂಸ್ಕಾರದಿಂದ ವಿಶ್ವೇಶ್ವರನನ್ನಾರಾಧಿಸಿ ಕಾಲಾಂತರದಲ್ಲಿ ಮೃತನಾಗಿ ಬ್ರಹ್ಮನಾಗುವನು.

೧೧೯. ಇನ್ನು ಭಾಗೀರಥಿಯ ದಡದಲ್ಲಿ ನೂರಿಪ್ಪತ್ತು ಹಸ್ತಪ್ರಮಾಣದ ಭೂಮಿಯನ್ನು ಭಕ್ತಿಯಿಂದ ದಾನಮಾಡುವವನಿಗುಂಟಾಗುವ ಫಲವನ್ನು ಕೇಳು.

೧೨೦–೧೨೧. ಅವನು ಆ ಭೂಮಿಯ ತ್ರಸರೇಣುಗಳಷ್ಟು ಸಂಖ್ಯೆಯ ಯುಗಗಳ ಕಾಲ ಇಂದ್ರಚಂದ್ರಲೋಕಗಳಲ್ಲಿ ಮನಸ್ಸಿಗಿಷ್ಟವಾದ ಭೋಗಗಳನ್ನನುಭವಿಸಿ ಸಪ್ತದ್ವೀಪವತಿಯಾದ ಈ ಪೃಥಿವಿಗೆ ಅತಿಧರ್ಮಿಷ್ಠನಾದ ಚಕ್ರವರ್ತಿಯಾಗಿ, ನರಕವಾಸಿಗಳಾದ ಪಿತೃಗಳನ್ನೆಲ್ಲ ಸ್ವರ್ಗಕ್ಕೇರಿಸುವನು.

೧೨೨–೧೨೩. ಅಲ್ಲದೆ ಅತಿಶಯಕಾಂತಿಯುಳ್ಳವನಾಗಿ ಸ್ವರ್ಗವಾಸಿಗಳಾದ ಪಿತೃಗಳನ್ನೆಲ್ಲ ಮುಕ್ತರನ್ನಾಗಿಸಿ ಪಂಚಭೂತ ಸಂಬಂಧವಾದ ಅವಿದ್ಯೆಯನ್ನು ಜ್ಞಾನವೆಂಬ ಕತ್ತಿಯಿಂದ ಕತ್ತರಿಸಿ ಮಹಾವಿರಕ್ತನಾಗಿ ಅವನು ಉತ್ತಮ ಯೋಗವನ್ನಾಶ್ರಯಿಸಿ ಪರಬ್ರಹ್ಮನನ್ನು ಸೇರುವನು.

ಸುವರ್ಣಮಾತ್ರಮಪಿ ಯಃ ಸುವರ್ಣಂ ಸಂಪ್ರಯಚ್ಛತಿ ।
ಸುವರ್ಣಾಯ ಸುವರ್ಣಂ ಚ ಹರೇ ಭಾಗೀರಥೀತಟೇ ॥ ೧೨೪ ॥
ಸಹೇಮರತ್ನಖಚಿತೇ ವಿಮಾನೇ ಸರ್ವಗೇ ಶುಭೇ ।
ಸರ್ವೈಶ್ವರ್ಯಸಮಾಯುಕ್ತಃ ಸರ್ವಲೋಕೇಷು ಪೂಜಿತಃ ॥ ೧೨೫ ॥
ಬ್ರಹ್ಮಾಂಡಾಂತರಸಂಸ್ಥೇಷು ಭುಂಜನ್ಭೋಗಾನ್ಮನೋರಮಾನ್ ।
ಸರ್ವೈಃ ಸಂಪೂಜಿತೋ ವಿಷ್ಣೋ ಯಾವದಾಭೂತಸಂಪ್ಲವಂ ॥ ೧೨೬ ॥
ಏಕರಾಟ್ ಚ ತತೋ ಭೂತ್ವಾ ಜಂಬೂದ್ವೀಪೇ ಪ್ರತಾಪವಾನ್ ।
ತತೋಽವಿಮುಕ್ತಮಾಸಾದ್ಯ ಪದಂ ನಿರ್ವಾಣಮೃಚ್ಛತಿ ॥ ೧೨೭ ॥
ಜನ್ಮರ್ಕ್ಷೇತು ಕೃತೇ ಸ್ನಾನೇ ಗಂಗಾಯಾಂ ಭಕ್ತಿಪೂರ್ವಕಂ ।
ಜನ್ಮಪ್ರಭೃತಿ ಪಾಪೌಘಾತ್ಸಂಚಿತಾನ್ಮುಚ್ಯತೇ ಕ್ಷಣಾತ್ ॥ ೧೨೮ ॥
ವೈಶಾಖೇ ಕಾರ್ತಿಕೇ ಮಾಘೇ ಗಂಗಾಸ್ನಾನಂ ಸುದುರ್ಲಭಂ ।
ದರ್ಶೇ ಶತಗುಣಂ ಪುಣ್ಯಂ ಸಂಕ್ರಾಂತೌ ಚ ಸಹಸ್ರಕಂ ॥ ೧೨೯ ॥
ಚಂದ್ರಸೂರ್ಯಗ್ರಹೇ ಲಕ್ಷಂ ವ್ಯತೀಪಾತೇ ತ್ವನಂತಕಂ ।
ಅಯುತಂ ವಿಷುವೇ ಚೈವ ನಿಯುತಂ ತ್ವಯನದ್ವಯೇ ॥ ೧೩೦ ॥

---

೧೨೪–೧೨೬. ಹರಿಯೆ! ಭಾಗೀರಥಿಯ ದಡದಲ್ಲಿ ಬ್ರಾಹ್ಮಣನಿಗೆ ಸುವರ್ಣ ಪರಿಮಾಣದ ಚಿನ್ನವನ್ನು ದಾನಮಾಡುವವನು ಸರ್ವತ್ರ ಸಂಚರಿಸುವ ಚಿನ್ನದಿಂದಲೂ, ರತ್ನದಿಂದಲೂ ಕೆತ್ತಿದ ಶುಭವಿಮಾನದಲ್ಲಿ ಕುಳಿತು ಸರ್ವೈಶ್ವರ್ಯದಿಂದ ಕೂಡಿ ಸಮಸ್ತಲೋಕಗಳಲ್ಲಿಯೂ ಪೂಜಿತನಾಗಿ ಸಮಸ್ತ ಬ್ರಹ್ಮಾಂಡದೊಳಗಿರುವ ದೇಶಗಳಲ್ಲಿ ಮನೋಹರವಾದ ಭೋಗಗಳನ್ನನುಭವಿಸುತ್ತ ಪ್ರಳಯಕಾಲದವರೆಗೂ ಸಮಸ್ತಜನರಿಂದಲೂ ಪೂಜಿತನಾಗುವನು.

೧೨೭. ಅನಂತರ ಜಂಬೂದ್ವೀಪದಲ್ಲಿ ಪ್ರತಾಪಶಾಲಿಯಾದ ಚಕ್ರವರ್ತಿಯಾಗಿ ಅವಿಮುಕ್ತಕ್ಷೇತ್ರವನ್ನು ಹೊಂದಿ ಮೋಕ್ಷವನ್ನು ಪಡೆಯುವನು.

೧೨೮. ಜನ್ಮನಕ್ಷತ್ರದಲ್ಲಿ ಭಕ್ತಿಯಿಂದ ಗಂಗೆಯಲ್ಲಿ ಮಿಂದವನು, ಹುಟ್ಟಿದ ಮೊದಲ್ಗೊಂಡು ಸಂಚಿತವಾದ ಪಾಪಸಮೂಹದಿಂದ ಕೂಡಲೆ ಮುಕ್ತನಾಗುವನು.

೧೨೯. ವೈಶಾಖ ಕಾರ್ತೀಕ ಮಾಸಗಳಲ್ಲಿ ಗಂಗಾಸ್ನಾನವು ದುರ್ಲಭವಾದುದು. ಅಮಾವಾಸ್ಯೆಯ ದಿನ ನೂರರಷ್ಟು, ಸಂಕ್ರಾತಿಯ ದಿವಸ ಸಹಸ್ರದಷ್ಟು ಹೆಚ್ಚು ಪುಣ್ಯವು ದೊರೆಯುವುದು.

೧೩೦. ಚಂದ್ರ ಸೂರ್ಯಗ್ರಹಣಗಳ ಕಾಲದಲ್ಲಿ ಲಕ್ಷದಷ್ಟು, ವ್ಯತೀಪಾತದಲ್ಲಿ ಅನಂತವೂ, ಯುಗಾದಿಯಲ್ಲಿ ಹತ್ತುಸಾವಿರದಷ್ಟು, ಉತ್ತರ ದಕ್ಷಿಣಾಯನ ಪುಣ್ಯಕಾಲಗಳಲ್ಲಿ ನಿಯುತದಷ್ಟು ಪುಣ್ಯವು ದೊರೆಯುವುದು.

ಸೋಮಗ್ರಹಃ ಸೋಮದಿನೇ ರವಿವಾರೇ ರವಿಗ್ರಹಃ ।
ತಚ್ಚೂಡಾಮಣಿಪರ್ವಾಖ್ಯಂ ತತ್ರ ಸ್ನಾನಮಸಂಖ್ಯಕಂ ॥ ೧೩೧ ॥
ಸ್ನಾನಂ ದಾನಂ ಜಪೋ ಹೋಮೋ ಯದ್ಯಚ್ಚೂಡಾಮಣೌ ಕೃತಂ ।
ತದಕ್ಷಯಂ ಸರ್ವಮಿಹ ವಿಷ್ಣೋ ಭಾಗೀರಥೀತಟೇ ॥ ೧೩೨ ॥
ಶ್ರದ್ಧಯಾ ಭಕ್ತಿಯುಕ್ತಸ್ತು ಗಂಗಾಂ ಸ್ನಾತ್ವಾ ವಿಧಾನತಃ ।
ಬ್ರಹ್ಮಹಾಽಪಿ ವಿಶುದ್ಧ್ಯೇತ ಕಿಂ ಪುನಸ್ತ್ವನ್ಯಪಾತಕೀ ॥ ೧೩೩ ॥
ಕೃಮಿಕೀಟಪತಂಗಾದ್ಯಾ ಯೇ ಮೃತಾ ಜಾಹ್ನವೀತಟೇ ।
ಕೂಲಾತ್ಪತಂತಿ ಯೇ ವೃಕ್ಷಾಸ್ತೇಽಪಿ ಯಾಂತಿ ಪರಾಂ ಗತಿಂ ॥ ೧೩೪ ॥
ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ದಶಮ್ಯಾಂ ಹಸ್ತಸಂಯುತೇ ।
ಗಂಗಾತೀರೇ ತು ಪುರುಷೋ ನಾರೀ ವಾ ಭಕ್ತಿಭಾವತಃ ॥ ೧೩೫ ॥
ನಿಶಾಯಾಂ ಜಾಗರಂ ಕುರ್ಯಾದ್ಗಂಗಾಂ ದಶವಿಧೈರ್ಹರೇ ।
ಪುಷ್ಪೈಃ ಸುಗಂಧೈರ್ನೈವೇದ್ಯೈಃ ಫಲೈರ್ದಶ ದಶಸ್ಮಿತೈಃ ॥ ೧೩೬ ॥
ಪ್ರದೀಪೈರ್ದಶಭಿರ್ಧೂಪೈರ್ದಶಾಂಗೈರ್ಗರುಡಧ್ವಜ ।
ಪೂಜಯೇಚ್ಛ್ರದ್ಧಯಾ ಧೀಮಾನ್ ದಶಕೃತ್ವೋ ವಿಧಾನತಃ ॥ ೧೩೭ ॥
ಸಾಜ್ಯಾಂಸ್ತಿಲಾನ್ಪ್ರಕ್ಷಿಪೇತ್ತೋಯೇ ಗಂಗಾಯಾಃ ಪ್ರಸೃತೀರ್ದಶ ।
ಗುಡಸಕ್ತುಮಯಾನ್ಪಿಂಡಾನ್ ದದ್ಯಾಚ್ಚ ದಶಮಂತ್ರತಃ ॥ ೧೩೮ ॥

---

೧೩೧. ಸೋಮವಾರ ಚಂದ್ರಗ್ರಹಣ, ಭಾನುವಾರ ಸೂರ್ಯಗ್ರಹಣಗಳು ಸಂಭವಿಸಿದರೆ ಆ ದಿನಗಳು ಚೂಡಾಮಣಿಪರ್ವದಿನಗಳೆನಿಸುತ್ತವೆ. ಆ ದಿನಗಳಲ್ಲಿ ಗಂಗಾನದಿಯಲ್ಲಿ ಮಿಂದರೆ ಮಿತಿಯಿಲ್ಲದ ಪುಣ್ಯವು ಲಭಿಸುವುದು.

೧೩೨–೧೩೩. ವಿಷ್ಣುವೆ! ಈ ಭಾಗೀರಥೀತೀರದಲ್ಲಿ ಚೂಡಾಮಣಿಯೋಗದಲ್ಲಿ ಮಾಡಿದ ಸ್ನಾನ, ದಾನ, ಜಪ, ಹೋಮ ಮೊದಲಾದುವುಗಳು ಅಕ್ಷಯವಾಗುವುವು. ಬ್ರಹ್ಮಹತ್ಯೆಯನ್ನು ಮಾಡಿದ್ದರೂ, ಶ್ರದ್ಧೆಯಿಂದ ಗಂಗೆಯಲ್ಲಿ ವಿಧಿಯಂತೆ ಮಿಂದರೆ ಮಾನವನು ಶುದ್ಧನಾಗುವನು. ಇತರ ಪಾತಕಿಗಳ ವಿಷಯದಲ್ಲಿ ಏನುಹೇಳತಕ್ಕುದು ?

೧೩೪. ಗಂಗೆಯ ದಡನಲ್ಲಿ ಮಡಿದ ಕ್ರಿಮಿ, ಕೀಟ, ಪತಂಗಾದಿಗಳೂ, ದಡದಿಂದ ಬಿದ್ದ ವೃಕ್ಷಗಳೂ ಉತ್ತಮಗತಿಯನ್ನು ಪಡೆಯುತ್ತವೆ.

೧೩೫–೧೩೭. ಗಂಡಸಾಗಲಿ, ಹೆಂಗಸಾಗಲಿ, ಜ್ಯೇಷ್ಠಮಾಸದ ಶುಕ್ಲಪಕ್ಷ ದಶಮೀ ಹಸ್ತಾನಕ್ಷತ್ರದಲ್ಲಿ ರಾತ್ರಿ ಜಾಗರಣೆಗೈದು ಗಂಗಾತೀರದಲ್ಲಿ ಹತ್ತು ಸಂಖ್ಯೆಯ ಹೂವು, ಗಂಧ, ನೈವೇದ್ಯ, ಫಲ, ದೀಪ, ಧೂಪ, ದಶಾಂಗ ಇವುಗಳಿಂದ ಗಂಗೆಯನ್ನು ಶ್ರದ್ಧೆಯಿಂದ ಹತ್ತುಸಾರಿ ಪೂಜಿಸಬೇಕು.

೧೩೮. ಗಂಗೆಯ ನೀರಿನಲ್ಲಿ ಆಜ್ಯಸಹಿತವಾದ ಎಳ್ಳಿನ ಬೊಗಸೆಗಳನ್ನೂ, ಬೆಲ್ಲ, ಸತ್ತುವಿನಿಂದಾದ ಪಿಂಡಗಳನ್ನೂ ಹತ್ತು ಮಂತ್ರಗಳಿಂದ ಎಸೆಯಬೇಕು.

**ನಮಃ ಶಿವಾಯೈ ಪ್ರಥಮಂ ನಾರಾಯಣ್ಯೈ ಪದಂ ತತಃ ।**
**ದಶಹರಾಯೈ ಪದಮಿತಿ ಗಂಗಾಯೈ ಮಂತ್ರ ಏಷ ವೈ ॥ ೧೪೯ ॥**
**ಸ್ವಾಹಾಂತಃ ಪ್ರಣವಾದಿಶ್ಚ ಭವೇದ್ವಿಂಶಾಕ್ಷರೋ ಮನುಃ ।**
**ಪೂಜಾ ದಾನಂ ಜಪೋ ಹೋಮೋಽನೇನೈವ ಮನುನಾ ಸ್ಮೃತಃ॥ ೧೫೦ ॥**
**ಹೇಮ್ನಾ ರೂಪ್ಯೇಣ ವಾ ಶಕ್ತ್ಯಾ ಗಂಗಾಮೂರ್ತಿಂ ವಿಧಾಯ ಚ ।**
**ವಸ್ತ್ರಾಚ್ಛಾದಿತವಕ್ತ್ರಸ್ಯ ಪೂರ್ಣಕುಂಭಸ್ಯಚೋಪರಿ ॥ ೧೫೧ ॥**
**ಪ್ರತಿಷ್ಠಾಪ್ಯಾರ್ಚಯೇದ್ದೇವೀಂ ಪಂಚಾಮೃತವಿಶೋಧಿತಾಂ ।**
**ಚತುರ್ಭುಜಾಂ ತ್ರಿನೇತ್ರಾಂ ಚ ನದೀನದನಿಷೇವಿತಾಂ ॥ ೧೫೨ ॥**
**ಲಾವಣ್ಯಾಽಮೃತನಿಷ್ಯಂದ ಸಂಶೀಲದ್ಗಾತ್ರಯಷ್ಟಿಕಾಂ ।**
**ಪೂರ್ಣಕುಂಭಸಿತಾಂಭೋಜವರದಾಽಭಯಸತ್ಕರಾಂ ॥ ೧೫೩ ॥**
**ತತೋ ಧ್ಯಾಯೇತ್ಸುಸೌಮ್ಯಾಂ ಚ ಚಂದ್ರಾಽಯುತಸಮಪ್ರಭಾಂ ।**
**ಚಾಮರೈರ್ವೀಜ್ಯಮಾನಾಂ ಚ ಶ್ವೇತಚ್ಛತ್ರೋಪಶೋಭಿತಾಂ ॥ ೧೫೪ ॥**
**ಸುಧಾಪ್ಲಾವಿತಭೂಪೃಷ್ಠಾಂ ದಿವ್ಯಗಂಧಾಽನುಲೇಪನಾಂ ।**
**ತ್ರೈಲೋಕ್ಯಪೂಜಿತಪದಾಂ ದೇವರ್ಷಿಭಿರಭಿಷ್ಟುತಾಂ ॥ ೧೫೫ ॥**
**ಧ್ಯಾತ್ವಾ ಸಮರ್ಚ್ಯ ಮಂತ್ರೇಣ ಧೂಪದೀಪೋಪಹಾರತಃ ।**
**ಮಾಂ ಚ ತ್ವಾಂ ಚ ವಿಧಿಂ ಬ್ರಧ್ನಂ ಹಿಮವಂತಂ ಭಗೀರಥಂ ॥ ೧೫೬ ॥**
**ಪ್ರತಿಮಾಽಗ್ರೇ ಸಮಭ್ಯರ್ಚ್ಯ ಚಂದನಾಕ್ಷತನಿರ್ಮಿತಾನ್ ।**
**ದಶಪ್ರಸ್ಥತಿಲಾನ್ದದ್ಯಾದ್ದಶ ವಿಪ್ರೇಭ್ಯ ಆದರಾತ್ ॥ ೧೫೭ ॥**

---

೧೪೯–೧೫೦. ಗಂಗೆಯ ಪೂಜೆ, ದಾನ, ಜಪ, ಹೋಮಗಳಲ್ಲಿ ಓಂಕಾರ ಪೂರ್ವಕವೂ, ಸ್ವಾಹಾಂತವೂ ಆದ ನಮಃಶಿವಾಯೈ, ನಾರಾಯಣ್ಯೈ, ದಶಹರಾಯೈ, ಗಂಗಾಯೈ ಎಂಬಮಂತ್ರವು ವಿಹಿತವಾಗಿರುವುದು.

೧೫೧–೧೫೭. ಚಿನ್ನದಿಂದಾಗಲಿ, ಬೆಳ್ಳಿಯಿಂದಾಗಲಿ, ಗಂಗೆಯ ಮೂರ್ತಿಯನ್ನು ರಚಿಸಿ ವಸ್ತ್ರವನ್ನು ಹೊದಿಸಿರುವ ಪೂರ್ಣಕಲಶದಮೇಲೆ ಸ್ಥಾಪಿಸಿ ಪಂಚಾಮೃತಾಭಿಷೇಕಮಾಡಿ ಚತುರ್ಭುಜಳೂ, ತ್ರಿನೇತ್ರಳೂ, ನದೀನದಗಳಿಂದ ಸೇವಿತಳೂ, ಲಾವಣ್ಯಾಮೃತದಿಂದ ವಿರಾಜಿಸುವ ಶರೀರವುಳ್ಳವಳೂ, ಪೂರ್ಣಕುಂಭ, ಬೆಳುದಾವರೆ, ವರದ, ಅಭಯಹಸ್ತಗಳುಳ್ಳವಳೂ, ಸೌಮ್ಯಳೂ, ಹತ್ತುಸಾವಿರ ಚಂದ್ರರಿಗೆ ಸಮವಾದ ಕಾಂತಿಯುಳ್ಳವಳೂ, ಚಾಮರವೀಜಿತಳೂ, ಶ್ವೇತಚ್ಛತ್ರದಿಂದ ಶೋಭಿತಳೂ, ಅಮೃತದಿಂದ ಒದ್ದೆಯಾದ ನೆಲವುಳ್ಳವಳೂ, ದಿವ್ಯಗಂಧಾನುಲಿಪ್ತಳೂ, ತ್ರಿಭುವನಪೂಜಿತಪಾದಳೂ, ದೇವರ್ಷಿಗಳಿಂದ ಸಂಸ್ತುತಳೂ ಆದ ಗಂಗೆಯನ್ನು ಧ್ಯಾನಿಸಿ ಆಕೆಯ ಪ್ರತಿಮೆಯ ಮೇಲ್ಭಾಗದಲ್ಲಿ ನನ್ನನ್ನೂ, ನಿನ್ನನ್ನೂ, ಬ್ರಹ್ಮ, ರವಿ, ಹಿಮಾಲಯ, ಭಗೀರಥ ಇವರನ್ನೂ

ಪಲಂ ಚ ಕುಡವಃ ಪ್ರಸ್ಥ ಆಢಕೋ ದ್ರೋಣ ಏವ ಚ ।
ಧಾನ್ಯಮಾನೇನ ಬೋದ್ಧವ್ಯಾಃ ಕ್ರಮಶೋಽಮೀ ಚತುರ್ಗುಣಾಃ॥ ೧೪೮ ॥
ಮತ್ಸ್ಯಕಚ್ಛಪಮಂಡೂಕಮಕರಾದಿಜಲೇಚರಾನ್ ।
ಹಂಸಕಾರಂಡವಬಕಚಕ್ರಟಿಟ್ಟಿಭಸಾರಸಾನ್ ॥ ೧೪೯ ॥
ಯಥಾ ಶಕ್ತಿ ಸ್ವರ್ಣರೂಪ್ಯತಾಮ್ರಪೃಷ್ಠವಿನಿರ್ಮಿತಾನ್ ।
ಅಭ್ಯರ್ಚ್ಯ ಗಂಧಕುಸುಮೈರ್ಗಂಗಾಯಾಂ ಪ್ರಕ್ಷಿಪೇದ್ವ್ರತೀ ॥ ೧೫೦ ॥
ಏವಂ ಕೃತ್ವಾ ವಿಧಾನೇನ ವಿತ್ತಶಾಠ್ಯವಿವರ್ಜಿತಃ ।
ಉಪವಾಸೀ ವಕ್ಷ್ಯಮಾಣೈರ್ದಶಪಾಪೈಃ ಪ್ರಮುಚ್ಯತೇ ॥ ೧೫೧ ॥
ಅದತ್ತಾನಾಮುಪಾದಾನಂ ಹಿಂಸಾಚೈವಾಽವಿಧಾನತಃ ।
ಪರದಾರೋಪಸೇವಾ ಚ ಕಾಯಿಕಂ ತ್ರಿವಿಧಂ ಸ್ಮೃತಂ ॥ ೧೫೨ ॥
ಪಾರುಷ್ಯಮನೃತಂ ಚೈವ ಪೈಶುನ್ಯಂ ಚೈವ ಸರ್ವಶಃ ।
ಅಸಂಬದ್ಧಪ್ರಲಾಪಶ್ಚ ವಾಙ್ಮಯಂ ಸ್ಯಾಚ್ಚತುರ್ವಿಧಂ ॥ ೧೫೩ ॥
ಪರದ್ರವ್ಯೇಷ್ವಭಿಧ್ಯಾನಂ ಮನಸಾಽನಿಷ್ಟಚಿಂತನಂ ।
ವಿತಥಾಭಿನಿವೇಶಶ್ಚ ಮಾನಸಂ ತ್ರಿವಿಧಂ ಸ್ಮೃತಂ ॥ ೧೫೪ ॥
ಏತೈರ್ದಶವಿಧೈಃ ಪಾಪೈರ್ದಶಜನ್ಮಸಮುದ್ಭವೈಃ ।
ಮುಚ್ಯತೇ ನಾಽತ್ರ ಸಂದೇಹಃ ಸತ್ಯಂ ಸತ್ಯಂ ಗದಾಧರ ॥ ೧೫೫ ॥

---

ಧೂಪದೀಪಾದಿಗಳಿಂದ ಪೂಜಿಸಿ ಹತ್ತುಜನ ಬ್ರಾಹ್ಮಣರಿಗೆ ಒಬ್ಬೊಬ್ಬರಿಗೂ ಗಂಧಾಕ್ಷತಸಹಿತವಾಗಿ ಹತ್ತು ಹತ್ತು ಸೇರು ಎಳ್ಳನ್ನು ಆದರದಿಂದ ದಾನಮಾಡಬೇಕು.

೧೪೮. ಪಲ, ಕುಡವ, ಪ್ರಸ್ಥ, ಆಢಕ, ದ್ರೋಣ ಇವು ಧಾನ್ಯದ ಅಳತೆಯ ಪಾತ್ರೆಗಳು. ಕ್ರಮವಾಗಿ ಇವು ನಾಲ್ಕರಷ್ಟು ಹೆಚ್ಚಿದರೆ ತಮ್ಮ ಮುಂದಿನ ಅಳತೆಯ ಪಾತ್ರೆಗಳಾಗುವುವು.

೧೪೯–೧೫೦. ವ್ರತಧಾರಿಯು, ಮೀನು, ಆಮೆ, ಕಪ್ಪೆ, ಮೊಸಳೆಯೆಂಬ ಜಲಜಂತುಗಳನ್ನೂ, ಹಂಸ, ಕಾರಂಡವ, ಕೊಕ್ಕರೆ, ಚಕ್ರವಾಕ, ಟಿಟ್ಟಿಭ, ಸಾರಸ ಪಕ್ಷಿಗಳನ್ನೂ ಶಕ್ತ್ಯನುಸಾರ ಚಿನ್ನ, ಬೆಳ್ಳಿ, ತಾಮ್ರಗಳ ಪಾತ್ರೆಗಳ ಮೇಲೆ ಗಂಧದಿಂದ ನಿರ್ಮಿಸಿ ಗಂಧಪುಷ್ಪಗಳಿಂದ ಪೂಜಿಸಿ ಗಂಗೆಯಲ್ಲಿ ಹಾಕಬೇಕು.

೧೫೧–೧೫೫. ಉಪವಾಸವಿದ್ದು ವಿತ್ತಶಾಠ್ಯವಿಲ್ಲದೆ ವಿಧಿಯಂತೆ ಹೀಗೆ ಮಾಡಿದವನು ದತ್ತಾಪಹಾರ, ವಿಧಿಬಾಹ್ಯವಾದ ಹಿಂಸೆ, ಪರಪತ್ನೀಗಮನಗಳೆಂಬ ತ್ರಿವಿಧಕಾಯಿಕಪಾಪಗಳು, ಕಾಠಿನ್ಯ, ಸುಳ್ಳು, ಚಾಡಿಹೇಳುವುದು, ಅಸಂಬದ್ಧ ಪ್ರಲಾಪಗಳೆಂಬ ನಾಲ್ಕು ಬಗೆಯ ವಾಚಕಪಾಪಗಳು, ಪರದ್ರವ್ಯಚಿಂತೆ, ಮನಸ್ಸಿನಲ್ಲಿ ಅನಿಷ್ಟಚಿಂತೆ, ಸುಳ್ಳಿನಲ್ಲಿ ಅಭಿನಿವೇಶ ಎಂಬ ಮೂರುವಿಧ ಮಾನಸಿಕ ಪಾಪಗಳು ಹೀಗೆ ಹತ್ತುಜನ್ಮಗಳಲ್ಲೆಸಗಿದ ಹತ್ತುಬಗೆಯ ಪಾಪಗಳಿಂದ ನಿಶ್ಚಯವಾಗಿಯೂ ಮುಕ್ತನಾಗುವನು.

ಉದ್ಧರೇನ್ನರಕಾತ್ಪೂರ್ವಾನ್ದಶಘೋರಾದ್ದಶಾಽವರಾನ್ ।
ವಕ್ಷ್ಯಮಾಣಮಿದಂ ಸ್ತೋತ್ರಂ ಗಂಗಾಽಗ್ರೇ ಶ್ರದ್ಧಯಾ ಜಪೇತ್ ॥೧೫೬॥
ಓಂ ನಮಃ ಶಿವಾಯೈ ಗಂಗಾಯೈ ಶಿವದಾಯೈ ನಮೋನಮಃ ।
ನಮಸ್ತೇ ವಿಷ್ಣುರೂಪಿಣ್ಯೈ ಬ್ರಹ್ಮಮೂರ್ತ್ಯೈ ನಮೋಽಸ್ತುತೇ ॥ ೧೫೭ ॥
ನಮಸ್ತೇ ರುದ್ರರೂಪಿಣ್ಯೈ ಶಾಂಕರ್ಯೈ ತೇ ನಮೋ ನಮಃ ।
ಸರ್ವದೇವಸ್ವರೂಪಿಣ್ಯೈ ನಮೋ ಭೇಷಜಮೂರ್ತಯೇ ॥ ೧೫೮ ॥
ಸರ್ವಸ್ಯ ಸರ್ವವ್ಯಾಧೀನಾಂ ಭಿಷಕ್ಶ್ರೇಷ್ಠ್ಯೈ ನಮೋಽಸ್ತುತೇ ।
ಸ್ಥಾಸ್ನುಜಂಗಮಸಂಭೂತವಿಷಹಂತ್ರ್ಯೈ ನಮೋಽಸ್ತುತೇ ॥ ೧೫೯ ॥
ಸಂಸಾರವಿಷನಾಶಿನ್ಯೈ ಜೀವನಾಯೈ ನಮೋಸ್ತುತೇ ।
ತಾಪತ್ರಿತಯ ಸಂಹರ್ತ್ರ್ಯೈ ಪ್ರಾಣೇಶ್ಯೈ ತೇ ನಮೋ ನಮಃ ॥ ೧೬೦ ॥
ಶಾಂತಿಸಂತಾನಕಾರಿಣ್ಯೈ ನಮಸ್ತೇ ಶುದ್ಧಮೂರ್ತಯೇ ।
ಸರ್ವಸಂಶುದ್ಧಿಕಾರಿಣ್ಯೈ ನಮಃ ಪಾಪಾಽರಿಮೂರ್ತಯೇ ॥ ೧೬೧ ॥
ಭುಕ್ತಿಮುಕ್ತಿ ಪ್ರದಾಯಿನ್ಯೈ ಭದ್ರದಾಯೈ ನಮೋನಮಃ ।
ಭೋಗೋಪಭೋಗದಾಯಿನ್ಯೈ ಭೋಗವತ್ಯೈ ನಮೋಽಸ್ತುತೇ ॥ ೧೬೨ ॥

---

೧೫೬. ಅಲ್ಲದೆ, ಹಿಂದಿನ ಮತ್ತು ಮುಂದಿನ ಹತ್ತುಮಂದಿ ಪಿತೃಗಳನ್ನು ಉದ್ಧರಿಸುವನು. ಈ ಮುಂದಿನ ಸ್ತೋತ್ರವನ್ನು ಗಂಗೆಯ ಮುಂದೆ ಶ್ರದ್ಧೆಯಿಂದ ಜಪಿಸಬೇಕು.

೧೫೭. "ಭವಾನೀರೂಪಳೂ, ಮಂಗಳವನ್ನೀಯುವಳೂ, ವಿಷ್ಣು ರೂಪಿಣಿಯೂ, ಬ್ರಹ್ಮಮೂರ್ತಿಯೂ ಆದ ಓ ಗಂಗೆಯೆ! ನಿನಗೆ ನಮಸ್ಕಾರವು.

೧೫೮. ರುದ್ರರೂಪಿಣಿಯೂ, ಸಕಲ ದೇವತಾಸ್ವರೂಪಿಣಿಯೂ, ಔಷಧ ರೂಪಿಣಿಯೂ ಆದ ನಿನಗೆ ನಮಸ್ಕಾರವು!!

೧೫೯. ಸಮಸ್ತ ಜನರ ಸಕಲ ರೋಗಗಳಿಗೂ ವೈದ್ಯರೂಪಳೂ, ಸ್ಥಾವರ ಜಂಗಮಗಳ ವಿಷಹಾರಿಣಿಯೂ ಆದ ನಿನಗೆ ವಂದನೆಯು.

೧೬೦. ಸಂಸಾರವೆಂಬ ವಿಷವನ್ನು ನಾಶಗೊಳಿಸುವವಳೂ, ಜೀವನ ದಾತ್ರಿಯೂ, ತಾಪತ್ರಯನಿವಾರಕಳೂ, ಪ್ರಾಣೇಶ್ವರಿಯೂ ಆದ ಓ ಗಂಗೆಯೆ, ನಿನಗೆ ವಂದನೆಯು.

೧೬೧. ಮನಸ್ಸಿಗೆ ಶಾಂತಿಯನ್ನೀಯುವವಳೂ, ಶುದ್ಧಶರೀರಳೂ, ಸಕಲ ಶುದ್ಧಿಯನ್ನುಂಟುಮಾಡುವವಳೂ, ಪಾಪನಾಶಕಶರೀರಳೂ ಆದ ಎಲೌ ಗಂಗಾದೇವಿಯೆ, ನಿನಗೆ ನಮಸ್ಕಾರವು.

೧೬೨. ಭುಕ್ತಿಮುಕ್ತಿಗಳನ್ನು ಕೊಡುವವಳೂ, ಮಂಗಳದಾಯಿನಿಯೂ, ಭೋಗೋಪಭೋಗಗಳನ್ನೀಯುವವಳೂ, ಭೋಗವತಿಯೂ ಆದ ನಿನಗೆ ನಮಸ್ಕಾರವು.

ಮಂದಾಕಿನ್ಯೈ ನಮಸ್ತೇಽಸ್ತು ಸ್ವರ್ಗದಾಯೈ ನಮೋನಮಃ ।
ನಮಸ್ತ್ರೈಲೋಕ್ಯಭೂಷಾಯೈ ತ್ರಿಪಥಾಯೈ ನಮೋನಮಃ ॥ ೧೬೩ ॥
ನಮಸ್ತ್ರಿಶುಕ್ಲಸಂಸ್ಥಾಯೈ ಕ್ಷಮಾವತ್ಯೈ ನಮೋನಮಃ ।
ತ್ರಿಹುತಾಶನಸಂಸ್ಥಾಯೈ ತೇಜೋವತ್ಯೈ ನಮೋನಮಃ ॥ ೧೬೪ ॥
ನಂದಾಯೈ ಲಿಂಗಧಾರಿಣ್ಯೈ ಸುಧಾಧಾರಾತ್ಮನೇ ನಮಃ ।
ನಮಸ್ತೇ ವಿಶ್ವಮುಖ್ಯಾಯೈ ರೇವತ್ಯೈ ತೇ ನಮೋನಮಃ ॥ ೧೬೫ ॥
ಬೃಹತ್ಯೈ ತೇ ನಮಸ್ತೇಽಸ್ತು ಲೋಕಧಾತ್ರ್ಯೈ ನಮೋಽಸ್ತುತೇ ।
ನಮಸ್ತೇ ವಿಶ್ವಮಿತ್ರಾಯೈ ನಂದಿನ್ಯೈ ತೇ ನಮೋನಮಃ ॥ ೧೬೬ ॥
ಪೃಥ್ವ್ಯೈ ಶಿವಾಽಮೃತಾಯೈ ಚ ಸುವೃಷಾಯೈ ನಮೋನಮಃ ।
ಪರಾಽಪರ ಶತಾಢ್ಯಾಯೈ ತಾರಾಯೈ ತೇ ನಮೋನಮಃ ॥ ೧೬೭ ॥
ಪಾಶಜಾಲನಿಕೃಂತಿನ್ಯೈ ಅಭಿನ್ನಾಯೈ ನಮೋಽಸ್ತುತೇ ।
ಶಾಂತಾಯೈ ಚ ವರಿಷ್ಠಾಯೈ ವರದಾಯೈ ನಮೋನಮಃ ॥ ೧೬೮ ॥
ಉಗ್ರಾಯೈ ಸುಖಜಗ್ಧ್ಯೈ ಚ ಸಂಜೀವಿನ್ಯೈ ನಮೋಽಸ್ತುತೇ ।
ಬ್ರಹ್ಮಿಷ್ಠಾಯೈ ಬ್ರಹ್ಮದಾಯೈ ದುರಿತಘ್ನ್ಯೈ ನಮೋನಮಃ ॥ ೧೬೯ ॥

---

೧೬೩. ಸ್ವರ್ಗವನ್ನು ನೀಡುವವಳೂ, ಮೂರು ಲೋಕಗಳಿಗೆ ಅಲಂಕಾರಭೂತಳೂ, ತ್ರಿಮಾರ್ಗಗಾಮಿನಿಯೂ ಆದ ಗಂಗೆಯೆ, ನಿನಗೆ ವಂದನೆಯು.

೧೬೪. ಶಂಕರನ ಜಟಾಜೂಟ, ವಿಷ್ಣುಪಾದ ಮತ್ತು ವಾರಾಣಸಿ ಎಂಬ ಮೂರು ಶುದ್ಧಸ್ಥಾನಗಳಲ್ಲಿರುವವಳೂ, ಸಹನೆಯುಳ್ಳವಳೂ, ದಕ್ಷಿಣಾಗ್ನ್ಯಾದಿ ಮೂರು ಅಗ್ನಿಗಳಲ್ಲಿ ನೆಲಸಿರುವವಳೂ, ತೇಜಸ್ವಿನಿಯೂ ಆದ ನಿನಗೆ ನಮಸ್ಕಾರವು.

೧೬೫. ಅಲಕನಂದನೆಯೂ, ಶಿವಲಿಂಗಗಳನ್ನು ಧರಿಸಿದವಳೂ, ಅಮೃತ ಪ್ರವಾಹವುಳ್ಳವಳೂ, ಪ್ರಪಂಚದಲ್ಲಿ ಮುಖ್ಯಳೂ, ರೇವತರಾಜನ ಮಗಳೂ ಆದ ನಿನಗೆ ಪ್ರಣಾಮವು.

೧೬೬. ಪರಿಪೂರ್ಣಳೂ, ಲೋಕಮಾತೆಯೂ, ಸಮಸ್ತ ಪ್ರಾಣಿಗಳಿಗೆ ಹಿತಳೂ, ನಂದಿನೀಧೇನುರೂಪಳೂ ಆದ ನಿನಗೆ ನಮಸ್ಕಾರವು.

೧೬೭. ಭೂಮಿರೂಪಳೂ, ಮಂಗಳಕರವಾದ ನೀರುಳ್ಳವಳೂ, ಸದ್ಧರ್ಮರೂಪಳೂ, ಅನೇಕ ಪರಾಪರಜೀವಗಳಿಂದ ಸಹಿತಳೂ, ಓಂಕಾರರೂಪಳೂ ಆದ ನಿನಗೆ ನಮಸ್ಕಾರವು.

೧೬೮. ಇಪ್ಪತ್ತನಾಲ್ಕು ತತ್ವರೂಪವಾದ ಬಲೆಯನ್ನು ಕತ್ತರಿಸುವವಳೂ, ಅಭಿನ್ನಳೂ, ಶಾಂತಳೂ, ಶ್ರೇಷ್ಠಳೂ, ವರವನ್ನು ಕೊಡುವವಳೂ ಆದ ನಿನಗೆ ನಮಸ್ಕಾರವು.

೧೬೯. ಉಗ್ರರೂಪಳೂ, ಸುಖವನ್ನನುಭವಿಸುವವಳೂ, ಪ್ರಾಣಿಗಳನ್ನು

ಪ್ರಣತಾರ್ತಿಪ್ರಭಂಜಿನ್ಯೈ ಜಗನ್ಮಾತ್ರೇ ನಮೋಽಸ್ತುತೇ ।
ಸರ್ವಾಪತ್ಪ್ರತಿಪಕ್ಷಾಯೈ ಮಂಗಲಾಯೈ ನಮೋನಮಃ ॥ ೧೭೦ ॥
ಶರಣಾಗತದೀನಾರ್ತಪರಿತ್ರಾಣಪರಾಯಣೇ ।
ಸರ್ವಸ್ಯಾರ್ತಿಹರೇ ದೇವಿ ನಾರಾಯಣಿ ನಮೋಽಸ್ತುತೇ ॥ ೧೭೧ ॥
ನಿರ್ಲೇಪಾಯೈ ದುರ್ಗಹಂತ್ರ್ಯೈ ದಕ್ಷಾಯೈ ತೇ ನಮೋನಮಃ ।
ಪರಾಽಪರಪರಾಯೈಚ ಗಂಗೇ ನಿರ್ವಾಣದಾಯಿನಿ ॥ ೧೭೨ ॥
ಗಂಗೇ ಮಮಾಗ್ರತೋ ಭೂಯಾ ಗಂಗೇ ಮೇ ತಿಷ್ಠ ಪೃಷ್ಠತಃ ।
ಗಂಗೇ ಮೇ ಪಾರ್ಶ್ವಯೋರೇಧಿ ಗಂಗೇ ತ್ವಯ್ಯಸ್ತು ಮೇ ಸ್ಥಿತಿಃ ॥ ೧೭೩ ॥
ಆದೌ ತ್ವಮಂತೇ ಮಧ್ಯೇ ಚ ಸರ್ವಂ ತ್ವಂ ಗಾಂಗತೇ ಶಿವೇ ।
ತ್ವಮೇವ ಮೂಲಪ್ರಕೃತಿಸ್ತ್ವಂ ಪುಮಾನ್ಪರ ಏವ ಹಿ ।
ಗಂಗೇ ತ್ವಂ ಪರಮಾತ್ಮಾ ಚ ಶಿವಸ್ತುಭ್ಯಂ ನಮಃ ಶಿವೇ ॥ ೧೭೪ ॥
ಯ ಇದಂ ಪಠತೇ ಸ್ತೋತ್ರಂ ಶೃಣುಯಾಚ್ಛ್ರದ್ಧಯಾಽಪಿ ಯಃ ।
ದಶಧಾ ಮುಚ್ಯತೇ ಪಾಪೈಃ ಕಾಯವಾಕ್ಚಿತ್ತಸಂಭವೈಃ ॥ ೧೭೫ ॥

---

ಬದುಕಿಸುವವಳೂ, ಬ್ರಾಹ್ಮಣಭಕ್ತಳೂ, ಮೋಕ್ಷವನ್ನೀಯುವವಳೂ, ಪಾಪನಿವಾರಕಳೂ ಆದ ನಿನಗೆ ನಮಸ್ಕಾರವು.

೧೭೦. ನಮಸ್ಕರಿಸಿದ ಭಕ್ತರ ದುಃಖವನ್ನು ನಿವಾರಿಸುವವಳೂ, ಜಗನ್ಮಾತೆಯೂ, ಸಮಸ್ತಾಪತ್ತುಗಳನ್ನು ಪರಿಹರಿಸುವವಳೂ, ಮಂಗಳಕರಳೂ ಆದ ನಿನಗೆ ನಮಸ್ಕಾರವು.

೧೭೧. ಮರೆಹೊಕ್ಕವರು, ದೀನರು, ದುಃಖಿತರು ಇವರನ್ನು ರಕ್ಷಿಸುವುದರಲ್ಲಿ ನಿರತಳಾಗಿ, ಸಮಸ್ತ ಜನರ ದುಃಖವನ್ನು ಪರಿಹರಿಸುವವಳೂ ನಾರಾಯಣನ ಶಕ್ತಿರೂಪಳೂ ಆದ ಓ ಗಂಗೆಯೆ, ನಿನಗೆ ವಂದನೆಯು.

೧೭೨. ಅವಿದ್ಯಾರಹಿತಳೂ, ದುರ್ಗಾಸುರನಾಶಕಳೂ, ಚತುರಳೂ, ಸರ್ವೋತ್ತಮಳೂ, ಮೋಕ್ಷದಾಯಿನಿಯೂ ಆದ ನಿನಗೆ ನಮಸ್ಕಾರವು.

೧೭೩. ಗಂಗೆಯೇ, ನೀನು ನನ್ನ ಮುಂದೆಯೂ, ಹಿಂದೆಯೂ, ಎರಡು ಪಾರ್ಶ್ವಗಳಲ್ಲಿಯೂ ಇರು. ನಿನ್ನಲ್ಲಿ ನನ್ನ ಮನವು ಸ್ಥಿರಗೊಳ್ಳಲಿ.

೧೭೪. ಗಂಗೆಯೇ, ನೀನು ಆದಿ, ಮಧ್ಯ, ಅಂತ್ಯಗಳಲ್ಲಿರುವವಳು. ನೀನೇ ಮೂಲಪ್ರಕೃತಿಯೂ, ಪುರುಷೋತ್ತಮನೂ, ಶಿವನೂ, ಶಿವಶಕ್ತಿಯೂ ಆಗಿರುವೆ.''

೧೭೫. ಈ ಸ್ತೋತ್ರವನ್ನು ಶ್ರದ್ಧೆಯಿಂದ ಕೇಳುವವನೂ, ಹೇಳುವವನೂ, ಕಾಯಿಕ, ವಾಚಿಕ, ಮಾನಸಿಕ ರೂಪವಾದ ಹತ್ತು ಬಗೆಯ ಪಾಪಗಳಿಂದ ಮುಕ್ತನಾಗುವನು.

ರೋಗಸ್ಥೋ ರೋಗತೋ ಮುಚ್ಯೇದ್ವಿಪದ್ಭ್ಯಶ್ಚ ವಿಪದ್ಯುತಃ ।
ಮುಚ್ಯತೇ ಬಂಧನಾದ್ಬದ್ಧೋ ಭೀತೋ ಭೀತಃ ಪ್ರಮುಚ್ಯತೇ ॥ ೧೭೬ ॥
ಸರ್ವಾನ್ಕಾಮಾನವಾಪ್ನೋತಿ ಪ್ರೇತ್ಯ ಚ ತ್ರಿದಿವಂ ವ್ರಜೇತ್ ।
ದಿವ್ಯಂ ವಿಮಾನಮಾರುಹ್ಯ ದಿವ್ಯಸ್ತ್ರೀಪರಿವೀಜಿತಃ ॥ ೧೭೭ ॥
ಗೃಹೇಽಪಿ ಲಿಖಿತಂ ಯಸ್ಯ ಸದಾ ತಿಷ್ಠತಿ ಧಾರಿತಂ ।
ನಾಽಗ್ನಿಚೋರಭಯಂ ತಸ್ಯ ನ ಸರ್ಪಾದಿಭಯಂ ಕ್ವಚಿತ್ ॥ ೧೭೮ ॥
ಜ್ಯೇಷ್ಠೇ ಮಾಸೇ ಸಿತೇ ಪಕ್ಷೇ ದಶಮೀ ಹಸ್ತಸಂಯುತಾ ।
ಸಂಹರೇತ್ತ್ರಿವಿಧಂ ಪಾಪಂ ಬುಧವಾರೇಣ ಸಂಯುತಾ ॥ ೧೭೯ ॥
ತಸ್ಯಾಂ ದಶಮ್ಯಾಮೇತಚ್ಚ ಸ್ತೋತ್ರಂ ಗಂಗಾಜಲೇ ಸ್ಥಿತಃ ।
ಯಃ ಪಠೇದ್ದಶಕೃತ್ವಸ್ತು ದರಿದ್ರೋವಾಽಪಿ ಚಾಽಕ್ಷಮಃ ॥ ೧೮೦ ॥
ಸೋಽಪಿ ತತ್ಫಲಮಾಪ್ನೋತಿ ಗಂಗಾಂ ಸಂಪೂಜ್ಯ ಯತ್ನತಃ ।
ಪೂರ್ವೋಕ್ತೇನ ವಿಧಾನೇನ ಯತ್ಫಲಂ ಸಂಪ್ರಕೀರ್ತಿತಂ ॥ ೧೮೧ ॥
ಯಥಾ ಗೌರೀ ತಥಾ ಗಂಗಾ ತಸ್ಮಾದ್ಗೌರ್ಯಾಸ್ತು ಪೂಜನೇ ।
ಯೋ ವಿಧಿರ್ವಿಹಿತಃ ಸಮ್ಯಕ್ಸೋಽಪಿ ಗಂಗಾಪ್ರಪೂಜನೇ ॥ ೧೮೨ ॥
ಯಥಾಽಹಂ ತ್ವಂ ತಥಾ ವಿಷ್ಣೋ ಯಥಾ ತ್ವಂ ತು ತಥಾಹ್ಯುಮಾ ।
ಉಮಾ ಯಥಾ ತಥಾ ಗಂಗಾ ಚತೂರೂಪಂ ನ ಭಿದ್ಯತೇ ॥ ೧೮೩ ॥

---

೧೭೬. ರೋಗಿಯು ರೋಗದಿಂದಲೂ, ಆಪತ್ತನ್ನು ಹೊಂದಿದವನು ಆಪತ್ತಿನಿಂದಲೂ, ಬದ್ಧನಾದವನು ಬಂಧನದಿಂದಲೂ, ಭಯಗ್ರಸ್ತನು ಭಯದಿಂದಲೂ ಮುಕ್ತನಾಗುವನು.

೧೭೭. ಇಷ್ಟೆಯಲ್ಲದೆ ಅವನು ಸಕಲೇಷ್ಟಾರ್ಥಗಳನ್ನೂ ಹೊಂದುವನು. ಮಡಿದ ತರುವಾಯ ದಿವ್ಯವಿಮಾನವನ್ನೇರಿ ದಿವ್ಯಸ್ತ್ರೀಯರಿಂದ ಗಾಳಿಬೀಸಿಸಿಕೊಳ್ಳುತ್ತ ಸ್ವರ್ಗಕ್ಕೆ ತೆರಳುವನು.

೧೭೮. ಬರೆಯಲ್ಪಟ್ಟ ಈ ಸ್ತೋತ್ರಪುಸ್ತಕವು ಯಾವನ ಮನೆಯಲ್ಲಿರುವುದೊ, ಅವನಿಗೆ ಅಗ್ನಿ, ಕಳ್ಳ ಮತ್ತು ಸರ್ಪಗಳ ಭಯವಿರುವುದಿಲ್ಲ.

೧೭೯. ಜ್ಯೇಷ್ಠಮಾಸದ ಶುಕ್ಲಪಕ್ಷ ದಶಮೀ ಬುಧವಾರದ ದಿನವು ಹಸ್ತಾನಕ್ಷತ್ರದಿಂದ ಸಹಿತವಾದರೆ ಆ ದಿನವು ತ್ರಿವಿಧಪಾಪವನ್ನು ನಿವಾರಿಸುವುದು.

೧೮೦–೧೮೧. ಆ ದಿನ ಬಡವನಾಗಲಿ, ಅಸಮರ್ಥನಾಗಲಿ ಗಂಗಾಜಲದಲ್ಲಿ ನಿಂತು ಹಿಂದೆ ಹೇಳಿದ ಕ್ರಮದಿಂದ ಗಂಗೆಯನ್ನು ಪೂಜಿಸಿ ಈ ಸ್ತೋತ್ರವನ್ನು ಪಠಿಸಿದರೆ ಹಿಂದೆ ಹೇಳಿದ ಫಲವನ್ನೆಲ್ಲ ಪಡೆಯುವನು.

೧೮೨. ಗೌರೀಗಂಗೆಗಳಿಗೆ ಭೇದವಿಲ್ಲದಿರುವುದರಿಂದ ಗೌರೀಪೂಜಾವಿಧಿಯೇ ಗಂಗಾಪೂಜೆಗೆ ವಿಹಿತವಾಗಿರುವುದು.

೧೮೩. ಅಯ್ಯಾ ವಿಷ್ಣುವೆ! ನಾನು ಹೇಗೊ ನೀನೂ ಹಾಗೆಯೇ. ಪಾರ್ವತಿಯು

**ವಿಷ್ಣುರುದ್ರಾಂತರಂ ಚೈವ ಶ್ರೀಗೌರ್ಯೋರಂತರಂ ತಥಾ ।**
**ಗಂಗಾ ಗೌರ್ಯಂತರಂ ಚೈವ ಯೋ ಬ್ರೂತೇ ಮೂಢಧೀಸ್ತು ಸಃ ॥೧೮೪॥**

**ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಗಂಗಾಮಹಿಮಾನುವರ್ಣನಪೂರ್ವಕ ದಶಹರಾಸ್ತೋತ್ರಕಥನಂ" ನಾಮ ಸಪ್ತವಿಂಶೋಽಧ್ಯಾಯಃ**

---

ನಿನ್ನಹಾಗೆಯೇ, ಗಂಗೆಯು ಪಾರ್ವತಿಯಂತೆಯೇ. ಆದುದರಿಂದ ಈ ನಾಲ್ಕು ರೂಪಗಳಿಗೂ ಭೇಧವಿಲ್ಲ.

೧೮೪. ವಿಷ್ಣುರುದ್ರರಿಗೂ, ಲಕ್ಷ್ಮೀಪಾರ್ವತಿಯರಿಗೂ, ಗಂಗಾಗೌರಿಯರಿಗೂ ಭೇದವನ್ನು ಹೇಳುವವನು ಮೂಢನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ಗಂಗಾಮಹಿಮಾನುವರ್ಣನಪೂರ್ವಕ ದಶಹರಾಸ್ತೋತ್ರಕಥನ"ವೆಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟವಿಂಶೋಽಧ್ಯಾಯಃ

## ಗಂಗಾಮಹಿಮಾನುವರ್ಣನಂ

ಉಮೋವಾಚ :—

ಕಿಂಚಿತ್ಪ್ರಷ್ಟುಮನಾ ನಾಥ ಸ್ತ್ವ ಸಂದೇಹಾಽಪನುತ್ತಯೇ ।
ವದ ಖೇದೋ ಯದಿ ನ ತೇ ತ್ರಿಕಾಲಜ್ಞಾನಕೋವಿದ ॥ ೧ ॥
ತದಾ ಭಗೀರಥೋ ರಾಜಾ ಕ್ವ ಕ್ವ ಭಾಗೀರಥೀ ತದಾ ।
ಯದಾ ವಿಷ್ಣು ಸ್ತಪಸ್ತೇಪೇ ಚಕ್ರಪುಷ್ಕರಿಣೀ ತಟೇ ॥ ೨ ॥

ಶಿವ ಉವಾಚ :—

ಸಂದೇಹೋಽತ್ರ ನ ಕರ್ತವ್ಯೋ ವಿಶಾಲಾಕ್ಷಿ ಸದಾಽಮಲೇ ।
ಶ್ರುತೌ ಸ್ಮೃತೌ ಪುರಾಣೇಷು ಕಾಲತ್ರಯಮುದೀರ್ಯತೇ ॥ ೩ ॥
ಭೂತಂ ಭಾವಿ ಭವಚ್ಚಾಽಪಿ ಸಂಶಯಂ ಮಾ ವೃಥಾ ಕೃಥಾಃ ।
ಇತ್ಯುಕ್ತ್ವಾ ಪುನರಾಹೇಶೋ ಗಂಗಾಮಾಹಾತ್ಮ್ಯಮುತ್ತಮಂ ॥ ೪ ॥

ಅಗಸ್ತ್ಯ ಉವಾಚ :—

ಪಾರ್ವತೀನಂದನ ಪುನರ್ಮ್ಯನದ್ಯಾಃ ಪರಿತೋ ವದ ।
ಮಹಿಮೋಕ್ತೋ ಹರೌ ಯದ್ವದ್ದೇವದೇವೇನ ವೈ ತದಾ ॥ ೫ ॥

---

## ಕನ್ನಡದ ಅನುವಾದ

### ಗಂಗಾಮಹಿಮಾನುವರ್ಣನ

೧. ಪಾರ್ವತಿಯು ಕೇಳುತ್ತಾಳೆ:—ನಾಥ! ನನ್ನ ಸಂದೇಹನಿವೃತ್ತಿಗಾಗಿ ಒಂದು ವಿಷಯವನ್ನು ಕೇಳಬಯಸುವೆನು. ಎಲೈ ತ್ರಿಕಾಲಜ್ಞಾನಿಯೆ! ನಿನಗೆ ಆಯಾಸವಿಲ್ಲದಿದ್ದರೆ ಇದನ್ನು ಹೇಳು.

೨. ವಿಷ್ಣುವು ಚಕ್ರಪುಷ್ಕರಿಣೀತೀರದಲ್ಲಿ ತಪಸ್ಸನ್ನಾಚರಿಸುತ್ತಿದ್ದಾಗ ಭಗೀರಥನೂ ಗಂಗೆಯೂ ಎಲ್ಲಿದ್ದರು ?

೩–೪. ನಿರ್ದುಷ್ಟಳೂ, ವಿಶಾಲನಯನಳೂ ಆದ ಗೌರಿಯೆ! ಈ ವಿಷಯದಲ್ಲಿ ಸಂದೇಹಪಡಬೇಡ. ವೇದ, ಸ್ಮೃತಿ, ಪುರಾಣಗಳಲ್ಲಿ ಭೂತ, ಭವಿಷ್ಯತ್, ವರ್ತಮಾನಗಳೆಂಬ ಮೂರು ಕಾಲಗಳ ವಿಷಯಗಳೂ ಹೇಳಲ್ಪಟ್ಟವೆ. ಶಿವನು ಹೀಗೆ ಹೇಳಿ ಮತ್ತೆ ಉತ್ತಮವಾದ ಗಂಗಾಮಾಹಾತ್ಮ್ಯವನ್ನು ಹೇಳಿದನು.

೫. ಅಗಸ್ತ್ಯನು ಹೇಳುತ್ತಾನೆ:—ಎಲೈ ಸ್ಕಂದನೆ! ಮಹೇಶ್ವರನು ಹರಿಗೆ ಹೇಳಿದ ಗಂಗಾಮಾಹಾತ್ಮ್ಯವನ್ನು ಹೇಳು.

ಸ್ಕಂದ ಉವಾಚ:—

ಮುನೇऽತ್ರ ಮೈತ್ರಾವರುಣೇ ಯಥಾ ದೇವೇನ ಭಾಷಿತಂ ।
ಶೃಣು ತ್ರಿಪಥಗಾಮಿನ್ಯಾ ಮಾಹಾತ್ಮ್ಯಂ ಪಾತಕಾಪಹಂ ॥ ೬ ॥
ತ್ರಿಸ್ರೋತಸಂ ಸಮಾಸಾದ್ಯ ಸಕೃತ್ಪಿಂಡಾನ್ ದದಾತಿ ಯಃ ।
ಉದ್ಧೃತಾಃ ಪಿತರಸ್ತೇನ ಭವಾಂಭೋಧೇಸ್ತಿಲೋದಕೈಃ ॥ ೭ ॥
ಯಾವಂತಶ್ಚ ತಿಲಾ ಮರ್ತ್ಯೈರ್ಗೃಹೀತಾಃ ಪಿತೃಕರ್ಮಣಿ ।
ತಾವದ್ವರ್ಷಸಹಸ್ರಾಣಿ ಪಿತರಃ ಸ್ವರ್ಗವಾಸಿನಃ ॥ ೮ ॥
ದೇವಾಃ ಸ ಪಿತರೋ ಯಸ್ಮಾದ್ಗಂಗಾಯಾಂ ಸರ್ವದಾ ಸ್ಥಿತಾಃ ।
ಆವಾಹನಂ ವಿಸರ್ಗಂ ಚ ತೇಷಾಂ ತತ್ರ ತತೋ ನಹಿ ॥ ೯ ॥
ಪಿತೃವಂಶೇ ಮೃತಾ ಯೇ ಚ ಮಾತೃವಂಶೇ ತಥೈವ ಚ ।
ಗುರುಶ್ವಶುರಬಂಧೂನಾಂ ಯೇ ಚಾऽನ್ಯೇ ಬಾಂಧವಾ ಮೃತಾಃ ॥ ೧೦ ॥
ಅಜಾತದಂತಾ ಯೇ ಕೇಚಿದ್ಯೇಚ ಗರ್ಭೇ ಪ್ರಪೀಡಿತಾಃ ।
ಅಗ್ನಿವಿದ್ಯುಚ್ಚೋರಹತಾ ವ್ಯಾಘ್ರದಂಷ್ಟ್ರಿಭಿರೇವ ಚ ॥ ೧೧ ॥
ಉದ್ಬಂಧನಮೃತಾ ಯೇ ಚ ಪತಿತಾ ಆತ್ಮಘಾತಕಾಃ ।
ಆತ್ಮವಿಕ್ರಯಿಣಶ್ಚೋರಾ ಯೇ ತಥಾऽಯಾಜ್ಯಯಾಜಕಾಃ ॥ ೧೨ ॥
ರಸವಿಕ್ರಯಿಣೋ ಯೇ ಚ ಯೇಚಾऽನ್ಯೇ ಪಾಪರೋಗಿಣಃ ।
ಅಗ್ನಿದಾ ಗರದಾಶ್ಚೈವ ಗೋಘ್ನಾಶ್ಚೈವ ಸ್ವವಂಶಜಾಃ ॥ ೧೩ ॥

---

೬. ಸ್ಕಂದನು ಹೇಳುತ್ತಾನೆ:—ಅಗಸ್ತ್ಯನೆ! ಮಹೇಶ್ವರನು ಹೇಳಿದ ಭಾಗೀರಥಿಯ ಮಾಹಾತ್ಮ್ಯವನ್ನು ಕೇಳು. ಇದು ಸಕಲ ಪಾಪನಿವಾರಕವಾದುದು.

೭. ಗಂಗೆಯಲ್ಲಿ ಒಂದು ಸಾರಿ ಪಿಂಡಪ್ರದಾನಮಾಡುವವನು ತಿಲೋದಕದಿಂದಲೇ ಪಿತೃಗಳನ್ನು ಸಂಸಾರಸಮುದ್ರದಿಂದ ಉದ್ಧರಿಸುವನು.

೮–೯. ಮಾನವರು ಪಿತೃಕಾರ್ಯಕ್ಕೆ ಉಪಯೋಗಿಸಿದ ತಿಲಗಳ ಸಂಖ್ಯೆಯೆಷ್ಟೋ ಅಷ್ಟು ಸಾವಿರ ವರ್ಷಗಳ ಕಾಲ ಅವರ ಪಿತೃಗಳು ಸ್ವರ್ಗದಲ್ಲಿ ವಾಸಿಸುವರು. ದೇವತೆಗಳೂ ಪಿತೃಗಳೂ ಗಂಗೆಯಲ್ಲಿ ಯಾವಾಗಲೂ ನೆಲಸಿರುವುದರಿಂದ ಅಲ್ಲಿ ಅವರ ಆವಾಹನೆ ವಿಸರ್ಜನೆಗಳನ್ನು ಮಾಡಬೇಕಾಗಿರುವುದಿಲ್ಲ.

೧೦–೨೧. ಪಿತೃಮಾತೃವಂಶಗಳಲ್ಲಿ ಮೃತರಾದವರೂ, ಶ್ವಶುರಬಾಂಧವರೂ, ಹಲ್ಲು ಹುಟ್ಟದಿರುವಾಗಲೆ ಮೃತರಾದವರೂ, ಗರ್ಭದಲ್ಲಿಯೇ ಮಡಿದವರೂ, ಬೆಂಕಿ, ಮಿಂಚು, ಕಳ್ಳ, ಹುಲಿ, ಹಂದಿಗಳಿಂದ ಮೃತರಾದವರೂ, ನೇಣುಹಾಕಿಕೊಂಡು ಮಡಿದವರೂ, ಪತಿತರೂ, ಆತ್ಮಹತ್ಯೆಮಾಡಿಕೊಂಡವರೂ, ತಮ್ಮನ್ನು ತಾವೇ ಮಾರಿಕೊಂಡವರೂ, ಕಳ್ಳರೂ, ಯಾಗಮಾಡಲನರ್ಹರಿಂದ ಯಾಗಮಾಡಿಸಿದವರೂ, ರಸಪದಾರ್ಥಗಳನ್ನು ಮಾರುವವರೂ, ಕೆಟ್ಟರೋಗವುಳ್ಳವರೂ, ಬೆಂಕಿ

ಅಸಿಪತ್ರವನೇ ಯೇ ಚ ಕುಂಭೀಪಾಕೇ ಚ ಯೇ ಗತಾಃ ।
ರೌರವೇಽಪ್ಯಂಧತಾಮಿಸ್ರೇ ಕಾಲಸೂತ್ರೇ ಚ ಯೇ ಗತಾಃ ॥ ೧೪ ॥
ಜಾತ್ಯಂತರಸಹಸ್ರೇಷು ಭ್ರಾಮ್ಯಂತೇ ಯೇ ಸ್ವಕರ್ಮಭಿಃ ।
ಯೇ ತು ಪಕ್ಷಿಮೃಗಾದೀನಾಂ ಕೀಟವೃಕ್ಷಾದಿವೀರುಧಾಂ ॥ ೧೫ ॥
ಯೋನಿಂ ಗತಾಸ್ತ್ವಸಂಖ್ಯಾತಾಃ ಸಂಖ್ಯಾತಾನಾಮಶೋಭನಾಃ ।
ಪ್ರಾಪಿತಾ ಯಮಲೋಕಂ ತು ಸುಘೋರೈರ್ಯಮಕಿಂಕರೈಃ ॥ ೧೬ ॥
ಯೇಽಬಾಂಧವಾ ಬಾಂಧವಾ ವಾ ಯೇಽನ್ಯಜನ್ಮನಿ ಬಾಂಧವಾಃ ।
ಯೇಽಪಿ ಚಾಽಜ್ಞಾತನಾಮಾನೋ ಯೇಚಾಽಪುತ್ರಾಃ ಸ್ವಗೋತ್ರಜಾಃ॥೧೭॥
ವಿಷೇಣಚ ಮೃತಾ ವೈ ಯೇ ಯೇ ವೈ ಶೃಂಗಿಭಿರಾಹತಾಃ ।
ಕೃತಘ್ನಾಶ್ಚ ಗುರುಘ್ನಾಶ್ಚ ಯೇ ಚ ಮಿತ್ರದ್ರುಹಸ್ತಥಾ ॥ ೧೮ ॥
ಸ್ತ್ರೀಬಾಲಘಾತಕಾ ಯೇ ಚ ಯೇ ಚ ವಿಶ್ವಾಸಘಾತಕಾಃ ।
ಅಸತ್ಯಹಿಂಸಾನಿರತಾಃ ಸದಾ ಪಾಪರತಾಶ್ಚ ಯೇ ॥ ೧೯ ॥
ಅಶ್ವವಿಕ್ರಯಿಣೋ ಯೇ ಚ ಪರದ್ರವ್ಯಹರಾಶ್ಚ ಯೇ ।
ಅನಾಥಾಃ ಕೃಪಣಾ ದೀನಾ ಮಾನುಷ್ಯಂ ಪ್ರಾಪ್ತುಮಕ್ಷಮಾಃ ॥ ೨೦ ॥
ತರ್ಪಿತಾ ಜಾಹ್ನವೀತೋಯೈರ್ನರೇಣ ವಿಧಿನಾ ಸಕೃತ್ ।
ಪ್ರಯಾಂತಿ ಸ್ವರ್ಗತಿಂ ತೇಽಪಿ ಸ್ವರ್ಗಿಣೋ ಮುಕ್ತಿಮಾಪ್ನುಯುಃ ॥ ೨೧ ॥

---

ಯನ್ನು ಹಚ್ಚಿದವರೂ, ವಿಷವನ್ನಿತ್ತವರೂ, ಗೋಹತ್ಯೆಮಾಡಿದವರೂ, ದುಷ್ಕುಲೋತ್ಪನ್ನರೂ, ಅಸಿಪತ್ರವನ, ಕುಂಭೀಪಾಕ, ರೌರವ, ಅಂಧತಾಮಿಸ್ರ, ಕಾಲಸೂತ್ರ ನರಕಗಳಲ್ಲಿ ಬಿದ್ದಿರುವವರೂ, ತಮ್ಮ ಕರ್ಮಾನುಸಾರ ಅನೇಕ ಯೋನಿಗಳಲ್ಲಿ ಹುಟ್ಟುತ್ತಿರುವವರೂ, ಪಕ್ಷಿ, ಮೃಗ, ಕೀಟ, ಮರ, ಬಳ್ಳಿಗಳ ಜಾತಿಯಲ್ಲಿ ಜನಿಸಿದವರೂ, ಘೋರಯಮಕಿಂಕರರಿಂದ ಯಮಲೋಕಕ್ಕೆ ಒಯ್ಯಲ್ಪಟ್ಟವರೂ, ಬಾಂಧವರೂ, ಬಂಧುಗಳಲ್ಲದವರೂ, ಇತರ ಜನ್ಮಗಳಲ್ಲಿ ಬಂಧುಗಳಾದವರೂ, ತಿಳಿಯಲ್ಪಡದ ಹೆಸರುಳ್ಳವರೂ, ಮಕ್ಕಳಿಲ್ಲದವರೂ, ತನ್ನ ಗೋತ್ರದಲ್ಲಿ ಜನಿಸಿದವರೂ, ವಿಷಜಂತುಗಳಿಂದಲೂ, ಕೊಂಬುಗಳುಳ್ಳ ಎಮ್ಮೆ ಮೊದಲಾದುವುಗಳಿಂದಲೂ ಕೊಲ್ಲಲ್ಪಟ್ಟವರೂ, ಕೃತಘ್ನರೂ, ಗುರುಹತ್ಯೆಮಾಡಿದವರೂ, ಮಿತ್ರದ್ರೋಹಿಗಳೂ, ಸ್ತ್ರೀಬಾಲಕರನ್ನು ಕೊಂದವರೂ, ವಿಶ್ವಾಸಘಾತಕರೂ, ಸುಳ್ಳು ಮತ್ತು ಹಿಂಸೆಗಳಲ್ಲಿಯೆ ಆಸಕ್ತರೂ, ಯಾವಾಗಲೂ ಪಾಪನಿರತರೂ, ಕುದುರೆಗಳನ್ನು ಮಾರುವವರೂ, ಪರರ ದ್ರವ್ಯವನ್ನು ಅಪಹರಿಸುವವರೂ, ಅನಾಥರೂ, ಕೃಪಣರೂ, ಮನುಷ್ಯಜನ್ಮವನ್ನು ಹೊಂದಲು ಅಸಮರ್ಥರೂ ಈ ಎಲ್ಲರೂ, ಗಂಗೆಯ ನೀರಿನಲ್ಲಿ ಒಂದು ಸಾರಿ ವಿಧಿಯಂತೆ ತರ್ಪಣ ಗೈಯುವುದರಿಂದಲೇ ಸ್ವರ್ಗವನ್ನು ಸೇರಿ ಮುಕ್ತರಾಗುವರು.

ಏತಾನ್ಮಂತ್ರಾನ್ಸಮುಚ್ಚಾರ್ಯ ಯಃ ಕುರ್ಯಾತ್ಪಿತೃತರ್ಪಣಂ ।
ಶ್ರಾದ್ಧಂ ಪಿಂಡಪ್ರದಾನಂ ಚ ಸ ವಿಧಿಜ್ಞ ಇಹೋಚ್ಯತೇ ॥ ೨೨ ॥
ಕಾಮಪ್ರದಾನಿ ತೀರ್ಥಾನಿ ತ್ರೈಲೋಕ್ಯೇ ಯಾನಿ ಕಾನಿಚಿತ್ ।
ತಾನಿ ಸರ್ವಾಣಿ ಸೇವಂತೇ ಕಾಶ್ಯಾಮುತ್ತರವಾಹಿನೀಂ ॥ ೨೩ ॥
ಸ್ವಃಸಿಂಧುಃ ಸರ್ವತಃ ಪುಣ್ಯಾ ಬ್ರಹ್ಮಹತ್ಯಾಪಹಾರಿಣೀ ।
ಕಾಶ್ಯಾಂ ವಿಶೇಷತೋ ವಿಷ್ಣೋ ಯತ್ರ ಚೋತ್ತರವಾಹಿನೀ ॥ ೨೪ ॥
ಗಾಯಂತಿ ಗಾಥಾಮೇತಾಂ ವೈ ದೇವರ್ಷಿಪಿತರೋಗಣಾಃ ।
ಅಪಿ ದೃಗ್ಗೋಚರಾ ನಸ್ಸ್ಯಾತ್ಕಾಶ್ಯಾಮುತ್ತರವಾಹಿನೀ ॥ ೨೫ ॥
ಯತ್ರತ್ಯಾಮೃತಸಂತೃಪ್ತಾಸ್ತಾಪತ್ರಿತಯವರ್ಜಿತಾಃ ।
ಸ್ಯಾಮತ್ವಮೃತಮೇವಾದ್ಧಾ ವಿಶ್ವನಾಥಪ್ರಸಾದತಃ ॥ ೨೬ ॥
ಗಂಗೈವ ಕೇವಲಾ ಮುಕ್ತ್ಯೈ ನಿರ್ಣೀತಾ ಪರಿತೋ ಹರೇ ।
ಅವಿಮುಕ್ತೇ ವಿಶೇಷೇಣ ಮಮಾಧಿಷ್ಠಾನಗೌರವಾತ್ ॥ ೨೭ ॥
ಜ್ಞಾತ್ವಾ ಕಲಿಯುಗಂ ಘೋರಂ ಗಂಗಾಭಕ್ತಿಃ ಸುಗೋಪಿತಾ ।
ನ ವಿದಂತಿ ಜನಾ ಗಂಗಾಂ ಮುಕ್ತಿಮಾರ್ಗೈಕದಾಯಿಕಾಂ ॥ ೨೮ ॥

---

೨೨. ಈ ಮಂತ್ರಗಳನ್ನುಚ್ಚರಿಸಿ ಪಿತೃತರ್ಪಣ, ಶ್ರಾದ್ಧ, ಪಿಂಡಪ್ರದಾನಗಳನ್ನು ಮಾಡಿದವನು ವಿಧಿಯನ್ನರಿತವನೆಂದೆನಿಸುವನು.

೨೩. ಮೂರು ಲೋಕಗಳಲ್ಲಿರುವ ಇಷ್ಟಾರ್ಥಗಳನ್ನು ಕೊಡುವ ಸಮಸ್ತ ತೀರ್ಥಗಳೂ ಕಾಶಿಯಲ್ಲಿರುವ ಗಂಗೆಯನ್ನು ಸೇವಿಸುವುವು.

೨೪. ಎಲೈ ವಿಷ್ಣುವೆ! ಪುಣ್ಯಕರವಾದ ದೇವಗಂಗೆಯು ಎಲ್ಲೆಡೆಯಲ್ಲಿಯೂ ಬ್ರಹ್ಮಹತ್ಯೆಯನ್ನು ನಿವಾರಿಸುವುದು. ಕಾಶಿಯಲ್ಲಿ ಉತ್ತರದಿಕ್ಕಿಗೆ ಹರಿಯುವ ಆ ಗಂಗೆಯು ಇನ್ನೂ ವಿಶೇಷವಾಗಿರುವುದು.

೨೫-೨೬. ದೇವರ್ಷಿಪಿತೃಗಣಗಳು, "ಕಾಶಿಯಲ್ಲಿ ಉತ್ತರವಾಹಿನಿಯಾದ ಗಂಗೆಯನ್ನು ನಾವು ನೋಡಿಯೇವೇ? ಗಂಗೆಯ ಜಲದಿಂದ ತೃಪ್ತಿಗೊಂಡು ತಾಪತ್ರಯಮುಕ್ತರಾಗಿ ವಿಶ್ವನಾಥನ ಅನುಗ್ರಹದಿಂದ ನಾವು ಮೋಕ್ಷವನ್ನು ಹೊಂದಿಯೇವೆ?" ಎಂಬ ಈ ಗಾಥೆಯನ್ನು ಹಾಡುತ್ತಿರುವರು.

೨೭. ಹರಿಯೆ! ಅವಿಮುಕ್ತಕ್ಷೇತ್ರದಲ್ಲಿ ನಾನು ವಾಸವಾಗಿರುವುದರಿಂದ ಗಂಗೆಯೇ ಮೋಕ್ಷಪ್ರದವಾದುದೆಂದು ನಿಶ್ಚಿತವಾಗಿರುವುದು.

೨೮. ಕಲಿಯುಗವು ಘೋರವಾದುದೆಂದರಿತು ಗಂಗೆಯ ಭಕ್ತಿಯು ಗುಪ್ತವಾಗಿಡಲ್ಪಟ್ಟಿರುವುದು. ಜನರು ಮುಕ್ತಿಮಾರ್ಗವನ್ನು ಕೊಡುವ ಗಂಗೆಯನ್ನು ಹೊಂದುವುದಿಲ್ಲ.

ಅನೇಕಜನ್ಮನಿಯುತಂ ಭ್ರಾಮ್ಯಮಾಣಸ್ತು ಯೋನಿಷು ।
ನಿರ್ವೃತಿಂ ಪ್ರಾಪ್ನುಯಾತ್ಕೋಽತ್ರ ಜಾಹ್ನವೀಭಜನಂ ವಿನಾ ॥ ೨೯ ॥
ನರಾಣಾಮಲ್ಪಬುದ್ಧೀನಾಮೇನೋವಿಕ್ಷಿಪ್ತಚೇತಸಾಂ ।
ಗಂಗೈವ ಪರಮಂ ವಿಷ್ಣೋ ಭೇಷಜಂ ಭವರೋಗಿಣಾಂ ॥ ೩೦ ॥
ಖಂಡಸ್ಫುಟಿತಸಂಸ್ಕಾರಂ ಗಂಗಾತೀರೇ ಕರೋತಿ ಯಃ ।
ಮಮ ಲೋಕೇ ಚಿರಂ ಕಾಲಂ ತಸ್ಯಾಕ್ಷಯಸುಖಂ ಹರೇ ॥ ೩೧ ॥
ಗಂತುಮುದ್ದಿಶ್ಯ ಯೋ ಗಂಗಾಂ ಪರಾರ್ಥಂ ಸ್ವಾರ್ಥಮೇವ ವಾ ।
ನ ಗಚ್ಛತಿ ಪರಂ ಮೋಹಾತ್ ಸಪತೇತ್ಪಿತೃಭಿಃ ಸಹ ॥ ೩೨ ॥
ಸರ್ವಾಣಿ ಯೇಷಾಂ ಗಾಂಗೇಯೈಸ್ತೋಯೈಃ ಕೃತ್ಯಾನಿ ದೇಹಿನಾಂ ।
ಭೂಮಿಸ್ಥಾ ಅಪಿ ತೇ ಮರ್ತ್ಯಾ ಅಮರ್ತ್ಯಾ ಏವ ವೈ ಹರೇ ॥ ೩೩ ॥
ಚರಮೇಽಪಿ ವಯೋಭಾಗೇ ಸ್ವಃಸಿಂಧುಂ ಯೋ ನಿಷೇವತೇ ।
ಕೃತ್ವಾಪ್ಯೇನಾಂಸಿ ಬಹುಶಃ ಸೋಽಪಿ ಯಾಯಾಚ್ಛುಭಾಂ ಗತಿಂ ॥ ೩೪ ॥
ಯಾವದಸ್ಥಿ ಮನುಷ್ಯಾಣಾಂ ಗಂಗಾತೋಯೇಷು ತಿಷ್ಠತಿ ।
ತಾವದಬ್ದಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥ ೩೫ ॥

---

೨೯. ನಾನಾ ಜಾತಿಗಳಲ್ಲಿ ಅನೇಕ ಜನ್ಮಗಳನ್ನೆತ್ತಿ ಅಲೆಯುತ್ತಿರುವ ಜಂತುಗಳು ಗಂಗೆಯ ಸೇವನೆಯನ್ನು ಬಿಟ್ಟರೆ ಮೋಕ್ಷವನ್ನು ಹೊಂದುವುದೆಲ್ಲಿ?

೩೦. ಅಲ್ಪಬುದ್ಧಿಯುಳ್ಳವರೂ, ಪಾಪಿಷ್ಠರೂ, ಸಂಸಾರವೆಂಬ ರೋಗವುಳ್ಳವರೂ ಆದ ಮಾನವರಿಗೆ ಗಂಗೆಯೇ ಉತ್ತಮೌಷಧವು.

೩೧. ಹರಿಯೆ! ಗಂಗಾತೀರದಲ್ಲಿ ದೇವಾಲಯಾದಿಗಳ ಜೀರ್ಣೋದ್ಧಾರವನ್ನು ಮಾಡುವ ಮಾನವರು ನನ್ನ ಲೋಕದಲ್ಲಿ ಬಹುಕಾಲ ವಾಸಮಾಡಿ ಶಾಶ್ವತಸುಖವನ್ನು ಪಡೆಯುವರು.

೩೨. ತನಗಾಗಲಿ, ಪರರಿಗಾಗಲಿ ಗಂಗಾಯಾತ್ರೆಯನ್ನು ಮಾಡಲುದ್ದೇಶಿಸಿ ಅಜ್ಞಾನದಿಂದ ಅದನ್ನು ನೆರವೇರಿಸದ ಮಾನವನು ಪಿತೃಗಳೊಡನೆ ಪತಿತನಾಗುವನು.

೩೩. ಹರಿಯೆ! ನಿತ್ಯನೈಮಿತ್ತಿಕವಾದ ಸಕಲಕಾರ್ಯಗಳನ್ನೂ ಗಂಗಾಜಲದಿಂದಲೇ ಮಾಡುವ ನರರು ಭೂಲೋಕದಲ್ಲಿ ವಾಸಿಸುತ್ತಿದ್ದರೂ ದೇವತೆಗಳೇ ಆಗಿರುವರು.

೩೪. ಅನೇಕ ಪಾಪಗಳನ್ನೆಸಗಿದ್ದರೂ ಅಂತ್ಯವಯಸ್ಸಿನಲ್ಲಿ ಗಂಗೆಯನ್ನು ಸೇವಿಸಿದವನು ಶುಭಗತಿಯನ್ನು ಹೊಂದುವನು.

೩೫. ಮನುಷ್ಯರ ಮೂಳೆಯು ಮಂದಾಕಿನಿಯ ನೀರಿನಲ್ಲಿರುವರೆಗೂ ಅವರು ಅನೇಕ ಸಾವಿರ ವರ್ಷಗಳಕಾಲ ಸ್ವರ್ಗಲೋಕದಲ್ಲಿ ಪೂಜ್ಯರಾಗುವರು.

ವಿಷ್ಣುರುವಾಚ :—
ದೇವದೇವ ಜಗನ್ನಾಥ ಜಗತಾಂ ಹಿತಕೃತ್ಪ್ರಭೋ ।
ಕೀಕಸಂ ಚೇತ್ಪತೇದ್ದೈವಾದ್ದುರ್ವೃತ್ತಸ್ಯ ದುರಾತ್ಮನಃ ॥ ೩೬ ॥
ಜಲೇ ದ್ಯುನದ್ಯಾ ನಿಷ್ಪಾಪೇ ಕಥಂ ತಸ್ಯ ಪರಾ ಗತಿಃ ।
ಅಪಮೃತ್ಯುವಿಪನ್ನಸ್ಯ ತದೀಶ ವಿನಿವೇದ್ಯತಾಂ ॥ ೩೭ ॥
ಮಹೇಶ್ವರ ಉವಾಚ :—
ಅತ್ರಾರ್ಥೇ ಕಥಯಿಷ್ಯಾಮಿ ಪುರಾವೃತ್ತಮಧೋಕ್ಷಜ ।
ಶೃಣುಷ್ವೈಕಮನಾ ವಿಷ್ಣೋ ವಾಹೀಕಸ್ಯ ದ್ವಿಜನ್ಮನಃ ॥ ೩೮ ॥
ಪುರಾ ಕಲಿಂಗವಿಷಯೇ ದ್ವಿಜೋ ಲವಣವಿಕ್ರಯೀ ।
ಸಂಧ್ಯಾಸ್ನಾನವಿಹೀನಶ್ಚ ವೇದಾಽಕ್ಷರವಿವರ್ಜಿತಃ ॥ ೩೯ ॥
ವಾಹೀಕೋ ನಾಮತೋ ಯಜ್ಞಸೂತ್ರಮಾತ್ರಪರಿಗ್ರಹಃ ।
ಪರಿಗ್ರಹಶ್ಚ ತಸ್ಯಾಸೀತ್ಕೌವಿಂದೀ ವಿಧವಾ ನವಾ ॥ ೪೦ ॥
ದುರ್ಭಿಕ್ಷಪೀಡಿತೇನಾಽಥ ವೃಷಲೀಪತಿನಾ ವಿನಾ ।
ಪ್ರಾಣಾಧಾರಂ ತದಾ ತೇನ ದೇಶಾದ್ದೇಶಾಂತರಂ ಯಯೌ ॥ ೪೧ ॥
ಮಧ್ಯೇಽಥ ದಂಡಕಾಽರಣ್ಯಂ ಕ್ಷುತ್ಕ್ಷಾಮಃ ಸಂಗವರ್ಜಿತಃ ।
ವ್ಯಾಘ್ರೇಣ ಘಾತಿತಸ್ತತ್ರ ನರಮಾಂಸಪ್ರಿಯೇಣ ಸಃ ॥ ೪೨ ॥

---

೩೬–೩೭. ವಿಷ್ಣುವು ಕೇಳುತ್ತಾನೆ:— ಜಗದೊಡೆಯನೂ, ಪ್ರಪಂಚಕ್ಕೆ ಹಿತವನ್ನುಂಟುಮಾಡುವವನೂ ಆದ ಮಹೇಶ್ವರನೆ! ದುರ್ನಡತೆಯುಳ್ಳವನೂ, ದುರಾತ್ಮನೂ, ಅಪಮೃತ್ಯುವಿನಿಂದ ಮೃತನೂ ಆದ ಮಾನವನ ಮೂಳೆಯು ದೈವವಶದಿಂದ ಪವಿತ್ರವಾದ ಗಂಗೆಯ ನೀರಿನಲ್ಲಿ ಬಿದ್ದರೆ ಅವನಿಗೆ ಹೇಗೆ ಸದ್ಗತಿಯಾಗುವುದು? ಅದನ್ನು ನನಗೆ ತಿಳಿಸು.

೩೮. ಮಹೇಶ್ವರನು ಹೇಳುತ್ತಾನೆ:—ವಿಷ್ಣುವೆ! ಈ ವಿಷಯದಲ್ಲಿ ಹಿಂದೆ ನಡೆದ ವಾಹೀಕನೆಂಬ ಓರ್ವ ಬ್ರಾಹ್ಮಣನ ಕಥೆಯನ್ನು ಹೇಳುವೆನು. ಇದನ್ನು ಸ್ಥಿರಮನಸ್ಸಿನಿಂದ ಕೇಳು.

೩೯–೪೦. ಹಿಂದೆ ಕಲಿಂಗದೇಶದಲ್ಲಿ ಉಪ್ಪನ್ನು ಮಾರುವವನೂ, ವೇದಾಕ್ಷರಹೀನನೂ, ಯಜ್ಞೋಪವೀತವನ್ನು ಮಾತ್ರ ಧರಿಸಿದವನೂ ಆದ ವಾಹೀಕನೆಂಬ ಓರ್ವ ದ್ವಿಜನಿದ್ದನು. ಅವನಿಗೆ ನೇಯ್ಗೆಯವರ ತರುಣ ವಿಧವೆಯು ಪತ್ನಿಯಾಗಿದ್ದಳು.

೪೧. ಬಳಿಕ ಆ ಶೂದ್ರಾಂಗನೆಯು ಪ್ರಾಣಧಾರಣೋಪಾಯವಿಲ್ಲದೆ ದುರ್ಭಿಕ್ಷದಿಂದ ಪೀಡಿತನಾದ ಆ ಪತಿಯೊಡನೆ ದೇಶದೇಶಗಳನ್ನೂ ಸುತ್ತಿದಳು.

೪೨. ದಂಡಕಾರಣ್ಯದ ಮಧ್ಯದಲ್ಲಿ ನರಮಾಂಸದಲ್ಲಿ ಪ್ರೀತಿಯುಳ್ಳ ಒಂದು

ತಸ್ಯ ವಾಮಪದಂ ಗೃಧ್ರೋ ಗೃಹೀತ್ವೋದಪತತ್ತತಃ ।
ಮಾಂಸಾಶಿನಾಽನ್ಯಗೃಧ್ರೇಣ ತಸ್ಯ ಯುದ್ಧಮಭೂದ್ದಿವಿ ॥ ೪೩ ॥
ಗೃಧ್ರಯೋರಾಮಿಷಂ ಗೃಧ್ನ್ವೋಃಪರಸ್ಪರಜಯೈಷಿಣೋಃ ।
ಅಪಾಪತತ್ಪಾದಗುಲ್ಕಂ ಕಂಕಚಂಚೂಪುಟಾತ್ತದಾ ॥ ೪೪ ॥
ತಸ್ಯ ವಾಹೀಕವಿಪ್ರಸ್ಯ ವ್ಯಾಘ್ರವ್ಯಾಪಾದಿತಸ್ಯ ಹ ।
ಮಧ್ಯೇಗಂಗಂ ದೈವಯೋಗಾದಪತದ್ದ್ವಂದಕಾರಿಣೋಃ ॥ ೪೫ ॥
ಯದ್ವೈವ ಹತವಾನ್ವ್ಯಾಘ್ರೋ ತಂ ವಾಹೀಕಮರಣ್ಯಗಂ ।
ತಸ್ಮಿನ್ನೇವ ಕ್ಷಣೇ ಬದ್ಧಃ ಸ ಪಾಶೈಃ ಕ್ರೂರಕಿಂಕರೈಃ ॥ ೪೬ ॥
ಕಶಾಭಿರ್ಘಾತಿತೋಽತ್ಯಂತಮಾರಾಭಿಃ ಪರಿತೋದಿತಃ ।
ವಮನ್ರುಧಿರಮಾಸ್ಯೇನ ನೀತಸ್ತೈಃ ಸ ಯಮಾಗ್ರತಃ ॥ ೪೭ ॥
ಆಪೃಚ್ಛಿ ಧರ್ಮರಾಜೇನ ಚಿತ್ರಗುಪ್ತೋಽಥ ಮಾಪತೇ ।
ಧರ್ಮಾಽಧರ್ಮಂ ವಿಚಾರ್ಯಾಽಸ್ಯ ಕಥಯಾಶು ದ್ವಿಜನ್ಮನಃ ॥ ೪೮ ॥
ವೈವಸ್ವತೇನ ಪೃಷ್ಟೋಽಥ ಚಿತ್ರಗುಪ್ತೋ ವಿಚಿತ್ರಧೀಃ ।
ಸರ್ವದಾ ಸರ್ವಜಂತೂನಾಂ ವೇದಿತಾ ಸರ್ವಕರ್ಮಣಾಂ ॥ ೪೯ ॥

---

ಹುಲಿಯು ಸಹಾಯಕರಿಲ್ಲದವನೂ, ಹಸಿವಿನಿಂದ ಕೃಶನೂ ಆದ ಆ ವಾಹೀಕನನ್ನು ಕೊಂದಿತು.

೪೩–೪೬. ಅವನ ಎಡಗಾಲನ್ನು ಒಂದು ಹದ್ದು ಹಿಡಿದುಕೊಂಡು ಮೇಲಕ್ಕೆ ಹಾರಿಹೋಗುತ್ತಿರಲು ಮತ್ತೊಂದು ಹದ್ದು ಆದರೊಡನೆ ಆಕಾಶದಲ್ಲಿ ಕಾಳಗ ಮಾಡಿತು. ಮಾಂಸದಲ್ಲಿ ಆಸೆಯುಳ್ಳ ಆ ಹದ್ದುಗಳು ಒಂದನ್ನೊಂದು ಜಯಿಸಬೇಕೆಂಬ ಆಶೆಯಿಂದ ಜಗಳವಾಡುತ್ತಿರಲು ಆ ಹದ್ದಿನ ಕೊಕ್ಕಿನಿಂದ ದೈವವಶದಿಂದ ಹುಲಿಯಿಂದ ಮೃತನಾದ ಆ ವಾಹೀಕನ ಕಾಲಿನ ಗಂಟು ಗಂಗೆಯಲ್ಲಿ ಬಿದ್ದಿತು. ಹುಲಿಯು ಅರಣ್ಯದಲ್ಲಿರುವ ಆ ವಾಹೀಕನನ್ನು ಕೊಲ್ಲಲು ಅದೇ ಸಮಯದಲ್ಲಿ ಪಾಶದಿಂದ ಸಹಿತರಾದ ಯಮಭಟರು ಅವನನ್ನು ಕಟ್ಟಿದರು.

೪೭. ಆ ಯಮಭಟರು ಮರ್ಮವನ್ನು ಭೇದಿಸುವ ಛಾಟಿಯಿಂದ ಅವನನ್ನು ಹೊಡೆದು ರಕ್ತವನ್ನು ಕಾರುತ್ತಿರುವ ಆ ಬ್ರಾಹ್ಮಣನನ್ನು ಯಮನ ಮುಂದೆ ತೆಗೆದುಕೊಂಡುಹೋಗಿ ನಿಲ್ಲಿಸಿದರು.

೪೮. ತರುವಾಯ ಯಮನು ಚಿತ್ರಗುಪ್ತನನ್ನು ಕುರಿತು " ಈ ಬ್ರಾಹ್ಮಣನ ಧರ್ಮಾಧರ್ಮವನ್ನು ವಿಚಾರಿಸಿ ಶೀಘ್ರವಾಗಿ ಹೇಳು " ಎಂದು ಕೇಳಿದನು.

೪೯–೫೦. ಯಮನು ಹೀಗೆ ಕೇಳಲು, ವಿಚಿತ್ರಬುದ್ಧಿಯುಳ್ಳವನೂ, ಸಮಸ್ತ ಪ್ರಾಣಿಗಳ ಸಕಲ ಕರ್ಮಗಳನ್ನು ಅರಿತವನೂ ಆದ ಚಿತ್ರಗುಪ್ತನು ಆ ಯಮ

ಜಗಾದ ಯಮುನಾಬಂಧುಂ ವಾಹೀಕಸ್ಯ ದ್ವಿಜನ್ಮನಃ ।
ಜನ್ಮಕರ್ಮದಿನಾರಭ್ಯ ದುರ್ವೃತ್ತಸ್ಯ ಶುಭೇತರಂ ॥ ೫೦ ॥
ಚಿತ್ರಗುಪ್ತ ಉವಾಚ :—
ಗರ್ಭಾಧಾನಾದಿಕಂ ಕರ್ಮ ಪ್ರಾಕ್ಕೃತಂ ನಾಽಸ್ಯ ಕೇನಚಿತ್ ।
ಜಾತಕರ್ಮ ಕೃತಂ ನಾಽಸ್ಯ ಪಿತ್ರಾಽಜ್ಞಾನವತಾ ಹರೇ ॥ ೫೧ ॥
ಗರ್ಭೈನಃಶಮನೇ ಹೇತುಃ ಸಮಸ್ತಾಯುಃಸುಖಪ್ರದಂ ।
ಏಕಾದಶೇಽಹ್ನಿ ನಾಮಾಽಸ್ಯ ನ ಕೃತಂ ವಿಧಿಪೂರ್ವಕಂ ॥ ೫೨ ॥
ಖ್ಯಾತಃ ಸ್ಯಾದ್ಯೇಸ ವಿಧಿನಾ ಸರ್ವತ್ರ ವಿಧಿಪಾವನಂ ।
ನಾಕಾರ್ಷೀನ್ನಿರ್ಗಮಂ ಚಾಽಸ್ಯ ಚತುರ್ಥೇ ಮಾಸಿ ಮಂದಧೀಃ ॥ ೫೩ ॥
ಜನಕಃ ಶುಭತಿಥ್ಯಾದೌ ವಿದೇಶಗಮನಾಪಹಂ ।
ಷಷ್ಠೇನ್ನಪ್ರಾಶನಂ ಮಾಸಿ ನ ಕೃತಂ ವಿಧಿಪೂರ್ವಕಂ ॥ ೫೪ ॥
ಸರ್ವದಾ ಮಿಷ್ಟಮಶ್ನಾತಿ ಕರ್ಮಣಾ ಯೇನ ಭಾಸ್ಕರೇ ।
ನ ಚೂಡಾಕರಣಂ ಚಾಽಸ್ಯ ಕೃತಮಬ್ದೇ ಯಥಾ ಕುಲಂ ॥ ೫೫ ॥
ಕರ್ಮಣಾ ಯೇನ ಕೇಶಾಃ ಸ್ಯುಃ ಸ್ನಿಗ್ಧಾಃ ಕುಸುಮವರ್ಷಿಣಃ ।
ನಾಕಾರಿ ಕರ್ಣವೇಧೋಽಸ್ಯ ಜನಿತ್ರಾ ಸಮಯೇ ಶುಭೇ ॥ ೫೬ ॥
ಸುವರ್ಣಗ್ರಾಹಿಣೌ ಯೇನ ಕರ್ಣೌ ಸ್ಯಾತಾಂ ಚ ಸುಶ್ರುತೀ ।
ಮೌಂಜೀಬಂಧೋಽಪ್ಯಭೂದಸ್ಯ ವ್ಯತೀತೇಽಬ್ದೇಽಷ್ಟಮೇ ಹರೇ ।
ಬ್ರಹ್ಮಚರ್ಯಾಭಿವೃದ್ಧ್ಯೈ ಯೋ ಬ್ರಹ್ಮಗ್ರಹಣಹೇತುಕಃ ॥ ೫೭ ॥

---

ನನ್ನು ಕುರಿತು ಆ ವಾಹೀಕಬ್ರಾಹ್ಮಣನ ಜಾತಕರ್ಮದಿನ ಮೊದಲ್ಗೊಂಡು ದುಷ್ಟಕಾರ್ಯವನ್ನು ಹೇಳಿದನು.

೫೧–೫೭. ಚಿತ್ರಗುಪ್ತನು ಹೇಳುತ್ತಾನೆ:—ಎಲೈ ಯಮನೆ! ಈ ಬ್ರಾಹ್ಮಣನಿಗೆ ಹಿಂದೆ ಮೂಢನಾದ ಇವನ ತಂದೆಯು ಗರ್ಭಾಧಾನವನ್ನೂ, ಗರ್ಭದ ದೋಷವನ್ನೂ ನಿವಾರಿಸುವುದೂ, ಸಮಸ್ತವಾದ ಆಯುಸ್ಸು ಮತ್ತು ಸುಖಗಳನ್ನೀಯುವುದೂ ಆದ ಜಾತಕರ್ಮವನ್ನೂ, ಹನ್ನೊಂದನೆಯ ದಿನ ಇವನನ್ನು ಪ್ರಸಿದ್ಧಿಗೊಳಿಸುವ ನಾಮಕರಣವನ್ನೂ, ನಾಲ್ಕನೆಯ ತಿಂಗಳಲ್ಲಿ ಶುಭತಿಥಿಯಲ್ಲಿ ಇವನ ಪರದೇಶಗಮನವನ್ನು ಪರಿಹರಿಸುವ ಉಪನಿಷ್ಕ್ರಮಣವನ್ನೂ, ಆರನೆಯ ತಿಂಗಳಲ್ಲಿ ಯಾವಾಗಲೂ ಮೃಷ್ಟಾನ್ನಭೋಜನವನ್ನು ನೀಡುವ ಅನ್ನಪ್ರಾಶನವನ್ನೂ, ಒಂದು ವರ್ಷವಾದಕೂಡಲೆ ಕುಲಾಚಾರದಂತೆ ಕೂದಲುಗಳನ್ನು ಸೌಂದರ್ಯಗೊಳಿಸುವುದೂ, ಹೂವನ್ನು ಸುರಿಸುವುದೂ ಆದ ಚೂಡಾಕರಣವನ್ನೂ, ಸುಸಮಯದಲ್ಲಿ ಸುವರ್ಣದ ಒಡವೆಯಿಂದ ಕಿವಿಗಳನ್ನು ರಮ್ಯಗೊಳಿಸುವ ಕರ್ಣವೇಧವನ್ನೂ ಮಾಡಲಿಲ್ಲ. ಬ್ರಹ್ಮಚರ್ಯವನ್ನು ಅಭಿವೃದ್ಧಿಗೊಳಿಸುವುದೂ, ವೇದೋಪದೇಶಕ್ಕೆ

ಮೌಂಜೀಮೋಕ್ಷಣವಾರ್ತಾಽಪಿ ಕೃತಾ ನಾಸ್ಯ ಜನುಃಕೃತಾ ।
ಗಾರ್ಹಸ್ಥ್ಯಂ ಪ್ರಾಪ್ಸ್ಯತೇ ಯಸ್ಮಾತ್ಕರ್ಮಣೋಽನಂತರಂ ವರಂ ॥ ೫೮ ॥
ಯಥಾ ಕಥಂಚಿದೂಢಾಽಥ ಪತ್ನೀ ತ್ಯಕ್ತಕುಲಾಽಧ್ವಗಾ ।
ವೃಷಲೀಪತಿನಾ ತೇನ ಪರದಾರಾಽಪಹಾರಿಣಾ ॥ ೫೯ ॥
ಆರಭ್ಯ ಪಂಚವರ್ಷಾದ್ವರ್ಷಾತ್ಪರಸ್ವಸ್ಯಾಽಪಹಾರಕಃ ।
ಅಭೂದೇಷ ದುರಾಚಾರೋ ದುರೋದರಪರಾಯಣಃ ॥ ೬೦ ॥
ರುಮಾಯಾಂ ವಸತಾಽನೇನ ಹತಾ ಗೌರೇಕವಾರ್ಷಿಕೀ ।
ಏಕದಾ ದೃಢದಂಡೇನ ಲಿಹಂತೀ ಲವಣಂ ಮೃತಾ ॥ ೬೧ ॥
ಜನನೀಂ ಪಾದಘಾತೇನ ಬಹುಶೋಽಸಾವತಾಡಯತ್ ।
ಕದಾಚಿದಪಿ ನೋ ವಾಕ್ಯಂ ಪಿತುಃ ಕೃತಮನೇನ ವೈ ॥ ೬೨ ॥
ವಿಷಂ ಭಕ್ಷಿತವಾನೇಷ ಬಹುಶಃ ಕಲಹಪ್ರಿಯಃ ।
ಜನೋಪತಾಪಶೀಲೋಽಸೌ ಕೃತೋದರವಿದಾರಣಃ ॥ ೬೩ ॥
ಧತ್ತೂರಕರವೀರಾದಿ ಬಹುಧೋಪವಿಷಾಣಿ ಚ ।
ಕ್ರೀಡಾಕಲಹಮಾತ್ರೇಣ ಭಕ್ಷಯಚ್ಚೈಷ ದುರ್ಮತಿಃ ॥ ೬೪ ॥

---

ಕಾರಣವೂ ಆದ ಉಪನಯನವು ಇವನಿಗೆ ಎಂಟುವರ್ಷಗಳು ಕಳೆದಮೇಲೆ ಆಯಿತು.

೫೮. ಇವನಿಗೆ ತಂದೆಯು ಯಾವಕರ್ಮದ ಅನಂತರ ಗಾರ್ಹಸ್ಥ್ಯವನ್ನು ಹೊಂದಲು ಯೋಗ್ಯನಾಗುವನೊ, ಆ ಸಮಾವರ್ತನವನ್ನು ಮಾಡಲಿಲ್ಲ.

೫೯. ಶೂದ್ರಾಪತಿಯೂ, ಪರಸ್ತ್ರೀಯರನ್ನು ಅಪಹರಿಸುವವನೂ ಆದ ಇವನು ದುಷ್ಕುಲಜಾತಳಾದ ಸ್ತ್ರೀಯನ್ನು ಮದುವೆಯಾದನು.

೬೦. ಇವನು ಐದನೆಯ ವರ್ಷದಿಂದ ಪರರಸ್ವತ್ತನ್ನು ಅಪಹರಿಸುವವನೂ, ದುರ್ನಡತೆಯುಳ್ಳವನೂ, ಜೂಜುಗಾರನೂ ಆದನು.

೬೧. ಒಂದಾನೊಂದು ದಿನ ಇವನು ಉಪ್ಪಿನ ಗಣಿಯಲ್ಲಿ ವಾಸಿಸುತ್ತ ಉಪ್ಪನ್ನು ತಿನ್ನುತ್ತಿರುವ ಒಂದು ವರ್ಷದ ಹಸುವೊಂದನ್ನು ಬಲವಾದ ದೊಣ್ಣೆಯಿಂದ ಹೊಡೆಯಲು ಅದು ಮೃತವಾಯಿತು.

೬೨. ಇವನು ಅನೇಕಬಾರಿ ಕಾಲಿನಿಂದ ತಾಯಿಯನ್ನು ಒದೆದಿರುವನು. ಒಂದುಸಾರಿಯೂ ತಂದೆಯ ಮಾತನ್ನು ನಡೆಸಲಿಲ್ಲ.

೬೩–೬೪. ಜಗಳದಲ್ಲಿ ಪ್ರೀತಿಯುಳ್ಳವನೂ, ಜನರನ್ನು ಪೀಡಿಸುವವನೂ, ಹೊಟ್ಟೆಯನ್ನು ಹೊಡೆದುಕೊಳ್ಳುವವನೂ ಆದ ಇವನು ಅನೇಕಬಾರಿ ವಿಷವನ್ನು ಕುಡಿದಿರುವನು. ದುಷ್ಟನಾದ ಇವನು ಹುಸಿಜಗಳದಲ್ಲಿಯೂ ಧತ್ತೂರ, ಕಣಗಲೆ ಮೊದಲಾದ ಸಣ್ಣ ಸಣ್ಣ ವಿಷಪದಾರ್ಥಗಳನ್ನು ಸೇವಿಸಿರುವನು.

ದಗ್ಧೋಽಸಾವಗ್ನಿನಾ ಸೌರೇ ಶ್ವಭಿಶ್ಚ ಕಬಲೀಕೃತಃ ।
ಶೃಂಗಿಭಿಃ ಪರಿತಃ ಪ್ರೋತೋ ವಿಷಾಣಾಗ್ರೈರಸೌ ಬಹು ॥ ೬೫ ॥
ದಂದಶೂಕೈರ್ಭೃಶಂ ದಷ್ಟೋ ದುಷ್ಟಃ ಶಿಷ್ಟೈರ್ವಿಗರ್ಹಿತಃ ।
ಕಾಷ್ಠೇಷ್ಟಲೋಷ್ಟೈಃ ಪಾಪಿಷ್ಠಃ ಕೃತಾಽನಿಷ್ಟಃ ಸದಾತ್ಮನಃ ॥ ೬೬ ॥
ಆಸ್ಫಾಲಿತಂ ಶಿರೋಽನೇನಾಽಸಕೃಚ್ಚಾಽಪಿ ದುರಾತ್ಮನಾ ।
ಯದರ್ಚ್ಯತೇ ಸದಾ ಸದ್ಭಿರುತ್ತಮಾಂಗಮನೇಕಧಾ ॥ ೬೭ ॥
ಅಸೌ ಹಿ ಬ್ರಾಹ್ಮಣೋ ಮಂದೋ ಗಾಯತ್ರೀಮಪಿ ವೇದ ನ ।
ಕಾಮತೋ ಮತ್ಸ್ಯಮಾಂಸಾನಿ ಜಗ್ಧಾನ್ಯೇತೇನ ದುರ್ಧಿಯಾ ॥ ೬೮ ॥
ಆತ್ಮಾರ್ಥಂ ಪಾಯಸಮಸೌ ಪರ್ಯಪಾಕ್ಷೀದನೇಕಧಾ ।
ಲಾಕ್ಷಾಲವಣಮಾಂಸಾನಾಂ ಸಪಯೋದಧಿಸರ್ಪಿಷಾಂ ॥ ೬೯ ॥
ವಿಷಲೋಹಾಯುಧಾನಾಂ ಚ ದಾಸೀಗೋವಾಜಿನಾಮಪಿ ।
ವಿಕ್ರೇತಾಽಸೌ ಸದಾ ಮೂಢಸ್ತಥಾ ವೈ ಕೇಶಚರ್ಮಣಾಂ ॥ ೭೦ ॥
ಶೂದ್ರಾನ್ನಪರಿಪುಷ್ಟಾಂಗಃ ಪರ್ವಣ್ಯಹನಿ ಮೈಥುನೀ ।
ಪರಾಙ್ಮುಖೋ ದೈವಪಿತ್ರ್ಯಕರ್ಮಣ್ಯೇಷ ದುರಾತ್ಮವಾನ್ ॥ ೭೧ ॥

---

೬೫–೬೬. ಇವನು ಅನೇಕಬಾರಿ ಬೆಂಕಿಯಿಂದಲೂ, ಸೂರ್ಯನ ಬಿಸಿಲಿನಿಂದಲೂ ಸುಡಲ್ಪಟ್ಟವನೂ, ನಾಯಿಗಳಿಂದ ಕಚ್ಚಲ್ಪಟ್ಟವನೂ, ಕೊಂಬುಗಳುಳ್ಳ ಪ್ರಾಣಿಗಳಿಂದ ಚುಚ್ಚಲ್ಪಟ್ಟವನೂ, ಹಾವುಗಳಿಂದ ಕಚ್ಚಲ್ಪಟ್ಟವನೂ, ಶಿಷ್ಟರಿಂದ ನಿಂದಿತನೂ, ಕಟ್ಟಿಗೆ, ಇಟ್ಟಿಗೆ, ಮಣ್ಣಿನ ಹೆಂಟೆಗಳಿಂದ ಹೊಡೆಯಿಸಿಕೊಂಡವನೂ ಆಗಿರುವನು.

೬೭. ದುರಾತ್ಮನಾದ ಇವನು ಸಜ್ಜನರು ಅರ್ಚಿಸುವ ತಲೆಯನ್ನು ಅನೇಕಸಾರಿ ಹೊಡೆದುಕೊಂಡಿರುವನು.

೬೮. ಈ ದುಷ್ಟನು ಗಾಯತ್ರಿಯನ್ನೂ ತಿಳಿದಿರುವುದಿಲ್ಲ. ಸ್ವೇಚ್ಛೆಯಾಗಿ ಮೀನಿನ ಮಾಂಸಗಳನ್ನು ತಿಂದಿರುವನು.

೬೯–೭೦. ಮೂಢನಾದ ಇವನು ಅನೇಕಬಾರಿ ತನಗಾಗಿಯೇ ಪಾಯಸವನ್ನು ಮಾಡಿರುವನು. ಅರಗು, ಉಪ್ಪು, ಮಾಂಸ, ಹಾಲು, ಮೊಸರು, ತುಪ್ಪ, ವಿಷ, ಕಬ್ಬಿಣದ ಆಯುಧ, ದಾಸೀ, ಗೋವು, ಕುದುರೆ, ಕೂದಲು, ಚರ್ಮ ಇವುಗಳನ್ನು ಮಾರಿರುವನು.

೭೧. ಈ ದುಷ್ಟನು ಶೂದ್ರಾನ್ನದಿಂದ ಪುಷ್ಟವಾದ ಅವಯವವುಳ್ಳವನೂ, ಪರ್ವಕಾಲದಲ್ಲಿಯೂ, ಹಗಲಿನಲ್ಲಿಯೆ ಮೈಥುನನಿರತನೂ, ದೇವಪಿತೃಕರ್ಮಗಳಲ್ಲಿ ಪರಾಙ್ಮುಖನೂ ಆಗಿದ್ದನು.

ಪಕ್ಷಿಣೋ ಘಾತಿತಾಸ್ತೇನ ಮೃಗಾಶ್ಚಾಪಿ ಪರಃಶತಂ ।
ಅಕಾರಣದ್ರುಮಚ್ಛೇದೀ ಸದಾ ನಿರ್ದಯಮಾನಸಃ ॥ ೭೨ ॥
ಉದ್ವೇಗಜನಕೋ ನಿತ್ಯಂ ನಿಜಬಂಧುಜನೇಷ್ವಪಿ ।
ಅಸತ್ಯವಾದೀ ಸತತಂ ಸದಾ ಹಿಂಸಾಪರಾಯಣಃ ॥ ೭೩ ॥
ಅದತ್ತದಾನಃ ಪಿಶುನಃ ಶಿಶ್ನೋದರಪರಾಯಣಃ ।
ಕಿಂ ಬಹೂಕ್ತೇನ ರವಿಜ ಸಾಕ್ಷಾತ್ಪಾತಕಮೂರ್ತಿಮಾನ್ ॥ ೭೪ ॥
ರೌರವೇऽಪ್ಯಂಧತಾಮಿಸ್ರೇ ಕುಂಭೀಪಾಕೇऽತಿರೌರವೇ ।
ಕಾಲಸೂತ್ರೇ ಕೃಮಿಭುಜಿ ಪೂಯಶೋಣಿತಕರ್ದಮೇ ॥ ೭೫ ॥
ಅಸಿಪತ್ರವನೇ ಘೋರೇ ಯಂತ್ರಪೀಡೇ ಸುದಂಷ್ಟ್ರಕೇ ।
ಅಧೋಮುಖೇ ಪೂತಿಗಂಧೇ ವಿಷ್ಠಾಗರ್ತೇಷ್ವಭೋಜನೇ ॥ ೭೬ ॥
ಸೂಚೀಭೇದ್ಯೇऽಥ ಸಂದಂಶೇ ಲಾಲಾಪೇ ಕ್ಷುರಧಾರಕೇ ।
ಪ್ರತ್ಯೇಕಂ ನರಕೇ ತ್ವೇಷ ಪಾತ್ಯತಾಂ ಕಲ್ಪಸಂಖ್ಯಯಾ ॥ ೭೭ ॥
ಧರ್ಮರಾಜಃ ಸಮಾಕರ್ಣ್ಯ ಚಿತ್ರಗುಪ್ತಮುಖಾದಿತಿ ।
ನಿರ್ಭರ್ತ್ಸ್ಯ ತಂ ದುರಾಚಾರಂ ಕಿಂಕರಾನಾದಿದೇಶಹ ॥ ೭೮ ॥
ಭ್ರೂಸಂಜ್ಞಯಾ ಭೃತ್ಯೈರ್ನೀತಃ ಸ ಬದ್ಧ್ವಾ ನಿರಯಾಲಯಂ ।
ಆಕ್ರಂದರಾವೋ ಯತ್ರೋಚ್ಚೈಃ ಪಾಪಿನಾಂ ರೋಮಹರ್ಷಣಃ ॥ ೭೯ ॥

---

೭೨–೭೪. ಇವನು ಅನೇಕ ಮೃಗಪಕ್ಷಿಗಳನ್ನು ಕೊಂದಿರುವನು. ಕಾರಣವಿಲ್ಲದೆ ಮರಗಳನ್ನು ಕಡಿಯುವವನೂ, ಯಾವಾಗಲೂ ದಯೆಯಿಲ್ಲದ ಮನಸ್ಸುಳ್ಳವನೂ, ತನ್ನ ಬಂಧುಗಳಿಗೆ ವ್ಯಥೆಯನ್ನುಂಟುಮಾಡುವವನೂ, ಯಾವಾಗಲೂ ಸುಳ್ಳಾಡುವವನೂ, ಹಿಂಸಾನಿರತನೂ, ದಾನವನ್ನು ಕೊಡದವನೂ, ಚಾಡಿ ಹೇಳುವವನೂ, ಶಿಶ್ನ, ಹೊಟ್ಟೆಗಳಲ್ಲಿ ಮಾತ್ರವೇ ಅತ್ಯಾಸಕ್ತನೂ, ಪ್ರತ್ಯಕ್ಷ ಪಾಪಿಯೂ ಆಗಿದ್ದನು.

೭೫–೭೭. ಆದುದರಿಂದ ರೌರವ, ಅಂಧತಾಮಿಸ್ರ, ಕುಂಭೀಪಾಕ, ಅತಿರೌರವ, ಕಾಲಸೂತ್ರ, ಕೃಮಿಭೋಜನವುಳ್ಳುದೂ, ರಕ್ತದ ಕೆಸರುಳ್ಳದೂ ಆದ ಅಸಿಪತ್ರವನ, ಯಂತ್ರಪೀಡ, ಸುದಂಷ್ಟ್ರಕ, ಅಧೋಮುಖ, ಪೂತಿಗಂಧ, ವಿಷ್ಠಾಗರ್ತ, ಅಭೋಜನ, ಸೂಚೀಭೇದ, ಸಂದಂಶ, ಲಾಲಾಪ, ಕ್ಷುರಧಾರಕಗಳೆಂಬ ನರಕಗಳಲ್ಲಿ ಇವನನ್ನು ಪ್ರತ್ಯೇಕವಾಗಿ ಒಂದೊಂದು ಕಲ್ಪಕಾಲ ಹಾಕಬೇಕು.''

೭೮. ಧರ್ಮರಾಜನು ಚಿತ್ರಗುಪ್ತನ ಮುಖದಿಂದ ಈ ವಿಷಯವನ್ನು ಕೇಳಿ ಆ ದುರಾತ್ಮನನ್ನು ಹೆದರಿಸಿ ಭೃತ್ಯರಿಗೆ ಆಜ್ಞೆಮಾಡಿದನು.

೭೯. ಹುಬ್ಬಿನ ಸಂಜ್ಞೆಯಿಂದಲೇ ಅಲ್ಲಿಗೆ ಬಂದ ಆ ಕಿಂಕರರು ಅವನನ್ನು ಪಾಪಿಗಳ ಕೂಗಿನಿಂದ ರೋಮಾಂಚವನ್ನುಂಟುಮಾಡುವ ನರಕಕ್ಕೆ ಒಯ್ದರು.

ಈಶ್ವರ ಉವಾಚ :—

ಯಾತನಾಸ್ವತಿತೀವ್ರಾಸು ವಾಹೀಕೇ ಸಂಸ್ಥಿತೇ ತದಾ ।
ತತ್ಕಾಲಪುಣ್ಯಫಲದೇ ಗಾಂಗೇಯಾಂಭಸಿ ನಿರ್ಮಲೇ ॥ ೮೦ ॥
ಪತಿತಂ ತದ್ಧಿ ಗೃಧ್ರಾಸ್ಯಾದ್ವಾಹೀಕಸ್ಯ ದ್ವಿಜನ್ಮನಃ ।
ಹರೇ ವಿಮಾನಂ ತತ್ಕಾಲಮಾಪನ್ನಂ ಸುರಸದ್ಮತಃ ॥ ೮೧ ॥
ಘಂಟಾವಲಂಬಿತಂ ದಿವ್ಯಸ್ತ್ರೀಶತಸಂಕುಲಂ ।
ಆರುಹ್ಯ ದೇವಯಾನಂ ಸ ದಿವ್ಯವೇಷಧರೋ ದ್ವಿಜಃ ॥ ೮೨ ॥
ವೀಜ್ಯಮಾನೋಽಪ್ಸರೋ ವೃಂದೈರ್ದಿವ್ಯಗಂಧಾನುಲೇಪನಃ ।
ಜಗಾಮ ಸ್ವರ್ಗಭವನಂ ಗಂಗಾಸ್ಥಿಪತನಾದ್ಧರೇ ॥ ೮೩ ॥

ಸ್ಕಂದ ಉವಾಚ :—

ವಸ್ತುಶಕ್ತಿವಿಚಾರೋಽಯಮದ್ಭುತಃ ಕೋಽಪಿ ಕುಂಭಜ ।
ದ್ರವರೂಪೇಣ ಕಾಪ್ಯೇಷಾ ಶಕ್ತಿಃ ಸಾದಾಶಿವೀ ಪರಾ ॥ ೮೪ ॥
ಕರುಣಾಽಮೃತ ಪೂರ್ಣೇನ ದೇವದೇವೇನ ಶಂಭುನಾ ।
ಏಷಾ ಪ್ರವರ್ತಿತಾ ಗಂಗಾ ಜಗದುದ್ಧರಣಾಯ ವೈ ॥ ೮೫ ॥
ಯಥಾನ್ಯಾಃ ಸರಿತೋ ಲೋಕೇ ವಾರಿಪೂರ್ಣಾಃ ಸಹಸ್ರಶಃ ।
ತಥೈಷಾ ನಾಽನುಮಂತವ್ಯಾ ಸದ್ಭಿಸ್ತ್ರಿಪಥಗಾಮಿನೀ ॥ ೮೬ ॥

---

೮೦–೮೧. ಈಶ್ವರನು ಹೇಳುತ್ತಾನೆ:—ಹೀಗೆ ವಾಹೀಕನು ಅತಿ ಕಠಿನವಾದ ಪೀಡೆಯನ್ನನುಭವಿಸುತ್ತಿರುವ ಸಮಯದಲ್ಲಿಯೆ ಅವನ ಮೂಳೆಯು ಹದ್ದಿನ ಬಾಯಿಯಿಂದ ಪುಣ್ಯವನ್ನೀಯುವುದೂ, ನಿರ್ಮಲವೂ ಆದ ಗಂಗಾಜಲವಲ್ಲಿ ಬೀಳಲು ತತ್ಕ್ಷಣದಲ್ಲಿಯೇ ದೇವಲೋಕದಿಂದ ಅವನನ್ನು ಕರೆದುಕೊಂಡು ಹೋಗಲು ವಿಮಾನವು ಬಂದಿತು.

೮೨–೮೩. ಎಲೈ ಹರಿಯೆ! ಅವನ ಮೂಳೆಯು ಗಂಗೆಯಲ್ಲಿ ಬಿದ್ದ ಕಾರಣ ಅವನು ಘಂಟೆಗಳನ್ನು ಕಟ್ಟಿರುವುದೂ, ಅನೇಕ ಮಂದಿ ದಿವ್ಯಾಂಗನೆಯರಿಂದ ತುಂಬಿರುವುದೂ ಆದ ಆ ವಿಮಾನವನ್ನು ಹತ್ತಿ ದಿವ್ಯವೇಷಧಾರಿಯೂ, ಅಪ್ಸರೆಯರ ಗುಂಪಿನಿಂದ ಬೀಸಲ್ಪಡುವವನೂ, ದಿವ್ಯಗಂಧವನ್ನು ಹಚ್ಚಿಕೊಂಡವನೂ ಆಗಿ ಸ್ವರ್ಗಕ್ಕೆ ತೆರಳಿದನು.

೮೪. ಸ್ಕಂದನು ಹೇಳುತ್ತಾನೆ:—ಅಗಸ್ತ್ಯನೆ! ಈ ವಸ್ತುಶಕ್ತಿಯ ವಿಚಾರವು ಆಶ್ಚರ್ಯಕರವಾದುದು. ಮಹೇಶ್ವರನ ಪ್ರಬಲವಾದ ಶಕ್ತಿಯೇ ದ್ರವರೂಪದಿಂದ ಗಂಗೆಯಾಗಿರುವುದು.

೮೫–೮೬. ದಯಾಮೃತದಿಂದ ತುಂಬಿರುವ ಮಹೇಶ್ವರನು ಜಗತ್ತಿನ ಉದ್ಧಾರಕ್ಕಾಗಿ ಈ ಗಂಗೆಯನ್ನು ಸೃಜಿಸಿರುವನು. ಸಜ್ಜನರು, ನೀರಿನಿಂದ ತುಂಬಿರುವ ಇತರ ನದಿಗಳಂತೆ ಈ ಗಂಗೆಯೂ ಆಗಿರುವುದೆಂದು ಭಾವಿಸಬಾರದು.

ಶ್ರುತ್ಯಕ್ಷರಾಣಿ ನಿಶ್ಚೋತ್ಯ ಕಾರುಣ್ಯಾಚ್ಚಂಭುನಾ ಮುನೇ ।
ನಿರ್ಮಿತಾ ತದ್ದ್ರವೈರೇಷಾ ಗಂಗಾ ಗಂಗಾಧರೇಣ ವೈ ॥ ೮೭ ॥
ಯೋಗೋಪನಿಷದಾಮೇತಂ ಸಾರಮಾಕೃಷ್ಯ ಶಂಕರಃ ।
ಕೃಪಯಾ ಸರ್ವಜಂತೂನಾಂ ಚಕಾರ ಸರಿತಾಂ ವರಾಂ ॥ ೮೮ ॥
ಅಕಲಾನಿಧಯೋ ರಾತ್ರ್ಯೋ ವಿಪುಷ್ಪಾಶ್ಚೈವ ಪಾದಪಾಃ ।
ಯಥಾ ತಥೈವ ತೇ ದೇಶಾ ಯತ್ರ ನಾಽಸ್ತ್ಯಮರಾಪಗಾ ॥ ೮೯ ॥
ಅನಯಾಃ ಸಂಪದೋ ಯದ್ವನ್ಮಖಾ ಯದ್ವದದಕ್ಷಿಣಾಃ ।
ತದ್ವದ್ದೇಶಾ ದಿಶಃ ಸರ್ವಾ ಹೀನಾ ಗಂಗಾಂಽಭಸಾ ಹರೇ ॥ ೯೦ ॥
ವ್ಯೋಮಾಂಗಣಮನರ್ಕಂ ಚ ನಕ್ತೇಽದೀಪಂ ಯಥಾ ಗೃಹಂ ।
ಅನೇದಾ ಬ್ರಾಹ್ಮಣಾ ಯದ್ವದ್ಗಂಗಾಹೀನಾಸ್ತಥಾ ದಿಶಃ ॥ ೯೧ ॥
ಚಾಂದ್ರಾಯಣಸಹಸ್ರಂ ತು ಯಃ ಕುರ್ಯಾದ್ದೇಹಶೋಧನಂ ।
ಗಂಗಾಽಮೃತಂ ಪಿಬೇದ್ಯಸ್ತು ತಯೋರ್ಗಂಗಾಂಬುಪೋಽಧಿಕಃ ॥ ೯೨ ॥
ಪಾದೇನೈಕೇನ ಯಸ್ತಿಷ್ಠೇತ್ಸಹಸ್ರಂ ಶರದಾಂ ಶತಂ ।
ಅಬ್ದಂ ಗಂಗಾಂಬುಪೋ ಯಸ್ತು ತಯೋರ್ಗಂಗಾಂಬುಪೋಽಧಿಕಃ॥ ೯೩ ॥
ಅವಾಕ್ಛಿರಾಃ ಪ್ರಲಂಬೇದ್ಯಃ ಶತಸಂವತ್ಸರಾನ್ನರಃ ।
ಭೀಷ್ಮಸೂಮಾಲುಕಾತಲ್ಪಶಯಸ್ತಸ್ಮಾದ್ವರೋ ಹರೇ ॥ ೯೪ ॥

---

೮೭. ಗಂಗಾಧರನಾದ ಶಿವನು ದಯೆಯಿಂದ ವೇದಾಕ್ಷರಗಳನ್ನು ಹಿಂಡಿ ಆ ದ್ರವದಿಂದ ಈ ಗಂಗೆಯನ್ನು ನಿರ್ಮಿಸಿರುವನು.

೮೮. ಆ ಶಂಕರನು ಯೋಗೋಪನಿಷತ್ತುಗಳ ಸಾರವನ್ನು ತೆಗೆದು ಸಕಲ ಪ್ರಾಣಿಗಳಲ್ಲಿಯೂ ದಯೆಯಿಟ್ಟು ಈ ಉತ್ತಮ ಗಂಗೆಯನ್ನು ಸೃಜಿಸಿದ್ದಾನೆ.

೮೯. ಗಂಗೆಯಿಲ್ಲದ ಸ್ಥಳವು ಚಂದ್ರನಿಲ್ಲದ ರಾತ್ರಿಯಂತೆಯೂ, ಹೂವಿಲ್ಲದ ಮರಗಳಂತೆಯೂ ಆಗುವುದು.

೯೦. ಹರಿಯೆ! ಗಂಗೆಯಿಲ್ಲದ ದೇಶಗಳೂ, ದಿಕ್ಕುಗಳೂ ನೀತಿಯಿಲ್ಲದ ಸಂಪತ್ತುಗಳಂತೆಯೂ, ದಕ್ಷಿಣೆಯಿಲ್ಲದ ಯಜ್ಞಗಳಂತೆಯೂ ಆಗುವುವು.

೯೧. ಗಂಗೆಯಿಲ್ಲದ ದಿಕ್ಕುಗಳು ಸೂರ್ಯನಿಲ್ಲದ ಆಕಾಶದಂತೆಯೂ, ದೀಪವಿಲ್ಲದ ಮನೆಯಂತೆಯೂ, ವೇದವನ್ನು ಓದದ ಬ್ರಾಹ್ಮಣರಂತೆಯೂ ಆಗುವುವು.

೯೨. ದೇಹವನ್ನು ಪವಿತ್ರಗೊಳಿಸುವ ಸಹಸ್ರಚಾಂದ್ರಾಯಣ ವ್ರತವನ್ನಾಚರಿಸಿದವನಿಗಿಂತಲೂ ಗಂಗಾಜಲವನ್ನು ಪಾನಮಾಡಿದವನು ಅಧಿಕನು.

೯೩. ಸಾವಿರ ವರ್ಷಗಳ ಕಾಲ ಒಂದು ಪಾದದಿಂದ ನಿಂತವನಿಗಿಂತಲೂ ಒಂದು ವರ್ಷ ಕಾಲ ಗಂಗಾಜಲವನ್ನು ಪಾನಮಾಡಿದವನು ಅಧಿಕನು.

೯೪. ಹರಿಯೆ! ನೂರು ವರ್ಷಗಳ ಕಾಲ ತಲೆಕೆಳಗಾಗಿ ಜೋಲಾಡಿದವನಿಗಿಂತಲೂ ಗಂಗೆಯ ಮರಳಿನಲ್ಲಿ ಮಲಗಿದವನು ಅಧಿಕನು.

ಪಾಪತಾಪಾಽಭಿತಪ್ತಾನಾಂ ಭೂತಾನಾಮಿಹ ಜಾಹ್ನವೀ ।
ಪಾಪತಾಪಹರಾ ಯದ್ವದ್ಗಂಗಾ ನಾಽನ್ಯತ್ತಥಾ ಕಲೌ ॥ ೯೫ ॥
ತಾರ್ಕ್ಷ್ಯವೀಕ್ಷಣಮಾತ್ರೇಣ ಫಣಿನೋ ನಿರ್ವಿಷಾ ಯಥಾ ।
ನಿಷ್ಪ್ರಭಾಣಿ ತಥೈನಾಂಸಿ ಭಾಗೀರಥ್ಯವಲೋಕನಾತ್ ॥ ೯೬ ॥
ಗಂಗಾತಟೋದ್ಭವಾಂ ಮೃತ್ಸ್ನಾಂ ಯೋ ಮೌಲೌ ಬಿಭೃಯಾನ್ನರಃ ।
ಬಿಭರ್ತಿ ಸೋಽರ್ಕಬಿಂಬಂ ವೈ ತಮೋನಾಶಾಯ ನಿಶ್ಚಿತಂ ॥ ೯೭ ॥
ವ್ಯಸನೈರಭಿಭೂತಸ್ಯ ಧನಹೀನಸ್ಯ ಪಾಪಿನಃ ।
ಗಂಗೈವ ಕೇವಲಂ ತಸ್ಯ ಗತಿರುಕ್ತಾ ನಚಾಽನ್ಯಥಾ ॥ ೯೮ ॥
ಶ್ರುತಾಽಭಿಲಷಿತಾ ದೃಷ್ಟ್ವಾ ಸ್ಪೃಷ್ಟಾ ಪೀತಾಽವಗಾಹಿತಾ ।
ಪುಂಸಾಂ ವಂಶದ್ವಯಂ ಗಂಗಾ ತಾರಯೇನ್ನಾಽತ್ರ ಸಂಶಯಃ ॥ ೯೯ ॥
ಕೀರ್ತನಾದ್ದರ್ಶನಾತ್ಸ್ಪರ್ಶಾದ್ಗಂಗಾಪಾನಾಽವಗಾಹನಾತ್ ।
ದಶೋತ್ತರಗುಣಾ ಜ್ಞೇಯಾ ಪುಣ್ಯಾಽಪುಣ್ಯರ್ಧಿನಾಶಯೋಃ ॥ ೧೦೦ ॥
ನ ಸುತೈರ್ನ ಚ ವಾ ವಿತ್ತೈರ್ನಾಽನ್ಯೇನಾಪಿ ಸುಕರ್ಮಣಾ ।
ತತ್ಫಲಂ ಪ್ರಾಪ್ಯತೇ ಮರ್ತ್ಯೈಃ ಗಂಗಾಮಾಪ್ಯ ಯದಾಪ್ಯತೇ ॥ ೧೦೧ ॥

---

೯೫. ಪಾಪವೆಂಬ ತಾಪದಿಂದ ಸಂತಪ್ತರಾದ ಜನರಿಗೆ ಕಲಿಯುಗದಲ್ಲಿ ಗಂಗೆಯಂತೆ ತಾಪವನ್ನು ಪರಿಹರಿಸುವ ಮತ್ತೊಂದು ನದಿಯಿರುವುದಿಲ್ಲ.

೯೬. ಹಾವುಗಳು ಗರುಡನನ್ನು ನೋಡಿದ ಕೂಡಲೆ ನಿರ್ವಿಷಗಳಾಗುವಂತೆ ಭಾಗೀರಥಿಯ ದರ್ಶನದಿಂದ ಪಾಪಗಳು ಕಳೆಗುಂದುವುವು.

೯೭. ಗಂಗಾತಟದ ಮೃತ್ತಿಕೆಯನ್ನು ತಲೆಯಲ್ಲಿ ಧರಿಸಿದವನು ಕತ್ತಲೆಯ ನಾಶಕ್ಕಾಗಿ ಸೂರ್ಯಮಂಡಲವನ್ನು ಹೊತ್ತುಕೊಂಡವನಂತಾಗುವನು.

೯೮. ದುಃಖಗೊಂಡವನೂ, ಧನಹೀನನೂ, ಪಾಪಿಯೂ ಆದವನಿಗೆ ಗಂಗೆಯಂತೆ ಉತ್ತಮ ಗತಿಯನ್ನೀಯುವುದು ಬೇರಾವುದೂ ಇರುವುದಿಲ್ಲ.

೯೯. ಗಂಗೆಯು, ನಾಮಶ್ರವಣ, ದರ್ಶನಾಭಿಲಾಷೆ, ದರ್ಶನ, ಸ್ಪರ್ಶನ, ಪಾನ, ಸ್ನಾನ ಇವುಗಳಿಂದ ಮಾನವರ ವಂಶದ್ವಯವನ್ನು ನಿಶ್ಚಯವಾಗಿಯೂ ಉದ್ಧರಿಸುವಳು.

೧೦೦. ಗಂಗೆಯು ಪುಣ್ಯವೃದ್ಧಿ, ಪಾಪನಾಶ ಇವುಗಳ ವಿಷಯದಲ್ಲಿ ನಾಮಸಂಕೀರ್ತನ, ದರ್ಶನ, ಸ್ಪರ್ಶನ, ಪಾನ, ಅವಗಾಹನಗಳಿಂದ ಕ್ರಮವಾಗಿ ಹತ್ತರಷ್ಟು ಹೆಚ್ಚು ಶಕ್ತಿಯುಳ್ಳವಳು.

೧೦೧. ಮನುಷ್ಯನು ಗಂಗೆಯನ್ನು ಹೊಂದಿ ಪಡೆಯುವ ಪುಣ್ಯವನ್ನು ಪುತ್ರರಿಂದಾಗಲಿ, ದ್ರವ್ಯದಿಂದಾಗಲಿ, ಇತರ ಸತ್ಕರ್ಮದಿಂದಾಗಲಿ ಪಡೆಯುವುದಿಲ್ಲ.

ಜಾತ್ಯಂಧಾಃ ಪಂಗವಸ್ತೇ ವೈ ಜೀವಂತೋಽಪ್ಯಥ ತೇ ಮೃತಾಃ ।
ಸಮರ್ಥಾ ಅಪಿ ಯೇ ಗಂಗಾಂ ನ ಸ್ನಾಯುರ್ಮೋಕ್ಷಗರ್ಭಿಣೀಂ ॥೧೦೨॥
ಶ್ರುತಿಂ ನಿಶಾಮಯ ಹರೇ ಗಂಗಾಮಾಹಾತ್ಮ್ಯಭಾಷಿಣೀಂ ।
ವಿನಿಶ್ಚಿತಾರ್ಥಾಂ ಯಾಂ ಶ್ರುತ್ವಾ ಶ್ರಯೇದ್ಗಂಗಾಂ ನರೋತ್ತಮಃ ॥೧೦೩॥
ಇರಾವತೀಂ ಮಧುಮತೀಂ ಪಯಸ್ವಿನೀಮಮೃತರೂಪಾಮೂರ್ಜಸ್ವತೀಂ ।
ತ್ರಿದಿವಪ್ರಸೂತಾಂ ಗಂಗಾಂ ಶ್ರಿತಾಸಸ್ತ್ರಿದಿವಂ ವ್ರಜಂತಿ ॥ ೧೦೪ ॥

ಋಷಿಜುಷ್ಟಾಂ ವಿಷ್ಣುಪದೀಂ ಪುರಾಣಾಂ
ಸುಪುಣ್ಯಧರಾಂ ಮನಸಾ ಹಿ ಲೋಕೇ ।
ಸರ್ವಾತ್ಮನಾ ಜಾಹ್ನವೀಂ ಯೇ ಪ್ರಪನ್ನಾ
ಸ್ತೇ ಬ್ರಹ್ಮಣಃ ಸದನಂ ಸಂಪ್ರಯಾಂತಿ ॥ ೧೦೫ ॥
ಲೋಕಾನಿಮಾನ್ನಯತಿ ಯಾ ಜನನೀವ ಪುತ್ರಾನ್
ಸ್ವರ್ಗಂ ಸದಾ ಸರ್ವಗುಣೋಪಪನ್ನಾ ।
ಸ್ಥಾನಮಿಷ್ಟಂ ಬ್ರಾಹ್ಮಮಭೀಪ್ಸಮಾನೈ
ರ್ಗಂಗಾ ಸದೈವಾತ್ಮವಶೈರುಪಾಸ್ಯಾ ॥ ೧೦೬ ॥

---

೧೦೨. ಸಮರ್ಥರಾಗಿದ್ದರೂ ಮೋಕ್ಷವನ್ನು ನೀಡುವ ಗಂಗೆಯಲ್ಲಿ ಸ್ನಾನ ಮಾಡದ ಮಾನವನು ಹುಟ್ಟುಕುರುಡನಂತೆಯೂ, ಕುಂಟನಂತೆಯೂ, ಜೀವನ್ಮೃತನಂತೆಯೂ ಆಗುವನು.

೧೦೩. ಎಲೈ ಹರಿಯೆ! ಗಂಗಾಮಾಹಾತ್ಮ್ಯವನ್ನು ಪ್ರತಿಪಾದಿಸುವ ಈ ಶ್ರುತಿಯನ್ನು ಕೇಳು. ನಿಶ್ಚಯವಾದ ಅರ್ಥವುಳ್ಳ ಈ ಶ್ರುತಿಯನ್ನು ಕೇಳಿದ ಮಾನವನು ಗಂಗೆಯನ್ನು ಆಶ್ರಯಿಸುವನು.

೧೦೪. "ಇರಾವತೀ, ಮಧುಮತೀ, ಪಯಸ್ವಿನೀ, ಅಮೃತರೂಪಾ, ಊರ್ಜ್ವಸ್ವತೀ ನದಿಗಳ ಸ್ವರೂಪಳೂ, ದೇವಲೋಕದಿಂದಿಳಿದುಬಂದವಳೂ ಆದ ಗಂಗೆಯನ್ನು ಆಶ್ರಯಿಸಿದವರು ಸ್ವರ್ಗಕ್ಕೆ ತೆರಳುವರು.

೧೦೫. ಮುನಿಗಳಿಂದ ಸೇವಿಸಲ್ಪಟ್ಟವಳೂ, ವಿಷ್ಣುಪಾದಜಾತಳೂ, ಪುರಾತನಳೂ, ಪುಣ್ಯಜಲವುಳ್ಳವಳೂ ಆದ ಗಂಗೆಯನ್ನು ಸರ್ವವಿಧದಿಂದಲೂ ಮನಸ್ಸಿನಿಂದ ಸ್ಮರಿಸುವವರು ಬ್ರಹ್ಮಲೋಕವನ್ನು ಸೇರುವರು.

೧೦೬. ಬ್ರಹ್ಮಲೋಕವನ್ನು ಪಡೆಯಬಯಸುವ ಸ್ವತಂತ್ರರಾದ ಮಾನವರು, ಮಕ್ಕಳನ್ನು ತಾಯಿಯಂತೆ ಸ್ವರ್ಗವನ್ನೇರಿಸುವ ಸಕಲ ಗುಣಸಂಪನ್ನಳಾದ ಗಂಗೆಯನ್ನು ಸೇವಿಸಬೇಕು.

ಉಸ್ತೈರ್ಜುಷ್ಟಾಮಿಷತೀಂ ವಿಶ್ವರೂಪಾ
ಮಿರಾವತೀಂ ಜನಯಿತ್ರೀಂ ಗುಹಸ್ಯ ।
ಶಿಷ್ಟೈಃ ಸೇವ್ಯಾಮಮೃತಾಂ ಬ್ರಹ್ಮಕಾಂತಾಂ
ಗಂಗಾಂ ಶ್ರಯೇದಾತ್ಮವಿಶುದ್ಧಿಕಾಮಃ ॥ ೧೦೭ ॥
ಗಂಗಾಯಾಂತು ನರಃ ಸ್ನಾತ್ವಾ ಬ್ರಹ್ಮಚಾರೀ ಸಮಾಹಿತಃ ।
ವಿಧೂತಪಾಪೋ ಭವತಿ ವಾಜಪೇಯಂ ಚ ವಿಂದತಿ ॥ ೧೦೮ ॥
ಅಶುಭೈಃ ಕರ್ಮಭಿರ್ಗ್ರಸ್ತಾನ್ಮಜ್ಜಮಾನಾನ್ಮಹಾರ್ಣವೇ ।
ಪತತೋ ನಿರಯೇ ಗಂಗಾ ಸಂಶ್ರಿತಾನುದ್ಧರೇತ್ಸದಾ ॥ ೧೦೯ ॥
ಬ್ರಹ್ಮಲೋಕಸ್ತು ಲೋಕಾನಾಂ ಸರ್ವೇಷಾಮುತ್ತಮೋ ಯಥಾ ।
ಸರಿತಾಂ ಸರಸಾಂ ವಾಽಪಿ ವರಿಷ್ಠಾ ಜಾಹ್ನವೀ ತಥಾ ॥ ೧೧೦ ॥
ಅನ್ಯತ್ರ ಸಮ್ಯಕ್ಸಂಕಲ್ಪ್ಯ ತಪಃ ಕೃತ್ವಾ ಸಮಾಸ್ತ್ರಯಂ ।
ಯತ್ಫಲಂ ತದ್ಭವೇದ್ಭಕ್ತ್ಯಾ ಗಂಗಾಯಾಂ ಘಟಿಕಾರ್ಧತಃ ॥ ೧೧೧ ॥
ಸ್ವರ್ಗಸ್ಥಸ್ಯ ನ ಸಾಪೀತಿರ್ಭುಂಜತಃ ಸುಖಮಕ್ಷಯಂ ।
ಯಾಸ್ಯಾದ್ಗಂಗಾತಟೇ ಪುಂಸಾಂ ರಾತ್ರೌ ಚಂದ್ರೋದಯೇ ಸತಿ ॥ ೧೧೨ ॥

---

೧೦೭. ಆತ್ಮಶುದ್ಧಿಯನ್ನಿಚ್ಛಿಸುವ ಮನುಷ್ಯರು ದೇವಸೇವ್ಯಳೂ, ಅಪೇಕ್ಷ್ಯಳೂ, ವಿಶ್ವರೂಪಳೂ, ಭೂಮ್ಯಾದಿಗಳುಳ್ಳವಳೂ, ಶ್ರೀಗುಹನ ಮಾತೆಯೂ, ಸಜ್ಜನರಿಂದ ಸೇವಿಸಲ್ಪಟ್ಟವಳೂ, ಅಮೃತರೂಪಳೂ, ಬ್ರಹ್ಮಪ್ರಿಯೆಯೂ ಆದ ಗಂಗೆಯನ್ನು ಆಶ್ರಯಿಸಬೇಕು.

೧೦೮. ಬ್ರಹ್ಮಚಾರಿಯೂ, ಸಾವಧಾನಮನಸ್ಸುಳ್ಳವನೂ ಆಗಿ ಗಂಗೆಯಲ್ಲಿ ಮಿಂದ ಮನುಷ್ಯನು ಪಾಪಮುಕ್ತನಾಗಿ ವಾಜಪೇಯಯಾಗದ ಫಲವನ್ನು ಪಡೆಯುವನು.

೧೦೯. ಪಾಪಕರ್ಮಗ್ರಸ್ತರೂ, ಮಹಾಸಾಗರದಲ್ಲಿ ಮುಳುಗುತ್ತಿರುವವರೂ, ನರಕದಲ್ಲಿ ಬೀಳುವವರೂ ಆದ ಆಶ್ರಿತಮಾನವರನ್ನು ಗಂಗೆಯು ಯಾವಾಗಲೂ ಉದ್ಧರಿಸುವಳು.

೧೧೦. ಸಕಲಲೋಕಗಳಲ್ಲಿಯೂ ಬ್ರಹ್ಮಲೋಕದಂತೆ ಸಮಸ್ತನದಿಗಳಲ್ಲಿಯೂ, ಸರೋವರಗಳಲ್ಲಿಯೂ ಗಂಗೆಯು ಉತ್ತಮಳು.

೧೧೧. ಬೇರೊಂದೆಡೆಯಲ್ಲಿ ಸಂಕಲ್ಪಮಾಡಿ ಮೂರುವರ್ಷಗಳ ಕಾಲ ತಪಸ್ಸುಮಾಡಿದ ಫಲವು ಗಂಗೆಯಲ್ಲಿ ಅರೆಗಳಿಗೆಯಲ್ಲುಂಟಾಗುವುದು.

೧೧೨. ಗಂಗಾತಟದಲ್ಲಿ ಮಾನವನಿಗೆ ಚಂದ್ರೋದಯಕಾಲದಲ್ಲಾಗುವ ಸಂತೋಷವು ಅಕ್ಷಯಸುಖವನ್ನನುಭವಿಸುವ ಸ್ವರ್ಗವಾಸಿಗೂ ಉಂಟಾಗುವುದಿಲ್ಲ.

ಜರಾರೋಗಾಽಭಿಪನ್ನಂ ತು ಕುಣಪಂ ಜಾಹ್ನವೀಜಲೇ ।
ಧೈರ್ಯೇಣ ತೃಣವತ್ತ್ಯಕ್ತ್ವಾ ಪ್ರವಿಶೇದಮರಾವತೀಂ ॥ ೧೧೩ ॥
ವಾರ್ಯೋಘೈಃ ಸತತಂ ಯಸ್ಯಾಃ ಪ್ಲಾವ್ಯತೇ ಶಶಿಮಂಡಲಂ ।
ಭೂಯೋಽಧಿಕತರಾಂ ಶೋಭಾಂ ಬಿಭರ್ತಿ ತದಹಃಕ್ಷಯೇ ॥ ೧೧೪ ॥
ಆಪ್ಲುತಸ್ಯ ಜಲೇ ಯಸ್ಯಾಃ ಸದ್ಯೋ ನಶ್ಯತಿ ಪಾತಕಂ ।
ಮಹತಃ ಶ್ರೇಯಸಃ ಪ್ರಾಪ್ತಿಸ್ತತ್ಕ್ಷಣಾದೇವ ಜಾಯತೇ ॥ ೧೧೫ ॥
ಪಿತೃಭ್ಯಃ ಶ್ರದ್ಧಯಾ ಯತ್ರ ದತ್ತಾಸ್ತ್ವಪಃ ಸ್ವವಂಶಜೈಃ ।
ಪ್ರಯಚ್ಛಂತಿ ಪರಾಂ ತೃಪ್ತಿಂ ಶರದಾಂ ತ್ರಯಮಚ್ಯುತ ॥ ೧೧೬ ॥
ತಾರಯೇತ್ಕ್ಷಿತಿಜಾನ್ಮರ್ತ್ಯಾನಧಃಸ್ಥಾಂಶ್ಚ ಸರೀಸೃಪಾನ್ ।
ಸ್ವರ್ಗೇ ಸ್ವರ್ಗಸದೋ ವಿಷ್ಣೋ ಗಂಗಾ ತ್ರಿಪಥಗಾ ತತಃ ॥ ೧೧೭ ॥
ತೀರ್ಥಾನಾಮುತ್ತಮಂ ತೀರ್ಥಂ ಸರಿತಾಮುತ್ತಮಾ ಸರಿತ್ ।
ಸ್ವರ್ಗದಾ ಸರ್ವಜಂತೂನಾಂ ಮಹಾಪಾತಕಿನಾಮಪಿ ॥ ೧೧೮ ॥
ಅಧ್ಯುಷ್ಟಾಃ ಕೋಟಯೋ ವಿಷ್ಣೋ ಸಂತಿ ತೀರ್ಥಾನಿ ಸರ್ವತಃ ।
ದಿವಿ ಭುವ್ಯಂತರಿಕ್ಷೇ ಚ ಜಾಹ್ನವ್ಯಾಂ ತಾನಿ ಕೃತ್ಸ್ನಶಃ ॥ ೧೧೯ ॥

---

೧೧೩. ಮನುಷ್ಯನು ಮುಪ್ಪು ರೋಗಗಳಿಂದ ಪೀಡಿತವಾದ ಶರೀರವನ್ನು ತೃಣದಂತೆ ಧೈರ್ಯದಿಂದ ಗಂಗೆಯ ಜಲದಲ್ಲಿ ಬಿಟ್ಟರೆ ಅಮರಾವತಿಯನ್ನು ಪ್ರವೇಶಿಸುವನು.

೧೧೪. ಯಾವಾಗಲೂ ಗಂಗೆಯ ನೀರಿನ ಸಮೂಹದಿಂದ ಚಂದ್ರ ಮಂಡಲವು ಚಂಚಲವಾಗಿ ರಾತ್ರಿಯ ವೇಳೆ ಅತ್ಯಂತವಾಗಿ ಪ್ರಕಾಶಿಸುವುದು.

೧೧೫. ಗಂಗೆಯ ಜಲದಲ್ಲಿ ಮಿಂದವನ ಪಾಪವು ಕೂಡಲೆ ನಾಶವಾಗಿ ಅವನಿಗೆ ಮಹಾ ಶ್ರೇಯಸ್ಸು ಕೂಡಲೆ ಸಂಭವಿಸುವುದು.

೧೧೬. ಹರಿಯೆ! ಗಂಗೆಯಲ್ಲಿ ಪಿತೃಗಳಿಗೆ ಶ್ರದ್ಧೆಯಿಂದ ತಮ್ಮ ವಂಶ ದವರು ಕೊಟ್ಟ ತರ್ಪಣ ಜಲವು ಮೂರು ವರ್ಷಕಾಲ ತೃಪ್ತಿಯನ್ನುಂಟು ಮಾಡುವುದು.

೧೧೭. ವಿಷ್ಣುವೆ! ಗಂಗೆಯು ಭೂಮಿಯಲ್ಲಿರುವ ಮನುಷ್ಯರನ್ನೂ, ಪಾತಾಳದಲ್ಲಿರುವ ನಾಗರುಗಳನ್ನೂ, ಸ್ವರ್ಗದಲ್ಲಿರುವ ದೇವತೆಗಳನ್ನೂ ಉದ್ಧರಿಸು ವುದರಿಂದ ತ್ರಿಪಥಗಾ ಎಂದು ಹೆಸರನ್ನು ಪಡೆದಿರುವುದು.

೧೧೮–೧೧೯. ಗಂಗೆಯು ತೀರ್ಥಗಳಲ್ಲಿ ಉತ್ತಮ ತೀರ್ಥವೂ, ನದಿಗಳಲ್ಲಿ ಉತ್ತಮ ನದಿಯೂ, ಮಹಾ ಪಾತಕಿಗಳಾದ ಪ್ರಾಣಿಗಳಿಗೆ ಸ್ವರ್ಗವನ್ನು ನೀಡುವುದೂ ಆಗಿರುವುದು. ದೇವಲೋಕ, ಭೂಮಿ, ಆಕಾಶಗಳಲ್ಲಿರುವ ಸಮಸ್ತ ತೀರ್ಥಗಳೂ ಗಂಗೆಯಲ್ಲಿ ನೆಲೆಸಿರುವುವು.

ಜ್ಞಾತ್ವಾಜ್ಞಾತ್ವಾ ಚ ಗಂಗಾಯಾಂ ಯಃ ಪಂಚತ್ವಮವಾಪ್ನುಯಾತ್ ।
ಅನಾತ್ಮಘಾತೀ ಸ್ವರ್ಗೀ ಸ್ಯಾನ್ನರಕಾನ್ ಸ ನ ಪಶ್ಯತಿ ॥ ೧೨೦ ॥
ಗಂಗೈವ ಸರ್ವತೀರ್ಥಾನಿ ಗಂಗೈವ ಚ ತಪೋವನಂ ।
ಗಂಗೈವ ಸಿದ್ಧಿಕ್ಷೇತ್ರಂ ಹಿ ನಾಽತ್ರ ಕಾರ್ಯಾ ವಿಚಾರಣಾ ॥ ೧೨೧ ॥
ಯತ್ರ ಕಾಮಫಲಾ ವೃಕ್ಷಾ ಮಹೀ ಯತ್ರ ಹಿರಣ್ಮಯೀ ।
ಜಾಹ್ನವೀ ಸ್ನಾಯಿನಸ್ತತ್ರ ನಿವಸಂತಿ ಘಟೋದ್ಭವ ॥ ೧೨೨ ॥
ಧೇನುಂ ಭಾಗೀರಥೀತೀರೇ ಸುಶೀಲಾಂ ಚ ಪಯಸ್ವಿನೀಂ ।
ವಾಸೋರತ್ನೈರಲಂಕೃತ್ವಾ ಬ್ರಾಹ್ಮಣಾಯ ದದಾತಿ ಯಃ ॥ ೧೨೩ ॥
ಯಾವಂತಿ ತಸ್ಯಾ ಲೋಮಾನಿ ಮುನೇ ತತ್ಸಂತತೇರಪಿ ।
ತಾವದ್ವರ್ಷಸಹಸ್ರಾಣಿ ಸಸ್ವರ್ಗಸುಖಭುಗ್ಭವೇತ್ ॥ ೧೨೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಗಂಗಾಮಹಿಮಾನುವರ್ಣನಂ" ನಾಮಾಽಷ್ಟಾವಿಂಶೋಽಧ್ಯಾಯಃ

---

೧೨೦. ತಿಳಿದೂ, ತಿಳಿದೂ ಗಂಗೆಯಲ್ಲಿ ಮೃತನಾದವನು ಸಹ ಆತ್ಮಘಾತುಕನಾಗದೆ ಸ್ವರ್ಗವನ್ನು ಹೊಂದಿ ನರಕವನ್ನು ನೋಡುವುದಿಲ್ಲ.

೧೨೧. ಗಂಗೆಯೇ ಸಮಸ್ತ ತೀರ್ಥಗಳೂ, ತಪೋವನವೂ, ಸಿದ್ಧಿಕ್ಷೇತ್ರವೂ ಆಗಿರುವಳು. ಈ ವಿಷಯದಲ್ಲಿ ಸಂದೇಹವಿಲ್ಲ.

೧೨೨. ಎಲೈ ಅಗಸ್ತ್ಯನೆ! ಜಾಹ್ನವಿಯಲ್ಲಿ ಸ್ನಾನಮಾಡುವವರು ಇಷ್ಟಾರ್ಥಗಳನ್ನು ಕೊಡುವ ವೃಕ್ಷಗಳೂ, ಸುವರ್ಣಮಯವಾದ ಭೂಮಿಯೂ ಇರುವ ಸ್ಥಳದಲ್ಲಿ ವಾಸಿಸುವರು.

೧೨೩–೧೨೪. ಭಾಗೀರಥಿಯ ದಡದಲ್ಲಿ ಒಳ್ಳೆಯ ಸ್ವಭಾವವುಳ್ಳುದೂ, ಹಾಲನ್ನು ಕೊಡುವುದೂ ಆದ ಹಸುವನ್ನು ವಸ್ತ್ರ ಭೂಷಣಗಳಿಂದ ಅಲಂಕರಿಸಿ ಬ್ರಾಹ್ಮಣನಿಗೆ ದಾನಮಾಡುವವನು ಆ ಗೋವಿನ ಮತ್ತು ಅದರ ಸಂತತಿಯ ರೋಮಸಂಖ್ಯೆಯಷ್ಟು ಸಾವಿರ ವರ್ಷಗಳಕಾಲ ಸ್ವರ್ಗದಲ್ಲಿ ಸುಖವನ್ನನುಭವಿಸುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ಗಂಗಾಮಹಿಮಾನುವರ್ಣನ"ವೆಂಬ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನತ್ರಿಂಶೋಽಧ್ಯಾಯಃ

### ಗಂಗಾಸಹಸ್ರನಾಮಕಥನಂ

**ಅಗಸ್ತ್ಯ ಉವಾಚ :—**

**ವಿನಾಸ್ನಾನೇನ ಗಂಗಾಯಾ ನೃಣಾಂ ಜನ್ಮ ನಿರರ್ಥಕಂ ।**
**ಉಪಾಯಾಂತರಮಸ್ತ್ಯನ್ಯದ್ಯೇನ ಸ್ನಾನಫಲಂ ಲಭೇತ್ ॥ ೧ ॥**
**ಅಶಕ್ತಾನಾಂ ಚ ಪಂಗೂನಾಮಾಲಸ್ಯೋಪಹತಾತ್ಮನಾಂ ।**
**ದೂರದೇಶಾಂತರಸ್ಥಾನಾಂ ಗಂಗಾಸ್ನಾನಂ ಕಥಂ ಭವೇತ್ ॥ ೨ ॥**
**ದಾನಂ ವಾಽಥ ವ್ರತಂ ವಾಽಥ ಮಂತ್ರಃ ಸ್ತೋತ್ರಂ ಜಪೋಽಥವಾ ।**
**ತೀರ್ಥಾಂತರಾಭಿಷೇಕೋ ವಾ ದೇವತೋಪಾಸನಂ ತು ವಾ ॥ ೩ ॥**
**ಯದ್ಯಸ್ತಿ ಕಿಂಚಿತ್ಷಣ್ಮುಖವಕ್ತ್ರ ಗಂಗಾಸ್ನಾನಫಲಪ್ರದಂ ।**
**ವಿಧಾನಾಂತರಮಾತ್ರೇಣ ತದ್ವದ ಪ್ರಣತಾಯ ಮೇ ॥ ೪ ॥**
**ತ್ವತ್ತೋ ನ ವೇದ ಸ್ಕಂದಾನ್ಯೋ ಗಂಗಾಗರ್ಭಸಮುದ್ಭವ ।**
**ಪರಂ ಸ್ವರ್ಗತರಂಗಿಣ್ಯಾ ಮಹಿಮಾನಂ ಮಹಾಮತೇ ॥ ೫ ॥**

---

### ಕನ್ನಡದ ಅನುವಾದ

#### ಗಂಗಾಸಹಸ್ರನಾಮಕಥನ

೧. ಅಗಸ್ತ್ಯನು ಹೇಳುತ್ತಾನೆ:—ಗಂಗೆಯಲ್ಲಿ ಸ್ನಾನಮಾಡದ ಮಾನವರ ಜನ್ಮವು ನಿಷ್ಫಲವಾದುದು. ಈ ಗಂಗಾಸ್ನಾನದ ಫಲವನ್ನು ಪಡೆಯಲು ಬೇರೆ ಉಪಾಯವಿರುವುದೆ?

೨. ಅಸಮರ್ಥರೂ, ಕುಂಟರೂ, ಆಲಸ್ಯವುಳ್ಳವರೂ, ದೂರದೇಶದಲ್ಲಿರುವವರೂ ಆದವರಿಗೆ ಗಂಗಾಸ್ನಾನವು ಹೇಗೆ ಲಭಿಸುವುದು.

೩–೪. ಎಲೈ ಸ್ಕಂದನೆ! ನಮಸ್ಕಾರಮಾಡಿ ಕೇಳುತ್ತಿರುವ ನನಗೆ, ಗಂಗಾಸ್ನಾನಫಲವನ್ನು ಕೊಡುವ ದಾನವನ್ನಾಗಲಿ, ವ್ರತವನ್ನಾಗಲಿ, ಮಂತ್ರವನ್ನಾಗಲಿ, ಸ್ತೋತ್ರ, ಜಪಗಳನ್ನಾಗಲಿ, ಇತರ ತೀರ್ಥಸ್ನಾನವನ್ನಾಗಲಿ, ದೇವತೋಪಾಸನೆಯನ್ನಾಗಲಿ, ಇನ್ನೂ ಯಾವುದಾದರೂ ಇತರ ವಿಧಿಯಿದ್ದರೆ ಅದನ್ನಾಗಲಿ ಹೇಳು.

೫. ಗಂಗೆಯಿಂದ ಜನಿಸಿದ ನಿನ್ನನ್ನು ಬಿಟ್ಟರೆ ಇತರಾರೂ ಗಂಗೆಯ ಮಹಿಮೆಯನ್ನು ತಿಳಿದಿರುವುದಿಲ್ಲ.

ಸ್ಕಂದ ಉವಾಚ :—

ಸಂತಿ ಪುಣ್ಯಜಲಾನೀಹ ಸರಾಂಸಿ ಸರಿತೋ ಮುನೇ ।
ಸ್ಥಾನೇ ಸ್ಥಾನೇ ಚ ತೀರ್ಥಾನಿ ಜಿತಾತ್ಮಾಧ್ಯುಷಿತಾನಿ ಚ ॥ ೬ ॥
ದೃಷ್ಟಪ್ರತ್ಯಯಕಾರೀಣಿ ಮಹಾಮಹಿಮಭಾಂಜ್ಯಪಿ ।
ಪರಂ ಸ್ವರ್ಗತರಂಗಿಣ್ಯಾಃ ಕೋಟ್ಯಂಶೋಽಪಿ ನ ತತ್ರ ವೈ ॥ ೭ ॥
ಅನೇನೈವಾನುಮಾನೇನ ಬುಧ್ಯಸ್ವ ಕಲಶೋದ್ಭವ ।
ದಧ್ರೇ ಗಂಗೋತ್ತಮಾಂಗೇನ ದೇವದೇವೇನ ಶಂಭುನಾ ॥ ೮ ॥
ಸ್ನಾನಕಾಲೇಽನ್ಯತೀರ್ಥೇಷು ಜಪ್ಯತೇ ಜಾಹ್ನವೀ ಜನೈಃ ।
ವಿನಾ ವಿಷ್ಣುಪದೀಂ ಕ್ವಾನ್ಯತ್ಸಮರ್ಥಮಘಮೋಚನೇ ॥ ೯ ॥
ಗಂಗಾಸ್ನಾನಫಲಂ ಬ್ರಹ್ಮನ್ ಗಂಗಾಯಾಮೇವ ಲಭ್ಯತೇ ।
ಯಥಾ ದ್ರಾಕ್ಷಾಫಲಸ್ವಾದೋ ದ್ರಾಕ್ಷಾಯಾಮೇವ ನಾನ್ಯತಃ ॥ ೧೦ ॥
ಅಸ್ತ್ಯುಪಾಯ ಇಹತ್ವೇಕಃ ಸ್ಯಾದ್ಯೇನಾವಿಕಲಂ ಫಲಂ ।
ಸ್ನಾನಸ್ಯ ದೇವಸರಿತೋ ಮಹಾಗುಹ್ಯತಮೋ ಮುನೇ ॥ ೧೧ ॥
ಶಿವಭಕ್ತಾಯ ಶಾಂತಾಯ ವಿಷ್ಣುಭಕ್ತಿಪರಾಯ ಚ ।
ಶ್ರದ್ಧಾಲವೇ ತ್ವಾಸ್ತಿಕಾಯ ಗರ್ಭವಾಸಮುಮುಕ್ಷವೇ ॥ ೧೨ ॥
ಕಥನೀಯಂ ನ ಚಾನ್ಯಸ್ಯ ಕಸ್ಯಚಿತ್ಕೇನಚಿತ್ಕ್ವಚಿತ್ ।
ಇದಂ ರಹಸ್ಯಂ ಪರಮಂ ಮಹಾಪಾತಕನಾಶನಂ ॥ ೧೩ ॥

---

೬–೭. ಸ್ಕಂದನು ಹೇಳುತ್ತಾನೆ:—ಮುನಿಯೆ! ಈ ಲೋಕದಲ್ಲಿ ಪುಣ್ಯಜಲವುಳ್ಳ ನದಿಗಳೂ, ಜಿತೇಂದ್ರಿಯರಿಂದ ವಾಸಿಸಲ್ಪಡುವುವೂ, ದರ್ಶನದಿಂದ ಜ್ಞಾನವನ್ನುಂಟುಮಾಡುವುವೂ, ಅತ್ಯಂತ ಮಹಿಮೆಯುಳ್ಳವೂ ಆದ ತೀರ್ಥಗಳೂ ಅಲ್ಲಲ್ಲಿವೆ. ಆದರೆ ಅವುಗಳಲ್ಲಿ ಗಂಗಾಮಹಿಮೆಯ ಕೋಟ್ಯಂಶವೂ ಇರುವುದಿಲ್ಲ.

೮. ಎಲೈ ಅಗಸ್ತ್ಯನೆ! ಶಂಭುವು ಗಂಗೆಯನ್ನು ತಲೆಯಲ್ಲಿ ಧರಿಸಿರುವ ಯುಕ್ತಿಯಿಂದಲೆ ಇದನ್ನು ತಿಳಿದುಕೊ.

೯–೧೦. ಜನರು ಇತರ ತೀರ್ಥಗಳಲ್ಲಿ ಸ್ನಾನಮಾಡುವಾಗ ಗಂಗೆಯನ್ನು ಜಪಿಸುವರು. ಗಂಗೆಯನ್ನು ಬಿಟ್ಟರೆ ಪಾಪವನ್ನು ಪರಿಹರಿಸುವ ಇತರ ತೀರ್ಥವು ಎಲ್ಲಿರುವುದು? ದ್ರಾಕ್ಷಿಯಹಣ್ಣಿನ ರುಚಿಯು ದ್ರಾಕ್ಷಿಯಹಣ್ಣಿನಲ್ಲಿಯೇ ಇರುವಂತೆ ಗಂಗಾಸ್ನಾನಫಲವು ಗಂಗೆಯಲ್ಲಿಯೇ ಲಭಿಸುವುದು.

೧೧. ಮುನಿಯೆ! ಗಂಗಾಸ್ನಾನದ ಸಂಪೂರ್ಣ ಫಲವನ್ನು ಪಡೆಯಲು ರಹಸ್ಯವಾದ ಉಪಾಯವೊಂದಿರುವುದು.

೧೨–೧೩. ಮಹಾ ಪಾತಕವನ್ನು ಪರಿಹರಿಸುವ ಈ ಉತ್ತಮ ರಹಸ್ಯವನ್ನು ಹರಿಹರಭಕ್ತನೂ, ಶಾಂತನೂ, ಶ್ರದ್ಧಾವಂತನೂ, ಆಸ್ತಿಕನೂ, ಮೋಕ್ಷವನ್ನು

ಮಹಾಶ್ರೇಯಸ್ಕರಂ ಪುಣ್ಯಂ ಮನೋರಥಕರಂ ಪರಂ ।
ದ್ಯುನದೀಪ್ರೀತಿಜನಕಂ ಶಿವಸಂತೋಷಸಂತತಿಂ ॥ ೧೪ ॥
ನಾಮ್ನಾಂ ಸಹಸ್ರಂ ಗಂಗಾಯಾಃ ಸ್ತವರಾಜೇಷು ಶೋಭನಂ ।
ಜಪ್ಯಾನಾಂ ಪರಮಂ ಜಪ್ಯಂ ವೇದೋಪನಿಷದಾ ಸಮಂ ॥ ೧೫ ॥
ಜಪನೀಯಂ ಪ್ರಯತ್ನೇನ ಮೌನಿನಾ ವಾಚಕಂ ವಿನಾ ।
ಶುಚಿಸ್ಥಾನೇಷು ಶುಚಿನಾ ಸುಸ್ಪಷ್ಟಾಕ್ಷರಮೇವ ಚ ॥ ೧೬ ॥

ಸ್ಕಂದ ಉವಾಚ :—

॥ ಓಂ ನಮೋ ಗಂಗಾದೇವ್ಯೈ ॥

ಓಂಕಾರರೂಪಿಣ್ಯಜರಾಽತುಲಾಽನಂತಾಽಮೃತಸ್ರವಾ ।
ಅತ್ಯುದಾರಾಽಭಯಾಽಶೋಕಾಽಲಕನಂದಾಽಮೃತಾಽಮಲಾ ॥ ೧೭ ॥
ಅನಾಥವತ್ಸಲಾಽಮೋಘಾಽಪಾಂ ಯೋನಿರಮೃತಪ್ರದಾ ।
ಅವ್ಯಕ್ತಲಕ್ಷಣಾಽಕ್ಷೋಭ್ಯಾಽನವಚ್ಛಿನ್ನಾಽಪರಾಜಿತಾ ॥ ೧೮ ॥
ಅನಾಥನಾಥಾಽಭೀಷ್ಟಾರ್ಥಸಿದ್ಧಿದಾಽನಂಗವರ್ಧಿನೀ ।
ಅಣಿಮಾದಿಗುಣಾಧಾರಾಽಗ್ರಗಣ್ಯಾಽಲೀಕಹಾರಿಣೀ ॥ ೧೯ ॥

---

ಬಯಸುವವನೂ, ಆದವನಿಗೆ ಹೇಳಬೇಕು. ಬೇರೆ ಯಾರಿಗೂ ಯಾವನೂ ಎಲ್ಲಿಯೂ ಹೇಳಬಾರದು.

೧೪–೧೬. ಅತ್ಯಂತ ಶ್ರೇಯಸ್ಸನ್ನುಂಟುಮಾಡುವುದೂ, ಪುಣ್ಯಕರವೂ, ಇಷ್ಟಾರ್ಥವನ್ನೀಯುವುದೂ, ಗಂಗೆಗೆ ಪ್ರೀತಿಯನ್ನುಂಟುಮಾಡುವುದೂ, ಶಿವನಿಗೆ ಸಂತೋಷವನ್ನುಂಟುಮಾಡುವುದೂ, ಶ್ರೇಷ್ಠವಾದ ಸ್ತೋತ್ರಗಳಲ್ಲಿ ಮಂಗಳಕರವೂ, ಜಪಗಳಲ್ಲಿ ಉತ್ತಮ ಜಪವೂ, ವೇದೋಪನಿಷತ್ತುಗಳಿಗೆ ಸಮವೂ ಆದ ಈ ರಹಸ್ಯವನ್ನು ಶುದ್ಧವಾದ ಸ್ಥಳದಲ್ಲಿ ಶುದ್ಧನಾಗಿ ಮೌನದಿಂದ ಸ್ಪಷ್ಟವಾಗಿ ಜಪಿಸಬೇಕು.

೧೭–೩೭. ಸ್ಕಂದನು ಹೇಳುತ್ತಾನೆ:—ಗಂಗಾದೇವಿಗೆ ನಮಸ್ಕಾರವು. ಈ ಗಂಗೆಯು ಪ್ರಣವಸ್ವರೂಪಳೂ, ಮುಪ್ಪಿಲ್ಲದವಳೂ, ಪರಿಮಾಣರಹಿತಳೂ, ನಾಶರಹಿತಳೂ, ಅಮೃತರೂಪವಾದ ನೀರುಳ್ಳವಳೂ, ಅತ್ಯಂತೋದಾರಳೂ, ಭಯರಹಿತಳೂ, ದುಃಖವಿಲ್ಲದವಳೂ, ಅಲಕನಂದೆಯೂ, ಅಮೃತರೂಪಳೂ, ಶುದ್ಧಳೂ, ವಿಷ್ಣುಭಕ್ತಪ್ರಿಯಳೂ, ಅಮೋಘಾನಾಮಕಳೂ, ಜಲಕ್ಕೆ ಕಾರಣಳೂ, ಮೋಕ್ಷಪ್ರದಳೂ, ನಾರಾಯಣಸ್ವರೂಪಳೂ, ಸ್ಥಿರಳೂ, ಪರಿಚ್ಛೇದರಹಿತಳೂ, ಉತ್ಕೃಷ್ಟಳೂ, ಯಾರಿಂದಲೂ ಜಯಿಸಲ್ಪಡದವಳೂ, ವಿಷ್ಣುಭಕ್ತರಿಂದ ಪ್ರಾರ್ಥಿಸಲ್ಪಡುವವಳೂ, ಇಷ್ಟಾರ್ಥಸಿದ್ಧಿಯನ್ನು ನೀಡುವವಳೂ, ಕಾಮವರ್ಧಿನಿಯೂ, ಅಣಿಮಾದ್ಯಷ್ಟೈಶ್ವರ್ಯವುಳ್ಳವಳೂ, ವಿಷ್ಣುವೇ ಮುಖ್ಯವಾದ ಆಶ್ರಯವಾಗುಳ್ಳವಳೂ, ಸರ್ವಶ್ರೇಷ್ಠಳೂ, ಮಿಥ್ಯಾಜ್ಞಾನವನ್ನು

ಅಚಿಂತ್ಯಶಕ್ತಿರನಘಾಽದ್ಭುತರೂಪಾಽಘಹಾರಿಣೀ ।
ಅದ್ರಿರಾಜಸುತಾಽಷ್ಟಾಂಗಯೋಗಸಿದ್ಧಿಪ್ರದಾಽಚ್ಯುತಾ ॥ ೨೦ ॥
ಅಕ್ಷುಣ್ಣಶಕ್ತಿರಸುದಾಽನಂತತೀರ್ಥಾಽಮೃತೋದಕಾ ।
ಅನಂತಮಹಿಮಾಽಪಾರಾಽನಂತಸೌಖ್ಯಪ್ರದಾಽನ್ನದಾ ॥ ೨೧ ॥
ಅಶೇಷದೇವತಾಮೂರ್ತಿರಘೋರಾಽಮೃತರೂಪಿಣೀ ।
ಅವಿದ್ಯಾಜಾಲಶಮನೀ ಹ್ಯಪ್ರತರ್ಕ್ಯಗತಿಪ್ರದಾ ॥ ೨೨ ॥
ಅಶೇಷವಿಘ್ನಸಂಹರ್ತ್ರೀ ತ್ವಶೇಷಗುಣಗುಂಫಿತಾ ।
ಅಜ್ಞಾನತಿಮಿರಜ್ಯೋತಿರನುಗ್ರಹಪರಾಯಣಾ ॥ ೨೩ ॥
ಅಭಿರಾಮಾಽನವದ್ಯಾಂಗ್ಯನಂತಸಾರಾಽಕಲಂಕಿನೀ ।
ಆರೋಗ್ಯದಾಽಽನಂದವಲ್ಲೀ ತ್ವಾಪನ್ನಾರ್ತಿವಿನಾಶಿನೀ ॥ ೨೪ ॥
ಆಶ್ಚರ್ಯಮೂರ್ತಿರಾಯುಷಾಢ್ಯಾಽದ್ಯಾಽಪ್ಯಾಽರ್ಯಸೇವಿತಾ ।
ಆಪ್ಯಾಯಿನ್ಯಾಪ್ತವಿದ್ಯಾಽಖ್ಯಾತ್ವಾನಂದಾಽಶ್ವಾಸದಾಯಿನೀ ॥ ೨೫ ॥

---

ಪರಿಹರಿಸುವವಳೂ, ಆಲೋಚಿಸಲಾಗದ ಶಕ್ತಿಯುಳ್ಳವಳೂ, ಪಾಪರಹಿತಳೂ, ಆಶ್ಚರ್ಯರೂಪಳೂ, ಪಾಪವನ್ನು ಪರಿಹರಿಸುವವಳೂ, ಹಿಮಾಲಯನ ಮಗಳೂ, ಅಷ್ಟಾಂಗಯೋಗ ಸಿದ್ಧಿಯಾದ ಮೋಕ್ಷವನ್ನೀಯುವವಳೂ, ತನ್ನ ಸ್ವರೂಪದಿಂದ ತಪ್ಪದವಳೂ, ಅಕುಂಠಿತಶಕ್ತಿಯುಳ್ಳವಳೂ, ಪ್ರಾಣಪ್ರದಳೂ, ಸಕಲ ತೀರ್ಥ ರೂಪಳೂ, ಅಮೃತದಂತೆ ರುಚಿಯಾದ ನೀರುಳ್ಳವಳೂ, ಅಪರಿಮಿತಮಹಿಮೆ ಯುಳ್ಳವಳೂ, ಅವಧಿಯಿಲ್ಲದವಳೂ, ಬ್ರಹ್ಮಾನಂದವನ್ನು ಕೊಡುವವಳೂ, ಭುಕ್ತಿಪ್ರದಳೂ, ಸಮಸ್ತ ದೇವತಾರೂಪಳೂ, ಶಾಂತಸ್ವಭಾವಳೂ, ಮೋಕ್ಷಕ್ಕೆ ಕಾರಣವಾದ ನೀರುಳ್ಳವಳೂ, ಅವಿದ್ಯೆಯೆಂಬ ಆವರಣವನ್ನು ನಿವಾರಿಸುವವಳೂ, ಬ್ರಹ್ಮೈಕ್ಯರೂಪಗತಿಯನ್ನೀಯುವವಳೂ, ಸಮಸ್ತವಿಘ್ನಪರಿಹಾರಕಳೂ, ಸಮಸ್ತ ಗುಣಪೂರ್ಣಳೂ, ಅಜ್ಞಾನವೆಂಬ ಕತ್ತಲೆಗೆ ಪ್ರಕಾಶದಂತಿರುವವಳೂ, ಅನುಗ್ರಹ ನಿರತಳೂ, ಯೋಗಿಗಳ ವಿಹಾರಸ್ಥಾನಳೂ, ನಿರ್ದುಷ್ಟಸ್ವರೂಪಳೂ, ಅಪರಿಮಿತ ಸಾರವುಳ್ಳವಳೂ, ಕಲಂಕರಹಿತಳೂ, ಆರೋಗ್ಯಪ್ರದಳೂ, ಸುಖಲತಾರೂಪಳೂ, ಭಕ್ತರ ಪೀಡೆಯನ್ನು ನಿವಾರಿಸುವವಳೂ, ಆಶ್ಚರ್ಯಮೂರ್ತಿಯೂ, ಆಯುಷ್ಯ ವನ್ನೀಯುವವಳೂ, ಪರಿಪೂರ್ಣಳೂ, ಸರ್ವಕಾರಣಳೂ, ನಾಲ್ಕುಸಮುದ್ರಗಳನ್ನೂ ವ್ಯಾಪಿಸಿದವಳೂ, ಪೂಜ್ಯರಿಂದ ಸಂಸೇವಿತಳೂ, ತೃಪ್ತಿಯನ್ನೀಯುವವಳೂ, ಬ್ರಹ್ಮಸಾಕ್ಷಾತ್ಕಾರಪ್ರದವಾದ ವಿದ್ಯೆಯನ್ನು ಹೊಂದಿದವಳೂ, ಪ್ರಸಿದ್ಧಳೂ, ಸುಖಸ್ವರೂಪಳೂ, ನಿರ್ಭಯವನ್ನುಂಟುಮಾಡುವವಳೂ, ಆಲಸ್ಯಮೂಲ ವಾದ ಕಾಮಾದಿಗಳನ್ನು ಪರಿಹರಿಸುವವಳೂ, ಆಧ್ಯಾತ್ಮಿಕಾದ್ಯಾಪತ್ತುಗಳನ್ನು ನಿವಾರಿಸುವವಳೂ, ಮೋಕ್ಷವರ್ಷಿಣಿಯೂ, ಇರಾವತೀನದೀರೂಪಳೂ, ಇಷ್ಟ

ಆಲಸ್ಯಘ್ನ್ಯಾಪದಾಂ ಹಂತ್ರೀ ಹ್ಯಾನಂದಾಽಮೃತವರ್ಷಿಣೀ ।
ಇರಾವತೀಷ್ಟದಾತ್ರೀಷ್ಟಾ ತ್ವಿಷ್ಟಾಪೂರ್ತಫಲಪ್ರದಾ ॥ ೨೬ ॥
ಇತಿಹಾಸಶ್ರುತೀಡ್ಯಾರ್ಥಾ ತ್ವಿಹಾಮುತ್ರಶುಭಪ್ರದಾ ।
ಇಜ್ಯಾಶೀಲಸಮಿಜ್ಯೇಷ್ಠಾ ತ್ವಿಂದ್ರಾದಿಪರಿವಂದಿತಾ ॥ ೨೭ ॥
ಇಲಾಽಲಂಕಾರಮಾಲೇದ್ಧಾ ತ್ವಿಂದಿರಾ ರಮ್ಯಮಂದಿರಾ ।
ಇಂದಿಂದಿರಾದಿ ಸಂಸೇವ್ಯಾ ತ್ವೀಶ್ವರೀಶ್ವರವಲ್ಲಭಾ ॥ ೨೮ ॥
ಈತಿಭೀತಿಹರೇಡ್ಯಾ ಚ ತ್ವೀಡನೀಯಚರಿತ್ರಭೃತ್ ।
ಉತ್ಕೃಷ್ಟಶಕ್ತಿರುತ್ಕೃಷ್ಟೋಡುಪಮಂಡಲಚಾರಿಣೀ ॥ ೨೯ ॥
ಉದಿತಾಽಂಬರಮಾರ್ಗೋಸ್ರೋರಗಲೋಕವಿಹಾರಿಣೀ ।
ಉಕ್ಷೋರ್ವರೋತ್ಪಲೋತ್ಕುಂಭಾ ಉಪೇಂದ್ರಚರಣದ್ರವಾ ॥ ೩೦ ॥
ಉದಸ್ವತ್ಪೂರ್ತಿಹೇತುಶ್ಚೋದಾರೋತ್ಸಾಹಪ್ರವರ್ಧಿನೀ ।
ಉದ್ವೇಗಘ್ನ್ಯುಷ್ಣಶಮನೀ ಉಷ್ಣರಶ್ಮಿಸುತಾಪ್ರಿಯಾ ॥ ೩೧ ॥
ಉತ್ಪತ್ತಿಸ್ಥಿತಿಸಂಹಾರಕಾರಿಣ್ಯುಪರಿಚಾರಿಣೀ ।
ಊರ್ಜಂ ವಹಂತ್ಯೂರ್ಜಧರೋರ್ಜಾವತೀ ಚೋರ್ಮಿಮಾಲಿನೀ ॥ ೩೨ ॥

---

ವನ್ನೀಡೇರಿಸುವವಳೂ, ಅತ್ಯಂತ ಪ್ರೀತಿವಿಷಯಳೂ, ಯಜ್ಞವಾಪ್ಯಾದಿ ನಿರ್ಮಾಣಗಳಿಗೆ ಫಲವನ್ನು ಕೊಡುವವಳೂ, ಇತಿಹಾಸ, ವೇದಗಳಿಂದ ಸ್ತುತ್ಯವಾದ ಅರ್ಥವುಳ್ಳವಳೂ, ಇಹಪರಲೋಕಗಳಲ್ಲಿ ಶುಭವನ್ನೀಯುವವಳೂ, ಯಾಗ ಮಾಡುವ ಬ್ರಹ್ಮಜ್ಞಾನಿಗಳಲ್ಲಿ ಜ್ಯೇಷ್ಠಳೂ, ಇಂದ್ರಾದಿದೇವತೆಗಳಿಂದ ವಂದಿತಳೂ, ಭೂಮಿಗೆ ಅಲಂಕಾರಮಾಲೆಯಂತಿರುವವಳೂ, ಸ್ವಯಂಪ್ರಕಾಶಳೂ, ಲಕ್ಷ್ಮಿಗೆ ಮನೋಹರಮಂದಿರಳೂ, ಲಕ್ಷ್ಮ್ಯಾದಿಗಳಿಂದ ಸೇವಿಸಲ್ಪಟ್ಟವಳೂ, ಸಕಲಕ್ಕೂ ನಿಯಾಮಕಳೂ, ವಿಶ್ವೇಶ್ವರನ ಕಾಂತೆಯೂ, ಈತಿಬಾಧೆಯ ಭಯವನ್ನು ಪರಿಹರಿಸುವವಳೂ, ಸ್ತುತ್ಯಳೂ, ಶ್ಲಾಘ್ಯಚರಿತ್ರೆಯುಳ್ಳವಳೂ, ಉತ್ಕೃಷ್ಟವಾದ ಸಾಮರ್ಥ್ಯವುಳ್ಳವಳೂ, ಉತ್ತಮಳೂ, ಚಂದ್ರಮಂಡಲದಲ್ಲಿ ಸಂಚರಿಸುವವಳೂ, ಆಕಾಶಮಾರ್ಗವನ್ನು ಬೆಳಗಿಸಿದವಳೂ, ಪ್ರಕಾಶರೂಪಳೂ, ಪಾತಾಳಲೋಕದಲ್ಲಿ ವಿಹರಿಸುವವಳೂ, ಫಲವನ್ನು ವರ್ಷಿಸುವವಳೂ, ಭೂಮಿರೂಪಳೂ, ಉತ್ಪಲರೂಪಳೂ, ಕಲಶಗಳನ್ನು ಶ್ರೇಷ್ಠಗೊಳಿಸುವವಳೂ, ವಾಮನನ ಪಾದಪ್ರಕ್ಷಾಳನ ಜಲರೂಪಳೂ, ಸಮುದ್ರವನ್ನು ಪೂರ್ತಿಗೊಳಿಸಲು ಕಾರಣಳೂ, ದಾನಶೂರಳೂ, ಉತ್ಸಾಹವನ್ನು ಹೆಚ್ಚಿಸುವವಳೂ, ದುರವಸ್ಥೆಯನ್ನು ನಿವಾರಿಸುವವಳೂ, ತಾಪವನ್ನು ಪರಿಹರಿಸುವವಳೂ, ಸೂರ್ಯಸುತೆಯಾದ ಯಮುನೆಯ ಸ್ನೇಹಿತಳೂ, ಸೃಷ್ಟಿ, ಪಾಲನೆ, ಸಂಹಾರಗಳನ್ನು ಮಾಡುವವಳೂ, ಬ್ರಹ್ಮಾಂಡದ ಮೇಲೆ ಸಂಚರಿಸುವವಳೂ, ಊರ್ಜಂವಹಂತೀತ್ಯಾದಿ ಮಂತ್ರರೂಪಳೂ, ಪ್ರಾಣಧಾರಿಣಿಯೂ, ಬಲಧಾರಿಣಿಯೂ, ಅಲೆಗಳ ಮಾಲೆಯುಳ್ಳವಳೂ ಆಗಿರುವಳು ;

ಊರ್ಧ್ವರೇತಃ ಪ್ರಿಯೋರ್ಧ್ವಾರ್ಧ್ವಾ ಹ್ಯೂರ್ಮಿರ್ಲೋರ್ಧ್ವಗತಿಪ್ರದಾ ।
ಋಷಿವೃಂದಸ್ತುತರ್ಧಿಶ್ಚ ಋಣತ್ರಯವಿನಾಶಿನೀ ॥ ೩೩ ॥
ಋತಂಭರರ್ಧಿದಾತ್ರೀ ಚ ಋಕ್ಸ್ವರೂಪಾ ಋಜುಪ್ರಿಯಾ ।
ಋಕ್ಷಮಾರ್ಗವಹರ್ಕ್ಷಾರ್ಚಿರ್ಋಜುಮಾರ್ಗಪ್ರದರ್ಶಿನೀ ॥ ೩೪ ॥
ಏಧಿತಾಽಖಿಲಧರ್ಮಾರ್ಥಾ ತ್ವೇಕೈಕಾಽಮೃತದಾಯಿನೀ ।
ಏಧನೀಯಸ್ವಭಾವೇಜ್ಯಾತ್ವೇಜಿತಾಶೇಷಪಾತಕಾ ॥ ೩೫ ॥
ಐಶ್ವರ್ಯಾದ್ಯೈಶ್ವರ್ಯರೂಪಾ ಹ್ಯೈತಿಹ್ಯಂ ಹ್ಯೈಂದವೀ ದ್ಯುತಿಃ ।
ಓಜಸ್ವಿನ್ಯೋಷಧೀಕ್ಷೇತ್ರಮೋಜೋದೌದನದಾಯಿನೀ ॥ ೩೬ ॥
ಓಷ್ಠಾಮೃತೌನ್ನತ್ಯದಾತ್ರೀತ್ವೌಷಧಂ ಭವರೋಗಿಣಾಂ ।
ಔದಾರ್ಯಚಂಚುರೌಪೇಂದ್ರೀ ತ್ವೌಗ್ರೀಹ್ಯೌಮೇಯರೂಪಿಣೀ ॥ ೩೭ ॥
ಅಂಬರಾಧ್ವವಹಾಂಬಷ್ಠಾಂಬರಮಾಲಾಂಬುಜೇಕ್ಷಣಾ ।
ಅಂಬಿಕಾಂಬುಮಹಾಯೋನಿರಂಧೋದಾಂಧಕಹಾರಿಣೀ ॥ ೩೮ ॥
ಅಂಶುಮಾಲಾಹ್ಯಂಶುಮತೀತ್ವಂಗೀಕೃತಷಡಾನನಾ ।
ಅಂಧತಾಮಿಸ್ರಹಂತ್ರ್ಯಂಧುರಂಜನಾಹ್ಯಂಜನಾವತೀ ॥ ೩೯ ॥

---

೩೩–೬೦. ಊರ್ಧ್ವರೇತಸ್ಕರಾದ ಸನ್ಯಾಸಿಗಳಿಗೆ ಪ್ರಿಯಳೂ, ಊರ್ಧ್ವಮಾರ್ಗವುಳ್ಳವಳೂ, ಶೋಕಮೋಹಾದಿ ಅಲೆಗಳನ್ನು ಸ್ವೀಕರಿಸುವವಳೂ, ಸ್ವರ್ಗಗತಿಯನ್ನು ಕೊಡುವವಳೂ, ಋಷಿಗಳ ಸಮೂಹಗಳಿಂದ ಸ್ತುತಿಸಲ್ಪಟ್ಟ ಸಮೃದ್ಧಿಯುಳ್ಳವಳೂ, ದೇವಾದಿಋಣತ್ರಯಗಳನ್ನು ಪರಿಹರಿಸುವವಳೂ ಸತ್ಯವನ್ನುಧರಿಸಿರುವವಳೂ, ಸಮೃದ್ಧಿಯನ್ನೀಯುವವಳೂ, ಋಗ್ವೇದರೂಪಳೂ, ಋಜುಬುದ್ಧಿಯುಳ್ಳವರಿಗೆ ಪ್ರಿಯಳೂ, ನಕ್ಷತ್ರಮಾರ್ಗವನ್ನು ಧರಿಸಿದವಳೂ, ಚಂದ್ರಾದಿಗಳಂತೆ ಪ್ರಕಾಶವುಳ್ಳವಳೂ, ಮೋಕ್ಷಮಾರ್ಗವನ್ನು ತೋರಿಸುವವಳೂ, ಅಭಿವೃದ್ಧಿಗೊಳಿಸಲ್ಪಟ್ಟ ಸಮಸ್ತಧರ್ಮಾರ್ಥಗಳುಳ್ಳವಳೂ, ಅಸದೃಶಳೂ, ಅದ್ವಿತೀಯಜ್ಞಾನವನ್ನು ದಯೆಗೈಯುವವಳೂ, ಅಭಿವೃದ್ಧಿಗೊಳಿಸಲು ಯೋಗ್ಯವಾದ ಸ್ವಭಾವವುಳ್ಳವಳೂ, ಪೂಜ್ಯಳೂ, ನಿವಾರಿಸಲ್ಪಟ್ಟ ಸಮಸ್ತಪಾಪಗಳುಳ್ಳವಳೂ, ಐಶ್ವರ್ಯವನ್ನು ಕೊಡುವವಳೂ, ಈಶ್ವರಧರ್ಮರೂಪಳೂ, ಐತಿಹ್ಯವೆಂಬ ಪ್ರಮಾಣರೂಪಳೂ, ಚಂದ್ರನ ಕಾಂತಿಯುಳ್ಳವಳೂ, ಇಂದ್ರಿಯಸಾಮರ್ಥ್ಯವುಳ್ಳವಳೂ, ಔಷಧಿಗಳ ಕ್ಷೇತ್ರರೂಪಳೂ, ಇಂದ್ರಿಯ ಸಾಮರ್ಥ್ಯವನ್ನು ಕೊಡುವವಳೂ, ಅನ್ನಪೂರ್ಣೆಯೂ, ಮಧುರವಾದ ನುಡಿಯುಳ್ಳವಳೂ, ಉನ್ನತಗತಿಯನ್ನೀಯುವವಳೂ, ಸಂಸಾರವೆಂಬ ರೋಗವುಳ್ಳವರಿಗೆ ಔಷಧರೂಪಳೂ. ಔದಾರ್ಯದಿಂದ ವಿಖ್ಯಾತಳೂ, ಲಕ್ಷ್ಮೀರೂಪಳೂ, ಸಂಹಾರಕಾರಿಣಿಯೂ, ಗಣೇಶರೂಪಳೂ, ಆಕಾಶಮಾರ್ಗಗಾಮಿನಿಯೂ, ವಿಷ್ಣುಭಕ್ತರಲ್ಲಿಪ್ರೀತಿಯುಳ್ಳವಳೂ, ಆಕಾಶಶೋಭಾಧಾರಿಣಿಯೂ,

ಕಲ್ಯಾಣಕಾರಿಣೀ ಕಾಮ್ಯಾ ಕಮಲೋತ್ಪಲಗಂಧಿನೀ ।
ಕುಮುದ್ವತೀ ಕಮಲಿನೀ ಕಾಂತಿಃ ಕಲ್ಪಿತದಾಯಿನೀ ॥ ೪೦ ॥
ಕಾಂಚನಾಕ್ಷೀ ಕಾಮಧೇನುಃ ಕೀರ್ತಿಕೃತ್ಕ್ಲೇಶನಾಶಿನೀ ।
ಕ್ರತುಶ್ರೇಷ್ಠಾ ಕ್ರತುಫಲಾ ಕರ್ಮಬಂಧವಿಭೇದಿನೀ ॥ ೪೧ ॥
ಕಮಲಾಕ್ಷೀ ಕ್ಲಮಹರಾ ಕೃಶಾನುತಪನದ್ಯುತಿಃ ।
ಕರುಣಾರ್ದ್ರಾ ಚ ಕಲ್ಯಾಣೀ ಕಲಿಕಲ್ಮಷನಾಶಿನೀ ॥ ೪೨ ॥
ಕಾಮರೂಪಾ ಕ್ರಿಯಾಶಕ್ತಿಃ ಕಮಲೋತ್ಪಲಮಾಲಿನೀ ।
ಕೂಟಸ್ಥಾ ಕರುಣಾ ಕಾಂತಾ ಕೂರ್ಮಯಾನಾ ಕಲಾವತೀ ॥ ೪೩ ॥
ಕಮಲಾ ಕಲ್ಪಲತಿಕಾ ಕಾಲೀ ಕಲುಷವೈರಿಣೀ ।
ಕಮನೀಯಜಲಾ ಕಮ್ರಾ ಕಪರ್ದಿಸುಕಪರ್ದಗಾ ॥ ೪೪ ॥
ಕಾಲಕೂಟಪ್ರಶಮನೀ ಕದಂಬಕುಸುಮಪ್ರಿಯಾ ।
ಕಾಲಿಂದೀ ಕೇಲಿಲಲಿತಾ ಕಲಕಲ್ಲೋಲಮಾಲಿಕಾ ॥ ೪೫ ॥

---

ತಾವರೆಹೂವಿನಂತೆ ಕಣ್ಣುಗಳುಳ್ಳವಳೂ, ಪಾರ್ವತೀರೂಪಳೂ, ಜಲಕ್ಕೆ ಮೂಲ ಕಾರಣಳೂ, ಅನ್ನವನ್ನು ನೀಡುವವಳೂ, ಅಜ್ಞಾನನಾಶಕಳೂ, ತೇಜಃಪುಂಜ ರೂಪಳೂ, ತೇಜಸ್ಸುಳ್ಳವಳೂ, ಷಣ್ಮುಖನನ್ನು ಸ್ವೀಕರಿಸಿದವಳೂ, ನರಕವನ್ನು ನಿವಾರಿಸುವವಳೂ, ಧರ್ಮಕೂಪಸ್ವರೂಪಳೂ, ಅವಿದ್ಯಾರೂಪಳೂ, ಅವಿದ್ಯೆಯುಳ್ಳ ವಳೂ, ಶುಭವನ್ನುಂಟುಮಾಡುವವಳೂ, ಅಪೇಕ್ಷೆಮಾಡಲರ್ಹಳೂ, ತಾವರೆ ಕನ್ನೈದಿಲೆ ಹೂವುಗಳ ಸುವಾಸನೆಯುಳ್ಳವಳೂ, ನೈದಿಲೆ ಮತ್ತು ಕಮಲಗಳುಳ್ಳ ವಳೂ, ಚಂದ್ರನತೇಜಸ್ಸಿನರೂಪಳೂ, ಇಷ್ಟಾರ್ಥಗಳನ್ನು ಕೊಡುವವಳೂ, ಸುವರ್ಣ ದಂತೆಕಣ್ಣುಗಳುಳ್ಳವಳೂ, ಕಾಮಧೇನುಸ್ವರೂಪಳೂ, ಕೀರ್ತಿಯನ್ನುಂಟುಮಾಡು ವವಳೂ, ಪಂಚಕ್ಲೇಶಗಳನ್ನು ನಿವಾರಿಸುವವಳೂ, ಅಶ್ವಮೇಧಾದಿಯಾಗಗಳಿ ಗಿಂತಲೂ ಶ್ರೇಷ್ಠಳೂ, ಯಜ್ಞಫಲವನ್ನು ಕೊಡುವವಳೂ, ಕರ್ಮಬಂಧವನ್ನು ಭೇದಿಸುವವಳೂ, ಕಮಲದಂತೆ ಕಣ್ಣುಗಳುಳ್ಳವಳೂ, ಆಯಾಸವನ್ನು ಪರಿಹರಿಸು ವವಳೂ, ಅಗ್ನಿಸೂರ್ಯರಂತೆ ಕಾಂತಿಯುಳ್ಳವಳೂ, ದಯಾರ್ದ್ರಳೂ, ಮಂಗಳ ಕರಳೂ, ಕಲಿದೋಷಗಳನ್ನು ನಾಶಗೊಳಿಸುವವಳೂ, ಸ್ವೇಚ್ಛಾರೂಪಿಣಿಯೂ, ಕ್ರಿಯಾಶಕ್ತಿರೂಪಳೂ, ಕಮಲೋತ್ಪಲಗಳ ಸಾಲುಗಳುಳ್ಳವಳೂ, ಅಜ್ಞಾನ ವರ್ತಿನಿಯೂ, ದಯಾರೂಪಳೂ, ಮನೋಹರಳೂ, ಕೂರ್ಮವಾಹನಳೂ, ಅರುವತ್ತನಾಲ್ಕು ಕಲೆಗಳುಳ್ಳವಳೂ, ಲಕ್ಷ್ಮಿ, ಕಲ್ಪವೃಕ್ಷ, ಕಾಳಿಗಳ ಸ್ವರೂಪಳೂ, ಮನೋಹರವಾದ ನೀರುಳ್ಳವಳೂ, ಕಾಮುಕಿಯೂ, ಶಿವನಜಟೆಯಲ್ಲಿ ನೆಲೆಸಿ ದವಳೂ, ವಿಷನಾಶಿನಿಯೂ, ಈಚಲ ಹೂವಿನಲ್ಲಿ ಪ್ರೀತಿಯುಳ್ಳವಳೂ, ಯಮುನಾರೂಪಳೂ, ಕ್ರೀಡೆಯಿಂದ ಮನೋಹರಳೂ, ಇಂಪಾಗಿ ದನಿಗೈಯುವ

ಕ್ರಾಂತಲೋಕತ್ರಯಾ ಕಂಡೂಃ ಕಂಡೂತನಯವತ್ಸಲಾ ।
ಖಡ್ಗಿನೀ ಖಡ್ಗಧಾರಾಭಾ ಖಗಾ ಖಂಡೇಂದುಧಾರಿಣೀ ॥ ೪೬ ॥
ಖೇಖೇಲಗಾಮಿನೀ ಖಸ್ಥಾ ಖಂಡೇಂದುತಿಲಕಪ್ರಿಯಾ ।
ಖೇಚರೀ ಖೇಚರೀವಂದ್ಯಾ ಖ್ಯಾತಿಃ ಖ್ಯಾತಿಪ್ರದಾಯಿನೀ ॥ ೪೭ ॥
ಖಂಡಿತಪ್ರಣತಾಘೌಘಾ ಖಲಬುದ್ಧಿವಿನಾಶಿನೀ ।
ಖಾತೈನಃ ಕಂದಸಂದೋಹಾ ಖಡ್ಗಖಟ್ವಾಂಗಖೇಟಿನೀ ॥ ೪೮ ॥
ಖರಸಂತಾಪಶಮನೀ ಖನಿಃ ಪೀಯೂಷಪಾಥಸಾಂ ।
ಗಂಗಾ ಗಂಧವತೀ ಗೌರೀ ಗಂಧರ್ವನಗರಪ್ರಿಯಾ ॥ ೪೯ ॥
ಗಂಭೀರಾಂಗೀ ಗುಣಮಯೀ ಗತಾತಂಕಾ ಗತಿಪ್ರಿಯಾ ।
ಗಣನಾಥಾಂಬಿಕಾ ಗೀತಾ ಗದ್ಯಪದ್ಯಪರಿಷ್ಟುತಾ ॥ ೫೦ ॥
ಗಾಂಧಾರೀ ಗರ್ಭಶಮನೀ ಗತಿಭ್ರಷ್ಟಗತಿಪ್ರದಾ ।
ಗೋಮತೀ ಗುಹ್ಯವಿದ್ಯಾ ಗೌರ್ಗೋಪ್ತ್ರೀ ಗಗನಗಾಮಿನೀ ॥ ೫೧ ॥

---

ಅಲೆಗಳ ಸಮೂಹಗಳುಳ್ಳವಳೂ ಮೂರುಲೋಕಗಳನ್ನು ಮೀರಿದವಳೂ, ಅವಿದ್ಯೆಯನ್ನು ನಿವಾರಿಸುವವಳೂ, ಮಾರ್ಕಂಡೇಯನಲ್ಲಿ ಪ್ರೀತಿಯುಳ್ಳವಳೂ, ಖಡ್ಗವುಳ್ಳವಳೂ, ಕತ್ತಿಯ ಅಲುಗಿನಂತೆ ಕಾಂತಿಯುಳ್ಳವಳೂ, ಆಕಾಶಗಾಮಿನಿಯೂ, ಅರ್ಧಚಂದ್ರನನ್ನು ಧರಿಸಿದವಳೂ, ಆಕಾಶದಲ್ಲಿ ಅನಾಯಾಸವಾಗಿ ಹೋಗುವವಳೂ, ಬ್ರಹ್ಮನಿಷ್ಠಳೂ, ವಿಶ್ವೇಶ್ವರಪ್ರಿಯಳೂ, ಆಕಾಶಚಾರಿಣಿಯೂ, ಸಿದ್ಧಾಂಗನೆಯರಿಗೆ ವಂದ್ಯಳೂ, ಪಂಚಖ್ಯಾತಿರೂಪಳೂ, ಕೀರ್ತಿದಾಯಕಿಯೂ, ಪ್ರಣಾಮಗೈದವರ ಪಾಪವನ್ನು ನಿವಾರಿಸುವವಳೂ, ದುಷ್ಟಬುದ್ಧಿಯನ್ನು ವಿನಾಶಗೊಳಿಸುವವಳೂ, ಕಿತ್ತುಹಾಕಲ್ಪಟ್ಟ ಪಾಪವೆಂಬ ಗಡ್ಡೆಗಳ ಸಮೂಹವುಳ್ಳವಳೂ, ಕತ್ತಿ, ಖಟ್ವಾಂಗ, ಗುರಾಣಿಗಳುಳ್ಳವಳೂ, ತೀಕ್ಷ್ಣವಾದ ಸಂತಾಪವನ್ನು ಪರಿಹರಿಸುವವಳೂ, ಅಮೃತಸಮಾನವಾದ ನೀರಿಗೆ ಗಣಿಯೂ, ದೋಷರಹಿತವಾದ ಸ್ವಭಾವವುಳ್ಳವಳೂ, ಭೂಮಿರೂಪಳೂ, ಗೌರೀರೂಪಳೂ, ಗಂಧರ್ವನಗರಪ್ರಿಯಳೂ, ಗಂಭೀರವಾದ ಅಂಗವುಳ್ಳವಳೂ, ತ್ರಿಗುಣಸ್ವರೂಪಳೂ, ಭಯವಿಲ್ಲದವಳೂ, ವಿಶ್ವನಾಥನಪ್ರಿಯಳೂ, ಗಣೇಶನ ಮಾತೆಯೂ, ಭಗವದ್ಗೀತಾರೂಪಳೂ, ಗದ್ಯಪದ್ಯಗಳಿಂದ ಸ್ತೋತ್ರಮಾಡಲ್ಪಟ್ಟವಳೂ, ವರಾಹಶಕ್ತಿರೂಪಳೂ, ಪುನರ್ಜನ್ಮವನ್ನು ನಾಶಗೊಳಿಸುವವಳೂ, ಪತಿತರಿಗೂ ಸದ್ಗತಿಯನ್ನೀಯುವವಳೂ, ಗೋಮತೀನದೀರೂಪಳೂ, ಬ್ರಹ್ಮವಿದ್ಯೆಯೂ, ವೇದರೂಪಳೂ, ಕಾಪಾಡುವವಳೂ, ಆಕಾಶದಲ್ಲಿ ಸಂಚರಿಸುವವಳೂ, ವಂಶೋದ್ಧಾರಕಳೂ, ಗುಣಪ್ರಿಯಳೂ, ನಿರ್ಗುಣಳೂ, ಗುಣನಿಯಾಮಕಳೂ, ಸ್ಕಂದಮಾತೆಯೂ, ಹಿಮಾಲಯನ ಪುತ್ರಿಯೂ, ವಿಷ್ಣುವಿನ ಪಾದದಿಂದ ಜನಿಸಿದವಳೂ, ಗಣ

ಗೋತ್ರಪ್ರವರ್ಧಿನೀ ಗುಣ್ಯಾ ಗುಣಾತೀತಾ ಗುಣಾಗ್ರಣೀಃ ।
ಗುಹಾಂಬಿಕಾ ಗಿರಿಸುತಾ ಗೋವಿಂದಾಂಘ್ರಿಸಮುದ್ಭವಾ ॥ ೫೨ ॥
ಗಣನೀಯ ಚರಿತ್ರಾ ಚ ಗಾಯತ್ರೀ ಗಿರಿಶಪ್ರಿಯಾ ।
ಗೂಢರೂಪಾ ಗುಣವತೀ ಗುರ್ವೀ ಗೌರವವರ್ಧಿನೀ ॥ ೫೩ ॥
ಗ್ರಹಪೀಡಾಹರಾ ಗುಂದ್ರಾ ಗರಘ್ನೀ ಗಾನವತ್ಸಲಾ ।
ಘರ್ಮಹಂತ್ರೀ ಘೃತವತೀ ಘೃತತುಷ್ಟಿಪ್ರದಾಯಿನೀ ॥ ೫೪ ॥
ಘಂಟಾರವಪ್ರಿಯಾ ಘೋರಾಽಘೌಘವಿಧ್ವಂಸಕಾರಿಣೀ ।
ಘ್ರಾಣತುಷ್ಟಿಕರೀ ಘೋಷಾ ಘನಾನಂದಾ ಘನಪ್ರಿಯಾ ॥ ೫೫ ॥
ಘಾತುಕಾ ಘೂರ್ಣಿತಜಲಾ ಘೃಷ್ಟಪಾತಕಸಂತತಿಃ ।
ಘಟಕೋಟಿಪ್ರಪೀತಾಪಘಟಿತಾಽಶೇಷಮಂಗಲಾ ॥ ೫೬ ॥
ಘೃಣಾವತೀ ಘೃಣನಿಧಿರ್ಘಸ್ಮರಾ ಘೂಕನಾದಿನೀ ।
ಘುಸೃಣಾ ಪಿಂಜರತನುರ್ಘರ್ಘರಾ ಘರ್ಘರಸ್ವನಾ ॥ ೫೭ ॥
ಚಂದ್ರಿಕಾ ಚಂದ್ರಕಾಂತಾಂಬುಶ್ಚಂಚದಾಪಾ ಚಲದ್ಯುತಿಃ ।
ಚಿನ್ಮಯೀ ಚಿತಿರೂಪಾ ಚ ಚಂದ್ರಾಽಯುತಶತಾನನಾ ॥ ೫೮ ॥

---

ನಾರ್ಹವಾದಚರಿತ್ರೆಯುಳ್ಳವಳೂ, ಸ್ತುತಿಸುವವರನ್ನು ಪೊರೆಯುವವಳೂ, ಮಹೇಶ್ವರಪ್ರಿಯೆಯೂ, ಗೂಢರೂಪವುಳ್ಳವಳೂ, ಶಾಂತ್ಯಾದಿಗುಣವುಳ್ಳವಳೂ, ಮಹಾತ್ಮಳೂ, ಗೌರವವನ್ನು ಹೆಚ್ಚಿಸುವವಳೂ, ಗ್ರಹಪೀಡೆಯನ್ನು ನಿವಾರಿಸುವವಳೂ, ಮುಸ್ತಾರೂಪಳೂ, ವಿಷನಾಶಿನಿಯೂ, ಗಾನಪ್ರಿಯಳೂ, ಸಂತಾಪಹರಳೂ, ತುಪ್ಪದಂತಿರುವ ನೀರುಳ್ಳವಳೂ, ಘೃತದಿಂದಾಗುವ ತೃಪ್ತಿಯನ್ನೀಯುವವಳೂ, ಘಂಟೆಯಧ್ವನಿಯಲ್ಲಿ ಪ್ರೀತಿಯುಳ್ಳವಳೂ, ಘೋರಪಾಪನಾಶಿನಿಯೂ, ಘ್ರಾಣೇಂದ್ರಿಯಕ್ಕೆ ತೃಪ್ತಿಯನ್ನುಂಟುಮಾಡುವವಳೂ, ಕಾಂಚಿಯುಳ್ಳವಳೂ, ಸಾಂದ್ರಾನಂದಳೂ, ಮೇಘಪ್ರಿಯಳೂ, ಸಮಸ್ತಾಜ್ಞಾನನಾಶಕಳೂ, ಚಂಚಲಜಲವುಳ್ಳವಳೂ, ನಾಶಗೊಳಿಸಲ್ಪಟ್ಟ ಪಾಪವುಳ್ಳವಳೂ, ಅನೇಕ ಕಲಶಗಳಿಂದ ಪಾನಮಾಡಲ್ಪಟ್ಟ ನೀರುಳ್ಳವಳೂ, ಅನೇಕ ಮಂಗಳವನ್ನುಂಟುಮಾಡುವವಳೂ, ದಯಾರ್ದ್ರಳೂ, ಕರುಣಾಸಾಗರಳೂ, ಸಮಸ್ತವನ್ನೂ ಭಕ್ಷಿಸುವವಳೂ, ಬಕಧ್ವನಿಯುಳ್ಳವಳೂ, ಕುಂಕುಮಕೇಸರಿಯಿಂದ ಹಳದಿ ಬಣ್ಣವಾದ ಶರೀರವುಳ್ಳವಳೂ, ಘರ್ಘರಾಮುಡುವಿನ ರೂಪಳೂ, ಘರ್ಘರಧ್ವನಿಯುಳ್ಳವಳೂ, ಬೆಳದಿಂಗಳರೂಪಳೂ, ಚಂದ್ರಕಾಂತಮಣಿಯಂತೆ ನಿರ್ಮಲವಾಗಿ ಪ್ರಕಾಶಿಸುವ ಜಲವುಳ್ಳವಳೂ, ವಿರಾಜಿಸುವಕಾಂತಿಯುಳ್ಳವಳೂ, ಜ್ಞಾನಸ್ವರೂಪಳೂ, ಚೇತನಾರೂಪಳೂ, ಹತ್ತುಸಾವಿರಚಂದ್ರರ ಕಾಂತಿಯನ್ನು ತಳೆದ ಮುಖವುಳ್ಳವಳೂ, ಸಂಪಿಗೆ ಹೂವಿನಂತೆ ಕಣ್ಣುಗಳುಳ್ಳವಳೂ, ಮನೋಹರಳೂ, ಸುಂದರಾಂಗಿಯೂ,

ಚಾಂಪೇಯಲೋಚನಾ ಚಾರುಶ್ಚಾರ್ವಂಗೀ ಚಾರುಗಾಮಿನೀ ।
ಚಾರ್ಯಾ ಚಾರಿತ್ರನಿಲಯಾ ಚಿತ್ರಕೃಚ್ಚಿತ್ರರೂಪಿಣೀ ॥ ೫೯ ॥
ಚಂಪೂಶ್ಚಂದನಶುಚ್ಯಂಬುಶ್ಚರ್ಚನೀಯಾ ಚಿರಸ್ಥಿರಾ ।
ಚಾರುಚಂಪಕಮಾಲಾಢ್ಯಾ ಶಮಿತಾಽಶೇಷದುಷ್ಕೃತಾ ॥ ೬೦ ॥
ಚಿದಾಕಾಶವಹಾಚಿಂತ್ಯಾ ಚಂಚಚ್ಚಾಮರವೀಜಿತಾ ।
ಚೋರಿತಾಽಶೇಷವೃಜಿನಾ ಚರಿತಾಶೇಷಮಂಡಲಾ ॥ ೬೧ ॥
ಛೇದಿತಾಽಖಿಲಪಾಪೌಘಾ ಛದ್ಮಘ್ನೀ ಛಲಹಾರಿಣೀ ।
ಛನ್ನತ್ರಿವಿಷ್ಟಪತಲಾ ಛೋಟಿತಾಽಶೇಷಬಂಧನಾ ॥ ೬೨ ॥
ಛುರಿತಾಽಮೃತಧಾರೌಘಾ ಛಿನ್ನೈನಾಶ್ಛಂದಗಾಮಿನೀ ।
ಛತ್ರೀಕೃತಮರಾಲೌಘಾ ಛಟೀಕೃತನಿಜಾಽಮೃತಾ ॥ ೬೩ ॥
ಜಾಹ್ನವೀಜ್ಯಾ ಜಗನ್ಮಾತಾ ಜಪ್ಯಾ ಜಂಘಾಲವೀಚಿಕಾ ।
ಜಯಾ ಜನಾರ್ದನಪ್ರೀತಾ ಜುಷಣೀಯಾ ಜಗದ್ಧಿತಾ ॥ ೬೪ ॥
ಜೀವನಂ ಜೀವನಪ್ರಾಣಾ ಜಗಜ್ಜ್ಯೇಷ್ಠಾ ಜಗನ್ಮಯೀ ।
ಜೀವಜೀವಾತುಲತಿಕಾ ಜನ್ಮಿಜನ್ಮನಿಬರ್ಹಿಣೀ ॥ ೬೫ ॥

---

ಮನೋಹರವಾದ ಗಮನವುಳ್ಳವಳೂ, ಜ್ಞೇಯಸ್ವರೂಪಳೂ, ಒಳ್ಳೆಯನಡತೆಗಳಿಗೆ ಆಶ್ರಯಳೂ, ಆಶ್ಚರ್ಯಕರವಾದ ಪ್ರಪಂಚವನ್ನು ಸೃಜಿಸುವವಳೂ, ಆಶ್ಚರ್ಯಕರವಾದ ರೂಪವುಳ್ಳವಳೂ, ಚಂಪಕಪುಷ್ಪರೂಪಳೂ, ಗಂಧದಂತೆ ಸುವಾಸನೆಯಾದ ಜಲವುಳ್ಳವಳೂ, ಧ್ಯಾನಿಸಲರ್ಹಳೂ, ಅನಾದಿಯೂ, ಮನೋಹರವಾದ ಸಂಪಿಗೆಯ ಹೂವಿನಮಾಲೆಯಿಂದ ಕೂಡಿದವಳೂ, ಸಮಸ್ತಪಾಪಗಳನ್ನು ನಿವಾರಿಸುವವಳೂ, ಆಗಿರುವಳು ;

೬೧–೬೬. ಚಿದಾಕಾಶದಲ್ಲಿ ಪ್ರವಹಿಸುವವಳೂ, ಧ್ಯಾನಾರ್ಹಳೂ, ಚಂಚಲವಾದ ಚಾಮರದಿಂದ ಬೀಸಲ್ಪಟ್ಟವಳೂ, ಸಮಸ್ತ ಪಾಪಗಳನ್ನು ಪರಿಹರಿಸುವವಳೂ, ಸಂಚರಿಸಲ್ಪಟ್ಟ ಸಮಸ್ತಬ್ರಹ್ಮಾಂಡಗಳುಳ್ಳವಳೂ, ಸಮಸ್ತ ಪಾಪಗಳನ್ನು ಛೇದಿಸುವವಳೂ, ಛದ್ಮವೆಂಬ ರೋಗವನ್ನು ನಿವಾರಿಸುವವಳೂ, ಮೂರು ಲೋಕಗಳನ್ನು ವ್ಯಾಪಿಸಿದವಳೂ, ಸಕಲ ಬಂಧನಗಳನ್ನೂ ನಿವಾರಿಸುವವಳೂ, ಜಲಪ್ರವಾಹವನ್ನು ಸುರಿಸುವವಳೂ, ಪಾಪಗಳನ್ನು ಪರಿಹರಿಸಿದವಳೂ, ಸ್ವೇಚ್ಛಾಚಾರಿಣಿಯೂ, ಹಂಸಗಳ ಕೊಡೆಯುಳ್ಳವಳೂ, ಧ್ವನಿಗೈಯುವ ಜಲವುಳ್ಳವಳೂ, ಜಹ್ನುತನಯಳೂ, ಬಿಲ್ಲಿನ ನಾಣಿನಂತೆ ಕಾಣಿಸುವವಳೂ, ಜಗನ್ಮಾತೆಯೂ, ಜಪಿಸಲರ್ಹಳೂ, ಉದ್ದವಾದ ಅಲೆಗಳುಳ್ಳವಳೂ, ಪಾರ್ವತಿಯಸಖಿಯಾದ ಜಯಳರೂಪಳೂ, ಕೃಷ್ಣಪ್ರಿಯಳೂ, ಸೇವ್ಯಳೂ, ಜಗತ್ತಿಗೆ ಹಿತಕರಳೂ, ಜೀವನಕ್ಕೆ ಕಾರಣಳೂ, ಜಲದಿಂದ ಪ್ರಾಣಿಗಳನ್ನು

ಜಾಡ್ಯವಿಧ್ವಂಸನಕರೀ ಜಗದ್ಯೋನಿರ್ಜಲಾವಿಲಾ ।
ಜಗದಾನಂದಜನನೀ ಜಲಜಾ ಜಲಜೇಕ್ಷಣಾ ॥ ೬೬ ॥
ಜನಲೋಚನಪೀಯೂಷಾ ಜಟಾತಟವಿಹಾರಿಣೀ ।
ಜಯಂತೀ ಜಂಜಪೂಕಘ್ನೀ ಜನಿತಜ್ಞಾನವಿಗ್ರಹಾ ॥ ೬೭ ॥
ಝಲ್ಲರೀವಾದ್ಯಕುಶಲಾ ಝಲಜ್ಝಾಲಜಲಾವೃತಾ ।
ಝಿಂಟೀಶವಂದ್ಯಾ ಝಂಕಾರಕಾರಿಣೀ ಝರ್ಝರಾವತೀ ॥ ೬೮ ॥
ಟೀಕಿತಾಽಶೇಷಪಾತಾಲಾ ಟಂಕಿಕೈನೋದ್ರಿಪಾಟನೇ ।
ಟಂಕಾರನೃತ್ಯತ್ಕಲ್ಲೋಲಾ ಟೀಕನೀಯಮಹಾತಟಾ ॥ ೬೯ ॥
ಡಂಬರಪ್ರವಹಾ ಡೀನರಾಜಹಂಸಕುಲಾಕುಲಾ ।
ಡಮಡ್ಡಮರುಹಸ್ತಾ ಚ ಡಾಮರೋಕ್ತಮಹಾಂಡಕಾ ॥ ೭೦ ॥
ಢೌಕಿತಾಽಶೇಷನಿರ್ವಾಣಾ ಢಕ್ಕಾನಾದಚಲಜ್ಜಲಾ ।
ಢುಂಢಿವಿಘ್ನೇಶಜನನೀ ಢಣಡ್ಢುಣಿತಪಾತಕಾ ॥ ೭೧ ॥

---

ಬದುಕಿಸುವವಳೂ, ಬ್ರಹ್ಮರೂಪಳೂ, ಜ್ಯೇಷ್ಠಳೂ, ಜಗದ್ರೂಪಳೂ, ಪ್ರಾಣಿಗಳಿಗೆ ಜೀವನೌಷಧರೂಪಳೂ, ಪ್ರಾಣಿಗಳ ಜನ್ಮವನ್ನು ಪರಿಹರಿಸುವವಳೂ, ಅಜ್ಞಾನ ನಾಶಕಳೂ, ಜಗತ್ತಿಗೆ ಕಾರಣಳೂ, ನೀರಿನ ಪಾಚಿಯೊಡಗೂಡಿರುವವಳೂ, ಜಗತ್ತಿಗೆ ಆನಂದದಾಯಕಳೂ, ವಿಷ್ಣುಸಂಭೂತಗಳೂ, ಕಮಲದಂತೆ ಕಣ್ಣುಗಳುಳ್ಳವಳೂ, ಜನರ ಕಣ್ಣಿಗೆ ಅಮೃತದಂತಿರುವವಳೂ, ಈಶ್ವರನ ಜಟೆಯಲ್ಲಿ ವಿಹರಿಸುವವಳೂ, ಜಯಶೀಲಳೂ, ಪಾಪನಾಶಕಳೂ, ಜ್ಞಾನಶರೀರವನ್ನುಂಟು ಮಾಡುವವಳೂ, ಝಲ್ಲರೀವಾದ್ಯದಲ್ಲಿ ನಿಪುಣಳೂ, ಝಲಜ್ಝಾಲವೆಂಬ ಶಬ್ದವುಳ್ಳ ನೀರುಳ್ಳವಳೂ, ಮಹೇಶ್ವರನ ಮೂರ್ತಿಯೆನಿಸಿ ಸರ್ವವಂದ್ಯಳೂ, ಝಂಕಾರಶಬ್ದ ಗೈಯುವವಳೂ, ಝರ್ಝರಶಬ್ದವುಳ್ಳವಳೂ, ಸೇವಿಸಲ್ಪಟ್ಟ ಸಮಸ್ತ ಪಾತಾಳವುಳ್ಳವಳೂ, ಪಾಪವೆಂಬ ಪರ್ವತವನ್ನು ಸೀಳುವುದರಲ್ಲಿ ಉಳಿಯಂತಿರುವವಳೂ, ಟಂಕಾರಶಬ್ದದಿಂದ ಚಲಿಸುವ ಅಲೆಯುಳ್ಳವಳೂ, ಸೇವಿಸಲರ್ಹವಾದ ದಡವುಳ್ಳವಳೂ, ಆಡಂಬರ ಸಹಿತವಾದ ಪ್ರವಾಹವುಳ್ಳವಳೂ, ಹಾರಾಡುತ್ತಿರುವ ಹಂಸಗಳ ಸಮೂಹವುಳ್ಳವಳೂ, ಶಬ್ದಮಾಡುತ್ತಿರುವ ಡಮರುವನ್ನು ಹಿಡಿದವಳೂ, ಡಾಮರ ಗ್ರಂಥದಲ್ಲಿ ಪ್ರತಿಪಾದಿಸಲ್ಪಟ್ಟ ಮಂತ್ರರೂಪ ಮಹಾಶರೀರವುಳ್ಳವಳೂ, ಭಕ್ತರಿಗೆ ಸಮಸ್ತ ಮೋಕ್ಷಗಳನ್ನು ಕೊಡುವವಳೂ, ಢಕ್ಕೆಯ ಧ್ವನಿಯಂತೆ ಶಬ್ದಗೈಯ್ಯುವ ನೀರುಳ್ಳವಳೂ, ಢುಂಢಿವಿನಾಯಕರ ತಾಯಿಯೂ, ಪಾಪವನ್ನು ಪರಿಹರಿಸಿದವಳೂ, ತರ್ಪಣಾರ್ಹವಾದ ಜಲವುಳ್ಳವಳೂ, ಮೂರು ಲೋಕಗಳಲ್ಲಿಯೂ ದಾರಿಯುಳ್ಳವಳೂ, ದೇವತೆಗಳಿಗೆ ಸ್ವಾಮಿನಿಯೂ, ಮೂರು ಲೋಕಗಳನ್ನು ಕಾಪಾಡುವವಳೂ, ಜಲದೊಡೆಯಳೂ, ಮೂರು ಲೋಕದ ಜನರಿಂದ ವಂದಿತಳೂ,

ತರ್ಪಣೀತೀರ್ಥತೀರ್ಥಾಚ ತ್ರಿಪಥಾ ತ್ರಿದಶೇಶ್ವರೀ ।
ತ್ರಿಲೋಕಗೋಪ್ತ್ರೀ ತೋಯೇಶೀ ತ್ರೈಲೋಕ್ಯಪರಿವಂದಿತಾ ॥ ೭೨ ॥
ತಾಪತ್ರಿತಯಸಂಹರ್ತ್ರೀ ತೇಜೋಬಲವಿವರ್ಧಿನೀ ।
ತ್ರಿಲಕ್ಷ್ಯಾ ತಾರಣೀ ತಾರಾ ತಾರಾಪತಿಕರಾಽರ್ಚಿತಾ ॥ ೭೩ ॥
ತ್ರೈಲೋಕ್ಯಪಾವನೀ ಪುಣ್ಯಾ ತುಷ್ಟಿದಾ ತುಷ್ಟಿರೂಪಿಣೀ ।
ತೃಷ್ಣಾಛೇತ್ರೀ ತೀರ್ಥಮಾತಾ ತ್ರಿವಿಕ್ರಮಪದೋದ್ಭವಾ ॥ ೭೪ ॥
ತಪೋಮಯೀ ತಪೋರೂಪಾ ತಪಃಸ್ತೋಮಫಲಪ್ರದಾ ।
ತ್ರೈಲೋಕ್ಯವ್ಯಾಪಿನೀ ತೃಪ್ತಿಸ್ತೃಪ್ತಿಕೃತ್ತತ್ವರೂಪಿಣೀ ॥ ೭೫ ॥
ತ್ರೈಲೋಕ್ಯಸುಂದರೀ ತುರ್ಯಾ ತುರ್ಯಾತೀತಪದಪ್ರದಾ ।
ತ್ರೈಲೋಕ್ಯ ಲಕ್ಷ್ಮೀಸ್ತ್ರಿಪದೀ ತಥ್ಯಾ ತಿಮಿರಚಂದ್ರಿಕಾ ॥ ೭೬ ॥
ತೇಜೋಗರ್ಭಾ ತಪಃಸಾರಾ ತ್ರಿಪುರಾಽರಿಶಿರೋಗೃಹಾ ।
ತ್ರಯೀಸ್ವರೂಪಿಣೀ ತನ್ವೀ ತಪನಾಂಗಜಭೀತಿನುತ್ ॥ ೭೭ ॥
ತರಿಸ್ತರಣಿಜಾಮಿತ್ರಂ ತರ್ಪಿತಾಽಶೇಷಪೂರ್ವಜಾ ।
ತುಲಾವಿರಹಿತಾ ತೀವ್ರಪಾಪತೂಲತನೂನಪಾತ್ ॥ ೭೮ ॥

---

ತಾಪತ್ರಯಗಳನ್ನು ನಿವಾರಿಸುವವಳೂ, ತೇಜಸ್ಸಿನ ಬಲವನ್ನು ಹೆಚ್ಚಿಸುವವಳೂ, ಮೂರುಲೋಕಗಳ ಸ್ವರೂಪವುಳ್ಳವಳೂ, ಉದ್ಧರಿಸುವವಳೂ, ಪ್ರಣವಸ್ವರೂಪಳೂ, ರುದ್ರಪೂಜಿತಳೂ, ಮೂರು ಲೋಕಗಳನ್ನು ಪವಿತ್ರಗೊಳಿಸುವ ಗೌತಮೀ ಮೊದಲಾದ ನದಿಗಳಲ್ಲೆಲ್ಲ ಪುಣ್ಯಕರಳೂ, ಸುಖವನ್ನು ಕೊಡುವವಳೂ, ಸಂತೋಷರೂಪಳೂ, ಆಶೆಯನ್ನು ನಿವಾರಿಸುವವಳೂ, ತೀರ್ಥಮಾತೆಯೂ, ತ್ರಿವಿಕ್ರಮನ ಪಾದದಿಂದ ಜನಿಸಿದವಳೂ, ತಪೋಮಯಿಯೂ, ಕೃಚ್ಛ್ರ ಚಾಂದ್ರಾಯಣಾದಿ ವ್ರತರೂಪಳೂ, ಸಕಲ ತಪಸ್ಸಿನ ಫಲವನ್ನು ಕೊಡುವವಳೂ, ಮೂರು ಲೋಕಗಳನ್ನು ವ್ಯಾಪಿಸುವವಳೂ, ತೃಪ್ತಿರೂಪಳೂ, ತೃಪ್ತಿಯನ್ನುಂಟುಮಾಡುವವಳೂ, ಇಪ್ಪತ್ತನಾಲ್ಕು ತತ್ವಗಳ ಸ್ವರೂಪಳೂ, ತ್ರೈಲೋಕ್ಯಸುಂದರಿಯೂ, ನಾಲ್ಕನೆಯ ಸ್ಥಾನವನ್ನು ಮೀರಿದ ಬ್ರಹ್ಮಸ್ಥಾನವನ್ನು ದೊರಕಿಸುವವಳೂ, ಮೂರು ಲೋಕಗಳ ಸಂಪತ್ತಿನರೂಪಳೂ, ತ್ರಿಲೋಕಗಳಲ್ಲಿ ಸ್ಥಾನವುಳ್ಳವಳೂ, ಸತ್ಯರೂಪಳೂ, ಕತ್ತಲೆಗೆ ಬೆಳದಿಂಗಳಂತಿರುವವಳೂ ಆಗಿರುವಳು.

೭೭–೧೦೮. ತೇಜಸ್ಸನ್ನು ಗರ್ಭದಲ್ಲಿ ಧರಿಸಿದವಳೂ, ತಪಸ್ಸುಗಳ ಸಾಮರ್ಥ್ಯವುಳ್ಳವಳೂ, ಮಹೇಶ್ವರನ ಶಿರಸ್ಸೇ ಮನೆಯಾಗುಳ್ಳವಳೂ, ವೇದತ್ರಯ ಸ್ವರೂಪಳೂ, ಸುಂದರಿಯೂ, ಯಮನಭಯವನ್ನು ಪರಿಹರಿಸುವವಳೂ, ಸಂಸಾರ ಸಮುದ್ರಕ್ಕೆ ನಾವೆಯೂ, ಯಮುನೆಗೆ ಶತ್ರುಪ್ರಾಯಳೂ, ತೃಪ್ತಿಗೊಳಿಸಲ್ಪಟ್ಟ ಸಕಲಪಿತೃಗಳುಳ್ಳವಳೂ, ಪರಿಮಾಣರಹಿತಳೂ, ಕಠಿನಪಾಪವೆಂಬ ಹತ್ತಿಗೆ ಬೆಂಕಿ

ದಾರಿದ್ರ್ಯದಮನೀ ದಕ್ಷಾ ದುಷ್ಪ್ರೇಕ್ಷ್ಯಾ ದಿವ್ಯಮಂಡನಾ ।
ದೀಕ್ಷಾವತೀ ದುರಾವಾಪ್ಯಾ ದ್ರಾಕ್ಷಾಮಧುರವಾರಿಭೃತ್ ॥ ೭೯ ॥
ದರ್ಶಿತಾಽನೇಕಕುತುಕಾ ದುಷ್ಟದುರ್ಜಯ ದುಃಖಹೃತ್ ।
ದೈನ್ಯಹೃದ್ದುರಿತಘ್ನೀ ಚ ದಾನವಾಽರಿಪದಾಽಬ್ಜಜಾ ॥ ೮೦ ॥
ದಂದಶೂಕವಿಷಘ್ನೀ ಚ ದಾರಿತಾಽಘೌಘಸಂತತಿಃ ।
ದ್ರುತಾ ದೇವದ್ರುಮಛನ್ನಾ ದುರ್ವಾರಾಘವಿಘಾತಿನೀ ॥ ೮೧ ॥
ದಮಗ್ರಾಹ್ಯಾ ದೇವಮಾತಾ ದೇವಲೋಕಪ್ರದರ್ಶಿನೀ ।
ದೇವದೇವಪ್ರಿಯಾ ದೇವೀ ದಿಕ್ಪಾಲಪದದಾಯಿನೀ ॥ ೮೨ ॥
ದೀರ್ಘಾಯುಃಕಾರಿಣೀ ದೀರ್ಘಾ ದೋಗ್ಧ್ರೀ ದೂಷಣವರ್ಜಿತಾ ।
ದುಗ್ಧಾಂಬುವಾಹಿನೀ ದೋಹ್ಯಾ ದಿವ್ಯಾ ದಿವ್ಯಗತಿಪ್ರದಾ ॥ ೮೩ ॥
ದ್ಯುನದೀ ದೀನಶರಣಂ ದೇಹಿದೇಹನಿವಾರಿಣೀ ।
ದ್ರಾಘೀಯಸೀ ದ್ರಾಘಹಂತ್ರೀ ದಿತಪಾತಕಸಂತತಿಃ ॥ ೮೪ ॥
ದೂರದೇಶಾಂತರಚರೀ ದುರ್ಗಮಾ ದೇವವಲ್ಲಭಾ ।
ದುರ್ವೃತ್ತಘ್ನೀ ದುರ್ವಿಗಾಹ್ಯಾ ದಯಾಧಾರಾ ದಯಾವತೀ ॥ ೮೫ ॥

---

ಯಂತಿರುವವಳೂ, ಬಡತನವನ್ನು ನೀಗಿಸುವವಳೂ, ಕುಶಲಳೂ, ಭಕ್ತಿಯಿಲ್ಲದೆ ನೋಡಲಶಕ್ಯಳೂ, ದಿವ್ಯಾಲಂಕಾರವುಳ್ಳವಳೂ, ದೀಕ್ಷೆಯುಳ್ಳವಳೂ, ಜ್ಞಾನವಿಲ್ಲದವರಿಂದ ಹೊಂದಲಶಕ್ಯಳೂ, ದ್ರಾಕ್ಷಿಯಂತೆ ಸವಿಯಾದ ನೀರುಳ್ಳವಳೂ, ತೋರಿಸಲ್ಪಟ್ಟ ಅನೇಕ ಕೌತೂಹಲವುಳ್ಳವಳೂ, ದುಷ್ಟವೂ, ದುರ್ಜಯವೂ ಆದ ದುಃಖಗಳನ್ನು ನೀಗಿಸುವವಳೂ, ದೈನ್ಯವನ್ನು ಪರಿಹರಿಸುವವಳೂ, ಪಾಪನಾಶಕಳೂ, ವಿಷ್ಣುಪಾದ ಸಂಭೂತಳೂ, ಸರ್ಪಗಳ ವಿಷವನ್ನು ನಿವಾರಿಸುವವಳೂ, ನಾಶಮಾಡಲ್ಪಟ್ಟ ಪಾಪಸಮೂಹವುಳ್ಳವಳೂ, ವೇಗವಾಗಿ ಹರಿಯುವವಳೂ, ಮಂದಾರಾದಿವೃಕ್ಷಗಳಿಂದ ವ್ಯಾಪ್ತಳೂ, ನಿವಾರಿಸಲಾಗದ ಪಾಪವನ್ನು ಪರಿಹರಿಸುವವಳೂ, ದಮವೇ ಮೊದಲಾದ ನಾಲ್ಕು ಸಾಧನಗಳಿಂದ ಹೊಂದಲು ಯೋಗ್ಯಳೂ, ದಿತಿರೂಪಳೂ, ದೇವಲೋಕವನ್ನು ತೋರಿಸುವವಳೂ, ವಿಶ್ವೇಶ್ವರನ ಪ್ರಿಯೆಯೂ, ಸ್ವಪ್ರಕಾಶಳೂ, ಇಂದ್ರಾದಿ ದಿಕ್ಪಾಲಕರ ಪದವಿಯನ್ನೀಯುವವಳೂ, ದೀರ್ಘಾಯುಷ್ಯವನ್ನುಂಟುಮಾಡುವವಳೂ, ದೈರ್ಘ್ಯವುಳ್ಳವಳೂ, ಧರ್ಮಾದಿಗಳನ್ನು ಕೊಡುವವಳೂ, ದೋಷಹೀನಳೂ, ಗೋರೂಪವನ್ನಾಂತ ಪೃಥಿವೀರೂಪಳೂ, ಧರ್ಮಾರ್ಥಾದಿಗಳನ್ನು ಕೊಡಲು ಸಮರ್ಥಳೂ, ಲೋಕೋತ್ತರಳೂ, ದಿವ್ಯಗತಿಯನ್ನೀಯುವವಳೂ, ಸ್ವರ್ಗಂಗೆಯೂ, ಅತ್ಯಂತಪಾಪಿಗಳನ್ನೂ ರಕ್ಷಿಸುವವಳೂ, ಪ್ರಾಣಿಗಳ ದೇಹದ್ವಯವನ್ನು ನಿವಾರಿಸುವವಳೂ, ದೀರ್ಘವಾದವಳೂ, ಸಂತಾಪನಾಶಕಳೂ, ನಾಶಗೊಳಿಸಲ್ಪಟ್ಟ ಪಾಪ ಸಮೂಹವುಳ್ಳವಳೂ, ದೂರ

ದುರಾಸದಾ ದಾನಶೀಲಾ ದ್ರಾವಿಣೀ ದ್ರುಹಿಣಸ್ತುತಾ ।
ದೈತ್ಯದಾನವಸಂಶುದ್ಧಿಕರ್ತ್ರೀ ದುರ್ಬುದ್ಧಿಹಾರಿಣೀ ॥ ೮೬ ॥
ದಾನಸಾರಾ ದಯಾಸಾರಾ ದ್ಯಾವಾಭೂಮಿವಿಗಾಹಿನೀ ।
ದೃಷ್ಟಾಽದೃಷ್ಟ ಫಲಪ್ರಾಪ್ತಿರ್ದೇವತಾವೃಂದವಂದಿತಾ ॥ ೮೭ ॥
ದೀರ್ಘವ್ರತಾ ದೀರ್ಘದೃಷ್ಟಿರ್ದೀಪ್ತತೋಯಾ ದುರಾಲಭಾ ।
ದಂಡಯಿತ್ರೀ ದಂಡನೀತಿರ್ದುಷ್ಟದಂಡಧರಾರ್ಚಿತಾ ॥ ೮೮ ॥
ದುರೋದರಘ್ನೀ ದಾವಾರ್ಚಿರ್ದ್ರವದ್ರವ್ಯೈಕಶೇವಧಿಃ ।
ದೀನಸಂತಾಪಶಮನೀ ದಾತ್ರೀ ದವಥುವೈರಿಣೀ ॥ ೮೯ ॥
ದರೀವಿದಾರಣಪರಾ ದಾಂತಾ ದಾಂತಜನಪ್ರಿಯಾ ।
ದಾರಿತಾದ್ರಿತಟಾ ದುರ್ಗಾ ದುರ್ಗಾಽರಣ್ಯಪ್ರಚಾರಿಣೀ ॥ ೯೦ ॥
ಧರ್ಮದ್ರವಾ ಧರ್ಮಧುರಾ ಧೇನುರ್ಧೀರಾ ಧೃತಿರ್ಧ್ರುವಾ ।
ಧೇನುದಾನಫಲಸ್ಪರ್ಶಾ ಧರ್ಮಕಾಮಾರ್ಥಮೋಕ್ಷದಾ ॥ ೯೧ ॥

---

ದೇಶದಲ್ಲಿ ಸಂಚರಿಸುವವಳೂ, ಹೊಂದಲಶಕ್ಯಳೂ, ದೇವಪ್ರಿಯಳೂ, ದುರ್ನಡತೆಗಳನ್ನು ನಿವಾರಿಸುವವಳೂ, ಅನುಗ್ರಹವಿಲ್ಲದೆ ಹೊಂದಲಶಕ್ಯಳೂ, ದಯಾಶ್ರಯಳೂ, ದಯಾಯುಕ್ತಳೂ, ದುಃಖದಿಂದ ಹೊಂದಲು ಶಕ್ಯಳೂ, ದಾನಶೀಲಳೂ, ಪಾಪವನ್ನು ಪರಿಹರಿಸುವ ಸ್ವಭಾವವುಳ್ಳವಳೂ, ಬ್ರಹ್ಮನಿಂದ ಸ್ತುತಿಸಲ್ಪಟ್ಟವಳೂ, ದೈತ್ಯದಾನವರನ್ನು ಪವಿತ್ರಗೊಳಿಸುವವಳೂ, ದುರ್ಬುದ್ಧಿಯನ್ನು ನಿವಾರಿಸುವವಳೂ, ದಾನದಯೆಗಳಿಂದ ಜ್ಞಾನವನ್ನುಂಟುಮಾಡುವವಳೂ, ಆಕಾಶಭೂಮಿಗಳಲ್ಲಿ ಸಂಚರಿಸುವವಳೂ, ಸುಖಮೋಕ್ಷಗಳನ್ನೀಯುವವಳೂ, ದೇವತಾಸಮೂಹಗಳಿಂದ ನಮಸ್ಕೃತಳೂ, ದೀರ್ಘವಾದ ನಿಯಮವುಳ್ಳವಳೂ, ದೀರ್ಘವಾದ ಜ್ಞಾನವುಳ್ಳವಳೂ, ವಿರಾಜಿಸುವ ಜಲವುಳ್ಳವಳೂ, ದುರ್ಲಭಳೂ, ಶಿಕ್ಷಿಸುವವಳೂ, ಅರ್ಥಶಾಸ್ತ್ರಸ್ವರೂಪಳೂ, ದುಷ್ಟರನ್ನು ದಂಡಿಸುವ ರಾಜರೆ ಮೊದಲಾದವರಿಂದ ಅರ್ಚಿತಳೂ, ಜೂಜು ಮೊದಲಾದುವುಗಳನ್ನು ನಿವಾರಿಸುವವಳೂ, ಕಾಳ್ಕಿಚ್ಚಿನಂತೆ ಕಾಂತಿಯುಳ್ಳವಳೂ, ದ್ರವದ್ರವ್ಯಗಳಿಗೆ ಮುಖ್ಯನಿಧಿಯೂ, ದೀನರ ಸಂತಾಪವನ್ನು ಪರಿಹರಿಸುವವಳೂ, ಪುರುಷಾರ್ಥಗಳನ್ನು ಕೊಡುವವಳೂ, ಸಂಸಾರಭಯದಿಂದುಂಟಾದ ಕಂಪನವನ್ನು ನಾಶಗೊಳಿಸುವವಳೂ, ಗುಹೆಗಳನ್ನು ಭೇದಿಸುವವಳೂ, ಜಿತೇಂದ್ರಿಯಳೂ, ಜಿತೇಂದ್ರಿಯರಾದ ಜನರಿಗೆ ಪ್ರಿಯಳೂ, ಬೆಟ್ಟದ ತಪ್ಪಲುಗಳನ್ನು ಭೇದಿಸುವವಳೂ, ದುರ್ಗವೆಂಬ ದೈತ್ಯನನ್ನು ಕೊಂದವಳೂ, ದುರ್ಗಮವಾದ ಕಾಡಿನಲ್ಲಿ ಸಂಚರಿಸುವವಳೂ, ಧರ್ಮರೂಪಜಲವುಳ್ಳವಳೂ, ಧರ್ಮಶ್ರೇಷ್ಠಳೂ, ಕಾಮಧೇನುರೂಪಳೂ, ವಿದುಷಿಯೂ, ಧಾರಕಳೂ, ನಿತ್ಯಳೂ, ಗೋವನ್ನು ದಾನಮಾಡಿದ ಫಲವನ್ನು

ಧರ್ಮೋರ್ಮಿರ್ವಾಹಿನೀ ಧುರ್ಯಾ ಧಾತ್ರಿ ಧಾತ್ರೀವಿಭೂಷಣಂ ।
ಧರ್ಮಿಣೀ ಧರ್ಮಶೀಲಾಚ ಧನ್ವಿಕೋಟಿಕೃತಾಽವನಾ ॥ ೯೨ ॥
ಧ್ಯಾತೃಪಾಪಹರಾ ಧ್ಯೇಯಾ ಧಾವನೀ ಧೂತಕಲ್ಮಷಾ ।
ಧರ್ಮಧಾರಾ ಧರ್ಮಸಾರಾ ಧನದಾ ಧನವರ್ಧಿನೀ ॥ ೯೩ ॥
ಧರ್ಮಾಽಧರ್ಮಗುಣಚ್ಛೇತ್ರೀ ಧತ್ತೂರಕುಸುಮಪ್ರಿಯಾ ।
ಧರ್ಮೇಶೀ ಧರ್ಮಶಾಸ್ತ್ರಜ್ಞಾ ಧನಧಾನ್ಯಸಮೃದ್ಧಿಕೃತ್ ॥ ೯೪ ॥
ಧರ್ಮಲಭ್ಯಾ ಧರ್ಮಜಲಾ ಧರ್ಮಪ್ರಸವಧರ್ಮಿಣೀ ।
ಧ್ಯಾನಗಮ್ಯಸ್ವರೂಪಾಚ ಧರಣೀ ಧಾತೃಪೂಜಿತಾ ॥ ೯೫ ॥
ಧೂರ್ಧೂರ್ಜಟಿಜಟಾಸಂಸ್ಥಾ ಧನ್ಯಾ ಧೀರ್ಧಾರಣಾವತೀ ।
ನಂದಾ ನಿರ್ವಾಣಜನನೀ ನಂದಿನೀ ನುನ್ನಪಾತಕಾ ॥ ೯೬ ॥
ನಿಷಿದ್ಧವಿಘ್ನನಿಚಯಾ ನಿಜಾನಂದಪ್ರಕಾಶಿನೀ ।
ನಭೋಂಗಣಚರೀ ನೂತಿರ್ನಮ್ಯಾ ನಾರಾಯಣೀ ನುತಾ ॥ ೯೭ ॥

---

ಕೊಡುವವಳೂ, ಧರ್ಮಕಾಮಾರ್ಥಮೋಕ್ಷಪ್ರದಳೂ, ಧರ್ಮರೂಪವಾದ ಅಲೆಗಳನ್ನು ಧರಿಸಿದವಳೂ, ಶ್ರೇಷ್ಠಳೂ, ತಾಯಿಯೂ, ಭೂಮಿಗೆ ಅಲಂಕಾರಪ್ರಾಯಳೂ, ಜಗದುತ್ಪತ್ತ್ಯಾದಿ ಧರ್ಮವುಳ್ಳವಳೂ, ಧರ್ಮಶೀಲಳೂ, ಅನೇಕ ಮಂದಿ ಧಾನುಷ್ಕರ ರಕ್ಷಣೆಯುಳ್ಳವಳೂ, ಧ್ಯಾನಮಾಡುವವರ ಪಾಪವನ್ನು ಪರಿಹರಿಸುವವಳೂ, ಮೋಕ್ಷಾರ್ಥಿಗಳಿಂದ ಧ್ಯಾನಿಸಲರ್ಹಳೂ, ಪಾವಿತ್ರ್ಯವನ್ನುಂಟುಮಾಡುವವಳೂ, ಪಾಪವನ್ನು ಹೋಗಲಾಡಿಸುವವಳೂ, ಧರ್ಮವನ್ನು ಧರಿಸುವವಳೂ, ಎಲ್ಲ ಧರ್ಮಗಳ ಮಧ್ಯದಲ್ಲಿ ಶ್ರೇಷ್ಠಧರ್ಮಸ್ವರೂಪಳೂ, ಧನವನ್ನೀಯುವವಳೂ, ಧನವನ್ನು ಹೆಚ್ಚಿಸುವವಳೂ, ಧರ್ಮಾಧರ್ಮಗಳೆಂಬ ಗುಣಗಳನ್ನು ಭೇದಿಸುವವಳೂ, ಧತ್ತೂರಪುಷ್ಪದಲ್ಲಿ ಪ್ರೀತಿಯುಳ್ಳವಳೂ, ಧರ್ಮಕ್ಕೆ ಒಡೆಯಳೂ, ಧರ್ಮಶಾಸ್ತ್ರವನ್ನರಿತವಳೂ, ಧನಧಾನ್ಯಸಮೃದ್ಧಿಯನ್ನುಂಟುಮಾಡುವವಳೂ, ಯೋಗದಿಂದ ಹೊಂದಲಶಕ್ಯಳೂ, ಧರ್ಮರೂಪವಾದ ನೀರುಳ್ಳವಳೂ, ಧರ್ಮವನ್ನು ಸೃಜಿಸುವ ಸ್ವಭಾವವುಳ್ಳವಳೂ, ಧ್ಯಾನದಿಂದ ತಿಳಿಯಲರ್ಹವಾದ ರೂಪವುಳ್ಳವಳೂ, ಭೂಮಿರೂಪಳೂ, ಬ್ರಹ್ಮಪೂಜಿತಳೂ, ಪಾಪನಾಶಕಳೂ, ಶಿವನ ಜಟೆಯಲ್ಲಿ ನೆಲೆಸಿರುವವಳೂ, ಕೃತಾರ್ಥಳೂ, ಸಾಮಾನ್ಯ ವಿಶೇಷ ಬುದ್ಧಿರೂಪಳೂ, ನಂದಾರೂಪಳೂ, ಮೋಕ್ಷವನ್ನುಂಟುಮಾಡುವವಳೂ, ನಂದಿನೀಧೇನುರೂಪಳೂ, ಪಾಪವನ್ನು ನೀಗಿಸುವವಳೂ, ವಿಘ್ನಗಳ ಸಮೂಹವನ್ನು ಪರಿಹರಿಸುವವಳೂ, ಬ್ರಹ್ಮಾನಂದವನ್ನು ಪ್ರಕಾಶಿಸುವವಳೂ, ಆಕಾಶಮಾರ್ಗಸಂಚಾರಿಣಿಯೂ, ಸ್ತುತಿರೂಪಳೂ, ವಂದ್ಯಳೂ, ವಿಷ್ಣುಶಕ್ತಿಯೂ, ಬ್ರಹ್ಮಾದಿಗಳಿಂದ ಸ್ತುತಿಸಲ್ಪಟ್ಟವಳೂ, ಸಂಸಾರರೂಪದೋಷರಹಿತಳೂ, ಪರಿಶುದ್ಧ ಚರಿತ್ರೆಯುಳ್ಳವಳೂ,

**ನಿರ್ಮಲಾ ನಿರ್ಮಲಾಖ್ಯಾನಾ ನಾಶಿನೀ ತಾಪಸಂಪದಾಂ ।**
**ನಿಯತಾ ನಿತ್ಯಸುಖದಾ ನಾನಾಶ್ಚರ್ಯಮಹಾನಿಧಿಃ ॥ ೯೮ ॥**
**ನದೀನದಸರೋಮಾತಾ ನಾಯಿಕಾ ನಾಕದೀರ್ಘಿಕಾ ।**
**ನಷ್ಟೋದ್ಧರಣಧೀರಾಚ ನಂದದಾಽಽನಂದದಾಯಿನೀ ॥ ೯೯ ॥**
**ನಿರ್ಣಿಕ್ತಾಽಶೇಷ ಭುವನಾ ನಿಃಸಂಗಾ ನಿರುಪದ್ರವಾ ।**
**ನಿರಾಲಂಬಾ ನಿಷ್ಪ್ರಪಂಚಾ ನಿರ್ಣಾಶಿತಮಹಾಮಲಾ ॥ ೧೦೦ ॥**
**ನಿರ್ಮಲಜ್ಞಾನಜನನೀ ನಿಃಶೇಷಪ್ರಾಣಿತಾಪಹೃತ್ ।**
**ನಿತ್ಯೋತ್ಸವಾ ನಿತ್ಯತೃಪ್ತಾ ನಮಸ್ಕಾರ್ಯಾ ನಿರಂಜನಾ ॥ ೧೦೧ ॥**
**ನಿಷ್ಠಾವತೀ ನಿರಾತಂಕಾ ನಿರ್ಲೇಪಾ ನಿಶ್ಚಲಾತ್ಮಿಕಾ ।**
**ನಿರವದ್ಯಾ ನಿರೀಹಾಚ ನೀಲಲೋಹಿತಮೂರ್ಧಗಾ ॥ ೧೦೨ ॥**
**ನಂದಿಭೃಂಗಿಗಣಸ್ತುತ್ಯಾ ನಾಗಾನಂದಾ ನಗಾತ್ಮಜಾ ।**
**ನಿಷ್ಪ್ರತ್ಯೂಹಾ ನಾಕನದೀ ನಿರಯಾರ್ಣವದೀರ್ಘನೌಃ ॥ ೧೦೩ ॥**
**ಪುಣ್ಯಪ್ರದಾ ಪುಣ್ಯಗರ್ಭಾ ಪುಣ್ಯಾ ಪುಣ್ಯತರಂಗಿಣೀ ।**
**ಪೃಥುಃ ಪೃಥುಫಲಾ ಪೂರ್ಣಾ ಪ್ರಣತಾರ್ತಿಪ್ರಭಂಜಿನೀ ॥ ೧೦೪ ॥**

---

ತಾಪಸಮೂಹವನ್ನು ನಾಶಗೊಳಿಸುವವಳೂ, ಏಕರೂಪಳೂ, ಮೋಕ್ಷಸುಖವನ್ನು ಕೊಡುವವಳೂ, ಅನೇಕ ವಿಧವಾದ ಆಶ್ಚರ್ಯಗಳಿಗೆ ಆವಾಸಭೂತಳೂ, ನದೀರೂಪಳೂ, ನದ ಮತ್ತು ಸರೋವರಗಳಿಗೆ ಜನನಿಯೂ, ಒಡೆಯಳೂ, ಸ್ವರ್ಗನದಿಯೂ, ಸಂಸಾರಸಾಗರದಲ್ಲಿ ಬಿದ್ದವರನ್ನು ಉದ್ಧರಿಸುವವಳೂ, ಅವರನ್ನು ಸಮುದ್ಧರಿಸಲ್ಕಾಗಿಸುವವಳೂ, ಆನಂದವನ್ನು ಕೊಡುವವಳೂ, ಪವಿತ್ರಗೊಳಸಲ್ಪಟ್ಟ ಸಕಲ ಲೋಕಗಳುಳ್ಳವಳೂ, ನಿಸ್ಸಂಗಳೂ, ಉಪದ್ರವವಿಲ್ಲದವಳೂ, ಆಶ್ರಯರಹಿತಳೂ, ಪ್ರಪಂಚವನ್ನು ಮೀರಿದವಳೂ, ಹೋಗಲಾಡಿಸಲ್ಪಟ್ಟ ಅಜ್ಞಾನವುಳ್ಳವಳೂ, ಶುದ್ಧವಾದ ಜ್ಞಾನವನ್ನುಂಟುಮಾಡುವವಳೂ, ಪ್ರಾಣಿಗಳ ಸಂತಾಪವನ್ನು ಸಂಪೂರ್ಣವಾಗಿ ಪರಿಹರಿಸಿದವಳೂ, ಶಾಶ್ವತಸಂತೋಷ ಮತ್ತು ತೃಪ್ತಿಗಳುಳ್ಳವಳೂ, ವಂದ್ಯಳೂ, ಅಜ್ಞಾನರಹಿತಳೂ, ಅತಿಶಯನಿಯಮವುಳ್ಳವಳೂ, ಆತಂಕರಹಿತಳೂ, ಪಾಪಲೇಪವಿಲ್ಲದವಳೂ, ನಿಶ್ಚಲಸ್ವರೂಪಳೂ, ದೋಷದೂರಳೂ, ಚೇಷ್ಟಾರಹಿತಳೂ, ಮಹೇಶ್ವರನ ಮಸ್ತಕದಲ್ಲಿರುವವಳೂ, ನಂದಿ, ಭೃಂಗಿ ಮೊದಲಾದ ಶಿವಗಣಗಳಿಂದ ಸ್ತುತಿಸಲ್ಪಟ್ಟವಳೂ, ನಾಗಸ್ವರೂಪಳೂ, ಸಮೃದ್ಧಿಯನ್ನೀಯುವವಳೂ, ಹಿಮಾಲಯನ ಮಗಳೂ, ವಿಘ್ನರಹಿತಳೂ, ದೇವನದಿಯೂ, ಪಾಪಸಮುದ್ರಕ್ಕೆ ದೊಡ್ಡ ನಾವೆಯಂತಿರುವವಳೂ, ಪುಣ್ಯವನ್ನು ಕೊಡುವವಳೂ, ಪುಣ್ಯವುಳ್ಳವಳೂ, ಪುಣ್ಯಸ್ವರೂಪಳೂ, ಪುಣ್ಯಕರವಾದ ಅಲೆಗಳುಳ್ಳವಳೂ, ಪರಿಪೂರ್ಣಳೂ, ಮಹಾ ಫಲವುಳ್ಳವಳೂ, ಸರ್ವತ್ರವ್ಯಾಪ್ತಳೂ, ನಮಸ್ಕಾರ ಮಾಡಿ

ಪ್ರಾಣದಾ ಪ್ರಾಣಿಜನನೀ ಪ್ರಾಣೇಶೀ ಪ್ರಾಣರೂಪಿಣೀ ।
ಪದ್ಮಾಲಯಾ ಪರಾಶಕ್ತಿಃ ಪುರಜಿತ್ಪರಮಪ್ರಿಯಾ ॥ ೧೦೫ ॥
ಪರಾಽಪರಫಲಪ್ರಾಪ್ತಿಃ ಪಾವನೀ ಚ ಪಯಸ್ವಿನೀ ।
ಪರಾನಂದಾ ಪ್ರಕೃಷ್ಟಾರ್ಥಾ ಪ್ರತಿಷ್ಠಾ ಪಾಲನೀ ಪರಾ ॥ ೧೦೬ ॥
ಪುರಾಣಪಠಿತಾ ಪ್ರೀತಾ ಪ್ರಣವಾಕ್ಷರರೂಪಿಣೀ ।
ಪಾರ್ವತೀ ಪ್ರೇಮಸಂಪನ್ನಾ ಪಶುಪಾಶವಿಮೋಚನೀ ॥ ೧೦೭ ॥
ಪರಮಾತ್ಮಸ್ವರೂಪಾ ಚ ಪರಬ್ರಹ್ಮಪ್ರಕಾಶಿನೀ ।
ಪರಮಾನಂದನಿಷ್ಯಂದಾ ಪ್ರಾಯಶ್ಚಿತ್ತಸ್ವರೂಪಿಣೀ ॥ ೧೦೮ ॥
ಪಾನೀಯರೂಪನಿರ್ವಾಣಾ ಪರಿತ್ರಾಣಪರಾಯಣಾ ।
ಪಾಪೇಂಧನದವಜ್ವಾಲಾ ಪಾಪಾಽರಿಃ ಪಾಪನಾಮನುತ್ ॥ ೧೦೯ ॥
ಪರಮೈಶ್ವರ್ಯಜನನೀ ಪ್ರಜ್ಞಾ ಪ್ರಾಜ್ಞಾ ಪರಾಽಪರಾ ।
ಪ್ರತ್ಯಕ್ಷಲಕ್ಷ್ಮೀಃ ಪದ್ಮಾಕ್ಷೀ ಪರವ್ಯೋಮಾಽಮೃತಸ್ರವಾ ॥ ೧೧೦ ॥
ಪ್ರಸನ್ನರೂಪಾ ಪ್ರಣಿಧಿಃ ಪೂತಾ ಪ್ರತ್ಯಕ್ಷದೇವತಾ ।
ಪಿನಾಕಿಪರಮಪ್ರೀತಾ ಪರಮೇಷ್ಠಿಕಮಂಡಲುಃ ॥ ೧೧೧ ॥

---

ದವರ ದುಃಖವನ್ನು ನಿವಾರಿಸುವವಳೂ, ಭಕ್ತರಿಗೆ ಪ್ರಾಣವನ್ನೀಯುವವಳೂ, ಪ್ರಾಣಿಗಳನ್ನು ಸೃಜಿಸುವವಳೂ, ಪ್ರಾಣೇಶ್ವರಿಯೂ, ಹಿರಣ್ಯಗರ್ಭರೂಪಳೂ, ಲಕ್ಷ್ಮೀರೂಪಳೂ, ಮಾಯಾರೂಪಳೂ, ಮಹೇಶ್ವರನಿಗೆ ಅತ್ಯಂತ ಪ್ರಿಯಳೂ, ಸರ್ವೋತ್ಕೃಷ್ಟಳೂ, ಕೈವಲ್ಯವನ್ನೀಯುವವಳೂ, ಸರ್ವಪಾಪಗಳನ್ನೂ ಪರಿಹರಿಸುವವಳೂ, ಉತ್ತಮ ಜಲವುಳ್ಳವಳೂ, ಉತ್ತಮಾನಂದಸ್ವರೂಪಳೂ, ಉತ್ಕೃಷ್ಟಫಲವುಳ್ಳವಳೂ, ಸ್ಥಿರಳೂ, ಕಾಪಾಡುವವಳೂ, ಪರಾಪರಸ್ವರೂಪಳೂ, ಪುರಾಣಪ್ರತಿಪಾದ್ಯಳೂ, ಸಂತೋಷಜನಕಳೂ, ಓಂಕಾರರೂಪಿಣಿಯೂ, ಭವಾನೀರೂಪಳೂ, ಪ್ರೇಮಯುಕ್ತಳೂ, ಜೀವಗಳ ಬಂಧನವನ್ನು ಪರಿಹರಿಸುವವಳೂ, ಪರಬ್ರಹ್ಮಸ್ವರೂಪಳೂ, ಪರಬ್ರಹ್ಮನನ್ನೂ, ಪರಮಾನಂದವನ್ನೂ ಪ್ರಕಾಶಗೊಳಿಸುವವಳೂ, ಪ್ರಾಯಶ್ಚಿತ್ತರೂಪಳೂ ಆಗಿರುವಳು ;

೧೦೯–೧೨೩. ಜಲರೂಪಮೋಕ್ಷವುಳ್ಳವಳೂ, ರಕ್ಷಣಾನಿರತಳೂ, ಪಾಪವೆಂಬ ಕಟ್ಟಿಗೆಗೆ ಕಾಳ್ಕಿಚ್ಚಿನಂತಿರುವವಳೂ, ಪಾಪನಿವಾರಣಿಯೂ, ನಾಮಸ್ಮರಣೆಯಿಂದಲೇ ಪಾಪವನ್ನು ಪರಿಹರಿಸುವವಳೂ, ಉತ್ತಮೈಶ್ವರ್ಯವನ್ನುಂಟುಮಾಡುವವಳೂ, ಸ್ವಪ್ರಕಾಶಜ್ಞಾನಸ್ವರೂಪಳೂ, ವಿದುಷಿಯೂ, ಕಾರ್ಯಕಾರಣರೂಪಳೂ, ಸಾಕ್ಷಾಲ್ಲಕ್ಷ್ಮೀಸ್ವರೂಪಳೂ, ಕಮಲದಂತೆ ಕಣ್ಣುಳ್ಳವಳೂ, ಆಕಾರರೂಪ ಮರಣವಿಲ್ಲದ ಸ್ವರೂಪವನ್ನು ಭಕ್ತರಿಗೀಯುವವಳೂ, ಅಜ್ಞಾನಸ್ಪರ್ಶವಿಲ್ಲದವಳೂ, ಉತ್ತಮನಿಧಿರೂಪಳೂ, ಪವಿತ್ರಳೂ, ಪ್ರತ್ಯಕ್ಷದೇವತೆಯೂ, ವಿಶ್ವೇಶ್ವರನ

ಪದ್ಮನಾಭ ಪದಾಽರ್ಘ್ಯೇಣ ಪ್ರಸೂತಾ ಪದ್ಮಮಾಲಿನೀ ।
ಪರರ್ಧಿದಾ ಪುಷ್ಟಿಕರೀ ಪಥ್ಯಾಪೂರ್ತಿಃ ಪ್ರಭಾವತೀ ॥ ೧೧೨ ॥
ಪುನಾನಾ ಪೀತಗರ್ಭಘ್ನೀ ಪಾಪಪರ್ವತನಾಶಿನೀ ।
ಫಲಿನೀ ಫಲಹಸ್ತಾ ಚ ಫುಲ್ಲಾಂಬುಜವಿಲೋಚನಾ ॥ ೧೧೩ ॥
ಫಾಲಿತೈನೋಮಹಾಕ್ಷೇತ್ರಾ ಫಣಿಲೋಕವಿಭೂಷಣಂ ।
ಫೇನಚ್ಛಲಪ್ರಣುನ್ನೈನಾಃ ಫುಲ್ಲಕೈರವಗಂಧಿನೀ ॥ ೧೧೪ ॥
ಫೇನಿಲಾಚ್ಛಾಂಬುಧಾರಾಭಾ ಫುಡುಚ್ಚಾಟಿತಪಾತಕಾ ।
ಫಾಣಿತಸ್ವಾದುಸಲಿಲಾ ಫಾಂಟಪಥ್ಯ ಜಲಾವಿಲಾ ॥ ೧೧೫ ॥
ವಿಶ್ವಮಾತಾ ಚ ವಿಶ್ವೇಶೀ ವಿಶ್ವಾ ವಿಶ್ವೇಶ್ವರಪ್ರಿಯಾ ।
ಬ್ರಹ್ಮಣ್ಯಾ ಬ್ರಹ್ಮಕೃದ್ಬ್ರಾಹ್ಮೀ ಬ್ರಹ್ಮಿಷ್ಠಾ ವಿಮಲೋದಕಾ ॥ ೧೧೬ ॥
ವಿಭಾವರೀಚ ವಿರಜಾ ವಿಕ್ರಾಂತಾಽನೇಕ ವಿಷ್ಟಪಾ ।
ವಿಶ್ವಮಿತ್ರಂ ವಿಷ್ಣುಪದೀ ವೈಷ್ಣವೀ ವೈಷ್ಣವಪ್ರಿಯಾ ॥ ೧೧೭ ॥

---

ಪರಮಪ್ರಿಯೆಯೂ, ಬ್ರಹ್ಮನೇ ಆಶ್ರಯವಾಗುಳ್ಳವಳೂ, ವಿಷ್ಣುವಿನ ಪಾದಾರ್ಘ್ಯದಿಂದ ಹುಟ್ಟಿದವಳೂ, ಪದ್ಮಮಾಲೆಯುಳ್ಳವಳೂ, ಅತಿಶಯಾಭ್ಯುದಯವನ್ನೀಯುವವಳೂ, ಪುಷ್ಟಿಯನ್ನುಂಟುಮಾಡುವವಳೂ, ಸಂಸಾರರೋಗಕ್ಕೆ ಪಥ್ಯರೂಪಳೂ, ಪ್ರಕಾಶವುಳ್ಳವಳೂ, ಪವಿತ್ರಗೊಳಿಸುವವಳೂ, ತನ್ನ ಜಲವನ್ನು ಪಾನಮಾಡಿದವರ ಗರ್ಭವಾಸದುಃಖವನ್ನು ನಾಶಗೊಳಿಸುವವಳೂ, ಪಾಪವೆಂಬ ಪರ್ವತವನ್ನು ಪರಿಹರಿಸುವವಳೂ, ಫಲದಾತ್ರಿಯೂ, ಫಲವನ್ನು ಕೈಯಲ್ಲಿ ಹಿಡಿದಿರುವವಳೂ, ವಿಕಾಸಗೊಂಡ ಕಮಲದಂತೆ ಕಣ್ಣುಗಳುಳ್ಳವಳೂ, ಸೀಳಲ್ಪಟ್ಟ ಪಾಪವೆಂಬ ಮಹಾಕ್ಷೇತ್ರವುಳ್ಳವಳೂ, ಭೋಗವತಿಯೆಂಬ ಸರ್ಪಲೋಕಕ್ಕೆ ಅಲಂಕಾರವಾಗಿರುವವಳೂ, ನೊರೆಯ ನೆಪದಿಂದ ನೀಗಿಸಲ್ಪಟ್ಟ ಪಾಪವುಳ್ಳವಳೂ, ವಿಕಾಸಗೊಂಡ ಕೈರವಪುಷ್ಪದ ಸುವಾಸನೆಯುಳ್ಳವಳೂ, ನೊರೆಯಿಂದ ಕೂಡಿದ ಶುದ್ಧಜಲಧಾರೆಯ ಕಾಂತಿಯುಳ್ಳವಳೂ, ಫುಟ್‌ಶಬ್ದದಿಂದ ಹೋಗಲಾಡಿಸಲ್ಪಟ್ಟ ಪಾಪವುಳ್ಳವಳೂ, ಪಕ್ವಾನ್ನದಂತೆ ರುಚಿಯಾದ ನೀರುಳ್ಳವಳೂ, ಮಜ್ಜಿಗೆಯಂತೆ ಹಿತವಾದ ನೀರಿನಿಂದ ವಿರಾಜಿಸುವವಳೂ, ಸಮಸ್ತಜನರಿಗೂ ಮಾತೆಯೂ, ವಿಶ್ವೇಶ್ವರಿಯೂ, ಸರ್ವಸ್ವರೂಪಳೂ, ವಿಶ್ವೇಶ್ವರಪ್ರಿಯೆಯೂ, ಬ್ರಾಹ್ಮಣಹಿತಳೂ, ಬ್ರಹ್ಮಾದಿನಿರ್ಮಾಪಕಳೂ, ಬ್ರಹ್ಮಶಕ್ತಿಸ್ವರೂಪಳೂ, ಬ್ರಾಹ್ಮಣಭಕ್ತಳೂ, ಶುದ್ಧವಾದ ನೀರುಳ್ಳವಳೂ, ರಾತ್ರಿರೂಪಳೂ, ರಜೋಗುಣರಹಿತಳೂ, ಪಾಲಿಸಲ್ಪಟ್ಟ ಅನೇಕ ಲೋಕಗಳುಳ್ಳವಳೂ, ಪ್ರಪಂಚಮಿತ್ರಳೂ, ವಿಷ್ಣುಪಾದದಿಂದ ಹುಟ್ಟಿದವಳೂ, ವಿಷ್ಣುವಿನ ಸಂಬಂಧಿನಿಯೂ,

**ವಿರೂಪಾಕ್ಷಪ್ರಿಯಕರೀ ವಿಭೂತಿರ್ವಿಶ್ವತೋಮುಖೀ ।**
**ವಿಪಾಶಾ ವೈ ಸುಧೀವೇದ್ಯಾ ವೇದಾಽಕ್ಷರರಸಸ್ರವಾ ॥ ೧೧೮ ॥**
**ವಿದ್ಯಾ ವೇಗವತೀ ವಂದ್ಯಾ ಬೃಂಹಣೀ ಬ್ರಹ್ಮವಾದಿನೀ ।**
**ವರದಾ ವಿಪ್ರಕೃಷ್ಟಾಚ ವರಿಷ್ಠಾ ಚ ವಿಶೋಧಿನೀ ॥ ೧೧೯ ॥**
**ವಿದ್ಯಾಧರೀ ವಿಶೋಕಾ ಚ ವಯೋವೃಂದನಿಷೇವಿತಾ ।**
**ಬಹೂದಕಾ ಬಲವತೀ ವ್ಯೋಮಸ್ಥಾ ವಿಬುಧಪ್ರಿಯಾ ॥ ೧೨೦ ॥**
**ವಾಣೀ ವೇದವತೀ ವಿತ್ತಾ ಬ್ರಹ್ಮವಿದ್ಯಾತರಂಗಿಣೀ ।**
**ಬ್ರಹ್ಮಾಂಡಕೋಟಿವ್ಯಾಪ್ತಾಂಬುರ್ಬ್ರಹ್ಮಹತ್ಯಾಽಪಹಾರಿಣೀ ॥ ೧೨೧ ॥**
**ಬ್ರಹ್ಮೇಶವಿಷ್ಣುರೂಪಾ ಚ ಬುದ್ಧಿರ್ವಿಭವವರ್ಧಿನೀ ।**
**ವಿಲಾಸಿಸುಖದಾ ವೈಶ್ಯಾ ವ್ಯಾಪಿನೀಚ ವೃಷಾರಣಿಃ ॥ ೧೨೨ ॥**
**ವೃಷಾಂಕಮೌಲಿನಿಲಯಾ ವಿಪನ್ನಾರ್ತಿಪ್ರಭಂಜನೀ ।**
**ವಿನೀತಾ ವನಿತಾ ಬ್ರಧ್ನತನಯಾ ವಿನಯಾನ್ವಿತಾ ॥ ೧೨೩ ॥**

---

ವೈಷ್ಣವಪ್ರಿಯಳೂ, ಮಹೇಶ್ವರನಿಗೆ ಪ್ರೀತಿಯನ್ನುಂಟುಮಾಡುವವಳೂ, ಅಣಿಮಾದ್ಯೈಶ್ವರ್ಯರೂಪಳೂ, ಸರ್ವದಿಕ್ಕಿನಲ್ಲಿಯೂ ಮುಖವುಳ್ಳವಳೂ, ಸಂಸಾರಬಂಧನರಹಿತಳೂ, ದೇವಲೋಕದಲ್ಲಿ ಹುಟ್ಟಿದವಳೂ, ತಿಳಿಯಲರ್ಹಳೂ, ವೇದಾಕ್ಷರಗಳಿಂದ ಬ್ರಹ್ಮಾನಂದವೆಂಬ ರಸವನ್ನು ಸ್ರವಿಸುವವಳೂ, ಬ್ರಹ್ಮವಿದ್ಯಾರೂಪಳೂ, ವೇಗವುಳ್ಳವಳೂ, ನಮಸ್ಕರಿಸಲರ್ಹಳೂ, ದೇಹೇಂದ್ರಿಯಾದಿಗಳನ್ನು ಪರಿಣಾಮಗೊಳಿಸುವವಳೂ, ಬ್ರಹ್ಮಸ್ವರೂಪವನ್ನು ಪ್ರದಿಪಾದಿಸುವವಳೂ, ವರವನ್ನು ನೀಡುವವಳೂ, ಸರ್ವೋತ್ತಮಳೂ, ಶ್ರೇಷ್ಠಳೂ, ಪಾಪಶೋಧಕಳೂ, ವಿದ್ಯಾಧರಸ್ತ್ರೀರೂಪಿಣಿಯೂ, ಶೋಕರಹಿತಳೂ, ಪಕ್ಷಿಗಳ ಸಮೂಹಗಳಿಂದ ಸೇವಿಸಲ್ಪಟ್ಟವಳೂ, ಅಪಾರವಾದ ನೀರುಳ್ಳವಳೂ, ಮಹಾ ಬಲವುಳ್ಳವಳೂ, ಆಕಾಶದಲ್ಲಿರುವವಳೂ, ದೇವಪ್ರಿಯಳೂ, ಸರಸ್ವತೀರೂಪಳೂ, ವೇದಸ್ವರೂಪಿಣಿಯೂ, ಜ್ಞಾನಸ್ವರೂಪಿಣಿಯೂ, ಬ್ರಹ್ಮವಿದ್ಯಾರೂಪವಾದ ಅಲೆಗಳುಳ್ಳವಳೂ, ಅನೇಕ ಬ್ರಹ್ಮಾಂಡಗಳನ್ನು ವ್ಯಾಪಿಸಿದ ನೀರುಳ್ಳವಳೂ, ಬ್ರಹ್ಮಹತ್ಯೆಯನ್ನು ನೀಗಿಸುವವಳೂ, ಬ್ರಹ್ಮವಿಷ್ಣುಮಹೇಶರೂಪಳೂ, ಬುದ್ಧಿರೂಪಳೂ, ಐಶ್ವರ್ಯವನ್ನು ಹೆಚ್ಚಿಸುವವಳೂ, ವಿಲಾಸಿಗಳಿಗೆ ಸುಖವನ್ನು ನೀಡುವವಳೂ, ವೈಶ್ಯಜಾತೀಸ್ತ್ರೀರೂಪಳೂ, ವ್ಯಾಪಿಸುವ ಸ್ವಭಾವವುಳ್ಳವಳೂ, ಧರ್ಮೋತ್ಪತ್ತಿಕಾರಣಳೂ, ಮಹೇಶ್ವರನ ಮಸ್ತಕದಲ್ಲಿ ನೆಲೆಸಿರುವವಳೂ, ತನ್ನಲ್ಲಿ ಮೃತರಾದವರ ಪೀಡೆಯನ್ನು ನಿವಾರಿಸುವವಳೂ, ಪಕ್ಷಿಗಳಿಂದ ವ್ಯಾಪಿಸಲ್ಪಟ್ಟವಳೂ, ಅತಿನಮ್ರಳೂ, ಯಮುನಾರೂಪಳೂ, ವಿನಯದಿಂದ ಕೂಡಿದವಳೂ ಆಗಿರುವಳು ;

ವಿಪಂಚೀವಾದ್ಯಕುಶಲಾ ವೇಣುಶ್ರುತಿವಿಚಕ್ಷಣಾ ।
ವರ್ಚಸ್ಕರೀ ಬಲಕರೀ ಬಲೋನ್ಮೂಲಿತಕಲ್ಮಷಾ ॥ ೧೨೪ ॥
ವಿಪಾಪ್ಮಾ ವಿಗತಾತಂಕಾ ವಿಕಲ್ಪಪರಿವರ್ಜಿತಾ ।
ವೃಷ್ಟಿಕರ್ತ್ರೀ ವೃಷ್ಟಿಜಲಾ ವಿಧಿರ್ವಿಚ್ಛಿನ್ನಬಂಧನಾ ॥ ೧೨೫ ॥
ವ್ರತರೂಪಾ ವಿತ್ತರೂಪಾ ಬಹುವಿಘ್ನವಿನಾಶಕೃತ್ ।
ವಸುಧಾರಾ ವಸುಮತೀ ವಿಚಿತ್ರಾಂಗೀ ವಿಭಾವಸುಃ ॥ ೧೨೬ ॥
ವಿಜಯಾ ವಿಶ್ವಬೀಜಂ ಚ ವಾಮದೇವೀ ವರಪ್ರದಾ ।
ವೃಷಾಶ್ರಿತಾ ವಿಷಘ್ನೀ ಚ ವಿಜ್ಞಾನೋರ್ಮ್ಯಂಶುಮಾಲಿನೀ ॥ ೧೨೭ ॥
ಭವ್ಯಾ ಭೋಗವತೀ ಭದ್ರಾ ಭವಾನೀ ಭೂತಭಾವಿನೀ ।
ಭೂತಧಾತ್ರೀ ಭಯಹರಾ ಭಕ್ತದಾರಿದ್ರ್ಯಘಾತಿನೀ ॥ ೧೨೮ ॥
ಭುಕ್ತಿಮುಕ್ತಿಪ್ರದಾಭೇಶೀ ಭಕ್ತಸ್ವರ್ಗಾಽಪವರ್ಗದಾ ।
ಭಾಗೀರಥೀ ಭಾನುಮತೀ ಭಾಗ್ಯಂ ಭೋಗವತೀ ಭೃತಿಃ ॥ ೧೨೯ ॥
ಭವಪ್ರಿಯಾ ಭವದ್ವೇಷ್ಟ್ರೀ ಭೂತಿದಾ ಭೂತಿಭೂಷಣಾ ।
ಭಾಲಲೋಚನಭಾವಜ್ಞಾ ಭೂತಭವ್ಯಭವತ್ಪ್ರಭುಃ ॥ ೧೩೦ ॥

---

೧೨೪–೧೩೦. ವೀಣಾವಾದನದಲ್ಲಿ ಕುಶಲಳೂ, ಕೊಳಲಿನ ಧ್ವನಿಯನ್ನು ಕೇಳುವುದರಲ್ಲಿ ಕುಶಲಳೂ, ತೇಜಸ್ಸನ್ನುಂಟುಮಾಡುವವಳೂ, ಬಲವನ್ನುಂಟು ಮಾಡುವವಳೂ, ಬಲದಿಂದ ನಾಶಗೊಳಿಸಲ್ಪಟ್ಟ ಕಲ್ಮಷವುಳ್ಳವಳೂ, ಪಾಪ ರಹಿತಳೂ, ಭಯವಿಲ್ಲದವಳೂ, ಭೇದರಹಿತಳೂ, ಮಳೆಯನ್ನುಂಟುಮಾಡು ವವಳೂ, ಮಳೆಯನ್ನುಂಟುಮಾಡುವ ನೀರುಳ್ಳವಳೂ, ಬ್ರಹ್ಮರೂಪಳೂ, ಬಂಧನವನ್ನು ಪರಿಹರಿಸುವವಳೂ, ವ್ರತಧನರೂಪಳೂ, ಅನೇಕ ವಿಘ್ನಗಳನ್ನು ನಾಶಗೊಳಿಸುವವಳೂ, ಭೀಷ್ಮಾದಿ ವಸುಗಳನ್ನು ಧರಿಸಿದವಳೂ, ದ್ರವ್ಯರೂಪಳೂ, ವಿಚಿತ್ರವಾದ ಅಂಗವುಳ್ಳವಳೂ, ಸೂರ್ಯರೂಪಳೂ, ಭವಾನಿಗೆ ಸಖೀರೂಪಳೂ, ಜಗತ್ತಿಗೆ ಕಾರಣಳೂ, ವಾಮದೇವನ ಸತಿಯೂ, ವರವನ್ನು ಕೊಡುವವಳೂ, ಧರ್ಮವನ್ನಾಶ್ರಿಸಿದವಳೂ, ವಿಷನಿವಾರಿಣಿಯೂ, ವಿಜ್ಞಾನವೆಂಬ ಅಲೆಗಳನ್ನೂ ಕಾಂತಿಯನ್ನೂ ಧರಿಸಿದವಳೂ, ಮಂಗಳಕರಳೂ, ಭೋಗವುಳ್ಳವಳೂ, ಮಂಗಳ ರೂಪಳೂ, ಶಿವಪತ್ನಿಯೂ, ಪ್ರಾಣಿಗಳನ್ನು ಸೃಜಿಸುವವಳೂ, ಪ್ರಾಣಿಗಳನ್ನು ಪೊರೆ ಯುವವಳೂ, ಭಯನಿವಾರಕಳೂ, ಭಕ್ತರ ಬಡತನವನ್ನು ಪರಿಹರಿಸುವವಳೂ, ಭೋಗಮೋಕ್ಷಗಳನ್ನು ಕೊಡುವವಳೂ, ನಕ್ಷತ್ರನಿಯಾಮಕಳೂ, ಭಕ್ತರಿಗೆ ಸ್ವರ್ಗಮೋಕ್ಷಗಳನ್ನು ನೀಡುವವಳೂ, ಭಗೀರಥನಿಂದ ಭೂಲೋಕಕ್ಕೆ ತರಲಾದ ವಳೂ, ತೇಜಸ್ಸುಳ್ಳವಳೂ, ಅದೃಷ್ಟರೂಪಳೂ, ಪಾತಾಳಗಾಮಿನಿಯೂ, ಕಾಪಾಡು ವವಳೂ, ಶಿವಸತಿಯೂ, ಸಂಸಾರನಾಶಕಳೂ, ಐಶ್ವರ್ಯವನ್ನು ಅನುಗ್ರಹಿಸು

ಭ್ರಾಂತಿಜ್ಞಾನಪ್ರಶಮನೀ ಭಿನ್ನಬ್ರಹ್ಮಾಂಡಮಂಡಪಾ ।
ಭೂರಿದಾ ಭಕ್ತಸುಲಭಾ ಭಾಗ್ಯವದ್ದೃಷ್ಟಿಗೋಚರೀ ॥ ೧೩೧ ॥
ಭಂಜಿತೋಪಪ್ಲವಕುಲಾ ಭಕ್ಷ್ಯಭೋಜ್ಯಸುಖಪ್ರದಾ ।
ಭಿಕ್ಷಣೀಯಾ ಭಿಕ್ಷುಮಾತಾ ಭಾವಾಭಾವಸ್ವರೂಪಿಣೀ ॥ ೧೩೨ ॥
ಮಂದಾಕಿನೀ ಮಹಾನಂದಾ ಮಾತಾ ಮುಕ್ತಿತರಂಗಿಣೀ ।
ಮಹೋದಯಾ ಮಧುಮತೀ ಮಹಾಪುಣ್ಯಾ ಮುದಾಕರೀ ॥ ೧೩೩ ॥
ಮುನಿಸ್ತುತಾ ಮೋಹಹಂತ್ರೀ ಮಹಾತೀರ್ಥಾ ಮಧುಸ್ರವಾ ।
ಮಾಧವೀ ಮಾನಿನೀ ಮಾನ್ಯಾ ಮನೋರಥಪಥಾಽತಿಗಾ ॥ ೧೩೪ ॥
ಮೋಕ್ಷದಾ ಮತಿದಾ ಮುಖ್ಯಾ ಮಹಾಭಾಗ್ಯಜನಾಶ್ರಿತಾ ।
ಮಹಾವೇಗವತೀ ಮೇಧ್ಯಾ ಮಹಾಮಹಿಮಭೂಷಣಾ ॥ ೧೩೫ ॥
ಮಹಾಪ್ರಭಾವಾ ಮಹತೀ ಮೀನಚಂಚಲಲೋಚನಾ ।
ಮಹಾಕಾರುಣ್ಯಸಂಪೂರ್ಣಾ ಮಹರ್ಧಿಶ್ಚ ಮಹೋತ್ಪಲಾ ॥ ೧೩೬ ॥
ಮೂರ್ತಿಮನ್ಮುಕ್ತಿರಮಣೀ ಮಣಿಮಾಣಿಕ್ಯಭೂಷಣಾ ।
ಮುಕ್ತಾಕಲಾಪನೇಪಥ್ಯಾ ಮನೋನಯನನಂದಿನೀ ॥ ೧೩೭ ॥

---

ವವಳೂ, ಐಶ್ವರ್ಯಮಂಡಿತಳೂ, ಶಿವನಮನೋಭಿಪ್ರಾಯವನ್ನರಿತವಳೂ, ಭೂತಭವಿಷ್ಯದ್ವರ್ತಮಾನಗಳಿಗೆ ನಾಯಕಿಯೂ, ಭ್ರಾಂತಿಜ್ಞಾನವನ್ನು ಪರಿಹರಿಸುವವಳೂ, ಬ್ರಹ್ಮಾಂಡಮಂಡಲವನ್ನು ಭೇದಿಸುವವಳೂ, ಬಹುವಾಗಿ ಇಷ್ಟಾರ್ಥಗಳನ್ನು ನೀಡುವವಳೂ, ಭಕ್ತಿಯಿಂದ ಸುಖವಾಗಿ ಹೊಂದಲು ಶಕ್ಯಳೂ, ಶುಭದೃಷ್ಟಿಯುಳ್ಳವರಿಗೆ ಪ್ರತ್ಯಕ್ಷಳಾಗುವವಳೂ, ಭಕ್ತರ ತೊಂದರೆಗಳನ್ನು ನಾಶಗೊಳಿಸಿದವಳೂ, ಭಕ್ಷ್ಯಭೋಜ್ಯಗಳಿಂದ ಸುಖವನ್ನು ಕೊಡುವವಳೂ, ಮೋಕ್ಷಾರ್ಥಿಗಳಿಂದ ಯಾಚಿಸಲರ್ಹಳೂ, ಸನ್ಯಾಸಿಗಳಿಗೆ ಜನನೀಸ್ವರೂಪಳೂ, ಪದಾರ್ಥಗಳು ಮತ್ತು ಅವುಗಳ ಅಭಾವರೂಪಳೂ, ಸ್ವರ್ಗಗಂಗೆಯೂ, ಅತ್ಯಾನಂದರೂಪಳೂ, ಮಾತೆಯೂ, ಮುಕ್ತಿನದಿಯೂ, ಮಹಾಭ್ಯುದಯವುಳ್ಳವಳೂ, ಮಧುರಜಲವುಳ್ಳವಳೂ. ಮಹಾಪುಣ್ಯಸ್ವರೂಪಳೂ, ಸಂತೋಷಕ್ಕೆ ಆಶ್ರಯಳೂ, ಮುನಿಗಳಿಂದ ಸ್ತುತಿಸಲ್ಪಟ್ಟವಳೂ, ಅಜ್ಞಾನವನ್ನು ಪರಿಹರಿಸುವವಳೂ, ಮಹಾತೀರ್ಥರೂಪಳೂ, ಸಿಹಿಯಾದ ನೀರನ್ನು ಸ್ರವಿಸುವವಳೂ, ವಿಷ್ಣುಪತ್ನಿಯೂ, ಪ್ರಣಯಕೋಪವುಳ್ಳವಳೂ, ಪೂಜ್ಯಳೂ, ಅಭಿಲಾಷೆಯ ದಾರಿಯನ್ನೂ ಮೀರಿದವಳೂ, ಮೋಕ್ಷವನ್ನೀಯುವ ಜ್ಞಾನವನ್ನುಕೊಡುವವಳೂ, ಅತ್ಯಂತ ಭಾಗ್ಯವುಳ್ಳಜನರಿಂದ ಮಾತ್ರವೇ ಆಶ್ರಯಿಸಲ್ಪಟ್ಟವಳೂ, ಅತಿವೇಗವುಳ್ಳವಳೂ, ಪವಿತ್ರಳೂ, ಉತ್ಸವವುಳ್ಳವಳೂ, ಮಾಹಾತ್ಮ್ಯಗಳಿಂದ ಭೂಷಿಸಲ್ಪಟ್ಟವಳೂ, ಅತಿಶಯಪ್ರಭಾವವುಳ್ಳವಳೂ, ಪರಿಚ್ಛೇದರಹಿತಳೂ, ಮೀನಿನಂತೆ ಚಂಚಲವಾದ ಕಣ್ಣುಳ್ಳವಳೂ,

ಮಹಾಪಾತಕರಾಶಿಘ್ನೀ ಮಹಾದೇವಾರ್ಧಹಾರಿಣೀ ।
ಮಹೋರ್ಮಿಮಾಲಿನೀ ಮುಕ್ತಾ ಮಹಾದೇವೀ ಮನೋನ್ಮನೀ ॥ ೧೩೮ ॥
ಮಹಾಪುಣ್ಯೋದಯಪ್ರಾಪ್ಯಾ ಮಾಯಾತಿಮಿರಚಂದ್ರಿಕಾ ।
ಮಹಾವಿದ್ಯಾ ಮಹಾಮಾಯಾ ಮಹಾಮೇಧಾ ಮಹೌಷಧಂ ॥ ೧೩೯ ॥
ಮಾಲಾಧರೀ ಮಹೋಪಾಯಾ ಮಹೋರಗವಿಭೂಷಣಾ ।
ಮಹಾಮೋಹಪ್ರಶಮನೀ ಮಹಾಮಂಗಲಮಂಗಲಂ ॥ ೧೪೦ ॥
ಮಾರ್ತಂಡಮಂಡಲಚರೀ ಮಹಾಲಕ್ಷ್ಮೀರ್ಮದೋಜ್ಝಿತಾ ।
ಯಶಸ್ವಿನೀ ಯಶೋದಾಚ ಯೋಗ್ಯಾ ಯುಕ್ತಾತ್ಮಸೇವಿತಾ ॥ ೧೪೧ ॥
ಯೋಗಸಿದ್ಧಿಪ್ರದಾ ಯಾಜ್ಯಾ ಯಜ್ಞೇಶಪರಿಪೂರಿತಾ ।
ಯಜ್ಞೇಶೀ ಯಜ್ಞಫಲದಾ ಯಜನೀಯಾ ಯಶಸ್ಕರೀ ॥ ೧೪೨ ॥
ಯಮಿಸೇವ್ಯಾ ಯೋಗಯೋನಿರ್ಯೋಗಿನೀಯುಕ್ತಬುದ್ಧಿದಾ ।
ಯೋಗಜ್ಞಾನಪ್ರದಾ ಯುಕ್ತಾ ಯಮಾದ್ಯಷ್ಟಾಂಗಯೋಗಯುಕ್ ॥ ೧೪೩ ॥

---

ಅತ್ಯಂತ ಕಾರುಣ್ಯಪೂರ್ಣಳೂ, ಅತ್ಯಂತ ವೃದ್ಧಿಯುಳ್ಳವಳೂ, ಮಹೋತ್ಪಲವುಳ್ಳವಳೂ, ಪ್ರತ್ಯಕ್ಷಶರೀರಿಣಿಯೂ, ಮುಕ್ತಿರೂಪಸುಂದರಸ್ತ್ರೀಯೂ, ಮಾಣಿಕ್ಯರತ್ನ ಭೂಷಿತಳೂ, ಮುತ್ತಿನಸಮೂಹಗಳಿಂದ ಅಲಂಕಾರಗೊಂಡವಳೂ, ಮನಸ್ಸನ್ನೂ, ಕಣ್ಣುಗಳನ್ನೂ ಸಂತೋಷಗೊಳಿಸುವವಳೂ, ಮಹಾಪಾತಕಗಳ ಸಮೂಹವನ್ನು ನಾಶಗೊಳಿಸುವವಳೂ, ಮಹೇಶ್ವರನ ಅರ್ಧಾಂಗಿಯೂ, ದೊಡ್ಡ ಅಲೆಗಳುಳ್ಳವಳೂ, ಮುಕ್ತಳೂ, ಮಹಾದೇವಿಯೂ, ಮನಸ್ಸನ್ನು ಶುದ್ಧಿಗೊಳಿಸುವವಳೂ ಆಗಿರುವಳು ;

೧೩೯–೧೫೪. ಅತಿಶಯಪುಣ್ಯದಿಂದ ಮಾತ್ರವೇ ಹೊಂದಲರ್ಹಳೂ, ಮಾಯೆಯೆಂಬ ಕತ್ತಲೆಗೆ ಬೆಳದಿಂಗಳೂ, ಬ್ರಹ್ಮವಿದ್ಯಾಸ್ವರೂಪಿಣಿಯೂ, ಮಹಾಮಾಯಾರೂಪಿಣಿಯೂ, ಬ್ರಹ್ಮಾಕಾರಬುದ್ಧಿರೂಪಳೂ, ಮಹೌಷಧರೂಪಳೂ, ವೈಜಯಂತೀ ಮಾಲೆಯನ್ನು ಧರಿಸಿದವಳೂ, ಪುರುಷಾರ್ಥಚತುಷ್ಟಯವನ್ನು ಹೊಂದಲು ಕಾರಣಳೂ, ವಾಸುಕಿಯೆ ಮೊದಲಾದ ಸರ್ಪಗಳನ್ನೇ ಒಡವೆಯನ್ನಾಗಿ ಉಳ್ಳವಳೂ, ಮಹಾಮೋಹವನ್ನು ಪರಿಹರಿಸುವವಳೂ, ಮಹಾಮಂಗಳಕ್ಕೂ ಮಂಗಳಕರಳೂ, ಸೂರ್ಯಮಂಡಲದಲ್ಲಿ ಸಂಚರಿಸುವವಳೂ, ಮಹಾಲಕ್ಷ್ಮೀರೂಪಳೂ, ಮದರಹಿತಳೂ, ಕೀರ್ತಿಯುಳ್ಳವಳೂ, ಕೀರ್ತಿಕರಳೂ, ಯೋಗಗಮ್ಯಳೂ, ಯುಕ್ತಾತ್ಮರಿಂದ ಸೇವಿತಳೂ, ಯೋಗಸಿದ್ಧಿಯನ್ನು ಕೊಡುವವಳೂ, ಪೂಜ್ಯಳೂ, ಯಜ್ಞೇಶನಿಂದ ವ್ಯಾಪ್ತಳೂ, ಯಜ್ಞಾಭಿಮಾನಿದೇವತೆಯೂ, ಯಜ್ಞಫಲವನ್ನು ಕೊಡುವವಳೂ, ಪೂಜಾರ್ಹಳೂ, ಕೀರ್ತಿಯನ್ನುಂಟುಮಾಡುವವಳೂ,

ಯಂತ್ರಿತಾಽಘೌಘಸಂಚಾರಾ ಯಮಲೋಕನಿವಾರಿಣೀ ।
ಯಾತಾಽಯಾತಪ್ರಶಮನೀ ಯಾತನಾನಾಂನಿಕೃಂತನೀ ॥ ೧೪೪ ॥
ಯಾಮಿನೀಶಹಿಮಾಽಚ್ಛೋದಾ ಯುಗಧರ್ಮವಿವರ್ಜಿತಾ ।
ರೇವತೀ ರತಿಕೃದ್ರಮ್ಯಾ ರತ್ನಗರ್ಭಾ ರಮಾ ರತಿಃ ॥ ೧೪೫ ॥
ರತ್ನಾಕರಪ್ರೇಮಪಾತ್ರಂ ರಸಜ್ಞಾ ರಸರೂಪಿಣೀ ।
ರತ್ನಪ್ರಾಸಾದಗರ್ಭಾಚ ರಮಣೀಯತರಂಗಿಣೀ ॥ ೧೪೬ ॥
ರತ್ನಾರ್ಚಿಃ ರುದ್ರರಮಣೀ ರಾಗದ್ವೇಷವಿನಾಶಿನೀ ।
ರಮಾ ರಾಮಾ ರಮ್ಯರೂಪಾ ರೋಗಿಜೀವಾತುರೂಪಿಣೀ ॥ ೧೪೭ ॥
ರುಚಿಕೃದ್ರೋಚನೀ ರಮ್ಯಾ ರುಚಿರಾ ರೋಗಹಾರಿಣೀ ।
ರಾಜಹಂಸಾ ರತ್ನವತೀ ರಾಜತ್ಕಲ್ಲೋಲರಾಜಿಕಾ ॥ ೧೪೮ ॥
ರಾಮಣೀಯಕರೇಖಾ ಚ ರುಜಾರೀ ರೋಗರೋಷಿಣೀ ।
ರಾಕಾ ರಂಕಾರ್ತಿಶಮನೀ ರಮ್ಯಾ ರೋಲಂಬರಾವಿಣೀ ॥ ೧೪೯ ॥

---

ಜಿತೇಂದ್ರಿಯರಿಂದ ಸೇವಿತೆಯಾದವಳೂ, ಯೋಗಕಾರಣಳೂ, ಯೋಗಿನೀಗಣರೂಪಳೂ, ಬ್ರಹ್ಮಾತ್ಮೈಕ್ಯ ಜ್ಞಾನಪ್ರದಳೂ, ಯೋಗಜ್ಞಾನವನ್ನು ಕೊಡುವವಳೂ, ಜಿತೇಂದ್ರಿಯಳೂ, ಯಮಾದ್ಯಂಷ್ಟಾಂಗ ಯೋಗಸಹಿತಳೂ, ನಿವಾರಿಸಲ್ಪಟ್ಟ ಪಾಪಸಂಚಾರವುಳ್ಳವಳೂ, ಯಮಲೋಕವನ್ನು ತಡೆಯುವವಳೂ, ಜನ್ಮಮರಣಗಳನ್ನು ನಿವಾರಿಸುವವಳೂ, ಪೀಡೆಯೆಂಬ ನಾಮವನ್ನೇ ಪರಿಹರಿಸುವವಳೂ, ಚಂದ್ರಕಾಂತಿಯಂತೆ ನಿರ್ಮಲವಾದ ನೀರುಳ್ಳವಳೂ, ಯುಗಧರ್ಮರಹಿತಳೂ, ರೇವತೀರೂಪಳೂ, ಸುಖವನ್ನುಂಟುಮಾಡುವವಳೂ, ಮನೋಹರಳೂ, ರತ್ನಗರ್ಭೆಯೂ, ಲಕ್ಷ್ಮೀರೂಪಳೂ, ಕಾಮಪತ್ನೀಸ್ವರೂಪಳೂ, ಸಮುದ್ರರಾಜನಿಗೆ ಪ್ರೀತಿಪಾತ್ರಳೂ, ಬ್ರಹ್ಮಜ್ಞಳೂ, ಬ್ರಹ್ಮರೂಪಿಣಿಯೂ, ರತ್ನಮಯಸೌಧಗಳುಳ್ಳವಳೂ, ಮನೋಹರವಾದ ಅಲೆಗಳುಳ್ಳವಳೂ, ರತ್ನದಂತೆ ಕಾಂತಿಯುಳ್ಳವಳೂ, ರುದ್ರಪತ್ನಿಯೂ, ರಾಗದ್ವೇಷಗಳನ್ನು ಪರಿಹರಿಸುವವಳೂ, ಕಣ್ಮನಸ್ಸುಗಳನ್ನು ಸಂತೋಷಗೊಳಿಸುವವಳೂ, ಉತ್ತಮಸ್ತ್ರೀರೂಪಳೂ, ಸುಂದರಿಯೂ, ಸಂಸಾರರೋಗಗ್ರಸ್ತರಿಗೆ ಜೀವನೌಷಧದಂತಿರುವವಳೂ, ಪ್ರೀತಿಯನ್ನುಂಟುಮಾಡುವವವಳೂ, ಸಂತೋಷಗೊಳಿಸುವವಳೂ, ಲಕ್ಷ್ಮಿಗೆಪ್ರಿಯಳೂ, ಮನೋಹರಳೂ, ಸಂಸಾರರೋಗವನ್ನು ನಿವಾರಿಸುವವಳೂ, ರಾಜಹಂಸಗಳುಳ್ಳವಳೂ, ರತ್ನಗಳುಳ್ಳವಳೂ, ಪ್ರಕಾಶಿಸುವ ಅಲೆಗಳ ಸಮೂಹವುಳ್ಳವಳೂ, ಮನೋಹರವಾದ ರೇಖೆಗಳುಳ್ಳವಳೂ, ರೋಗಗಳಿಗೆ ಶತ್ರುವೂ, ರೋಗದಲ್ಲಿ ಕೋಪವುಳ್ಳವಳೂ, ಹುಣ್ಣಿಮೆಯರೂಪಳೂ, ದರಿದ್ರರ ಪೀಡೆಯನ್ನು ನಿವಾರಿಸು

ರಾಗಿಣೀ ರಂಜಿತಶಿವಾ ರೂಪಲಾವಣ್ಯಶೇವಧಿಃ ।
ಲೋಕಪ್ರಸೂರ್ಲೋಕವಂದ್ಯಾ ಲೋಲತ್ಕಲ್ಲೋಲಮಾಲಿನೀ ॥ ೧೫೦ ॥
ಲೀಲಾವತೀ ಲೋಕಭೂಮಿರ್ಲೋಕಲೋಚನಚಂದ್ರಿಕಾ ।
ಲೇಖಸ್ರವಂತೀ ಲಟಭಾ ಲಘುವೇಗಾ ಲಘುತ್ವಹೃತ್ ॥ ೧೫೧ ॥
ಲಾಸ್ಯತ್ತರಂಗಹಸ್ತಾ ಚ ಲಲಿತಾಲಯಭಂಗಿಗಾ ।
ಲೋಕಬಂಧುರ್ಲೋಕಧಾತ್ರೀ ಲೋಕೋತ್ತರಗುಣೋರ್ಜಿತಾ ॥ ೧೫೨ ॥
ಲೋಕತ್ರಯಹಿತಾ ಲೋಕಾ ಲಕ್ಷ್ಮೀರ್ಲಕ್ಷಣಲಕ್ಷಿತಾ ।
ಲೀಲಾಲಕ್ಷಿತನಿರ್ವಾಣಾ ಲಾವಣ್ಯಾಽಮೃತವರ್ಷಿಣೀ ॥ ೧೫೩ ॥
ವೈಶ್ವಾನರೀ ವಾಸವೇಡ್ಯಾ ವಂಧ್ಯತ್ವಪರಿಹಾರಿಣೀ ।
ವಾಸುದೇವಾಽಂಘ್ರಿರೇಣುಘ್ನೀ ವಜ್ರಿವಜ್ರನಿವಾರಿಣೀ ॥ ೧೫೪ ॥
ಶುಭಾವತೀ ಶುಭಫಲಾ ಶಾಂತಿಃ ಶಂತನುವಲ್ಲಭಾ ।
ಶೂಲಿನೀ ಶೈಶವವಯಾಃ ಶೀತಲಾಽಮೃತವಾಹಿನೀ ॥ ೧೫೫ ॥

---

ವವಳೂ, ಸುಂದರಳೂ, ದುಂಬಿಗಳಿಂದ ದನಿಗೈಯುವವಳೂ, ಸೃಷ್ಟ್ಯಾದ್ಯಿಚ್ಛಾರೂಪರಾಗವುಳ್ಳವಳೂ, ಕೈವಲ್ಯವನ್ನು ಪ್ರಕಟಿಸುವವಳೂ, ಸೌಂದರ್ಯ ಮತ್ತು ಅಂಗಸೌಷ್ಠವಗಳಿಗೆ ಆಶ್ರಯಳೂ, ಲೋಕಗಳನ್ನು ಸೃಜಿಸುವವಳೂ, ಜನವಂದ್ಯಳೂ, ಅಲುಗಾಡುವ ಅಲೆಗಳ ಸಮೂಹವುಳ್ಳವಳೂ, ಸೃಷ್ಟ್ಯಾದಿಲೀಲೆಯುಳ್ಳವಳೂ, ಲೋಕಗಳಿಗೆ ಆಶ್ರಯಳೂ, ಜನರ ಕಣ್ಣಿಗೆ ಬೆಳದಿಂಗಳಂತಿರುವವಳೂ, ಶಾಸ್ತ್ರಕಾರಣಳೂ, ವಿಷಯಾಸಕ್ತಜನರಂತೆ ಕಾಂತಿಯುಳ್ಳವಳೂ, ಸ್ವಲ್ಪವೇಗವುಳ್ಳವಳೂ, ಲಾಘವವನ್ನು ಪರಿಹರಿಸುವವಳೂ, ಕುಣಿಯುತ್ತಿರುವ ಅಲೆಗಳೆಂಬ ಕೈಗಳುಳ್ಳವಳೂ, ಮನೋಹರಳೂ, ತಾಳಲಯಕ್ರಮದಿಂದ ಹರಿಯುವವಳೂ, ಲೋಕಗಳಿಗೆಲ್ಲ ಹಿತವನ್ನುಂಟುಮಾಡುವವಳೂ, ಲೋಕವನ್ನು ಸೃಜಿಸುವವಳೂ, ಲೋಕೋತ್ತರಗುಣಗಳಿಂದ ಶ್ರೇಷ್ಠಳೂ, ಮೂರು ಲೋಕಗಳಿಗೂ ಹಿತವನ್ನುಂಟುಮಾಡುವವಳೂ, ಲೋಕರೂಪಳೂ, ಲಕ್ಷ್ಮೀರೂಪಳೂ, ಸತ್ಯಜ್ಞಾನಾನಂದಲಕ್ಷಣಗಳಿಂದ ಕೂಡಿರುವವಳೂ, ಭಗವತ್ಕ್ರೀಡಾರೂಪಳೂ, ಮೋಕ್ಷವನ್ನು ತೋರಿಸುವವಳೂ, ಲಾವಣ್ಯವೆಂಬ ಅಮೃತವನ್ನು ಸುರಿಸುವವಳೂ, ಇಂದ್ರನಿಂದ ಸ್ತುತಿಸಲಾದವಳೂ, ಬಂಜೆತನವನ್ನು ನಿವಾರಿಸುವವಳೂ, ವಾಸುದೇವನ ಪಾದಧೂಳಿಯನ್ನು ಅಪಹರಿಸುವವಳೂ, ಇಂದ್ರನ ವಜ್ರಾಯುಧವನ್ನು ನಿವಾರಿಸುವವಳೂ ಆಗಿರುವಳು ;

೧೫೫–೧೬೮. ಮಂಗಳವುಳ್ಳವಳೂ, ಶುಭಫಲವುಳ್ಳವಳೂ, ಶಾಂತಿರೂಪಳೂ, ಶಂತನುಪತ್ನಿಯೂ, ಶೂಲಧಾರಿಣಿಯೂ, ಶಿಶುವಿನ ವಯಸ್ಸುಳ್ಳವಳೂ, ಶೀತಲಜಲವುಳ್ಳವಳೂ, ಕಾಂತಿಮತಿಯೂ, ಸತ್ಸ್ವಭಾವವುಳ್ಳವಳೂ,

ಶೋಭಾವತೀ ಶೀಲವತೀ ಶೋಷಿತಾಽಶೇಷಕಿಲ್ಬಿಷಾ ।
ಶರಣ್ಯಾ ಶಿವದಾ ಶಿಷ್ಟಾ ಶರಜನ್ಮಪ್ರಸೂಃ ಶಿವಾ ॥ ೧೫೬ ॥
ಶಕ್ತಿಃ ಶಶಾಂಕವಿಮಲಾ ಶಮನಸ್ವಸೃಸಂಮತಾ ।
ಶಮಾ ಶಮನಮಾರ್ಗಘ್ನೀ ಶಿತಿಕಂಠಮಹಾಪ್ರಿಯಾ ॥ ೧೫೭ ॥
ಶುಚಿಃ ಶುಚಿಕರೀ ಶೇಷಾ ಶೇಷಶಾಯಿಪದೋದ್ಭವಾ ।
ಶ್ರೀನಿವಾಸಶ್ರುತಿಃ ಶ್ರದ್ಧಾ ಶ್ರೀಮತೀ ಶ್ರೀಃ ಶುಭವ್ರತಾ ॥ ೧೫೮ ॥
ಶುದ್ಧವಿದ್ಯಾ ಶುಭಾವರ್ತಾ ಶ್ರುತಾನಂದಾ ಶ್ರುತಸ್ತುತಿಃ ।
ಶಿವೇತರಘ್ನೀ ಶಬರೀ ಶಾಂಬರೀರೂಪಧಾರಿಣೀ ॥ ೧೫೯ ॥
ಶ್ಮಶಾನಶೋಧನೀ ಶಾಂತಾ ಶಶ್ವಚ್ಛತಧೃತಿಷ್ಟುತಾ ।
ಶಾಲಿನೀ ಶಾಲಿಶೋಭಾಢ್ಯಾ ಶಿಖಿವಾಹನಗರ್ಭಭೃತ್ ॥ ೧೬೦ ॥
ಶಂಸನೀಯಚರಿತ್ರಾ ಚ ಶಾತಿತಾಽಶೇಷಪಾತಕಾ ।
ಷಡ್ಗುಣೈಶ್ವರ್ಯಸಂಪನ್ನಾ ಷಡಂಗಶ್ರುತಿರೂಪಿಣೀ ॥ ೧೬೧ ॥
ಷಂಢತಾಹಾರಿ ಸಲಿಲಾಷ್ಟ್ಯಾಯನ್ನದನದೀಶತಾ ।
ಸರಿದ್ವರಾ ಚ ಸುರಸಾ ಸುಪ್ರಭಾ ಸುರದೀರ್ಘಿಕಾ ॥ ೧೬೨ ॥

---

ನಾಶಗೊಳಿಸಲ್ಪಟ್ಟ ಸಮಸ್ತಪಾಪವುಳ್ಳವಳೂ, ಆಶ್ರಯಿಸಲು ಯೋಗ್ಯಳೂ, ಮೋಕ್ಷವನ್ನೀಯುವವಳೂ, ಸದಾಚಾರಸಂಪನ್ನಳೂ, ಸ್ಕಂದಜನನಿಯೂ, ಶಕ್ತಿರೂಪಳೂ, ಚಂದ್ರನಂತೆ ಆಹ್ಲಾದವನ್ನುಂಟುಮಾಡುವವಳೂ, ಯಮುನೆಗೆ ಅಭಿಮತಳೂ, ಅಜ್ಞಾನನಾಶಕಳೂ, ಯಮನ ಮಾರ್ಗವನ್ನು ತಡೆಯುವವಳೂ, ಶಿವನಿಗೆ ಪರಮವಲ್ಲಭಳೂ, ಪವಿತ್ರಳೂ, ಪಾವಿತ್ರ್ಯವನ್ನುಂಟುಮಾಡುವವಳೂ, ಅವಧಿಭೂತಳೂ, ವಿಷ್ಣುಪಾದಸಂಚಾರಳೂ, ಶ್ರೀನಿವಾಸರೂಪಳೂ, ಆಸ್ತಿಕ್ಯರೂಪಳೂ, ಸಂಪತ್ತುಳ್ಳವಳೂ, ಆಶ್ರಯಭೂತಳೂ, ಮಂಗಳಕರನಿಯಮವುಳ್ಳವಳೂ, ಶುದ್ಧವಿದ್ಯಾರೂಪಳೂ, ಮಂಗಳಕರವಾದ ಸುಳಿಯುಳ್ಳವಳೂ, ಆನಂದಜ್ಞಾನವುಳ್ಳವಳೂ, ವೇದಸ್ತುತಳೂ, ಪಾಪನಾಶಕಳೂ, ವ್ಯಾಧಸ್ತ್ರೀರೂಪಳೂ, ಮೃಗಪತ್ನೀರೂಪವನ್ನು ಧರಿಸಿದವಳೂ, ಶ್ಮಶಾನವನ್ನು ಶೋಧಿಸುವವಳೂ, ಶಾಂತಸ್ವಭಾವಳೂ, ಶಾಶ್ವತಳೂ, ಬ್ರಹ್ಮನಿಂದ ಸ್ತುತಿಸಲ್ಪಟ್ಟವಳೂ, ಪ್ರಕಾಶಿಸುವವಳೂ, ಬತ್ತದಕಾಂತಿಯಿಂದ ಕೂಡಿದವಳೂ, ಸ್ಕಂದರೂಪಗರ್ಭವನ್ನು ಧರಿಸಿದವಳೂ, ಶ್ಲಾಘ್ಯಚರಿತ್ರಳೂ, ಸಮಸ್ತಪಾಪಗಳನ್ನೂ ಪರಿಹರಿಸುವವಳೂ, ಐಶ್ವರ್ಯಾದಿ ಷಡ್ಗುಣಗಳಿಂದ ಕೂಡಿದವಳೂ, ಷಡಂಗಗಳುಳ್ಳ ಶ್ರುತಿರೂಪಳೂ, ನಪುಂಸಕತ್ವವನ್ನು ನಿವಾರಿಸುವ ನೀರುಳ್ಳವಳೂ, ಒಟ್ಟುಗೂಡುವ ಅನೇಕ ನದನದಿಗಳುಳ್ಳವಳೂ, ನದಿಗಳಲ್ಲಿ ಶ್ರೇಷ್ಠಳೂ, ನಾಗಮಾತೆಯೂ, ಒಳ್ಳೆಯ ಕಾಂತಿಯುಳ್ಳವಳೂ, ದೇವನದಿಯೂ, ಸ್ವರ್ಗನದಿಯೂ, ಸಕಲ ದುಃಖಗಳನ್ನು

ಸ್ವಃಸಿಂಧುಃ ಸರ್ವದುಃಖಘ್ನೀ ಸರ್ವವ್ಯಾಧಿಮಹೌಷಧಂ ।
ಸೇವ್ಯಾ ಸಿದ್ಧಿಃ ಸತೀ ಸೂಕ್ತಿಃ ಸ್ಕಂದಸೂಶ್ಚ ಸರಸ್ವತೀ ॥ ೧೬೩ ॥
ಸಂಪತ್ತರಂಗಿಣೀ ಸ್ತುತ್ಯಾ ಸ್ಥಾಣುಮೌಲಿಕೃತಾಲಯಾ ।
ಸ್ಥೈರ್ಯದಾ ಸುಭಗಾ ಸೌಖ್ಯಾ ಸ್ತ್ರೀಷು ಸೌಭಾಗ್ಯದಾಯಿನೀ ॥ ೧೬೪ ॥
ಸ್ವರ್ಗನಿಃಶ್ರೇಣಿಕಾ ಸೂಕ್ಷ್ಮಾ ಸ್ವಧಾ ಸ್ವಾಹಾ ಸುಧಾಜಲಾ ।
ಸಮುದ್ರರೂಪಿಣೀ ಸ್ವರ್ಗ್ಯಾ ಸರ್ವಪಾತಕವೈರಿಣೀ ॥ ೧೬೫ ॥
ಸ್ಮೃತಾಽಘಹಾರಿಣೀ ಸೀತಾ ಸಂಸಾರಾಬ್ಧಿತರಂಗಿಕಾ ।
ಸೌಭಾಗ್ಯಸುಂದರೀ ಸಂಧ್ಯಾ ಸರ್ವಸಾರಸಮನ್ವಿತಾ ॥ ೧೬೬ ॥
ಹರಪ್ರಿಯಾ ಹೃಷೀಕೇಶೀ ಹಂಸರೂಪಾ ಹಿರಣ್ಮಯೀ ।
ಹೃತಾಘಸಂಘಾ ಹಿತಕೃದ್ಧೇಲಾಹೇಲಾಘಗರ್ವಹೃತ್ ॥ ೧೬೭ ॥
ಕ್ಷೇಮದಾ ಕ್ಷಾಲಿತಾಘೌಘಾ ಕ್ಷುದ್ರವಿದ್ರಾವಿಣೀ ಕ್ಷಮಾ ।
ಇತಿ ನಾಮ ಸಹಸ್ರಂ ಹಿ ಗಂಗಾಯಾಃ ಕಲಶೋದ್ಭವ ।
ಕೀರ್ತಯಿತ್ವಾ ನರಃ ಸಮ್ಯಗ್ಗಂಗಾಸ್ನಾನಫಲಂ ಲಭೇತ್ ॥ ೧೬೮ ॥

---

ನಾಶಗೊಳಿಸುವವಳೂ, ಸಮಸ್ತ ರೋಗಗಳಿಗೂ ಮಹೌಷಧದಂತಿರುವವಳೂ, ಸೇವಿಸಲರ್ಹಳೂ, ಅಣಿಮಾದಿಸಿದ್ಧಿರೂಪಳೂ, ಪತಿವ್ರತೆಯೂ, ಪುರುಷಸೂಕ್ತಾದಿ ಸೂಕ್ತರೂಪಳೂ, ಸ್ಕಂದಜನನಿಯೂ, ಸರಸ್ವತೀರೂಪಳೂ, ಸಂಪದ್ರೂಪವಾದ ಅಲೆಗಳುಳ್ಳವಳೂ, ಸ್ತುತಿಸಲರ್ಹಳೂ, ಶಿವನ ಮಸ್ತಕದಲ್ಲಿ ನೆಲೆಸಿದವಳೂ, ತನ್ನ ತೀರದ ವಾಸವನ್ನು ಕರುಣಿಸುವವಳೂ, ಒಳ್ಳೆಯ ಕೀರ್ತಿಯುಳ್ಳವಳೂ, ಸುಖವನ್ನು ಕೊಡುವವಳೂ, ಹೆಂಗಸರಿಗೆ ಸೌಭಾಗ್ಯವನ್ನು ನೀಯುವವಳೂ, ಸ್ವರ್ಗಕ್ಕೆ ಏಣಿಯಂತಿರುವವಳೂ, ಸೂಕ್ಷ್ಮಳೂ, ಪಿತೃಪತ್ನೀಮಂತ್ರರೂಪಳೂ, ಸ್ವಾಹಾ ರೂಪಳೂ, ಅಮೃತಕ್ಕೆ ಸಮಾನವಾದ ಜಲವುಳ್ಳವಳೂ, ಸಮುದ್ರರೂಪಳೂ, ಸ್ವರ್ಗವನ್ನು ದೊರಕಿಸುವವಳೂ, ಪಾಪಶತ್ರುವೂ, ಸ್ಮರಿಸಿದವರ ಪಾಪವನ್ನು ನಿವಾರಿಸುವವಳೂ, ಸೀತಾರೂಪಳೂ, ಸಂಸಾರಸಮುದ್ರವನ್ನು ದಾಟಿಸುವವಳೂ, ಸೌಭಾಗ್ಯಸುಂದರಿಯೂ, ಬ್ರಹ್ಮಜ್ಞಾನರೂಪಳೂ, ಸಕಲಶಕ್ತಿಸಹಿತಳೂ, ಶಿವಪತ್ನಿಯೂ, ಇಂದ್ರಿಯನಿಯಾಮಕಳೂ, ಹಂಸರೂಪವನ್ನು ಧರಿಸಿದವಳೂ, ಸುವರ್ಣಮಯಳೂ, ನಾಶಗೊಳಿಸಲ್ಪಟ್ಟ ಪಾಪಸಮೂಹವುಳ್ಳವಳೂ, ಹಿತವನ್ನು ಉಂಟುಮಾಡುವವಳೂ, ಶೃಂಗಾರಭಾವರೂಪಳೂ, ಅನಾಯಾಸದಿಂದ ಪಾಪವನ್ನು ನಿವಾರಿಸುವವಳೂ, ಕಲ್ಯಾಣಪ್ರದಳೂ, ಪಾಪವನ್ನು ಪರಿಹರಿಸಿದವಳೂ, ದುಷ್ಟಸಂಹಾರಕಳೂ, ಭೂಮಿರೂಪಳೂ ಆಗಿರುವಳು. ಅಗಸ್ತ್ಯನೇ ! ಈ ರೀತಿ ಭಾಗೀರಥಿಯ ಸಹಸ್ರನಾಮವನ್ನು ಪಠಿಸಿದವನು ಗಂಗಾಸ್ನಾನದ ಸಂಪೂರ್ಣ ಫಲವನ್ನು ಪಡೆಯುವನು.

ಸರ್ವಪಾಪಪ್ರಶಮನಂ ಸರ್ವವಿಘ್ನವಿನಾಶನಂ ।
ಸರ್ವಸ್ತೋತ್ರಜಪಾಚ್ಛ್ರೇಷ್ಠಂ ಸರ್ವಪಾವನಪಾವನಂ ॥ ೧೬೯ ॥
ಶ್ರದ್ಧಯಾಽಭೀಷ್ಟಫಲದಂ ಚತುರ್ವರ್ಗಸಮೃದ್ಧಿಕೃತ್ ।
ಸಕೃಜ್ಜಪಾದವಾಪ್ನೋತಿ ಹ್ಯೇಕಕ್ರತುಫಲಂ ಮುನೇ ॥ ೧೭೦ ॥
ಸರ್ವತೀರ್ಥೇಷು ಯಃ ಸ್ನಾತಃ ಸರ್ವಯಜ್ಞೇಷು ದೀಕ್ಷಿತಃ ।
ತಸ್ಯ ಯತ್ಫಲಮುದ್ದಿಷ್ಟಂ ತ್ರಿಕಾಲಪಠನಾಚ್ಚ ತತ್ ॥ ೧೭೧ ॥
ಸರ್ವವ್ರತೇಷು ಯತ್ಪುಣ್ಯಂ ಸಮ್ಯಕ್ಚೀರ್ಣೇಷು ವಾಡವ ।
ತತ್ಫಲಂ ಸಮವಾಪ್ನೋತಿ ತ್ರಿಸಂಧ್ಯಂ ನಿಯತಃ ಪಠನ್ ॥ ೧೭೨ ॥
ಸ್ನಾನಕಾಲೇ ಪಠೇದ್ಯಸ್ತು ಯತ್ರ ಕುತ್ರ ಜಲಾಶಯೇ ।
ತತ್ರ ಸನ್ನಿಹಿತಾ ನೂನಂ ಗಂಗಾ ತ್ರಿಪಥಗಾ ಮುನೇ ॥ ೧೭೩ ॥
ಶ್ರೇಯೋಽರ್ಥೀ ಲಭತೇ ಶ್ರೇಯೋ ಧನಾರ್ಥೀ ಲಭತೇ ಧನಂ ।
ಕಾಮೀ ಕಾಮಾನವಾಪ್ನೋತಿ ಮೋಕ್ಷಾರ್ಥೀ ಮೋಕ್ಷಮಾಪ್ನುಯಾತ್ ॥
ವರ್ಷಂ ತ್ರಿಕಾಲಪಠನಾಚ್ಛ್ರದ್ಧಯಾ ಶುಚಿಮಾನಸಃ ।
ಋತುಕಾಲಾಽಭಿಗಮನಾದಪುತ್ರಃ ಪುತ್ರವಾನ್ಭವೇತ್ ॥ ೧೭೪ ॥

---

೧೬೯–೧೭೦. ಮುನಿಯೆ! ಸಮಸ್ತ ಪಾಪಗಳನ್ನು ನೀಗಿಸುವುದೂ, ಸಕಲ ವಿಘ್ನಗಳನ್ನು ನಿವಾರಿಸುವುದೂ, ಸಮಸ್ತಸ್ತೋತ್ರಜಪಗಳಿಗಿಂತಲೂ ಉತ್ತಮವೂ, ಸಮಸ್ತ ಪಾವನವಸ್ತುಗಳಿಗಿಂತಲೂ ಪವಿತ್ರವೂ, ಇಷ್ಟಾರ್ಥವನ್ನು ನೀಡುವುದೂ, ಚತುರ್ವರ್ಗಫಲವನ್ನು ಕೊಡುವುದೂ ಆದ ಈ ಸ್ತೋತ್ರವನ್ನು ಒಂದು ಸಾರಿ ಶ್ರದ್ಧೆಯಿಂದ ಜಪಿಸುವವನು ಒಂದು ಯಜ್ಞದ ಫಲವನ್ನುಪಡೆಯುವನು.

೧೭೧. ಇದನ್ನು ತ್ರಿಕಾಲಗಳಲ್ಲಿಯೂ ಜಪಿಸುವುದರಿಂದ ಸರ್ವ ತೀರ್ಥ ಸ್ನಾನ, ಸಮಸ್ತ ಯಜ್ಞದೀಕ್ಷಾದಿಗಳ ಫಲವು ದೊರೆಯುವುದು.

೧೭೨. ಮೂರು ಸಂಧ್ಯಾಕಾಲಗಳಲ್ಲಿಯೂ ಇದನ್ನು ನಿಯಮದಿಂದ ಪಠಿಸುವವನು ಸಮಸ್ತವ್ರತಗಳನ್ನಾಚರಿಸಿದ ಪುಣ್ಯವನ್ನು ಪಡೆಯುವನು.

೧೭೩–೧೭೪. ಮುನಿಯೆ! ಯಾವುದಾದರೂ ಕೆರೆಯಲ್ಲಿ ಸ್ನಾನಮಾಡುವಾಗ ಈ ಸ್ತೋತ್ರವನ್ನು ಪಠಿಸಿದರೆ ಅಲ್ಲಿ ಗಂಗೆಯು ನಿಶ್ಚಯವಾಗಿಯೂ ಸನ್ನಿಹಿತಳಾಗುವಳು. ಶ್ರೇಯಸ್ಸನ್ನು ಬಯಸುವವನು ಶ್ರೇಯಸ್ಸನ್ನೂ, ಧನಾರ್ಥಿಯು ಧನವನ್ನೂ, ಕಾಮಿಯು ಕಾಮವನ್ನೂ, ಮೋಕ್ಷವನ್ನು ಬಯಸುವವನು ಮೋಕ್ಷವನ್ನೂ ಹೊಂದುವನು.

೧೭೫. ಶುದ್ಧಮನಸ್ಕನಾಗಿ ಒಂದು ವರ್ಷಕಾಲ ಇದನ್ನು ತ್ರಿಕಾಲವೂ ಪಠಿಸುವುದರಿಂದ ಪುತ್ರರಿಲ್ಲದ ಮಾನವನು ಋತುಕಾಲದಲ್ಲಿ ಸ್ವಪತ್ನೀಗಮನದಿಂದ ಪುತ್ರರನ್ನು ಪಡೆಯುವನು.

ನಾಽಕಾಲಮರಣಂ ತಸ್ಯ ನಾಽಗ್ನಿಚೋರಾಹಿಸಾಧ್ವಸಂ ।
ನಾಮ್ನಾಂ ಸಹಸ್ರಂ ಗಂಗಾಯಾ ಯೋ ಜಪೇಚ್ಛ್ರದ್ಧಯಾ ಮುನೇ ॥
ಗಂಗಾನಾಮಸಹಸ್ರಂ ತು ಜಪ್ತ್ವಾ ಗ್ರಾಮಾಂತರಂ ವ್ರಜೇತ್ ।
ಕಾರ್ಯಸಿದ್ಧಿಮವಾಪ್ನೋತಿ ನಿರ್ವಿಘ್ನೋ ಗೇಹಮಾವಿಶೇತ್ ॥ ೧೭೭ ॥
ತಿಥಿವಾರರ್ಕ್ಷಯೋಗಾನಾಂ ನದೋಷಃ ಪ್ರಭವೇತ್ತದಾ ।
ಯದಾ ಜಪ್ತ್ವಾ ವ್ರಜೇದೇತತ್ ಸ್ತೋತ್ರಂ ಗ್ರಾಮಾಂತರಂ ನರಃ॥ ೧೭೮ ॥
ಆಯುರಾರೋಗ್ಯಜನನಂ ಸರ್ವೋಪದ್ರವನಾಶನಂ ।
ಸರ್ವಸಿದ್ಧಿಕರಂ ಪುಂಸಾಂ ಗಂಗಾನಾಮಸಹಸ್ರಕಂ ॥ ೧೭೯ ॥
ಜನ್ಮಾಂತರಸಹಸ್ರೇಷು ಯತ್ಪಾಪಂ ಸಮ್ಯಗರ್ಜಿತಂ ।
ಗಂಗಾನಾಮಸಹಸ್ರಸ್ಯ ಜಪನಾತ್ತತ್ಕ್ಷಯಂ ವ್ರಜೇತ್ ॥ ೧೮೦ ॥
ಬ್ರಹ್ಮಘ್ನೋ ಮದ್ಯಪಃ ಸ್ವರ್ಣಸ್ತೇಯೀ ಚ ಗುರುತಲ್ಪಗಃ ।
ತತ್ಸಂಯೋಗೀ ಭ್ರೂಣಹಂತಾ ಮಾತೃಹಾ ಪಿತೃಹಾ ಮುನೇ ॥ ೧೮೧ ॥
ವಿಶ್ವಾಸಘಾತೀ ಗರದಃ ಕೃತಘ್ನೋ ಮಿತ್ರಘಾತಕಃ ।
ಅಗ್ನಿದೋ ಗೋವಧಕರೋ ಗುರುದ್ರವ್ಯಾಽಪಹಾರಕಃ ॥ ೧೮೨ ॥

---

೧೭೬. ಮುನಿಯೆ! ಗಂಗಾಸಹಸ್ರನಾಮವನ್ನು ಶ್ರದ್ಧೆಯಿಂದ ಜಪಿಸುವವನಿಗೆ ಅಕಾಲಮರಣವೂ, ಅಗ್ನಿಚೋರಭಯಗಳೂ ಉಂಟಾಗುವುದಿಲ್ಲ.

೧೭೭. ಗಂಗಾಸಹಸ್ರನಾಮವನ್ನು ಜಪಿಸಿ ಬೇರೆ ಗ್ರಾಮಕ್ಕೆ ಹೋದವನು ಕಾರ್ಯಸಿದ್ಧಿಯನ್ನು ಹೊಂದಿ ನಿರ್ವಿಘ್ನವಾಗಿ ಮನೆಯನ್ನು ಸೇರುವನು.

೧೭೮. ಈ ಗಂಗಾಸ್ತೋತ್ರವನ್ನು ಜಪಿಸಿ ಗ್ರಾಮಾಂತರಕ್ಕೆ ಹೋದವನಿಗೆ ತಿಥಿ, ವಾರ, ನಕ್ಷತ್ರ, ಯೋಗಗಳ ದೋಷವುಂಟಾಗುವುದಿಲ್ಲ.

೧೭೯. ಗಂಗಾಸಹಸ್ರನಾಮವು ಆಯುರಾರೋಗ್ಯಗಳನ್ನುಂಟುಮಾಡುವುದು. ಸಮಸ್ತೋಪದ್ರವಗಳನ್ನೂ ಪರಿಹರಿಸುವುದು. ಸಕಲಸಿದ್ಧಿಯನ್ನುಂಟುಮಾಡುವುದು.

೧೮೦. ಇದರ ಜಪದಿಂದ ಜನ್ಮಾಂತರಸಹಸ್ರಗಳಲ್ಲಿ ಸಂಪಾದಿಸಿದ ಪಾಪವು ನಶಿಸುವುದು.

೧೮೧–೧೮೩. ಬ್ರಹ್ಮಹತ್ಯೆಗೈದವನೂ, ಮದ್ಯಪಾನಮಾಡಿದವನೂ, ಸುವರ್ಣವನ್ನು ಕದ್ದವನೂ, ಗುರುಪತ್ನೀಗಮನಮಾಡಿದವನೂ, ಇವರ ಸಹವಾಸದಲ್ಲಿದ್ದವನೂ, ಶಿಶುಗಳನ್ನೂ, ಮಾತಾಪಿತೃಗಳನ್ನೂ ಕೊಂದವನೂ, ವಿಶ್ವಾಸಘಾತುಕನೂ, ವಿಷವನ್ನು ಕೊಟ್ಟವನೂ, ಕೃತಘ್ನನೂ, ಮಿತ್ರಘಾತುಕನೂ, ಬೆಂಕಿಯನ್ನು ಹಚ್ಚಿದವನೂ, ಗೋಹತ್ಯೆಗೈದವನೂ, ಗುರು ದ್ರವ್ಯವನ್ನು ಅಪಹರಿಸಿ

**ಮಹಾಪಾತಕಯುಕ್ತೋಽಪಿ ಸಂಯುಕ್ತೋಽಪ್ಯುಪಪಾತಕೈಃ ।**
**ಮುಚ್ಯತೇ ಶ್ರದ್ಧಯಾ ಜಪ್ತ್ವಾ ಗಂಗಾನಾಮಸಹಸ್ರಕಂ ॥ ೧೮೩ ॥**
**ಆಧಿವ್ಯಾಧಿಪರಿಕ್ಷಿಪ್ತೋ ಘೋರತಾಪಪರಿಪ್ಲುತಃ ।**
**ಮುಚ್ಯತೇ ಸರ್ವದುಃಖೇಭ್ಯಃ ಸ್ತವಸ್ಯಾಽಸ್ಯಾಽನುಕೀರ್ತನಾತ್ ॥ ೧೮೪ ॥**
**ಸಂವತ್ಸರೇಣ ಯುಕ್ತಾತ್ಮಾ ಪಠನ್ಭಕ್ತಿಪರಾಯಣಃ ।**
**ಅಭೀಪ್ಸಿತಾಂ ಲಭೇತ್ಸಿದ್ಧಿಂ ಸರ್ವೈಃ ಪಾಪೈಃ ಪ್ರಮುಚ್ಯತೇ ॥ ೧೮೫ ॥**
**ಸಂಶಯಾವಿಷ್ಟಚಿತ್ತಸ್ಯ ಧರ್ಮವಿದ್ವೇಷಿಣೋಽಪಿ ಚ ।**
**ದಾಂಭಿಕಸ್ಯಾಽಪಿ ಹಿಂಸ್ರಸ್ಯ ಚೇತೋ ಧರ್ಮಪರಂ ಭವೇತ್ ॥ ೧೮೬ ॥**
**ವರ್ಣಾಶ್ರಮಪಥೀನಸ್ತು ಕಾಮಕ್ರೋಧವಿವರ್ಜಿತಃ ।**
**ಯತ್ಫಲಂ ಲಭತೇ ಜ್ಞಾನೀ ತದಾಪ್ನೋತ್ಯಸ್ಯ ಕೀರ್ತನಾತ್ ॥ ೧೮೭ ॥**
**ಗಾಯತ್ರ್ಯಯುತಜಪ್ಯೇನ ಯತ್ಫಲಂ ಸಮುಪಾರ್ಜಿತಂ ।**
**ಸಕೃತ್ಪಠನತಃ ಸಮ್ಯಕ್ತದಶೇಷಮವಾಪ್ನುಯಾತ್ ॥ ೧೮೮ ॥**
**ಗಾಂ ದತ್ವಾ ವೇದವಿದುಷೇ ಯತ್ಫಲಂ ಲಭತೇ ಕೃತೀ ।**
**ತತ್ಪುಣ್ಯಂ ಸಮ್ಯಗಾಖ್ಯಾತಂ ಸ್ತವರಾಜಸಕೃಜ್ಜಪಾತ್ ॥ ೧೮೯ ॥**

---

ದವನೂ, ಮಹಾಪಾತಕಗಳುಳ್ಳವನೂ, ಉಪಪಾತಕವುಳ್ಳವನೂ ಶ್ರದ್ಧೆಯಿಂದ ಗಂಗಾಸಹಸ್ರನಾಮವನ್ನು ಜಪಿಸಿದರೆ ಆ ಪಾಪಗಳಿಂದ ಮುಕ್ತನಾಗುವರು.

೧೮೪. ಈ ಸ್ತೋತ್ರವನ್ನು ಹೇಳುವುದರಿಂದ ಆಧಿವ್ಯಾಧಿಗ್ರಸ್ತನೂ, ಘೋರತಾಪಪೀಡಿತನೂ ಸಕಲ ದುಃಖಗಳಿಂದಲೂ ಮುಕ್ತನಾಗುವನು.

೧೮೫. ಜಿತೇಂದ್ರಿಯನಾಗಿ ಒಂದು ವರ್ಷಕಾಲ ಭಕ್ತಿಯಿಂದ ಈ ಸ್ತೋತ್ರವನ್ನು ಪಠಿಸುವವನು ಇಷ್ಟಾರ್ಥಗಳನ್ನು ಪಡೆದು ಸಕಲ ಪಾಪಮುಕ್ತನಾಗುವನು.

೧೮೬. ಸಂಶಯಗ್ರಸ್ತನಿಗೂ, ಧರ್ಮದ್ವೇಷಿಗೂ, ದಂಭವುಳ್ಳವನಿಗೂ, ಘಾತುಕನಿಗೂ ಇದಕ್ಕಿಂತ ಉತ್ತಮ ಧರ್ಮವಿಲ್ಲ.

೧೮೭. ಅವನು ಈ ಸ್ತೋತ್ರವನ್ನು ಹೇಳುವುದರಿಂದ ವರ್ಣಾಶ್ರಮನಿರತನೂ, ಕಾಮಕ್ರೋಧರಹಿತನೂ ಆದ ಜ್ಞಾನಿಯು ಪಡೆಯುವ ಫಲವನ್ನೇ ಪಡೆಯುವನು.

೧೮೮. ಇದನ್ನು ಒಂದು ಸಾರಿ ಪಠಿಸುವವನು ಹತ್ತು ಸಾವಿರ ಗಾಯತ್ರಿಗಳನ್ನು ಜಪಿಸಿದ ಫಲಕ್ಕೆ ಭಾಗಿಯಾಗುವನು.

೧೮೯. ಈ ಉತ್ತಮ ಸ್ತೋತ್ರವನ್ನು ಒಂದು ಸಾರಿ ಜಪಿಸುವುದರಿಂದ ವೇದಾಧ್ಯಯನಸಂಪನ್ನನಾದ ಬ್ರಾಹ್ಮಣನಿಗೆ ಗೋದಾನಮಾಡುವುದರಿಂದುಂಟಾಗುವ ಫಲವುಂಟಾಗುವುದು.

ಗುರುಶುಶ್ರೂಷಣಂ ಕುರ್ವನ್ಯಾವಜ್ಜೀವಂ ನರೋತ್ತಮಃ ।
ಯತ್ಪುಣ್ಯಮರ್ಜಯೇತ್ತದ್ವಾಗ್ವರ್ಷಂ ತ್ರಿಷವಣಂ ಜಪನ್ ॥ ೧೯೦ ॥
ವೇದಪಾರಾಯಣಾತ್ಪುಣ್ಯಂ ಯದತ್ರ ಪರಿಪಠ್ಯತೇ ।
ತತ್ ಷಣ್ಮಾಸೇನ ಲಭತೇ ತ್ರಿಸಂಧ್ಯಂ ಪರಿಕೀರ್ತನಾತ್ ॥ ೧೯೧ ॥
ಗಂಗಾಯಾಃ ಸ್ತವರಾಜಸ್ಯ ಪ್ರತ್ಯಹಂ ಪರಿಶೀಲನಾತ್ ।
ಶಿವಭಕ್ತಿಮವಾಪ್ನೋತಿ ವಿಷ್ಣುಭಕ್ತೋಽಥವಾ ಭವೇತ್ ॥ ೧೯೨ ॥
ಯಃ ಕೀರ್ತಯೇದನುದಿನಂ ಗಂಗಾನಾಮಸಹಸ್ರಕಂ ।
ತತ್ಸಮೀಪೇ ಸಹಚರೀ ಗಂಗಾದೇವೀ ಸದಾ ಭವೇತ್ ॥ ೧೯೩ ॥
ಸರ್ವತ್ರ ಪೂಜ್ಯೋ ಭವತಿ ಸರ್ವತ್ರ ವಿಜಯೀ ಭವೇತ್ ।
ಸರ್ವತ್ರ ಸುಖಮಾಪ್ನೋತಿ ಜಾಹ್ನವೀಸ್ತೋತ್ರಪಾಠತಃ ॥ ೧೯೪ ॥
ಸದಾಚಾರೀ ಸ ವಿಜ್ಞೇಯಃ ಸ ಶುಚಿಸ್ತು ಸದೈವ ಹಿ ।
ಕೃತಸರ್ವಸುರಾರ್ಚಃ ಸ ಕೀರ್ತಯೇದ್ಯ ಇಮಾಂ ಸ್ತುತಿಂ ॥ ೧೯೫ ॥
ತಸ್ಮಿಂಸ್ತೃಪ್ತೇ ಭವೇತ್ತೃಪ್ತಾ ಜಾಹ್ನವೀ ನಾತ್ರ ಸಂಶಯಃ ।
ತಸ್ಮಾತ್ಸರ್ವಪ್ರಯತ್ನೇನ ಗಂಗಾಭಕ್ತಂ ಸಮರ್ಚಯೇತ್ ॥ ೧೯೬ ॥

---

೧೯೦. ಈ ಸ್ತೋತ್ರವನ್ನು ಒಂದು ವರ್ಷಕಾಲ ದಿನಕ್ಕೆ ಮೂರು ಬಾರಿ ಯಂತೆ ಜಪಿಸುವವನು, ಮರಣಕಾಲದವರೆಗೆ ಗುರುಸೇವೆ ಮಾಡಿದವನು ಹೊಂದುವ ಫಲವನ್ನು ಪಡೆಯುವನು.

೧೯೧. ಮನುಷ್ಯನು ಆರು ತಿಂಗಳಕಾಲ ಮೂರು ಸಂಧ್ಯಾಕಾಲಗಳಲ್ಲಿಯೂ ಇದನ್ನು ಪಠಿಸುವುದರಿಂದ ವೇದಪರಾಯಣದ ಫಲವನ್ನು ಹೊಂದುವನು.

೧೯೨. ಈ ಗಂಗಾಸ್ತೋತ್ರವನ್ನು ಪ್ರತಿದಿನವೂ ಪಠಿಸುವುದರಿಂದ ಶಿವ ಭಕ್ತನೋ ಅಥವಾ ವಿಷ್ಣುಭಕ್ತನೋ ಆಗುವನು.

೧೯೩. ಪ್ರತಿದಿನವೂ ಗಂಗಾಸಹಸ್ರನಾಮವನ್ನು ಪಠಿಸುವವನ ಹತ್ತಿರ ಗಂಗಾದೇವಿಯು ಯಾವಾಗಲೂ ವಾಸಿಸುವಳು.

೧೯೪. ಈ ಸ್ತೋತ್ರವನ್ನು ಪಠಿಸುವುದರಿಂದ ಮಾನವನು ಎಲ್ಲ ಕಡೆ ಗಳಲ್ಲಿಯೂ ಪೂಜ್ಯನೂ, ಜಯಶಾಲಿಯೂ ಆಗಿ ಸುಖವನ್ನೂ ಹೊಂದು ವನು.

೧೯೫. ಈ ಸ್ತೋತ್ರವನ್ನು ಪಠಿಸುವವನು ಸದಾಚಾರಿಯೂ, ಶುದ್ಧನೂ, ಸಕಲ ದೇವತೆಗಳನ್ನು ಅರ್ಚಿಸಿದವನೂ ಆಗುವನು.

೧೯೬. ಗಂಗಾಭಕ್ತನು ತೃಪ್ತನಾದರೆ ಗಂಗೆಯೂ ತೃಪ್ತಿಗೊಳ್ಳುವಳು. ಆದುದರಿಂದ ಪ್ರಯತ್ನಪೂರ್ವಕವಾಗಿ ಗಂಗಾಭಕ್ತನನ್ನು ಪೂಜಿಸಬೇಕು.

ಸ್ತವರಾಜಮಿಮಂ ಗಾಂಗಂ ಶೃಣುಯಾದ್ಯಶ್ಚ ವೈ ಪಠೇತ್ ।
ಶ್ರಾವಯೇದಥ ತದ್ಭಕ್ತಾನ್ ದಂಭಲೋಭವಿವರ್ಜಿತಃ ॥ ೧೯೭ ॥
ಮುಚ್ಯತೇ ತ್ರಿವಿಧೈಃ ಪಾಪೈರ್ಮನೋವಾಕ್ಕಾಯಸಂಭವೈಃ ।
ಕ್ಷಣಾನ್ನಿಷ್ಪಾಪತಾಮೇತಿ ಪಿತೄಣಾಂ ಚ ಪ್ರಿಯೋ ಭವೇತ್ ॥ ೧೯೮ ॥
ಸರ್ವದೇವಪ್ರಿಯಶ್ಚಾಽಪಿ ಸರ್ವರ್ಷಿಗಣಸಮ್ಮತಃ ।
ಅಂತೇ ವಿಮಾನಮಾರುಹ್ಯ ದಿವ್ಯಸ್ತ್ರೀಶತಸಂವೃತಃ ॥ ೧೯೯ ॥
ದಿವ್ಯಾಭರಣಸಂಪನ್ನೋ ದಿವ್ಯಭೋಗಸಮನ್ವಿತಃ ।
ನಂದನಾದಿವನೇ ಸ್ವೈರಂ ದೇವವತ್ಸಪ್ರಮೋದತೇ ॥ ೨೦೦ ॥
ಭುಜ್ಯಮಾನೇಷು ವಿಪ್ರೇಷು ಶ್ರಾದ್ಧಕಾಲೇ ವಿಶೇಷತಃ ।
ಜಪನ್ನಿದಂ ಮಹಾಸ್ತೋತ್ರಂ ಪಿತೄಣಾಂ ತೃಪ್ತಿಕಾರಕಂ ॥ ೨೦೧ ॥
ಯಾವಂತಿ ತತ್ರ ಸಿಕ್ಥಾನಿ ಯಾವಂತೋಽಂಬುಕಣಾಃ ಸ್ಥಿತಾಃ ।
ತಾವಂತ್ಯೇವ ಹಿ ವರ್ಷಾಣಿ ಮೋದಂತೇ ಸ್ವಃ ಪಿತಾಮಹಾಃ ॥ ೨೦೨ ॥
ಯಥಾ ಪ್ರೀಣಂತಿ ಪಿತರೋ ಗಂಗಾಯಾಂ ಪಿಂಡದಾನತಃ ।
ತಥೈವ ತೃಪ್ನುಯುಃ ಶ್ರಾದ್ಧೇ ಸ್ತವಸ್ಯಾಽಸ್ಯಾನುಸಂಶ್ರವಾತ್ ॥ ೨೦೩ ॥
ಏತತ್ ಸ್ತೋತ್ರಂ ಗೃಹೇ ಯಸ್ಯ ಲಿಖಿತಂ ಪರಿಪೂಜ್ಯತೇ ।
ತತ್ರ ಪಾಪಭಯಂ ನಾಸ್ತಿ ಶುಚಿ ತದ್ಭವನಂ ಸದಾ ॥ ೨೦೪ ॥

---

೧೯೭–೧೯೮. ಈ ಸ್ತೋತ್ರವನ್ನು ದಂಭವಿಲ್ಲದೆಯೂ, ಲೋಭರಹಿತವಾಗಿಯೂ ಕೇಳಿದವನಾಗಲಿ, ಪಠಿಸಿದವನಾಗಲಿ, ಹೇಳಿದವನಾಗಲಿ ಮನೋವಾಕ್ಕಾಯಗಳಿಂದುಂಟಾದ ತ್ರಿವಿಧ ಪಾಪಗಳಿಂದ ಮುಕ್ತನಾಗಿ ಪಿತೃಗಳಿಗೆ ಪ್ರಿಯನಾಗುವನು.

೧೯೯–೨೦೦. ಇಷ್ಟೆಯಲ್ಲದೆ ಅವನು ಸಮಸ್ತದೇವತೆಗಳಿಗೆ ಪ್ರಿಯನೂ, ಸಮಸ್ತಮುನಿಗಳ ಸಮೂಹಕ್ಕೆ ಸಮ್ಮತನೂ ಆಗಿ ಕೊನೆಯಲ್ಲಿ ವಿಮಾನವನ್ನೇರಿ ದಿವ್ಯಾಭರಣಸಂಪನ್ನನೂ, ದಿವ್ಯ ಭೋಗದಿಂದ ಕೂಡಿದವನೂ ಆಗಿ ನಂದನಾದಿ ವನಗಳಲ್ಲಿ ಸ್ವೇಚ್ಛೆಯಿಂದ ವಿಹರಿಸುತ್ತ ದೇವತೆಯಂತೆ ಸಂತೋಷಗೊಳ್ಳುತ್ತಾನೆ.

೨೦೧–೨೦೨. ಶ್ರಾದ್ಧಕಾಲದಲ್ಲಿ ಬ್ರಾಹ್ಮಣರು ಭುಜಿಸುತ್ತಿರಲು ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವ ಈ ಸ್ತೋತ್ರವನ್ನು ಜಪಿಸಿದರೆ ಅಲ್ಲಿರುವ ಅನ್ನದಗುಳು, ನೀರಿನ ಹನಿಗಳು ಇವುಗಳ ಸಂಖ್ಯೆಯಷ್ಟುಕಾಲ ಪಿತಾಮಹರು ಸ್ವರ್ಗಲೋಕದಲ್ಲಿ ಆನಂದಗೊಳ್ಳುವರು.

೨೦೩. ಗಂಗೆಯಲ್ಲಿ ಪಿಂಡಪ್ರದಾನಮಾಡುವುದರಿಂದ ಪಿತೃಗಳು ತೃಪ್ತಿಗೊಂಡಂತೆಯೆ ಶ್ರಾದ್ಧದಲ್ಲಿ ಇದನ್ನು ಪಠಿಸುವುದರಿಂದಲೂ ತೃಪ್ತಿಗೊಳ್ಳುವರು.

೨೦೪. ಯಾವನ ಮನೆಯಲ್ಲಿ ಈ ಸ್ತೋತ್ರವನ್ನು ಬರೆದು ಪೂಜಿಸುವರೊ, ಅಲ್ಲಿ ಪಾಪಭಯವಿರುವುದಿಲ್ಲ. ಆ ಮನೆಯು ಯಾವಾಗಲೂ ಶುದ್ಧವಾಗಿರುವುದು.

ಅಗಸ್ತ್ಯೇ ಕಿಂ ಬಹೂಕ್ತೇನ ಶೃಣು ಮೇ ನಿಶ್ಚಿತಂ ವಚಃ ।
ಸಂಶಯೋ ನಾಽತ್ರ ಕರ್ತವ್ಯಃ ಸಂದೇಗ್ಧರಿ ಫಲಂ ನ ಹಿ ॥ ೨೦೫ ॥
ಯಾವಂತಿ ಮರ್ತ್ಯೇ ಸ್ತೋತ್ರಾಣಿ ಮಂತ್ರಜಾಲಾನ್ಯನೇಕಶಃ ।
ತಾವಂತಿ ಸ್ತವರಾಜಸ್ಯ ಗಾಂಗೇಯಸ್ಯ ಸಮಾನಿ ನ ॥ ೨೦೬ ॥
ಯಾವಜ್ಜನ್ಮ ಜಪೇದ್ಯಸ್ತು ನಾಮ್ನಾಮೇತತ್ಸಹಸ್ರಕಂ ।
ಸ ಕೀಕಟೇಷ್ವಪಿ ಮೃತೋ ನ ಪುನರ್ಗರ್ಭಮಾವಿಶೇತ್ ॥ ೨೦೭ ॥
ನಿತ್ಯಂ ನಿಯಮವಾನೇತದ್ಯೋ ಜಪೇತ್ಸ್ತೋತ್ರಮುತ್ತಮಂ ।
ಅನ್ಯತ್ರಾಽಪಿ ವಿಪನ್ನಃ ಸ ಗಂಗಾತೀರೇ ಮೃತೋ ಭವೇತ್ ॥ ೨೦೮ ॥
ಏತತ್ ಸ್ತೋತ್ರವರಂ ರಮ್ಯಂ ಪುರಾ ಪ್ರೋಕ್ತಂ ಪಿನಾಕಿನಾ ।
ವಿಷ್ಣವೇ ನಿಜಭಕ್ತಾಯ ಮುಕ್ತಿಬೀಜಾಕ್ಷರಾಸ್ಪದಂ ॥ ೨೦೯ ॥
ಗಂಗಾಸ್ನಾನ ಪ್ರತಿನಿಧಿಃ ಸ್ತೋತ್ರಮೇತನ್ಮಯೇರಿತಂ ।
ಸಿಸ್ನಾಸುರ್ಜಾಹ್ನವೀಂ ತಸ್ಮಾದೇತತ್ಸ್ತೋತ್ರಂ ಜಪೇತ್ಸುಧೀಃ ॥ ೨೧೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶಿಖಂಡೇ ಪೂರ್ವಾರ್ಧೇ "ಗಂಗಾಸಹಸ್ರನಾಮಕಥನಂ"
ನಾಮೈಕೋನತ್ರಿಂಶೋಽಧ್ಯಾಯಃ

---

೨೦೫. ಅಗಸ್ತ್ಯನೆ! ಬಹುಮಾತಿನಿಂದೇನು? ನಿಶ್ಚಯವಾದ ನನ್ನ ಮಾತನ್ನು ಕೇಳು. ಈ ವಿಷಯದಲ್ಲಿ ಸಂದೇಹಪಡಬೇಡ. ಸಂದೇಹಪಡುವವನಿಗೆ ಪುಣ್ಯ ಲಭಿಸುವುದಿಲ್ಲ.

೨೦೬. ಈ ಗಂಗಾಸ್ತೋತ್ರಕ್ಕೆ ಭೂಲೋಕದಲ್ಲಿರುವ ಸಮಸ್ತ ಸ್ತೋತ್ರಗಳೂ, ಮಂತ್ರಗಳೂ ಸಮವಾಗುವುದಿಲ್ಲ.

೨೦೭. ಗಯೆಯಲ್ಲಿ ಈ ಸ್ತೋತ್ರವನ್ನು ಜೀವಿಸಿರುವವರೆಗೆ ಪಠಿಸುವವನು ಮರಳಿ ಗರ್ಭದಲ್ಲಿ ವಾಸಿಸುವುದಿಲ್ಲ.

೨೦೮. ನಿತ್ಯವೂ ನಿಯಮದಿಂದ ಈ ಉತ್ತಮ ಸ್ತೋತ್ರವನ್ನು ಜಪಿಸುವವನು ಇತರ ಕಡೆಯಲ್ಲಿ ಮೃತನಾದರೂ ಗಂಗೆಯ ದಡದಲ್ಲಿ ಮೃತನಾದಂತಾಗುವನು.

೨೦೯. ಮಹೇಶ್ವರನು ಮುಕ್ತಿಬೀಜಾಕ್ಷರಕ್ಕೆ ಆಶ್ರಯವಾದ ಈ ರಮ್ಯ ಸ್ತೋತ್ರವನ್ನು ಹಿಂದೆ ತನ್ನ ಭಕ್ತನಾದ ವಿಷ್ಣುವಿಗೆ ಹೇಳಿರುವನು.

೨೧೦. ನಾನು ಗಂಗಾಸ್ನಾನಕ್ಕೆ ಸಮಾನವಾದ ಈ ಸ್ತೋತ್ರವನ್ನು ಹೇಳಿದ್ದೇನೆ. ಗಂಗೆಯಲ್ಲಿ ಸ್ನಾನಮಾಡಲು ಬಯಸುವ ಜ್ಞಾನಿಯು ಇದನ್ನು ಜಪಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಗಂಗಾಸಹಸ್ರನಾಮಕಥನ" ವೆಂಬ
ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಂಶೋಽಧ್ಯಾಯಃ

## ವಾರಾಣಸೀಮಹಿಮಾನುವರ್ಣನಂ

ಸ್ಕಂದ ಉವಾಚ :—

ಶೃಣ್ವಗಸ್ತ್ಯ ಮಹಾಭಾಗ ಸ ಚ ರಾಜಾ ಭಗೀರಥಃ ।
ಆರಾಧ್ಯ ಶ್ರೀಮಹಾದೇವಮುದ್ದಿಧೀರ್ಷುಃ ಪಿತಾಮಹಾನ್ ॥ ೧ ॥
ಬ್ರಹ್ಮಶಾಪವಿನಿರ್ದಗ್ಧಾನ್ ಸರ್ವಾನ್ರಾಜರ್ಷಿಸತ್ತಮಃ ।
ಮಹತಾ ತಪಸಾ ಭೂಮಿಮಾನಿನಾಯ ತ್ರಿವರ್ತ್ಮಗಾಂ ॥ ೨ ॥
ತ್ರಯಾಣಾಮಪಿ ಲೋಕಾನಾಂ ಹಿತಾಯ ಮಹತೇ ನೃಪಃ ।
ಸಮಾನ್ಯೈಷೀತ್ತತೋ ಗಂಗಾಂ ಯತ್ರಾಸೀನ್ಮಣಿಕರ್ಣಿಕಾ ॥ ೩ ॥
ಆನಂದಕಾನನಂ ಶಂಭೋಶ್ಚಕ್ರಪುಷ್ಕರಿಣೀ ಹರೇಃ ।
ಪರಬ್ರಹ್ಮೈಕಸುಕ್ಷೇತ್ರಂ ಲೀಲಾಮೋಕ್ಷಸಮರ್ಪಕಂ ॥ ೪ ॥
ಪ್ರಾಪಯಾಮಾಸ ತಾಂ ಗಂಗಾಂ ದ್ವೈಲೀಪಿಃ ಪುರತಶ್ಚರನ್ ।
ನಿರ್ವಾಣಕಾಶನಾದ್ಯತ್ರ ಕಾಶೀತಿ ಪ್ರಥಿತಾ ಪುರೀ ॥ ೫ ॥
ಅವಿಮುಕ್ತಂ ಮಹಾಕ್ಷೇತ್ರಂ ನ ಮುಕ್ತಂ ಶಂಭುನಾ ಕ್ವಚಿತ್ ।
ಪ್ರಾಗೇವ ಹಿ ಮುನೇಽನರ್ಘ್ಯಂ ಜಾತ್ಯಂ ಜಾಂಬೂನದಂ ಸ್ವಯಂ ॥ ೬ ॥

---

## ಕನ್ನಡದ ಅನುವಾದ

### ವಾರಾಣಸೀಮಹಿಮಾನುವರ್ಣನ

೧–೨. ಸ್ಕಂದನು ಹೇಳುತ್ತಾನೆ:—ಮಹಾಭಾಗ್ಯಶಾಲಿಯಾದ ಎಲೈ ಅಗಸ್ತ್ಯನೆ! ಕೇಳು. ಭಗೀರಥರಾಜನು ಬ್ರಾಹ್ಮಣನ ಶಾಪದಿಂದ ಭಸ್ಮೀಭೂತರಾದ ಸಕಲ ಪಿತಾಮಹರನ್ನೂ ಉದ್ಧರಿಸಲಿಚ್ಛೆಯಿಂದ ಮಹಾತಪಸ್ಸನ್ನು ಮಾಡಿ ಗಂಗೆಯನ್ನು ಭೂಮಿಗೆ ತಂದನು.

೩. ಬಳಿಕ ಆತನು ಮೂರು ಲೋಕಗಳ ಮಹಾಹಿತಕ್ಕಾಗಿ ಮಣಿಕರ್ಣಿಕೆಯಿರುವ ಈ ಸ್ಥಳಕ್ಕೆ ಆ ಗಂಗೆಯನ್ನು ಕರೆದೊಯ್ದನು.

೪–೫. ಅವನು ಪರಬ್ರಹ್ಮನ ಮುಖ್ಯಕ್ಷೇತ್ರವೂ, ಅನಾಯಾಸದಿಂದ ಮೋಕ್ಷವನ್ನು ಕೊಡುವುದೂ, ಆನಂದಕಾನನಕ್ಕೆ ಸೇರಿರುವ ವಿಷ್ಣುಸಂಬಂಧಿಯಾದ ಚಕ್ರಪುಷ್ಕರಿಣಿಯೆಡೆಗೆ ಆ ಗಂಗೆಯನ್ನು ಒಯ್ದನು. ಅಲ್ಲಿರುವ ಪಟ್ಟಣವು ಮೋಕ್ಷವನ್ನು ಪ್ರಕಾಶಿಸುವುದರಿಂದ ಕಾಶಿಯೆಂದು ವಿಖ್ಯಾತವಾಗಿರುವುದು.

೬–೨೩. ಅಲ್ಲಿ ಶಿವನು ಯಾವಾಗಲೂ ಬಿಡದಿರುವುದರಿಂದ ಅವಿಮುಕ್ತವೆಂಬ ಕ್ಷೇತ್ರವಾಗಿರುವುದು. ಮುನಿಯೆ! ಸುವರ್ಣವು ವಜ್ರದೊಡಗೂಡಿದಂತೆ

ಪುನರ್ವಾರಿತರೇಣಾಽಪಿ ಹೀರೇಣ ಯದಿ ಸಂಗತಂ ।
ಚಕ್ರಪುಷ್ಕರಿಣೀತೀರ್ಥಂ ಪ್ರಾಗೇವ ಶ್ರೇಯಸಾಂ ಪದಂ ॥ ೭ ॥
ತತಃ ಶ್ರೇಷ್ಠತರಂ ಶಂಭೋರ್ಮಣಿಶ್ರವಣಭೂಷಣಾತ್ ।
ಆನಂದಕಾನನೇ ತಸ್ಮಿನ್ನವಿಮುಕ್ತೇ ಶಿವಾಲಯೇ ॥ ೮ ॥
ಪ್ರಾಗೇವ ಮುಕ್ತಿಃ ಸಂಸಿದ್ಧಾ ಗಂಗಾಸಂಗಾತ್ತತೋಽಧಿಕಾ ।
ಯದಾ ಪ್ರಭೃತಿ ಸಾ ಗಂಗಾ ಮಣಿಕರ್ಣ್ಯಾಂ ಸಮಾಗತಾ ॥ ೯ ॥
ತದಾ ಪ್ರಭೃತಿ ತತ್ಕ್ಷೇತ್ರಂ ದುಷ್ಪ್ರಾಪಂ ತ್ರಿದಶೈರಪಿ ।
ಕೃತ್ವಾ ಕರ್ಮಾಣ್ಯನೇಕಾನಿ ಕಲ್ಯಾಣಾನೀತರಾಣಿ ವಾ ॥ ೧೦ ॥
ತಾನಿ ಕ್ಷಣಾತ್ಸಮುತ್ಕ್ಷಿಪ್ಯ ಕಾಶೀಸಂಸ್ಥೋಽಮೃತೋ ಭವೇತ್ ।
ತಸ್ಯಾಂ ವೇದಾಂತವೇದ್ಯಸ್ಯ ನಿದಿಧ್ಯಾಸನತೋ ವಿನಾ ॥ ೧೧ ॥
ವಿನಾ ಸಾಂಖ್ಯೇನ ಯೋಗೇನ ಕಾಶ್ಯಾಂ ಸಂಸ್ಥೋ ಮೃತೋ ಭವೇತ್ ।
ಕರ್ಮನಿರ್ಮೂಲನವತಾ ವಿನಾ ಜ್ಞಾನೇನ ಕುಂಭಜ ॥ ೧೨ ॥
ಶಶಿಮೌಲಿಪ್ರಸಾದೇನ ಕಾಶೀಸಂಸ್ಥೋಽಮೃತೋ ಭವೇತ್ ।
ಯತ್ನತೋಽಯತ್ನತೋವಾಽಪಿ ಕಾಲಾತ್ತ್ಯಕ್ತ್ವಾ ಕಲೇವರಂ ॥ ೧೩ ॥
ತಾರಕಸ್ಯೋಪದೇಶೇನ ಕಾಶೀಸಂಸ್ಥೋಽಮೃತೋ ಭವೇತ್ ।
ಅನೇಕಜನ್ಮಸಂಸಿದ್ಧೈರ್ಬದ್ಧೋಽಪಿ ಪ್ರಾಕೃತೈರ್ಗುಣೈಃ ॥ ೧೪ ॥

---

ಮೊದಲೆ ಶ್ರೇಯಸ್ಸಿಗೆ ಸ್ಥಾನವಾದ ಚಕ್ರಪುಷ್ಕರಿಣಿಯು ಗಂಗೆಯ ಸಂಬಂಧದಿಂದ ಅತ್ಯುತ್ತಮವಾಯಿತು. ಶಿವಕ್ಷೇತ್ರವಾದ ಆ ಅವಿಮುಕ್ತದಲ್ಲಿ ಮೊದಲೆ ಮುಕ್ತಿಯು ಸಿದ್ಧವಾಗಿದ್ದುದರಿಂದ ಗಂಗಾಸಂಬಂಧದಿಂದ ಅದು ಮೊದಲಿಗಿಂತಲೂ ಹೆಚ್ಚಾಯಿತು. ಗಂಗೆಯು ಮಣಿಕರ್ಣಿಕೆಯನ್ನು ಸೇರಿದಂದಿನಿಂದ ಆ ಕ್ಷೇತ್ರವು ದೇವತೆಗಳಿಗೂ ದುರ್ಲಭವಾಯಿತು. ಪಾಪವನ್ನಾಗಲಿ, ಪುಣ್ಯವನ್ನಾಗಲಿ ಮಾಡಿದವನು, ಕಾಶಿಯಲ್ಲಿ ಮೃತನಾದರೆ ಕೂಡಲೆ ಆ ಕರ್ಮಗಳು ಪರಿಹಾರವಾಗಿ ಮುಕ್ತನಾಗುವನು. ಕಾಶಿಯಲ್ಲಿ ಮೃತನಾದವನು ಭಗವಂತನ ಧ್ಯಾನ, ಆತ್ಮಾನಾತ್ಮವಿವೇಕ ಇವುಗಳಿಲ್ಲದವನಾದರೂ ಮುಕ್ತನಾಗುವನು. ಕರ್ಮಗಳನ್ನು ನಿರ್ಮೂಲಮಾಡುವ ಜ್ಞಾನವಿಲ್ಲದಿದ್ದರೂ ಮಹೇಶ್ವರನ ಅನುಗ್ರಹದಿಂದ ಕಾಶಿಯಲ್ಲಿ ಮೃತನಾದವನು ಮೋಕ್ಷವನ್ನು ಪಡೆಯುವನು. ಪ್ರಯತ್ನದಿಂದಲೊ, ಪ್ರಯತ್ನವಿಲ್ಲದೆಯೊ ಕಾಲವಶದಿಂದ ಶರೀರವನ್ನು ಕಾಶಿಯಲ್ಲಿ ತ್ಯಾಗಮಾಡಿದವನು, ತಾರಕ ಮಂತ್ರೋಪದೇಶದಿಂದ ಮುಕ್ತನಾಗುವನು. ಅನೇಕ ಜನ್ಮಸಿದ್ಧಗಳಾದ ಪ್ರಾಕೃತಗುಣಗಳಿಂದ ಬದ್ಧನಾಗಿದ್ದರೂ ಕಾಶಿಯಲ್ಲಿ ಮೃತನಾದವನು ಗಂಗಾಜಲದ ಸಂಬಂಧದಿಂದ ಮೋಕ್ಷವನ್ನು ಪಡೆಯುವನು. ಕಾಶಿಯಲ್ಲಿ ದೇಹವನ್ನು ತ್ಯಜಿಸುವುದೇ ಮೋಕ್ಷಸೌಖ್ಯವನ್ನುಂಟುಮಾಡುವ ದಾನ, ತಪಸ್ಸು ಮತ್ತು ಯೋಗಗಳಾಗಿರುವುದು. ಮಹಾಪಾಪಿಯೂ ಕಾಶಿಯಲ್ಲಿ ಗಂಗೆ

ಅಸಿಸಂಭೇದಯೋಗೇನ ಕಾಶೀಸಂಸ್ಥೋಽಮೃತೋ ಭವೇತ್ ।
ದೇಹತ್ಯಾಗೋಽತ್ರ ವೈ ದಾನಂ ದೇಹತ್ಯಾಗೋಽತ್ರ ವೈ ತಪಃ ॥ ೧೫ ॥
ದೇಹತ್ಯಾಗೋಽತ್ರ ವೈ ಯೋಗಃ ಕಾಶ್ಯಾಂ ನಿರ್ವಾಣಸೌಖ್ಯಕೃತ್ ।
ಪ್ರಾಪ್ನೋತ್ಯುತ್ತರವಹಾಂ ಕಾಶ್ಯಾಮತಿದುಷ್ಕೃತವಾನಪಿ ॥ ೧೬ ॥
ಯಾಯಾತ್ಸ್ವಂ ಹೇಲಯಾ ತ್ಯಕ್ತ್ವಾ ತದ್ವಿಷ್ಣೋಃ ಪರಮಂ ಪದಂ ।
ಯಮೇಂದ್ರಾಽಗ್ನಿಮುಖಾ ದೇವಾ ದೃಷ್ಟ್ವಾ ಮುಕ್ತಿಪಥೋನ್ಮುಖಾನ್ ॥
ಸರ್ವಾನ್ಸರ್ವೇ ಸಮಾಲೋಕ್ಯ ರಕ್ಷಾಂ ಚಕ್ರುಃ ಪುರಾ ಪುರಃ ।
ಅಸಿಂ ಮಹಾಸಿರೂಪಾಂ ಚ ಪ್ರಾಪ್ಯಾಸನ್ಮತಿಖಂಡನೀಂ ॥ ೧೮ ॥
ದುಷ್ಟಪ್ರವೇಶಂ ಧುನ್ವಾನಾಂ ಧುನೀಂ ದೇವಾ ವಿನಿರ್ಮಮುಃ ।
ವರಣಾಂ ಚ ವ್ಯಧುಸ್ತತ್ರ ಕ್ಷೇತ್ರವಿಘ್ನನಿವಾರಿಣೀಂ ॥ ೧೯ ॥
ದುರ್ವೃತ್ತಸುಪ್ರವೃತ್ತೇಶ್ಚ ನಿವೃತ್ತಿಕರಣೀಂ ಸುರಾಃ ।
ದಕ್ಷಿಣೋತ್ತರದಿಗ್ಭಾಗೇ ಕೃತ್ವಾಽಸಿಂ ವರಣಾಂ ಸುರಾಃ ॥ ೨೦ ॥
ಕ್ಷೇತ್ರಸ್ಯ ಮೋಕ್ಷನಿಕ್ಷೇಪ ರಕ್ಷಾಂ ನಿರ್ವೃತಿಮಾಪ್ನುಯುಃ ।
ಕ್ಷೇತ್ರಸ್ಯ ಪಶ್ಚಾದ್ದಿಗ್ಭಾಗೇ ತಂ ದೇಹಲಿವಿನಾಯಕಂ ॥ ೨೧ ॥
ಸ್ವಯಂ ವ್ಯಾಪಾರಯಾಮಾಸ ರಕ್ಷಾರ್ಥಂ ಶಶಿಶೇಖರಃ ।
ಅನುಜ್ಞಾತಪ್ರವೇಶಾನಾಂ ವಿಶ್ವೇಶೇನ ಕೃಪಾವತಾ ॥ ೨೨ ॥
ತೇ ಪ್ರವೇಶಂ ಪ್ರಯಚ್ಛಂತಿ ನಾಽನ್ಯೇಷಾಂ ಹಿ ಕದಾಚನ ।
ಇತ್ಯರ್ಥೇ ಕಥಯಿಷ್ಯೇಽಹಮಿತಿಹಾಸಂ ಪುರಾತನಂ ।
ಆಶ್ಚರ್ಯಕಾರಿ ಪರಮಂ ಕಾಶೀಭಕ್ತಿಪ್ರವರ್ಧನಂ ॥ ೨೩ ॥

---

ಯನ್ನು ಹೊಂದಿ ದೇಹವನ್ನು ತ್ಯಜಿಸಿದರೆ ಅನಾಯಾಸದಿಂದ ವಿಷ್ಣುವಿನ ಉತ್ತಮ ಸ್ಥಾನವನ್ನು ಸೇರುವನು. ಯಮ, ಇಂದ್ರ, ಅಗ್ನಿ ಮೊದಲಾದ ಸಮಸ್ತ ದೇವತೆಗಳೂ ಮುಕ್ತಿಮಾರ್ಗಕ್ಕೆ ಅಭಿಮುಖರಾದ ಸಮಸ್ತಜನರನ್ನೂ ಕಂಡು ಕಾಶಿಯಲ್ಲಿ ಪಾಪಿಗಳ ದುರ್ಬುದ್ಧಿಯನ್ನು ಖಂಡಿಸುವುದರಿಂದಲೂ, ದುಷ್ಟರ ಪ್ರವೇಶವನ್ನು ನಿವಾರಿಸುವುದರಿಂದಲೂ, ಕ್ಷೇತ್ರದ ವಿಘ್ನವನ್ನು ನಿವಾರಿಸುವುದರಿಂದಲೂ, ದುರ್ನಡತೆಯ ಪ್ರವೃತ್ತಿಯನ್ನು ತಡೆಯುವುದರಿಂದಲೂ ಅಸಿ, ಮಹಾಸಿ, ವರಣಾ ಎಂಬ ನಾಮಗಳನ್ನಾಂತ ಮೋಕ್ಷವೆಂಬ ನಿಕ್ಷೇಪವನ್ನು ರಕ್ಷಿಸುವ ನದಿಯನ್ನು ನಿರ್ಮಿಸಿ ಅತ್ಯಂತ ಸಂತೋಷವನ್ನು ಹೊಂದಿದರು. ಕ್ಷೇತ್ರದ ಪಶ್ಚಿಮದಿಕ್ಕಿನಲ್ಲಿ ಮಹೇಶ್ವರನು ರಕ್ಷಣೆಗಾಗಿ ದೇಹಲಿ ವಿನಾಯಕನನ್ನು ಸ್ಥಾಪಿಸಿರುವನು. ಅವರು ದಯಾಳುವಾದ ವಿಶ್ವೇಶ್ವರನ ಆಜ್ಞೆಯನ್ನು ಪಡೆದವರಿಗೆ ಮಾತ್ರವೇ ಪ್ರವೇಶವನ್ನು ಕೊಡುವರು. ಇತರರಿಗೆ ಕೊಡುವುದಿಲ್ಲ. ಈ ವಿಷಯದಲ್ಲಿ ನಾನು ಅನಾದಿಯೂ, ಆಶ್ಚರ್ಯವನ್ನುಂಟುಮಾಡುವುದೂ, ಕಾಶಿಯಲ್ಲಿಯ ಭಕ್ತಿಯನ್ನು ಹೆಚ್ಚಿಸುವುದೂ ಆದ ಇತಿಹಾಸವೊಂದನ್ನು ಹೇಳುವೆನು.

ಸ್ಕಂದ ಉವಾಚ:—

ದಕ್ಷಿಣಾಬ್ಧಿತಟೇ ಕಶ್ಚಿತ್ಸೇತುಬಂಧಸಮೀಪತಃ ।
ವಣಿಗ್ಧನಂಜಯೋ ನಾಮ ಮಾತೃಭಕ್ತಿಸಮನ್ವಿತಃ ॥ ೨೪ ॥
ಪುಣ್ಯಮಾರ್ಗಾರ್ಜಿತಧನೋ ಧನತೋಷಿತಮಾರ್ಗಣಃ ।
ಮಾರ್ಗಣಸ್ಫಾರಿತಯಶಾ ಯಶೋದಾತನಯಾರ್ಚಕಃ ॥ ೨೫ ॥
ಸಮುನ್ನತೋಽಪಿ ಸಂಪತ್ತ್ಯಾ ವಿನಯಾನತಕಂಧರಃ ।
ಆಕರೋಽಪಿ ಗುಣಾನಾಂ ಹಿ ಗುಣಿಷ್ವಾಕಾರಗೋಪಕಃ ॥ ೨೬ ॥
ರೂಪಸಂಪದುದಾರೋಽಪಿ ಪರದಾರಪರಾಙ್ಮುಖಃ ।
ಸ ಸಂಪೂರ್ಣಕಲೋಽಪ್ಯಾಸೀನ್ನಿಷ್ಕಲಂಕೋದಯಃ ಸದಾ ॥ ೨೭ ॥
ಸ ಸತ್ಯಾನೃತವೃತ್ತಿಶ್ಚ ಪ್ರಾಯಃ ಸತ್ಯಪ್ರಿಯೋ ಮುನೇ ।
ವರ್ಣೇತರೋಽಪ್ಯಭೂಲ್ಲೋಕೇ ಸುವರ್ಣಕೃತವರ್ಣನಃ ॥ ೨೮ ॥
ಸದಾಚರಣಗೋಪ್ಯೇಷ ಸುಖಯಾನಚರಃ ಕೃತೀ ।
ಅದರಿದ್ರೋಽಪಿ ಮೇಧಾವೀ ಸೋಽಭೂತ್ಪಾಪದರಿದ್ರಧೀಃ ॥ ೨೯ ॥
ತಸ್ಯೈವಂ ವರ್ತಮಾನಸ್ಯ ಕದಾಚಿತ್ಕಾಲಪರ್ಯಯಾತ್ ।
ಜನನೀ ನಿಧನಂ ಪ್ರಾಪ್ತಾ ವ್ಯಾಧಿತಾಽತಿಜರಾತುರಾ ॥ ೩೦ ॥

---

೨೪–೨೭. ಸ್ಕಂದನು ಹೇಳುತ್ತಾನೆ:—ದಕ್ಷಿಣ ಸಮುದ್ರದ ದಡದಲ್ಲಿ ಸೇತುವಿನ ಬಳಿ ಮಾತೃಭಕ್ತಿಯಿಂದ ಕೂಡಿದವನೂ, ಸನ್ಮಾರ್ಗದಿಂದ ಸಂಪಾದಿಸಿದ ದ್ರವ್ಯವುಳ್ಳವನೂ, ದ್ರವ್ಯದಿಂದ ಸಂತೋಷಗೊಳಿಸಲ್ಪಟ್ಟ ಯಾಚಕರುಳ್ಳವನೂ, ಯಾಚಕರಿಂದ ವಿಸ್ತಾರಗೊಳಿಸಲ್ಪಟ್ಟ ಕೀರ್ತಿಯುಳ್ಳವನೂ, ಯಶೋದಾನಂದನನಾದ ಕೃಷ್ಣನನ್ನು ಪೂಜಿಸುವವನೂ, ಅಧಿಕಸಂಪತ್ತುಳ್ಳವನಾದರೂ ವಿನಯದಿಂದ ತಲೆಬಾಗಿದವನೂ, ಗುಣಗಳಿಗೆ ಆಶ್ರಯನಾದರೂ ತನ್ನ ಗುಣಗಳನ್ನು ಪ್ರಕಟಿಸದವನೂ, ರೂಪಸಂಪತ್ತಿನಿಂದ ಉದಾರನಾದರೂ ಪರಪತ್ನಿಯರಲ್ಲಿ ವಿಮುಖನೂ, ಚತುಷ್ಷಷ್ಟಿಕಲಾಸಂಪನ್ನನಾದರೂ ನಿಷ್ಕಲಂಕನೂ ಆದ ಧನಂಜಯನೆಂಬ ಒಬ್ಬ ವರ್ತಕನಿದ್ದನು.

೨೮–೨೯. ಮುನಿಯೆ! ಅವನು ವಾಣಿಜ್ಯನಿರತನಾಗಿದ್ದರೂ ಪ್ರಾಯಃ ಸತ್ಯಪ್ರಿಯನೂ, ಅಬ್ರಾಹ್ಮಣನಾದರೂ ಬ್ರಾಹ್ಮಣಸ್ತುತ್ಯನೂ, ಸದಾಚಾರ ಸಂಪನ್ನನೂ, ನಾವೆಯಿಂದ ಸಂಚರಿಸುವವನೂ, ಬಡವನಲ್ಲದಿದ್ದರೂ ಬುದ್ಧಿಶಾಲಿಯೂ, ಪಾಪಬುದ್ಧಿಯಿಲ್ಲದವನೂ ಆಗಿದ್ದನು.

೩೦. ಅವನು ಹೀಗಿರುತ್ತಿರಲು ಒಂದಾನೊಂದು ದಿನ ಕಾಲವ್ಯತ್ಯಾಸದಿಂದ ರೋಗಾರ್ತಳೂ, ಅತ್ಯಂತ ಮುದುಕಿಯೂ ಆದ ಅವನ ತಾಯಿಯು ಮೃತಳಾದಳು.

ತಯಾ ಚ ಯೌವನಂ ಪ್ರಾಪ್ಯ ಮೇಘಚ್ಛಾಯಾಽತಿಚಂಚಲಂ ।
ಪ್ರಾವೃಣ್ನದೀಪೂರಸಮಂ ಸ್ವಪತಿಃ ಪರಿವಂಚಿತಃ ॥ ೩೧ ॥
ದಿನತ್ರಿಚತುರಸ್ಥಾಯಿ ಯಾ ನಾರೀ ಪ್ರಾಪ್ಯ ಯೌವನಂ ।
ಭರ್ತಾರಂ ವಂಚಯೇನ್ಮೋಹಾತ್ಸಾಽಕ್ಷಯಂ ನರಕಂ ವ್ರಜೇತ್ ॥ ೩೨ ॥
ಶೀಲಭಂಗೇನ ನಾರೀಣಾಂ ಭರ್ತಾ ಧರ್ಮಪರೋಽಪಿ ಹಿ ।
ಪತೇದ್ದುಃಖಾರ್ಜಿತಾತ್ಸ್ವರ್ಗಾಚ್ಛೀಲಂ ರಕ್ಷ್ಯಂ ತತಃ ಸ್ತ್ರಿಯಾ ॥ ೩೩ ॥
ವಿಷ್ಠಾಗರ್ತೇ ಚ ನಿರಯೇ ಸ್ವಯಂ ಪತತಿ ದುರ್ಮತಿಃ ।
ಆಭೂತಸಂಪ್ಲವಂ ಯಾವತ್ತತಃ ಸ್ಯಾದ್ಗ್ರಾಮಸೂಕರೀ ॥ ೩೪ ॥
ಸ್ವವಿಷ್ಠಾಪಾಯಿನೀಚಾಽಥ ವಲ್ಗುಲೀ ವೃಕ್ಷಲಂಬಿನೀ ।
ಉಲೂಕೀ ವಾ ದಿವಾಂಧಾ ಸ್ಯಾದ್ವೃಕ್ಷಕೋಟರವಾಸಿನೀ ॥ ೩೫ ॥
ರಕ್ಷಣೀಯಂ ಮಹಾಯತ್ನಾದಿದಂ ಸುಕೃತಭಾಜನಂ ।
ವಪುಃ ಪರಸ್ಯ ದುಃಸ್ಪರ್ಶಾತ್ಸುಖಾಭಾಸಾತ್ಮಕಾತ್ ಸ್ತ್ರಿಯಾ ॥ ೩೬ ॥
ಅನೇನೈವ ಶರೀರೇಣ ಭರ್ತೃಸಾದ್ವಿಹಿತೇನ ಹಿ ।
ಕಿಂ ಸತೀ ನ ಚ ತಸ್ತಂಭ ಭಾನುಮುದ್ಯಂತಮಾಜ್ಞಯಾ ॥ ೩೭ ॥

---

೩೧–೩೨. ಅವಳು ಮೋಡದ ನೆರಳಿನಂತೆ ಅತ್ಯಂತ ಚಂಚಲವೂ, ಮಳೆಗಾಲದ ನದಿಯ ಪ್ರವಾಹದಂತಿರುವುದೂ ಆದ ಯೌವನವನ್ನು ಹೊಂದಿದ್ದಾಗ ತನ್ನ ಪತಿಯನ್ನು ಮೋಸಗೊಳಿಸಿದ್ದಳು. ಮೂರು ನಾಲ್ಕು ದಿನಗಳು ಮಾತ್ರ ಇರುವ ಯೌವನವನ್ನು ಹೊಂದಿ ಯಾವ ಹೆಂಗಸು ಭ್ರಾಂತಿಯಿಂದ ಪತಿಯನ್ನು ವಂಚಿಸುವಳೊ, ಅವಳು ಶಾಶ್ವತವಾದ ನರಕವನ್ನು ಹೊಂದುವಳು.

೩೩. ಹೆಂಗಸರ ನಡತೆಯು ಕೆಟ್ಟರೆ ಪತಿಯು ಧರ್ಮಿಷ್ಠನಾದರೂ ಕಷ್ಟದಿಂದ ಸಂಪಾದಿಸಿದ ಸ್ವರ್ಗದಿಂದ ಪತಿತನಾಗುವುದರಿಂದ ಸ್ತ್ರೀಯು ತನ್ನ ನಡತೆಯನ್ನು ರಕ್ಷಿಸಿಕೊಳ್ಳಬೇಕು.

೩೪. ದುರ್ಬುದ್ಧಿಯುಳ್ಳ ಆ ಸ್ತ್ರೀಯು ವಿಷ್ಠಾಗರ್ತವೆಂಬ ನರಕದಲ್ಲಿ ಪ್ರಳಯಕಾಲದವರೆಗೆ ವಾಸಿಸಿ ಬಳಿಕ ಹಂದಿಯಾಗುವಳು.

೩೫–೩೬. ಅನಂತರ ತನ್ನ ಮಲವನ್ನು ತಾನೇ ಭಕ್ಷಿಸುವ ಬಾವಲಿಯೋ ಅಥವಾ ಮರದ ಪೊಟರೆಯಲ್ಲಿ ವಾಸಿಸುವ ಹಗಲುಕುರುಡಾದ ಹೆಣ್ಣುಗೂಬೆಯೋ ಆಗುವಳು. ಆದ್ದರಿಂದ ಮಹಿಳೆಯು ಪುಣ್ಯಕ್ಕೆ ಆಶ್ರಯವಾದ ಈ ಶರೀರವನ್ನು ಸುಖದಂತೆ ತೋರುವ ಪರರ ದುಸ್ಸ್ಪರ್ಶದಿಂದ ರಕ್ಷಿಸಿಕೊಳ್ಳಬೇಕು.

೩೭. ಪತಿವ್ರತೆಯು ಪತಿಗೆ ಅಧೀನವಾಗಿ ಮಾಡಲ್ಪಟ್ಟ ಈ ದೇಹದಿಂದಲೆ ತನ್ನ ಅಪ್ಪಣೆಯಿಂದ ಉದಯಿಸುತ್ತಿರುವ ಸೂರ್ಯನನ್ನು ಉದಯಿಸದಂತೆ ತಡೆಯಲಿಲ್ಲವೇ?

ಅತ್ರಿಪತ್ನ್ಯನಸೂಯಾ ಕಿಂ ಭರ್ತೃಭಕ್ತಿಪ್ರಭಾವತಃ ।
ದಧಾರ ನ ತ್ರಯೀಂ ಗರ್ಭೇ ಪತಿವ್ರತಪರಾಯಣಾ ॥ ೩೮ ॥
ಇಹ ಕೀರ್ತಿಶ್ಚ ವಿಪುಲಾ ಸ್ವರ್ಗೇ ವಾಸಸ್ತಥಾಽಕ್ಷಯಃ ।
ಪಾತಿವ್ರತ್ಯಾತ್ಸ್ತ್ರಿಯಾ ಲಭ್ಯಂ ಸಖಿತ್ವಂ ಚ ಶ್ರಿಯಾ ಸಹ ॥ ೩೯ ॥
ಸಾ ದುರ್ವೃತ್ತ್ಯಾ ಪರಿತ್ಯಜ್ಯ ಪತಿಧರ್ಮಂ ಸನಾತನಂ ।
ಸ್ವಚ್ಛಂದಚಾರಿಣೀ ಭೂತ್ವಾ ಮೃತಾ ನಿರಯಮುದ್ಯಯೌ ॥ ೪೦ ॥
ಧನಂಜಯೋಽಪಿ ಚ ಮುನೇ ಕೇನಚಿಚ್ಛಿವಯೋಗಿನಾ ।
ಸಾರ್ಧಂ ತಪೋದಯಾದಿತ್ಥಂ ಸೋಽಭವದ್ಧರ್ಮತತ್ಪರಃ ॥ ೪೧ ॥
ಧನಂಜಯೋಽಪಿ ಧರ್ಮಾತ್ಮಾ ಮಾತೃಭಕ್ತಿಪರಾಯಣಃ ।
ಆದಾಯಾಽಸ್ಥೀನ್ಯಥೋ ಮಾತುರ್ಗಂಗಾಮಾರ್ಗಸ್ಥಿತೋಽಭವತ್ ॥ ೪೨ ॥
ಪಂಚಗವ್ಯೇನ ಸಂಸ್ನಾಪ್ಯ ತತಃ ಪಂಚಾಽಮೃತೇನ ವೈ ।
ಯಕ್ಷಕರ್ದಮಲೇಪೇನ ಲಿಪ್ತ್ವಾ ಪುಷ್ಪೈಃ ಪ್ರಪೂಜ್ಯ ಚ ॥ ೪೩ ॥
ಆವೇಷ್ಟ್ಯ ನೇತ್ರವಸ್ತ್ರೇಣ ತತಃ ಪಟ್ಟಾಂಬರೇಣ ವೈ ।
ತತಃ ಸುರಸವಸ್ತ್ರೇಣ ತತೋ ಮಾಂಜಿಷ್ಠವಾಸಸಾ ॥ ೪೪ ॥
ನೇಪಾಲಕಂಬಲೇನಾಽಥ ಮೃದಾ ಚಾಽಥ ವಿಶುದ್ಧಯಾ ।
ತಾಮ್ರಸಂಪುಟಕೇ ಕೃತ್ವಾ ಮಾತುರಂಗಾನ್ಯಹೋ ವಣಿಕ್ ॥ ೪೫ ॥

---

೩೮. ಅತ್ರಿಪತ್ನಿಯಾದ ಅನಸೂಯೆಯು ಪತಿಭಕ್ತಿಯ ಪ್ರಭಾವದಿಂದ ವೇದತ್ರಯರೂಪರಾದ ಬ್ರಹ್ಮವಿಷ್ಣುಮಹೇಶ್ವರರನ್ನು ಗರ್ಭದಲ್ಲಿ ಧರಿಸಲಿಲ್ಲವೇ?

೩೯. ಸ್ತ್ರೀಯು ತನ್ನ ಪಾತಿವ್ರತ್ಯದಿಂದ ಈ ಲೋಕದಲ್ಲಿ ಅಧಿಕ ಕೀರ್ತಿ, ಸ್ವರ್ಗದಲ್ಲಿ ಶಾಶ್ವತವಾದ ವಾಸ, ಲಕ್ಷ್ಮೀಸಖಿತ್ವ ಇವುಗಳನ್ನು ಪಡೆಯುವಳು.

೪೦. ಆ ವೈಶ್ಯನ ತಾಯಿಯು ತನ್ನ ದುರ್ನಡತೆಯಿಂದ ಸನಾತನ ಪತಿಧರ್ಮವನ್ನು ಪರಿತ್ಯಜಿಸಿ ಸ್ವೇಚ್ಛಾಚಾರಿಣಿಯಾಗಿ ಮರಣಾನಂತರ ನರಕಕ್ಕೆ ಹೋದಳು.

೪೧. ಮುನಿಯೆ! ಧನಂಜಯನೂ ಒಬ್ಬಾನೊಬ್ಬ ಶಿವಯೋಗಿಯ ಸಹವಾಸವನ್ನು ಪಡೆದು ತಪಸ್ಸಿನ ಮಾಹಾತ್ಮ್ಯದಿಂದ ಧರ್ಮನಿರತನಾದನು.

೪೨. ಧರ್ಮಾತ್ಮನೂ, ಮಾತೃಭಕ್ತಿನಿರತನೂ ಆದ ಆ ಧನಂಜಯನು ತಾಯಿಯ ಅಸ್ಥಿಗಳನ್ನು ತೆಗೆದುಕೊಂಡು ಗಂಗಾಮಾರ್ಗವನ್ನು ಹಿಡಿದನು.

೪೩–೪೭. ಅವನು ಆ ಮೂಳೆಗಳನ್ನು ಪಂಚಗವ್ಯದಿಂದಲೂ, ಪಂಚಾಮೃತದಿಂದಲೂ ಅಭಿಷೇಕಮಾಡಿ, ಗಂಧವನ್ನು ಹಚ್ಚಿ ಕುಸುಮಗಳಿಂದಾರಾಧಿಸಿ, ನಾರುಬಟ್ಟೆಯನ್ನು ಸುತ್ತಿ ಅನಂತರ ರೇಶ್ಮೆವಸ್ತ್ರದಿಂದಲೂ, ಸುರಸವಸ್ತ್ರದಿಂದಲೂ, ಕೆಂಪುಬಟ್ಟೆಯಿಂದಲೂ, ನೇಪಾಳದೇಶದ ಕಂಬಳಿಯಿಂದಲೂ ಸುತ್ತಿ ಶುದ್ಧವಾದ ಮಣ್ಣನ್ನು ಲೇಪಿಸಿ ಅದನ್ನು ತಾಮ್ರದ ಸಂಪುಟದಲ್ಲಿರಿಸಿ ಹೀನಜಾತಿಯವರನ್ನು

ಅಸ್ಪೃಷ್ಟಹೀನಜಾತಿಃ ಸ ಶುಚಿಷ್ಮಾನ್ ಸ್ಥಂಡಿಲೇಶಯಃ ।
ಅನಯಂಜ್ವರಿತೋಽಪ್ಯಾಸೀನ್ಮಧ್ಯೇಮಾರ್ಗಂ ಧನಂಜಯಃ ॥ ೪೬ ॥
ಭಾರವಾಹಃ ಕೃತಸ್ತೇನ ಕಶ್ಚಿದ್ದತ್ವೋಚಿತಾಂ ಭೃತಿಂ ।
ಕಿಂ ಬಹೂಕ್ತೇನ ಘಟಜ ಕಾಶೀಂ ಪ್ರಾಪ್ತಾಽಥ ತೇನ ವೈ ॥ ೪೭ ॥
ಧೃತ್ವಾ ಸಂಭೃತಿರಕ್ಷಾರ್ಥಂ ಭಾರವಾಹಂ ಧನಂಜಯಃ ।
ಜಗಾಮಾಪಣಮಾನೇತುಂ ಕಿಂಚಿದ್ವಸ್ತ್ವಶನಾದಿಕಂ ॥ ೪೮ ॥
ಭಾರವಾಹ್ಯಂತರಂ ಪ್ರಾಪ್ಯ ತಸ್ಯ ಸಂಭೃತಿಮಧ್ಯತಃ ।
ತಾಮ್ರಸಂಪುಟಮಾದಾಯ ಧನಂ ಜ್ಞಾತ್ವಾ ಗೃಹಂ ಯಯೌ ॥ ೪೯ ॥
ವಾಸಸ್ಥಾನಮುಥಾಗತ್ಯ ತಮದೃಷ್ಟ್ವಾ ಧನಂಜಯಃ ।
ತ್ವರಾವಾನ್ ಸಂಭೃತಿಂ ವೀಕ್ಷ್ಯ ತಾಮ್ರಸಂಪುಟವರ್ಜಿತಾಂ ॥ ೫೦ ॥
ಹಾ ಹೇತ್ಯಾತಾಡ್ಯ ಹೃದಯಂ ಚಕ್ರಂದ ಬಹುಶೋ ಭೃಶಂ ।
ಇತಸ್ತತಸ್ತಮಾಲೋಕ್ಯ ಗತಸ್ತದನುಸಾರತಃ ॥ ೫೧ ॥
ಅಕೃತ್ವಾ ಜಾಹ್ನವೀಸ್ನಾನಮನವೇಕ್ಷ್ಯ ಜಗತ್ಪತಿಂ ।
ತಸ್ಯ ಸಂವಸಥಂ ಪ್ರಾಪ್ತೋ ಭಾರವೋಢುರ್ಧನಂಜಯಃ ॥ ೫೨ ॥

---

ಮುಟ್ಟದೆ ಶುದ್ಧನೂ, ಭೂಶಾಯಿಯೂ ಆಗಿ ಮಾರ್ಗಮಧ್ಯದಲ್ಲಿ ಜ್ವರಪೀಡಿತನಾದರೂ ಅದನ್ನು ಒಯ್ದನು.

೪೭. ಅಗಸ್ತ್ಯ! ಹೆಚ್ಚು ಹೇಳಿ ಪ್ರಯೋಜನವೇನು? ಅವನು ಉಚಿತವಾದ ಭೃತಿಯನ್ನಿತ್ತು ಹೊರೆ ಹೊರುವವನೊಬ್ಬನನ್ನು ನೇಮಿಸಿಕೊಂಡು ಕಾಶಿಯನ್ನು ಸೇರಿದನು.

೪೮–೪೯. ಆ ಧನಂಜಯನು ತನ್ನ ಸಾಮುಗ್ರಿಯನ್ನು ರಕ್ಷಿಸುವುದಕ್ಕಾಗಿ ಆ ಭಾರವಾಹಕನನ್ನು ನೇಮಿಸಿ ತಾನು ಭೋಜನವಸ್ತುಗಳನ್ನು ತರಲು ಅಂಗಡಿಗೆ ಹೋದನು. ಆಗ ಆ ಹೊರೆ ಹೊರುವವನು ಅವಕಾಶವನ್ನು ಹೊಂದಿ ಅವನ ಸಾಮುಗ್ರಿಗಳ ಮಧ್ಯದಿಂದ ತಾಮ್ರಸಂಪುಟವನ್ನು ಹಣದ ಸಂಪುಟವೆಂದರಿತು ತೆಗೆದುಕೊಂಡು ಹೊರಟುಹೋದನು.

೫೦–೫೧. ತರುವಾಯ ಧನಂಜಯನು ತನ್ನ ವಾಸಸ್ಥಳಕ್ಕೆ ಬಂದು ಆ ಭಾರವಾಹಿಯನ್ನು ಕಾಣದೆ ತ್ವರೆಯಿಂದ ತಾಮ್ರಸಂಪುಟವಿಲ್ಲದ ತನ್ನ ಸಾಮುಗ್ರಿಯನ್ನು ಕಂಡನು. ಅವನು "ಅಯ್ಯೊ! ಅಯ್ಯೊ!" ಎಂದು ಎದೆಯನ್ನು ಬಡಿದುಕೊಂಡು ಬಹಳವಾಗಿ ಕೂಗಿಕೊಂಡು ಇಲ್ಲಿ ಅಲ್ಲಿ ಆ ಭಾರವಾಹಿಯನ್ನು ಹುಡುಕಿ ಅವನನ್ನು ಅನುಸರಿಸಿ ಹೊರಟನು.

೫೨. ಧನಂಜಯನು ಗಂಗೆಯಲ್ಲಿ ಸ್ನಾನಮಾಡದೆ, ವಿಶ್ವೇಶ್ವರನನ್ನು ನೋಡದೆ ಆ ಭಾರವಾಹಿಯ ಮನೆಗೆ ಹೋದನು.

ಭಾರವಾಡಪ್ಯರಣ್ಯಾನ್ಯಾಂ ತಾಮ್ರಸಂಪುಟಮಧ್ಯತಃ ।
ದೃಷ್ಟ್ವಾಽಸ್ಥೀನಿ ವಿನಿಶ್ವಸ್ಯ ತಾನಿ ತ್ಯಕ್ತ್ವಾ ಗೃಹಂ ಯಯೌ ॥ ೫೩ ॥
ವಣಿಕ್ಚ ತದ್ಗೃಹಂ ಪ್ರಾಪ್ಯ ಶುಷ್ಕಕಂಠೋಷ್ಠತಾಲುಕಃ ।
ದೃಷ್ಟ್ವಾಽಥ ಚೈಲಶಕಲಂ ತೃಣಕುಟ್ಯಂತರೇ ತದಾ ॥ ೫೪ ॥
ಆಶಯಾ ಕಿಂಚಿದಾಶ್ವಸ್ಯ ತತ್ಪತ್ನೀಂ ಪರಿಪೃಷ್ಟವಾನ್ ।
ಸತ್ಯಂ ಬ್ರೂಹಿ ನ ಭೇತವ್ಯಂ ದಾಸ್ಯಾಮ್ಯನ್ಯದಪಿ ಧ್ರುವಂ ॥ ೫೫ ॥
ವಸು ಕ್ವ ತೇ ಗತೋ ಭರ್ತಾ ಮಾತುರಸ್ಥೀನಿ ಮೇಽರ್ಪಯ ।
ವಯಂ ಕಾರ್ಪಟಿಕಾ ಭದ್ರೇ ಭವಾಮೋ ನ ಚ ದುಃಖದಾಃ ॥ ೫೬ ॥
ಅಜ್ಞಾತ್ವಾ ಲೋಭವಶತಸ್ತೇನ ನೀತೋಽಸ್ಥಿಸಂಪುಟಃ ।
ತಸ್ಯೈಷ ದೋಷೋ ನೋ ಭದ್ರೇ ಮಾತುರ್ಮೇ ಕರ್ಮ ತಾದೃಶಂ ॥ ೫೭ ॥
ಅಥವಾ ನ ಪ್ರಸೂದೋಷೋ ಮಂದಭಾಗ್ಯೋಽಸ್ಮಿ ತತ್ಸುತಃ ।
ಸುತೇನ ಕೃತ್ಯಂ ಯತ್ಕೃತ್ಯಂ ತತ್ಪ್ರಾಪ್ತಿರ್ನಾಽಸ್ತಿ ಭಿಲ್ಲಿ ಮೇ ॥ ೫೮ ॥
ಉದ್ಯಮಂ ಕೃತವಾನಸ್ಮಿ ನ ಸಿದ್ಧ್ಯೇನ್ಮಂದಭಾಗ್ಯತಃ ।
ಆಯಾತು ಸತ್ಯವಾಕ್ಯಾನ್ಮೇ ಮಾ ಬಿಭೇತು ವನೇಚರಃ ॥ ೫೯ ॥

---

೫೩. ಆ ಭಾರವಾಹಿಯೂ ದೊಡ್ಡ ಕಾಡಿನಲ್ಲಿ ತಾಮ್ರಸಂಪುಟದಲ್ಲಿರುವ ಮೂಳೆಗಳನ್ನು ನೋಡಿ ನಿಟ್ಟುಸಿರುಬಿಟ್ಟು ಅವುಗಳನ್ನು ಅಲ್ಲಿಯೆ ತ್ಯಜಿಸಿ ಮನೆಗೆ ಹೋದನು.

೫೪–೫೬. ಒಣಗಿದ ಗಂಟಲು, ತುಟಿ, ಕಪೋಲಗಳುಳ್ಳ ವರ್ತಕನೂ ಆ ಭಾರವಾಹಿಯ ಮನೆಗೆ ಹೋಗಿ ಹುಲ್ಲಿನ ಗುಡಿಸಿಲಿನ ನಡುವೆ ತನ್ನ ಬಟ್ಟೆಯ ಚೂರನ್ನು ಕಂಡು ಆಶೆಯಿಂದ ಅವನ ಪತ್ನಿಯನ್ನು ಸಮಾಧಾನಗೊಳಿಸಿ ಹೀಗೆ ಪ್ರಶ್ನಿಸಿದನು. "ನೀನು ನಿಜವನ್ನು ಹೇಳು. ಹೆದರಬೇಡ. ನಿಶ್ಚಯವಾಗಿಯೂ ಬೇರೆ ದ್ರವ್ಯವನ್ನು ಕೊಡುವೆನು. ನಿನ್ನ ಗಂಡನೆಲ್ಲಿ? ನನ್ನ ತಾಯಿಯ ಮೂಳೆಗಳನ್ನು ಕೊಡು. ಮಂಗಳಕರಳೆ! ನಾವು ಯಾತ್ರಿಕರು, ದುಃಖವನ್ನುಂಟು ಮಾಡುವವರಲ್ಲ.

೫೭. ಆ ನಿನ್ನ ಪತಿಯು ಅರಿಯದೆ ಲೋಭದಿಂದ ಅಸ್ಥಿಸಂಪುಟವನ್ನು ತೆಗೆದುಕೊಂಡು ಹೋದನು. ಇದು ಅವನ ತಪ್ಪಲ್ಲ. ನಮ್ಮ ತಾಯಿಯ ಕರ್ಮದ ಅಪರಾಧವಾಗಿರುವುದು.

೫೮. ಅಥವಾ ಇದು ನಮ್ಮ ತಾಯಿಯ ದೋಷವೂ ಅಲ್ಲ. ಅವಳ ಮಗನಾದ ನಾನು ಅಲ್ಪಭಾಗ್ಯವುಳ್ಳವನು. ಕಿರಾತಸ್ತ್ರೀಯೆ! ಮಗನು ಮಾಡಬೇಕಾದ ಕಾರ್ಯವನ್ನು ಮಾಡಲು ನನಗೆ ಅವಕಾಶವು ದೊರೆಯಲಿಲ್ಲ.

೫೯. ನನ್ನ ಕರ್ತವ್ಯವನ್ನು ನೆರವೇರಿಸಲು ಪ್ರಯತ್ನಿಸಬೇಕು. ಆದರೆ

ಅಸ್ಥೀನಿ ದರ್ಶಯತ್ವಾಶು ಧನಂ ದಾಸ್ಯೇಽಧಿಕಂ ತತಃ ।
ಇತ್ಯುಕ್ತಾ ತೇನ ಸಾ ಭಿಲ್ಲೀ ವ್ಯಾಜಹಾರ ನಿಜಂ ಪತಿಂ ॥ ೬೦ ॥
ಲಜ್ಜಾನಮ್ರಶಿರಾಃ ಸೋಽಥ ವೃತ್ತಾಂತಂ ವಿನಿವೇದ್ಯ ಚ ।
ನಿನಾಯ ತಾಮರಣ್ಯಾನೀಂ ಶಬರಸ್ತಂ ಧನಂಜಯಂ ॥ ೬೧ ॥
ವನೇಚರೋಽಥ ತತ್‌ಸ್ಥಾನಂ ದೈವಾದ್ವಿಸ್ಮೃತವಾನ್ಮುನೇ ।
ದಿಗ್ಭ್ರಾಂತಿಂ ಸಮವಾಪ್ಯಾಽಥ ಪರಿಬಭ್ರಾಮ ಕಾನನೇ ॥ ೬೨ ॥
ಇತೋಽರಣ್ಯಾತ್ತತೋ ಯಾತಿ ತತೋಽರಣ್ಯಾದಿತೋ ವ್ರಜೇತ್ ।
ವನಾದ್ವನಾಂತರಂ ಭ್ರಾಂತ್ವಾ ಖಿನ್ನಃ ಸೋಽಪಿ ವನೇಚರಃ ॥ ೬೩ ॥
ವಿಹಾಯ ಮಧ್ಯೇಽರಣ್ಯಾನಿ ತಂ ಯಯೌ ಚ ಸ್ವಪಕ್ವಣಂ ।
ದ್ವಿತ್ರಾಣ್ಯಹಾನಿ ಸಂಭ್ರಮ್ಯ ಸ ಕಾರ್ಪಟಿಕಸತ್ತಮಃ ॥ ೬೪ ॥
ಕ್ಷುತ್ಕ್ಷಾಮಃ ಶುಷ್ಕಕಂಠೋಷ್ಠೋ ಹಾ ಹೇತಿ ಪರಿದೇವಯನ್ ।
ಪುನಃ ಕಾಶೀಪುರೀಂ ಪ್ರಾಪ್ತಃ ಪರಿಮ್ಲಾನಮುಖೋ ವಣಿಕ್ ॥ ೬೫ ॥
ತನ್ಮಂದಭಾಗ್ಯತಾಂ ಶ್ರುತ್ವಾ ಲೋಕಾತ್ಕಾರ್ಪಟಿಕೋ ಮುನೇ ।
ಕೃತ್ವಾ ಗಯಾಂ ಪ್ರಯಾಗಂ ಚ ತತಃ ಸ್ವವಿಷಯಂ ಯಯೌ ॥ ೬೬ ॥

---

ದುರದೃಷ್ಟದಿಂದ ಅದು ಕೈಗೂಡಲಿಲ್ಲ. ಸತ್ಯವಾದ ನನ್ನ ಮಾತನ್ನು ಕೇಳಿ ನಿನ್ನ ಪತಿಯು ಬರಲಿ. ಹೆದರದಿರಲಿ.

೬೦. ಕೂಡಲೆ ಮೂಳೆಗಳನ್ನು ತೋರಿಸಲಿ. ಅಧಿಕ ಧನವನ್ನು ಕೊಡುವೆನು.'' ಆ ವರ್ತಕನು ಹೀಗೆನ್ನಲು ಬೇಡರ ಸ್ತ್ರೀಯು ತನ್ನ ಪತಿಗೆ ಆ ಮಾತನ್ನು ಹೇಳಿದಳು.

೬೧. ಆ ಬೇಡನು ನಾಚಿಕೆಯಿಂದ ತಲೆತಗ್ಗಿಸಿಕೊಂಡು ಧನಂಜಯನಿಗೆ ನಡೆದ ಸಮಾಚಾರವನ್ನು ತಿಳಿಸಿ ಅವನನ್ನು ಕಾಡಿಗೆ ಕರೆದುಕೊಂಡುಹೋದನು.

೬೨. ಆ ಬೇಡನು ದೈವವಶದಿಂದ ತಾನು ಅಸ್ಥಿಸಂಪುಟವನ್ನು ಎಸೆದ ಸ್ಥಳವನ್ನು ಮರೆತನು. ಅವನು ದಿಗ್ಭ್ರಮಣೆಯನ್ನು ಹೊಂದಿ ಕಾಡಿನಲ್ಲಿ ಅಲೆದನು.

೬೩–೬೫. ಆ ಬೇಡನು ಈ ಕಾಡಿನಿಂದ ಆ ಕಾಡಿಗೆ ಆ ಕಾಡಿನಿಂದ ಈ ಕಾಡಿಗೆ ಅಲೆದು ವಿಷಾದಗೊಂಡು, ಆ ಕಾಡನ್ನು ಬಿಟ್ಟು ತನ್ನ ಗುಡಿಸಲಿಗೆ ಹೋದನು. ಆ ಧನಂಜಯನು ಎರಡು ಮೂರು ದಿನಗಳು ಹೀಗೆ ಅಲೆದು ಹಸಿವಿನಿಂದ ಕೃಶನೂ, ಒಣಗಿದ ಗಂಟಲು ತುಟಿಗಳುಳ್ಳವನೂ ಆಗಿ ''ಅಯ್ಯೋ!'' ಎಂದು ಗೋಳಾಡುತ್ತ ಬಾಡಿದ ಮುಖವುಳ್ಳವನಾಗಿ ಮರಳಿ ಕಾಶೀ ಪಟ್ಟಣಕ್ಕೆ ಹೋದನು.

೬೬. ಅವನು ಜನರ ಬಾಯಿಯಿಂದ ತಾಯಿಯ ದುರದೃಷ್ಟವನ್ನು ಕೇಳಿ ಗಯಾಪ್ರಯಾಗಗಳಿಗೆ ಹೋಗಿ ಅನಂತರ ತನ್ನ ದೇಶಕ್ಕೆ ಹೊರಟುಹೋದನು.

ಕಾಶ್ಯಾಂ ಪ್ರವೇಶಂ ಪ್ರಾಪ್ಯಾಽಪಿ ತದಸ್ಥೀನಿ ಘಟೋದ್ಭವ ।
ವಿನಾ ವೈಶ್ವೇಶ್ವರೀಮಾಜ್ಞಾಂ ಬಹಿರ್ಯಾತಾನಿ ತತ್ಕ್ಷಣಾತ್ ॥ ೬೭ ॥
ಏವಂ ಕಾಶ್ಯಾಂ ಪ್ರವಿಶ್ಯಾಽಪಿ ಪಾಪೀ ಧರ್ಮಾನುಷಂಗತಃ ।
ನ ಕ್ಷೇತ್ರಫಲಮಾಪ್ನೋತಿ ಬಹಿರ್ಭವತಿ ತತ್ಕ್ಷಣಾತ್ ॥ ೬೮ ॥
ತಸ್ಮಾದ್ವಿಶ್ವೇಶ್ವರಾಜ್ಞೈವ ಕಾಶೀವಾಸೇಽತ್ರ ಕಾರಣಂ ।
ಅಸಿಶ್ಚ ವರಣಾ ಯತ್ರ ಕ್ಷೇತ್ರರಕ್ಷಾಕೃತೌ ಕೃತೇ ॥ ೬೯ ॥
ವಾರಾಣಸೀತಿ ವಿಖ್ಯಾತಾ ತದಾರಭ್ಯ ಮಹಾಮುನೇ ।
ಅಸೇಶ್ಚ ವರಣಾಯಾಶ್ಚ ಸಂಗಮಂ ಪ್ರಾಪ್ಯ ಕಾಶಿಕಾ ॥ ೭೦ ॥

ವಾರಾಣಸೀಹ ಕರುಣಾಮಯದಿವ್ಯಮೂರ್ತಿ
ರುತ್ಸೃಜ್ಯ ಯತ್ರ ತು ತನುಂ ತನುಭೃತ್ಸುಖೇನ ।
ವಿಶ್ವೇಶದೃಙ್ಮಹಸಿ ಯತ್ಸಹಸಾ ಪ್ರವಿಶ್ಯ
ರೂಪೇಣ ತಾಂ ವಿತನುತಾಂ ಪದವೀಂ ದಧಾತಿ ॥ ೭೧ ॥
ಜಾತೋ ಮೃತೋ ಬಹುಷು ತೀರ್ಥವರೇಷು ರೇ ತ್ವಂ
ಜಂತೋ ನ ಜಾತು ತವ ಶಾಂತಿರಭೂನ್ನಿಮಜ್ಯ ।
ವಾರಾಣಸೀ ನಿಗದತೀಹ ಮೃತೋಽಮೃತತ್ವಂ
ಪ್ರಾಪ್ಯಾಽಧುನಾ ಮಮ ಬಲಾತ್ಸ್ಮರಶಾಸನಃ ಸ್ಯಾಃ ॥ ೭೨ ॥

---

೬೭. ಎಲೈ ಅಗಸ್ತ್ಯನೆ! ಆ ಅಸ್ಥಿಗಳು ಕಾಶಿಯನ್ನು ಪ್ರವೇಶಿಸಿದರೂ ವಿಶ್ವೇಶ್ವರನ ಆಜ್ಞೆಯಿಲ್ಲದಿರುವುದರಿಂದ ಕೂಡಲೆ ಹೊರಗೆ ಹೊರಟುಹೋದುವು.

೬೮. ಹೀಗೆ ಪಾಪಿಯು ಧರ್ಮಸಂಬಂಧದಿಂದ ಕಾಶಿಯನ್ನು ಪ್ರವೇಶಿಸಿದರೂ ಕ್ಷೇತ್ರಫಲವನ್ನು ಹೊಂದದೆ ಕೂಡಲೆ ಹೊರಗೆ ಹೋಗುತ್ತಾನೆ.

೬೯–೭೦. ಆದ್ದರಿಂದ ಕಾಶಿಯಲ್ಲಿ ವಾಸಮಾಡಬೇಕಾದರೆ ವಿಶ್ವೇಶ್ವರನ ಆಜ್ಞೆಯಾಗಬೇಕು. ಈ ಕಾಶಿಯಲ್ಲಿ ರಕ್ಷಣೆಗಾಗಿ ಅಸಿ, ವರಣಾ ಇವುಗಳನ್ನು ನಿರ್ಮಿಸಿರುವುದರಿಂದ ಅದು ಅಸಿವರಣಗಳ ಸಂಬಂಧದಿಂದ ಅದು ಮೊದಲ್ಗೊಂಡು ವಾರಾಣಸೀ ಎಂದು ವಿಖ್ಯಾತವಾಯಿತು.

೭೧. ಈ ಲೋಕದಲ್ಲಿ ವಾರಾಣಸಿಯು ದಯಾಮಯಶರೀರವುಳ್ಳದು. ಇಲ್ಲಿ ಶರೀರವನ್ನು ತ್ಯಜಿಸಿದ ಪ್ರಾಣಿಯು ಸುಖವಾಗಿ ವಿಶ್ವೇಶ್ವರನ ದೃಷ್ಟಿಯೆಂಬ ತೇಜಸ್ಸಿನಲ್ಲಿ ಪ್ರವೇಶಿಸಿ ಕೈವಲ್ಯಪದವಿಯನ್ನು ಹೊಂದುವುದು.

೭೨. "ಪ್ರಾಣಿಯೆ! ನೀನು ಹುಟ್ಟಿ ಅನೇಕ ತೀರ್ಥಗಳಲ್ಲಿ ಮಿಂದು ಮೃತನಾದರೂ ಎಲ್ಲಿಯೂ ಶಾಂತಿಯನ್ನು ಹೊಂದಲಿಲ್ಲ. ಈಗ ಇಲ್ಲಿ ಮೃತನಾಗಿ ನನ್ನ ಸಾಮರ್ಥ್ಯದಿಂದ ಮಹೇಶ್ವರನಾಗು.

ಅನ್ಯತ್ರ ತೀರ್ಥಸಲಿಲೇ ಪತಿತೋ ದ್ವಿಜನ್ಮಾ
ದೇವಾದಿಭಾವಮುಯತೇ ನ ತಥಾ ತು ಕಾಶ್ಯಾಂ ।
ಚಿತ್ರಂ ಯದತ್ರ ಪತಿತಃ ಪುನರುತ್ಥಿತಿಂ ನ
ಸ್ಸಾಪ್ನೋತಿ ಪುಲ್ಕಸಜನೋಽಪಿ ಕಿಮುಗ್ರಜನ್ಮಾ ॥ ೭೩ ॥
ಸೈಷಾ ಪುರೀ ಸಂಸೃತಿರೂಪಪಾರಾ
ವಾರಸ್ಯ ಪಾರಂ ಪುರಹಾ ಪುರಾರಿಃ ।
ಯಸ್ಯಾಂ ಪರಂ ಪೌರುಷಮರ್ಥಮಿಚ್ಛನ್
ಸಿದ್ಧಿಂ ನಯೇತ್ಸೌರಪರಂಪರಾಂ ಸಃ ॥ ೭೪ ॥
ತೀರ್ಥಾಂತರಾಣಿ ಮನುಜಃ ಪರಿತೋಽವಗಾಹ್ಯ
ಹಿತ್ವಾ ತನುಂ ಕಲುಷಿತಾಂ ದಿವಿ ದೈವತಂ ಸ್ಯಾತ್ ।
ವಾರಾಣಸೀಪರಿಸರೇ ತು ವಿಸೃಜ್ಯ ದೇಹಂ
ಸಂದೇಹಭಾಗ್ಭವತಿ ದೇಹದಶಾಪ್ತಯೇಽಪಿ ॥ ೭೫ ॥
ವಾರಾಣಸೀಸಮುರಸೀಕರಣಾದ್ಯತೇಽಪಿ
ಯೋಗಾದಯೋಗಿಜನತಾಂ ಜನತಾಪಹಂತ್ರೀ ।
ತತ್ತಾರಕಂ ಶ್ರವಣಗೋಚರತಾಂ ನಯಂತೀ
ತದ್ಬ್ರಹ್ಮ ದರ್ಶಯತಿ ಯೇನ ಪುನರ್ಭವೋ ನ ॥ ೭೬ ॥

---

೭೩. ಇತರ ತೀರ್ಥಗಳಲ್ಲಿ ಬಿದ್ದ ಬ್ರಾಹ್ಮಣನು ದೇವತ್ವಾದಿಗಳನ್ನು ಹೊಂದುವನು. ಕಾಶಿಯಲ್ಲಿ ಹಾಗೆ ಆಗುವುದಿಲ್ಲ. ಇಲ್ಲಿ ಬಿದ್ದ ಚಂಡಾಲನೂ ಮರಳಿ ಮೇಲಕ್ಕೇಳುವುದಿಲ್ಲ. ಮುಕ್ತನಾಗುತ್ತಾನೆ. ಎಂದಮೇಲೆ ಬ್ರಾಹ್ಮಣನ ವಿಷಯವೇನು ?

೭೪. ಈ ಕಾಶಿಯಲ್ಲಿ ತ್ರಿಪುರಾರಿಯು ಪ್ರಾಣಿಸಮೂಹಗಳಿಗೆ ಪರಮ ಪುರುಷಾರ್ಥವನ್ನೀಯಲು ಇಚ್ಛಿಸುವವನಾಗಿ ಆ ಪ್ರಾಣಿಗಳನ್ನು ಸಂಸಾರ ಸಾಗರದ ಎಡಕ್ಕೆ ಒಯ್ಯುವನು.

೭೫. ಮಾನವನು ಇತರ ತೀರ್ಥಗಳಲ್ಲಿ ಮಿಂದರೆ ದೋಷವಿಶಿಷ್ಟವಾದ ಶರೀರವನ್ನು ತ್ಯಜಿಸಿ ದೇವಲೋಕದಲ್ಲಿ ದೇವತೆಯಾಗುವನು. ಕಾಶಿಯ ಬಳಿ ದೇಹವನ್ನು ತ್ಯಜಿಸಿದರೆ ದೇಹಾವಸ್ಥೆಯನ್ನು ಹೊಂದುವುದರಲ್ಲಿಯೂ ಸಂದೇಹ ಪಡುವನು.

೭೬. ಜನರ ಸಂತಾಪವನ್ನು ಪರಿಹರಿಸುವ ಈ ಕಾಶಿಯು ಅಷ್ಟಾಂಗ ಯೋಗದಿಂದುಂಟಾದ ಜೀವಬ್ರಹ್ಮೈಕ್ಯರೂಪಸಾಮರಸ್ಯವಿಲ್ಲದಿದ್ದ ಅಯೋಗಿ ಜನರಿಗೆ ತಾರಕಮಂತ್ರವನ್ನು ಉಪದೇಶಮಾಡಿಸಿ ಪುನರುತ್ಪತ್ತಿಯಿಲ್ಲದಂತೆ ಮಾಡುವ ಪರಬ್ರಹ್ಮಸಾಕ್ಷಾತ್ಕಾರವನ್ನು ನೀಡುವುದು.

ವಾರಾಣಸೀಪರಿಸರೇ ತನುಮಿಷ್ಟದಾತ್ರೀಂ
ಧರ್ಮಾರ್ಥಕಾಮನಿಲಯಾಮುಹಹಾ ವಿಸೃಜ್ಯ ।
ಇಷ್ಟಂ ಪದಂ ಕಿಮಪಿ ಹೃಷ್ಟತರೋಽಭಿಲಷ್ಯ
ಲಾಭೋಽಸ್ತು ಮೂಲಮಪಿ ನೋ ಯದವಾಪ ಶೂನ್ಯಂ॥ ೭೭ ॥
ಅಃ ಕಾಶಿವಾಸಿಜನತಾ ನ ತು ವಂಚಿತಾಽಭೂ
ದ್ಭಾಲೇ ವಿಲೋಚನವತಾ ವನಿತಾಽರ್ಧಭಾಜಾ ।
ಆದಾಯ ಯತ್ಸುಕೃತಭಾಜನಮಿಷ್ಟದೇಹಂ
ನಿರ್ವಾಣಮಾತ್ರಮಪವರ್ಜಯತಾ ಪುನರ್ಭೂ ॥ ೭೮ ॥
ವಾರಾಣಸೀ ಸ್ಫುರದಸೀಮಗುಣೈಕಭೂಮಿ
ರ್ಯತ್ರ ಸ್ಥಿತಾಸ್ತನುಭೃತಃ ಶಶಿಭೃತ್ಪ್ರಭಾವಾತ್ ।
ಸರ್ವೇ ಗಲೇ ಗರಲಿನೋಽಕ್ಷಿಯುಜೋ ಲಲಾಟೇ
ವಾಮಾರ್ಧವಾಮತನವೋಽತನವಸ್ತತೋಽಂತೇ ॥ ೭೯ ॥
ಆನಂದಕಾನನಮಿದಂ ಸುಖದಂ ಪುರೈವ
ತತ್ರಾಪಿ ಚಕ್ರಸರಸೀ ಮಣಿಕರ್ಣಿಕಾಽಥ ।
ಸ್ವಃ ಸಿಂಧುಸಂಗತಿರಥೋ ಪರಮಾಸ್ಪದಂ ಚ
ವಿಶ್ವೇಶಿತುಃ ಕಿಮಿಹ ತನ್ನ ವಿಮುಕ್ತಯೇ ತತ್ ॥ ೮೦ ॥

---

೭೭. ಮಾನವನು ಯಾವುದೊ ಒಂದು ಇಷ್ಟಸ್ಥಾನವನ್ನು ಬಯಸಿ ಕಾಶಿಯ ಬಳಿ ಇಷ್ಟವನ್ನೀಯುವುದೂ, ಧರ್ಮಾರ್ಥಕಾಮಗಳಿಗೆ ಆಶ್ರಯವೂ ಆದ ಶರೀರವನ್ನು ಕಳೆದುಕೊಂಡು ಸಂತೋಷವುಳ್ಳವನಾಗುವನು. ಆಹಾ! ಲಾಭವು ದೊರೆಯುವುದಿರಲಿ. ಶೂನ್ಯನಂತಾಗಿ ಮೂಲವನ್ನೂ ಕಳೆದುಕೊಳ್ಳುವನು.

೭೮. ಪುಣ್ಯಭಾಜನವೂ ಇಷ್ಟವೂ ಆದ ಶರೀರವನ್ನು ತೆಗೆದುಕೊಂಡು ಪುನರ್ಜನ್ಮವಿಲ್ಲದ ಮೋಕ್ಷವನ್ನುಮಾತ್ರ ಕೊಡುವವನೂ, ಫಾಲಲೋಚನನೂ, ಅರ್ಧನಾರೀಶ್ವರನೂ ಆದ ಶಿವನಿಂದ ಕಾಶಿಯಲ್ಲಿ ವಾಸಿಸುವ ಜನರು ವಂಚಿಸಲ್ಪಟ್ಟಿರುವರು. ಇದು ಆಶ್ಚರ್ಯವಲ್ಲವೇ!

೭೯. ಕಾಶಿಯು ಪ್ರಕಾಶಮಾನವಾದ ನಿರವಧಿಕಗುಣಗಳಿಗೆ ಆಶ್ರಯವಾದುದು. ಇಲ್ಲಿ ವಾಸಿಸುವ ಮಾನವರು ಮಹೇಶ್ವರನ ಮಾಹಾತ್ಮ್ಯೆಯಿಂದ ಎಲ್ಲರೂ ಕುತ್ತಿಗೆಯಲ್ಲಿ ವಿಷವುಳ್ಳವರೂ, ಹಣೆಯಲ್ಲಿ ಕಣ್ಣುಳ್ಳವರೂ, ಅರ್ಧನಾರೀಶ್ವರರೂ ಆಗಿ ಅವಸಾನದಲ್ಲಿ ಮುಕ್ತರಾಗುವರು.

೮೦. ಇದು ಮೊದಲೆ ಆನಂದಕಾನನವು. ಇಲ್ಲಿ ಚಕ್ರ ನಿರ್ಮಿತವಾದ ಮಣಿಕರ್ಣಿಕೆಯೂ, ಭಾಗೀರಥಿಯೂ, ವಿಶ್ವೇಶ್ವರನೂ ಇರುವುದರಿಂದ ಇವುಗಳಲ್ಲಿ ಮುಕ್ತಿಯನ್ನು ಕೊಡದಿರುವುದು ಯಾವುದು?

ವಾರಾಣಸೀಹ ವರಣಾಸಿಸರಿದ್ವರಿಷ್ಠಾ
ಸಂಭೇದಖೇದಜನನೀ ದ್ಯುನದೀಲಸಚ್ಛ್ರೀಃ ।
ವಿಶ್ರಾಮಭೂಮಿರಚಲಾಽಮಲಮೋಕ್ಷಲಕ್ಷ್ಮ್ಯಾ
ಹ್ಯೈನಾಂ ವಿಹಾಯ ಕಿಮು ಸೀದತಿ ಮೂಢಜಂತುಃ ॥ ೮೧ ॥
ಕಿಂ ವಿಸ್ಮೃತಂ ತ್ವಹಹ ಗರ್ಭಜಮಾಮನಸ್ಯಂ
ಕಾತಾರ್ಂತದೂತಕೃತಬಂಧನತಾಡನಂ ಚ ।
ಶಂಭೋರನುಗ್ರಹಪರಿಗ್ರಹಲಭ್ಯಕಾಶೀಂ
ಮೂಢೋ ವಿಹಾಯ ಕಿಮು ಯಾತಿ ಕರಸ್ಥಮುಕ್ತಿಂ ॥ ೮೨ ॥
ತೀರ್ಥಾಂತರಾಣಿ ಕಲುಷಾಣಿ ಹರಂತಿ ಸದ್ಯಃ
ಶ್ರೇಯೋ ದದತ್ಯಪಿ ಬಹು ತ್ರಿದಿವಂ ನಯಂತಿ ।
ಪಾನಾಽವಗಾಹನವಿಧಾನತನುಪ್ರಹಾಣೈ
ರ್ವಾರಾಣಸೀ ತು ಕುರುತೇ ಬತ ಮೂಲನಾಶಂ ॥ ೮೩ ॥
ಕಾಶೀಪುರೀ ಪರಿಸರೇ ಮಣಿಕರ್ಣಿಕಾಯಾಂ
ತ್ಯಕ್ತ್ವಾ ತನುಂ ತನುಭೃತಸ್ತನುಮಾಪ್ನುವಂತಿ ।
ಭಾಲೇ ವಿಲೋಚನವತೀಂ ಗಲನೀಲಲಕ್ಷ್ಮೀಂ
ವಾಮಾರ್ಧಬಂಧುರವಧೂಂ ವಿಧುರಾಽವರೋಧಾಃ ॥ ೮೪ ॥

---

೮೧. ಈ ಲೋಕದಲ್ಲಿ ವಾರಾಣಸಿಯು ವರಣಾ ಅಸಿಯೆಂಬ ನದಿಗಳಿಂದ ಉತ್ತಮವೂ, ಅವುಗಳ ಸಂಗಮದಿಂದ ಪಾಪಕ್ಕೆ ವ್ಯಥೆಯನ್ನುಂಟುಮಾಡುವುದೂ, ಗಂಗಾನದಿಯಿಂದ ಪ್ರಕಾಶಮಾನವಾದ ಕಾಂತಿಯುಳ್ಳದೂ, ನಿರ್ಮಲಮೋಕ್ಷಲಕ್ಷ್ಮಿಗೆ ಸ್ಥಿರವಾದ ವಿಶ್ರಾಂತಿಭೂಮಿಯೂ, ಆಗಿರುವುದು. ಇದನ್ನು ಬಿಟ್ಟು ಮೂಢ ಪ್ರಾಣಿಯು ಏಕೆ ವ್ಯಥೆಗೊಳ್ಳಬೇಕು?

೮೨. ಎಲೈ ಮೂಢಪ್ರಾಣಿಯೆ! ನೀನು ಗರ್ಭದಿಂದುಂಟಾದ ದುಃಖವನ್ನೂ, ಯಮದೂತರ ಬಂಧನ ಮತ್ತು ತಾಡನವನ್ನೂ ಮರೆತೆಯಾ? ಕೈಯಲ್ಲಿ ಮುಕ್ತಿಯನ್ನು ಹಿಡಿದಿರುವ ಶಿವನ ಅನುಗ್ರಹದಿಂದ ಹೊಂದಲರ್ಹವಾದ ಕಾಶಿಯನ್ನು ಬಿಟ್ಟು ಏಕೆ ಹೋಗುತ್ತಿರುವೆ?

೮೩. ಇತರ ತೀರ್ಥಗಳು ಕೂಡಲೆ ಪಾಪಗಳನ್ನು ಪರಿಹರಿಸುವುವು. ಅತ್ಯಂತ ಶ್ರೇಯಸ್ಸನ್ನೀಯುವುವು. ಸ್ವರ್ಗಕ್ಕೆ ಒಯ್ಯುವುವು. ಕಾಶಿಯಾದರೊ ಪಾನ, ಸ್ನಾನ, ದೇಹತ್ಯಾಗಗಳಿಂದ ಮೂಲನಾಶವನ್ನೇ ಮಾಡುವುದು.

೮೪. ಕಾಶಿಯ ಹತ್ತಿರದಲ್ಲಿರುವ ಮಣಿಕರ್ಣಿಕಾತೀರ್ಥದಲ್ಲಿ ಶರೀರವನ್ನು ತ್ಯಜಿಸಿದ ಪ್ರಾಣಿಗಳು ಅಜ್ಞಾನರಹಿತರಾಗಿ ಹಣೆಗಣ್ಣುಳ್ಳದೂ, ಕಂಠದಲ್ಲಿ ನೀಲಕಾಂತಿಯುಳ್ಳದೂ, ವಾಮಭಾಗದಲ್ಲಿ ಹೆಂಗಸುಳ್ಳದೂ ಆದ ಶರೀರವನ್ನು ಹೊಂದುವುವು.

ಜ್ಞಾತ್ವಾ ಪ್ರಭಾವಮತುಲಂ ಮಣಿಕರ್ಣಿಕಾಯಾಂ
ಯಃ ಪುದ್ಗಲಂ ತ್ಯಜತಿ ಚಾಽಶುಚಿ ಪೂಯಗಂಧಿ ।
ಸ್ವಾತ್ಮಾಽವಬೋಧಮಹಸಾ ಸಹಸಾ ಮಿಲಿತ್ವಾ
ಕಲ್ಪಾಂತರೇಷ್ವಪಿ ಸ ನೈವ ಪೃಥಕ್ತ್ವಮೇತಿ ॥ ೮೫ ॥
ರಾಗಾದಿದೋಷಪರಿಪೂರಮನೋಹೃಷೀಕಾಃ
ಕಾಶೀಪುರೀಮತುಲದಿವ್ಯಮಹಾಪ್ರಭಾವಾಂ ।
ಯೇ ಕಲ್ಪಯಂತ್ಯಪರತೀರ್ಥಸಮಾಂ ಸಮಂತಾ
ತ್ತೇ ಪಾಪಿನೋ ನ ಸಹ ತ್ತೈಃ ಪರಿಭಾಷಣೀಯಂ ॥ ೮೬ ॥
ವಾರಾಣಸೀಂ ಸ್ಮರಹರಪ್ರಿಯರಾಜಧಾನೀಂ
ತ್ಯಕ್ತ್ವಾ ಕುತೋ ವ್ರಜಸಿ ಮೂಢ ದಿಗಂತರೇಷು ।
ಪ್ರಾಪ್ಯಾಽಪ್ಯಜಾದ್ಯಸುಲಭಾಂ ಸ್ಥಿರಮೋಕ್ಷಲಕ್ಷ್ಮೀಂ
ಲಕ್ಷ್ಮೀಂ ಸ್ವಭಾವಚಪಲಾಂ ಕಿಮು ಕಾಮಯೇಥಾಃ ॥ ೮೭ ॥
ವಿದ್ಯಾಧನಾನಿ ಸದನಾನಿ ಗಜಾಽಶ್ವಭೃತ್ಯಾಃ
ಸ್ರಕ್ಚಂದನಾನಿ ವನಿತಾಶ್ಚ ನಿತಾಂತರಮ್ಯಾಃ ।
ಸ್ವರ್ಗೋಽಪ್ಯಗಮ್ಯ ಇಹ ನೋದ್ಯಮಭಾಜಿ ಪುಂಸಿ
ವಾರಾಣಸೀ ತ್ವಸುಲಭಾ ಶಲಭಾದಿಮುಕ್ತಿಃ ॥ ೮೮ ॥

---

೮೫. ಮಾಹಾತ್ಮ್ಯಯನ್ನರಿತು ಮಣಿಕರ್ಣಿಕೆಯಲ್ಲಿ ಅಶುದ್ಧವೂ, ದುರ್ಗಂಧವೂ ಆದ ಶರೀರವನ್ನು ತ್ಯಜಿಸಿದವನು ಸ್ವರೂಪಜ್ಞಾನದಿಂದ ಕೂಡಿ ಕಲ್ಪಾಂತರಗಳಲ್ಲಿಯೂ ಮುಕ್ತನಲ್ಲದೆ ಬೇರೆಯವನಾಗುವುದಿಲ್ಲ.

೮೬. ರಾಗಾದಿದೋಷಗಳಿಂದ ತುಂಬಿದ ಮನಸ್ಸು ಮತ್ತು ಇತರೇಂದ್ರಿಯಗಳುಳ್ಳ ಯಾರೂ ಅಸಮಾನವಾದ ದಿವ್ಯಮಾಹಾತ್ಮ್ಯವುಳ್ಳ ಕಾಶೀಪಟ್ಟಣವನ್ನು ಇತರ ತೀರ್ಥಗಳಿಗೆ ಸಮಾನವೆಂದು ಪರಿಗಣಿಸುವ ಪಾಪಿಗಳೊಡನೆ ಮಾತನಾಡಬಾರದು.

೮೭. ಎಲೈ ಮೂಢ ಮಾನವನೆ! ಶಿವನ ಪ್ರಿಯರಾಜಧಾನಿಯೂ, ಬ್ರಹ್ಮಾದಿದೇವತೆಗಳಿಗೆ ದುರ್ಲಭವೂ, ಸ್ಥಿರವಾದ ಮೋಕ್ಷಲಕ್ಷ್ಮಿಯನ್ನೀಯುವುದೂ, ಆದ ಕಾಶಿಯನ್ನು ಬಿಟ್ಟು ದಿಕ್ಕುದಿಕ್ಕುಗಳಲ್ಲಲೆದು ಸ್ವಭಾವದಿಂದಲೇ ಚಂಚಲವಾದ ಲಕ್ಷ್ಮಿಯನ್ನು (ಧನವನ್ನು) ಏಕೆ ಅಪೇಕ್ಷಿಸುವೆ?

೮೮. ಈ ಲೋಕದಲ್ಲಿ ಮಾನವನು ಪ್ರಯತ್ನಿಸಿದರೆ ವಿದ್ಯೆ, ಧನ, ಮನೆ, ಆನೆ, ಕುದುರೆ, ಸೇವಕರು, ಮಾಲೆ, ಗಂಧ, ಸುಂದರಸ್ತ್ರೀಯರು, ಸ್ವರ್ಗ ಇವು ಹೊಂದಲಶಕ್ಯಗಳಲ್ಲ. ಮಿಡತೆ ಮೊದಲಾದುವುಗಳಿಗೂ ಮುಕ್ತಿಯನ್ನೀಯುವ ಕಾಶಿಯು ಮಾತ್ರ ದುರ್ಲಭವು.

ಧಾತ್ರಾ ಧೃತಾನಿ ತುಲಯಾ ತುಲನಾಯ ಮೈತುಂ
ವೈಕುಂಠಮುಖ್ಯಭುವನಾನಿ ಚ ಕಾಶಿಕಾ ಚ ।
ತಾನ್ಯುದ್ಯಯುರ್ಲಘುತಯಾನ್ಯಗಿಯಂ ಗುರುತ್ವಾ
ತ್ತಸ್ಥೌ ಪುರೀಹ ಪುರುಷಾರ್ಥಚತುಷ್ಟಯಸ್ಯ ॥ ೮೯ ॥
ಕಾಶೀಪುರೀಮಧಿವಸನ್ಸ್ಥಿರೋ ನರೋ ನರೋಽಪಿ
ಹ್ಯಾರೋಪ್ಯಮಾಣ ಇಹ ಮಾನ್ಯ ಇವೈಕರುದ್ರಃ ।
ನಾನೋಪಸರ್ಗಜನಿಸರ್ಗಜದುಃಖಭಾರೈಃ
ಕರ್ಮಾಽಪಸುದ್ಯ ಸ ವಿಶೇತ್ಪರಮೇಶಧಾಮ್ನಿ ॥ ೯೦ ॥
ಸ್ಥಿರಾಽಪಾಯಂ ಕಾಯಂ ಜನನಮರಣಕ್ಲೇಶನಿಲಯಂ
ವಿಹಾಯಾಸ್ಯಾಂ ಕಾಶ್ಯಾಮಹಹ ಪರಿಗೃಹ್ಣೀತ ನ ಕುತಃ ।
ವಪುಸ್ತೇಜೋರೂಪಂ ಸ್ಥಿರತರಪರಾನಂದಸದನಂ
ವಿಮೂಢೋಽಸೌ ಜಂತುಃ ಸ್ಫುಟಿತಮಿವ ಕಾಂಸ್ಯಂ ವಿನಿಮಯೇ
ಅಹೋ ಲೋಕಃ ಶೋಕಂ ಕಿಮಿಹ ಸಹತೇ ಹಂತ ಹತಧೀ
ರ್ವಿಪದ್ಭಾರೈಃ ಸಾರ್ಧೈರ್ನಿಯತನಿಧನೈರ್ಧ್ವಂಸಿತಧನೈಃ ।
ಕ್ಷಿತೌ ಸತ್ಯಾಂ ಕಾಶ್ಯಾಂ ಕಥಯತಿ ಶಿವೋ ಯತ್ರ ನಿಧನೇ
ಶ್ರುತೌ ಕಿಂಚಿದ್ಭೂಯಃ ಪ್ರವಿಶತಿ ನ ಯೋನೋದರದರೀಂ ॥

---

೮೯. ಬ್ರಹ್ಮನು ವೈಕುಂಠವೇ ಮೊದಲಾದ ಲೋಕಗಳನ್ನೂ, ಕಾಶಿಯನ್ನೂ ತೂಗುವುದಕ್ಕಾಗಿ ತಕ್ಕಡಿಯಲ್ಲಿಡಲು ಆ ಲೋಕಗಳೆಲ್ಲ ಭಾರವಿಲ್ಲದ್ದರಿಂದ ಮೇಲಕ್ಕೆ ಹೋದುವು. ಕಾಶಿಯು ಭಾರವಾಗಿದ್ದುದರಿಂದ ಕೆಳಕ್ಕೆ ಹೋಯಿತು.

೯೦. ಕಾಶಿಯಲ್ಲಿ ವಾಸಿಸುವವನೂ, ಸ್ಥಿರವಾಗಿ ನೆಲೆಸುವವನೂ ಆದ ಮಾನವನಾಗಲಿ, ಪಶುವಾಗಲಿ, ತಾಪತ್ರಯಗಳು, ಜನ್ಮಾಂತರ ವಾಸನೆ ಇವುಗಳಿಂದುಂಟಾದ ದುಃಖಗಳಿಂದ ಕರ್ಮವನ್ನು ಪರಿಹರಿಸಿಕೊಂಡು ರುದ್ರನಂತೆ ಪರಂಜ್ಯೋತಿಯನ್ನು ಪ್ರವೇಶಿಸುವರು.

೯೧. ಮೂಢಪ್ರಾಣಿಯು ಸ್ಥಿರವಾದ ಆಪತ್ತುಗಳುಳ್ಳದ್ದೂ, ಜನನಮರಣ ಕ್ಲೇಶಗಳಿಗೆ ಆಶ್ರಯವೂ ಆದ ಈ ಶರೀರವನ್ನು ಈ ಕಾಶಿಯಲ್ಲಿ ತ್ಯಜಿಸಿ ಒಡೆದ ಕಂಚಿನಪಾತ್ರೆಯನ್ನು ಕೊಟ್ಟು ಉತ್ತಮ ಪಾತ್ರೆಯನ್ನು ತೆಗೆದುಕೊಳ್ಳುವಂತೆ ತೇಜೋರೂಪವೂ, ದೃಢಾನಂದನಿಲಯವೂ ಆದ ಶರೀರವನ್ನು ಏಕೆ ಪಡೆದುಕೊಳ್ಳುವುದಿಲ್ಲ?

೯೨. ಶಿವನು ಮರಣಕಾಲದಲ್ಲಿ ಕಿವಿಯಲ್ಲಿ ವಾಙ್ಮನೋತೀತವಾದ ವಸ್ತುವನ್ನು ಉಪದೇಶಿಸಿ ಹೃದಯಗುಹೆಯಲ್ಲಿ ಪ್ರವೇಶಮಾಡಲರ್ಹವಾದ ಕಾಶಿಯಿರಲು ಮೂಢಜನರು ಆಪತ್ತುಗಳಿಂದಲೂ, ಸಾವಿನಿಂದಲೂ, ದ್ರವ್ಯನಾಶಗಳಿಂದಲೂ ಏಕೆ ದುಃಖವನ್ನನುಭವಿಸುವರೊ?

ಕಾಶಿವಾಸಿನಿ ಜನೇ ವನೇಚರೇ
ದ್ವಿತ್ರಿಭುಜ್ಯಪಿ ಸಮೀರಭೋಜನೇ ।
ಸ್ವೈರಚಾರಿಣಿ ಜಿತೇಂದ್ರಿಯೇಽಪ್ಯಹೋ
ಕಾಶಿವಾಸಿನಿ ಜನೇ ವಿಶಿಷ್ಟತಾ ॥ ೯೩ ॥
ನಾಸ್ತೀಹ ದುಷ್ಕೃತಕೃತಾಂ ಸುಕೃತಾತ್ಮನಾಂ ವಾ
ಕಾಚಿದ್ವಿಶೇಷಗತಿರಂತಕೃತಾಂ ಹಿ ಕಾಶ್ಯಾಂ ।
ಬೀಜಾನಿ ಕರ್ಮಜನಿತಾನಿ ಯದೂಷರಾಯಾಂ
ನಾಽಂಕೂರಯಂತಿ ಹರದೃಗ್ಜ್ವಲಿತಾನಿ ತೇಷಾಂ ॥ ೯೪ ॥
ಶಶಕಾ ಮಶಕಾ ಬಕಾಃ ಶುಕಾಃ
ಕಲವಿಂಕಾಶ್ಚ ವೃಕಾಃ ಸಜಂಬುಕಾಃ ।
ತುರಗೋರಗವಾನರಾ ನರಾ
ಗಿರಿಜೇ ಕಾಶಿಮೃತಾಃ ಪರಾಽಮೃತಂ ॥ ೯೫ ॥
ಅರುದ್ರರುದ್ರಾಕ್ಷಫಣೀಂದ್ರಭೂಷಣಾ
ಸ್ತ್ರಿಪುಂಡ್ರಚಂದ್ರಾರ್ಧಧರಾ ಧರಾಂಗತಾಃ ।
ನಿರಂತರಂ ಕಾಶಿನಿವಾಸಿನೋ ಜನಾ
ಗಿರೀಂದ್ರಜೇ ಪಾರಿಷದಾ ಮತಾ ಮಮ ॥ ೯೬ ॥

---

೯೩. ವಾನಪ್ರಸ್ಥಾಶ್ರಮಿಗಳೂ, ಎರಡು ಮೂರು ದಿನಗಳಿಗೊಮ್ಮೆ ಭೋಜನಮಾಡುವವರೂ, ವಾಯುಭಕ್ಷಕರೂ, ಜಿತೇಂದ್ರಿಯರೂ, ಸ್ವೇಚ್ಛಾ ಚಾರಿಗಳೂ ಆಗಿ ಕಾಶಿಯಲ್ಲಿ ವಾಸಿಸುವ ಜನರು ಮತ್ತು ಇತರ ಕ್ಷೇತ್ರದಲ್ಲಿ ವಾಸಿಸುವ ಮಾನವರು ಇವರಲ್ಲಿ ಕಾಶಿವಾಸಿಗಳೇ ಉತ್ತಮರು.

೯೪. ಊಷರಕ್ಷೇತ್ರದಂತಿರುವ ಕಾಶಿಯಲ್ಲಿ ಕರ್ಮಬೀಜಗಳು ಶಿವನ ದೃಷ್ಟಿಯಿಂದ ಬೂದಿಯಾಗುವುದರಿಂದ ಇಲ್ಲಿ ಮೃತರಾದ ಪಾಪಿಗಳಿಗೂ, ಪುಣ್ಯ ಶಾಲಿಗಳಿಗೂ ಉಂಟಾಗುವ ಸದ್ಗತಿಯಲ್ಲಿ ವ್ಯತ್ಯಾಸವಿಲ್ಲ.

೯೫. ಈ ಕಾಶಿಯಲ್ಲಿ ಮೃತರಾದ ಮೊಲ, ಸೊಳ್ಳೆ, ಬಕ, ಗಿಣಿ, ಗುಬ್ಬಚ್ಚಿ, ತೋಳ, ನರಿ, ಕುದುರೆ, ಹಾವು, ಕಪಿ, ಮನುಷ್ಯ ಇವರೆಲ್ಲರೂ ಬ್ರಹ್ಮಸ್ವರೂಪ ವನ್ನು ಹೊಂದುವರು.

೯೬. ಎಲೌ ಪಾರ್ವತಿಯೆ! ಯಾವಾಗಲೂ ಕಾಶಿಯಲ್ಲಿ ವಾಸಿಸುವ ಜನರು ಭಯಂಕರರಲ್ಲದೆ ರುದ್ರಾಕ್ಷಮಾಲೆಗಳೆಂಬ ನಾಗಗಳಿಂದ ಅಲಂಕಾರಗೊಂಡವರೂ, ತ್ರಿಪುಂಡ್ರಗಳೆಂಬ ಅರ್ಧಚಂದ್ರರನ್ನು ಧರಿಸಿದವರೂ, ಭೂಮಿಯನ್ನು ಹೊಂದಿ ದವರೂ ಆದ ನನ್ನ ಪರಿವಾರದವರಾಗಿರುವರು.

ಯಾವಂತ ಏವ ನಿವಸಂತಿ ಚ ಜಂತವೋಽತ್ರ
ಕಾಶ್ಯಾಂ ಜಲಸ್ಥಲಚರಾ ಝುಷಜಂಬುಕಾದ್ಯಾಃ ।
ತಾವಂತ ಏವ ಮದನುಗ್ರಹರುದ್ರದೇಹಾ
ದೇಹಾಽವಸಾನಮಧಿಗಮ್ಯ ಮಯಿ ಪ್ರವಿಷ್ಟಾಃ ॥ ೯೭ ॥
ಯೇ ತು ವರ್ಷೇಷವೋ ರುದ್ರಾ ದಿವಿ ದೇವಿ ಪ್ರಕೀರ್ತಿತಾಃ ।
ವಾತೇಷವೋಽಂತರಿಕ್ಷೇ ಯೇ ಯೇ ಭುವ್ಯನ್ನೇಷವಃ ಪ್ರಿಯೇ ॥ ೯೮ ॥
ರುದ್ರಾ ದಶ ದಶ ಪ್ರಾಚ್ಯವಾಚೀ ಪ್ರತ್ಯಗುದಕ್‌ಸ್ಥಿತಾಃ ।
ಊರ್ಧ್ವದಿಕ್ಸ್ಥಾಶ್ಚ ಯೇ ರುದ್ರಾಃ ಪಠ್ಯಂತೇ ವೇದವಾದಿಭಿಃ ॥ ೯೯ ॥
ಅಸಂಖ್ಯಾತಾಃ ಸಹಸ್ರಾಣಿ ಯೇ ರುದ್ರಾ ಅಧಿ ಭೂತಲೇ ।
ತತ್ಸರ್ವೇಭ್ಯೋಽಧಿಕಾಃ ಕಾಶ್ಯಾಂ ಜಂತವೋ ರುದ್ರರೂಪಿಣಃ ॥ ೧೦೦ ॥
ರುದ್ರಾವಾಸಸ್ತತಃ ಪ್ರೋಕ್ತಮವಿಮುಕ್ತಂ ಘಟೋದ್ಭವ ।
ತಸ್ಮಾತ್ಸಮರ್ಚ್ಯ ಕಾಶಿಸ್ಥಾನ್ ವರ್ಣಾನ್ಸರ್ಣೇತರಾಶ್ರಮಾನ್ ॥ ೧೦೧ ॥
ಶ್ರದ್ಧಯೇಶ್ವರಬುದ್ಧ್ಯಾ ಚ ರುದ್ರಾರ್ಚಾಫಲಭಾಙ್ನರಃ ॥ ೧೦೨ ॥
ಶ್ಮಶಬ್ದೇನ ಶವಃ ಪ್ರೋಕ್ತಃ ಶಾನಂ ಶಯನಮುಚ್ಯತೇ ।
ನಿರ್ವಚಂತಿ ಶ್ಮಶಾನಾರ್ಥಂ ಮುನೇ ಶಬ್ದಾರ್ಥಕೋವಿದಾಃ ॥ ೧೦೩ ॥

---

೯೭. ಕಾಶಿಯಲ್ಲಿ ಸಮಸ್ತ ಜಲಸ್ಥಳಗಳಲ್ಲಿ ವಾಸಿಸುವ ಮೀನು ನರಿ ಮೊದಲಾದುವುಗಳು ಕೂಡ ಮಡಿದು ನನ್ನ ಅನುಗ್ರಹದಿಂದ ನನ್ನಂತೆಯೆ ದೇಹವುಳ್ಳವುಗಳಾಗಿ ನನ್ನಲ್ಲಿ ಪ್ರವೇಶಿಸುವುವು.

೯೮–೧೦೦. ದೇವಿ! ಸ್ವರ್ಗದಲ್ಲಿರುವ ಮಳೆಯೆ ಬಾಣವಾಗುಳ್ಳ ರುದ್ರರಿಗಿಂತಲೂ, ಆಕಾಶದಲ್ಲಿರುವ ಗಾಳಿಯೆ ಬಾಣವಾಗುಳ್ಳ ರುದ್ರರಿಗಿಂತಲೂ, ಭೂಮಿಯಲ್ಲಿರುವ ಅನ್ನೇಷುಗಳಾದ ರುದ್ರರಿಗಿಂತಲೂ, ವೇದಜ್ಞರು ಹೇಳುವ ಪೂರ್ವ ಪಶ್ಚಿಮ ಉತ್ತರ ದಕ್ಷಿಣ ಊರ್ಧ್ವ ದಿಕ್ಕುಗಳಲ್ಲಿರುವ ರುದ್ರರಿಗಿಂತಲೂ, ಭೂನಿವಾಸಿಗಳಾದ ಅನೇಕ ಸಹಸ್ರ ಸಂಖ್ಯೆಯ ರುದ್ರರಿಗಿಂತಲೂ ಕಾಶಿಯಲ್ಲಿ ವಾಸಿಸುವ ರುದ್ರರೂಪಿಗಳಾದ ಜಂತುಗಳು ಶ್ರೇಷ್ಠವಾದುವು.''

೧೦೧–೧೦೨. ಎಲೈ ಅಗಸ್ತ್ಯನೆ! ಆದ್ದರಿಂದ ಈ ಅವಿಮುಕ್ತಕ್ಷೇತ್ರವು ರುದ್ರಾವಾಸವೆನ್ನಿಸಿಕೊಳ್ಳುವುದು. ಆದ್ದರಿಂದ ಕಾಶಿಯಲ್ಲಿರುವ ವರ್ಣಾಶ್ರಮಿಗಳನ್ನೂ, ಇತರರನ್ನೂ ಶ್ರದ್ಧೆಯಿಂದ ಈಶ್ವರನೆಂದರಿತು ಪೂಜಿಸಿದವರು ರುದ್ರರನ್ನು ಪೂಜಿಸಿದ ಫಲವನ್ನು ಪಡೆಯುವರು.

೧೦೩. ಮುನಿಯೆ! ಶಬ್ದಾರ್ಥನಿಪುಣರು ಶ್ಮಶಬ್ದಕ್ಕೆ ಶವವೆಂದೂ, ಶಾನಶಬ್ದಕ್ಕೆ ಶಯನವೆಂದೂ ಶ್ಮಶಾನಶಬ್ದದ ಅರ್ಥವನ್ನು ನಿರ್ವಚನಮಾಡುವರು.

ಮಹಾಂತ್ಯಪಿ ಚ ಭೂತಾನಿ ಪ್ರಲಯೇ ಸಮುಪಸ್ಥಿತೇ ।
ಶೇರತೇಽತ್ರ ಶವಾ ಭೂತ್ವಾ ಶ್ಮಶಾನಂ ತು ತತೋ ಮಹತ್ ॥ ೧೦೪ ॥
ಅಪ್ಸು ಭೂರಿಹ ಲಯೇ ಲಯಂ ವ್ರಜೇ
ದಾಪ ಔರ್ವವದನೋಗ್ರಕಂದರೇ ।
ಮಾತರಿಶ್ವನಿ ಮಹಾತನೂನಪಾ
ದ್ವ್ಯೋಮ್ನಿ ಸಂಕ್ಷಯತಿ ವೈ ಸದಾಗತಿಃ ॥ ೧೦೫ ॥
ವ್ಯೋಮಗಾಽಪಿ ಲಯಮೇತ್ಯಹಂಕೃತೌ
ಸಾಽಪಿ ಷೋಡಶವಿಕಾರಸಂಯುತಾ ।
ಲೀಯತೇ ಮಹತಿ ಬುದ್ಧಿಸಂಜ್ಞಕೇ
ಹಾ ಮಹಾನ್ಪ್ರಕೃತಿಮಧ್ಯಗೋ ಭವೇತ್ ॥ ೧೦೬ ॥
ಸಾ ಗುಣತ್ರಯಮಯೀ ಚ ನಿರ್ಗುಣಂ
ತಂ ಪುಮಾಂಸಮುಪಗುಹ್ಯ ತಿಷ್ಠತಿ ।
ಪಂಚವಿಂಶತಿತರಃ ಪರಃ ಪುಮಾನ್
ದೇಹಗೇಹಪತಿರೇಷ ಜೀವಕಃ ॥ ೧೦೭ ॥
ಪ್ರಾಕೃತಃ ಪ್ರಲಯ ಏಷ ಉಚ್ಯತೇ
ಹಂಸಯಾನಹರಿರುದ್ರವರ್ಜಿತಃ ।
ಕಾಲಮೂರ್ತಿರಥ ತಂ ಚ ಪೂರುಷಂ
ಹೇಲಯಾ ಕಲಯತೀಶ್ವರಃ ಪರಃ ॥ ೧೦೮ ॥

---

೧೦೪. ಪ್ರಳಯಕಾಲವು ಬರಲು ಮಹಾಭೂತಗಳೂ ಇಲ್ಲಿ ಶವವಾಗಿ ಮಲಗುವುದರಿಂದ ಇದು ಮಹಾಶ್ಮಶಾನವಾಗಿರುವುದು.

೧೦೫–೧೦೭. ಈ ಅವಿಮುಕ್ತಕ್ಷೇತ್ರದಲ್ಲಿ ಭೂಮಿಯು ನೀರಿನಲ್ಲಿಯೂ, ನೀರು ಅಗ್ನಿಯ ಜಠರದಲ್ಲಿಯೂ, ಅಗ್ನಿಯು ಗಾಳಿಯಲ್ಲಿಯೂ, ಗಾಳಿಯು ಆಕಾಶದಲ್ಲಿಯೂ, ಆಕಾಶವು ಅಹಂಕಾರತತ್ವದಲ್ಲಿಯೂ, ಹದಿನಾರು ವಿಕಾರಗಳಿಂದ ಸಹಿತವಾದ ಅಹಂಕಾರವು ಬುದ್ಧಿಯೆಂಬ ಮಹತ್ತತ್ವದಲ್ಲಿಯೂ, ಮಹತ್ತತ್ವವು ಪ್ರಕೃತಿಯಲ್ಲಿಯೂ, ಗುಣತ್ರಯಸಹಿತವಾದ ಪ್ರಕೃತಿಯು ನಿರ್ಗುಣ ಪುರುಷನಲ್ಲಿಯೂ ಅಡಗುವುವು. ಇಪ್ಪತ್ತೈದನೆಯವನಾದ ಆ ಪುರುಷನು ದೇಹವೆಂಬ ಮನೆಗೆ ಒಡೆಯನಾದ ಜೀವನು.

೧೦೮. ಇದು ಬ್ರಹ್ಮ, ವಿಷ್ಣು, ರುದ್ರರನ್ನು ಬಿಟ್ಟ ಪ್ರಾಕೃತಪ್ರಳಯವಾಗಿರುವುದು. ಪ್ರಳಯಕಾರಕನಾದ ರುದ್ರನು ಅನಾಯಾಸವಾಗಿ ಆ ಪರಮಪುರುಷನನ್ನು ಸೇರುವನು.

ಸ ವೈ ಮಹಾವಿಷ್ಣುರಿತೀರ್ಯತೇ ಬುಧೈ
ಸ್ತಂ ವೈ ಮಹಾದೇವಮುದಾಹರಂತಿ ।
ಸೋಽಂತಾದಿಮಧ್ಯೈಃ ಪರಿವರ್ಜಿತಃ ಶಿವಃ
ಸ ಶ್ರೀಪತಿಃ ಸೋಽಪಿ ಹಿ ಪಾರ್ವತೀಪತಿಃ ॥ ೧೦೯ ॥
ದೈನಂದಿನೇಽಥ ಪ್ರಲಯೇ ತ್ರಿಶೂಲ
ಕೋಟೌ ಸಮುತ್ಕ್ಷಿಪ್ಯ ಪುರೀಂ ಹರಃ ಸ್ವಾಂ ।
ಬಿಭರ್ತಿ ಸಂವರ್ತಮಹಾಽಸ್ಥಿಭೂಷಣ
ಸ್ತತೋ ಹಿ ಕಾಶೀ ಕಲಿಕಾಲವರ್ಜಿತಾ ॥ ೧೧೦ ॥

ಸ್ಕಂದ ಉವಾಚ :—

ವಾರಾಣಸೀತಿ ಕಾಶೀತಿ ರುದ್ರಾವಾಸ ಇತಿ ದ್ವಿಜ ।
ಮಹಾಶ್ಮಶಾನಮಿತ್ಯೇವಂ ಪ್ರೋಕ್ತಮಾನಂದಕಾನನಂ ॥ ೧೧೧ ॥
ಇತಿ ದೇವೀಪುರಃ ಪ್ರೋಕ್ತಂ ದೇವದೇವೇನ ಶಂಭುನಾ ।
ಯಥಾ ವಿಷ್ಣೋಃ ಪುರಾಽಽಖ್ಯಾತಂ ತಥೈವ ಚ ಮಯಾ ಶ್ರುತಂ ।
ತಚ್ಚ ತ್ವದಗ್ರೇ ಕಥಿತಂ ರಹಸ್ಯಂ ಕಾಶಿಜಂ ಮಹತ್ ॥ ೧೧೨ ॥
ಜಪ್ತ್ವಾಽಧ್ಯಾಯಮಿಮಂ ಪುಣ್ಯಂ ಮಹಾಪಾತಕನಾಶನಂ ।
ಶ್ರಾವಯಿತ್ವಾ ದ್ವಿಜಾನ್ಸಮ್ಯಕ್ ಶಿವಲೋಕೇ ಮಹೀಯತೇ ॥ ೧೧೩ ॥

---

೧೦೯. ವಿದ್ವಾಂಸರು ಅವನನ್ನೇ ಮಹಾವಿಷ್ಣುವೆಂದೂ, ಮಹಾದೇವನೆಂದೂ, ಹೇಳುತ್ತಾರೆ. ಆದಿಮಧ್ಯಾಂತರಹಿತನಾದ ಆ ಶಿವನೇ ಲಕ್ಷ್ಮೀಪತಿಯೂ, ಪಾರ್ವತೀಪತಿಯೂ ಆಗಿರುವನು.

೧೧೦. ಅನೇಕ ಅಸ್ಥಿಗಳಿಂದ ಅಲಂಕೃತನಾದ ಮಹೇಶ್ವರನು ಪ್ರತಿದಿನದ ಪ್ರಳಯಕಾಲದಲ್ಲಿಯೂ ತನ್ನ ಪಟ್ಟಣವಾದ ಕಾಶಿಯನ್ನು ತ್ರಿಶೂಲದ ಕೊನೆಯಲ್ಲಿ ಎತ್ತಿ ರಕ್ಷಿಸುತ್ತಾನೆ. ಆದ್ದರಿಂದ ಕಾಶಿಯು ಮೃತ್ಯುವಿಲ್ಲುದುದು.

೧೧೧. ಸ್ಕಂದನು ಹೇಳುತ್ತಾನೆ:—ಆನಂದಕಾನನವನ್ನು ವಾರಾಣಸೀ, ಕಾಶೀ, ರುದ್ರಾವಾಸ, ಮಹಾಶ್ಮಶಾನ ಎಂದು ಕರೆಯುತ್ತಾರೆ.

೧೧೨. ಮುನಿಯೆ ! ಹೀಗೆ ಪೂರ್ವದಲ್ಲಿ ಶಿವನು ದೇವಿಯ ಮುಂದೆ ವಿಷ್ಣುವಿಗೆ ಹೇಳಿರುವ ಹಾಗೆಯೇ ನಾನು ಕೇಳಿರುವ ಕಾಶಿಯ ಮಹಾರಹಸ್ಯವನ್ನು ನಿನಗೀಗ ಹೇಳಿರುವೆನು.

೧೧೩. ಪುಣ್ಯಕರವೂ, ಮಹಾಪಾತಕಗಳನ್ನು ನೀಗಿಸುವುದೂ ಆದ ಈ ಅಧ್ಯಾಯವನ್ನು ಜಪಿಸಿದವನೂ, ದ್ವಿಜರಿಗೆ ಹೇಳಿದವನೂ ಶಿವಲೋಕದಲ್ಲಿ ಪೂಜ್ಯನಾಗುವನು.

**ಅತಃ ಪರಂ ಕಲಶಜ ಕಿಂ ಶುಶ್ರೂಷಸಿ ತದ್ವದ ।**
**ಕಾಶೀಕಥಾ ಕಥ್ಯಮಾನಾ ಮಮಾಽಪಿ ಪರಿತೋಷಕೃತ್ ॥ ೧೧೪ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ವಾರಾಣಸೀಮಹಿಮಾನುವರ್ಣನಂ" ನಾಮ ತ್ರಿಂಶೋಽಧ್ಯಾಯಃ**

---

೧೧೪. ಅಗಸ್ತ್ಯನೆ! ಇನ್ನು ಮುಂದೆ ಏನನ್ನು ಕೇಳಲು ಬಯಸುವೆ? ಕಾಶೀಕಥೆಯನ್ನು ಹೇಳಿದರೆ ಅದು ನನಗೂ ಸಂತೋಷವನ್ನುಂಟುಮಾಡುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ವಾರಾಣಸೀಮಹಿಮಾನುವರ್ಣನ"ವೆಂಬ
ಮೂವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕತ್ರಿಂಶೋಽಧ್ಯಾಯಃ

### ಭೈರವಪ್ರಾದುರ್ಭಾವವರ್ಣನಂ

**ಅಗಸ್ತ್ಯ ಉವಾಚ :—**

**ಸರ್ವಜ್ಞಹೃದಯಾನಂದ ಸ್ಕಂದ ಸ್ಕಂದಿತತಾರಕ ।**
**ನ ತೃಪ್ತಿಮಧಿಗಚ್ಛಾಮಿ ಶೃಣ್ವನ್ವಾರಾಣಸೀಕಥಾಂ ॥ ೧ ॥**
**ಅನುಗ್ರಹೋ ಯದಿ ಮಯಿ ಯೋಗ್ಯೋಽಸ್ಮಿ ಶ್ರವಣೇ ಯದಿ ।**
**ತದಾ ಕಥಯ ಮೇ ನಾಥ ಕಾಶ್ಯಾಂ ಭೈರವಸಂಕಥಾಂ ॥ ೨ ॥**
**ಕೋಽಸೌ ಭೈರವನಾಮಾತ್ರ ಕಾಶೀಪುರ್ಯಾಂ ವ್ಯವಸ್ಥಿತಃ ।**
**ಕಿಂ ರೂಪಮಸ್ಯ ಕಿಂ ಕರ್ಮ ಕಾನಿ ನಾಮಾನಿ ಚಾಽಸ್ಯ ವೈ ॥ ೩ ॥**
**ಕಥಮಾರಾಧಿತಶ್ಚೈವ ಸಿದ್ಧಿದಃ ಸಾಧಕಸ್ಯ ವೈ ।**
**ಆರಾಧಿತಃ ಕುತ್ರ ಕಾಲೇ ಕ್ಷಿಪ್ರಂ ಸಿದ್ಧ್ಯತಿ ಭೈರವಃ ॥ ೪ ॥**

**ಸ್ಕಂದ ಉವಾಚ :—**

**ವಾರಾಣಸ್ಯಾಂ ಮಹಾಭಾಗ ಯಥಾ ತೇ ಪ್ರೇಮ ವರ್ತತೇ ।**
**ತಥಾ ನ ಕಸ್ಯ ಚಿನ್ಮನ್ಯೇ ತತೋ ವಕ್ಷ್ಯಾಮ್ಯಶೇಷತಃ ॥ ೫ ॥**

---

### ಕನ್ನಡದ ಅನುವಾದ

#### ಭೈರವಪ್ರಾದುರ್ಭಾವವರ್ಣನ

೧. ಅಗಸ್ತ್ಯನು ಹೇಳುತ್ತಾನೆ:—ಸರ್ವಜ್ಞನೂ, ಮನಸ್ಸಿಗೆ ಆನಂದವನ್ನುಂಟುಮಾಡುವವನೂ, ತಾರಕಾಸುರನನ್ನು ಕೊಂದವನೂ ಆದ ಎಲೈ ಷಣ್ಮುಖನೆ! ನಾನು ಕಾಶಿಯ ಕಥೆಯನ್ನು ಕೇಳುತ್ತ ತೃಪ್ತಿಯನ್ನು ಹೊಂದುವುದಿಲ್ಲ.

೨. ನಾಥ! ನಾನು ಅನುಗ್ರಹಕ್ಕೆ ಯೋಗ್ಯನಾಗಿದ್ದರೆ, ಕೇಳಲು ಯೋಗ್ಯನಾದರೆ ನನಗೆ ಕಾಶಿಯಲ್ಲಿ ನೆಲಸಿರುವ ಭೈರವನ ಕಥೆಯನ್ನು ಹೇಳು.

೩. ಈ ಭೈರವನಾರು? ಇವನ ಸ್ವರೂಪವು ಹೇಗಿರುವುದು? ಇವನ ಕಾರ್ಯವಾವುದು? ಇವನ ಹೆಸರುಗಳಾವುವು?

೪. ಹೇಗೆ ಪೂಜಿಸಿದರೆ ಇವನು ಭಕ್ತನಿಗೆ ಸಿದ್ಧಿಯನ್ನೀಯುವನು? ಯಾವ ಸಮಯದಲ್ಲಿ ಪೂಜಿಸಿದರೆ ಶೀಘ್ರವಾಗಿ ಸಿದ್ಧಿಯನ್ನೀಯುವನು?

೫. ಸ್ಕಂದನು ಹೇಳುತ್ತಾನೆ:—ಮಹಾತ್ಮನೆ! ನಿನಗೆ ಕಾಶಿಯಲ್ಲಿ ಪ್ರೀತಿಯಿದ್ದಂತೆ ಬೇರೆ ಯಾವನೊಬ್ಬನಿಗೂ ಇಲ್ಲವೆಂದು ತಿಳಿಯುತ್ತೇನೆ. ಆದ್ದರಿಂದ **ಈ ಕಾಶೀಮಾಹಾತ್ಮ್ಯವನ್ನು ಸಂಪೂರ್ಣವಾಗಿ ನಿನಗೆ ಹೇಳುವೆನು.**

ಪ್ರಾದುರ್ಭಾವಂ ಭೈರವಸ್ಯ ಮಹಾಪಾತಕನಾಶನಂ ।
ಯಚ್ಛ್ರುತ್ವಾ ಕಾಶಿವಾಸಸ್ಯ ಫಲಂ ನಿರ್ವಿಘ್ನಮಾಪ್ನುಯಾತ್ ॥ ೬ ॥
ಪಾಣಿಭ್ಯಾಂ ಪರಿತಃ ಪ್ರಪೀಡ್ಯ ಸುದೃಢಂ ನಿಶ್ಚೋತ್ಯ ನಿಶ್ಚೋತ್ಯ ಚ
ಬ್ರಹ್ಮಾಂಡಂ ಸಕಲಂ ಪಚೇಲಿಮರಸಾಲೋಚ್ಚೈಃ ಫಲಾಭಂ ಮುಹುಃ ।
ಪಾಯಂಪಾಯಮಪಾಯತಸ್ತ್ರಿಜಗತೀಮುನ್ಮತ್ತವತ್ತೈರಸೈ
ರ್ನೃತ್ಯಂಸ್ತಾಂಡವಡಂಬರೇಣ ವಿಧಿನಾ ಪಾಯಾನ್ಮಹಾಭೈರವಃ ॥ ೭ ॥
ಕುಂಭಯೋನೇ ನ ವೇತ್ತ್ಯೇವ ಮಹಿಮಾನಂ ಮಹೇಶಿತುಃ ।
ಚತುರ್ಭುಜೋಽಪಿ ವೈಕುಂಠಶ್ಚತುರ್ವಕ್ತ್ರೋಽಪಿ ವಿಶ್ವಕೃತ್ ॥ ೮ ॥
ನ ಚಿತ್ರಮತ್ರ ಭೂದೇವ ಭವಮಾಯಯಾ ದುರತ್ಯಯಾ ।
ತಯಾ ಸಂಮೋಹಿತಾಃ ಸರ್ವೇ ನಾವಯಂತ್ಯಪಿ ತಂ ಪರಂ ॥ ೯ ॥
ವೇದಯೇದ್ಯದಿ ಚಾತ್ಮಾನಂ ಸ ಏವ ಪರಮೇಶ್ವರಃ ।
ತದಾ ವಿಂದಂತಿ ಬ್ರಹ್ಮಾದ್ಯಾಃ ಸ್ವೇಚ್ಛಯೈವ ನ ತಂ ವಿದುಃ ॥ ೧೦ ॥
ಸ ಸರ್ವಗೋಽಪಿ ನೇಕ್ಷ್ಯೇತ ಸ್ವಾತ್ಮಾರಾಮೋ ಮಹೇಶ್ವರಃ ।
ದೇವವದ್ಧ್ರುಧ್ಯತೇ ಮೂಢೈರತೀತೋ ಯೋ ಮನೋಗಿರಾಂ ॥ ೧೧ ॥

---

೬. ಮಹಾ ಪಾತಕವನ್ನು ನಿವಾರಿಸುವ ಭೈರವನ ಪ್ರಾದುರ್ಭಾವವನ್ನು ಕೇಳಿದವನು ಕಾಶೀವಾಸದ ಫಲವನ್ನು ನಿರ್ವಿಘ್ನವಾಗಿ ಹೊಂದುವನು.

೭. ಪಕ್ವವಾದ ಮಾವಿನ ಹಣ್ಣಿನಂತಿರುವ ಬ್ರಹ್ಮಾಂಡವನ್ನು ಗಟ್ಟಿಯಾಗಿ ಕೈಗಳಿಂದ ಒತ್ತಿ ರಸವನ್ನು ಹಿಂಡಿ ಅದನ್ನು ಕುಡಿದು ಆ ಬ್ರಹ್ಮಾಂಡದಲ್ಲಿರುವ ಭೂತರಸಗಳಿಂದ ಹುಚ್ಚನಂತೆ ನೃತ್ಯಾಟೋಪದಿಂದ ಕುಣಿಯುತ್ತಿರುವ ಮಹಾ ಭೈರವನು ಮೂರು ಲೋಕಗಳನ್ನು ಅಪಾಯದಿಂದ ಪಾರುಮಾಡಲಿ.

೮. ಎಲೈ ಅಗಸ್ತ್ಯನೆ! ಮಹೇಶ್ವರನ ಮಹಿಮೆಯನ್ನು ಚತುರ್ಭುಜನಾದ ನಾರಾಯಣನೂ, ಚತುರ್ಮುಖನಾಗಿ ಪ್ರಪಂಚವನ್ನು ಸೃಜಿಸುವ ಬ್ರಹ್ಮನೂ ಅರಿತಿರುವುದಿಲ್ಲ.

೯. ಇದು ಆಶ್ಚರ್ಯವಲ್ಲ. ಶಿವನ ಮಾಯೆಯನ್ನು ಅತಿಕ್ರಮಿಸಲು ಯಾರಿಗೂ ಸಾಧ್ಯವಿಲ್ಲ. ಆ ಮಾಯೆಯಿಂದ ಮೋಹಗೊಂಡ ಸಮಸ್ತ ಜನರೂ ಸರ್ವೋತ್ತಮನಾದ ಅವನನ್ನು ನೋಡಲು ಸಮರ್ಥರಾಗುವುದಿಲ್ಲ.

೧೦. ಆತ್ಮನನ್ನು ಅರಿತರೆ ಮಾನವನು ಮಹೇಶ್ವರನಾಗುವನು. ಆಗ ಅವನನ್ನು ಬ್ರಹ್ಮಾದಿಗಳೂ ತಿಳಿಯುವರು. ಅವರು ತಮ್ಮ ಇಚ್ಛೆಯಿಂದಲೇ ಅವನನ್ನು ಅರಿಯುವುದಿಲ್ಲ.

೧೧. ಸ್ವಾತ್ಮಾರಾಮನಾದ ಮಹೇಶ್ವರನು ಸರ್ವತ್ರ ಇದ್ದರೂ ಕಾಣಿಸುವುದಿಲ್ಲ. ವಾಙ್ಮನಸ್ಸುಗಳಿಗೆ ಗೋಚರನಲ್ಲದ ಅವನನ್ನು ಮೂಢರು ಇತರ ದೇವತೆಯಂತೆ ಭಾವಿಸುತ್ತಾರೆ.

ಪುರಾ ಪಿತಾಮಹಂ ವಿಪ್ರ ಮೇರುಶೃಂಗೇ ಮಹರ್ಷಯಃ ।
ಪ್ರೋಚುಃ ಪ್ರಣಮ್ಯ ಲೋಕೇಶಂ ಕಿಮೇಕಂ ತತ್ತ್ವಮವ್ಯಯಂ ॥ ೧೨ ॥
ಸ ಮಾಯಯಾ ಮಹೇಶಸ್ಯ ಮೋಹಿತೋ ಲೋಕಸಂಭವಃ ।
ಅವಿಜ್ಞಾಯ ಪರಂ ಭಾವಮಾತ್ಮಾನಂ ಪ್ರಾಹ ವರ್ಷಿಣಂ ॥ ೧೩ ॥
ಜಗದ್ಯೋನಿರಹಂ ಧಾತಾ ಸ್ವಯಂಭೂರೇಕ ಈಶ್ವರಃ ।
ಅನಾದಿಮದಹಂ ಬ್ರಹ್ಮ ಮಾಮನರ್ಚ್ಯ ನ ಮುಚ್ಯತೇ ॥ ೧೪ ॥
ಪ್ರವರ್ತಕೋ ಹಿ ಜಗತಾಮಹಮೇಕೋ ನಿವರ್ತಕಃ ।
ನಾಽನ್ಯೋ ಮದಧಿಕಃ ಸತ್ಯಂ ಕಶ್ಚಿತ್ಕೋಽಪಿ ಸುರೋತ್ತಮಾಃ ॥ ೧೫ ॥
ತಸ್ಯೈವಂ ಬ್ರುವತೋ ಧಾತುಃ ಕ್ರತುರ್ನಾರಾಯಣಾಂಶಜಃ ।
ಪ್ರೋವಾಚ ಪ್ರಹಸನ್ವಾಕ್ಯಂ ರೋಷತಾಮ್ರವಿಲೋಚನಃ ॥ ೧೬ ॥
ಅವಿಜ್ಞಾಯ ಪರಂ ತತ್ತ್ವಂ ಕಿಮೇತತ್ಪ್ರತಿಪಾದ್ಯತೇ ।
ಅಜ್ಞಾನಂ ಯೋಗಯುಕ್ತಸ್ಯ ನ ಚೈತದುಚಿತಂ ತವ ॥ ೧೭ ॥
ಅಹಂ ಕರ್ತಾ ಹಿ ಲೋಕಾನಾಂ ಯಜ್ಞೋ ನಾರಾಯಣಃ ಪರಃ ।
ನ ಮಾಮನಾದೃತ್ಯ ವಿಧೇ ಜೀವನಂ ಜಗತಾಮಜ ॥ ೧೮ ॥

---

೧೨. ಹಿಂದೆ ಮಹರ್ಷಿಗಳು ಮೇರುಶೃಂಗದಲ್ಲಿರುವ ಬ್ರಹ್ಮನನ್ನು ನಮಸ್ಕರಿಸಿ ನಾಶರಹಿತವಾದ ಅದ್ವಿತೀಯ ತತ್ತ್ವವು ಯಾವುದು? ಎಂದು ಕೇಳಿದರು.

೧೩. ಸೃಷ್ಟಿಕರ್ತನಾದ ಆ ಬ್ರಹ್ಮನು ಮಹೇಶ್ವರನ ಮಾಯೆಯಿಂದ ಮೋಹಿತನಾಗಿ ಪರಮಾತ್ಮನನ್ನರಿಯದೆ ತಾನೇ ಶ್ರೇಷ್ಠನೆಂದನು.

೧೪. "ನಾನು ಜಗತ್ತಿಗೆ ಕಾರಣನೂ, ಸೃಷ್ಟಿಕರ್ತನೂ, ಸ್ವಯಂಭುವೂ, ಅದ್ವಿತೀಯನೂ, ಈಶ್ವರನೂ, ಅನಾದಿಯೂ ಆದ ಬ್ರಹ್ಮನಾಗಿರುವೆನು. ನನ್ನನ್ನು ಪೂಜಿಸದವನು ಮುಕ್ತನಾಗುವುದಿಲ್ಲ.

೧೫. ನಾನೊಬ್ಬನೇ ಜಗತ್ತನ್ನು ಸೃಜಿಸುವವನೂ, ನಾಶಗೊಳಿಸುವವನೂ ಆಗಿರುವೆನು. ನನಗಿಂತ ಅಧಿಕನಾದ ಬೇರೆ ಯಾವನೊಬ್ಬನೂ ಸತ್ಯವಾಗಿಯೂ ಇರುವುದಿಲ್ಲ."

೧೬. ಬ್ರಹ್ಮನು ಹೀಗೆ ಹೇಳುತ್ತಿರಲು ನಾರಾಯಣನ ಅಂಶದಿಂದ ಹುಟ್ಟಿದ ಕ್ರತುವು ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ನಗುತ್ತ ಇಂತೆಂದನು.

೧೭. "ಬ್ರಹ್ಮ! ನೀನು ಪರತತ್ತ್ವವನ್ನರಿಯದೆ ಏಕೆ ಹೀಗೆನ್ನುವೆ? ಯೋಗಿಯಾದ ನಿನಗೆ ಈ ಅಜ್ಞಾನವು ಉಚಿತವಲ್ಲ.

೧೮. ಅಯ್ಯಾ ಬ್ರಹ್ಮನೆ! ಯಜ್ಞಸ್ವರೂಪಿಯೂ, ನಾರಾಯಣನೂ ಆದ ನಾನು ಲೋಕಕರ್ತನು. ನನ್ನ ಆಶ್ರಯವಿಲ್ಲದೆ ಪ್ರಪಂಚವು ಬದುಕಲಾರದು.

ಅಹಮೇವ ಪರಂಜ್ಯೋತಿರಹಮೇವ ಪರಾ ಗತಿಃ ।
ಮತ್ಪ್ರೇರಿತೇನ ಭವತಾ ಸೃಷ್ಟಿರೇಷಾ ವಿಧೀಯತೇ ॥ ೧೯ ॥
ಏವಂ ವಿಪ್ರಕೃತೌ ಮೋಹಾತ್ಪರಸ್ಪರಜಯೈಷಿಣೌ ।
ಪಪ್ರಚ್ಛತುಃ ಪ್ರಮಾಣಜ್ಞಾನಾಗಮಾಂಶ್ಚತುರೋಽಪಿ ತೌ ॥ ೨೦ ॥

ವಿಧಿಕ್ರತೂ ಊಚತುಃ :—

ವೇದಾಃ ಪ್ರಮಾಣಂ ಸರ್ವತ್ರ ಪ್ರತಿಷ್ಠಾಂ ಪರಮಾಮಿತಾಃ ।
ಯೂಯಮೇವ ನ ಸಂದೇಹಃ ಕಿಂ ತತ್ತ್ವಂ ಪ್ರತಿತಿಷ್ಠತ ॥ ೨೧ ॥

ಶ್ರುತಯ ಊಚುಃ :—

ಯದಿ ಮಾನ್ಯಾ ವಯಂ ದೇವೌ ಸೃಷ್ಟಿಸ್ಥಿತಿಕರೌ ವಿಭೂ ।
ತದಾ ಪ್ರಮಾಣಂ ವಕ್ಷ್ಯಾಮೋ ಭವತ್ಸಂದೇಹಭೇದಕಂ ॥ ೨೨ ॥
ಶ್ರುತ್ಯುಕ್ತಮಿದಮಾಕರ್ಣ್ಯ ಪ್ರೋಚತುಸ್ತೌ ಶ್ರುತೀಃ ಪ್ರತಿ ।
ಯುಷ್ಮದುಕ್ತಂ ಪ್ರಮಾಣಂ ನೌ ಕಿಂ ತತ್ತ್ವಂ ಸಮ್ಯಗುಚ್ಯತಾಂ ॥ ೨೩ ॥

ಋಗುವಾಚ :—

ಯದಂತಸ್ಥಾನಿ ಭೂತಾನಿ ಯತಃ ಸರ್ವಂ ಪ್ರವರ್ತತೇ ।
ಯದಾಹುಸ್ತತ್ಪರಂ ತತ್ತ್ವಂ ಸ ರುದ್ರಸ್ತ್ವೇಕ ಏವ ಹಿ ॥ ೨೪ ॥

---

೧೯. ನಾನೇ ಪರಂಜ್ಯೋತಿಯು. ನಾನೇ ಉತ್ತಮಗತಿಯು. ನನ್ನ ಪ್ರೇರಣೆಯಿಂದಲೇ ನೀನು ಪ್ರಪಂಚವನ್ನು ಸೃಜಿಸುವೆ.''

೨೦. ಹೀಗೆ ಅಜ್ಞಾನದಿಂದ ವಿರುದ್ಧಾಭಿಪ್ರಾಯವುಳ್ಳವರೂ, ಜಯಕಾಂಕ್ಷಿಗಳೂ ಆದ ಆ ಬ್ರಹ್ಮಕ್ರತುಗಳು ಪ್ರಮಾಣವನ್ನರಿತ ನಾಲ್ಕು ಆಗಮಗಳನ್ನು ಹೀಗೆ ಪ್ರಶ್ನಿಸಿದರು.

೨೧. ಬ್ರಹ್ಮಕ್ರತುಗಳು ಹೇಳುತ್ತಾರೆ:—ಎಲ್ಲೆಡೆಯಲ್ಲಿಯೂ ಪ್ರಸಿದ್ಧರಾದ ನೀವೇ ಪ್ರಮಾಣ. ಇದರಲ್ಲಿ ಸಂದೇಹವಿಲ್ಲ. ನೀವು ತತ್ತ್ವವನ್ನರಿತಿರುವಿರಷ್ಟೆ?

೨೨. ಶ್ರುತಿಗಳು ಹೇಳುತ್ತವೆ:—ಸೃಷ್ಟಿಪಾಲನೆಗಳನ್ನೆಸಗುವ ಓ ದೇವತೆಗಳೆ! ನಿಮಗೆ ನಾವು ಪೂಜ್ಯರಾಗಿದ್ದರೆ ನಿಮ್ಮ ಸಂದೇಹವನ್ನು ನಿವಾರಿಸುವ ಪ್ರಮಾಣವನ್ನು ಹೇಳುವೆವು.

೨೩. ಆ ಬ್ರಹ್ಮಕ್ರತುಗಳು ವೇದಗಳು ಹೇಳಿದಮಾತನ್ನು ಕೇಳಿ ಇಂತೆಂದರು. "ನಿಮ್ಮ ಮಾತು ನಮಗೆ ಪ್ರಮಾಣವಾಗಿರುವುದು. ತತ್ತ್ವವು ಯಾವುದು? ಅದನ್ನು ಚೆನ್ನಾಗಿ ಹೇಳಿರಿ."

೨೪. ಋಗ್ವೇದವು ಹೇಳುತ್ತದೆ:—ಯಾವನಲ್ಲಿ ಸಕಲ ಭೂತಗಳೂ ನೆಲಸಿರುವುವೊ, ಯಾವನಿಂದ ಸಮಸ್ತಪ್ರಪಂಚಗಳೂ ಹುಟ್ಟುವುವೊ, ಆ ರುದ್ರನೊಬ್ಬನೇ ಪರತತ್ತ್ವವೆನ್ನುವರು.

ಯಜುರುವಾಚ :—

ಯೋ ಯಜ್ಞೈರಖಿಲೈರೀಶೋ ಯೋಗೇನ ಚ ಸಮಿಜ್ಯತೇ ।
ಯೇನ ಪ್ರಮಾಣಂ ಹಿ ವಯಂ ಸ ಏಕಃ ಸರ್ವದೃಕ್ಶಿವಃ ॥ ೨೫ ॥

ಸಾಮೋವಾಚ :—

ಯೇನೇದಂ ಭ್ರಾಮ್ಯತೇ ವಿಶ್ವಂ ಯೋಗಿಭಿರ್ಯೋ ವಿಚಿಂತ್ಯತೇ ।
ಯದ್ಭಾಸಾ ಭಾಸತೇ ವಿಶ್ವಂ ಸ ಏಕಸ್ತ್ರ್ಯಂಬಕಃ ಪರಃ ॥ ೨೬ ॥

ಅಥರ್ವೋವಾಚ :—

ಯಂ ಪ್ರಪಶ್ಯಂತಿ ದೇವೇಶಂ ಭಕ್ತ್ಯಾಽನುಗ್ರಹಿಣೋ ಜನಾಃ ।
ತಮಾಹುರೇಕಂ ಕೈವಲ್ಯಂ ಶಂಕರಂ ದುಃಖತಸ್ಕರಂ ॥ ೨೭ ॥
ಶ್ರುತೀರಿತಂ ನಿಶಮ್ಯೇತ್ಥಂ ತಾವತೀವ ವಿಮೋಹಿತೌ ।
ಸ್ಮಿತ್ವಾಽಽಹತುಃ ಕ್ರತುವಿಧೀ ಮೋಹಾಂಧ್ಯೇನಾಂಕಿತೌ ಮುನೇ ॥ ೨೮ ॥
ಕಥಂ ಪ್ರಮಥನಾಥೋಽಸೌ ರಮಮಾಣೋ ನಿರಂತರಂ ।
ದಿಗಂಬರಃ ಪಿತೃವನೇ ಶಿವಯಾ ಧೂಲಿಧೂಸರಃ ॥ ೨೯ ॥
ವಿಟಂಕವೇಶೋ ಜಟಿಲೋ ವೃಷಗೋ ವ್ಯಾಲಭೂಷಣಃ ।
ಪರಬ್ರಹ್ಮತ್ವಮಾಪನ್ನಃ ಕ್ವ ಚ ತತ್ಸಂಗವರ್ಜಿತಂ ॥ ೩೦ ॥

---

೨೫. ಯಜುರ್ವೇದವು ಹೇಳುತ್ತದೆ:—ಯಾವನು ಸಕಲ ಯಜ್ಞಗಳಿಂದಲೂ, ಯೋಗದಿಂದಲೂ ಪೂಜಿಸಲ್ಪಡುವನೊ, ಯಾವನಿಂದ ನಾವು ಪ್ರಮಾಣವಾಗಿರುವೆವೊ, ಆ ಶಿವನೊಬ್ಬನೇ ಸಮಸ್ತವನ್ನೂ ನೋಡುವವನು.

೨೬. ಸಾಮವೇದವು ಹೇಳುತ್ತದೆ:—ಈ ಪ್ರಪಂಚವನ್ನು ವ್ಯತ್ಯಾಸಗೊಳಿಸುವವನೂ, ಯೋಗಿಗಳಿಗೆ ಧ್ಯಾನಯೋಗ್ಯನೂ, ಪ್ರಪಂಚವನ್ನು ಪ್ರಕಾಶಗೊಳಿಸುವವನೂ ಆದ ಆ ಶಿವನೊಬ್ಬನೇ ಶ್ರೇಷ್ಠನು.

೨೭. ಅಥರ್ವಣವೇದವು ಹೇಳುತ್ತದೆ:— ಅನುಗ್ರಹವನ್ನು ಬಯಸುವ ಜನರು ಯಾವನನ್ನು ನೋಡುವರೊ, ದುಃಖವನ್ನು ನಾಶಗೊಳಿಸುವ ಅಂತಹ ಶಂಕರನೊಬ್ಬನನ್ನೇ ಕೈವಲ್ಯದಾತನೆನ್ನುವರು.

೨೮. ಮುನಿಯೆ! ವೇದಗಳು ಹೇಳಿದ ಈ ಮಾತನ್ನು ಕೇಳಿ ಮೋಹಗೊಂಡ ಕ್ರತುಬ್ರಹ್ಮರು ನಕ್ಕು ಇಂತೆಂದರು.

೨೯–೩೦. ಪ್ರಮಥಗಣಗಳಿಗೆ ಒಡೆಯನೂ, ಯಾವಾಗಲೂ ಪಾರ್ವತಿಯೊಡನೆ ವಿಹರಿಸುವವನೂ, ದಿಗಂಬರನೂ, ಶ್ಮಶಾನಧೂಳಿಯಿಂದ ಮಲಿನನೂ, ವಿಕಾರವೇಷವುಳ್ಳವನೂ, ಜಟಾಧಾರಿಯೂ, ವೃಷಭವನ್ನೇರಿದವನೂ, ಸರ್ಪಭೂಷಣನೂ ಆದ ಈ ಶಿವನು ಹೇಗೆ ಪರಬ್ರಹ್ಮನಾಗುವನು? ಅವನು ಸಂಗರಹಿತನಾಗಿರುವುದೆಲ್ಲಿ?

ತದುದೀರಿತಮಾಕರ್ಣ್ಯ ಪ್ರಣವಾತ್ಮಾ ಸನಾತನಃ ।
ಅಮೂರ್ತೋ ಮೂರ್ತಿಮಾಸ್ಥಾಯ ಹಸಮಾನ ಉವಾಚ ತೌ ॥ ೩೧ ॥

ಪ್ರಣವ ಉವಾಚ:—

ನ ಹ್ಯೇಷ ಭಗವಾಂಛಕ್ತ್ಯಾ ಸ್ವಾತ್ಮನೋ ವ್ಯತಿರಿಕ್ತಯಾ ।
ಕದಾಚಿದ್ರಮತೇ ರುದ್ರೋ ಲೀಲಾರೂಪಧರೋ ಹರಃ ॥ ೩೨ ॥
ಅಸೌ ಹಿ ಭಗವಾನೀಶಃ ಸ್ವಯಂಜ್ಯೋತಿಃ ಸನಾತನಃ ।
ಆನಂದರೂಪಾ ತಸ್ಯೈಷಾ ಶಕ್ತಿರ್ನಾಗಂತುಕೀ ಶಿವಾ ॥ ೩೩ ॥
ಇತ್ಯೇವಮುಕ್ತೇಽಪಿ ತದಾ ಮಖಮೂರ್ತೇರಜಸ್ಯಹಿ ।
ನಾಜ್ಞಾನಮಗಮನ್ನಾಶಂ ಶ್ರೀಕಂಠಸ್ಯೈವ ಮಾಯಯಾ ॥ ೩೪ ॥
ಪ್ರಾದುರಾಸೀತ್ತತೋ ಜ್ಯೋತಿರುಭಯೋರಂತರೇ ಮಹತ್ ।
ಪೂರಯನ್ನಿಜಯಾ ಭಾಸಾ ದ್ಯಾವಾಭೂಮ್ಯೋರ್ಯದಂತರಂ ॥ ೩೫ ॥
ಜ್ಯೋತಿರ್ಮಂಡಲಮಧ್ಯಸ್ಥೋ ದದೃಶೇ ಪುರುಷಾಕೃತಿಃ ।
ಪ್ರಜಜ್ವಾಲಾಥ ಕೋಪೇನ ಬ್ರಹ್ಮಣಃ ಪಂಚಮಂ ಶಿರಃ ॥ ೩೬ ॥
ಆವಯೋರಂತರಂ ಕೋಽಸೌ ಬಿಭೃಯಾತ್ಪುರುಷಾಕೃತಿಂ ।
ವಿಧಿಃ ಸಂಭಾವಯೇದ್ಯಾವತ್ತಾವತ್ಸ ಹಿ ವಿಲೋಕಿತಃ ॥ ೩೭ ॥

---

೩೧. ಅವರು ಹೇಳಿದ ಮಾತನ್ನು ಕೇಳಿ ಸನಾತನನೂ, ದೇಹರಹಿತನೂ, ಪ್ರಣವಸ್ವರೂಪನೂ ಆದ ಮಹೇಶ್ವರನು ದೇಹವನ್ನು ಧರಿಸಿ ನಗುತ್ತ ಅವರನ್ನು ಕುರಿತು ಇಂತೆಂದನು.

೩೨. ಪ್ರಣವವು ಹೇಳುತ್ತದೆ:—ಲೀಲೆಯಿಂದ ರೂಪವನ್ನು ಧರಿಸಿದ ಈ ಹರನು ಒಂದು ಸಲವೂ ತನ್ನಿಂದ ಬೇರೆಯಾದ ಶಕ್ತಿಯಿಂದ ವಿನೋದಪಡುವುದಿಲ್ಲ.

೩೩. ಪೂಜ್ಯನಾದ ಈ ಈಶ್ವರನು ಸ್ವಯಂಪ್ರಕಾಶನೂ, ಅನಾದಿಯೂ, ಆಗಿರುವನು. ಆನಂದಸ್ವರೂಪಳಾದ ಇವನ ಶಕ್ತಿಯು ನಿತ್ಯಳಾಗಿರುವಳು.

೩೪. ಪ್ರಣವವು ಹೀಗೆ ಹೇಳಿದರೂ ಕ್ರತು ಮತ್ತು ಬ್ರಹ್ಮರ ಅಜ್ಞಾನವು ಮಹೇಶ್ವರನ ಮಾಯೆಯಿಂದ ನಾಶವಾಗಲಿಲ್ಲ.

೩೫. ಅನಂತರ ಒಂದು ಮಹಾಜ್ಯೋತಿಯು ಇವರಿಬ್ಬರ ನಡುವೆ ತನ್ನ ಕಾಂತಿಯಿಂದ ಭೂಮ್ಯಾಕಾಶಗಳನ್ನು ತುಂಬುತ್ತ ಪ್ರಾದುರ್ಭವಿಸಿತು.

೩೬. ಆ ಪ್ರಕಾಶದ ನಡುವೆ ಒಂದು ಪುರುಷಾಕಾರವು ಕಾಣಿಸಿತು. ತರುವಾಯ ಬ್ರಹ್ಮನ ಐದನೆ ತಲೆಯು ಕೋಪದಿಂದ ಜ್ವಲಿಸಿತು.

೩೭–೩೮. ಬ್ರಹ್ಮನು ನಮ್ಮಿಬ್ಬರ ನಡುವೆ ಪುರಷಾಕೃತಿಯನ್ನು ಹೊಂದಿರುವ ಇವನಾರು? ಎಂದು ಊಹಿಸುವಷ್ಟರಲ್ಲಿ ಕೂಡಲೆ ತ್ರಿಶೂಲಪಾಣಿಯೂ, ಹಣೆ

ಸ್ರಷ್ಟಾ ಕ್ಷಣೇನ ಚ ಮಹಾನ್ ಪುರುಷೋ ನೀಲಲೋಹಿತಃ ।
ತ್ರಿಶೂಲಪಾಣಿರ್ಭಾಲಾಕ್ಷೋ ನಾಗೋಡುಪವಿಭೂಷಣಃ ॥ ೩೮ ॥
ಹಿರಣ್ಯಗರ್ಭಸ್ತಂ ಪ್ರಾಹ ಜಾನೇ ತ್ವಾಂ ಚಂದ್ರಶೇಖರಂ ।
ಭಾಲಸ್ಥಲಾನ್ಮಮ ಪುರಾ ರುದ್ರಃ ಪ್ರಾದುರಭೂದ್ಭವಾನ್ ॥ ೩೯ ॥
ರೋದನಾದ್ರುದ್ರ ನಾಮ್ನಾಽಪಿ ಯೋಜಿತೋಽಸಿ ಮಯಾ ಪುರಾ ।
ಮಾಮೇವ ಶರಣಂ ಯಾಹಿ ಪುತ್ರ ರಕ್ಷಾಂ ಕರೋಮಿ ತೇ ॥ ೪೦ ॥
ಅಥೇಶ್ವರಃ ಪದ್ಮಯೋನೇಃ ಶ್ರುತ್ವಾ ಗರ್ವವತೀಂ ಗಿರಂ ।
ಸ ಕೋಪತಃ ಸಮುತ್ಪಾದ್ಯ ಪುರುಷಂ ಭೈರವಾಕೃತಿಂ ॥ ೪೧ ॥
ಪ್ರಾಹ ಪಂಕಜಜನ್ಮಾಽಸೌ ಶಾಸ್ಯಸ್ತೇ ಕಾಲಭೈರವ ।
ಕಾಲವದ್ರಾಜಸೇ ಸಾಕ್ಷಾತ್ಕಾಲರಾಜಸ್ತತೋ ಭವಾನ್ ॥ ೪೨ ॥
ವಿಶ್ವಂ ಭರ್ತುಂ ಸಮರ್ಥೋಽಸಿ ಭರಣಾದ್ಭೈರವಃ ಸ್ಮೃತಃ ।
ತ್ವತ್ತೋ ಭೇಷ್ಯತಿ ಕಾಲೋಽಪಿ ತತಸ್ತ್ವಂ ಕಾಲಭೈರವಃ ॥ ೪೩ ॥
ಆಮರ್ದಯಿಷ್ಯತಿ ಭವಾಂಸ್ತುಷ್ಟೋ ದುಷ್ಟಾತ್ಮನೋ ಯತಃ ।
ಆಮರ್ದಕ ಇತಿ ಖ್ಯಾತಿಂ ತತಃ ಸರ್ವತ್ರ ಯಾಸ್ಯತಿ ॥ ೪೪ ॥
ಯತಃ ಪಾಪಾನಿ ಭಕ್ತಾನಾಂ ಭಕ್ಷಯಿಷ್ಯತಿ ತತ್ಕ್ಷಣಾತ್ ।
ಪಾಪಭಕ್ಷಣ ಇತ್ಯೇವ ತವ ನಾಮ ಭವಿಷ್ಯತಿ ॥ ೪೫ ॥

---

ಗಣ್ಣನೂ, ಸರ್ಪ, ಚಂದ್ರಗಳಿಂದ ಅಲಂಕಾರಗೊಂಡವನೂ ಆದ ಮಹೇಶ್ವರನು ಕಾಣಿಸಿಕೊಂಡನು.

೩೯. ಬ್ರಹ್ಮನು ಅವನನ್ನು ಕುರಿತು ಇಂತೆಂದನು. "ರುದ್ರನಾದ ನೀನು ಹಿಂದೆ ನನ್ನ ಹಣೆಯಿಂದ ಹುಟ್ಟಿರುವೆ.

೪೦. ನೀನು ಅತ್ತಕಾರಣ ನಾನು ನಿನಗೆ ರುದ್ರನೆಂದು ಹೆಸರಿತ್ತೆನು. ಪುತ್ರ! ನನ್ನನ್ನು ಮರೆಹೋಗು. ನಿನ್ನನ್ನು ರಕ್ಷಿಸುವೆನು."

೪೧-೪೩. ಬಳಿಕ ಈಶ್ವರನು ಬ್ರಹ್ಮನ ಗರ್ವದ ನುಡಿಯನ್ನು ಕೇಳಿ ಕೋಪದಿಂದ ಭಯಂಕರವಾದ ಆಕೃತಿಯುಳ್ಳ ಪುರುಷನನ್ನು ಹುಟ್ಟಿಸಿ ಇಂತೆಂದನು. "ಈ ಬ್ರಹ್ಮನನ್ನು ಶಿಕ್ಷಿಸು. ನೀನು ಕಾಲದಂತೆ ವಿರಾಜಿಸುವುದರಿಂದ ಕಾಲರಾಜನೆಂದು ಪ್ರಸಿದ್ಧನಾಗುವೆ. ಪ್ರಪಂಚವನ್ನು ಪೋಷಿಸಲು ಶಕ್ತನಾದ್ದರಿಂದ ಭೈರವನೆನ್ನಿಸಿಕೊಳ್ಳುವೆ. ಯಮನೂ ನಿನಗೆ ಹೆದರುವುದರಿಂದ ನೀನು ಕಾಲಭೈರವನಾಗುವೆ.

೪೪. ಸಂತುಷ್ಟನಾದ ನೀನು ದುಷ್ಟಾತ್ಮರನ್ನು ಪೀಡಿಸುವುದರಿಂದ ಎಲ್ಲೆಡೆಯಲ್ಲಿಯೂ ಆಮರ್ದಕನೆಂದು ವಿಖ್ಯಾತನಾಗುವೆ.

೪೫. ಭಕ್ತರ ಪಾಪಗಳನ್ನು ಕವಳಿಸುವುದರಿಂದ ಪಾಪಭಕ್ಷಣನೆಂದು ನಿನಗೆ ಹೆಸರಾಗುವುದು.

ಯಾ ಮೇ ಮುಕ್ತಿಪುರೀ ಕಾಶೀ ಸರ್ವಾಭ್ಯೋಽಪಿ ಗರೀಯಸೀ ।
ಆಧಿಪತ್ಯಂ ಚ ತಸ್ಯಾಸ್ತೇ ಕಾಲರಾಜ ಸದೈವ ಹಿ ॥ ೪೬ ॥
ತತ್ರ ಯೇ ಪಾಪಕರ್ತಾರಸ್ತೇಷಾಂ ಶಾಸ್ತಾ ತ್ವಮೇವ ಹಿ ।
ಶುಭಾಽಶುಭಂ ನ ತತ್ಕರ್ಮ ಚಿತ್ರಗುಪ್ತೋ ಲಿಖಿಷ್ಯತಿ ॥ ೪೭ ॥
ಏತಾನ್ವರಾನ್ಪ್ರಗೃಹ್ಯಾಽಥ ತತ್ಕ್ಷಣಾತ್ಕಾಲಭೈರವಃ ।
ವಾಮಾಂಗುಲಿನಖಾಽಗ್ರೇಣ ಚಕರ್ತ ಚ ಶಿರೋ ವಿಧೇಃ ॥ ೪೮ ॥
ಯದಂಗಮಪರಾಧ್ನೋತಿ ಕಾರ್ಯಂ ತಸ್ಯೈವ ಶಾಸನಂ ।
ಅತೋ ಯೇನ ಕೃತಾ ನಿಂದಾ ತಚ್ಛಿನ್ನಂ ಪಂಚಮಂ ಶಿರಃ ॥ ೪೯ ॥
ಯಜ್ಞಮೂರ್ತಿಧರೋ ವಿಷ್ಣುಸ್ತತಸ್ತುಷ್ಟಾವ ಶಂಕರಂ ।
ಭೀತೋ ಹಿರಣ್ಯಗರ್ಭೋಽಪಿ ಜಜಾಪ ಶತರುದ್ರಿಯಂ ॥ ೫೦ ॥
ಆಶ್ವಾಸ್ಯ ತೌ ಮಹಾದೇವಃ ಪ್ರೀತಃ ಪ್ರಣತವತ್ಸಲಃ ।
ಪ್ರಾಹ ಸ್ವಾಂ ಮೂರ್ತಿಮಪರಾಂ ಭೈರವಂ ತಂ ಕಪರ್ದಿನಂ ॥ ೫೧ ॥
ಮಾನ್ಯೋಽಧ್ವರೋಽಸೌ ಭವತಾ ತಥಾ ಶತಧೃತಿಸ್ತ್ವಯಂ ।
ಕಪಾಲಂ ವೈಧಸಂ ಚಾಽಪಿ ನೀಲಲೋಹಿತ ಧಾರಯ ॥ ೫೨ ॥
ಬ್ರಹ್ಮಹತ್ಯಾಽಪನೋದಾಯ ವ್ರತಂ ಲೋಕಾಯ ದರ್ಶಯನ್ ।
ಚರ ತ್ವಂ ಸತತಂ ಭಿಕ್ಷಾಂ ಕಾಪಾಲವ್ರತಮಾಸ್ಥಿತಃ ।
ಇತ್ಯುಕ್ತ್ವಾಽಂತರ್ಹಿತೋ ದೇವಸ್ತೇಜೋರೂಪಸ್ತದಾಶಿವಃ ॥ ೫೩ ॥

---

೪೬. ಕಾಲರಾಜ! ನೀನು ಸಮಸ್ತ ಪಟ್ಟಣಗಳಿಗಿಂತ ಉತ್ತಮವಾದ ಈ ನನ್ನ ಕಾಶೀಪುರಿಗೆ ಯಾವಾಗಲೂ ಒಡೆಯನಾಗುವೆ.

೪೭. ಇಲ್ಲಿ ಪಾಪಮಾಡಿದವರನ್ನು ಶಿಕ್ಷಿಸುವವನು ನೀನೇ. ಆ ಶುಭಾಶುಭ ಕರ್ಮಗಳನ್ನು ಚಿತ್ರಗುಪ್ತನು ಬರೆಯುವುದಿಲ್ಲ.

೪೮. ಕಾಲಭೈರವನು ಈ ವರಗಳನ್ನು ಸ್ವೀಕರಿಸಿ ಕೂಡಲೆ ತನ್ನ ಎಡಗೈಯ ಉಗುರಿನ ಕೊನೆಯಿಂದ ಬ್ರಹ್ಮನ ಶಿರಸ್ಸನ್ನು ಕತ್ತರಿಸಿದನು.

೪೯. ಯಾವ ಅಂಗವು ಅಪರಾಧಗೈಯ್ಯುವುದೊ, ಅದನ್ನೇ ಶಿಕ್ಷಿಸಬೇಕು. ಆದ್ದರಿಂದ ಕಾಲಭೈರವನು ನಿಂದಿಸಿದ ಆ ಐದನೆ ತಲೆಯನ್ನು ಕತ್ತರಿಸಿದನು.

೫೦. ಬಳಿಕ ಯಜ್ಞರೂಪವನ್ನು ಧರಿಸಿದ ವಿಷ್ಣುವು ಶಂಕರನನ್ನು ಸ್ತುತಿಸಿದನು. ಭಯಗೊಂಡ ಹಿರಣ್ಯಗರ್ಭನೂ ಶತರುದ್ರಿಯವನ್ನು ಜಪಿಸಿದನು.

೫೧. ಆಗ ಭಕ್ತವತ್ಸಲನಾದ ಮಹೇಶ್ವರನು ಅವರಿಬ್ಬರನ್ನೂ ಸಮಾಧಾನಗೊಳಿಸಿ ಭೈರವನು ತನ್ನ ಮತ್ತೊಂದು ಮೂರ್ತಿಯೆಂದನು.

೫೨–೫೩. ತೇಜೋರೂಪನಾದ ಮಹೇಶ್ವರನು ಕಾಲಭೈರವನನ್ನು ಕುರಿತು "ನೀನು ಈ ಕ್ರತುವನ್ನೂ ಬ್ರಹ್ಮನನ್ನೂ ಪೂಜಿಸು. ಬ್ರಹ್ಮನ ಕಪಾಲವನ್ನು ಧರಿಸಿ

ಉತ್ಪಾದ್ಯ ಕನ್ಯಾಮೇಕಾಂ ತು ಬ್ರಹ್ಮಹತ್ಯೇತಿ ವಿಶ್ರುತಾಂ ।
ರಕ್ತಾಂಽಬರಧರಾಂ ರಕ್ತಾಂ ರಕ್ತಸ್ರಗ್ಗಂಧಲೇಪನಾಂ ॥ ೫೪ ॥
ದಂಷ್ಟ್ರಾಕರಾಲವದನಾಂ ಲಲಜ್ಜಿಹ್ವಾಽತಿಭೀಷಣಾಂ ।
ಅಂತರಿಕ್ಷೈಕ ಪಾದಾಗ್ರಾಂ ಪಿಬಂತೀಂ ರುಧಿರಂ ಬಹು ॥ ೫೫ ॥
ಕರ್ತ್ರೀಕರ್ಪರಹಸ್ತಾಗ್ರಾಂ ಸ್ಫುರತ್ಪಿಂಗೋಗ್ರತಾರಕಾಂ ।
ಗರ್ಜಯಂತೀಂ ಮಹಾವೇಗಾಂ ಭೈರವಸ್ಯಾಽಪಿ ಭೀಷಣಾಂ ॥ ೫೬ ॥
ಯಾವದ್ವಾರಾಣಸೀಂ ದಿವ್ಯಾಂ ಪುರೀಮೇಷ ಗಮಿಷ್ಯತಿ ।
ತಾವತ್ತ್ವಂ ಭೀಷಣೇ ಕಾಲಮನುಗಚ್ಛೋಗ್ರರೂಪಿಣಿ ॥ ೫೭ ॥
ಸರ್ವತ್ರ ತೇ ಪ್ರವೇಶೋಽಸ್ತಿ ತ್ಯಕ್ತ್ವಾ ವಾರಾಣಸೀಂ ಪುರೀಂ ।
ನಿಯೋಜ್ಯೇತಾಮಿತಿ ಶಿವೋಽಪ್ಯಂತರ್ಧಾನಂ ಗತಸ್ತತಃ ॥ ೫೮ ॥
ತತ್ಸಾನ್ನಿಧ್ಯಾದ್ಭೈರವೋಽಪಿ ಕಾಲೋಽಭೂತ್ಕಾಲಕಾಲತಃ ।
ಸ ದೇವದೇವವಾಕ್ಯೇನ ಬಿಭ್ರತ್ಕಾಪಾಲಿಕಂ ವ್ರತಂ ॥ ೫೯ ॥
ಕಪಾಲಪಾಣಿರ್ವಿಶ್ವಾತ್ಮಾ ಚಚಾರ ಭುವನತ್ರಯಂ ।
ನಾತ್ಯಾಕ್ಷೀಚ್ಚಾಽಪಿ ತಂ ದೇವಂ ಬ್ರಹ್ಮಹತ್ಯಾ ಸುದಾರುಣಾ ॥ ೬೦ ॥

---

ಬ್ರಹ್ಮಹತ್ಯೆಯ ನಿವಾರಣೆಗಾಗಿ ಜನರು ತಿಳಿದುಕೊಳ್ಳುವಂತೆ ವ್ರತವನ್ನಾಚರಿಸು. ಯಾವಾಗಲೂ ಕಪಾಲವ್ರತವನ್ನಾಚರಿಸುತ್ತ ಭಿಕ್ಷಾಟನಮಾಡು" ಎಂದನು.

೫೪–೫೮. ತಾನು, ರಕ್ತವಸ್ತ್ರವನ್ನು ಧರಿಸಿದವಳೂ, ಕೆಂಪುಬಣ್ಣದವಳೂ, ಕೆಂಪುಮಾಲ್ಯ, ಗಂಧಗಳನ್ನು ಧರಿಸಿದವಳೂ, ಹಲ್ಲುಗಳಿಂದ ವಿಕಾರಗೊಂಡ ಮುಖವುಳ್ಳವಳೂ, ಚಲಿಸುತ್ತಿರುವ ನಾಲಿಗೆಯಿಂದ ಅತ್ಯಂತ ಭಯಂಕರಳೂ, ಆಕಾಶದಲ್ಲಿ ಒಂದು ಪಾದದ ಕೊನೆಯುಳ್ಳವಳೂ, ಬಹುವಾಗಿ ರಕ್ತವನ್ನು ಕುಡಿಯುತ್ತಿರುವವಳೂ, ಕತ್ತರಿ, ರಕ್ತಪಾತ್ರೆಗಳನ್ನು ಹಿಡಿದುಕೊಂಡಿರುವವಳೂ, ಚಲಿಸುತ್ತಿರುವ ಹಳದಿಯ ಬಣ್ಣದ ಭಯಂಕರವಾದ ಕಣ್ಣಿನ ಗುಡ್ಡೆಯುಳ್ಳವಳೂ, ಗರ್ಜಿಸುತ್ತಿರುವವಳೂ, ಅತ್ಯಂತ ವೇಗವುಳ್ಳವಳೂ, ಭೈರವನಿಗೂ ಭೀತಿಯನ್ನುಂಟುಮಾಡುವವಳೂ ಆದ ಬ್ರಹ್ಮಹತ್ಯೆಯೆಂಬ ಓರ್ವ ಕನ್ಯೆಯನ್ನು ಸೃಜಿಸಿ ಆ ಕನ್ಯೆಗೆ, "ಈ ಭೈರವನು ಕಾಶಿಗೆ ಬರುವವರೆಗೂ ಉಗ್ರರೂಪಿಣಿಯಾದ ನೀನು ಅವನನ್ನು ಹಿಂಬಾಲಿಸು. ಕಾಶಿಯನ್ನುಳಿದು ಇತರ ಸ್ಥಳಗಳಲ್ಲಿಯೂ ನಿನಗೆ ಪ್ರವೇಶವು ಲಭಿಸುವುದು" ಎಂದು ಅಪ್ಪಣೆಮಾಡಿ ಅದೃಶ್ಯನಾದನು.

೫೯–೬೦. ಭೈರವನು ಆ ಬ್ರಹ್ಮಹತ್ಯೆಯ ಸಾನ್ನಿಧ್ಯದಿಂದ ಯಮನಿಗೆ ಭಯಂಕರನಾದರೂ ಬಹಳ ಕಷ್ಟಾದನು. ಅವನು ಮಹಾದೇವನ ಮಾತಿನಿಂದ ಕಾಪಾಲಿಕವ್ರತವನ್ನು ತಾಳಿ ಬ್ರಹ್ಮಕಪಾಲವನ್ನು ಹಿಡಿದು ತ್ರಿಭುವನದಲ್ಲಿ ಸಂಚರಿಸಿದನು. ಆದರೂ ಭಯಂಕರವಾದ ಆ ಬ್ರಹ್ಮಹತ್ಯೆಯು ಅವನನ್ನು ಬಿಡಲಿಲ್ಲ.

ಸತ್ಯಲೋಕೇಽಪಿ ವೈಕುಂಠೇ ಮಹೇಂದ್ರಾದಿಪುರೀಷ್ವಪಿ ।
ತ್ರಿಜಗತ್ಪತಿರುಗ್ರೋಽಪಿ ವ್ರತೀ ತ್ರಿಜಗತೀಶ್ವರಃ ॥ ೬೧ ॥
ಪ್ರತಿತೀರ್ಥಂ ಭ್ರಮನ್ನಾಪಿ ವಿಮುಕ್ತೋ ಬ್ರಹ್ಮಹತ್ಯಯಾ ॥ ೬೨ ॥
ಅನೇನೈವಾಽನುಮಾನೇನ ಮಹಿಮಾತ್ಸ್ವವಗಮ್ಯತಾಂ ।
ಬ್ರಹ್ಮಹತ್ಯಾಽಪನೋದಿನ್ಯಾಃ ಕಾಶ್ಯಾಃ ಕಲಶಸಂಭವ ॥ ೬೩ ॥
ಸಂತಿ ತೀರ್ಥಾನ್ಯನೇಕಾನಿ ಬಹೂನ್ಯಾಯತನಾನಿ ಚ ।
ಅಧಿತ್ರಿಲೋಕಿನೋ ಕಾಶ್ಯಾಃ ಕಲಾಮರ್ಹಂತಿ ಷೋಡಶೀಂ ॥ ೬೪ ॥
ತಾವದ್ಗರ್ಜಂತಿ ಪಾಪಾನಿ ಬ್ರಹ್ಮಹತ್ಯಾದಿಕಾನ್ಯಲಂ ।
ಯಾವನ್ನಾಮ ನ ಶೃಣ್ವಂತಿ ಕಾಶ್ಯಾಃ ಪಾಪಾಽಚಲಾಽಶನೇಃ ॥ ೬೫ ॥
ಪ್ರಮಥೈಃ ಸೇವ್ಯಮಾನೋಽಯಂ ತ್ರಿಲೋಕೀಂ ವಿಚರನ್ಹರಃ ।
ಕಾಪಾಲಿಕೋ ಯಯೌ ದೇವೋ ನಾರಾಯಣನಿಕೇತನಂ ॥ ೬೬ ॥
ಅಥಾಯಾಂತಂ ಮಹಾಕಾಲಂ ತ್ರಿನೇತ್ರಂ ಸರ್ಪಕುಂಡಲಂ ।
ಮಹಾದೇವಾಂಶಸಂಭೂತಂ ಭೈರವಂ ಭೀಷಣಾಕೃತಿಂ ॥ ೬೭ ॥
ಪಪಾತ ದಂಡವದ್ಭೂಮೌ ದೃಷ್ಟ್ವಾ ತಂ ಗರುಡಧ್ವಜಃ ।
ದೇವಾಶ್ಚ ಮುನಯಶ್ಚೈವ ದೇವನಾರ್ಯಃ ಸಮಂತತಃ ॥ ೬೮ ॥

---

೬೧–೬೨. ಅಗಸ್ತ್ಯನೆ! ಆ ಭೈರವನು ಮೂರು ಲೋಕಗಳ ಒಡೆಯನಾದರೂ ವ್ರತವನ್ನು ಧರಿಸಿ ಸತ್ಯಲೋಕ, ವೈಕುಂಠ, ಮಹೇಂದ್ರಾದಿಗಳ ಪಟ್ಟಣಗಳು, ಪ್ರತಿಯೊಂದು ತೀರ್ಥಗಳಲ್ಲಿ ಸಂಚರಿಸಿದರೂ ಬ್ರಹ್ಮಹತ್ಯೆಯು ಅವನನ್ನು ಬಿಡಲಿಲ್ಲ.

೬೩. ನೀನು ಈ ಯುಕ್ತಿಯಿಂದಲೆ ಬ್ರಹ್ಮಹತ್ಯೆಯನ್ನು ನಿವಾರಿಸುವ ಕಾಶಿಯ ಮಹಿಮೆಯನ್ನು ತಿಳಿದುಕೊ.

೬೪. ಮೂರು ಲೋಕಗಳಲ್ಲಿ ಅನೇಕ ತೀರ್ಥ ದೇವಾಲಯಗಳಿದ್ದರೂ ಅವು ಕಾಶಿಯ ಹದಿನಾರನೆಯ ಒಂದುಭಾಗ ಮಾಹಾತ್ಮ್ಯವನ್ನೂ ಪಡೆದಿರುವುದಿಲ್ಲ.

೬೫. ಪಾಪಪರ್ವತಗಳಿಗೆ ವಜ್ರಾಯುಧದಂತಿರುವ ಕಾಶಿಯ ನಾಮವನ್ನು ಕೇಳದಿರುವವರೆಗೆ ಬ್ರಹ್ಮಹತ್ಯಾದಿ ಪಾಪಗಳು ಗರ್ಜಿಸುವುವು.

೬೬. ಕಾಪಾಲಿಕನಾದ ಈ ಕಾಲಭೈರವನು ಪ್ರಮಥಗಣಗಳಿಂದ ಸೇವಿಸಲ್ಪಡುತ್ತ, ಮೂರು ಲೋಕಗಳಲ್ಲಿಯೂ ಸಂಚರಿಸುತ್ತ ವೈಕುಂಠಕ್ಕೆ ಹೋದನು.

೬೭–೭೦. ವಿಷ್ಣುವು, ತ್ರಿನೇತ್ರನೂ, ಸರ್ಪಕುಂಡಲನೂ, ಮಹಾದೇವನ ಅಂಶದಿಂದ ಹುಟ್ಟಿದವನೂ, ಭಯಂಕರಾಕೃತಿಯುಳ್ಳವನೂ ಆದ ಭೈರವನು ಬರುತ್ತಿರುವುದನ್ನು ಕಂಡು ಸಾಷ್ಟಾಂಗನಮಸ್ಕಾರ ಮಾಡಿದನು. ಈ ಭೈರವನನ್ನು ದೇವತೆಗಳೂ, ಮುನಿಗಳೂ, ದೇವಾಂಗನೆಯರೂ ನಮಸ್ಕರಿಸಿದರು. ವಿಷ್ಣುವು

ನಿಷೇತುಃ ಪ್ರಣಿಪತ್ಯೈನಂ ಪ್ರಣತಃ ಕಮಲಾಪತಿಃ ।
ಶಿರಸ್ಯಂಜಲಿಮಾರೋಪ್ಯ ಸ್ತುತ್ವಾ ಬಹುವಿಧೈಃ ಸ್ತವೈಃ ॥ ೬೯ ॥
ಕ್ಷೀರೋದಮಥನೋದ್ಭೂತಾಂ ಪ್ರಾಹ ಪದ್ಮಾಲಯಾಂ ಹರಿಃ ।
ಪ್ರಿಯೇ ಪಶ್ಯಾಽಬ್ಜನಯನೇ ಧನ್ಯಾಽಸಿ ಸುಭಗೇಽನಘೇ ॥ ೭೦ ॥
ಧನ್ಯೋಽಹಂ ದೇವಿ ಸುಶ್ರೋಣಿ ಯತ್ಪಶ್ಯಾವೋ ಜಗತ್ಪತಿಂ ।
ಅಯಂ ಧಾತಾ ವಿಧಾತಾ ಚ ಲೋಕಾನಾಂ ಪ್ರಭುರೀಶ್ವರಃ ॥ ೭೧ ॥
ಅನಾದಿಃ ಶರಣಃ ಶಾಂತಃ ಪರಃ ಷಡ್ವಿಂಶಸಮ್ಮಿತಃ ।
ಸರ್ವಜ್ಞಃ ಸರ್ವಯೋಗೀಶಃ ಸರ್ವಭೂತೈಕನಾಯಕಃ ॥ ೭೨ ॥
ಸರ್ವಭೂತಾಽಂತರಾತ್ಮಾಽಯಂ ಸರ್ವೇಷಾಂ ಸರ್ವದಃ ಸದಾ ।
ಯಂ ವಿನಿದ್ರಾ ವಿನಿಶ್ವಾಸಾಃ ಶಾಂತಾ ಧ್ಯಾನಪರಾಯಣಾಃ ॥ ೭೩ ॥
ಧಿಯಾ ಪಶ್ಯಂತಿ ಹೃದಯೇ ಸೋಽಯಮದ್ಯ ಸಮೀಕ್ಷ್ಯ ತಾಂ ।
ಯಂ ವಿದುರ್ವೇದತತ್ವಜ್ಞಾ ಯೋಗಿನೋ ಯತಮಾನಸಾಃ ॥ ೭೪ ॥
ಅರೂಪೋ ರೂಪವಾನ್ಭೂತ್ವಾ ಸೋಽಯಮಾಯಾತಿ ಸರ್ವಗಃ ।
ಅಹೋ ವಿಚಿತ್ರಂ ದೇವಸ್ಯ ಚೇಷ್ಟಿತಂ ಪರಮೇಷ್ಠಿನಃ ॥ ೭೫ ॥
ಯಸ್ಯಾಖ್ಯಾಂ ಬ್ರುವತಾಂ ನಿತ್ಯಂ ನ ದೇಹಃ ಸೋಽಪಿ ದೇಹಧೃಕ್ ।
ಯಂ ದೃಷ್ಟ್ವಾ ನ ಪುನರ್ಜನ್ಮ ಲಭ್ಯತೇ ಮಾನವೈರ್ಭುವಿ ॥ ೭೬ ॥

---

ನಮಸ್ಕರಿಸಿ ತಲೆಯಮೇಲೆ ಕೈಮುಗಿದುಕೊಂಡು ಅವನನ್ನು ಅನೇಕ ವಿಧ ಸ್ತೋತ್ರಗಳಿಂದ ಸ್ತುತಿಸಿ ಕ್ಷೀರಸಮುದ್ರದಿಂದ ಹುಟ್ಟಿದ ಮಹಾಲಕ್ಷ್ಮಿಯನ್ನು ಕುರಿತು "ಪ್ರಿಯಳೆ! ನೋಡು. ನಿರ್ದುಷ್ಟಳಾದ ನೀನು ಈಗ ಧನ್ಯಳಾದೆ.

೭೧—೭೪. ಸುಂದರಿಯೆ! ನಾನೂ ಈ ಭೈರವನನ್ನು ನೋಡಿದುದರಿಂದ ಧನ್ಯನಾದೆನು. ಇವನು ಜಗತ್ತನ್ನು ಪಾಲಿಸುವವನೂ, ಸೃಜಿಸುವವನೂ, ಲೋಕಗಳಿಗೆ ಪ್ರಭುವೂ, ಆದಿರಹಿತನೂ, ರಕ್ಷಕನೂ, ಶಾಂತನೂ, ಶ್ರೇಷ್ಠನೂ, ಪರಮಾತ್ಮನೂ, ಸರ್ವಜ್ಞನೂ, ಸಮಸ್ತ ಯೋಗಿಗಳರಸನೂ, ಸಮಸ್ತ ಪ್ರಾಣಿಗಳಿಗೆ ಒಡೆಯನೂ, ಸಕಲ ಜೀವಾಂತರ್ಯಾಮಿಯೂ, ಸಮಸ್ತರಿಗೂ ಸಕಲವನ್ನೂ ಕೊಡುವವನೂ ಆಗಿರುವನು. ಧ್ಯಾನನಿರತರೂ, ಶಾಂತರೂ ಆದ ಯೋಗಿಗಳು ನಿದ್ರಾನಿಶ್ವಾಸರಹಿತರಾಗಿ ತಮ್ಮ ಹೃದಯದಲ್ಲಿ ಕಾಣುವ ಇವನನ್ನು ಈಗ ನೋಡು. ಇವನನ್ನು ವೇದತತ್ವವನ್ನರಿತವರೂ, ಜಿತೇಂದ್ರಿಯರೂ ಆದ ಯೋಗಿಗಳು ಬಲ್ಲರು.

೭೫. ರೂಪವಿಲ್ಲದ ಇವನು ರೂಪವುಳ್ಳವನಾಗಿ ಸರ್ವತ್ರ ಸಂಚರಿಸುವನು. ಸರ್ವೋತ್ತಮನಾದ ಇವನ ಕಾರ್ಯವು ಆಶ್ಚರ್ಯಕರವಾದುದು.

೭೬. ಇವನ ಹೆಸರನ್ನು ನಿತ್ಯವೂ ಹೇಳುವವರು ಮರಳಿ ದೇಹವನ್ನು ಹೊಂದುವುದಿಲ್ಲ. ಇವನಾದರೊ ದೇಹವನ್ನು ಧರಿಸಿರುವನು. ಲೋಕದಲ್ಲಿ ಇವನನ್ನು ನೋಡಿದವರು ಮರಳಿ ಜನಿಸುವುದಿಲ್ಲ.

ಸೋಽಯಮಾಯಾತಿ ಭಗವಾಂಸ್ತ್ರ್ಯಂಬಕಃ ಶಶಿಭೂಷಣಃ ।
ಪುಂಡರೀಕದಲಾಯಾಮೇ ಧನ್ಯೇ ಮೇಽದ್ಯವಿಲೋಚನೇ ॥ ೭೭ ॥
ಧಿಗ್ಧಿಕ್ಪದಂ ತು ದೇವಾನಾಂ ಪರಂ ದೃಷ್ಟ್ವಾಽತ್ರ ಶಾಂಕರಂ ।
ಲಭ್ಯತೇ ಯನ್ನ ನಿರ್ವಾಣಂ ಸರ್ವದುಃಖಾಂತಕೃತ್ತು ಯತ್ ॥ ೭೮ ॥
ದೇವತ್ವಾದಶುಭಂ ಕಿಂಚಿದ್ದೇವಲೋಕೇ ನ ವಿದ್ಯತೇ ।
ದೃಷ್ಟ್ವಾಽಪಿ ಸರ್ವದೇವೇಶಂ ಯನ್ಮುಕ್ತಿಂ ನ ಲಭಾಮಹೇ ॥ ೭೯ ॥
ಏವಮುಕ್ತ್ವಾ ಹೃಷೀಕೇಶಃ ಸಂಪ್ರಹೃಷ್ಟತನೂರುಹಃ ।
ಪ್ರಣಿಪತ್ಯ ಮಹಾದೇವಮಿದಮಾಹ ವೃಷಧ್ವಜಂ ॥ ೮೦ ॥
ಕಿಮಿದಂ ದೇವದೇವೇನ ಸರ್ವಜ್ಞೇನ ತ್ವಯಾ ವಿಭೋ ।
ಕ್ರಿಯತೇ ಜಗತಾಂ ಧಾತ್ರಾ ಸರ್ವಪಾಪಹರಾಽವ್ಯಯ ॥ ೮೧ ॥
ಕ್ರೀಡೇಯಂ ತವ ದೇವೇಶ ತ್ರಿಲೋಚನ ಮಹಾಮತೇ ।
ಕಿಂ ಕಾರಣಂ ವಿರೂಪಾಕ್ಷ ಚೇಷ್ಟಿತಂ ತೇ ಸ್ಮರಾರ್ದನ ॥ ೮೨ ॥
ಕಿಮರ್ಥಂ ಭಗವಂಛಂಭೋ ಭಿಕ್ಷಾಂ ಚರಸಿ ಶಕ್ತಿಪ ।
ಸಂಶಯೋ ಮೇ ಜಗನ್ನಾಥ ನತತ್ರೈಲೋಕ್ಯರಾಜ್ಯದ ॥ ೮೩ ॥
ಏವಮುಕ್ತಸ್ತತಃ ಶಂಭುರ್ವಿಷ್ಣುಮೇತದುದಾಹರತ್ ।
ಬ್ರಹ್ಮಣಸ್ತು ಶಿರಶ್ಛಿನ್ನಮಂಗುಲ್ಯಗ್ರನಖೇನ ಹ ॥ ೮೪ ॥

---

೭೭. ಈ ಚಂದ್ರಮೌಳೀಶ್ವರನು ಈಗ ಇಲ್ಲಿಗೆ ಬರುತ್ತಿದ್ದಾನೆ. ಕಮಲದಂತೆ ವಿಶಾಲವಾದ ಈ ನನ್ನ ಕಣ್ಣುಗಳು ಈಗ ಧನ್ಯವಾದುವು.

೭೮–೭೯. ಶಂಕರನನ್ನು ನೋಡಿ ಸಮಸ್ತ ದುಃಖಗಳನ್ನೂ ನಿವಾರಿಸುವ ಮೋಕ್ಷವನ್ನು ಪಡೆಯದ ದೇವತೆಗಳ ಪದವಿಯೂ ನಿಂದಿತವಾದುದು. ನಾವು ಸರ್ವೇಶ್ವರನನ್ನು ನೋಡಿಯೂ ಮುಕ್ತಿಯನ್ನು ಪಡೆಯದಿರುವುದರಿಂದ ದೇವತ್ವಕ್ಕಿಂತಲೂ ಹೀನವಾದುದು ಈ ದೇವಲೋಕದಲ್ಲಿ ಯಾವುದೂ ಇಲ್ಲ.''

೮೦. ವಿಷ್ಣುವು ಹೀಗೆಂದು ಹೇಳಿ ರೋಮಾಂಚಗೊಂಡ ಶರೀರವುಳ್ಳವನಾಗಿ ಮಹಾದೇವನನ್ನು ವಂದಿಸಿ ಅವನನ್ನು ಕುರಿತು ಇಂತೆಂದನು.

೮೧. ''ಸ್ವಾಮಿಯೆ! ದೇವೋತ್ತಮನೂ, ಸರ್ವಜ್ಞನೂ, ಜಗತ್ಪಾಲಕನೂ, ಸಕಲಪಾಪನಾಶಕನೂ ಆದ ನೀನು ಹೀಗೇಕೆ ಮಾಡುತ್ತಿರುವೆ.

೮೨–೮೩. ಪ್ರಾಜ್ಞನಾದ ಎಲೈ ತ್ರಿಲೋಚನನೆ! ಇದು ಕ್ರೀಡೆಯೊ? ವಿರೂಪಾಕ್ಷ! ಏಕೆ ಹೀಗೆ ಮಾಡುತ್ತಿರುವೆ? ಶಕ್ತಿಪತಿಯೂ, ಜಗದೊಡೆಯನೂ, ತ್ರೈಲೋಕ್ಯರಾಜ್ಯವನ್ನೀಯುವವನೂ ಆದ ಎಲೈ ಶಂಕರನೆ! ನೀನು ಏಕೆ ಭಿಕ್ಷಾಟನೆ ಮಾಡುವೆ? ನನಗೆ ಈ ವಿಷಯದಲ್ಲಿ ಸಂದೇಹವುಂಟಾಗಿದೆ.''

೮೪. ವಿಷ್ಣುವು ಹೀಗೆ ಕೇಳಲು ಶಂಕರನು ಅವನನ್ನು ಕುರಿತು ಹೀಗೆಂದನು- '' ನಾನು ಬೆರಳಿನ ಕೊನೆಯಿಂದ ಬ್ರಹ್ಮನ ಶಿರಸ್ಸನ್ನು ಕತ್ತರಿಸಿದೆನಷ್ಟೆ.

ತದಘಪ್ರತಿಘಂ ವಿಷ್ಣೋ ಚರಾಮ್ಯೇತದ್ವ್ರತಂ ಶುಭಂ ।
ಏವಮುಕ್ತೋ ಮಹೇಶೇನ ಪುಂಡರೀಕವಿಲೋಚನಃ ॥ ೮೫ ॥
ಸ್ಮಿತ್ವಾ ಕಿಂಚಿನ್ನತಶಿರಾಃ ಪುನರೇವಂ ವ್ಯಜಿಜ್ಞಪತ್ ।
ಯಥೇಚ್ಛಸಿ ತಥಾ ಕ್ರೀಡ ಸರ್ವವಿಷ್ಟಪನಾಯಕ ॥ ೮೬ ॥
ಮಾಯಯಾ ಮಾಂ ಮಹಾದೇವ ನ ಛಾದಯಿತುಮರ್ಹಸಿ ।
ನಾಭೀಕಮಲಕೋಶಾತ್ತು ಕೋಟಿಶಃ ಕಮಲಾಸನಾನ್ ॥ ೮೭ ॥
ಕಲ್ಪೇ ಕಲ್ಪೇ ಸೃಜಾಮೀಶ ತ್ವನ್ನಿಯೋಗಬಲಾದ್ವಿಭೋ ।
ತ್ಯಜ ಮಾಯಾಮಿಮಾಂ ದೇವ ದುಸ್ತರಾಮಕೃತಾತ್ಮಭಿಃ ॥ ೮೮ ॥
ಮದಾದಯೋ ಮಹಾದೇವ ಮಾಯಯಾ ತವ ಮೋಹಿತಾಃ ।
ಯಥಾವದವಗಚ್ಛಾಮಿ ಚೇಷ್ಟಿತಂ ತೇ ಶಿವಾಪತೇ ॥ ೮೯ ॥
ಸಂಹಾರಕಾಲೇ ಸಂಪ್ರಾಪ್ತೇ ಸದೇವಾನಖಿಲಾನ್ಮುನೀನ್ ।
ಲೋಕಾನ್ವರ್ಣಾಶ್ರಮವತೋ ಹರಿಷ್ಯಸಿ ಯದಾ ಹರ ॥ ೯೦ ॥
ತದಾ ಕ್ವ ತೇ ಮಹಾದೇವ ಪಾಪಂ ಬ್ರಹ್ಮವಧಾದಿಕಂ ।
ಪಾರತಂತ್ರ್ಯಂ ನ ತೇ ಶಂಭೋ ಸ್ವೈರಂ ಕ್ರೀಡೇತ್ತತೋ ಭವಾನ್ ॥ ೯೧ ॥
ಅತೀತಬ್ರಹ್ಮಣಾಮಸ್ಥ್ನಾಂ ಸ್ರಕ್ಕಂಠೇ ತವ ಭಾಸತೇ ।
ತದಾ ತದಾ ಕ್ವನುಗತಾ ಬ್ರಹ್ಮಹತ್ಯಾ ತವಾಽನಘ ॥ ೯೨ ॥

---

೮೫–೮೬. ಅದರಿಂದುಂಟಾದ ಪಾಪದ ಪರಿಹಾರಕ್ಕಾಗಿ ಈ ಶುಭವ್ರತವನ್ನಾಚರಿಸುವೆನು.'' ಮಹೇಶ್ವರನು ಹೀಗೆನ್ನಲು ಪುಂಡರೀಕಾಕ್ಷನು ಸ್ವಲ್ಪ ನಕ್ಕು ತಲೆಯನ್ನು ತಗ್ಗಿಸಿಕೊಂಡು ಮರಳಿ ವಿಜ್ಞಾಪಿಸಿಕೊಂಡನು: ''ಲೋಕೇಶ್ವರ! ನೀನು ನಿನ್ನಿಷ್ಟವಂತೆ ವಿಹರಿಸಬಹುದು.

೮೭–೮೯. ಮಹಾದೇವ! ನನ್ನನ್ನು ಮಾಯೆಯಿಂದ ಆವರಿಸುವಂತೆ ಮಾಡಬೇಡ. ನಾಥ! ನಿನ್ನ ಆದೇಶಬಲದಿಂದ ನಾನು ಪ್ರತಿಕಲ್ಪಗಳಲ್ಲಿಯೂ ನಾಭಿಕಮಲಕೋಶದಿಂದ ಕೋಟಿ ಕೋಟಿ ಬ್ರಹ್ಮರನ್ನು ಸೃಜಿಸುವೆನು. ಮೂಢರಿಗೆ ದುಸ್ತರವಾದ ಈ ಮಾಯೆಯನ್ನು ತ್ಯಜಿಸು. ಮಹಾದೇವ! ನಾನೇ ಮೊದಲಾದ ದೇವತೆಗಳು ನಿನ್ನ ಮಾಯೆಯಿಂದ ಭ್ರಾಂತರಾಗಿದ್ದೇವೆ. ಪಾರ್ವತೀಪತಿಯೆ! ನಿನ್ನ ಕಾರ್ಯವನ್ನು ಯಥಾರ್ಥವಾಗಿ ತಿಳಿಯಬಯಸುವೆನು.

೯೦–೯೧. ಶಂಕರ! ಸಂಹಾರಕಾಲದಲ್ಲಿ ದೇವತೆಗಳು, ಮುನಿಗಳು, ವರ್ಣಾಶ್ರಮಿಗಳಾದ ಜನರು ಎಲ್ಲರನ್ನೂ ಸಂಹರಿಸುವೆಯಷ್ಟೆ; ಆಗ ನಿನ್ನ ಬ್ರಹ್ಮಹತ್ಯೆ ಮೊದಲಾದ ಪಾಪಗಳೆಲ್ಲಿ ಹೋದುವು? ಮಹಾದೇವ! ನೀನು ಸ್ವತಂತ್ರನು. ಆದ್ದರಿಂದ ಸ್ವೇಚ್ಛೆಯಾಗಿ ವಿಹರಿಸು.

೯೨. ಎಲೈ ನಿರ್ದುಷ್ಟನೆ! ನಿನ್ನ ಕುತ್ತಿಗೆಯಲ್ಲಿ ಹಿಂದಿನ ಬ್ರಹ್ಮರ ಅಸ್ಥಿಮಾಲೆಯು ಪ್ರಕಾಶಿಸುತ್ತಿದೆ. ನಿನ್ನ ಆ ಬ್ರಹ್ಮಹತ್ಯೆಗಳು ಈಗ ಎಲ್ಲಿಗೆ ಹೋದುವು?

ಕೃತ್ವಾಽಪಿ ಸುಮಹತ್ಪಾಪಂ ತ್ವಾಂ ಯಃ ಸ್ಮರತಿ ಭಾವತಃ ।
ಆಧಾರಂ ಜಗತಾಮೀಶಂ ತಸ್ಯ ಪಾಪಂ ವಿಲೀಯತೇ ॥ ೯೩ ॥
ಯಥಾ ತಮೋ ನ ತಿಷ್ಠೇತ ಸನ್ನಿಧಾವಂಶುಮಾಲಿನಃ ।
ತಥಾ ನ ಭವಭಕ್ತಸ್ಯ ಪಾಪಂ ತಸ್ಯ ವ್ರಜೇತ್ಕ್ಷಯಂ ॥ ೯೪ ॥
ಯಶ್ಚಿಂತಯತಿ ಪುಣ್ಯಾತ್ಮಾ ತವ ಪಾದಾಂಬುಜದ್ವಯಂ ।
ಬ್ರಹ್ಮಹತ್ಯಾದಿಕಮಪಿ ಪಾಪಂ ತಸ್ಯ ವ್ರಜೇತ್ಕ್ಷಯಂ ॥ ೯೫ ॥
ತವ ನಾಮ್ನೋಽನುರಕ್ತಾ ವಾಗ್ಯಸ್ಯ ಪುಂಸೋ ಜಗತ್ಪತೇ ।
ಅಪ್ಯದ್ರಿಕೂಟತುಲಿತಂ ನೈನಸ್ತಮನುಬಾಧತೇ ॥ ೯೬ ॥

ರಜಸಾ ತಮಸಾ ವಿವರ್ಧಿತಂ
ಕ್ವನು ಪಾಪಂ ಪರಿತಾಪದಾಯಕಂ ।
ಕ್ವ ಚ ತೇ ಶಿವನಾಮ ಮಂಗಲಂ
ಜನಜೀವಾತು ಜಗದ್ರುಜಾಪಹಂ ॥ ೯೭ ॥
ಯದಿ ಜಾತುಚಿದಂಧಕದ್ವಿಷ
ಸ್ತವ ನಾಮೌಷ್ಠಪುಟಾದ್ವಿನಿಃಸೃತಂ ।
ಶಿವಶಂಕರ ಚಂದ್ರಶೇಖರೇ
ತ್ಯಸಕೃತ್ತಸ್ಯ ನ ಸಂಸೃತಿಃ ಪುನಃ ॥ ೯೮ ॥

---

೯೩. ಮಹಾಪಾಪವನ್ನೆಸಗಿದವನು, ಜಗತ್ತುಗಳಿಗೆ ಪರಮೇಶ್ವರನೂ, ಆಶ್ರಯದಾತನೂ ಆದ ನಿನ್ನನ್ನು ಭಕ್ತಿಯಿಂದ ಸ್ಮರಿಸಿದರೆ ಅವನ ಪಾಪವು ನಾಶವಾಗುವುದು.

೯೪. ಸೂರ್ಯನ ಸನ್ನಿಧಿಯಲ್ಲಿ ಕತ್ತಲೆಯು ನಿಲ್ಲದಿರುವಂತೆ ಶಿವಭಕ್ತನ ಪಾಪವು ಅವನ ಬಳಿ ಸುಳಿಯದೆ ನಾಶವಾಗುವುದು.

೯೫. ನಿನ್ನ ಪಾದಯುಗ್ಮವನ್ನು ಧ್ಯಾನಮಾಡಿದ ಪುಣ್ಯಾತ್ಮನ ಬ್ರಹ್ಮಹತ್ಯಾದಿ ಪಾಪಗಳೂ ನಶಿಸುವುವು.

೯೬. ಯಾವ ಮನುಷ್ಯನ ಮಾತು ನಿನ್ನ ನಾಮದಲ್ಲಿ ಅನುರಾಗಗೊಂಡಿರುವುದೊ ಅವನನ್ನು ಪರ್ವತಕ್ಕೆ ಸಮಾನವಾದ ಪಾಪವೂ ಬಾಧಿಸುವುದಿಲ್ಲ.

೯೭. ರಜಸ್ತಮೋಗುಣಗಳಿಂದ ಅಭಿವೃದ್ಧಿಗೊಂಡಿರುವುದೂ, ಸಂತಾಪವನ್ನುಂಟುಮಾಡುವುದೂ ಆದ ಪಾಪವೆಂದರೇನು? ಜನರಿಗೆ ಜೀವನೌಷಧವೂ, ಜಗದ್ರೋಗನಾಶಕವೂ ಆದ ಮಂಗಳಕರವಾದ ನಿನ್ನ ನಾಮವೆಲ್ಲಿ?

೯೮. ಅಂಧಕಾಸುರನ ಶತ್ರುವಾದ ನಿನ್ನ, "ಶಿವ, ಶಂಕರ, ಚಂದ್ರಶೇಖರ" ಎಂಬ ನಾಮಗಳನ್ನು ಉಚ್ಚರಿಸಿದವನು ಮರಳಿ ಜನಿಸಿ ಸಂಸಾರ ದುಃಖವನ್ನು ಅನುಭವಿಸುವುದಿಲ್ಲ.

ಪರಮಾತ್ಮನ್ಪರಂಧಾಮ ಸ್ವೇಚ್ಛಾ ವಿಧೃತ ವಿಗ್ರಹ ।
ಕುತೂಹಲಂ ತವೇಶೇದಂ ಕ್ವ ಪರಾಧೀನತೇಶ್ವರೇ ॥ ೯೯ ॥
ಅದ್ಯ ಧನ್ಯೋಽಸ್ಮಿ ದೇವೇಶ ಯಂ ನ ಪಶ್ಯಂತಿ ಯೋಗಿನಃ ।
ಪಶ್ಯಾಮಿ ತಂ ಜಗನ್ಮೂಲಂ ಪರಮೇಶ್ವರಮಕ್ಷಯಂ ॥ ೧೦೦ ॥
ಅದ್ಯ ಮೇ ಪರಮೋ ಲಾಭಸ್ತ್ವದ್ಯ ಮೇ ಮಂಗಲಂ ಪರಂ ।
ತ್ವದ್ದೃಷ್ಟ್ಯಮೃತತೃಪ್ತಸ್ಯ ತೃಣಂ ಸ್ವರ್ಗಾಽಪವರ್ಗದಂ ॥ ೧೦೧ ॥
ಇತ್ಥಂ ವದತಿ ಗೋವಿಂದೇ ವಿಮಲಾ ಪದ್ಮಯಾ ತಯಾ ।
ಮನೋರಥವತೀ ನಾಮ ಭಿಕ್ಷಾಪಾತ್ರೇ ಸಮರ್ಪಿತಾ ॥ ೧೦೨ ॥
ಭಿಕ್ಷಾಟನಾಯ ದೇವೋಽಪಿ ನಿರಗಾತ್ಪರಯಾ ಮುದಾ ।
ದೃಷ್ಟ್ವಾಽನುಯಾಯಿನೀಂ ತಾಂ ತು ಸಮಾಹೂಯ ಜನಾರ್ದನಃ ।
ಸಂಪ್ರಾರ್ಥಯದ್ಬ್ರಹ್ಮಹತ್ಯಾಂ ವಿಮುಂಚ ತ್ವಂ ತ್ರಿಶೂಲಿನಂ ॥ ೧೦೩ ॥

ಬ್ರಹ್ಮಹತ್ಯೋವಾಚ :—

ಅನೇನಾಽಪಿ ಮಿಷೇಣಾಽಹಂ ಸಂಸೇವ್ಯಾಽಮುಂ ವೃಷಧ್ವಜಂ ।
ಆತ್ಮಾನಂ ಪಾವಯಿಷ್ಯಾಮಿ ಕ್ವ ಪುನರ್ಭವದರ್ಶನಂ ॥ ೧೦೪ ॥

---

೯೯. ಪರಮಾತ್ಮನೂ, ಪರಮಾಶ್ರಯನೂ, ಸ್ವೇಚ್ಛೆಯಿಂದ ಧರಿಸಿದ ಶರೀರವುಳ್ಳವನೂ ಆದ ಓ ಮಹೇಶ್ವರನೆ! ನಿನಗೆ ಇದೊಂದು ಕುತೂಹಲವೆ! ನಿನಗೆ ಪರಾಧೀನತೆಯಲ್ಲಿ?

೧೦೦. ದೇವೇಶ! ಯೋಗಿಗಳಿಗೂ ನೋಡಲಸದಳನಾಗಿ, ಜಗತ್ಕಾರಣನೂ, ನಾಶರಹಿತನೂ ಆದ ನಿನ್ನನ್ನು ನಾನು ನೋಡುವುದರಿಂದ ಧನ್ಯನಾದೆನು.

೧೦೧. ಈಗ ನನಗೆ ಉತ್ತಮ ಲಾಭವೂ, ಉತ್ತಮ ಮಂಗಳವೂ ಉಂಟಾಯಿತು. ನಿನ್ನ ದರ್ಶನಾಮೃತದಿಂದ ತೃಪ್ತಿಗೊಂಡವನಿಗೆ ಸ್ವರ್ಗಮೋಕ್ಷಗಳೆರಡೂ ತೃಣಸಮಾನವಾದುವು.''

೧೦೨. ವಿಷ್ಣುವು ಹೀಗೆ ಹೇಳುತ್ತಿರಲು ಮಹಾಲಕ್ಷ್ಮಿಯು ಮಹೇಶ್ವರನ ಭಿಕ್ಷಾಪಾತ್ರೆಯಲ್ಲಿ ಶುದ್ಧವಾದ ಇಷ್ಟಾರ್ಥವನ್ನು ನೀಡುವ ಭಿಕ್ಷೆಯನ್ನಿತ್ತಳು.

೧೦೩. ಶಿವನೂ ಸಂತೋಷದಿಂದ ಭಿಕ್ಷಾಟನೆಗೆ ಹೊರಟನು. ಆಗ ವಿಷ್ಣುವು ಅವನನ್ನು ಹಿಂಬಾಲಿಸುತ್ತಿರುವ ಬ್ರಹ್ಮಹತ್ಯೆಯನ್ನು ಕರೆದು ನೀನು ಶಿವನನ್ನು ಬಿಟ್ಟುಬಿಡೆಂದು ಪ್ರಾರ್ಥಿಸಿದನು.

೧೦೪. ಬ್ರಹ್ಮಹತ್ಯೆಯು ಹೇಳುತ್ತದೆ:—ವಿಷ್ಣುವೆ! ನಾನು ಈ ನೆಪದಿಂದಲಾದರೂ ಶಿವನನ್ನು ಸೇವಿಸಿ ನನ್ನನ್ನು ಪವಿತ್ರಗೊಳಿಸಿಕೊಳ್ಳುವೆನು. ಶಿವನ ದರ್ಶನವು ಇನ್ನೆಲ್ಲಿ ಲಭಿಸುವುದು?

ಸಾ ತತ್ಯಾಜ ನತತ್ಪಾರ್ಶ್ವಂ ವ್ಯಾಹೃತಾಽಪಿ ಮುರಾರಿಣಾ ।
ತಮೂಚೇಽಥ ಹರಿಂ ಶಂಭುಃ ಸ್ಮೇರಾಸ್ಯೋ ವಚನಂ ಶುಭಂ ॥ ೧೦೫ ॥
ತ್ವದ್ವಾಕ್ಪೀಯೂಷಪಾನೇನ ತೃಪ್ತೋಽಸ್ಮಿ ಬಹುಮಾನದ ।
ವರಂ ವೃಣೀಷ್ವ ಗೋವಿಂದ ವರದೋಽಸ್ಮಿ ತವಾಽನಘ ॥ ೧೦೬ ॥
ನ ಮಾದ್ಯಂತಿ ಯಥಾ ಭೈಕ್ಷ್ಯೈರ್ಭಿಕ್ಷವೋಽಪ್ಯತಿಸಂಸ್ಕೃತೈಃ ।
ಯಥಾ ಮಾನಸುಧಾಪಾನೈರ್ನುನ್ನಭಿಕ್ಷಾಟನಜ್ವರಾಃ ॥ ೧೦೭ ॥

ಮಹಾವಿಷ್ಣುರುವಾಚ :—

ಏಷ ಏವ ವರಃ ಶ್ಲಾಘ್ಯೋ ಯದಹಂ ದೇವತಾಽಧಿಪಂ ।
ಪಶ್ಯಾಮಿ ತ್ವಾಂ ದೇವದೇವಂ ಮನೋರಥಪಥಾತಿಗಂ ॥ ೧೦೮ ॥
ಅನಭ್ರೇಯಂ ಸುಧಾವೃಷ್ಟಿರನಾಯಾಸೋ ಮಹೋತ್ಸವಃ ।
ಅಯತ್ನೋ ನಿಧಿಲಾಭೋ ಯದ್ವೀಕ್ಷಣಂ ಹರತೇ ಸತಾಂ ॥ ೧೦೯ ॥
ಅವಿಯೋಗೋಽಸ್ತು ಮೇ ದೇವ ತ್ವದಂಘ್ರಿಯುಗಲೇನ ವೈ ।
ಏಷ ಏವ ವರಃ ಶಂಭೋ ನಾಽನ್ಯಂ ಕಂಚಿದ್ವರಂ ವೃಣೇ ॥ ೧೧೦ ॥

ಈಶ್ವರ ಉವಾಚ :—

ಏವಂ ಭವತು ತೇಽನಂತ ಯತ್ತ್ವಯೋಕ್ತಂ ಮಹಾಮತೇ ।
ಸರ್ವೇಷಾಮಪಿ ದೇವಾನಾಂ ವರದಸ್ತ್ವಂ ಭವಿಷ್ಯಸಿ ॥ ೧೧೧ ॥

---

೧೦೫. ವಿಷ್ಣುವು ಹೇಳಿದರೂ ಆ ಬ್ರಹ್ಮಹತ್ಯೆಯು ಆ ಶಂಕರನ ಪಾರ್ಶ್ವವನ್ನು ಬಿಡಲಿಲ್ಲ. ಶಂಕರನು ಅನಂತರ ನಗುತ್ತ ಈ ಶುಭವಾಕ್ಯವನ್ನಾಡಿದನು.

೧೦೬. "ಬಹುಮಾನವನ್ನೀಯುವ ಎಲೈ ವಿಷ್ಣುವೆ! ನಾನು ನಿನ್ನ ಮಾತೆಂಬ ಅಮೃತವನ್ನು ಪಾನಮಾಡಿ ತೃಪ್ತನಾಗಿರುವೆನು. ಗೋವಿಂದ! ವರವನ್ನು ಕೊಡುವೆನು. ಕೇಳಿಕೊ.

೧೦೭. ಸನ್ಯಾಸಿಗಳು ಭಿಕ್ಷಾಟನವೆಂಬ ಜ್ವರದಿಂದ ಮುಕ್ತರಾಗಿ ಮಾನವೆಂಬ ಅಮೃತಪಾನದಿಂದ ಹೇಗೆ ಸಂತೋಷಗೊಳ್ಳುವರೊ, ಹಾಗೆ ಅತ್ಯುತ್ತಮ ಭಿಕ್ಷೆಗಳಿಂದಲೂ ಸಂತೋಷಗೊಳ್ಳುವುದಿಲ್ಲ."

೧೦೮. ಮಹಾವಿಷ್ಣುವು ಹೇಳುತ್ತಾನೆ:—ನಾನು ದೇವತೆಗಳ ಒಡೆಯನೂ, ಅಭಿಲಾಷೆಯ ದಾರಿಯನ್ನು ಮೀರಿದವನೂ ಆದ ನಿನ್ನನ್ನು ನೋಡುವುದೇ ನನಗೆ ಶ್ಲಾಘ್ಯವಾದ ವರವಾಗಿರುವುದು.

೧೦೯. ಶಂಕರ! ಸಜ್ಜನರಿಗೆ ನಿನ್ನ ದರ್ಶನವು ಮೋಡವಿಲ್ಲದ ಮಳೆಯೂ, ಆಯಾಸವಿಲ್ಲದ ಮಹೋತ್ಸವವೂ, ಯತ್ನವಿಲ್ಲದೆ ಲಭಿಸಿದ ನಿಧಿಯೂ ಆಗಿರುವುದು.

೧೧೦. ಮಹಾದೇವ! ನನಗೆ ನಿನ್ನ ಚರಣಗಳ ವಿಯೋಗವಾಗದಿರಲಿ. ಇದೇ ವರವು. ಬೇರೆ ಯಾವ ವರವನ್ನೂ ವರಿಸುವುದಿಲ್ಲ.

೧೧೧. ಈಶ್ವರನು ಹೇಳುತ್ತಾನೆ:—ಪ್ರಾಜ್ಞನಾದ ಎಲೈ ವಿಷ್ಣುವೆ! ನೀನು

ಅನುಗೃಹ್ಯೇತಿ ದೈತ್ಯಾರಿಂ ಕೇಂದ್ರಾದಿ ಭುವನೇ ಚರನ್ ।
ಭೇಜೇ ವಿಮುಕ್ತಿಜನನೀಂ ನಾಮ್ನಾ ವಾರಾಣಸೀಂ ಪುರೀಂ ॥ ೧೧೨ ॥
ಯತ್ರ ಸ್ಥಿತಾನಾಂ ಜಂತೂನಾಂ ಕಲಾಂ ನಾಽರ್ಹಂತಿ ಷೋಡಶೀಂ ।
ಅಪಿ ಬ್ರಹ್ಮಾದಿದೇವಾನಾಂ ಪದಾನಿ ವಿಪದಾಂ ಪದಂ ॥ ೧೧೩ ॥
ವರಂ ವಾರಾಣಸೀವಾಸೀ ಜಟೀ ಮುಂಡೀ ದಿಗಂಬರಃ ।
ನಾಽನ್ಯತ್ರ ಛತ್ರಸಂಛನ್ನವಸುಧಾ ಮಂಡಲೇಶ್ವರಃ ॥ ೧೧೪ ॥
ವರಂ ವಾರಾಣಸೀಭಿಕ್ಷಾ ನ ಲಕ್ಷಾಽಧಿಪತಾಽನ್ಯತಃ ।
ಲಕ್ಷಾಽಧೀಶೋ ವಿಶೇದ್ಗರ್ಭಂ ತದ್ಭಿಕ್ಷಾಽಶೀ ನ ಗರ್ಭಭಾಕ್ ॥ ೧೧೫ ॥
ಭಿಕ್ಷಾಽಪಿ ಯತ್ರ ಭಿಕ್ಷುಭ್ಯೋ ದತ್ತಾಮಲಕಸಂಮಿತಾ ।
ಸುಮೇರುಣಾಽಪಿ ತುಲಿತಾ ವಾರಾಣಸ್ಯಾಂ ಗುರುರ್ಭವೇತ್ ॥ ೧೧೬ ॥
ವರ್ಷಾಽಶನಂ ಹಿ ಯೋ ದದ್ಯಾತ್ಕಾಶ್ಯಾಂ ಸೀದತ್ಕುಟುಂಬಿನೇ ।
ಯಾವಂತ್ಯಬ್ದಾನಿ ತಾವಂತಿ ಯುಗಾನಿ ಸ ದಿವೀಜ್ಯತೇ ॥ ೧೧೭ ॥
ವಾರಾಣಸ್ಯಾಂ ವರ್ಷಭೋಜ್ಯಂ ಯೋ ದದ್ಯಾನ್ನಿರುಪಾಯಿನೇ ।
ಸ ಕದಾಚಿತ್ತೃಟ್ ಕ್ಷುಧಾತೋ ದುಃಖಂ ಭುಂಕ್ತೇ ನರರ್ಷಭಃ ॥ ೧೧೮ ॥

---

ಹೇಳಿದಂತೆಯೇ ಆಗಲಿ. ನೀನು ಸಕಲ ದೇವತೆಗಳಿಗೂ ವರವನ್ನು ಕೊಡುವವನಾಗುವೆ.

೧೧೨. ಶಂಕರನು ಹೀಗೆ ಹೇಳಿ ವಿಷ್ಣುವನ್ನು ಅನುಗ್ರಹಿಸಿ ಸತ್ಯಾದಿ ಲೋಕಗಳಲ್ಲಿ ಸಂಚರಿಸುತ್ತ ವಿಮುಕ್ತಿಯನ್ನೀಯುವ ವಾರಾಣಸಿಯನ್ನು ಸೇರಿದನು.

೧೧೩–೧೧೪. ಆಪತ್ತಿಗೆ ಆಶ್ರಯಗಳಾದ ಬ್ರಹ್ಮಾದಿ ದೇವತೆಗಳ ಲೋಕಗಳೂ, ಪದವಿಗಳೂ ಈ ವಾರಾಣಸಿಯಲ್ಲಿರುವ ಜಂತುಗಳಿಗಿರುವ ಪದವಿಯ ಷೋಡಶಕಲೆಯನ್ನೂ ಹೊಂದುವುದಿಲ್ಲ. ಕಾಶಿಯಲ್ಲಿ ವಾಸಿಸುವ ಪಾಶುಪತನೂ, ಏಕದಂಡವುಳ್ಳ ಸನ್ಯಾಸಿಯೂ, ದಿಗಂಬರನೂ ಉತ್ತಮರು. ಇತರ ಕ್ಷೇತ್ರಗಳಲ್ಲಿ ವಾಸಿಸುವ ಶ್ವೇತಚ್ಛತ್ರವನ್ನು ಧರಿಸಿರುವ ಚಕ್ರವರ್ತಿಯೂ ಶ್ರೇಷ್ಠನಲ್ಲ.

೧೧೫. ಕಾಶಿಯಲ್ಲಿ ಭಿಕ್ಷೆಬೇಡುವುದೂ ಶ್ರೇಷ್ಠವಾದುದು. ಇತರ ಕಡೆಯಲ್ಲಿ ಲಕ್ಷಾಧಿಪತ್ಯವೂ ಉತ್ತಮವಲ್ಲ. ಲಕ್ಷಾಧೀಶನು ಮರಳಿ ಜನಿಸುವನು. ಕಾಶಿಯಲ್ಲಿ ಭಿಕ್ಷಾನ್ನವನ್ನು ತಿನ್ನುವವನು ಪುನಃ ಪುಟ್ಟುವುದಿಲ್ಲ.

೧೧೬–೧೧೭. ಕಾಶಿಯಲ್ಲಿ ಸನ್ಯಾಸಿಗಳಿಗಿತ್ತ ನೆಲ್ಲಿಯ ಕಾಯಿಯಷ್ಟು ಭಿಕ್ಷೆಯೂ ಮೇರುಪರ್ವತದಷ್ಟು ಹೆಚ್ಚಾಗುವುದು. ಕಾಶಿಯಲ್ಲಿ ಕಷ್ಟಪಡುತ್ತಿರುವ ಸಂಸಾರಿಗೆ ವರ್ಷಾಶನವನ್ನಿತ್ತವನು ಅವನು ಕೊಟ್ಟ ವರ್ಷಾಶನಗಳ ಸಂಖ್ಯೆಯಷ್ಟು ಯುಗಗಳಕಾಲ ಸ್ವರ್ಗದಲ್ಲಿ ಪೂಜ್ಯನಾಗುವನು.

೧೧೮. ಕಾಶಿಯಲ್ಲಿ ಜೀವನೋಪಾಯವಿಲ್ಲದವನಿಗೆ ವರ್ಷಾಶನವನ್ನು

**ವಾರಾಣಸ್ಯಾಂ ನಿವಸತಾಂ ಯತ್ಪುಣ್ಯಮುಪಜಾಯತೇ ।**
**ತದೇವ ಸಂವಾಸಯಿತುಃ ಫಲಂ ತ್ವವಿಕಲಂ ಭವೇತ್ ॥ ೧೧೯ ॥**
**ಬ್ರಹ್ಮಹತ್ಯಾದಿ ಪಾಪಾನಿ ಯಸ್ಯಾ ನಾಮ್ನೋಽಪಿ ಕೀರ್ತನಾತ್ ।**
**ತ್ಯಜಂತಿ ಪಾಪಿನಂ ಕಾಶೀ ಸಾ ಕೇನೇಹೋಪಮೀಯತೇ ॥ ೧೨೦ ॥**
**ಕ್ಷೇತ್ರೇ ಪ್ರವಿಷ್ಟಮಾತ್ರೇಽಥ ಭೈರವೇ ಭೀಷಣಾಕೃತೌ ।**
**ಹಾಹೇತ್ಯುಕ್ತ್ವಾ ಬ್ರಹ್ಮಹತ್ಯಾ ಪಾತಾಲತಲಮಾವಿಶತ್ ॥ ೧೨೧ ॥**
**ಕಪಾಲಂ ಬ್ರಹ್ಮಣೋ ರುದ್ರಃ ಸರ್ವೇಷಾಮೇವ ಪಶ್ಯತಾಂ ।**
**ಹಸ್ತಾತ್ಪತಿತಮಾಲೋಕ್ಯ ನನರ್ತ ಪರಯಾ ಮುದಾ ॥ ೧೨೨ ॥**
**ವಿಧೇಃ ಕಪಾಲಂ ನಾಽಮುಂಚತ್ಕರಮತ್ಯಂತದುಃಸಹಂ ।**
**ಹರಸ್ಯ ಭ್ರಮತಃ ಕ್ವಾಽಪಿ ತತ್ಕಾಶ್ಯಾಂ ಕ್ಷಣತೋಽಪತತ್ ॥ ೧೨೩ ॥**
**ಶೂಲಿನೋ ಬ್ರಹ್ಮಣೋ ಹತ್ಯಾ ನಾಽಪೈತಿಸ್ಮ ಚ ಯಾ ಕ್ವಚಿತ್ ।**
**ಸಾ ಕಾಶ್ಯಾಂ ಕ್ಷಣತೋ ನಷ್ಟಾ ಕಥಂ ಕಾಶೀ ನ ದುರ್ಲಭಾ ॥ ೧೨೪ ॥**
**ಅತಃ ಪ್ರದಕ್ಷಿಣೀಕಾರ್ಯಾ ಪೂಜನೀಯಾ ಪುರೀ ತ್ವಿಯಂ ॥ ೧೨೫ ॥**

---

ಕೊಟ್ಟವನು ಒಂದು ಸಾರಿಯೂ ಹಸಿವು, ಬಾಯಾರಿಕೆಗಳಿಂದ ದುಃಖಗೊಳ್ಳುವುದಿಲ್ಲ.

೧೧೯. ಕಾಶಿಯಲ್ಲಿ ವಾಸಿಸುವವರಿಗೆ ಉಂಟಾಗುವ ಪುಣ್ಯವೇ ಅಲ್ಲಿ ವಾಸಮಾಡಿಸುವವರಿಗೂ ಸಂಪೂರ್ಣವಾಗಿ ದೊರೆಯುವುದು.

೧೨೦. ಕಾಶಿಯ ನಾಮಸಂಕೀರ್ತನದಿಂದಲೇ ಪಾಪಿಯನ್ನು ಬ್ರಹ್ಮಹತ್ಯಾದಿ ಪಾಪಗಳು ಬಿಟ್ಟುಬಿಡುವುವು. ಅಂತಹ ಕಾಶಿಯನ್ನು ಯಾವುದಕ್ಕೆ ಹೋಲಿಸಲಾಗುವುದು.

೧೨೧. ಎಲೈ ಮುನಿಯೆ! ಭಯಂಕರವಾದ ಆಕೃತಿಯುಳ್ಳ ಭೈರವನು ಕಾಶಿಯನ್ನು ಪ್ರವೇಶಮಾಡಿದ ಕೂಡಲೆ ಬ್ರಹ್ಮಹತ್ಯೆಯು ಹಾಹಾಕಾರಮಾಡುತ್ತ ಪಾತಾಳವನ್ನು ಪ್ರವೇಶಿಸಿತು.

೧೨೨. ರುದ್ರನು ಎಲ್ಲರೂ ನೋಡುತ್ತಿರುವಾಗಲೆ ತನ್ನ ಕೈಯಿಂದ ಕಪಾಲವು ಬಿದ್ದುಹೋದುದನ್ನು ಕಂಡು ಅತ್ಯಂತ ಸಂತೋಷದಿಂದ ನರ್ತಿಸಿದನು.

೧೨೩. ಎಲ್ಲಿ ಸಂಚರಿಸಿದರೂ ಶಿವನ ಹಸ್ತವನ್ನು ಬಿಡದಿರುವ ದುಸ್ಸಹವಾದ ಬ್ರಹ್ಮಕಪಾಲವು ಕಾಶಿಯಲ್ಲಿ ಒಂದು ಕ್ಷಣಕಾಲದಲ್ಲಿಯೇ ಬಿದ್ದಿತು.

೧೨೪–೧೨೫. ಎಲ್ಲಿಯೂ ಬಿಡದಿರುವ ಮಹೇಶ್ವರನ ಬ್ರಹ್ಮಹತ್ಯೆಯು ಕಾಶಿಯಲ್ಲಿ ಕ್ಷಣಕಾಲದಲ್ಲಿಯೇ ನಷ್ಟವಾಯಿತು. ಆ ಕಾಶಿಯು ಹೇಗೆ ದುರ್ಲಭವಲ್ಲ. ಆದ್ದರಿಂದ ಈ ಕಾಶಿಯನ್ನು ಪ್ರದಕ್ಷಿಣೆಗೈದು ಪೂಜಿಸಬೇಕು.

ವಾರಾಣಸೀತಿ ಕಾಶೀತಿ ಮಹಾಮಂತ್ರಮಿಮಂ ಜಪನ್ ।
ಯಾವಜ್ಜೀವಂ ತ್ರಿಸಂಧ್ಯಂ ತು ಜಂತುರ್ಜಾತು ನ ಜಾಯತೇ ॥ ೧೨೬ ॥
ಅವಿಮುಕ್ತಂ ಮಹಾಕ್ಷೇತ್ರಂ ಸ್ಮರನ್ಪ್ರಾಣಾಂಸ್ತು ಯಸ್ತ್ಯಜೇತ್ ।
ದೂರದೇಶಾಂತರಸ್ಥೋಽಪಿ ಸೋಽಪಿ ಜಾತು ನ ಜಾಯತೇ ॥ ೧೨೭ ॥
ಆನಂದಕಾನನೇ ಯಸ್ಯ ಚಿತ್ತಂ ಸಂಸ್ಮರತೇ ಸದಾ ।
ತತ್ಕ್ಷೇತ್ರನಾಮಶ್ರವಣಾನ್ನಸ ಭೂಯೋಽಭಿಜಾಯತೇ ॥ ೧೨೮ ॥
ರುದ್ರಾವಾಸೇ ವಸೇನ್ನಿತ್ಯಂ ನರೋ ನಿಯತಮಾನಸಃ ।
ಏನಸಾಮತಿಸಂಭಾರಂ ಕೃತ್ವಾ ಕಾಲಾದ್ವಿಮುಚ್ಯತೇ ॥ ೧೨೯ ॥
ಮಹಾಶ್ಮಶಾನಮಾಸಾದ್ಯ ಯದಿ ದೈವಾದ್ವಿಪದ್ಯತೇ ।
ಪುನಃ ಶ್ಮಶಾನಶಯನಂ ನ ಕ್ವಾಽಪಿ ಲಭತೇ ಪುಮಾನ್ ॥ ೧೩೦ ॥
ಕಪಾಲಮೋಚನಂ ಕಾಶ್ಯಾಂ ಯೇ ಸ್ಮರಿಷ್ಯಂತಿ ಮಾನವಾಃ ।
ತೇಷಾಂ ವಿನಂಕ್ಷ್ಯತಿ ಕ್ಷಿಪ್ರಮಿಹಾಽನ್ಯತ್ರಾಽಪಿ ಪಾತಕಂ ॥ ೧೩೧ ॥
ಆಗತ್ಯ ತೀರ್ಥಪ್ರವರೇ ಸ್ನಾನಂ ಕೃತ್ವಾ ವಿಧಾನತಃ ।
ತರ್ಪಯಿತ್ವಾ ಪಿತೄನ್ದೇವಾನ್ ಮುಚ್ಯತೇ ಬ್ರಹ್ಮಹತ್ಯಯಾ ॥ ೧೩೨ ॥

---

೧೨೬. ವಾರಾಣಸೀ, ಕಾಶೀ ಎಂಬ ಈ ಮಹಾಮಂತ್ರಗಳನ್ನು ಬದುಕಿರುವವರೆಗೆ ಮೂರು ಸಂಧ್ಯಾಕಾಲಗಳಲ್ಲಿಯೂ ಜಪಿಸುವ ಪ್ರಾಣಿಯು ಮತ್ತೆ ಜನಿಸುವುದಿಲ್ಲ. ಆ ಮಹಾಮಂತ್ರಗಳ ಪ್ರಭಾವದಿಂದ ಪುನರಾವೃತ್ತಿರಹಿತವಾದ ಮೋಕ್ಷವನ್ನೇ ಪಡೆಯುತ್ತದೆ.

೧೨೭. ದೂರದೇಶದಲ್ಲಿ ವಾಸಿಸುವವನೂ, ಅವಿಮುಕ್ತಮಹಾಕ್ಷೇತ್ರವನ್ನು ಸ್ಮರಿಸುತ್ತ ಪ್ರಾಣವನ್ನು ತ್ಯಜಿಸಿದರೆ ಮರಳಿ ಹುಟ್ಟುವುದಿಲ್ಲ.

೧೨೮. ಆನಂದಕಾನನವನ್ನು ಯಾವಾಗಲೂ ಸ್ಮರಿಸುವವನು ಆ ಕ್ಷೇತ್ರದ ನಾಮಶ್ರವಣದಿಂದಲೇ ಮುಕ್ತನಾಗುವನು.

೧೨೯. ನಿತ್ಯವೂ ಜಿತೇಂದ್ರಿಯನಾಗಿ ರುದ್ರಾವಾಸದಲ್ಲಿ ವಾಸಿಸುವವನು ಅತ್ಯಂತ ಪಾಪವನ್ನು ಮಾಡಿದವನಾದರೂ ಮುಕ್ತನಾಗುವನು.

೧೩೦. ಮನುಷ್ಯನು ಮಹಾಶ್ಮಶಾನವನ್ನು ಹೊಂದಿ ಅದೃಷ್ಟವಶದಿಂದ ಮೃತನಾದರೆ ಮರಳಿ ಎಲ್ಲಿಯೂ ಶ್ಮಶಾನದಲ್ಲಿ ಮಲಗುವುದಿಲ್ಲ.

೧೩೧. ಕಾಶಿಯಲ್ಲಿರುವ ಕಪಾಲಮೋಚನವನ್ನು ಸ್ಮರಿಸುವ ಮಾನವರ ಇಹಪರಗಳಲ್ಲಿ ಮಾಡಿದ ಪಾಪಗಳೆಲ್ಲವೂ ಶೀಘ್ರವಾಗಿ ನಾಶವಾಗುವುವು.

೧೩೨. ಈ ಉತ್ತಮ ತೀರ್ಥಕ್ಕೆ ಬಂದು ವಿಧಿಯಂತೆ ಮಿಂದು ದೇವತೆಗಳನ್ನೂ, ಪಿತೃಗಳನ್ನೂ ತರ್ಪಣದಿಂದ ತೃಪ್ತಿಗೊಳಿಸಿದ ಮಾನವರು ಬ್ರಹ್ಮಹತ್ಯೆಯಿಂದ ಮುಕ್ತರಾಗುವರು.

ಅಶಾಶ್ವತಮಿದಂ ಜ್ಞಾತ್ವಾ ವಾರಾಣಸ್ಯಾಂ ವಸಂತಿ ಯೇ ।
ದೇಹಾಂತೇ ತತ್ಪರಂ ಜ್ಞಾನಂ ತೇಷಾಂ ದಾಸ್ಯತಿ ಶಂಕರಃ ॥ ೧೩೩ ॥
ಇಯಂ ಕಾಶೀ ಪುರೀ ವಿಪ್ರ ಸಾಕ್ಷಾದ್ರುದ್ರತನುಃ ಪರಾ ।
ಅನಿರ್ವಾಚ್ಯಾ ಪರಾನಂದಾ ದುಷ್ಪ್ರಾಪ್ಯೇಶವಿರೋಧಿಭಿಃ ॥ ೧೩೪ ॥
ಅಸ್ಯಾಸ್ತತ್ವಮಹಂ ಜಾನೇ ಶಿವಭಕ್ತಿಪರೋಽಪಿ ವಾ ।
ಮುಚ್ಯಂತೇ ಜಂತವೋಽತ್ರೈವ ಯಥಾ ಯೋಗೇನ ಯೋಗಿನಃ ॥ ೧೩೫ ॥
ಪರಂ ಪದಮಿಯಂ ಕಾಶೀ ಪರಾನಂದಾ ಇಯಂ ಪುರೀ ।
ಇಯಮೇವ ಪರಂ ಜ್ಞಾನಂ ಸೇವ್ಯಾಽಸೌ ಮೋಕ್ಷಕಾಂಕ್ಷಿಭಿಃ ॥ ೧೩೬ ॥
ಅತ್ರೋಷಿತ್ವಾಪೀಶಭಕ್ತಾನ್ನಿರುಣದ್ಧಿ ತು ಯಃ ಕುಧೀಃ ।
ಪುರ್ಯೈ ದ್ರುಹ್ಯತಿ ವಾ ಮೂಢಸ್ತಸ್ಯಾಽನ್ಯತ್ರಾಽತ್ರ ನೋ ಗತಿಃ ॥ ೧೩೭ ॥
ಕಪಾಲಮೋಚನಂ ತೀರ್ಥಂ ಪುರಸ್ಕೃತ್ವಾತು ಭೈರವಃ ।
ತತ್ರೈವ ತಸ್ಥೌ ಭಕ್ತಾನಾಂ ಭಕ್ಷಯನ್ನಘಸಂತತಿಂ ॥ ೧೩೮ ॥
ಪಾಪಭಕ್ಷಣಮಾಸಾದ್ಯ ಕೃತ್ವಾ ಪಾಪಶತಾನ್ಯಪಿ ।
ಕುತೋ ಬಿಭೇತಿ ಪಾಪೇಭ್ಯಃ ಕಾಲಭೈರವಸೇವಕಃ ॥ ೧೩೯ ॥

---

೧೩೩. ಈ ದೇಹವು ಅಶಾಶ್ವತವೆಂದರಿತು ಕಾಶಿಯಲ್ಲಿ ವಾಸಿಸುವ ಮಾನವರಿಗೆ ಶಂಕರನು ದೇಹಾವಸಾನದಲ್ಲಿ ಉತ್ತಮಜ್ಞಾನವನ್ನು ಕೊಡುವನು.

೧೩೪. ಅಯ್ಯಾ ಅಗಸ್ತ್ಯನೆ! ಈ ಕಾಶಿಯು ಹಿಂದೆ ಹೇಳಲಾಗದಿರುವುದೂ, ಪರಮಾನಂದರೂಪವೂ, ಶಿವನ ದ್ವೇಷಿಗಳಿಗೆ ಹೊಂದಲಶಕ್ಯವೂ ಆದ ಸಾಕ್ಷಾತ್ ಶಿವನ ಶರೀರವಾಗಿದ್ದಿತು.

೧೩೫–೧೩೬. ಇದರ ತತ್ವವನ್ನು ನಾನು ತಿಳಿದಿರುವೆನು. ಶಿವಭಕ್ತಿಯುಳ್ಳ ಪ್ರಾಣಿಗಳು, ಯೋಗಿಗಳು ಯೋಗದಿಂದ ಮುಕ್ತರಾಗುವಂತೆ ಇಲ್ಲಿ ಮುಕ್ತಿಯನ್ನು ಪಡೆಯುವರು. ಈ ಕಾಶಿಯು ಉತ್ತಮಸ್ಥಾನವೂ, ಪರಮಾನಂದಕವೂ, ಪರಮಜ್ಞಾನಪ್ರದವೂ ಆಗಿರುವುದು. ಮೋಕ್ಷವನ್ನು ಅಪೇಕ್ಷಿಸುವವರು ಇದನ್ನು ಸೇವಿಸಬೇಕು.

೧೩೭. ಯಾವ ದುಷ್ಟಬುದ್ಧಿಯು ಇಲ್ಲಿ ವಾಸಿಸುತ್ತ ಶಿವಭಕ್ತರಿಗಾಗಲಿ, ಈ ಪಟ್ಟಣಕ್ಕಾಗಲಿ ದ್ರೋಹಮಾಡುವನೊ, ಅವನಿಗೆ ಇಲ್ಲಿಯೂ ಇತರ ಕ್ಷೇತ್ರಗಳಲ್ಲಿಯೂ ಸದ್ಗತಿಯಾಗುವುದಿಲ್ಲ.

೧೩೮. ಭೈರವನು ಕಪಾಲಮೋಚನತೀರ್ಥವನ್ನು ಮುಂದಿರಿಸಿಕೊಂಡು ಅಲ್ಲಿಯೇ ಭಕ್ತರ ಪಾಪವನ್ನು ಭಕ್ಷಿಸುತ್ತ ವಾಸಿಸಿದನು.

೧೩೯ ಕಾಲಭೈರವನ ಸೇವಕನು ಅನೇಕ ಪಾಪಗಳನ್ನೆಸಗಿದ್ದರೂ ಪಾಪಭಕ್ಷಕನಾದ ಭೈರವನನ್ನು ಹೊಂದಿದ ಮೇಲೆ ಪಾಪಗಳಿಂದ ಏಕೆ ಹೆದರುವನು?

ಆಮರ್ದಯತಿ ಪಾಪಾನಿ ದುಷ್ಟಾನಾಂ ಚ ಮನೋರಥಾನ್ ।
ಆಮರ್ದಕ ಇತಿ ಖ್ಯಾತಸ್ತತೋಽಸೌ ಕಾಲಭೈರವಃ ॥ ೧೪೦ ॥
ಕಲಿಂ ಕಾಲಂ ಕಲಯತಿ ಸದಾ ಕಾಶೀನಿವಾಸಿನಾಂ ।
ಅತಃ ಖ್ಯಾತಿಂ ಪರಾಂ ಪ್ರಾಪ್ತಃ ಕಾಲಭೈರವಸಂಜ್ಞಿತಾಂ ॥ ೧೪೧ ॥
ಸದೈವ ಯಸ್ಯ ಭಕ್ತೇಭ್ಯೋ ಯಮದೂತಾಃ ಸುದಾರುಣಾಃ ।
ಪರಮಾಂ ಭೀರುತಾಂ ಪ್ರಾಪ್ತಾಸ್ತತೋಽಸೌ ಭೈರವಃ ಸ್ಮೃತಃ ॥ ೧೪೨ ॥
ಮಾರ್ಗಶೀರ್ಷಾಽಸಿತಾಷ್ಟಮ್ಯಾಂ ಕಾಲಭೈರವಸನ್ನಿಧೌ ।
ಉಪೋಷ್ಯ ಜಾಗರಂ ಕುರ್ವನ್ಮಹಾಪಾಪೈಃ ಪ್ರಮುಚ್ಯತೇ ॥ ೧೪೩ ॥
ಯತ್ಕಿಂಚಿದಶುಭಂ ಕರ್ಮ ಕೃತಂ ಮಾನುಷಬುದ್ಧಿತಃ ।
ತತ್ಸರ್ವಂ ವಿಲಯಂ ಯಾತಿ ಕಾಲಭೈರವದರ್ಶನಾತ್ ॥ ೧೪೪ ॥
ಅನೇಕಜನ್ಮನಿಯುತೈರ್ಯತ್ಕೃತಂ ಜಂತುಭಿಸ್ತ್ವಘಂ ।
ತತ್ಸರ್ವಂ ವಿಲಯತ್ಯಾಶು ಕಾಲಭೈರವದರ್ಶನಾತ್ ॥ ೧೪೫ ॥
ಕೃತ್ವಾ ಚ ವಿವಿಧಾಂ ಪೂಜಾಂ ಮಹಾಸಂಭಾರವಿಸ್ತರೈಃ ।
ನರೋ ಮಾರ್ಗಾಽಸಿತಾಷ್ಟಮ್ಯಾಂ ವಾರ್ಷಿಕಂ ವಿಘ್ನಮುತ್ಸೃಜೇತ್॥೧೪೬॥

---

೧೪೦. ಭೈರವನು ಪಾಪಗಳನ್ನು ನಿವಾರಿಸುವುದರಿಂದಲೂ, ದುಷ್ಟರ ಅಭಿಲಾಷೆಗಳನ್ನು ಕೆಡಿಸುವುದರಿಂದಲೂ ಆಮರ್ದಕನೆಂದು ವಿಖ್ಯಾತನಾದನು.

೧೪೧. ಈತನು ಯಾವಾಗಲೂ ಕಾಶೀವಾಸಿಗಳ ಕಲಿತನವನ್ನು ನಾಶಗೊಳಿಸುವುದರಿಂದ ಕಾಲಭೈರವನೆಂಬ ಪ್ರಸಿದ್ಧಿಯನ್ನು ಪಡೆದಿರುವನು.

೧೪೨. ಇವನ ಭಕ್ತರಿಗೆ ಯಮದೂತರು ಯಾವಾಗಲೂ ಹೆದರುವುದರಿಂದ ಇವನು ಭೈರವನೆಂದು ಹೆಸರನ್ನು ಪಡೆದಿರುವನು.

೧೪೩. ಮಾರ್ಗಶೀರ್ಷಮಾಸದ ಶುಕ್ಲಪಕ್ಷದ ಅಷ್ಟಮಿಯ ದಿನ ಕಾಲಭೈರವನ ಬಳಿ ಉಪವಾಸಮಾಡಿ ಜಾಗರಣೆಗೈಯುವವನು ಮಹಾಪಾಪಗಳಿಂದ ಮುಕ್ತನಾಗುವನು.

೧೪೪. ಮನುಷ್ಯನು ಸ್ವಬುದ್ಧಿಯಿಂದ ಮಾಡಿದ ಪಾಪಕರ್ಮಗಳೆಲ್ಲವೂ ಕಾಲಭೈರವನ ದರ್ಶನದಿಂದಲೇ ನಾಶವಾಗುವುವು.

೧೪೫. ಪ್ರಾಣಿಗಳು ಅನೇಕ ಜನ್ಮಗಳಲ್ಲಿ ಮಾಡಿದ ಪಾಪಗಳೆಲ್ಲವೂ ಕಾಲಭೈರವನ ದರ್ಶನದಿಂದ ಶೀಘ್ರವಾಗಿ ನಾಶವಾಗುವುವು.

೧೪೬. ಮಾರ್ಗಶೀರ್ಷಮಾಸದ ಶುಕ್ಲಾಷ್ಟಮಿಯ ದಿನ ಅನೇಕ ಸಾಮಗ್ರಿಗಳಿಂದ ವಿವಿಧ ಪೂಜೆಗಳನ್ನು ಮಾಡಿದ ಮಾನವನು ಒಂದುವರ್ಷದ ವಿಘ್ನಗಳನ್ನು ಪರಿಹರಿಸಿಕೊಳ್ಳುವನು.

ಅಷ್ಟಮ್ಯಾಂ ಚ ಚತುರ್ದಶ್ಯಾಂ ರವಿಭೂಮಿಜವಾಸರೇ ।
ಯಾತ್ರಾಂ ಚ ಭೈರವೀಂ ಕೃತ್ವಾ ಕೃತ್ಯೈಃ ಪಾಪೈಃ ಪ್ರಮುಚ್ಯತೇ ॥ ೧೪೭ ॥
ಕಾಲಭೈರವಭಕ್ತಾನಾಂ ಸದಾ ಕಾಶೀನಿವಾಸಿನಾಂ ।
ವಿಘ್ನಂ ಯಃ ಕುರುತೇ ಮೂಢಃ ಸ ದುರ್ಗತಿಮವಾಪ್ನುಯಾತ್॥ ೧೪೮ ॥
ವಿಶ್ವೇಶ್ವರೇಽಪಿ ಯೇ ಭಕ್ತಾ ನೋ ಭಕ್ತಾಃ ಕಾಲಭೈರವೇ ।
ಕಾಶ್ಯಾಂ ತೇ ವಿಘ್ನ ಸಂಘಾತಂ ಲಭಂತೇ ತು ಪದೇಪದೇ ॥ ೧೪೯ ॥
ತೀರ್ಥೇ ಕಾಲೋದಕೇ ಸ್ನಾತ್ವಾ ಕೃತ್ವಾ ತರ್ಪಣಮತ್ವರಃ ।
ವಿಲೋಕ್ಯ ಕಾಲರಾಜಂ ಚ ನಿರಯಾದುದ್ಧರೇತ್ಪಿತೄನ್ ॥ ೧೫೦ ॥
ಅಷ್ಟೌ ಪ್ರದಕ್ಷಿಣೀಕೃತ್ಯ ಪ್ರತ್ಯಹಂ ಪಾಪಭಕ್ಷಣಂ ।
ನರೋ ನ ಪಾಪೈರ್ಲಿಪ್ಯೇತ ಮನೋವಾಕ್ಕಾಯಸಂಭವೈಃ ॥ ೧೫೧ ॥
ತಸ್ಮಿನ್ನಾಮರ್ದಕೇ ಪೀಠೇ ಜಪ್ತ್ವಾ ಸ್ವಾಽಭೀಷ್ಟದೇವತಾಂ ।
ಷಣ್ಮಾಸಂ ಸಿದ್ಧಿಮಾಪ್ನೋತಿ ಸಾಧಕೋ ಭೈರವಾಜ್ಞಯಾ ॥ ೧೫೨ ॥
ವಾರಾಣಸ್ಯಾಮುಷಿತ್ವಾ ಯೋ ಭೈರವಂ ನ ಭಜೇನ್ನರಃ ।
ತಸ್ಯ ಪಾಪಾನಿ ವರ್ಧಂತೇ ಶುಕ್ಲಪಕ್ಷೇ ಯಥಾ ಶಶೀ ॥ ೧೫೩ ॥
ಯಂ ಯಂ ಸಂಚಿಂತಯೇತ್ಕಾಮಂ ಪಾಪಭಕ್ಷಣಸೇವಯಾ ।
ಬಲಿಪೂಜೋಪಹಾರೈಶ್ಚ ತಂ ತಂ ಸ ಸಮವಾಪ್ನುಯಾತ್ ॥ ೧೫೪ ॥

---

೧೪೭. ಅಷ್ಟಮೀ, ಚತುರ್ದಶೀ, ಭಾನು, ಮಂಗಳವಾರಗಳಲ್ಲಿ ಭೈರವನ ಯಾತ್ರೆಯನ್ನು ಮಾಡಿದವನು ಪಾಪಗಳಿಂದ ಮುಕ್ತನಾಗುವನು.

೧೪೮. ಯಾವಾಗಲೂ ಕಾಶಿಯಲ್ಲಿ ವಾಸಿಸುವ ಕಾಲಭೈರವನ ಭಕ್ತರಿಗೆ ವಿಘ್ನವನ್ನುಂಟುಮಾಡುವ ಮಾನವನು ದುರ್ಗತಿಯನ್ನೇ ಹೊಂದುವನು.

೧೪೯. ವಿಶ್ವೇಶ್ವರನ ಭಕ್ತರಾಗಿದ್ದರೂ, ಕಾಲಭೈರವನಲ್ಲಿ ಭಕ್ತಿಮಾಡದ ಕಾಶೀವಾಸಿಗಳು ಪ್ರತಿ ಹೆಜ್ಜೆಗೂ ವಿಘ್ನಗಳನ್ನು ಹೊಂದುವರು.

೧೫೦–೧೫೧. ಕಾಲೋದಕತೀರ್ಥದಲ್ಲಿ ಮಿಂದು ತ್ವರೆಯಿಲ್ಲದೆ ತರ್ಪಣಗೈದು ಕಾಲರಾಜನನ್ನು ನೋಡಿದ ಮಾನವನು ಪಿತೃಗಳನ್ನು ಉದ್ಧರಿಸುವನು. ಪ್ರತಿ ದಿನವೂ ಕಾಲಭೈರವನಿಗೆ ಎಂಟು ಪ್ರದಕ್ಷಿಣೆಗಳನ್ನು ಮಾಡಿದ ಮಾನವನು ವಾಙ್ಮನಸ್ಸು ಮತ್ತು ದೇಹಗಳಿಂದುಂಟಾದ ಪಾಪಗಳಿಂದ ಲಿಪ್ತನಾಗುವುದಿಲ್ಲ.

೧೫೨. ಸಾಧಕನು ಆ ಆಮರ್ದಕಪೀಠದಲ್ಲಿ ತನ್ನ ಅಭೀಷ್ಟದೇವತೆಯನ್ನು ಜಪಿಸಿದರೆ ಆರು ತಿಂಗಳಲ್ಲಿ ಭೈರವನ ಆಜ್ಞೆಯಿಂದ ಸಿದ್ಧಿಯನ್ನು ಪಡೆಯುವನು.

೧೫೩. ವಾರಾಣಸಿಯಲ್ಲಿ ವಾಸಿಸುತ್ತ ಭೈರವನನ್ನು ಭಜಿಸದ ಮಾನವನ ಪಾಪಗಳು ಶುಕ್ಲಪಕ್ಷದ ಚಂದ್ರನಂತೆ ವೃದ್ಧಿಯಾಗುವುವು.

೧೫೪. ಭೈರವನನ್ನು ಬಲಿಪೂಜೋಪಹಾರಗಳಿಂದ ಸೇವಿಸುತ್ತ ಯಾವ ಯಾವ ಇಷ್ಟಾರ್ಥಗಳನ್ನು ಮಾನವನು ಚಿಂತಿಸಿದರೂ ಅದದನ್ನು ಹೊಂದುವನು.

ಕಾಲರಾಜಂ ನ ಯಃ ಕಾಶ್ಯಾಂ ಪ್ರತಿಭೂತಾಽಷ್ಟಮೀ ಕುಜಂ ।
ಭಜೇತ್ತಸ್ಯ ಕ್ಷಯೇತ್ಪುಣ್ಯಂ ಕೃಷ್ಣಪಕ್ಷೇ ಯಥಾ ಶಶೀ ॥ ೧೫೫ ॥
ಶ್ರುತ್ವಾಽಧ್ಯಾಯಮಿಮಂ ಪುಣ್ಯಂ ಬ್ರಹ್ಮಹತ್ಯಾಽಪನೋದಕಂ ।
ಭೈರವೋತ್ಪತ್ತಿಸಂಜ್ಞಂ ಚ ಸರ್ವಪಾಪೈಃ ಪ್ರಮುಚ್ಯತೇ ॥ ೧೫೬ ॥
ಬಂಧನಾಗಾರಸಂಸ್ಥೋಽಪಿ ಪ್ರಾಪ್ತೋಽಪಿ ವಿಪದಂ ಪರಾಂ ।
ಪ್ರಾದುರ್ಭಾವಂ ಭೈರವಸ್ಯ ಶ್ರುತ್ವಾ ಮುಚ್ಯೇತ ಸಂಕಟಾತ್ ॥ ೧೫೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಭೈರವಪ್ರಾದುರ್ಭಾವವರ್ಣನಂ" ನಾಮೈಕತ್ರಿಂಶೋಽಧ್ಯಾಯಃ

---

೧೫೫. ಯಾವನು ಕಾಶಿಯಲ್ಲಿರುವ ಕಾಲರಾಜನನ್ನು ಚತುರ್ದಶೀ, ಅಷ್ಟಮೀ, ಮಂಗಳವಾರಗಳಲ್ಲಿ ಸೇವಿಸುವನೊ; ಅವನ ಪುಣ್ಯವು ಕೃಷ್ಣಪಕ್ಷದಲ್ಲಿ ಚಂದ್ರನು ಕ್ಷಯಿಸುವಂತೆ ಕ್ಷಯಿಸಿಹೋಗುವುದು.

೧೫೬. ಬ್ರಹ್ಮಹತ್ಯೆಯನ್ನು ಪರಿಹರಿಸುವುದೂ, ಭೈರವೋತ್ಪತ್ತಿಯೆಂದು ಹೆಸರುಳ್ಳುದೂ, ಪುಣ್ಯಕರವೂ ಆದ ಈ ಅಧ್ಯಾಯವನ್ನು ಶ್ರವಣಮಾಡಿದವನು ಸಕಲ ಪಾಪಗಳಿಂದಲೂ ಮುಕ್ತನಾಗುವನು.

೧೫೭. ಬಂಧನದಲ್ಲಿದ್ದರೂ, ಮಹಾಪತ್ತನ್ನು ಹೊಂದಿದ್ದರೂ ಭೈರವನ ಉತ್ಪತ್ತಿಯನ್ನು ಕೇಳಿದರೆ ಆ ಆ ಸಂಕಟದಿಂದ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ಭೈರವಪ್ರಾದುರ್ಭಾವವರ್ಣನ"ವೆಂಬ ಮೂವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾತ್ರಿಂಶೋಽಧ್ಯಾಯಃ

## ದಂಡಪಾಣಿಪ್ರಾದುರ್ಭಾವವರ್ಣನಂ

ಅಗಸ್ತ್ಯ ಉವಾಚ :—

ಬರ್ಹಿಯಾನ ಸಮಾಚಕ್ಷ್ವ ಹರಿಕೇಶಸಮುದ್ಭವಂ ।
ಕೋಽಸೌ ಕಸ್ಯ ಸುತಃ ಶ್ರೀಮಾನ್ ಕೀದೃಗಸ್ಯ ತಪೋ ಮಹತ್ ॥ ೧ ॥
ಕಥಂ ಚ ದೇವದೇವಸ್ಯ ಪ್ರಿಯತ್ವಂ ಸಮುಪೇಯಿವಾನ್ ।
ಕಾಶೀವಾಸಿಜನೀನೋಽಭೂತ್ಕಥಂ ವಾ ದಂಡನಾಯಕಃ ॥ ೨ ॥
ಏತದಿಚ್ಛಾಮ್ಯಹಂ ಶ್ರೋತುಂ ಪ್ರಸಾದಂ ಕುರು ಮೇ ವಿಭೋ ।
ಅನ್ನದತ್ವಂ ಚ ಸಂಪ್ರಾಪ್ತಃ ಕಥಮೇಷ ಮಹಾಮತಿಃ ॥ ೩ ॥
ಸಂಭ್ರಮೋ ವಿಭ್ರಮಶ್ಚೋಭೌ ಕಥಂ ತದನುಗಾಮಿನೌ ।
ವಿಭ್ರಾಂತಿಕಾರಿಣೌ ಕ್ಷೇತ್ರವೈರಿಣಾಂ ಸರ್ವದಾ ನೃಣಾಂ ॥ ೪ ॥

ಸ್ಕಂದ ಉವಾಚ :—

ಸಮ್ಯಗಾಪೃಚ್ಛಿ ಭವತಾ ಕಾಶೀವಾಸಿಸಮಾಹಿತಂ ।
ಕುಂಭಸಂಭವ ವಿಪ್ರರ್ಷೇ ದಂಡಪಾಣಿಕಥಾನಕಂ ॥ ೫ ॥

---

## ಕನ್ನಡದ ಅನುವಾದ

### ದಂಡಪಾಣಿಪ್ರಾದುರ್ಭಾವವರ್ಣನ

೧. ಅಗಸ್ತ್ಯನು ಹೇಳುತ್ತಾನೆ:—ಮಯೂರವಾಹನನಾದ ಎಲೈ ಸ್ಕಂದನೆ! ಹರಿಕೇಶನ ಉತ್ಪತ್ತಿಯನ್ನು ನನಗೆ ಹೇಳು. ಇವನು ಯಾರು? ಯಾರ ಮಗನು? ಇವನ ಮಹಾತಪಸ್ಸು ಎಂತಹದು?

೨. ಈ ಹರಿಕೇಶನು ಮಹೇಶ್ವರನಿಗೆ ಹೇಗೆ ಪ್ರಿಯನಾದನು? ಕಾಶಿಯಲ್ಲಿ ವಾಸಿಸುವ ಜನರಲ್ಲಿ ಹೇಗೆ ಪ್ರಖ್ಯಾತನಾದನು? ಹೇಗೆ ದಂಡನಾಯಕನಾದನು?

೩. ಈ ಮಹಾಪ್ರಾಜ್ಞನು ಅನ್ನದಾತನಾದುದೆಂತು? ಎಲೈ ಸ್ವಾಮಿಯೆ! ನಾನು ಇದನ್ನು ಕೇಳಬಯಸುವೆನು? ಅನುಗ್ರಹಮಾಡು.

೪. ಆ ಕ್ಷೇತ್ರಕ್ಕೆ ವೈರಿಗಳಾದ ಮಾನವರಿಗೆ ಭ್ರಾಂತಿಯನ್ನುಂಟುಮಾಡುವ ಸಂಭ್ರಮವಿಭ್ರಮರು ಅವನಿಗೆ ಅನುಚರರಾದುದು ಹೇಗೆ?

೫. ಸ್ಕಂದನು ಹೇಳುತ್ತಾನೆ:—ಅಗಸ್ತ್ಯ! ನೀನು ಕಾಶೀವಾಸಿಗಳಿಗೆ ಹಿತವಾದ ದಂಡಪಾಣಿಯ ಕಥೆಯನ್ನು ಚೆನ್ನಾಗಿ ಪ್ರಶ್ನಿಸಿರುವೆ.

ಯದಾಕರ್ಣ್ಯ ನರಃ ಪ್ರಾಜ್ಞ ಕಾಶೀವಾಸಸ್ಯ ಯತ್ಫಲಂ ।
ನಿಷ್ಪ್ರತ್ಯೂಹಂ ತದಾಪ್ನೋತಿ ವಿಶ್ವಭರ್ತುರನುಗ್ರಹಾತ್ ॥ ೬ ॥
ರತ್ನಭದ್ರ ಇತಿಖ್ಯಾತಃ ಪರ್ವತೇ ಗಂಧಮಾದನೇ ।
ಯಕ್ಷಃ ಸುಕೃತಲಕ್ಷ್ಮಶ್ರೀಃ ಪುರಾ ಪರಮಧಾರ್ಮಿಕಃ ॥ ೭ ॥
ಪೂರ್ಣಭದ್ರಂ ಸುತಂ ಪ್ರಾಪ್ಯ ಸೋಽಭೂತ್ಪೂರ್ಣಮನೋರಥಃ ।
ವಯಶ್ಚರಮಮಾಸಾದ್ಯ ಭುಕ್ತ್ವಾ ಭೋಗಾನನೇಕಶಃ ॥ ೮ ॥
ಶಾಂಭವೇನಾಽಥ ಯೋಗೇನ ದೇಹಮುತ್ಸೃಜ್ಯ ಪಾರ್ಥಿವಂ ।
ಆಸಸಾದ ಶಿವಂ ಶಾಂತಂ ಶಾಂತಸರ್ವೇಂದ್ರಿಯಾರ್ಥಕಃ ॥ ೯ ॥
ಪಿತರ್ಯುಪರತೇ ಸೋಽಥ ಪೂರ್ಣಭದ್ರೋ ಮಹಾಯಶಾಃ ।
ಸುಕೃತೋಪಾತ್ತವಿಭವೋ ಭವಸಂಭೋಗಭುಕ್ತಿಭಾಕ್ ॥ ೧೦ ॥
ಸರ್ವಾನ್ಮನೋರಥಾಂಲ್ಲೇಭೇ ವಿನಾ ಸ್ವರ್ಗೈಕಸಾಧನಂ ।
ಗಾರ್ಹಸ್ಥ್ಯಾಶ್ರಮನೇಪಥ್ಯಂ ಪಥ್ಯಂ ಪೈತಾಮಹಂ ಮಹತ್ ॥ ೧೧ ॥
ಸಂಸಾರತಾಪಸಂತಪ್ತಾಽವಯವಾಽಮೃತಸೀಕರಂ ।
ಅಪತ್ಯಂ ಪತತಾಂ ಪೋತಂ ಬಹುಕ್ಲೇಶಮಹಾರ್ಣವೇ ॥ ೧೨ ॥

---

೬. ಈ ಕಥೆಯನ್ನು ಕೇಳಿದ ಮಾನವನು ವಿಶ್ವೇಶ್ವರನ ಅನುಗ್ರಹದಿಂದ ಕಾಶೀವಾಸದ ಪುಣ್ಯವನ್ನು ವಿಘ್ನವಿಲ್ಲದೆ ಹೊಂದುವನು.

೭. ಹಿಂದೆ ಗಂಧಮಾದನ ಪರ್ವತದಲ್ಲಿ ಪುಣ್ಯವನ್ನು ಸೂಚಿಸುವ ಸಂಪತ್ತುಳ್ಳವನೂ, ಅತ್ಯಂತ ಧರ್ಮಿಷ್ಠನೂ ಆದ ರತ್ನಭದ್ರನೆಂಬ ಯಕ್ಷನೋರ್ವನಿದ್ದನು.

೮–೯. ಅವನು ಪೂರ್ಣಭದ್ರನೆಂಬ ಮಗನನ್ನು ಪಡೆದು ಸಂಪೂರ್ಣ ಮನೋರಥವುಳ್ಳವನಾದನು. ಅನಂತರ ಅವನು ಅನೇಕ ಭೋಗಗಳನ್ನನುಭವಿಸಿ ಶಿವಧ್ಯಾನರೂಪವಾದ ಯೋಗದಿಂದ ಪಾರ್ಥಿವ ಶರೀರವನ್ನು ತ್ಯಜಿಸಿ ಸಕಲೇಂದ್ರಿಯಾರ್ಥಗಳನ್ನು ಬಿಟ್ಟವನಾಗಿ ಶಿವನ ಸಾಯುಜ್ಯವನ್ನು ಹೊಂದಿದನು.

೧೦–೧೨. ತಂದೆಯು ಮೃತನಾಗಲು ಯಶಸ್ವಿಯಾದ ಪೂರ್ಣಭದ್ರನು ಪುಣ್ಯದಿಂದುಂಟಾದ ಐಶ್ವರ್ಯಗಳಿಂದ ಸಾಂಸಾರಿಕವಾದ ಸಮಸ್ತಭೋಗಗಳನ್ನನುಭವಿಸುತ್ತ ಸ್ವರ್ಗಕ್ಕೆ ಕಾರಣನೂ, ಗೃಹಸ್ಥಾಶ್ರಮಕ್ಕೆ ಅಲಂಕಾರನೂ, ಪಿತಾಮಹಾದಿಗಳಿಗೆ ಅತ್ಯಂತ ಹಿತವನ್ನುಂಟುಮಾಡುವವನೂ, ಸಂಸಾರದ ಸಂತಾಪದಿಂದ ಸಂತಪ್ತರಾದವರಿಗೆ ಅಮೃತಬಿಂದುವಿನಂತಿರುವವನೂ, ಅತಿ ದುಃಖವೆಂಬ ಸಮುದ್ರದಲ್ಲಿ ಮುಳುಗುತ್ತಿರುವವರಿಗೆ ದೋಣಿಯಂತಿರುವವನೂ ಆದ ಪುತ್ರನೊಬ್ಬನನ್ನುಮಾತ್ರ ಬಿಟ್ಟು ಇತರ ಮನೋರಥಗಳನ್ನೂ ಪಡೆದನು.

ಪೂರ್ಣಭದ್ರೋಽಥ ಸಂವೀಕ್ಷ್ಯ ಮಂದಿರಂ ಸರ್ವಸುಂದರಂ ।
ತದ್ಬಾಲಕೋಮಲಾಲಾಪವಿಕಲಂ ತ್ಯಕ್ತಮಂಗಲಂ ॥ ೧೩ ॥
ಶೂನ್ಯಂ ದರಿದ್ರಹೃದಿವ ಜೀರ್ಣಾರಣ್ಯಮಿವಾಽಥವಾ ।
ಪಾಂಥವತ್ಪ್ರಾಂತರಮಿವ ಖಿನ್ನೋಽತೀವಾಽನಪತ್ಯವಾನ್ ॥ ೧೪ ॥
ಆಹೂಯ ಗೃಹಿಣೀಂ ಸೋಽಥ ಯಕ್ಷ್ಮೀ ಕನಕಕುಂಡಲಾಂ ।
ಉವಾಚ ಯಕ್ಷಿಣೀಂ ಶ್ರೇಷ್ಠಾಂ ಪೂರ್ಣಭದ್ರೋ ಘಟೋದ್ಭವ ॥ ೧೫ ॥
ನ ಹರ್ಮ್ಯಸುಖದಂ ಕಾಂತೇ ದರ್ಪಣೋದರಸುಂದರಂ ।
ಮುಕ್ತಾಗವಾಕ್ಷಸುಭಗಂ ಚಂದ್ರಕಾಂತಶಿಲಾಜಿರಂ ॥ ೧೬ ॥
ಪದ್ಮರಾಗೇಂದ್ರನೀಲಾರ್ಚಿರರ್ಚಿತಾಟ್ಟಾಲಕಂ ಕ್ವಣತ್ ।
ವಿದ್ರುಮಸ್ತಂಭಶೋಭಾಢ್ಯಂ ಸ್ಫುರತ್‌ಸ್ಫಟಿಕಕುಡ್ಯವತ್ ॥ ೧೭ ॥
ಪ್ರೇಂಖತ್ಪತಾಕಾನಿಕರಂ ಮಣಿಮಾಣಿಕ್ಯಮಾಲಿತಂ ।
ಕೃಷ್ಣಾಗುರುಮಹಾಧೂಪ ಬಹುಲಾಮೋದಮೋದಿತಂ ॥ ೧೮ ॥
ಅನರ್ಘ್ಯಾಸನಸಂಯುಕ್ತಂ ಚಾರುಪರ್ಯಂಕಭೂಷಿತಂ ।
ರಮ್ಯಾರ್ಗಲಕಪಾಲಾಢ್ಯಂ ದುಕೂಲಛನ್ನಮಂಡಪಂ ॥ ೧೯ ॥

---

೧೩–೧೫. ಎಲೈ ಅಗಸ್ತ್ಯನೆ! ಅನಂತರ ಪೂರ್ಣಭದ್ರನು ಸುಂದರವೂ, ಬಾಲಕನ ಕೋಮಲಾಲಾಪಗಳಿಂದ ರಹಿತವೂ, ಮಂಗಲವಿಲ್ಲದುದೂ ಆಗಿ ಶೂನ್ಯವಾದ ಬಡವನ ಮನಸ್ಸಿನಂತೆಯೂ, ಜೀರ್ಣಾರಣ್ಯದಂತೆಯೂ ಇರುವ ತನ್ನ ಮನೆಯನ್ನು ಕಂಡು ದೂರದ ದಾರಿಯನ್ನು ಕಂಡ ಮಾರ್ಗಸ್ಥನಂತೆ ತುಂಬ ವ್ಯಥೆಗೊಂಡವನಾಗಿ ಕನಕಕುಂಡಲೆಯೆಂಬ ತನ್ನ ಪತ್ನಿಯನ್ನು ಕುರಿತು ಹೀಗೆಂದನು.

೧೬–೨೫. "ಪ್ರಿಯಳೆ! ಕನ್ನಡಿಯಂತೆ ಸುಂದರವಾಗಿ, ಮುತ್ತಿನ ಗವಾಕ್ಷಗಳುಳ್ಳುದೂ, ಚಂದ್ರಕಾಂತಶಿಲೆಯ ಅಂಗಣವುಳ್ಳುದೂ, ಪದ್ಮರಾಗ, ಇಂದ್ರನೀಲ ಮಣಿಗಳ ಕಾಂತಿಯುಳ್ಳ ಬುರುಜುಳ್ಳುದೂ, ಹವಳದ ಕಂಬದಿಂದ ವಿರಾಜಿಸುವುದೂ, ಪ್ರಕಾಶಮಾನವಾದ ಸ್ಫಟಿಕದ ಗೋಡೆಯುಳ್ಳುದೂ, ಅಲುಗಾಡುತ್ತಿರುವ ಪತಾಕೆಗಳ ಸಮೂಹವುಳ್ಳುದೂ, ಮಾಣಿಕ್ಯದ ಮಾಲೆಯುಳ್ಳುದೂ, ಕೃಷ್ಣಾಗುರುಧೂಪದ ಸುವಾಸನೆಯಿಂದ ಸಂತೋಷವನ್ನುಂಟುಮಾಡುವುದೂ, ಅಮೂಲ್ಯವಾದ ಆಸನಗಳಿಂದ ಕೂಡಿರುವುದೂ, ಮನೋಹರವಾದ ಮಂಚಗಳಿಂದ ಅಲಂಕಾರಗೊಂಡುದೂ, ಸುಂದರವಾದ ಅಗಣಿಬಾಗಿಲುಗಳುಳ್ಳುದೂ, ಪಟ್ಟೆವಸ್ತ್ರದಿಂದ ಮುಚ್ಚಿದ ಮಂಡಪವುಳ್ಳುದೂ, ರಮ್ಯವಾದ ಕ್ರೀಡಾಂಗಣಗಳಿಂದ ಕೂಡಿರುವುದೂ, ಕುದುರೆಗಳ ಸಾಲುಗಳಿಂದ ಪ್ರಕಾಶಗೊಂಡುದೂ, ನೂರಾರು ಸೇವಕರು, ದಾಸಿಯರುಗಳಿಂದ ತುಂಬಿದುದೂ, ಕಿರುಗೆಜ್ಜೆಗಳಿಂದ ಧ್ವನಿಗೊಂಡುದೂ, ಕಾಲ್ಗೆಜ್ಜೆಗಳ ಧ್ವನಿಯಲ್ಲಿ ಔತ್ಸುಕ್ಯವುಳ್ಳ ನವಿಲುಗಳ ಕೇಕೆ

ಸುರಮ್ಯರತಿಶಾಲಾಢ್ಯಂ ವಾಜಿರಾಜಿವಿರಾಜಿತಂ ।
ದಾಸದಾಸೀಶತಾಕೀರ್ಣಂ ಕಿಂಕಿಣೀನಾದನಾದಿತಂ ॥ ೨೦ ॥
ನೂಪುರಾರಾವಸೋತ್ಕಂಠಕೇಕಿಕೇಕಾರವಾಕುಲಂ ।
ಕೂಜತ್ಪಾರಾವತಕುಲಂ ಗುರುಸಾರೀಕಥಾವರಂ ॥ ೨೧ ॥
ಖೇಲನ್ಮರಾಲಯುಗಲಂ ಜೀವಂಜೀವಕಕಾಂತಿಮತ್ ।
ಮಾಲ್ಯಾಹೂತದ್ವಿರೇಫಾಣಾಂ ಮಂಜುಗುಂಜಾರವಾವೃತಂ ॥ ೨೨ ॥
ಕರ್ಪೂರೈಣಮದಾಮೋದಸೋದರಾಽನಿಲವೀಜಿತಂ ।
ಕ್ರೀಡಾಮರ್ಕಟದಂಷ್ಟ್ರಾಗ್ರೀ ಕೃತಮಾಣಿಕ್ಯದಾಡಿಮಂ ॥ ೨೩ ॥
ದಾಡಿಮೀಬೀಜಸಂಭ್ರಾಂತಶುಕತುಂಡಾತ್ತಮೌಕ್ತಿಕಂ ।
ಧನಧಾನ್ಯಸಮೃದ್ಧಂ ಚ ಪದ್ಮಾಲಯಮಿವಾಽಪರಂ ॥ ೨೪ ॥
ಕಮಲಾಮೋದಗರ್ಭಂ ಚ ಗರ್ಭರೂಪಂ ವಿನಾ ಪ್ರಿಯೇ ।
ಗರ್ಭರೂಪಮುಖಂ ಪ್ರೇಕ್ಷ್ಯೇ ಕಥಂ ಕನಕಕುಂಡಲೇ ॥ ೨೫ ॥
ಯದ್ಯುಪಾಯೋಽಸ್ತಿ ತದ್ಬ್ರೂಹಿ ಧಿಗಪುತ್ರಸ್ಯ ಜೀವಿತಂ ।
ಸರ್ವಂ ಶೂನ್ಯಮಿವಾಭಾತಿ ಗೃಹಮೇತದನಂಗಜಂ ॥ ೨೬ ॥
ಧಿಗೇತತ್ಸೌಧಸೌಂದರ್ಯಂ ಧಿಗೇತದ್ಧನಸಂಚಯಂ ।
ವಿನಾಽಪತ್ಯಂ ಪ್ರಿಯತಮೇ ಜೀವಿತಂ ಚ ಧಿಗಾವಯೋಃ ॥ ೨೭ ॥

---

ಗಳುಳ್ಳದೂ, ಕೂಗುತ್ತಿರುವ ಪಾರಿವಾಳಗಳ ಸಮೂಹವುಳ್ಳದೂ, ಗಿಳಿಗಳ ಸವಿಮಾತುಳ್ಳದೂ, ಕ್ರೀಡಿಸುತ್ತಿರುವ ಹಂಸಗಳುಳ್ಳದೂ, ಚಕೋರಕಗಳ ಕಾಂತಿಯುಳ್ಳದೂ, ಹೂವಿನ ಮಾಲೆಗಾಗಿ ಬಂದೆರಗಿದ ಭ್ರಮರಗಳ ಮನೋಹರವಾದ ಧ್ವನಿಯಿಂದ ಕೂಡಿರುವುದೂ, ಕರ್ಪೂರ ಕಸ್ತೂರಿಗಳಿಂದ ಸುವಾಸನೆಗೊಂಡು ಬೀಸುತ್ತಿರುವ ಗಾಳಿಯೊಡಗೂಡಿದುದೂ, ಆಡುತ್ತಿರುವ ಕಪಿಗಳು ಹಲ್ಲುಗಳಿಂದ ಕಚ್ಚುತ್ತಿರುವ ಮಾಣಿಕ್ಯಗಳೆಂಬ ದಾಳಿಂಬರೆಯ ಹಣ್ಣುಳ್ಳದೂ, ಗಿಣಿಗಳು ದಾಳಿಂಬರೆಯ ಬೀಜಗಳೆಂಬ ಭ್ರಾಂತಿಯಿಂದ ತೆಗೆದುಕೊಳ್ಳುತ್ತಿರುವ ಮುತ್ತುಗಳುಳ್ಳದೂ, ಧನಧಾನ್ಯಗಳಿಂದ ತುಂಬಿರುವುದೂ, ಲಕ್ಷ್ಮಿಯ ಮತ್ತೊಂದು ಮನೆಯಂತಿರುವುದೂ, ಕಮಲದ ಸುವಾಸನೆಯುಳ್ಳದೂ ಆದ ಈ ನಮ್ಮ ಅರಮನೆಯು ಪುತ್ರನಿಲ್ಲದೆ ಆನಂದವನ್ನುಂಟುಮಾಡುತ್ತಿಲ್ಲ. ಓ ಕನಕಕುಂಡಲೆ! ಈ ಜನ್ಮದಲ್ಲಿ ನಾನು ಪುತ್ರನ ಮುಖವನ್ನು ನೋಡುವೆನೇ?

೨೬. ಪುತ್ರನನ್ನು ಪಡೆಯಲು ಉಪಾಯವಿದ್ದರೆ ಹೇಳು. ಮಕ್ಕಳಿಲ್ಲದವನ ಬಾಳು ನಿಂದಿತವಾದುದು. ಮಕ್ಕಳಿಲ್ಲದ ಈ ಮನೆಯು ಶೂನ್ಯವಾಗಿರುವಂತೆ ಕಾಣಿಸುವುದು.

೨೭. ಪ್ರಿಯಳೆ! ಮಕ್ಕಳಿಲ್ಲದ ಈ ಮನೆಯ ಸೌಂದರ್ಯವನ್ನೂ, ಧನಸಮೂಹವನ್ನೂ, ನಮ್ಮಿರ್ವರ ಜೀವನವನ್ನೂ ನಿಂದಿಸು.

ಪ್ರಲಪಂತಮಿವ ಪ್ರೋಚ್ಚೈಃ ಪ್ರಿಯಂ ಕನಕಕುಂಡಲಾ ।
ಬಭಾಷೇಽಂತರ್ವಿನಿಃಶ್ವಸ್ಯ ಯಕ್ಷಿಣೀ ಸಾ ಪತಿವ್ರತಾ ॥ ೨೮ ॥

ಕನಕಕುಂಡಲೋವಾಚ :—

ಕಿಮರ್ಥಂ ಖಿದ್ಯಸೇ ಕಾಂತ ಜ್ಞಾನವಾನಸಿ ಯದ್ಭವಾನ್ ।
ಅತ್ರೋಪಾಯೋಽಸ್ತ್ಯಪತ್ಯಾಪ್ತ್ಯೈ ವಿಸ್ರಬ್ಧಮವಧಾರಯ ॥ ೨೯ ॥
ಕಿಮುದ್ಯಮವತಾಂ ಪುಂಸಾಂ ದುರ್ಲಭಂ ಹಿ ಚರಾಚರೇ ।
ಈಶ್ವರಾರ್ಪಿತಬುದ್ಧೀನಾಂ ಸ್ಫುರಂತ್ಯಗ್ರೇ ಮನೋರಥಾಃ ॥ ೩೦ ॥
ದೈವಂ ಹೇತುಂ ವದಂತ್ಯೇವ ಭೃಶಂ ಕಾಪುರುಷಾಃ ಪತೇ ।
ಸ್ವಯಂ ಪುರಾಕೃತಂ ಕರ್ಮ ದೈವಂ ತಚ್ಚ ನಹೀತರತ್ ॥ ೩೧ ॥
ತತಃ ಪೌರುಷಮಾಲಂಬ್ಯ ತತ್ಕರ್ಮಪರಿಶಾಂತಯೇ ।
ಈಶ್ವರಂ ಶರಣಂ ಯಾಯಾತ್ಸರ್ವಕಾರಣಕಾರಣಂ ॥ ೩೨ ॥
ಅಪತ್ಯಂ ದ್ರವಿಣಂ ದಾರಾ ಹಾರಾ ಹರ್ಮ್ಯಂ ಹಯಾ ಗಜಾಃ ।
ಸುಖಾನಿ ಸ್ವರ್ಗಮೋಕ್ಷೌ ಚ ನ ದೂರೇ ಶಿವಭಕ್ತಿತಃ ॥ ೩೩ ॥
ವಿಧಾತುಃ ಶಾಂಭವೀಂ ಭಕ್ತಿಂ ಪ್ರಿಯ ಸರ್ವೇ ಮನೋರಥಾಃ ।
ಸಿದ್ಧಯೋಽಷ್ಟೌ ಗೃಹದ್ವಾರಂ ಸೇವಂತೇ ನಾಽತ್ರ ಸಂಶಯಃ ॥ ೩೪ ॥

---

೨೮. ಪತಿವ್ರತೆಯಾದ ಆ ಕನಕುಂಡಲೆಯಾದರೊ ಹೀಗೆ ಪ್ರಲಪಿಸುತ್ತಿರುವ ಪ್ರಿಯನನ್ನು ಕುರಿತು ನಿಟ್ಟುಸಿರುಬಿಟ್ಟು ಹೀಗೆಂದಳು.

೨೯. ಕನಕಕುಂಡಲೆಯು ಹೇಳುತ್ತಾಳೆ:—ಪ್ರಿಯನೆ! ಜ್ಞಾನಿಯಾದ ನೀನು ಹೀಗೇಕೆ ವ್ಯಥೆಗೊಳ್ಳುತ್ತಿರುವೆ? ಪುತ್ರನನ್ನು ಪಡೆಯಲು ಉಪಾಯ ವೊಂದಿರುವುದು. ಅದನ್ನು ವಿಶ್ವಾಸವಿಟ್ಟು ಕೇಳು.

೩೦. ಭಗವಂತನಲ್ಲಿ ಮನಸ್ಸುಳ್ಳವರಾಗಿ ಪ್ರಯತ್ನಿಸುವ ಮಾನವರಿಗೆ ಈ ಚರಾಚರಪ್ರಪಂಚದಲ್ಲಿ ದುರ್ಲಭವಾದುದಾವುದು? ಅವರಿಗೆ ಅಭಿಲಾಷೆಗಳು ತಾವಾಗಿಯೇ ಸ್ಫುರಿಸುವುವು.

೩೧. ನಾಥ! ದುಷ್ಟಜನರು, ಹೀಗಾಗಲು ದೈವವು ಕಾರಣವೆನ್ನುವರು. ತಾನು ಹಿಂದೆ ಮಾಡಿದ ಕರ್ಮವೇ ದೈವವಾಗಿರುವುದು ; ಅದು ಬೇರೆಯಲ್ಲ.

೩೨. ಆದ್ದರಿಂದ ಆ ಕರ್ಮದ ಶಾಂತಿಗಾಗಿ ಪುರುಷಪ್ರಯತ್ನವನ್ನಾಶ್ರಯಿಸಿ ಸಕಲ ಕಾರಣಗಳಿಗೂ ಕಾರಣನಾದ ಈಶ್ವರನನ್ನು ಮರೆಹೋಗಬೇಕು.

೩೩. ಮಕ್ಕಳು, ದ್ರವ್ಯ, ಹೆಂಡತಿ, ಹಾರ, ಅರಮನೆ, ಕುದುರೆ, ಆನೆ, ಸುಖ, ಸ್ವರ್ಗ, ಮೋಕ್ಷ ಇವುಗಳು ಶಿವಭಕ್ತಿಗೆ ದೂರವಾದವುಗಳಲ್ಲ.

೩೪. ಶಿವನಲ್ಲಿ ಭಕ್ತಿಮಾಡುವವನ ಮನೆಯ ಬಾಗಿಲನ್ನು ಸಕಲ ಮನೋರಥಗಳೂ, ಅಷ್ಟಸಿದ್ಧಿಗಳೂ, ಸೇವಿಸುವುವು. ಈ ವಿಷಯದಲ್ಲಿ ಸಂದೇಹವಿಲ್ಲ.

ನಾರಾಯಣೋಽಪಿ ಭಗವಾನಂತರಾತ್ಮಾ ಜಗತ್ಪತಿಃ ।
ಚರಾಽಚರಾಣಾಮವಿತಾ ಜಾತಃ ಶ್ರೀಕಂಠಸೇವಯಾ ॥ ೩೫ ॥
ಬ್ರಹ್ಮಣಃ ಸೃಷ್ಟಿಕರ್ತೃತ್ವಂ ದತ್ತಂ ತೇನೈವ ಶಂಭುನಾ ।
ಇಂದ್ರಾದಯೋ ಲೋಕಪಾಲಾ ಜಾತಾಃ ಶಂಭೋರನುಗ್ರಹಾತ್ ॥ ೩೬ ॥
ಮೃತ್ಯುಂಜಯಂ ಸುತಂ ಲೇಭೇ ಶಿಲಾದೋಽಪ್ಯನಪತ್ಯವಾನ್ ।
ಶ್ವೇತಕೇತುರಪಿ ಪ್ರಾಪ ಜೀವಿತಂ ಕಾಲಪಾಶತಃ ॥ ೩೭ ॥
ಕ್ಷೀರಾಽರ್ಣವಾಧಿಪತಿತಾಮುಪಮನ್ಯುರವಾಪ್ತವಾನ್ ।
ಅಂಧಕೋಽಪ್ಯಭವದ್ಭೃಂಗೀ ಗಾಣಪತ್ಯಪದೋರ್ಜಿತಃ ॥ ೩೮ ॥
ಜಿಗಾಯ ಶಾರ್ಙ್ಗಿಣಂ ಸಂಖ್ಯೇ ದಧೀಚಿಃ ಶಂಭುಸೇವಯಾ ।
ಪ್ರಾಜಾಪತ್ಯಪದಂ ಪ್ರಾಪ ದಕ್ಷಃ ಸಂಶೀಲ್ಯ ಶಂಕರಂ ॥ ೩೯ ॥
ಮನೋರಥಪಥಾಽತೀತಂ ಯಚ್ಚ ವಾಚಾಮಗೋಚರಂ ।
ಗೋಚರೋ ಗೋಚರೀಕುರ್ಯಾತ್ತತ್ಪದಂ ಕ್ಷಣತೋ ಮೃಡಃ ॥ ೪೦ ॥
ಅನಾರಾಧ್ಯ ಮಹೇಶಾನಂ ಸರ್ವದಂ ಸರ್ವದೇಹಿನಾಂ ।
ಕೋಽಪಿ ಕ್ವಾಽಪಿ ಕಿಮಪ್ಯತ್ರ ನಲಭೇತೇತಿ ನಿಶ್ಚಿತಂ ॥ ೪೧ ॥

---

೩೫. ಅಂತರ್ಯಾಮಿಯೂ, ಜಗದೊಡೆಯನೂ, ಆದ ನಾರಾಯಣನು ಶಂಕರನ ಸೇವೆಯಿಂದ ಚರಾಚರಜಗತ್ತುಗಳನ್ನು ಪೊರೆಯುವವನಾದನು.

೩೬. ಬ್ರಹ್ಮನಿಗೆ ಸೃಷ್ಟಿಕರ್ತೃತ್ವವನ್ನು ಆ ಶಂಭುವೇ ಕೊಟ್ಟಿರುವನು. ಅವನ ಅನುಗ್ರಹದಿಂದಲೇ ಇಂದ್ರಾದಿ ದೇವತೆಗಳು ಲೋಕಪಾಲಕರಾದರು.

೩೭. ಶಿಲಾದನೆಂಬ ಓರ್ವ ಮುನಿಯು ಮಕ್ಕಳಿಲ್ಲದೆ ಶಿವನ ಅನುಗ್ರಹದಿಂದ ನಂದಿಕೇಶ್ವರನೆಂಬ ಮರಣವಿಲ್ಲದ ಪುತ್ರನನ್ನು ಪಡೆದನು. ಶ್ವೇತುಕೇತುವೂ ಕಾಲಪಾಶದ ಸಂಬಂಧವಿಲ್ಲದೆ ಬದುಕಿದನು.

೩೮. ಉಪಮನ್ಯುವು ಕ್ಷೀರಸಮುದ್ರಕ್ಕೆ ಒಡೆಯನಾದನು. ಅಂಧಕಾಸುರನು ಗಣಾಧಿಪತ್ಯವನ್ನು ಪಡೆದು ಭೃಂಗಿಯೆಂದು ಹೆಸರನ್ನು ಹೊಂದಿದನು.

೩೯. ದಧೀಚಿಯು ಶಿವನ ಸೇವೆಯಿಂದ ವಿಷ್ಣುವನ್ನು ಜಯಿಸಿದನು. ದಕ್ಷನು ಶಂಕರನನ್ನು ಧ್ಯಾನಿಸಿ ಪ್ರಾಜಾಪತ್ಯಪದವಿಯನ್ನು ಹೊಂದಿದನು.

೪೦. ಶಿವನು ಕ್ಷಣಕಾಲದಲ್ಲಿ ಪ್ರತ್ಯಕ್ಷನಾಗಿ ಬಯಸಲಾಗದಿರುವುದೂ, ಹೇಳಲಾಗದಿರುವುದೂ ಆದ ಕೈವಲ್ಯಪದವಿಯನ್ನು ಪ್ರತ್ಯಕ್ಷಗೊಳಿಸುವನು.

೪೧. ಸಕಲ ಪ್ರಾಣಿಗಳಿಗೂ ಸಕಲವನ್ನೂ ಕೊಡುವ ಮಹೇಶ್ವರನನ್ನು ಪೂಜಿಸದೆ ಯಾವನೊಬ್ಬನೂ ಎಲ್ಲಿಯೂ ಏನನ್ನೂ ನಿಶ್ಚಯವಾಗಿಯೂ ಹೊಂದಲಾರನು.

ತಸ್ಮಾತ್ಸರ್ವಪ್ರಯತ್ನೇನ ಶಂಕರಂ ಶರಣಂ ವ್ರಜ ।
ಯದಿಚ್ಛಸಿ ಪ್ರಿಯಂ ಪುತ್ರಂ ಪ್ರಿಯ ಸರ್ವಜನೀನಕಂ ॥ ೪೨ ॥
ಇತಿ ಶ್ರುತ್ವಾ ವಚಃ ಪತ್ನ್ಯಾಃ ಪೂರ್ಣಭದ್ರಃ ಸ ಯಕ್ಷರಾಟ್ ।
ಆರಾಧ್ಯ ಶ್ರೀಮಹಾದೇವಂ ಗೀತಜ್ಞೋ ಗೀತವಿದ್ಯಯಾ ॥ ೪೩ ॥
ದಿನೈಃ ಕತಿಪಯೈರೇವ ಪರಿಪೂರ್ಣಮನೋರಥಃ ।
ಪುತ್ರಕಾಮಮವಾಪೋಚ್ಚೈಸ್ತಸ್ಯಾಂ ಪತ್ನ್ಯಾಂ ದೃಢವ್ರತಃ ॥ ೪೪ ॥
ನಾದೇಶ್ವರಂ ಸಮಭ್ಯರ್ಚ್ಯ ಕೈಃ ಕೈರ್ನಾऽಪಿ ಸ್ವಚಿಂತಿತಂ ।
ತಸ್ಮಾತ್ಕಾಶ್ಯಾಂ ಪ್ರಯತ್ನೇನ ಸೇವ್ಯೋ ನಾದೇಶ್ವರೋ ನೃಭಿಃ ॥ ೪೫ ॥
ಅಂತರ್ವತ್ನ್ಯಥ ಕಾಲೇನ ತತ್ಪತ್ನೀ ಸುಷುವೇ ಸುತಂ ।
ತಸ್ಯ ನಾಮ ಪಿತಾ ಚಕ್ರೇ ಹರಿಕೇಶ ಇತಿ ದ್ವಿಜ ॥ ೪೬ ॥
ಪ್ರೀತಿದಾಯಂ ದದೌ ಚಾऽಥ ಭೂರಿಪುತ್ರಾನನೇಕ್ಷಣಾತ್ ।
ಪೂರ್ಣಭದ್ರಸ್ತಥಾऽಗಸ್ಯ ಹೃಷ್ಟಾ ಕನಕಕುಂಡಲಾ ॥ ೪೭ ॥
ಬಾಲೋऽಪಿ ಪೂರ್ಣಚಂದ್ರಾಭವದನೋ ಮದನೋಪಮಃ ।
ವೃದ್ಧಿಂ ಪ್ರತಿಕ್ಷಣಂ ಪ್ರಾಪ ಶುಕ್ಲಪಕ್ಷ ಇವೋಡುರಾಟ್ ॥ ೪೮ ॥

---

೪೨. ಪ್ರಿಯನೆ! ಪ್ರಿಯಂಕರನೂ, ಸಕಲಜನರಿಗೆ ಹಿತಂಕರನೂ ಆದ ಪುತ್ರನನ್ನು ನೀನು ಬಯಸುವುದಾದರೆ ಸರ್ವಪ್ರಯತ್ನದಿಂದಲೂ ಶಂಕರನನ್ನು ಮರೆಹೋಗು.

೪೩–೪೪. ಯಕ್ಷರೊಡೆಯನೂ, ಸಂಗೀತಜ್ಞನೂ ಆದ ಆ ಪೂರ್ಣಭದ್ರನು ಪತ್ನಿಯ ಈ ಮಾತನ್ನು ಕೇಳಿ ಸಂಗೀತವಿದ್ಯೆಯಿಂದ ಮಹಾದೇವನನ್ನಾರಾಧಿಸಿ ಕೆಲವುದಿನಗಳಲ್ಲಿಯೇ ಸಫಲಮನೋರಥನಾಗಿ ಆ ಪತ್ನಿಯಲ್ಲಿ ಪುತ್ರರೂಪವರವನ್ನು ಹೊಂದಿದನು.

೪೫. ಓಂಕಾರೇಶ್ವರನನ್ನು ಪೂಜಿಸಿ ಯಾರುತಾನೆ ತಮ್ಮ ಅಭಿಲಾಷೆಯನ್ನು ಪಡೆಯಲಿಲ್ಲ? ಆದ್ದರಿಂದ ಕಾಶಿಯಲ್ಲಿ ನಾದೇಶ್ವರನನ್ನು ಸೇವಿಸಬೇಕು.

೪೬. ಗರ್ಭಿಣಿಯಾದ ಅವನ ಪತ್ನಿಯು ಕೆಲವು ದಿನಗಳಲ್ಲಿಯೇ ಪುತ್ರನನ್ನು ಪಡೆದಳು. ಅವನಿಗೆ ತಂದೆಯು ಹರಿಕೇಶ ಎಂದು ಹೆಸರನ್ನಿಟ್ಟನು.

೪೭. ತರುವಾಯ ಪೂರ್ಣಭದ್ರನು ಮಗನ ಮುಖಸಂದರ್ಶನದಿಂದ ಸುಪ್ರೀತನಾಗಿ ಪ್ರೀತಿಯಿಂದ ಕೊಡತಕ್ಕ ವಸ್ತುಗಳನ್ನೆಲ್ಲ ದಾನಮಾಡಿದನು. ಕನಕಕುಂಡಲೆಯೂ ಹಾಗೆಯೇ ಸಂತೋಷಗೊಂಡಳು.

೪೮. ಪೂರ್ಣಚಂದ್ರನಂತೆ ಸುಂದರಮುಖವುಳ್ಳವನಾಗಿ ಮನ್ಮಥನಂತಿರುವ ಆ ಬಾಲಕನು ಶುಕ್ಲಪಕ್ಷದ ಚಂದ್ರನಂತೆ ಪ್ರತಿಕ್ಷಣದಲ್ಲಿಯೂ ಬೆಳೆದನು.

ಯದಾಽಷ್ಟವರ್ಷದೇಶೀಯೋ ಹರಿಕೇಶೋಽಭವಚ್ಛಿಶುಃ ।
ನಿತ್ಯಂ ತದಾ ಪ್ರಭೃತ್ಯೇವಂ ಶಿವಮೇಕಮಮನ್ಯತ ॥ ೪೯ ॥
ಪಾಂಸುಕ್ರೀಡನಸಕ್ತೋಽಪಿ ಕುರ್ಯಾಲ್ಲಿಂಗಂ ರಜೋಮಯಂ ।
ಶಾದ್ವಲೈಃ ಕೋಮಲತೃಣೈಃ ಪೂಜಯೇಚ್ಚ ಸ ಕೌತುಕಂ ॥ ೫೦ ॥
ಆಕಾರಯತಿ ಮಿತ್ರಾಣಿ ಶಿವನಾಮ್ನಾಽಖಿಲಾನಿ ಸಃ ।
ಚಂದ್ರಶೇಖರ ಭೂತೇಶ ಮೃತ್ಯುಂಜಯ ಮೃಡೇಶ್ವರ ॥ ೫೧ ॥
ಧೂರ್ಜಟೇ ಖಂಡಪರಶೋ ಮೃಡಾನೀಶ ತ್ರಿಲೋಚನ ।
ಭರ್ಗ ಶಂಭೋ ಪಶುಪತೇ ಪಿನಾಕಿನ್ನುಗ್ರ ಶಂಕರ ॥ ೫೨ ॥
ಶ್ರೀಕಂಠ ನೀಲಕಂಠೇಶ ಸ್ಮರಾರೇ ಪಾರ್ವತೀಪತೇ ।
ಕಪಾಲಿನ್ಭಾಲನಯನ ಶೂಲಪಾಣೇ ಮಹೇಶ್ವರ ॥ ೫೩ ॥
ಅಜಿನಾಂಬರದಿಗ್ವಾಸಃ ಸ್ವರ್ಧುನೀಕ್ಲಿನ್ನಮೌಲಿಜ ।
ವಿರೂಪಾಕ್ಷಾಽಹಿನೇಪಥ್ಯ ಗೃಣನ್ನಾಮಾವಲೀಮಿಮಾಂ ॥ ೫೪ ॥
ಸವಯಸ್ಕಾನಿತಿ ಮುಹುಃ ಸಮಾಹ್ವಯತಿ ಲಾಲಯನ್ ।
ಶಬ್ದಗ್ರಹೌ ನ ಗೃಹ್ಣೀತಸ್ತಸ್ಯಾನ್ಯಾಖ್ಯಾಂ ಹರಾದೃತೇ ॥ ೫೫ ॥
ಪದ್ಭ್ಯಾಂ ನ ಪದ್ಯತೇ ಚಾನ್ಯದ್ವೃತೇ ಭೂತೇಶ್ವರಾಜಿರಾತ್ ।
ದ್ರಷ್ಟುಂ ರೂಪಾಂತರಂ ತಸ್ಯ ವೀಕ್ಷಣೇನ ವಿಚಕ್ಷಣೇ ॥ ೫೬ ॥

---

೪೯. ಎಂಟುವರ್ಷಗಳ ವಯಸ್ಸುಳ್ಳ ಹರಿಕೇಶನು ಶಿವಧ್ಯಾನಪರಾಯಣನಾದನು.

೫೦. ದೂಳಿಯಲ್ಲಿ ಆಡುತ್ತ ದೂಳಿಯಿಂದಲೇ ಲಿಂಗವನ್ನು ರಚಿಸಿ ಅದನ್ನು ಎಳೆಹಸುರು ಹುಲ್ಲುಗಳಿಂದ ಕುತೂಹಲದಿಂದ ಪೂಜಿಸಿದನು.

೫೧—೫೫. ಅವನು ಸಕಲಮಿತ್ರರನ್ನೂ ಚಂದ್ರಶೇಖರ, ಭೂತೇಶ, ಮೃತ್ಯುಂಜಯ, ಮೃಡ, ಈಶ್ವರ, ಧೂರ್ಜಟಿ, ಖಂಡಪರಶು, ಮೃಡಾನೀಶ, ತ್ರಿಲೋಚನ, ಭರ್ಗ, ಶಂಭು, ಪಶುಪತಿ, ಪಿನಾಕಿ, ಉಗ್ರ, ಶಂಕರ, ಶ್ರೀಕಂಠ, ನೀಲಕಂಠ, ಈಶ, ಸ್ಮರಾರಿ, ಪಾರ್ವತೀಪತಿ, ಕಪಾಲಿ, ಭಾಲನಯನ, ಶೂಲಪಾಣಿ, ಮಹೇಶ್ವರ, ಅಜಿನಾಂಬರ, ದಿಗ್ವಾಸ, ಸ್ವರ್ಧುನೀಕ್ಲಿನ್ನಮೌಲಿಜ, ವಿರೂಪಾಕ್ಷ, ಅಹಿನೇಪಥ್ಯ ಎಂಬ ಶಿವನಾಮಗಳಿಂದ ಕರೆಯುತ್ತ ಲಾಲಿಸುತ್ತಿದ್ದನು. ಅವನ ಕಿವಿಯಲ್ಲಿ ಶಿವನಾಮವನ್ನುಳಿದು ಇತರ ನಾಮವು ಬೀಳುತ್ತಿರಲಿಲ್ಲ.

೫೬. ಅವನು ಶಿವಾಲಯಾಂಗಣವನ್ನು ಬಿಟ್ಟು ಇತರ ಸ್ಥಳಗಳನ್ನು ಪಾದಗಳಿಂದ ತುಳಿಯುತ್ತಿರಲಿಲ್ಲ. ಬೇರೆ ರೂಪವನ್ನು ನೋಡಲು ಅವನ ಕಣ್ಣುಗಳು ಸಮರ್ಥವಾಗುತ್ತಿರಲಿಲ್ಲ.

ರಸಯೇತ್ತಸ್ಯ ರಸನಾ ಹರನಾಮಾಕ್ಷರಾಮೃತಂ ।
ಶಿವಾಂಘ್ರಿಕಮಲಾಮೋದಾದ್ಘ್ರಾಣಂ ನೈವ ಜಿಘೃಕ್ಷತಿ ॥ ೫೭ ॥
ಕರೌ ತತ್ಕೌತುಕಕರೌ ಮನೋ ಮನತಿ ನಾಽಪರಂ ।
ಶಿವಸಾತ್ಕೃತ್ಯ ಪೇಯಾನಿ ಪಿಬೇಂತೇ ತೇನ ಸದ್ಧಿಯಾ ॥ ೫೮ ॥
ಭಕ್ಷ್ಯಂತೇ ಸರ್ವಭಕ್ಷ್ಯಾಣಿ ತ್ರ್ಯಕ್ಷಪ್ರತ್ಯಕ್ಷಗಾನ್ಯಪಿ ।
ಸರ್ವಾಽವಸ್ಥಾಸು ಸರ್ವತ್ರ ನ ಸ ಪಶ್ಯೇಚ್ಛಿವಂ ವಿನಾ ॥ ೫೯ ॥
ಗಚ್ಛನ್ನಾಯನ್ಸ್ವಪಂಸ್ತಿಷ್ಠಂಭಯಾನೋಽದನ್ಪಿಬನ್ನಪಿ ।
ಪರಿತಸ್ತ್ರ್ಯಕ್ಷನ್ಯೈಕ್ಷಿಷ್ಟ ನಾಽನ್ಯಂ ಭಾವಂ ಚಿಕೇತಿ ಸಃ ॥ ೬೦ ॥
ಕ್ಷಣದಾಸು ಪ್ರಸುಪ್ತೋಽಪಿ ಕ್ವ ಯಾಸೀತಿ ವದನ್ಮುಹುಃ ।
ಕ್ಷಣಂ ತ್ರ್ಯಕ್ಷ ಪ್ರತೀಕ್ಷಸ್ವ ಬುಧ್ಯತೀತಿ ಸ ಬಾಲಕಃ ॥ ೬೧ ॥
ಸ್ಪಷ್ಟಾಂ ಚೇಷ್ಟಾಂ ವಿಲೋಕ್ಯೇತಿ ಹರಿಕೇಶಸ್ಯ ತತ್ಪಿತಾ ।
ಅಶಿಕ್ಷಯತ್ಸುತಂ ಸೋಽಥ ಗೃಹಕರ್ಮರತೋ ಭವ ॥ ೬೨ ॥
ಏತೇ ತುರಂಗಮಾ ವತ್ಸ ತವೈತೇಽಶ್ವಕಿಶೋರಕಾಃ ।
ಚಿತ್ರಾಣೀಮಾನಿ ವಾಸಾಂಸಿ ಸುದುಕೂಲಾನ್ಯಮೂನಿ ಚ ॥ ೬೩ ॥

---

೫೭. ಅವನ ನಾಲಿಗೆಯು ಶಿವನಾಮಾಕ್ಷರಾಮೃತವನ್ನಾಸ್ವಾದಿಸುವುದು. ಮೂಗು ಶಿವನ ಪಾದಕಮಲದ ಸುವಾಸನೆಯನ್ನುಳಿದು ಇತರ ಸುವಾಸನೆಯನ್ನು ಮೂಸಿನೋಡಲಿಚ್ಛಿಸಲಿಲ್ಲ.

೫೮. ಕೈಗಳು ಅವನನ್ನು ಪೂಜಿಸಿದುವು. ಮನಸ್ಸು ಇತರ ದೇವತೆಯನ್ನು ಧ್ಯಾನಿಸಲಿಲ್ಲ. ಅವನು ಪಾನೀಯವನ್ನು ಒಳ್ಳೆಯ ಮನಸ್ಸಿನಿಂದ ಶಿವನಿಗರ್ಪಿಸಿ ಕುಡಿಯುತ್ತಿದ್ದನು.

೫೯. ಸಮಸ್ತಭಕ್ಷ್ಯಗಳನ್ನೂ ಶಿವನಿಗರ್ಪಿಸಿ ಭುಜಿಸುತ್ತಿದ್ದನು. ಸಕಲ ಸ್ಥಿತಿಗಳಲ್ಲಿಯೂ ಶಿವನನ್ನು ಬಿಟ್ಟು ಇತರರನ್ನು ನೋಡಲಿಲ್ಲ

೬೦. ಅವನು ಹೋಗುತ್ತ, ಹಾಡುತ್ತ, ನಿದ್ರಿಸುತ್ತ, ನಿಲ್ಲುತ್ತ, ಮಲಗುತ್ತ, ತಿನ್ನುತ್ತ, ಕುಡಿಯುತ್ತ ಸುತ್ತಲೂ ಶಿವನನ್ನೇ ಕಾಣುತ್ತಿದ್ದನು.

೬೧. ಆ ಬಾಲಕನು ರಾತ್ರಿಯಲ್ಲಿ ಮಲಗಿದಾಗಲೂ "ಮಹೇಶ್ವರ! ಎಲ್ಲಿಗೆ ಹೋಗುವೆ! ಕ್ಷಣಕಾಲ ತಡೆ" ಎಂದು ಹೇಳುತ್ತ ಎಚ್ಚರಗೊಳ್ಳುವನು.

೬೨. ಅವನ ತಂದೆಯು ಬಾಲಕನ ಈ ರೀತಿಯಾದ ಸ್ಪಷ್ಟಚೇಷ್ಟೆಯನ್ನು ಕಂಡು, "ಮಗು! ಮನೆಗೆಲಸಗಳನ್ನು ನೋಡಿಕೊ" ಎಂದು ಶಿಕ್ಷಿಸಿದನು.

೬೩–೬೭. "ವತ್ಸ! ಈ ಕುದುರೆಗಳೂ, ಇವುಗಳ ಮರಿಗಳೂ, ಈ ಚಿತ್ರಗಳೂ, ವಸ್ತ್ರಗಳೂ, ಈ ಪಟ್ಟೆಬಟ್ಟೆಗಳೂ, ಗಣಿಯಿಂದ ತೆಗೆದ ಶುದ್ಧವಾದ ಬಗೆ ಬಗೆಯ ರತ್ನಗಳೂ, ನಾನಾ ಬಗೆಯ ಸ್ಫಟಿಕಮಯಪಾತ್ರೆಗಳೂ, ಅನೇಕ ಗೋವುಗಳೂ

ರತ್ನಾನ್ಯಾಕರಶುದ್ಧಾನಿ ನಾನಾಜಾತೀನ್ಯನೇಕಶಃ ।
ಕುಪ್ಯಂ ಬಹುವಿಧಂ ಚೈತದ್ಗೋಧನಾನಿ ಮಹಾಂತಿ ಚ ॥ ೬೪ ॥
ಅಮತ್ರಾಣಿ ಮಹಾರ್ಹಾಣಿ ರೌಪ್ಯಕಾಂಸ್ಯಮಯಾನಿ ಚ ।
ಪಣನೀಯಾನಿ ವಸ್ತೂನಿ ನಾನಾದೇಶೋದ್ಭವಾನ್ಯಪಿ ॥ ೬೫ ॥
ಚಾಮರಾಣಿ ವಿಚಿತ್ರಾಣಿ ಗಂಧದ್ರವ್ಯಾಣ್ಯನೇಕಶಃ ।
ಏತಾನ್ಯನ್ಯಾನಿ ಬಹುಶಸ್ತ್ವನೇಕೇ ಧಾನ್ಯರಾಶಯಃ ॥ ೬೬ ॥
ಏತತ್ತ್ವದೀಯಂ ಸಕಲಂ ವಸ್ತುಜಾತಂ ಸಮಂತತಃ ।
ಅರ್ಥೋಪಾರ್ಜನವಿದ್ಯಾಶ್ಚ ಸರ್ವಾಃ ಶಿಕ್ಷಸ್ವ ಪುತ್ರಕ ॥ ೬೭ ॥
ಚೇಷ್ಟಾಸ್ತ್ಯಜ ದರಿದ್ರಾಣಾಂ ಧೂಲಿಧೂಸರಿಣಾಮಮೂಃ ।
ಅಭ್ಯಸ್ಯ ವಿದ್ಯಾಃ ಸಕಲಾ ಭೋಗಾನ್ನಿರ್ವಿಶ್ಯ ಚೋತ್ತಮಾನ್ ॥ ೬೮ ॥
ತಾಂ ದಶಾಂ ಚರಮಾಂ ಪ್ರಾಪ್ಯ ಭಕ್ತಿಯೋಗಂ ತತಶ್ಚರ ।
ಅಸಕೃಚ್ಛಿಕ್ಷಿತಃ ಪಿತ್ರೇತ್ಯವಮಸ್ಯ ಗುರೋರ್ಗಿರಂ ॥ ೬೯ ॥
ರುಷ್ಟದೃಷ್ಟಿಂ ಚ ಜನಕಂ ಕದಾಚಿದವಲೋಕ್ಯ ಸಃ ।
ನಿರ್ಜಗಾಮ ಗೃಹಾದ್ಭೀತೋ ಹರಿಕೇಶ ಉದಾರಧೀಃ ॥ ೭೦ ॥
ತತಶ್ಚಿಂತಾಮವಾಪೋಚ್ಚೈರ್ದಿಗ್ಭ್ರಾಂತಿಮಪಿ ಚಾಪ್ತವಾನ್ ।
ಅಹೋ ಬಾಲಿಶಬುದ್ಧಿತ್ವಾತ್ಕುತಸ್ತ್ಯಕ್ತಂ ಗೃಹಂ ಮಯಾ ॥ ೭೧ ॥
ಕ್ವ ಯಾಮಿ ಕ್ವ ಸ್ಥಿತೇ ಶಂಭೋ ಮಮ ಶ್ರೇಯೋ ಭವಿಷ್ಯತಿ ।
ಪಿತ್ರಾ ನಿರ್ವಾಸಿತಶ್ಚಾಽಹಂ ನ ಚ ವೇದ್ಮ್ಯಥ ಕಿಂಚನ ॥ ೭೨ ॥

---

ಬಹುಬೆಲೆಬಾಳುವ ಬೆಳ್ಳಿ, ಕಂಚಿನ ಪಾತ್ರೆಗಳೂ, ಅನೇಕ ದೇಶಗಳಲ್ಲಿ ಹುಟ್ಟಿದ ವಿಕ್ರೇಯವಸ್ತುಗಳೂ, ವಿಚಿತ್ರಚಾಮರಗಳೂ, ಅನೇಕ ಗಂಧದ್ರವ್ಯಗಳೂ ಇನ್ನೂ ಇತರವಸ್ತುಗಳೂ, ಧಾನ್ಯರಾಶಿಗಳೂ ನಿನ್ನವೇ ಆಗಿರುವುವು. ನೀನು ದ್ರವ್ಯವನ್ನು ಸಂಪಾದಿಸುವ ರಾಜನೀತಿಯ ವಿದ್ಯೆಗಳನ್ನೆಲ್ಲ ಅಭ್ಯಾಸಮಾಡು.

೬೮–೭೦. ದೂಳಿನಿಂದ ಮಲಿನರಾದ ಬಡವರಿಗೆ ಮಾತ್ರವೇ ತಕ್ಕುದಾದ ಈ ಚೇಷ್ಟೆಗಳನ್ನು ಬಿಡು. ನೀನು ಸಕಲ ವಿದ್ಯೆಗಳನ್ನೂ ಅಭ್ಯಾಸಮಾಡಿ ಉತ್ತಮ ಭೋಗಗಳನ್ನನುಭವಿಸಿ ಮುಪ್ಪಿನಲ್ಲಿ ಭಕ್ತಿಯೋಗವನ್ನನುಸರಿಸು.'' ತಂದೆಯು ಹೀಗೆ ಅನೇಕಸಾರಿ ಶಿಕ್ಷಿಸಿದರೂ, ಅವನು ತಂದೆಯ ಮಾತನ್ನೂ ಗೌರವಿಸದೆ ಒಂದಾನೊಂದು ದಿನ ಕುಪಿತನಾದ ಅವನನ್ನು ನೋಡಿ ಭಯದಿಂದ ಮನೆಯಿಂದ ಹೊರಹೊರಟನು.

೭೧–೭೨. ಬಳಿಕ ಆ ಹರಿಕೇಶನು ಚಿಂತಾಕ್ರಾಂತನಾಗಿ ದಿಗ್ಭ್ರಾಂತಿಯನ್ನು ಹೊಂದಿ ಹೀಗೆ ಆಲೋಚಿಸಿದನು. "ನಾನು ಮೂಢಬುದ್ಧಿಯಿಂದ ಮನೆಯನ್ನೇಕೆ ತ್ಯಜಿಸಿದೆ? ಶಂಕರ! ಈಗ ನಾನೆಲ್ಲಿಗೆಹೋಗಲಿ? ಎಲ್ಲಿದ್ದರೆ ನನಗೆ ಶ್ರೇಯಸ್ಸಾಗು

**ಇತಿ ಶ್ರುತಂ ಮಯಾ ಪೂರ್ವಂ ಪಿತುರುತ್ಸಂಗವರ್ತಿನಾ ।**
**ಗದತಸ್ತಾತಪುರತಃ ಕಸ್ಯಚಿದ್ವಚನಂ ಸ್ಫುಟಂ ॥ ೭೩ ॥**
**ಮಾತ್ರಾ ಪಿತ್ರಾ ಪರಿತ್ಯಕ್ತಾ ಯೇ ತ್ಯಕ್ತಾ ನಿಜಬಂಧುಭಿಃ ।**
**ಯೇಷಾಂ ಕ್ವಾಽಪಿ ಗತಿರ್ನಾಽಸ್ತಿ ತೇಷಾಂ ವಾರಾಣಸೀ ಗತಿಃ ॥ ೭೪ ॥**
**ಜರಯಾ ಪರಿಭೂತಾ ಯೇ ಯೇ ವ್ಯಾಧಿವಿಕಲೀಕೃತಾಃ ।**
**ಯೇಷಾಂ ಕ್ವಾಽಪಿ ಗತಿರ್ನಾಽಸ್ತಿ ತೇಷಾಂ ವಾರಾಣಸೀ ಗತಿಃ ॥ ೭೫ ॥**
**ಪದೇ ಪದೇ ಸಮಾಕ್ರಾಂತಾ ಯೇ ವಿಪದ್ಭಿರಹರ್ನಿಶಂ ।**
**ಯೇಷಾಂ ಕ್ವಾಽಪಿ ಗತಿರ್ನಾಽಸ್ತಿ ತೇಷಾಂ ವಾರಾಣಸೀ ಗತಿಃ ॥ ೭೬ ॥**
**ಪಾಪರಾಶಿಭಿರಾಕ್ರಾಂತಾ ಯೇ ದಾರಿದ್ರ್ಯಪರಾಜಿತಾಃ ।**
**ಯೇಷಾಂ ಕ್ವಾಽಪಿ ಗತಿರ್ನಾಽಸ್ತಿ ತೇಷಾಂ ವಾರಾಣಸೀ ಗತಿಃ ॥ ೭೭ ॥**
**ಸಂಸಾರಭಯಭೀತಾ ಯೇ ಯೇ ಬದ್ಧಾಃ ಕರ್ಮಬಂಧನೈಃ ।**
**ಯೇಷಾಂ ಕ್ವಾಽಪಿ ಗತಿರ್ನಾಽಸ್ತಿ ತೇಷಾಂ ವಾರಾಣಸೀ ಗತಿಃ ॥ ೭೮ ॥**
**ಶ್ರುತಿಸ್ಮೃತಿವಿಹೀನಾ ಯೇ ಶೌಚಾಚಾರವಿವರ್ಜಿತಾಃ ।**
**ಯೇಷಾಂ ಕ್ವಾಽಪಿ ಗತಿರ್ನಾಽಸ್ತಿ ತೇಷಾಂ ವಾರಾಣಸೀ ಗತಿಃ ॥ ೭೯ ॥**
**ಯೇ ಚ ಯೋಗಪರಿಭ್ರಷ್ಟಾಸ್ತಪೋದಾನವಿವರ್ಜಿತಾಃ ।**
**ಯೇಷಾಂ ಕ್ವಾಽಪಿ ಗತಿರ್ನಾಽಸ್ತಿ ತೇಷಾಂ ವಾರಾಣಸೀ ಗತಿಃ ॥ ೮೦ ॥**
**ಮಧ್ಯೇ ಬಂಧುಜನೇ ಯೇಷಾಮಪಮಾನಂ ಪದೇ ಪದೇ ।**
**ತೇಷಾಮಾನಂದದಂ ಚೈಕಂ ಶಂಭೋರಾನಂದಕಾನನಂ ॥ ೮೧ ॥**

---

ವುದು? ತಂದೆಯಿಂದ ಹೊರಡಿಸಲ್ಪಟ್ಟ ನಾನು ಏನನ್ನೂ ತಿಳಿಯಲಾರದಾಗಿರುವೆನು.

೭೩. ಹಿಂದೆ ನಾನು ತಂದೆಯ ತೊಡೆಯಮೇಲೆ ಕುಳಿತಿರುವಾಗ ಅವನ ಮುಂದೆ ಮಾತನಾಡುತ್ತಿರುವ ಒಬ್ಬ ಸಾಧುವಿನ ಈ ಮಾತನ್ನು ಕೇಳಿರುವೆನು.

೭೪. “ ತಂದೆ, ತಾಯಿ, ಬಂಧುಗಳಿಂದ ತ್ಯಕ್ತರಾಗಿ ಎಲ್ಲಿಯೂ ಗತಿಯಿಲ್ಲದ ಮಾನವರಿಗೆ ಕಾಶಿಯೇ ಗತಿಯು.

೭೫–೮೦. ಮುದುಕರಿಗೂ, ರೋಗಿಗಳಿಗೂ, ಪ್ರತಿಕ್ಷಣದಲ್ಲಿ ಆಪತ್ತನ್ನು ಹೊಂದಿದವರಿಗೂ, ಪಾಪಿಗಳಿಗೂ, ಬಡವರಿಗೂ, ಸಂಸಾರದಿಂದ ಭಯಗೊಂಡವರಿಗೂ, ಕರ್ಮಬದ್ಧರಿಗೂ, ಶ್ರುತಿಸ್ಮೃತಿಬಾಹ್ಯರಿಗೂ, ಶೌಚಾಚಾರವಿಹೀನರಿಗೂ, ಯೋಗಭ್ರಷ್ಟರಿಗೂ, ತಪಸ್ಸು, ದಾನಗಳಿಲ್ಲದವರಿಗೂ ಯಾವಬಗೆಯ ಗತಿಯಿಲ್ಲದವರಿಗೂ ವಾರಣಸಿಯೇ ಗತಿಯಾಗಿರುವುದು.

೮೧. ಬಂಧು ಜನಗಳ ನಡುವೆ ಪ್ರತಿಕ್ಷಣದಲ್ಲಿಯೂ ಅಪಮಾನಗೊಂಡವರಿಗೆ ಶಿವನ ಆನಂದಕಾನನವೊಂದೇ ಸಂತೋಷವನ್ನುಂಟುಮಾಡುವುದು.

ಆನಂದಕಾನನೇ ಯೇಷಾಂ ರುಚಿರ್ವೈ ವಸತಾಂ ಸತಾಂ ।
ವಿಶ್ವೇಶಾನುಗೃಹೀತಾನಾಂ ತೇಷಾಮಾನಂದಜೋದಯಃ ॥ ೮೨ ॥
ಭಜ್ಯಂತೇ ಕರ್ಮಬೀಜಾನಿ ಯತ್ರ ವಿಶ್ವೇಶವಹ್ನಿನಾ ।
ಅತೋ ಮಹಾಶ್ಮಶಾನಂ ತದಗತೀನಾಂ ಪರಾ ಗತಿಃ ॥ ೮೩ ॥
ಹರಿಕೇಶೋ ವಿಚಾರ್ಯೇತಿ ಯಾತೋ ವಾರಾಣಸೀಂ ಪುರೀಂ ।
ಯತ್ರಾಽವಿಮುಕ್ತೇ ಜಂತೂನಾಂ ತ್ಯಜತಾಂ ಪಾರ್ಥಿವೀಂ ತನುಂ ॥ ೮೪ ॥
ಪುನರ್ನೋ ತನುಸಂಬಂಧಸ್ತನುದ್ವೇಷಿಪ್ರಸಾದತಃ ।
ಆನಂದವನಮಾಸಾದ್ಯ ಸ ತಪಃಶರಣಂ ಗತಃ ॥ ೮೫ ॥
ಅಥ ಕಾಲಾಂತರೇ ಶಂಭುಃ ಪ್ರವಿಶ್ಯಾನಂದಕಾನನಂ ।
ಪಾರ್ವತ್ಯೈ ದರ್ಶಯಾಮಾಸ ನಿಜಮಾಕ್ರೀಡಕಾನನಂ ॥ ೮೬ ॥
ಅಮಂದಾಮೋದಮಂದಾರಃ ಕೋವಿದಾರಪರಿಷ್ಕೃತಂ ।
ಚಾರುಚಂಪಕಚೂತಾಢ್ಯಂ ಪ್ರೋತ್ಫುಲ್ಲನವಮಲ್ಲಿಕಂ ॥ ೮೭ ॥
ವಿಕಸನ್ಮಾಲತೀಜಾಲಂ ಕರವೀರವಿರಾಜಿತಂ ।
ಪ್ರಸ್ಫುಟತ್ಕೇತಕಿವನಂ ಪ್ರೋದ್ಯತ್ಕುರವಕೋರ್ಜಿತಂ ॥ ೮೮ ॥
ಜೃಂಭದ್ವಿಚಕಿಲಾಮೋದಂ ಲಸತ್ಕಂಕೇಲಿಪಲ್ಲವಂ ।
ನವಮಲ್ಲೀಪರಿಮಲಾಕೃಷ್ಟಷಟ್ಪದನಾದಿತಂ ॥ ೮೯ ॥

---

೮೨. ಆನಂದಕಾನನದಲ್ಲಿ ವಾಸಿಸಲು ಆಶೆಯುಳ್ಳ ವಿಶ್ವೇಶ್ವರನ ಅನುಗ್ರಹಕ್ಕೆ ಪಾತ್ರರಾದವರಿಗೆ ಆನಂದವುಂಟಾಗುವುದು.

೮೩. ವಿಶ್ವೇಶ್ವರನೆಂಬ ಅಗ್ನಿಯಿಂದ ಕರ್ಮಬೀಜವನ್ನು ಹುರಿಯುವುದರಿಂದ ಮಹಾಶ್ಮಶಾನವು ಉತ್ತಮಗತಿಯಾಗಿರುವುದು.''

೮೪–೮೫. ಹರಿಕೇಶನು ಹೀಗೆ ಆಲೋಚಿಸಿ ಕಾಶಿಗೆ ಹೋದನು. ಅವನು, ಅವಿಮುಕ್ತಕ್ಷೇತ್ರದಲ್ಲಿ ಪಾರ್ಥಿವಶರೀರವನ್ನು ತ್ಯಜಿಸುವ ಮಾನವರಿಗೆ ವಿಶ್ವೇಶ್ವರನ ಪ್ರಸಾದದಿಂದ ಮರಳಿ ಜನನವಿಲ್ಲದ ಆ ಆನಂದನವನ್ನು ಹೊಂದಿ ತಪಸ್ಸನ್ನಾಚರಿಸಿದನು.

೮೬. ತರುವಾಯ ಶಂಕರನು ಒಂದಾನೊಂದು ದಿನ ಆನಂದಕಾನನವನ್ನು ಪ್ರವೇಶಿಸಿ ಪಾರ್ವತಿಗೆ ತನ್ನ ಕ್ರೀಡಾವನವನ್ನು ತೋರಿಸಿದನು.

೮೭–೧೧೦. ಆ ಪರಮೇಶ್ವರನು ಅತ್ಯಂತ ಸುವಾಸನೆಯನ್ನು ಬೀರುವ ಮಂದಾರವೃಕ್ಷವುಳ್ಳದೂ, ಕೋವಿದಾರ ವೃಕ್ಷಗಳಿಂದ ಅಲಂಕಾರಗೊಂಡುದೂ, ಮನೋಹರವಾದ ಸಂಪಗೆ, ಮಾವು ಮೊದಲಾದ ಮರಗಳುಳ್ಳದೂ, ವಿಕಾಸಗೊಂಡ ನವಮಲ್ಲಿಕಾಲತೆಯುಳ್ಳದೂ, ಅರಳಿದ ಜಾಜಿಯ ಗಿಡಗಳ ಸಾಲುಳ್ಳದೂ, ಕಣಿಗಲೆ ಗಿಡಗಳಿಂದ ವಿರಾಜಿಸುವುದೂ ವಿಕಾಸಗೊಂಡ ಕೇತಕಿವನವುಳ್ಳದೂ,

ಪುಷ್ಪ್ಯಪುನ್ನಾಗನಿಕರಂ ಬಕುಲಾಮೋದಮೋದಿತಂ ।
ಮೇದಸ್ವಿಪಾಟಲಾಮೋದಸದಾಮೋದಿತದಿಙ್ಮುಖಂ ॥ ೯೦ ॥
ಬಹುಶೋ ಲಂಬಿರೋಲಂಬಮಾಲಾಮಾಲಿತಭೂತಲಂ ।
ಚಲಚ್ಚಂದನಶಾಖಾಗ್ರರಮಮಾಣಪಿಕಾಕುಲಂ ॥ ೯೧ ॥
ಗುರುಣಾಽಗುರುಣಾಮತ್ತಭದ್ರಜಾತಿವಿಹಂಗಮಂ ।
ನಾಗಕೇಸರ ಶಾಖಾಸ್ಥಶಾಲಭಂಜಿವಿನೋದಿತಂ ॥ ೯೨ ॥
ಮೇರುತುಂಗನಮೇರುಸ್ಥಚ್ಛಾಯಾಕ್ರೀಡಿತಕಿನ್ನರಂ ।
ಕಿನ್ನರೀಮಿಥುನೋದ್ಗೀತಂ ಗಾನವಚ್ಛುಕಕಿಂಶುಕಂ ॥ ೯೩ ॥
ಕದಂಬಾನಾಂ ಕದಂಬೇಷು ಗುಂಜದ್ರೋಲಂಬಯುಗ್ಮಕಂ ।
ಜಿತಸೌವರ್ಣವರ್ಣೋಚ್ಚಕರ್ಣಿಕಾರವಿರಾಜಿತಂ ॥ ೯೪ ॥
ಶಾಲತಾಲತಮಾಲಾಲೀ ಹಿಂತಾಲೀಲಕುಚಾವೃತಂ ।
ಲಸತ್ಸಪ್ತಚ್ಛದಾಮೋದಂ ಖರ್ಜೂರೀರಾಜಿರಾಜಿತಂ ।
ನಾರಿಕೇಲತರುಚ್ಛನ್ನಂ ನಾರಂಗೀರಾಗರಂಜಿತಂ ॥ ೯೫ ॥
ಫಲಿಜಂಬೀರನಿಕರಂ ಮಧುರಂ ಮಧುಪಾಕುಲಂ ।
ಶಾಲ್ಮಲೀಶೀತಲಚ್ಛಾಯಂ ಪಿಚುಮಂದಮಹಾವನಂ ॥ ೯೬ ॥

---

ಪ್ರಕಾಶಿಸುವ ಕುರವಕ ಗಿಡಗಳಿಂದ ಉತ್ಕೃಷ್ಟವಾದುದೂ, ಅರಳುತ್ತಿರುವ ವಿಚಕಿಲ ಪುಷ್ಪಗಳಿಂದ ಸುವಾಸನೆಗೊಂಡುದೂ, ಪ್ರಕಾಶಿಸುವ ಕಂಕೇಲಿ ಗಿಡದ ಚಿಗುರುಳ್ಳುದೂ, ಹೊಸ ಮಲ್ಲಿಗೆಯ ಹೂವುಗಳ ಪರಿಮಳದಿಂದ ಸೆಳೆಯಲ್ಪಟ್ಟ ದುಂಬಿಗಳಿಂದ ಶಬ್ದಗೊಂಡುದೂ, ವಿಕಸಿಸಿದ ಪುನ್ನಾಗವೃಕ್ಷಗಳ ಸಮೂಹವುಳ್ಳುದೂ, ಬಕುಲವೃಕ್ಷದ ಸುವಾಸನೆಯಿಂದ ಸುಗಂಧವಾದುದೂ, ಒಳಗೆ ಸುಂದರವಾಗಿರುವ ಪಾಟಲಪುಷ್ಪಗಳ ಸುವಾಸನೆಯಿಂದ ಯಾವಾಗಲೂ ಸುಗಂಧವಾದ ದಿಕ್ಕುಗಳುಳ್ಳುದೂ, ಬಹುವಾಗಿ ಜೋಲಾಡುತ್ತಿರುವ ದುಂಬಿಗಳ ಸಾಲುಗಳುಳ್ಳ ಭೂಮಿಯುಳ್ಳುದೂ, ಅಲುಗಾಡುತ್ತಿರುವ ಗಂಧದಮರದ ಕೊಂಬೆಯ ಕೊನೆಯಲ್ಲಿ ವಿನೋದಗೊಳ್ಳುತ್ತಿರುವ ಕೋಗಿಲೆಗಳಿಂದ ವ್ಯಾಪ್ತವಾದುದೂ, ಹೆಚ್ಚಾದ ಅಗುರುಗಂಧದಿಂದ ಮದಿಸಿದ ಉತ್ತಮಜಾತಿಯ ಪಕ್ಷಿಗಳುಳ್ಳುದೂ, ನಾಗಕೇಸರ ವೃಕ್ಷದ ಕೊಂಬೆಗಳಲ್ಲಿರುವ ಬೊಂಬೆಗಳಿಂದ ವಿಲಾಸವುಳ್ಳುದೂ, ಮೇರುಪರ್ವತದಲ್ಲಿರುವ ಎತ್ತರವಾದ ನಮೇರುವೃಕ್ಷಗಳ ನೆರಳಿನಲ್ಲಿ ವಿನೋದಗೊಳ್ಳುತ್ತಿರುವ ಕಿನ್ನರರುಳ್ಳುದೂ, ಕಿನ್ನರದಂಪತಿಗಳ ಗಾನವುಳ್ಳುವುದೂ, ಹಾಡುತ್ತಿರುವ ಗಿಣಿಗಳುಳ್ಳ ಮುತ್ತುಗದ ಮರಗಳುಳ್ಳುದೂ, ಈಚಲಮರಗಳ ಸಮೂಹಗಳಲ್ಲಿ ಕೂಗುತ್ತಿರುವ ದುಂಬಿಗಳುಳ್ಳುದೂ, ಚಿನ್ನದ ಬಣ್ಣವುಳ್ಳ ಬೆಟ್ಟದ ತಾವರೆ ಹೂವುಗಳಿಂದ ವಿರಾಜಿಸುವುದೂ, ಸಾಲ, ತಾಲ, ತಮಾಲ, ಹಿಂತಾಲ, ಲಕುಚ

ಮಧುರಾಮೋದದಮನಛನ್ನಂ ಮರುಬಸೋದಿತಂ ।
ಲವಲೀಲೋಲಲೀಲಾಭೃನ್ಮಂದಮಾರುತಲೋಲಿತಂ ॥ ೯೭ ॥
ಭಿಲ್ಲೀಹಲ್ಲೀಸಕಪ್ರೀತಿರ್ಝಿಲ್ಲೀರಾವವಿರಾವಿಣಂ ।
ಕ್ವಚಿತ್ಸರಃ ಪರಿಸರಕ್ರೀಡತ್ಕ್ರೋಡಕದಂಬಕಂ ॥ ೯೮ ॥
ಮರಾಲೀಗಲನಾಲೀಸ್ಥಬಿಸಾಸಕ್ತಸಿತಚ್ಛದಂ ।
ವಿಶೋಕಕೋಕಮಿಥುನಕ್ರೀಡಾಕ್ರೇಂಕಾರಸುಂದರಂ ॥ ೯೯ ॥
ಬಕಶಾವಕಸಂಚಾರಂ ಲಕ್ಷ್ಮಣಾಸಕ್ತಸಾರಸಂ ।
ಮತ್ತಬರ್ಹಿಣಸಂಘುಷ್ಟಂ ಕಪಿಂಜಲಕುಲಾಕುಲಂ ॥ ೧೦೦ ॥
ಜೀವಂಜೀವಲಸಜ್ಜೀವಂ ಕ್ವಣತ್ಕಾರಂಡವೋತ್ಕಟಂ ।
ದೀರ್ಘಿಕಾವಾರಿಸಂಚಾರಿ ಶೀತಮಾರುತವೀಜಿತಂ ॥ ೧೦೧ ॥
ಮಂದಾಂದೋಲಿತಕಲ್ಹಾರಪರಾಗಪರಿಪಿಂಗಲಂ ।
ಉಲ್ಲಸತ್ಪಂಕಜಮುಖಂ ನೀಲೇಂದೀವರ ಲೋಚನಂ ॥ ೧೦೨ ॥
ತಮಾಲಕಬರೀಭಾರಂ ವಿಲಸದ್ದಾಡಿಮೀರದಂ ।
ಭ್ರಮರಾಲೀಲಸದ್ಭ್ರೂಕಂ ಶುಕನಾಸಾವಿರಾಜಿತಂ ॥ ೧೦೩ ॥

---

ವೃಕ್ಷಗಳಿಂದ ಕೂಡಿರುವುದೂ, ಅರಳುತ್ತಿರುವ ಸಪ್ತಪರ್ಣ ಕುಸುಮಗಳ ಸುವಾಸನೆಯುಳ್ಳುದೂ, ಖರ್ಜೂರವೃಕ್ಷಗಳ ಸಾಲುಗಳಿಂದ ಪ್ರಕಾಶಗೊಂಡುದೂ, ತೆಂಗಿನಮರಗಳಿಂದ ತುಂಬಿರುವುದೂ, ಕಿತ್ತಳೆ ಹಣ್ಣುಗಳಿಂದ ವಿರಾಜಿಸುವುದೂ, ಫಲವುಳ್ಳ ನಿಂಬೆಗಿಡಗಳುಳ್ಳುದೂ, ಮಧೂಕಪುಷ್ಪಗಳಲ್ಲಿ ಕುಳಿತಿರುವ ದುಂಬಿಗಳಿಂದ ವ್ಯಾಪ್ತವಾದುದೂ, ಬೂರುಗದ ತಣ್ಣಗಿರುವ ನೆರಳುಳ್ಳುದೂ, ಬೇವಿನಮರಗಳ ಕಾಡುಗಳುಳ್ಳುದೂ, ಮಧುರವಾಸನೆಯುಳ್ಳ ಮರುಗ ದವನಗಳಿಂದ ಸುವಾಸನೆ ಗೊಂಡುದೂ, ಲವಲೀಲತೆಯ ಚಾಂಚಲ್ಯವನ್ನು ಹೊಂದಿದ ಮಂದಮಾರುತದಿಂದ ಅಲ್ಲಾಡಿಸಲ್ಪಡುತ್ತಿರುವುದೂ, ಕಿರಾತಸ್ತ್ರೀಯರ ವಿಲಾಸದಲ್ಲಿ ಪ್ರೀತಿಯುಳ್ಳ ಝಿಲ್ಲೀಧ್ವನಿಗಳಿಂದ ಶಬ್ದಗೊಂಡುದೂ, ಒಂದೆಡೆಯಲ್ಲಿ ಸರೋವರದ ಬಳಿ ಕ್ರೀಡಿಸುತ್ತಿರುವ ಹಂದಿಗಳ ಸಮೂಹವುಳ್ಳುದೂ, ಹೆಣ್ಣು ಹಂಸವು ಕಚ್ಚಿಕೊಂಡಿರುವ ತಾವರೆದಂಟುಗಳಲ್ಲಿ ಆಸಕ್ತವಾದ ಗಂಡು ಹಂಸವುಳ್ಳುದೂ, ಸಂತೋಷಗೊಂಡ ಚಕ್ರವಾಕಪಕ್ಷಿಗಳ ಮಿಥುನದ ಕ್ರೀಡೆಯಿಂದಲೂ, ಧ್ವನಿಯಿಂದಲೂ ಸುಂದರವೂ, ಕೊಕ್ಕರೆಗಳ ಮರಿಗಳು ಸಂಚರಿಸುತ್ತಿರುವುದೂ, ಹೆಣ್ಣು ಸಾರಸಪಕ್ಷಿಗಳಲ್ಲಿ ಆಸಕ್ತವಾದ ಗಂಡು ಸಾರಸವುಳ್ಳುದೂ, ಮದಿಸಿದ ನವಿಲುಗಳ ಧ್ವನಿಯುಳ್ಳುದೂ, ಕಪಿಂಜಲಪಕ್ಷಿಗಳುಳ್ಳುದೂ, ಜೀವಂಜೀವಪಕ್ಷಿಗಳಿಂದ ಪ್ರಕಾಶಗೊಂಡಿರುವ ಪ್ರಾಣಿಗಳುಳ್ಳುದೂ, ಕೂಗುತ್ತಿರುವ ಕಾರಂಡವಪಕ್ಷಿಗಳಿಂದ ವ್ಯಾಪ್ತವಾದುದೂ, ಕೊಳಗಳ ನೀರಿನಿಂದ ತಣ್ಣಗೆ

ಮಹಾಂಧುಶ್ರವಣಂ ದೂರ್ವಾಶ್ಮಶ್ರುಭಿಃ ಪರಿಶೋಭಿತಂ ।
ಕಮಲಾಮೋದನಿಃಶ್ವಾಸಂ ಬಿಂಬೀಫಲರದಚ್ಛದಂ ॥ ೧೦೪ ॥
ಸುಪದ್ಮಪತ್ರವಸನಂ ಕರ್ಣಿಕಾರವಿಭೂಷಣಂ ।
ಕಮ್ರುಕಂಬುಲಸತ್ಕಂಠಂ ಶಂಕರಸ್ಕಂಧಬಂಧುರಂ ॥ ೧೦೫ ॥
ಗಂಧಸಾರಸಮಾಸಕ್ತಾ ಹೀನದೋರ್ದಂಡಮಂಡಿತಂ ।
ಅಶೋಕಪಲ್ಲವಾಂಗುಷ್ಠಂ ಕೇತಕೀನಖರೋಜ್ವಲಂ ॥ ೧೦೬ ॥
ಲಸತ್ಕಂಠೀರವೋರಸ್ಕಂ ಗಂಡಶೈಲಪೃಥೂದರಂ ।
ಜಲಾವರ್ತಲಸನ್ನಾಭಿತರುಜಂಘಾಯುಗಾನ್ವಿತಂ ॥ ೧೦೭ ॥
ಸ್ಥಲಭಾಕ್ಪದ್ಮಚರಣಂ ಮತ್ತಮಾತಂಗಗಾಮಿನಂ ।
ಲಸತ್ಕದಲಿಕೇದಾರದಲಚ್ಚೀನಾಂಶುಕಾವೃತಂ ॥ ೧೦೮ ॥
ನಾನಾಕುಸುಮಮಾಲಾಭಿರ್ಮಾಲಿತಂ ಚ ಸಮಂತತಃ ।
ಅಕಂಟಕಿತರುಚ್ಛನ್ನಂ ಮಹಿಷಶ್ವಾಪದಾವೃತಂ ॥ ೧೦೯ ॥

---

ಬೀಸುತ್ತಿರುವ ಗಾಳಿಯುಳ್ಳುದೂ, ಮೆಲ್ಲಗೆ ಅಲ್ಲಾಡುತ್ತಿರುವ ತಾವರೆ ಹೂವುಗಳ ಪರಾಗಗಳಿಂದ ಹಳದಿ ಬಣ್ಣವಾದುದೂ, ಅರುಳುತ್ತಿರುವ ಕಮಲವೆಂಬ ಮುಖವುಳ್ಳುದೂ, ನೀಲೋತ್ಪಲವೆಂಬ ಕಣ್ಣುಳ್ಳುದೂ, ತಮಾಲವೆಂಬ ಕೂದಲುಳ್ಳುದೂ, ಪ್ರಕಾಶಿಸುತ್ತಿರುವ ದಾಳಿಂಬದ ಬೀಜವೆಂಬ ಹಲ್ಲುಳ್ಳುದೂ, ದುಂಬಿಗಳ ಸಮೂಹದಿಂದ ಪ್ರಕಾಶಿಸುವ ಹುಬ್ಬುಳ್ಳುದೂ, ಗಿಣಿಗಳ ಮೂಗುಗಳಿಂದ ವಿರಾಜಿಸುವುದೂ, ದೊಡ್ಡಬಾವಿಗಳೆಂಬ ಕಿವಿಗಳುಳ್ಳುದೂ, ಗರಿಕೆಯೆಂಬ ಮೀಸೆಗಳಿಂದ ಶೋಭಿಸುವುದೂ, ಕಮಲದ ಸುವಾಸನೆಯೆಂಬ ಶ್ವಾಸವುಳ್ಳುದೂ, ತೊಂಡೆಹಣ್ಣೆಂಬ ತುಟಿಯುಳ್ಳುದೂ, ತಾವರೆಯೆಲೆಯೆಂಬ ವಸ್ತ್ರವುಳ್ಳುದೂ, ಬೆಟ್ಟದ ತಾವರೆಯೆಂಬ ಒಡವೆಯುಳ್ಳುದೂ, ಸುಂದರವಾದ ಶಂಖದಂತೆ ಪ್ರಕಾಶಿಸುತ್ತಿರುವ ಕುತ್ತಿಗೆಯುಳ್ಳುದೂ, ಶಂಕರನ ಕುತ್ತಿಗೆಯಿಂದ ಮನೋಹರವಾದುದೂ, ಚಂದನ ವೃಕ್ಷಗಳಲ್ಲಿರುವ ಸರ್ಪಗಳೆಂಬ ಭುಜಗಳಿಂದ ಅಲಂಕಾರಗೊಂಡುದೂ, ಅಶೋಕದ ಚಿಗುರೆಂಬ ಅಂಗುಷ್ಠವುಳ್ಳುದೂ, ಕೇತಕಿಯೆಂಬ ಉಗುರುಗಳಿಂದ ವಿರಾಜಿಸುವುದೂ, ಪ್ರಕಾಶಮಾನವಾದ ಸಿಂಹವೆಂಬ ಎದೆಯುಳ್ಳುದೂ, ಗಂಡಶೈಲವೆಂಬ ಹೊಟ್ಟೆಯುಳ್ಳುದೂ, ನೀರಿನ ಸುಳಿಯೆಂಬ ನಾಭಿಯುಳ್ಳುದೂ, ಮರಗಳೆಂಬ ಮೊಣಕಾಲುಗಳುಳ್ಳುದೂ, ಸ್ಥಳದಲ್ಲಿರುವ ಕಮಲಗಳೆಂಬ ಕಾಲುಳ್ಳುದೂ, ಮದಿಸಿದ ಆನೆಯ ಗಮನವುಳ್ಳುದೂ, ಪ್ರಕಾಶಮಾನವಾದ ಬಾಳೆಯ ತೋಟದಲ್ಲಿ ಸಂಚರಿಸುವ ಜಿಂಕೆಗಳೆಂಬ ಬಟ್ಟೆಯುಳ್ಳುದೂ, ಎಲ್ಲೆಡೆಯಲ್ಲಿಯೂ ಅನೇಕ ವಿಧವಾದ ಹೂವಿನ ಮಾಲೆಗಳುಳ್ಳುದೂ, ಮುಳ್ಳಿಲ್ಲದ ಮರಗಳಿಂದ ಮುಚ್ಚಿರುವುದೂ, ಎಮ್ಮೆ ಮೊದಲಾದ ಘಾತುಕಮೃಗಳಿಂದ ಕೂಡಿರುವುದೂ, ಚಂದ್ರ

ಚಂದ್ರಕಾಂತಶಿಲಾಸುಪ್ತ ಕೃಷ್ಣೈಣಹರಿತೋಡುಪಂ ।
ತರುಪ್ರಕೀರ್ಣಕುಸುಮಜಿತಸ್ವರ್ಲೋಕತಾರಕಂ ।
ದರ್ಶಯನ್ನಿತ್ಥಮಾಕ್ರೀಡಂ ದೇವ್ಯೈ ದೇವೋಽವಿಶದ್ವನಂ ॥ ೧೧೦ ॥

ದೇವದೇವ ಉವಾಚ :—

ಯಥಾ ಪ್ರಿಯತಮಾ ದೇವಿ ಮಮ ತ್ವಂ ಸರ್ವಸುಂದರಿ ।
ತಥಾ ಪ್ರಿಯತರಂ ಚೈತನ್ಮೇ ಸದಾಽಽನಂದಕಾನನಂ ॥ ೧೧೧ ॥
ಅತ್ರಾಽಽನಂದ ವನೇ ದೇವಿ ಮೃತಾನಾಂ ಮದನುಗ್ರಹಾತ್
ವಪುಸ್ತ್ವಮೃತತಾಂ ಪ್ರಾಪ್ತಮಪುನರ್ಭವಿನಸ್ತು ತೇ ॥ ೧೧೨ ॥
ಭವಿನೋ ಯೇ ವಿಪದ್ಯಂತೇ ವಾರಾಣಸ್ಯಾಂ ಮಮಾಜ್ಞಯಾ ।
ತೇಷಾಂ ಬೀಜಾನಿ ದಗ್ಧಾನಿ ಶ್ಮಶಾನಜ್ವಲದಗ್ನಿನಾ ॥ ೧೧೩ ॥
ಮಹಾಶ್ಮಶಾನೇ ಯೇ ಪ್ರಾಪ್ತಾ ದೀರ್ಘನಿದ್ರಾಂ ಗಿರೀಂದ್ರಜೇ ।
ನ ಪುನರ್ಗರ್ಭಶಯನೇ ತೇ ಸ್ವಪಂತಿ ಕದಾಚನ ॥ ೧೧೪ ॥
ಬ್ರಹ್ಮಜ್ಞಾನೇನ ಮುಚ್ಯಂತೇ ನಾಽನ್ಯಥಾ ಜಂತವಃ ಕ್ವಚಿತ್ ।
ಬ್ರಹ್ಮಜ್ಞಾನಮಯೇ ಕ್ಷೇತ್ರೇ ಪ್ರಯಾಗೇವಾ ತನುತ್ಯಜಃ ॥ ೧೧೫ ॥
ಬ್ರಹ್ಮ ಜ್ಞಾನಂ ತದೇವಾಽಹಂ ಕಾಶೀಸಂಸ್ಥಿತಿಭಾಗಿನಾಂ ।
ದಿಶಾಮಿ ತಾರಕಂ ಪ್ರಾಂತೇ ಮುಚ್ಯಂತೇ ತೇತು ತತ್ಕ್ಷಣಾತ್ ॥ ೧೧೬ ॥

---

ಕಾಂತಶಿಲೆಯ ಮೇಲೆ ಮಲಗಿರುವ ಜಿಂಕೆಗಳಿಂದ ಹಸುರಾದ ಚಂದ್ರನುಳ್ಳದ್ದೂ, ಮರಗಳಿಂದ ಬಿದ್ದ ಹೂವುಗಳಿಂದ ಆಕಾಶದಲ್ಲಿರುವ ನಕ್ಷತ್ರಗಳನ್ನು ಜಯಿಸಿರುವುದೂ ಆದ ಆ ಉದ್ಯಾನವನ್ನು ಪಾರ್ವತಿಗೆ ತೋರಿಸುತ್ತ ಪ್ರವೇಶಿಸಿದನು.

೧೧೧. ಶಂಕರನು ಹೇಳುತ್ತಾನೆ:— ಎಲೌ ಸುಂದರಿದೇವಿಯೆ! ನೀನು ನನಗೆ ಹೇಗೆ ಅತ್ಯಂತ ಪ್ರಿಯಳೊ, ಹಾಗೆಯೇ ಈ ಆನಂದಕಾನನವೂ ಪ್ರಿಯವಾದುದು.

೧೧೨. ದೇವಿ! ಈ ಆನಂದವನದಲ್ಲಿ ಮೃತರಾದವರು ನನ್ನ ಅನುಗ್ರಹದಿಂದ ಮುಕ್ತರಾಗಿ ಮರಳಿ ಈ ಲೋಕದಲ್ಲಿ ಜನಿಸುವುದಿಲ್ಲ.

೧೧೩. ಈ ಕಾಶಿಯಲ್ಲಿ ಮೃತವಾದ ಪ್ರಾಣಿಗಳ ಸಂಸಾರಬೀಜಗಳು ನನ್ನ ಆಜ್ಞೆಯಂತೆ ಶ್ಮಶಾನದ ಅಗ್ನಿಯಿಂದ ಭಸ್ಮವಾಗುವುವು.

೧೧೪. ಓ ಗಿರಿತನಯೆ! ಈ ಮಹಾಶ್ಮಶಾನದಲ್ಲಿ ಮರಣವನ್ನು ಹೊಂದಿದವರು ಮತ್ತೆ ಗರ್ಭವಾಸವನ್ನು ಮಾಡುವುದಿಲ್ಲವು.

೧೧೫. ಪ್ರಾಣಿಗಳು ಬ್ರಹ್ಮಜ್ಞಾನಸಾಧಕವಾದ ಪ್ರಯಾಗದಲ್ಲಿಯೂ ಬ್ರಹ್ಮಜ್ಞಾನದ ಹೊರತು ಇತರ ಯಾವುದರಿಂದಲೂ ಮುಕ್ತರಾಗುವುದಿಲ್ಲ.

೧೧೬. ಕಾಶಿಯಲ್ಲಿ ಮೃತರಾದವರಿಗೆ ನಾನು ಬ್ರಹ್ಮಜ್ಞಾನರೂಪವಾದ

ಗೃಣ್ಹೀಯುಃ ಪಾಪಕರ್ಮಾಣಿ ಕಾಶೀಮೃತಿವಿನಿಂದಕಾಃ ।
ಸುಕೃತಾನಿ ಸ್ತುತಿಕೃತೋ ಮುಚ್ಯಂತೇ ತೇಽತ್ರ ಜಂತವಃ ॥ ೧೧೭ ॥
ಬ್ರಹ್ಮಜ್ಞಾನಂ ಕುತೋ ದೇವಿ ಕಲಿನೋಪಹತಾತ್ಮನಾಂ ।
ಸ್ವಭಾವ ಚಂಚಲಾಕ್ಷಾಣಾಂ ತದ್ಬ್ರಹ್ಮೇಹ ದಿಶಾಮ್ಯಹಂ ॥ ೧೧೮ ॥
ಯೋಗಿನೋ ಯೋಗವಿಭ್ರಷ್ಟಾಃ ಪತಂತ್ಯೈಶ್ವರ್ಯಮೋಹಿತಾಃ ।
ಕಾಶ್ಯಾಂ ಪತಿತ್ವಾ ನ ಪುನಃ ಪತಂತ್ಯಪಿ ಮಹಾಲಯೇ ॥ ೧೧೯ ॥
ಬ್ರಹ್ಮಜ್ಞಾನಂ ನ ವಿಂದಂತಿ ಯೋಗೈರೇಕೇನ ಜನ್ಮನಾ ।
ಜನ್ಮನೈಕೇನ ಮುಚ್ಯಂತೇ ಕಾಶ್ಯಾ ಮಂತಕೃತೋ ಜನಾಃ ॥ ೧೨೦ ॥
ಯಥೇಹ ಮುಚ್ಯತೇ ಜಂತುರ್ಗಿರಿಜೇ ಮದನುಗ್ರಹಾತ್ ।
ಅವಿಮುಕ್ತೇ ಮಹಾಕ್ಷೇತ್ರೇ ನ ತಥಾಽನ್ಯತ್ರ ಕುತ್ರಚಿತ್ ॥ ೧೨೧ ॥
ಬಹುಜನ್ಮಸಮಭ್ಯಾಸಾದ್ಯೋಗೀ ಮುಚ್ಯೇತ ವಾ ನವಾ ।
ಮೃತಮಾತ್ರೋ ವಿಮುಚ್ಯೇತ ಕಾಶ್ಯಾಮೇಕೇನ ಜನ್ಮನಾ ॥ ೧೨೨ ॥

---

ತಾರಕಮಂತ್ರವನ್ನು ಉಪದೇಶಿಸುವೆನು. ಅದರಿಂದವರು ಕೂಡಲೆ ಮುಕ್ತರಾಗುವರು.

೧೧೭. ಕಾಶಿಯಲ್ಲಿ ಮೃತರಾದವರನ್ನು ನಿಂದಿಸುವವರು ಪಾಪಗಳನ್ನೂ, ಸ್ತುತಿಸುವವರು ಪುಣ್ಯಗಳನ್ನೂ ಹೊಂದುವರು. ಕಾಶೀಮರಣವನ್ನು ಪ್ರಶಂಸಿಸುವವರು ಇಲ್ಲಿ ಮುಕ್ತರಾಗುವರು.

೧೧೮. ದೇವಿ! ಕಲಿಯಿಂದ ದುಷ್ಟರಾಗಿ ಸ್ವಭಾವದಿಂದಲೇ ಚಂಚಲೇಂದ್ರಿಯರಾದ ಜನರಗೆ ಬ್ರಹ್ಮಜ್ಞಾನವು ಹೇಗೆ ದೊರೆಯುವುದು. ಅವರಿಗೆ ನಾನು ಆ ಬ್ರಹ್ಮಜ್ಞಾನವನ್ನು ಇಲ್ಲಿ ಉಪದೇಶಮಾಡುವೆನು.

೧೧೯. ಯೋಗಿಗಳೂ ಯೋಗಭ್ರಷ್ಟರೂ, ಐಶ್ವರ್ಯದಿಂದ ಭ್ರಾಂತರೂ ಆದವರು ಪತಿತರಾಗುವರು. ಕಾಶಿಯಲ್ಲಿ ಮೃತರಾದವರು ಮಹಾಪ್ರಲಯದಲ್ಲಿಯೂ ಮರಳಿ ಮಡಿಯುವುದಿಲ್ಲ.

೧೨೦. ಯೋಗಾಭ್ಯಾಸದಿಂದ ಮಾನವನು ಒಂದು ಜನ್ಮದಲ್ಲಿ ಬ್ರಹ್ಮಜ್ಞಾನವನ್ನು ಹೊಂದುವುದಿಲ್ಲ. ಕಾಶಿಯಲ್ಲಿ ಮಡಿದವರು ಒಂದು ಜನ್ಮದಲ್ಲಿಯೇ ಮುಕ್ತರಾಗುವರು.

೧೨೧. ಎಲೌ ಪಾರ್ವತಿಯೆ! ನನ್ನ ಅನುಗ್ರಹದಿಂದ ಈ ಅವಿಮುಕ್ತಕ್ಷೇತ್ರದಲ್ಲಿ ಮನುಷ್ಯನು ಮುಕ್ತನಾಗುವಂತೆ ಬೇರೆ ಎಲ್ಲಿಯೂ ಮುಕ್ತಿಯನ್ನು ಹೊಂದುವುದಿಲ್ಲ.

೧೨೨. ಯೋಗಿಯು ಬಹುಜನ್ಮಗಳ ಅಭ್ಯಾಸದಿಂದ ಮುಕ್ತನಾಗುವನೊ ಇಲ್ಲವೊ? ಕಾಶಿಯಲ್ಲಿ ಮೃತನಾದ ಕೂಡಲೆ ಒಂದು ಜನ್ಮದಿಂದಲೆ ಮುಕ್ತಿಯನ್ನು ಹೊಂದುವನು.

ನ ಸಿಧ್ಯತಿ ಕಲೌ ಯೋಗೋ ನ ಸಿಧ್ಯತಿ ಕಲೌ ತಪಃ ।
ನ್ಯಾಯಾರ್ಜಿತಧನೋತ್ಸರ್ಗಃ ಸದ್ಯಃ ಸಿದ್ಧ್ಯೈತ್ಕಲೌ ನರಃ ॥ ೧೨೩ ॥
ನ ವ್ರತಂ ನ ತಪೋ ನೇಜ್ಯಾ ನ ಜಪೋ ನ ಸುರಾರ್ಚನಂ ।
ದಾನಮೇವ ಕಲೌ ಮುಕ್ತ್ಯೈ ಕಾಶೀದಾನ್ಯೈರವಾಪ್ಯತೇ ॥ ೧೨೪ ॥
ಕಲೌ ವಿಶ್ವೇಶ್ವರೋ ದೇವಃ ಕಲೌ ವಾರಾಣಸೀ ಪುರೀ ।
ಕಲೌ ಭಾಗೀರಥೀ ಗಂಗಾ ಕಲೌ ದಾನಂ ವಿಶಿಷ್ಯತೇ ॥ ೧೨೫ ॥
ಗಂಗೋತ್ತರವಹಾ ಕಾಶ್ಯಾಂ ಲಿಂಗಂ ವಿಶ್ವೇಶ್ವರಂ ಮಮ ।
ಉಭೇ ವಿಮುಕ್ತಿದೇ ಪುಂಸಾಂ ಪ್ರಾಪ್ಯೇ ದಾನಬಲಾತ್ಕಲೌ ॥ ೧೨೬ ॥
ಪುಣ್ಯವಾನಿತರೋವಾಽಪಿ ಮಮ ಕ್ಷೇತ್ರಸ್ಯ ಸೇವಯಾ ।
ಮುಕ್ತೋ ಭವತಿ ದೇವೇಶಿ ನಾಽತ್ರ ಕಾರ್ಯಾ ವಿಚಾರಣಾ ॥ ೧೨೭ ॥
ಅವಿಮುಕ್ತಸ್ಯ ಮಾಹಾತ್ಮ್ಯಾತ್ಪುಣ್ಯಪಾಪೇನ ಕರ್ಮಣಾ ।
ದೇವಿ ಪ್ರಭವತಃ ಪುಂಸಾಮಪಿ ಜನ್ಮಶತಾರ್ಜಿತೇ ॥ ೧೨೮ ॥
ಅವಿಮುಕ್ತಂ ನ ಮೋಕ್ತವ್ಯಂ ತಸ್ಮಾದ್ದೇವಿ ಮುಮುಕ್ಷುಣಾ ।
ಹನ್ಯಮಾನೇನ ಬಹುಧಾ ಹ್ಯುಪಸರ್ಗಶತೈರಪಿ ॥ ೧೨೯ ॥

---

೧೨೩. ಕಲಿಯುಗದಲ್ಲಿ ಯೋಗವೂ, ತಪಸ್ಸೂ ಸಿದ್ಧಿಸುವುದಿಲ್ಲ. ನ್ಯಾಯದಿಂದ ಸಂಪಾದಿಸಿದ ಹಣವನ್ನು ದಾನಮಾಡಿದ ಮಾನವನು ಕೂಡಲೆ ಸಿದ್ಧಿಯನ್ನು ಪಡೆಯುವನು.

೧೨೪. ವ್ರತ, ತಪಸ್ಸು, ಯಾಗ, ಜಪ, ದೇವಪೂಜೆ ಇವು ಕಲಿಯುಗದಲ್ಲಿ ಮುಕ್ತಿಗೆ ಸಾಧಕವಲ್ಲ. ದಾನವೇ ಮುಕ್ತಿಗೆ ಸಾಧನವು. ಕಾಶಿಯಲ್ಲಿ ದಾನ ಮಾಡುವುದರಿಂದ ಮುಕ್ತಿಯು ಲಭಿಸುವುದು.

೧೨೫. ಕಲಿಯುಗದಲ್ಲಿ ವಿಶ್ವೇಶ್ವರ, ಕಾಶೀ, ಗಂಗೆ, ದಾನ ಇವುಗಳು ಉತ್ಕೃಷ್ಟವಾದುವು.

೧೨೬. ಕಾಶಿಯಲ್ಲಿರುವ ಉತ್ತರವಾಹಿನಿಯಾದ ಗಂಗೆ, ನನ್ನಲಿಂಗ, ಇವು ಕಲಿಯುಗದಲ್ಲಿ ದಾನಬಲದಿಂದ ಲಭಿಸುವುವು. ಇವು ಮೋಕ್ಷವನ್ನು ಕೊಡುವುವು.

೧೨೭. ದೇವೇಶಿ! ಪುಣ್ಯವಂತನಾಗಲಿ, ಪಾಪಿಯಾಗಲಿ ನನ್ನ ಕ್ಷೇತ್ರದ ಸೇವೆಯಿಂದ ಮುಕ್ತಿಯನ್ನು ಪಡೆಯುವನು. ಈ ವಿಷಯದಲ್ಲಿ ಸಂಶಯಬೇಡ.

೧೨೮. ದೇವಿ! ಪುಣ್ಯವಂತನಾಗಲಿ, ಪಾಪಿಯಾಗಲಿ ಅವಿಮುಕ್ತಕ್ಷೇತ್ರದ ಮಾಹಾತ್ಮ್ಯದಿಂದ ಅವನಿಗೆ ಅನೇಕ ಜನ್ಮಗಳಲ್ಲಿ ಲಭಿಸುವ ಗಂಗೆ ವಿಶ್ವೇಶ್ವರ ಲಿಂಗಗಳ ದರ್ಶನವು ಲಭಿಸುವುವು.

೧೨೯. ದೇವಿ! ಆದುದರಿಂದ ಮುಮುಕ್ಷುವಾದ ನರನು ಅನೇಕ ಬಗೆಯ ತೊಂದರೆಗಳಿಗೀಡಾದರೂ ಅವಿಮುಕ್ತಕ್ಷೇತ್ರವನ್ನು ಬಿಡಬಾರದು.

ವಿಧಾಯ ಕ್ಷೇತ್ರ ಸಂನ್ಯಾಸಂ ಯೇ ವಸಂತೀಹ ಮಾನವಾಃ ।
ಜೀವನ್ಮುಕ್ತಾಸ್ತು ತೇ ದೇವಿ ತೇಷಾಂ ವಿಘ್ನಂ ಹರಾಮ್ಯಹಂ ॥ ೧೩೦ ॥
ನ ಯೋಗಿನಾಂ ಹೃದಾಕಾಶೇ ನ ಕೈಲಾಸೇ ನ ಮಂದರೇ ।
ತಥಾ ವಾಸರತಿರ್ಮೇಽಸ್ತಿ ಯಥಾ ಕಾಶ್ಯಾಂ ರತಿರ್ಮಮ ॥ ೧೩೧ ॥
ಕಾಶೀವಾಸಿಜನೋ ದೇವಿ ಮಮ ಗರ್ಭೇ ವಸೇತ್ಸದಾ ।
ಅತಸ್ತಂ ಮೋಚಯಾಮ್ಯಂತೇ ಪ್ರತಿಜ್ಞೇಯಂ ಯತೋ ಮಮ ॥ ೧೩೨ ॥
ತಾಮಸೀಂ ಪ್ರಕೃತಿಂ ಪ್ರಾಪ್ಯ ಕಾಲೋ ಭೂತ್ವಾ ಚರಾಽಚರಂ ।
ಗ್ರಸಾಮಿ ಲೀಲಯಾ ದೇವಿ ಕಾಶೀಂ ರಕ್ಷಾಮಿ ಯತ್ನತಃ ॥ ೧೩೩ ॥
ಪ್ರೇಮಪಾತ್ರದ್ವಯಂ ದೇವಿ ನಿತರಾಂ ನೇತರನ್ಮಮ ।
ತ್ವಂ ವಾ ತಪೋಧನೇ ಗೌರಿ ಕಾಶೀವಾಽಽನಂದಭೂಮಿಕಾ ॥ ೧೩೪ ॥
ವಿನಾ ಕಾಶೀಂ ನ ಮೇ ಸ್ಥಾನಂ ವಿನಾ ಕಾಶೀಂ ನ ಮೇ ರತಿಃ ।
ವಿನಾ ಕಾಶೀಂ ನ ನಿರ್ವಾಣಂ ಸತ್ಯಂ ಸತ್ಯಂ ವದಾಮ್ಯಹಂ ॥ ೧೩೫ ॥
ಬ್ರಹ್ಮಾಂಡಗೋಲಕೇ ಯದ್ವನ್ಮುಕ್ತಿಃ ಕಾಶ್ಯಾಂ ವ್ಯವಸ್ಥಿತಾ ।
ಅಷ್ಟಾಂಗ ಯೋಗಯುಕ್ತ್ಯಾವಾ ನ ತಥಾ ಹೇಲಯಾಽನ್ಯತಃ ॥ ೧೩೬ ॥

---

೧೩೦. ಕ್ಷೇತ್ರ ಸನ್ಯಾಸವನ್ನು ಮಾಡಿ ಇಲ್ಲಿ ವಾಸಿಸುವ ಮಾನವರು ಜೀವನ್ಮುಕ್ತರೇ. ನಾನು ಅವರ ವಿಘ್ನಗಳನ್ನು ನಿವಾರಿಸುವೆನು.

೧೩೧. ನನಗೆ ಕಾಶಿಯಲ್ಲಿ ಪ್ರೀತಿಯಿದ್ದಂತೆ ಯೋಗಿಗಳ ಹೃದಯ, ಕೈಲಾಸ ಪರ್ವತ, ಮಂದರಶೈಲ, ಇವುಗಳಲ್ಲಿ ಪ್ರೀತಿಯಿಲ್ಲ.

೧೩೨. ದೇವಿ! ಕಾಶಿಯಲ್ಲಿ ವಾಸಿಸುವ ಜನರು ಯಾವಾಗಲೂ ನನ್ನ ಗರ್ಭದಲ್ಲಿ ವಾಸಿಸಬೇಕು ಎಂದು ನನ್ನ ಪ್ರತಿಜ್ಞೆಯಾಗಿರುವುದರಿಂದ ಅವಸಾನ ಕಾಲದಲ್ಲಿ ಅಂತಹ ಜನರನ್ನು ಮೋಕ್ಷಕ್ಕೆ ಕಳುಹಿಸುವೆನು.

೧೩೩–೧೩೫. ದೇವಿ! ನಾನು ತಾಮಸಪ್ರಕೃತಿಯನ್ನು ಹೊಂದಿ ಲೀಲೆಯಿಂದ ಯಮನಾಗಿ ನುಂಗುವೆನು. ಆದರೆ ಪ್ರಯತ್ನಪೂರ್ವಕವಾಗಿ ಕಾಶಿಯನ್ನು ಕಾಪಾಡುವೆನು. ನನಗೆ ಅತ್ಯಂತ ಪ್ರೇಮಾಸ್ಪದ ವಸ್ತುಗಳು ಈ ತಪೋವನದಲ್ಲಿರುವ ನೀನೂ, ಆನಂದಾಶ್ರಯವಾದ ಕಾಶಿಯೂ ಆಗಿರುವುವು. ಬೇರೆ ಯಾವುದೂ ಇರುವುದಿಲ್ಲ. ಕಾಶಿಯನ್ನು ಬಿಟ್ಟರೆ ನನಗೆ ವಾಸಸ್ಥಳವೂ, ಸಂತೋಷವೂ, ಸೌಖ್ಯವೂ ಬೇರಾವುದೂ ಇರುವುದಿಲ್ಲ. ಇದನ್ನು ನಾನು ಸತ್ಯವಾಗಿ ಹೇಳುವೆನು.

೧೩೬. ಕಾಶಿಯಲ್ಲಿ ಅನಾಯಾಸವಾಗಿ ಮೋಕ್ಷವಾಗುವಂತೆ ಬ್ರಹ್ಮಾಂಡಗಳ ಮಧ್ಯದಲ್ಲಿ ಬೇರೊಂದೆಡೆಯಲ್ಲಿ ಅಷ್ಟಾಂಗಯೋಗದಿಂದಾಗಲಿ, ಮತ್ತಾವುದರಿಂದಾಗಲಿ ಮುಕ್ತಿಯು ಲಭಿಸುವುದಿಲ್ಲ.

ಇತಿ ಬ್ರುವಾಣೋ ದೇವೇಶೋ ಹರಿಕೇಶಮವೈಕ್ಷತ ।
ಮಧ್ಯೇವನಂ ತಪಸ್ಯಂತಮಶೋಕತರುಮೂಲಗಂ ॥ ೧೩೭ ॥
ಶುಷ್ಕಸ್ನಾಯುಪಿನದ್ಧಾಽಸ್ಥಿಸಂಚಯಂ ನಿಶ್ಚಲಾಕೃತಿಂ ।
ವಲ್ಮೀಕಕೀಟಿಕಾಕೋಟಿಶೋಷಿತಾಸೃಗಸೃಗ್ಧರಂ ॥ ೧೩೮ ॥
ನಿರ್ಮಾಂಸಕೀಕಸಚಯಂ ಸ್ಫಟಿಕೋಪಲನಿಶ್ಚಲಂ ।
ಶಂಖಕುಂದೇಂದುತುಹಿನಮಹಾಶಂಖಲಸಚ್ಛ್ರಿಯಂ ॥ ೧೩೯ ॥
ಸತ್ವಾವಲಂಬಿತಪ್ರಾಣಮಾಯುಃಶೇಷೇಣ ರಕ್ಷಿತಂ ।
ನಿಃಶ್ವಾಸೋಚ್ಛ್ವಾಸಪವನವೃತ್ತಿಸೂಚಿತಜೀವಿತಂ ॥ ೧೪೦ ॥
ನಿಮೇಷೋನ್ಮೇಷಸಂಚಾರಪಿಶುನೀಕೃತಜಂತುಕಂ ।
ಪಿಂಗತಾರಸ್ಫುರದ್ರಶ್ಮಿನೇತ್ರದೀಪಿತದಿಙ್ಮುಖಂ ॥ ೧೪೧ ॥
ತತ್ತಪೋಽಗ್ನಿಶಿಖಾದಾವಚುಂಬಿತಮ್ಲಾನಕಾನನಂ ।
ತತ್ಸೌಮ್ಯದೃಕ್ಸುಧಾವರ್ಷಸಂಸಿಕ್ತಾಽಖಿಲಭೂರುಹಂ ॥ ೧೪೨ ॥
ಸಾಕ್ಷಾತ್ತಪಸ್ಯಂತಮಿವ ತಪೋ ಧೃತ್ವಾ ನರಾಕೃತಿಂ ।
ನಿರಾಕೃತಿಂ ನಿರಾಕಾಂಕ್ಷಂ ಕೃತ್ವಾ ಭಕ್ತಿಂ ಚ ಕಾಂಚನ ॥ ೧೪೩ ॥
ಕುರಂಗಶಾವೈರ್ಗಣಶೋ ಭ್ರಮದ್ಭಿಃ ಪರಿವಾರಿತಂ ।
ನಿತಾಂತಭೀಷಣಾಸ್ಯೈಶ್ಚ ಪಂಚಾಸ್ಯೈಃ ಪರಿರಕ್ಷಿತಂ ॥ ೧೪೪ ॥

---

೧೩೭–೧೪೪. ಮಹೇಶ್ವರನು ಹೀಗೆ ಹೇಳುತ್ತ ವನಮಧ್ಯದಲ್ಲಿ ಅಶೋಕ ವೃಕ್ಷದ ಬುಡದಲ್ಲಿ ತಪಸ್ಸನ್ನಾಚರಿಸುತ್ತಿರುವವನೂ, ಒಣಗಿದ ನರಗಳಿಂದ ಕಟ್ಟಿದ ಮೂಳೆಗಳ ಸಮೂಹವುಳ್ಳವನೂ, ಅಲ್ಲಾಡದಿರುವವನೂ, ಕೋಟ್ಯಂತರ ಗೆದ್ದಲು ಹುಳುಗಳಿಂದ ಒಣಗಿಸಲ್ಪಟ್ಟ ರಕ್ತವುಳ್ಳ ನಾಡಿಗಳುಳ್ಳವನೂ, ಮಾಂಸ ವಿಲ್ಲದ ಮೂಳೆಗಳ ಸಮೂಹವುಳ್ಳವನೂ, ಸ್ಫಟಿಕಮಣಿಯಂತೆ ನಿಶ್ಚಲನೂ, ಶಂಖ, ಮಲ್ಲಿಗೆ ಹೂವು, ಚಂದ್ರ, ಹಿಮ, ಮುತ್ತಿನಚಿಪ್ಪು ಇವುಗಳಂತೆ ಪ್ರಕಾಶಿಸುವ ಕಾಂತಿಯುಳ್ಳವನೂ, ಕೇವಲ ಅಂತಃಕರಣದಲ್ಲಿರುವ ಪ್ರಾಣವುಳ್ಳವನೂ, ಅವಶಿಷ್ಟಾಯುಷ್ಯದಿಂದ ಕಾಪಾಡಲ್ಪಟ್ಟವನೂ, ನಿಶ್ವಾಸ ಉಚ್ಛ್ವಾಸಗಳ ಗಾಳಿ ಯಿಂದ ಮಾತ್ರವೇ ಸೂಚಿತವಾದ ಜೀವವುಳ್ಳವನೂ, ಕಣ್ಣುಗಳನ್ನು ಮುಚ್ಚಿ ತೆರೆಯುವುದರಿಂದ ಪ್ರಾಣಿಗಳಿಗೆ ಬೇಡನಂತೆ ತೋರುವವನೂ, ಹಳದಿ ಬಣ್ಣವಾದ ತಾರಕೆಗಳಿಂದ ಪ್ರಕಾಶಿಸುವ ಕಣ್ಣುಗಳಿಂದ ದಿಕ್ಕುಗಳನ್ನು ಉಜ್ಜ್ವಲಗೊಳಿಸು ವವನೂ, ತಪಸ್ಸಿನ ಅಗ್ನಿಜ್ವಾಲೆಯಿಂದ ಕಾಡುಗಳಲ್ಲಿರುವ ಮರಗಳನ್ನು ಬಾಡಿಸು ವವನೂ, ಸೌಮ್ಯದೃಷ್ಟಿಯೆಂಬ ಅಮೃತವೃಷ್ಟಿಯಿಂದ ಸಿಂಪಡಿಸಿದ ಸಕಲ ವೃಕ್ಷ ಗಳುಳ್ಳವನೂ, ಮನುಷ್ಯನ ಆಕೃತಿಯನ್ನು ಧರಿಸಿ ತಪಸ್ಸನ್ನು ಮಾಡುತ್ತಿರುವ

ತಂ ತಥಾಭೂತಮಾಲೋಕ್ಯ ದೇವೀ ದೇವಂ ವ್ಯಜಿಜ್ಞಪತ್ ।
ವರೇಣ ಚ್ಛಂದಯೇಶಾನಮುಂ ನಿಜಭಕ್ತಂ ತಪಸ್ವಿನಂ ॥ ೧೪೫ ॥
ತ್ವದೇಕಚಿತ್ತಂ ತ್ವದಧೀನಜೀವಿತಂ
ತ್ವದೇಕಕರ್ಮಾಣಮಮುಂ ತ್ವದಾಶ್ರಯಂ ।
ತೀವ್ರೈಸ್ತಪೋಭಿಃ ಪರಿಶುಷ್ಕವಿಗ್ರಹಂ
ಕುರುಷ್ವ ಯಕ್ಷಸ್ಯ ವರೈರನುಗ್ರಹಂ ॥ ೧೪೬ ॥
ದೇವೋ ವೃಷೇಂದ್ರಾದವರುಹ್ಯ ದೇವ್ಯಾ
ಶೈಲಾದಿನಾ ದತ್ತಕರಾವಲಂಬಃ ।
ಸಮಾಧಿಸಂಕೋಚಿತನೇತ್ರಪತ್ರಂ
ಪಸ್ಪರ್ಶ ಹಸ್ತೇನ ದಯಾರ್ದ್ರಚೇತಾಃ ॥ ೧೪೭ ॥
ತತಃ ಸ ಯಕ್ಷೋ ವಿನಿಮೀಲ್ಯ ಚಕ್ಷುಷೀ
ತ್ರ್ಯಕ್ಷಂ ಪುರೋ ವೀಕ್ಷ್ಯ ಸಮಕ್ಷಮಾತ್ಮನಃ ।
ಉದ್ಯತ್ಸಹಸ್ರಾಂಶುಸಹಸ್ರತೇಜಸಂ
ಜಗಾದ ಹರ್ಷಾಕುಲಗದ್ಗದಾಕ್ಷರಂ ॥ ೧೪೮ ॥

---

ಪ್ರತ್ಯಕ್ಷವಾದ ತಪಸ್ಸಿನಂತಿರುವವನೂ, ಆಕೃತಿಶೂನ್ಯವಾದ ಅನಿರ್ವಚನೀಯ ಭಕ್ತಿಯನ್ನು ಮಾಡಿಯೂ ಅಪೇಕ್ಷೆಯಿಲ್ಲದನೂ, ಗುಂಪುಗುಂಪಾಗಿ ಸಂಚರಿಸುತ್ತಿರುವ ಜಿಂಕೆಮರಿಗಳಿಂದ ಸುತ್ತುವರೆಯಲ್ಪಟ್ಟವನೂ, ಅತ್ಯಂತ ಭಯಂಕರ ಮುಖವುಳ್ಳ ಸಿಂಹಗಳಿಂದ ಕಾಪಾಡಲ್ಪಟ್ಟವನೂ ಆದ ಆ ಹರಿಕೇಶನನ್ನು ಕಂಡನು.

೧೪೫–೧೪೬. ದೇವಿಯು ಇಂತಿರುವ ಆ ಹರಿಕೇಶನನ್ನು ಕಂಡು ತನ್ನ ಪತಿಯನ್ನು ಕುರಿತು, "ಸ್ವಾಮಿ! ನಿನ್ನ ಭಕ್ತನೂ, ತಪಸ್ವಿಯೂ, ನಿನ್ನಲ್ಲಿಯೇ ಮನಸ್ಸನ್ನಿಟ್ಟಿರುವವನೂ, ನಿನ್ನ ಅಧೀನವಾದ ಜೀವವುಳ್ಳವನೂ, ನಿನ್ನನ್ನುದ್ದೇಶಿಸಿ ಕಾರ್ಯವನ್ನಾಚರಿಸುವವನೂ, ನಿನ್ನನ್ನೇ ಆಶ್ರಯಿಸಿರುವವನೂ, ಕಠಿನ ತಪಸ್ಸುಗಳಿಂದ ಒಣಗಿದ ಶರೀರವುಳ್ಳವನೂ ಆದ ಈ ಯಕ್ಷನಿಗೆ ವರವನ್ನು ನೀಡು" ಎಂದಳು.

೧೪೭. ಮಹಾದೇವನು ದೇವಿಯೊಡನೆ ನಂದಿಕೇಶ್ವರನ ಕೈಯನ್ನು ಆಶ್ರಯಿಸಿ ಕೆಳಗಿಳಿದು, ದಯೆಗೊಂಡು, ಧ್ಯಾನವಶದಿಂದ ಕಣ್ಣನ್ನು ಮುಚ್ಚಿಕೊಂಡಿರುವ ಆ ಹರಿಕೇಶನನ್ನು ಮುಟ್ಟಿದನು.

೧೪೮. ಬಳಿಕ ಆ ಯಕ್ಷನು ಕಣ್ಣುಗಳನ್ನು ತೆರೆದು ತನ್ನ ಮುಂದೆ ಪ್ರತ್ಯಕ್ಷನಾಗಿ ಉದಯಸುತ್ತಿರುವ ಸಾವಿರ ಸೂರ್ಯರಂತೆ ತೇಜಸ್ಸುಳ್ಳ ಮಹೇಶ್ವರನನ್ನು ನೋಡಿ ಸಂತೋಷದಿಂದ ಗದ್ಗದವಾದ ಅಕ್ಷರವುಳ್ಳವನಾಗಿ ಹೀಗೆಂದನು.

ಜಯೇಶ ಶಂಭೋ ಗಿರಿಜೇಶ ಶಂಕರ
ತ್ರಿಶೂಲಪಾಣೇ ಶಶಿಖಂಡಶೇಖರ ।
ಸ್ಪರ್ಶಾತ್ಕೃಪಾಲೋ ತವ ಪಾಣಿಪಂಕಜಂ
ಪ್ರಾಪ್ಯಾಽಮೃತೀಭೂತತನೂಲತೋಽಭವಂ ॥ ೧೪೯ ॥
ಶ್ರುತ್ವೋದಿತಾಂ ತಸ್ಯ ಮಹೇಶ್ವರೋ ಗಿರಂ
ಮೃದ್ವೀಕಯಾ ಸಾಮ್ಯಮುಪೇಯುಷೀಂ ಮೃದು ।
ಭಕ್ತಸ್ಯ ಧೀರಸ್ಯ ಮಹಾತಪೋನಿಧೇ
ರ್ದದೌ ವರಾಣಾಂ ನಿಕರಂ ತದಾ ಮುದಾ ॥ ೧೫೦ ॥
ಕ್ಷೇತ್ರಸ್ಯ ಯಕ್ಷಾಽಸ್ಯ ಮಮ ಪ್ರಿಯಸ್ಯ ಮೇ
ಭವಾಽಧುನಾ ದಂಡಧರೋ ವರಾನ್ಮಮ ।
ಸ್ಥಿರಸ್ತ್ವಮದ್ಯಾದಿ ದುರಾತ್ಮದಂಡಕಃ
ಸುಪಾಲಕಃ ಪುಣ್ಯಕೃತಾಂ ಚ ಮತ್ಪ್ರಿಯಃ ॥ ೧೫೧ ॥
ತ್ವಂ ದಂಡಪಾಣಿರ್ಭವ ನಾಮತೋಽಧುನಾ
ಸರ್ವಾನ್ಗಣಾಂಛಾಧಿ ಮಮಾಜ್ಞಯೋತ್ಕಟಾನ್ ।
ಗಣಾವಿಮೌ ತ್ವಾಮನುಯಾಯಿನೌ ಸದಾ
ನಾಮ್ನಾ ಯಥಾರ್ಥೌ ನೃಷು ಸಂಭ್ರಮೋದ್ಭ್ರಮೌ॥ ೧೫೨ ॥

---

೧೪೯. "ಈಶ, ಶಂಭೋ, ಗಿರಿಜೇಶ, ಶಂಕರ, ತ್ರಿಶೂಲಪಾಣೇ, ಚಂದ್ರಶೇಖರ! ದಯಾಳುವಾದ ನಿನ್ನ ಕರಕಮಲದ ಸ್ಪರ್ಶದಿಂದ ನಾನು ಅಕ್ಷಯ ಶರೀರವುಳ್ಳವನಾದೆನು."

೧೫೦. ಮಹೇಶ್ವರನಾದರೊ ದ್ರಾಕ್ಷೆಯಂತಿರುವ ಅವನ ಮೃದುವಚನವನ್ನಾಲಿಸಿ ಭಕ್ತನೂ, ಧೀರನೂ, ಅತ್ಯಂತ ತಪಸ್ವಿಯೂ ಆದ ಅವನಿಗೆ ಅನೇಕ ವರಗಳನ್ನಿತ್ತನು.

೧೫೧. "ಯಕ್ಷ! ಇಂದಿನಿಂದ ನೀನು ನನಗೆ ಪ್ರಿಯವಾದ ಈ ಕ್ಷೇತ್ರಕ್ಕೆ ನನ್ನ ವರದಿಂದ ದಂಡಧಾರಕನಾಗು. ನೀನು ದುರಾತ್ಮರನ್ನು ಶಿಕ್ಷಿಸುವವನೂ, ಪುಣ್ಯಶಾಲಿಗಳಿಗೆ ಪಾಲಕನೂ ಆಗು.

೧೫೨. ನೀನು ನನ್ನ ಆಜ್ಞೆಯಿಂದ ದಂಡಪಾಣಿಯೆಂದು ಹೆಸರನ್ನು ಪಡೆದು ಉದ್ಧತರಾದ ಸಕಲ ಗಣಗಳನ್ನೂ ಶಿಕ್ಷಿಸುತ್ತಿರು. ಮಾನವರ ವಿಷಯದಲ್ಲಿ ತಮ್ಮ ಹೆಸರಿಗೆ ತಕ್ಕಂತೆ ನಡೆಯುವವರೂ, ಸಂಭ್ರಮ ಉದ್ಭ್ರಮರೆಂಬ ಹೆಸರುಳ್ಳವರೂ ಆದ ಈ ಗಣಗಳು ನಿನಗೆ ಸೇವಕರಾಗಿರಲಿ.

ತ್ವಮಂತ್ಯಭೂಷಾಂ ಕುರು ಕಾಶಿವಾಸಿನಾಂ
ಗಲೇ ಸುನೀಲಾಂ ಭುಜಗೇಂದ್ರಕಂಕಣಾಂ ।
ಭಾಲೇ ಸುನೇತ್ರಾಂ ಕರಿಕೃತ್ತಿವಾಸಸಂ
ವಾಮೇಕ್ಷಣಾಲಕ್ಷಿತವಾಮಭಾಗಾಂ ॥ ೧೫೩ ॥
ಮೌಲೌ ಲಸತ್ಪಿಂಗಕಪರ್ದಧಾರಿಣೀಂ
ವಿಭೂತಿಸಂಕ್ಷಾಲಿತಪುಣ್ಯವಿಗ್ರಹಾಂ ।
ಅಹೋ ಹಿಮಾಂಶೋಃ ಕಲಯಾ ಲಸಚ್ಛ್ರಿಯಂ
ವೃಷೇಂದ್ರಲೀಲಾಗತಿಮಂದಗಾಮಿನೀಂ ॥ ೧೫೪ ॥
ತ್ವಮನ್ನದಃ ಕಾಶಿನಿವಾಸಿನಾಂ ಸದಾ
ತ್ವಂ ಪ್ರಾಣದೋ ಜ್ಞಾನದ ಏಕ ಏವ ಹಿ ।
ತ್ವಂ ಮೋಕ್ಷದೋ ಮನ್ಮುಖಸೂಪದೇಶತ
ಸ್ತ್ವಂ ನಿಶ್ಚಲಾಂ ಸದ್ವಸತಿಂ ವಿಧಾಸ್ಯಸಿ ॥ ೧೫೫ ॥
ತ್ವಂ ವಿಘ್ನಪೂಗೈಃ ಪರಿಪೀಡ್ಯ ಪಾಪಿನಃ
ಸಂಭ್ರಾಂತಿಮುತ್ಪಾದ್ಯ ವಿನೇಷ್ಯಸೇ ಬಹಿಃ ।
ಆನೀಯ ಭಕ್ತಾನ್ಕ್ಷಣತೋಽಪಿ ದೂರತೋ
ಮುಕ್ತಿಂ ಪರಾಂ ಪ್ರಾಪಯಿತಾಽಸಿ ಪಿಂಗಲ ॥ ೧೫೬ ॥

---

೧೫೩–೧೫೪. ನೀನು ಕಾಶಿಯಲ್ಲಿ ವಾಸಿಸುವ ಜನರಿಗೆ ಕುತ್ತಿಗೆಯಲ್ಲಿ ಅತಿ ನೀಲವೂ, ಸರ್ಪಕಂಕಣವುಳ್ಳುದೂ, ಹಣೆಯಲ್ಲಿ ಕಣ್ಣುಳ್ಳುದೂ, ಆನೆಯ ಚರ್ಮದ ವಸ್ತ್ರವುಳ್ಳುದೂ, ಸ್ತ್ರೀಯರಿಂದ ಸಹಿತವಾದ ಎಡಭಾಗವುಳ್ಳುದೂ, ತಲೆಯಲ್ಲಿ ಪ್ರಕಾಶಮಾನವಾದ ಹಳದಿ ಜಟೆಯುಳ್ಳುದೂ, ಭಸ್ಮದಿಂದ ಪುಣ್ಯಕರವಾದ ಶರೀರವುಳ್ಳುದೂ, ಚಂದ್ರಕಲೆಯಿಂದ ಪ್ರಕಾಶಿಸುವ ಕಾಂತಿಯುಳ್ಳುದೂ, ವೃಷಭದ ಲೀಲೆಯ ಗಮನದಂತೆ ಮೆಲ್ಲಗೆ ಸಂಚರಿಸುವುದೂ ಆದ ಅಂತ್ಯಕಾಲದ ಅಲಂಕಾರವನ್ನು ಮಾಡು.

೧೫೫. ನೀನು ನನ್ನ ಉಪದೇಶದಿಂದ ಕಾಶಿಯಲ್ಲಿ ವಾಸಿಸುವ ಜನರಿಗೆ ಅನ್ನವನ್ನು ನೀಡುವವನೂ, ಪ್ರಾಣ, ಜ್ಞಾನ, ಮೋಕ್ಷಗಳನ್ನು ಕೊಡುವವನೂ, ಸ್ಥಿರವಸತಿಯನ್ನು ಕಲ್ಪಿಸುವವನೂ ಆಗಿರುವೆ.

೧೫೬. ಅಯ್ಯಾ ಯಕ್ಷನೆ! ನೀನು ಪಾಪಿಗಳನ್ನು ವಿಘ್ನಸಮೂಹಗಳಿಂದ ಪೀಡಿಸಿ ಭ್ರಾಂತಿಯನ್ನುಂಟುಮಾಡಿ ಹೊರಗೆ ಹೊರಡಿಸುವೆ. ಭಕ್ತರನ್ನು ದೂರದಿಂದ ಕರೆಯಿಸಿ ಕ್ಷಣಕಾಲದಲ್ಲಿಯೆ ಮುಕ್ತಿಯನ್ನು ಕೊಡುವೆ.

ತ್ವತ್ತಾಸ್ತ್ವತೇ ಕ್ಷೇತ್ರವರೇ ಹಿ ಯಕ್ಷರಾಟ್
ಕಸ್ತ್ವಾಮನಾರಾಧ್ಯ ವಿಮುಕ್ತಿಭಾಜನಂ ।
ಸ ಭಾಜನಂ ಪೂರ್ವತ ಏವ ತೇ ಚರೇತ್
ತತಃ ಸಮರ್ಚಾಂ ಮಮ ಭಕ್ತ ಆಚರೇತ್ ॥ ೧೫೭ ॥

ತ್ವಂ ಗ್ರಾಮವಾಸಪ್ರದ ಏವ ಮೇ ಪುರೇಽ
ಧ್ಯಸ್ತ್ವಮೇಧೀಹ ಚ ದಂಡನಾಯಕಃ ।
ದುಷ್ಟಾನ್ಸಮುದ್ಘಾಟಯ ಕಾಶಿವೈರಿಣಃ
ಕಾಶೀಂ ಪುರೀಂ ರಕ್ಷ ಸದಾ ಮುದಾನ್ವಿತಃ ॥ ೧೫೮ ॥

ಪೂರ್ಣಭದ್ರಸುತ ದಂಡನಾಯಕ
ತ್ರ್ಯಕ್ಷ ಯಕ್ಷ ಹರಿಕೇಶ ಪಿಂಗಲ ।
ಕಾಶಿವಾಸ ವಸತಾಂ ಸದಾಽನ್ನದ
ಜ್ಞಾನ ಮೋಕ್ಷದ ಗಣಾಽಗ್ರಣೀರ್ಭವ ॥ ೧೫೯ ॥

ಮದ್ಭಕ್ತಿಯುಕ್ತೋಽಪಿ ವಿನಾ ತ್ವದೀಯಾಂ
ಭಕ್ತಿಂ ನ ಕಾಶೀವಸತಿಂ ಲಭೇತ ।
ಗಣೇಷು ದೇವೇಷು ಹಿ ಮಾನವೇಷು
ತದಗ್ರಮಾನ್ಯೋ ಭವ ದಂಡಪಾಣೇ ॥ ೧೬೦ ॥

---

೧೫೭. ಯಕ್ಷರಾಜ! ನಿನಗೆ ಅಧೀನವಾದ ಈ ಕ್ಷೇತ್ರದಲ್ಲಿ ಯಾವನೂ ನಿನ್ನನ್ನು ಆರಾಧಿಸದೆ ಮುಕ್ತಿಯನ್ನು ಪಡೆಯುವುದಿಲ್ಲ? ನನ್ನ ಭಕ್ತನು ಮೊದಲು ನಿನ್ನನ್ನು ಪೂಜಿಸಿ ಅನಂತರ ನನ್ನನ್ನು ಪೂಜಿಸಬೇಕು.

೧೫೮. ನೀನು, ನನ್ನ ಪಟ್ಟಣವಾದ ಈ ಕಾಶಿಯಲ್ಲಿ ಗ್ರಾಮವಾಸವನ್ನೀಯುವ ದಂಡನಾಯಕನಾಗಿರು. ಕಾಶಿಗೆ ಶತ್ರುಗಳಾದ ದುಷ್ಟರನ್ನು ನಾಶಗೊಳಿಸು. ಯಾವಾಗಲೂ ಸಂತೋಷದಿಂದ ಕಾಶೀಪಟ್ಟಣವನ್ನು ರಕ್ಷಿಸು.

೧೫೯. ಪೂರ್ಣಭದ್ರನ ಸುತನೂ, ದಂಡನಾಯಕನೂ, ತ್ರ್ಯಂಬಕನೂ, ಕಾಶೀವಾಸಿಗಳಿಗೆ ಯಾವಾಗಲೂ ಅನ್ನ, ಜ್ಞಾನ, ಮೋಕ್ಷಗಳನ್ನು ಕೊಡುವವನೂ ಆದ ಅಯ್ಯಾ ಯಕ್ಷನೆ! ನೀನು ಎಲ್ಲ ಗಣಗಳಿಗೂ ಮುಂದಾಳಾಗಿರು.

೧೬೦. ದಂಡಪಾಣಿಯೆ! ಮಾನವನು ನನ್ನಲ್ಲಿ ಭಕ್ತಿಯುಳ್ಳವನಾದರೂ, ನಿನ್ನಲ್ಲಿ ಭಕ್ತಿಮಾಡದಿದ್ದರೆ ಕಾಶೀವಾಸವನ್ನು ಪಡೆಯಲಾರನು. ನೀನು ಗಣಗಳು, ದೇವತೆಗಳು, ಮನುಷ್ಯರು ಇವರಲ್ಲಿ ಪ್ರಥಮ ಪೂಜ್ಯನಾಗು.

ಜ್ಞಾನೋದತೀರ್ಥೇ ವಿಹಿತೋದಕಕ್ರಿಯೋ
ಯಸ್ತ್ವಾಂ ಸಮಾರಾಧಯಿತಾ ಗಣೇಶಂ ।
ಸ ಏವ ಲೋಕೇ ಕೃತಕೃತ್ಯತಾಮಗಾತ್
ಮಮಾಽತುಲಾಽನುಗ್ರಹತೋಽತ್ರ ಪುಣ್ಯವಾನ್ ॥ ೧೬೧ ॥
ತ್ವಂ ದಕ್ಷಿಣಸ್ಯಾಂ ದಿಶಿ ದಂಡಪಾಣೇ
ಸದೈವ ಮೇ ನೇತ್ರಸಮಕ್ಷಮತ್ರ ।
ತ್ವಂ ದಂಡಯನ್ಪ್ರಾಣಭೃತೋ ದುರೀಹಾ
ನಿಹಾಸ್ವಸ್ಮನ್ಯಾಸ್ವನಭಯಂ ದಿಶಸ್ವ ॥ ೧೬೨ ॥

ಸ್ಕಂದ ಉವಾಚ :—

ಇತಿ ದತ್ವಾ ವರಾನ್ವಿಪ್ರ ಗಿರೀಶೋ ದಂಡಪಾಣಯೇ ।
ವೃಷೇಂದ್ರಮಧಿರುಹ್ಯಾಽಥ ವಿವೇಶಾನಂದಕಾನನಂ ॥ ೧೬೩ ॥
ಕುಂಭೋದ್ಭವ ತದಾರಭ್ಯ ಯಕ್ಷರಾಡ್ದಂಡನಾಯಕಃ ।
ಪುರೀಂ ವಾರಾಣಸೀಂ ಸಮ್ಯಗನುಶಾಸ್ತಿ ನಿದೇಶತಃ ॥ ೧೬೪ ॥
ಅಹಮಪ್ಯತ್ರ ವಸತಿಂ ಚಕ್ರೇ ತದನುಸೂಯಯಾ ।
ವಸನ್ನಪಿ ಮಯಾ ಕಾಶ್ಯಾಂ ಯತಃ ಸಂಭಾವಿತೋ ನ ಸಃ ॥ ೧೬೫ ॥
ಮುನೇ ಕ್ಷೇತ್ರಂ ಯದತ್ಯಾಕ್ಷೀಸ್ತ್ವಮಪ್ಯೇವಂವಿಧೋ ವಶೀ ।
ಶಂಕೇ ತತ್ರಾಽಹಮೇವಾದ್ಧಾ ಕಾಮಂ ತಸ್ಯೈವ ವಿಕ್ರಿಯಾಂ ॥ ೧೬೬ ॥

---

೧೬೧. ಜ್ಞಾನೋದತೀರ್ಥದಲ್ಲಿ ಮಿಂದು ಗಣಾಧ್ಯಕ್ಷನಾದ ನಿನ್ನನ್ನು ಪೂಜಿಸಿದ ಪುಣ್ಯವಂತನು ನನ್ನ ಅನುಗ್ರಹದಿಂದ ಈ ಲೋಕದಲ್ಲಿ ಧನ್ಯನಾಗುವನು.

೧೬೨. ಎಲೈ ದಂಡಪಾಣಿಯೆ ! ನೀನು ದಕ್ಷಿಣದಿಕ್ಕಿನಲ್ಲಿ ಯಾವಾಗಲೂ ನನ್ನ ಮುಂದೆ ದುಷ್ಟಪ್ರಾಣಿಗಳನ್ನು ಶಿಕ್ಷಿಸುತ್ತ, ಭಕ್ತರಿಗೆ ಅಭಯವನ್ನು ಕೊಡುತ್ತ ನೆಲಸು.

೧೬೩. ಸ್ಕಂದನು ಹೇಳುತ್ತಾನೆ:—ಶಂಕರನು ಹೀಗೆ ದಂಡಪಾಣಿಗೆ ವರವನ್ನಿತ್ತು ವೃಷಭವನ್ನೇರಿ ಆನಂದಕಾನನವನ್ನು ಪ್ರವೇಶಿಸಿದನು.

೧೬೪. ಎಲೈ ಅಗಸ್ತ್ಯನೆ! ಅದುಮೊದಲ್ಗೊಂಡು ಯಕ್ಷರಾಜನಾದ ದಂಡನಾಯಕನು ಶಂಕರನ ಆಜ್ಞೆಯಂತೆ ಕಾಶೀಪಟ್ಟಣವನ್ನು ಕಾಪಾಡುತ್ತಿರುವನು.

೧೬೫. ನಾನೂ ಅವನಲ್ಲಿಯ ಅಸೂಯೆಯಿಂದ ಕಾಶಿಯಲ್ಲಿ ವಾಸಿಸುತ್ತಿದ್ದರೂ ಅವನನ್ನು ಸನ್ಮಾನಿಸಲಿಲ್ಲ.

೧೬೬. ಹೀಗೆ ಜಿತೇಂದ್ರಿಯನಾದ ನೀನು ಕಾಶಿಯನ್ನು ತ್ಯಜಿಸಲು ಆ ದಂಡಪಾಣಿಯ ಪ್ರಾತಿಕೂಲ್ಯವೇ ಕಾರಣವೆಂದು ಊಹಿಸುತ್ತೇನೆ.

ಮನಾಗ್ವಿರುದ್ಧಾಚರಣಂ ಯದಿ ದ್ವಿಜ ವಿಲಕ್ಷಯೇತ್ ।
ಹರಿಕೇಶಸ್ತದಾ ಕಾಶ್ಯಾಂ ಕ್ವ ಸ್ಥಿತಿಃ ಕ್ವ ಚ ನಿರ್ವೃತಿಃ ॥ ೧೬೭ ॥
ದಂಡಪಾಣಿಮನಾರಾಧ್ಯ ಕಃ ಕಾಶ್ಯಾಂ ಸುಖಮಾಪ್ನುಯಾತ್ ।
ಪ್ರವಿವಿಕ್ಷುರಹಂ ಕಾಶೀಂ ದೂರಗೋಽಪಿ ಭಜಾಮಿ ತಂ ॥ ೧೬೮ ॥
ರತ್ನಭದ್ರಾಂಗಜೋದ್ಭೂತ ಪೂರ್ಣಭದ್ರಸುತೋತ್ತಮ ।
ನಿರ್ವಿಘ್ನಂ ಕುರು ಮೇ ಯಕ್ಷ ಕಾಶೀವಾಸಂ ಶಿವಾಪ್ತಯೇ ॥ ೧೬೯ ॥
ಧನ್ಯೋ ಯಕ್ಷಃ ಪೂರ್ಣಭದ್ರೋ ಧನ್ಯಾ ಕಾಂಚನಕುಂಡಲಾ ।
ಯಯೋರ್ಜಠರಪೀಠೇಽಭೂರ್ದಂಡಪಾಣೇ ಮಹಾಮತೇ ॥ ೧೭೦ ॥
ಜಯ ಯಕ್ಷಪತೇ ಧೀರ ಜಯಪಿಂಗಲಲೋಚನ ।
ಜಯಪಿಂಗಜಟಾಭಾರ ಜಯದಂಡ ಮಹಾಯುಧ ॥ ೧೭೧ ॥
ಅವಿಮುಕ್ತಮಹಾಕ್ಷೇತ್ರಸೂತ್ರಧಾರೋಗ್ರತಾಪಸ ।
ದಂಡನಾಯಕ ಭೀಮಾಸ್ಯ ಜಯ ವಿಶ್ವೇಶ್ವರ ಪ್ರಿಯ ॥ ೧೭೨ ॥
ಸೌಮ್ಯಾನಾಂ ಸೌಮ್ಯವದನ ಭೀಷಣಾನಾಂ ಭಯಾನಕ ।
ಕ್ಷೇತ್ರಪಾಪಧಿಯಾಂ ಕಾಲ ಮಹಾಕಾಲ ಮಹಾಪ್ರಿಯ ॥ ೧೭೩ ॥

---

೧೬೭. ವಿಪ್ರ ! ಹರಿಕೇಶನು ಸ್ವಲ್ಪ ವಿರುದ್ಧಾಚಾರವನ್ನು ನೋಡಿದ್ದೇ ಆದರೆ ಆಗ ಕಾಶಿಯಲ್ಲಿ ವಾಸಿಸುವುದಾಗಲಿ, ಸುಖವಾಗಲಿ ದೊರಕುವುದೆಲ್ಲಿ?

೧೬೮. ದಂಡಪಾಣಿಯನ್ನು ಪೂಜಿಸದೆ ಕಾಶಿಯಲ್ಲಿ ಯಾವನು ತಾನೆ ಸುಖವನ್ನು ಹೊಂದಿಯಾನು? ನಾನು ಕಾಶಿಯನ್ನು ಪ್ರವೇಶಿಸಲಿಚ್ಛಿಸುವವನಾಗಿ ದೂರದಿಂದಲೇ ಅವನನ್ನು ಸೇವಿಸುವೆನು.

೧೬೯. "ರತ್ನಭದ್ರನ ಸುತನಾದ ಪೂರ್ಣಭದ್ರನ ಕುಮಾರನೆ! ನನಗೆ ಶಿವಪ್ರಾಪ್ತಿಗಾಗಿ ಕಾಶೀವಾಸವನ್ನು ಕರುಣಿಸಿ ನಿರ್ವಿಘ್ನವನ್ನುಂಟುಮಾಡು.

೧೭೦. ಪ್ರಾಜ್ಞನಾದ ದಂಡಪಾಣಿಯೆ! ನಿನ್ನ ತಂದೆಯಾದ ಪೂರ್ಣಭದ್ರನೂ, ತಾಯಿಯಾದ ಕಾಂಚನಕುಂಡಲೆಯೂ ಧನ್ಯರು.

೧೭೧. ಧೀರನೂ, ಹಳದಿಯಬಣ್ಣದ ಕಣ್ಣುಗಳುಳ್ಳವನೂ, ಪಿಂಗಲವರ್ಣದ ಜಟೆಯುಳ್ಳವನೂ, ಮಹಾಯುಧವುಳ್ಳವನೂ ಆದ ದಂಡಪಾಣಿಯೆ, ಜಯಿಸು !

೧೭೨. ಅವಿಮುಕ್ತವೆಂಬ ಮಹಾಕ್ಷೇತ್ರದ ಸೂತ್ರಧಾರನೂ, ಕಠಿನ ತಾಪಸನೂ, ಭಯಂಕರಮುಖವುಳ್ಳವನೂ, ವಿಶ್ವೇಶ್ವರಪ್ರಿಯನೂ ಆದ ದಂಡಪಾಣಿಯೆ, ಜಯಿಸು !

೧೭೩. ಸಾಧುಗಳ ವಿಷಯದಲ್ಲಿ ಸೌಮ್ಯವಾದ ಮುಖವುಳ್ಳವನೂ, ಭಯಂಕರರಿಗೆ ಭಯಂಕರನೂ, ಕ್ಷೇತ್ರವಾಸಿಗಳಾದ ಪಾಪಿಗಳಿಗೆ ಯಮನೂ, ಮಹೇಶ್ವರನಿಗೆ ಪ್ರಿಯನೂ ಆದ ದಂಡಪಾಣಿಯೆ, ಜಯಿಸು !

ಜಯ ಪ್ರಾಣದ ಯಕ್ಷೇಂದ್ರ ಕಾಶೀವಾಸಾಽನ್ನಮೋಕ್ಷದ ।
ಮಹಾರತ್ನಸ್ಫುರದ್ರಶ್ಮಿಚಯಚರ್ಚಿತವಿಗ್ರಹ ॥ ೧೭೪ ॥
ಮಹಾಸಂಭ್ರಾಂತಿಜನಕ ಮಹೋದ್ಭ್ರಾಂತಿಪ್ರದಾಯಕ ।
ಅಭಕ್ತಾನಾಂ ಚ ಭಕ್ತಾನಾಂ ಸಂಭ್ರಾಂತ್ಯುದ್ಭ್ರಾಂತಿನಾಶಕ ॥ ೧೭೫ ॥
ಪ್ರಾಂತನೇಪಥ್ಯಚತುರ ಜಯ ಜ್ಞಾನನಿಧಿಪ್ರದ ।
ಜಯಗೌರೀಪದಾಬ್ಜಾಲೇ ಮೋಕ್ಷೇಕ್ಷಣವಿಚಕ್ಷಣ ॥ ೧೭೬ ॥
ಯಕ್ಷರಾಜಾಷ್ಟಕಂ ಪುಣ್ಯಮಿದಂ ನಿತ್ಯಂ ತ್ರಿಕಾಲತಃ ।
ಜಪಾಮಿ ನ್ಯೈತ್ರಾವರುಣೇ ವಾರಾಣಸ್ಯಾಪ್ತಿಕಾರಣಂ ॥ ೧೭೭ ॥
ದಂಡಪಾಣ್ಯಷ್ಟಕಂ ಧೀಮಾನ್ಜಪನ್ವಿಘ್ನೈರ್ನಜಾತುಚಿತ್ ।
ಶ್ರದ್ಧಯಾ ಪರಿಭೂಯೇತ ಕಾಶೀವಾಸಫಲಂ ಲಭೇತ್ ॥ ೧೭೮ ॥
ಪ್ರಾದುರ್ಭಾವಂ ದಂಡಪಾಣೇಃ ಶೃಣ್ವನ್ ಸ್ತೋತ್ರಮಿದಂ ಗೃಣನ್ ।
ವಿಪತ್ತಿಮನ್ಯತಃ ಪ್ರಾಪ್ಯ ಕಾಶೀಂ ಜನ್ಮಾಂತರೇ ಲಭೇತ್ ॥ ೧೭೯ ॥

---

೧೭೪. ಪ್ರಾಣದಾಯಕನೂ, ಯಕ್ಷರಾಜನೂ, ಕಾಶೀವಾಸ, ಅನ್ನ, ಮೋಕ್ಷಗಳನ್ನು ಕೊಡುವವನೂ, ಅಮೂಲ್ಯವಾದ ರತ್ನಗಳ ಪ್ರಕಾಶಮಾನವಾದ ಕಾಂತಿಗಳ ಸಮೂಹದಿಂದ ವ್ಯಾಪ್ತವಾದ ಶರೀರವುಳ್ಳವನೂ ಆದ ಓ ದಂಡ ನಾಯಕ, ಜಯಿಸು !

೧೭೫. ಅಭಕ್ತರಿಗೆ ಅತ್ಯಂತ ಭ್ರಾಂತಿಯನ್ನುಂಟುಮಾಡುವವನೂ, ಅತಿ ಶಯೋದ್ಭ್ರಮಣವನ್ನು ಕೊಡುವವನೂ, ಭಕ್ತರ ಸಂಭ್ರಾಂತ್ಯುದ್ಭ್ರಾಂತಿಗಳನ್ನು ನಾಶಗೊಳಿಸುವವನೂ ಆದ ದಂಡನಾಯಕನೆ, ನಿನಗೆ ಜಯವಾಗಲಿ !

೧೭೬. ಅಂತ್ಯಕಾಲದ ಅಲಂಕಾರಮಾಡುವುದರಲ್ಲಿ ಕುಶಲನೂ, ಜ್ಞಾನನಿಧಿ ಯನ್ನು ದೊರಕಿಸಿಕೊಡುವವನೂ, ಪಾರ್ವತಿಯ ಪಾದಕಮಲದಲ್ಲಿ ಭ್ರಮರ ಪ್ರಾಯನಾಗಿರುವವನೂ, ಮೋಕ್ಷದಾನದಲ್ಲಿ ನಿಪುಣನೂ ಆದ ದಂಡಪಾಣಿಯೆ, ಜಯಿಸು !

೧೭೭. ಅಗಸ್ತ್ಯನೆ! ಕಾಶೀಪ್ರಾಪ್ತಿಗೆ ಕಾರಣವಾದ ಈ ಯಕ್ಷರಾಜಾಷ್ಟಕ ವನ್ನು ನಿತ್ಯವೂ ತ್ರಿಕಾಲದಲ್ಲಿ ನಾನು ಜಪಿಸುತ್ತಿರುವೆನು.

೧೭೮. ಈ ದಂಡಪಾಣ್ಯಷ್ಟಕವನ್ನು ಶ್ರದ್ಧೆಯಿಂದ ಜಪಿಸುವ ಬುದ್ಧಿಶಾಲಿಗೆ ವಿಘ್ನಗಳುಂಟಾಗುವುದಿಲ್ಲ. ಕಾಶೀವಾಸದ ಫಲವೂ ಲಭಿಸುವುದು.

೧೭೯. ದಂಡಪಾಣಿಯ ಉತ್ಪತ್ತಿಯನ್ನು ಹೇಳುವ ಪುಣ್ಯಕರವಾದ ಈ ಅಧ್ಯಾಯವನ್ನು ಕೇಳುವವನೂ, ಹೇಳುವವನೂ ದುರ್ದೈವದಿಂದ ಬೇರೊಂದೆಡೆ ಯಲ್ಲಿ ಮೃತಿಯೊಂದಿದರೂ ಇನ್ನೊಂದು ಜನ್ಮದಲ್ಲಿ ಕಾಶೀವಾಸವನ್ನು ಪಡೆಯು ತ್ತಾನೆ.

**ಶ್ರುತ್ವಾಽಧ್ಯಾಯಮಿಮಂ ಪುಣ್ಯಂ ದಂಡಪಾಣಿಸಮುದ್ಭವಂ ।**
**ಪಠಿತ್ವಾ ಪಾಠಯಿತ್ವಾಽಪಿ ನ ವಿಘ್ನೈರಭಿಭೂಯತೇ ॥ ೧೮೦ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ದಂಡಪಾಣಿಪ್ರಾದುರ್ಭಾವವರ್ಣನಂ" ನಾಮ ದ್ವಾತ್ರಿಂಶೋಽಧ್ಯಾಯಃ**

---

೧೮೦. ದಂಡಪಾಣಿಯ ಉತ್ಪತ್ತಿಯನ್ನು ಹೇಳುವ ಪುಣ್ಯಕರವಾದ ಈ ಅಧ್ಯಾಯವನ್ನು ಕೇಳುವವನೂ, ಹೇಳುವವನೂ, ಹೇಳಿಸುವವನೂ ವಿಘ್ನವನ್ನು ಹೊಂದುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ದಂಡಪಾಣಿಪ್ರಾದುರ್ಭಾವವರ್ಣನ"ವೆಂಬ
ಮೂವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯಸ್ತ್ರಿಂಶೋಽಧ್ಯಾಯಃ

## ಜ್ಞಾನವಾಪೀವರ್ಣನಂ

**ಅಗಸ್ತ್ಯ ಉವಾಚ :—**

**ಸ್ಕಂದ ಜ್ಞಾನೋದತೀರ್ಥಸ್ಯ ಮಾಹಾತ್ಮ್ಯಂ ವದ ಸಾಂಪ್ರತಂ ।**
**ಜ್ಞಾನವಾಪೀಂ ಪ್ರಶಂಸಂತಿ ಯತಃ ಸ್ವರ್ಗೌಕಸೋಽಪ್ಯಲಂ ॥ ೧ ॥**

**ಸ್ಕಂದ ಉವಾಚ :—**

**ಘಟೋದ್ಭವ ಮಹಾಪ್ರಾಜ್ಞ ಶೃಣು ಪಾಪಪ್ರಣೋದಿನೀಂ ।**
**ಜ್ಞಾನವಾಪ್ಯಾಃ ಸಮುತ್ಪತ್ತಿಂ ಕಥ್ಯಮಾನಾಂ ಮಯಾಽಧುನಾ ॥ ೨ ॥**
**ಅನಾದಿಸಿದ್ಧೇ ಸಂಸಾರೇ ಪುರಾ ದೇವಯುಗೇ ಮುನೇ ।**
**ಪ್ರಾಪ್ತಃ ಕುತಶ್ಚಿದೀಶಾನಶ್ಚರನ್ಸ್ವೈರಮಿತಸ್ತತಃ ॥ ೩ ॥**
**ನ ವರ್ಷಂತಿ ಯದಾಽಭ್ರಾಣಿ ನ ಪ್ರಾವರ್ತಂತ ನಿಮ್ನಗಾಃ ।**
**ಜಲಾಽಭಿಲಾಷೋ ನ ಯದಾ ಸ್ನಾನಪಾನಾದಿಕರ್ಮಣಿ ॥ ೪ ॥**
**ಕ್ಷಾರಸ್ವಾದೂದಯೋರೇವ ಯದಾಸೀಜ್ಜಲದರ್ಶನಂ ।**
**ಪೃಥಿವ್ಯಾಂ ನರಸಂಚಾರೇ ವರ್ತಮಾನೇ ಕ್ವಚಿತ್ಕ್ವಚಿತ್ ॥ ೫ ॥**
**ನಿರ್ವಾಣಕಮಲಾಕ್ಷೇತ್ರಂ ಶ್ರೀಮದಾನಂದಕಾನನಂ ।**
**ಮಹಾಶ್ಮಶಾನಂ ಸರ್ವೇಷಾಂ ಬೀಜಾನಾಂ ಪರಮೂಷರಂ ॥ ೬ ॥**

---

## ಕನ್ನಡದ ಅನುವಾದ

### ಜ್ಞಾನವಾಪೀವರ್ಣನ

೧. ಅಗಸ್ತ್ಯನು ಹೇಳುತ್ತಾನೆ !— ಸ್ಕಂದ ! ಜ್ಞಾನವಾಪಿಯನ್ನು ದೇವತೆಗಳೂ ಹೊಗಳುತ್ತಿರುವುದರಿಂದ, ಈಗ ನೀನು ಜ್ಞಾನೋದತೀರ್ಥವೆಂದು ಹೆಸರಾದ ಜ್ಞಾನವಾಪಿಯ ಮಾಹಾತ್ಮ್ಯವನ್ನು ನನಗೆ ಹೇಳು.

೨. ಸ್ಕಂದನು ಹೇಳುತ್ತಾನೆ :—ಅಗಸ್ತ್ಯನೇ ! ಈಗ ನಾನು ಹೇಳುವ ಪಾಪ ಪರಿಹಾರಕವಾದ ಜ್ಞಾನವಾಪಿಯ ಉತ್ಪತ್ತಿಯನ್ನು ಕೇಳು.

೩–೯. ಮುನಿಯೆ ! ಹಿಂದಿನ ಸತ್ಯಯುಗದಲ್ಲಿ, ಅನಾದಿಸಿದ್ಧವಾದ ಈ ಪ್ರಪಂಚದಲ್ಲಿ ಮೇಘಗಳು ಮಳೆಯನ್ನೇ ಸುರಿಸದಿರುವಂದು, ನದಿಗಳು ಹರಿಯದಿರುವಂದು, ಸ್ನಾನಪಾನಾದಿಗಳಿಗೆ ನೀರೇ ಬೇಕಾಗದಿರುವಂದು, ಉಪ್ಪು ಸಿಹಿ ನೀರಿನ ಸಮುದ್ರಗಳಲ್ಲಿ ಮಾತ್ರ ನೀರು ಕಾಣುತ್ತಿರುವಂದು, ಭೂಮಿಯಲ್ಲಿ ಕೆಲವೆಡೆಯಲ್ಲಿ ಮಾತ್ರವೆ ಮಾನವರು ಸಂಚಾರಮಾಡುತ್ತಿರುವಂದು, ಮೋಕ್ಷಲಕ್ಷ್ಮಿಯ ಕ್ಷೇತ್ರವೂ, ಮಹಾಶ್ಮಶಾನವೂ, ಸಮಸ್ತ ಕರ್ಮಬೀಜಗಳಿಗೆ ಬಂಜರು

ಮಹಾಶಯನಸುಪ್ತಾನಾಂ ಜಂತೂನಾಂ ಪ್ರತಿಬೋಧಕಂ ।
ಸಂಸಾರಸಾಗರಾವರ್ತಪತಜ್ಜಂತುಕರಂಡಕಂ ॥ ೭ ॥
ಯಾತಾಯಾತಾತಿಸಂಖಿನ್ನಜಂತುವಿಶ್ರಾಮಮಂಡಪಂ ।
ಅನೇಕಜನ್ಮಗುಣಿತಕರ್ಮಸೂತ್ರಚ್ಛಿದಾಕ್ಷರಂ ॥ ೮ ॥
ಸಚ್ಚಿದಾನಂದನಿಲಯಂ ಪರಬ್ರಹ್ಮರಸಾಯನಂ ।
ಸುಖಸಂತಾನಜನಕಂ ಮೋಕ್ಷಸಾಧನಸಿದ್ಧಿದಂ ॥ ೯ ॥
ಪ್ರವಿಶ್ಯ ಕ್ಷೇತ್ರಮೇತತ್ಸ ಈಶಾನೋ ಜಟಿಲಸ್ತದಾ ।
ಲಸತ್ತ್ರಿಶೂಲವಿಮಲರಶ್ಮಿಜಾಲಸಮಾಕುಲಃ ॥ ೧೦ ॥
ಆಲುಲೋಕೇ ಮಹಾಲಿಂಗಂ ವೈಕುಂಠಪರಮೇಷ್ಠಿನೋಃ ।
ಮಹಾಹಮಹಮಿಕಾಯಾಂ ಪ್ರಾದುರಾಸ ಯದಾದಿತಃ ॥ ೧೧ ॥
ಜ್ಯೋತಿರ್ಮಯೀಭಿರ್ಮಾಲಾಭಿಃ ಪರಿತಃ ಪರಿವೇಷ್ಟಿತಂ ।
ವೃಂದೈರ್ವೃಂದಾರಕರ್ಷೀಣಾಂ ಗಣಾನಾಂ ಚ ನಿರಂತರಂ ॥ ೧೨ ॥
ಸಿದ್ಧಾನಾಂ ಯೋಗಿನಾಂ ಸ್ತೋಮೈರರ್ಚಮಾನಂ ನಿರಂತರಂ ।
ಗೀಯಮಾನಂ ಚ ಗಂಧರ್ವೈಃ ಸ್ತೂಯಮಾನಂ ಚ ಚಾರಣೈಃ ॥ ೧೩ ॥
ಅಂಗಹಾರೈರಪ್ಸರೋಭಿಃ ಸೇವ್ಯಮಾನಮನೇಕಧಾ ।
ನೀರಾಜ್ಯಮಾನಂ ಸತತಂ ನಾಗೀಭಿರ್ಮಣಿದೀಪಕೈಃ ॥ ೧೪ ॥

---

ಭೂಮಿಯೂ, ಅಜ್ಞಾನಶಯನದಲ್ಲಿ ಮಲಗಿದ ಜಂತುಗಳಿಗೆ ಜ್ಞಾನವನ್ನುಂಟು ಮಾಡುವುದೂ, ಸಂಸಾರವೆಂಬ ಸಮುದ್ರದ ಸುಳಿಯಲ್ಲಿ ಬೀಳುತ್ತಿರುವ ಜಂತುಗಳಿಗೆ ನಾವೆಯೂ, ಗಮನಾಗಮನದಿಂದ ಬಹಳವಾಗಿ ವ್ಯಥೆಗೊಂಡ ಪ್ರಾಣಿಗಳಿಗೆ ವಿಶ್ರಾಂತಿಮಂಡಪವೂ, ಅನೇಕ ಜನ್ಮಗಳಲ್ಲಿ ಮಾಡಿದ ಕರ್ಮಗಳೆಂಬ ದಾರಗಳನ್ನು ಕತ್ತರಿಸುವುದಕ್ಕೆ ಚೂರಿಯಂತಿರುವುದೂ, ವಿಶ್ವೇಶ್ವರನಿಗೆ ಆಶ್ರಯವಾದುದೂ, ಪರಬ್ರಹ್ಮನನ್ನು ಹೊಂದಿಸುವುದೂ, ಅತಿಶಯಸುಖವನ್ನುಂಟುಮಾಡುವುದೂ, ಮೋಕ್ಷಸಾಧನಕ್ಕೆ ಸಿದ್ಧಿಯನ್ನೀಯುವುದೂ ಆದ ಆನಂದಕಾನನಕ್ಕೆ ಪರಮೇಶ್ವರನು ಒಮ್ಮೆ ಇಲ್ಲಿ ಅಲ್ಲಿ ಸಂಚರಿಸುತ್ತ ಎತ್ತಣಿಂದಲೋ ಬಂದನು.

೧೦–೧೫. ಜಟಾಧಾರಿಯೂ, ಪ್ರಕಾಶಿಸುವ ಶುದ್ಧವಾದ ಕಾಂತಿಸಮೂಹಗಳಿಂದ ವ್ಯಾಪ್ತನೂ ಆಗಿ, ಬ್ರಹ್ಮವಿಷ್ಣುಗಳು ನಾನು ಹೆಚ್ಚು, ತಾನು ಹೆಚ್ಚು ಎಂದು ಸ್ಪರ್ಧಿಸಿ ಕದನವಾಡಿದಂದು ಮೊದಲು ಆವಿರ್ಭವಿಸಿದವನೂ ಆದ ಈಶ್ವರನು ಆ ಕ್ಷೇತ್ರವನ್ನು ಪ್ರವೇಶಿಸಿ ತೇಜೋಮಯವಾದ ಮಾಲೆಗಳಿಂದ ಸುತ್ತಲೂ ಸುತ್ತಲ್ಪಟ್ಟು ದೇವರ್ಷಿಗಳು, ಶಿವಗಣಗಳು, ಸಿದ್ಧರು, ಯೋಗಿಗಳು, ಇವರ ಸಮೂಹಗಳಿಂದ ಯಾವಾಗಲೂ ಪೂಜಿಸಲ್ಪಡುವುದಾಗಿ, ಗಂಧರ್ವರ ಗಾನದಿಂದಲೂ, ಚಾರಣರ ಸ್ತುತಿಗಳಿಂದಲೂ, ಅಪ್ಸರೆಯರ ನೃತ್ಯಸೇವೆಯಿಂದಲೂ, ನಾಗಸ್ತ್ರೀಯರ ರತ್ನದೀಪಗಳ ಆರತಿಗಳಿಂದಲೂ ಒಪ್ಪುತ್ತಿರುವುದಾಗಿ, ವಿದ್ಯಾಧರ,

ವಿದ್ಯಾಧರೀಕಿನ್ನರೀಭಿಸ್ತ್ರಿಕಾಲಂ ಕೃತಮಂಡನಂ ।
ಅಮರೀಚಮರೀರಾಜಿವೀಜ್ಯಮಾನಮಿತಸ್ತತಃ ॥ ೧೫ ॥
ಅಸ್ಯೇಶಾನಸ್ಯ ತಲ್ಲಿಂಗಂ ದೃಷ್ಟ್ವೇಚ್ಛೇತ್ಯಭವತ್ತದಾ ।
ಸ್ನಪಯಾಮಿ ಮಹಲ್ಲಿಂಗಂ ಕಲಶೈಃ ಶೀತಲೈರ್ಜಲೈಃ ॥ ೧೬ ॥
ಚಖಾನ ಚ ತ್ರಿಶೂಲೇನ ದಕ್ಷಿಣಾಶೋಪಕಂಠತಃ ।
ಕುಂಡಂ ಪ್ರಚಂಡವೇಗೇನ ರುದ್ರೋ ರುದ್ರವಪುರ್ಧರಃ ॥ ೧೭ ॥
ಪೃಥಿವ್ಯಾ ವರಣಾಂಭಾಂಸಿ ನಿಷ್ಕ್ರಾಂತಾನಿ ತದಾ ಮುನೇ ।
ಭೂಪ್ರಮಾಣಾದ್ದಶಗುಣೈರ್ಯೈರಿಯಂ ವಸುಧಾವೃತಾ ॥ ೧೮ ॥
ತೈರ್ಜಲೈಃ ಸ್ನಾಪಯಾಂಚಕ್ರೇ ತ್ವಸ್ಪೃಷ್ಟೈರನ್ಯದೇಹಿಭಿಃ ।
ತುಷಾರೈರ್ಜಾಡ್ಯವಿಧುರೈರ್ಜಂಜಪೂಕೌಘಹಾರಿಭಿಃ ॥ ೧೯ ॥
ಸನ್ಮನೋಭಿರಿವಾತ್ಯಚ್ಛೈರನಚ್ಛೈರ್ವ್ಯೋಮವರ್ತ್ಮವತ್ ।
ಜ್ಯೋತ್ಸ್ನಾವದುಜ್ಜ್ವಲಚ್ಛಾಯೈಃ ಪಾವನೈಃ ಶಂಭುನಾಮವತ್ ॥ ೨೦ ॥
ಪೀಯೂಷವತ್ ಸ್ವಾದುತರೈಃ ಸುಖಸ್ಪರ್ಶೈರ್ಗವಾಂಗವತ್ ।
ನಿಷ್ಪಾಪಧೀವದ್ಗಂಭಿರೈಸ್ತರಲೈಃ ಪಾಪಿಶರ್ಮವತ್ ॥ ೨೧ ॥
ವಿಜಿತಾಽಬ್ಜಮಹಾಗಂಧೈಃ ಪಾಟಲಾಮೋದಮೋದಿಭಿಃ ।
ಅದೃಷ್ಟಪೂರ್ವಲೋಕಾನಾಂ ಮನೋನಯನಹಾರಿಭಿಃ ॥ ೨೨ ॥

---

ಕಿನ್ನರಸ್ತ್ರೀಯರಿಂದ ತ್ರಿಕಾಲದಲ್ಲಿಯೂ ಅಲಂಕರಿಸಲ್ಪಡುವುದೂ, ಉಭಯ ಪಾರ್ಶ್ವಗಳಲ್ಲಿಯೂ ದೇವತಾಸ್ತ್ರೀಯರ ಚಾಮರಸೇವೆಯನ್ನೊಡಗೊಂಡುದೂ ಆಗಿರುವ ಯಜ್ಞ, ಹಿರಣ್ಯಗರ್ಭರ ಮಹಾಲಿಂಗವನ್ನು ಕಂಡನು.

೧೬. ಆ ಲಿಂಗವನ್ನು ನೋಡಿದ ಕೂಡಲೇ ಆ ಈಶ್ವರನಿಗೆ ಅದನ್ನು ತಣ್ಣಗಿರುವ ನೀರಿನಿಂದ ಅಭಿಷೇಕಮಾಡಬೇಕೆಂಬ ಅಪೇಕ್ಷೆಯುಂಟಾಯಿತು.

೧೭. ಆ ರುದ್ರನು ಭಯಂಕರ ರೂಪವನ್ನು ಧರಿಸಿ ದಕ್ಷಿಣದಿಕ್ಕಿನ ಹತ್ತಿರ ತ್ರಿಶೂಲದಿಂದ ವೇಗವಾಗಿ ಅಗೆದನು.

೧೮. ಮುನಿಯೆ ! ಆಗ ಭೂಮಿಯ ಅಳತೆಗಿಂತಲೂ ಹತ್ತರಷ್ಟು ಹೆಚ್ಚಿರುವ ಜಲದಿಂದ ಆವೃತವಾದ ಭೂಮಿಯ ಆವರಣಜಲವು ಹೊರಟಿತು.

೧೯–೨೬. ಎಲೈ ಅಗಸ್ತ್ಯನೆ ! ಆಗ ಈಶ್ವರನು ಇತರ ಪ್ರಾಣಿಗಳು ಮುಟ್ಟದಿರುವುದೂ, ಹಿಮದಂತೆ ತಣ್ಣಗೂ, ಜ್ಞಾನಸ್ವರೂಪವೂ, ಪಾಪಗಳನ್ನು ನಿವಾರಿಸುವುದೂ, ಸಜ್ಜನರ ಮನಸ್ಸಿನಂತೆ ಅತ್ಯಂತ ಶುದ್ಧವೂ, ಆಕಾಶದಂತೆ ನೀಲವರ್ಣವೂ, ಬೆಳದಿಂಗಳಂತೆ ಪ್ರಕಾಶಿಸುವ ಕಾಂತಿಯುಳ್ಳುದೂ, ಶಿವನಾಮದಂತೆ ಪವಿತ್ರವೂ, ಅಮೃತದಂತೆ ಅತಿ ರುಚಿಯುಳ್ಳುದೂ, ಗೋವಿನ ಅಂಗದಂತೆ ಸುಖವಾದ ಸ್ಪರ್ಶವುಳ್ಳುದೂ, ಪುಣ್ಯವಂತನ ಬುದ್ಧಿಯಂತೆ ಗಂಭೀರವೂ, ಪಾಪಿಯ ಸುಖದಂತೆ

ಅಜ್ಞಾನತಾಪಸಂತಪ್ತಪ್ರಾಣಿಪ್ರಾಣೈಕರಕ್ಷಿಭಿಃ ।
ಪಂಚಾಽಮೃತಾನಾಂ ಕಲಶೈಃ ಸ್ನಪನಾಽತಿಫಲಪ್ರದೈಃ ॥ ೨೩ ॥
ಶ್ರದ್ಧೋಪಸ್ಪರ್ಶಿಹೃದಯಲಿಂಗತ್ರಿತಯಹೇತುಭಿಃ ।
ಅಜ್ಞಾನತಿಮಿರಾರ್ಕಾಭೈರ್ಜ್ಞಾನದಾನವಿಧಾಯಕೈಃ ॥ ೨೪ ॥
ವಿಶ್ವಭರ್ತುರುಮಾಸ್ಪರ್ಶಸುಖಾತಿಸುಖಕಾರಿಭಿಃ ।
ಮಹಾಽವಭೃಥಸುಸ್ನಾನಮಹಾಶುದ್ಧಿವಿಧಾಯಿಭಿಃ ॥ ೨೫ ॥
ಸಹಸ್ರಧಾರೈಃ ಕಲಶೈಃ ಸ ಈಶಾನೋ ಘಟೋದ್ಭವ ।
ಸಹಸ್ರಕೃತ್ವಃ ಸ್ನಪಯಾಮಾಸ ಸಂಹೃಷ್ಟಮಾನಸಃ ॥ ೨೬ ॥
ತತಃ ಪ್ರಸನ್ನೋ ಭಗವಾನ್ವಿಶ್ವಾತ್ಮಾ ವಿಶ್ವಲೋಚನಃ ।
ತಮುವಾಚ ತದೇಶಾನಂ ರುದ್ರಂ ರುದ್ರವಪುರ್ಧರಂ ॥ ೨೭ ॥
ತವ ಪ್ರಸನ್ನೋಽಸ್ಮೀಶಾನ ಕರ್ಮಣಾಽನೇನ ಸುವ್ರತ ।
ಗುರುಣಾಽನನ್ಯಪೂರ್ವೇಣ ಮಮಾಽತಿಪ್ರೀತಿಕಾರಿಣಾ ॥ ೨೮ ॥
ತತಸ್ತ್ವಂ ಜಟಿಲೇಶಾನ ವರಂ ಬ್ರೂಹಿ ತಪೋಧನ ।
ಅದೇಯಂ ನ ತವಾಽಸ್ತ್ಯದ್ಯ ಮಹೋದ್ಯಮಪರಾಯಣ ॥ ೨೯ ॥

---

ಚಂಚಲವೂ, ಕಮಲದ ವಾಸನೆಯನ್ನು ಜಯಿಸಿರುವುದೂ, ಪಾಟಲಪುಷ್ಪದ ಸುವಾಸನೆಯನ್ನು ತಳೆದಿರುವುದೂ, ಹಿಂದಾವಾಗಲೂ ನೋಡದಂತಹುದೂ, ಜನರ ಕಣ್ಮನಗಳನ್ನು ಆಕರ್ಷಿಸುವುದೂ, ಅಜ್ಞಾನತಾಪದಿಂದ ಸಂತಾಪಗೊಂಡ ಪ್ರಾಣಿಗಳ ಪ್ರಾಣಗಳನ್ನು ರಕ್ಷಿಸುವುದೂ, ಪಂಚಾಮೃತಕಲಶದಿಂದ ಅಭಿಷೇಕಮಾಡಿದುದಕ್ಕಿಂತ ಹೆಚ್ಚು ಫಲವನ್ನು ಕೊಡುವುದೂ, ಶ್ರದ್ಧೆಯಿಂದ ಆಚಮನಮಾಡುವ ಜನರ ಹೃದಯದಲ್ಲಿ ಮೂರು ಲಿಂಗಗಳನ್ನುಂಟುಮಾಡುವುದೂ, ಅಜ್ಞಾನವೆಂಬ ಕತ್ತಲೆಗೆ ಸೂರ್ಯನಂತಿರುವುದೂ, ಜ್ಞಾನವನ್ನು ಕೊಡಲು ಕಾರಣವೂ, ವಿಶ್ವಭರ್ತನಾದ ಆ ಮಹಾಮಹೇಶ್ವರನಿಗೆ ಪಾರ್ವತಿಯ ಅಂಗಸ್ಪರ್ಶಕ್ಕಿಂತಲೂ ಅಧಿಕಸುಖವನ್ನುಂಟುಮಾಡುವುದೂ, ಮಹಾವಭೃಥಸ್ನಾನಕ್ಕಿಂತಲೂ ಅತಿಶಯಶುದ್ಧಿಯನ್ನು ಉಂಟುಮಾಡುವುದೂ ಆದ ಆ ಜಲವನ್ನು ಸಹಸ್ರಧಾರೆಯುಳ್ಳ ಕಲಶಗಳಲ್ಲಿ ತುಂಬಿ ಆ ಲಿಂಗವನ್ನು ಸಂತೋಷದಿಂದ ಸಾವಿರಸಾರಿ ಅಭಿಷೇಕಮಾಡಿದನು.

೨೭. ಬಳಿಕ ಪ್ರಸನ್ನನಾದ ವಿಶ್ವೇಶ್ವರನು, ರುದ್ರರೂಪವನ್ನು ಧರಿಸಿದ ಶಂಕರನನ್ನು ಕುರಿತು ಇಂತೆಂದನು.

೨೮. "ಈಶಾನ! ಹಿಂದೆ ಯಾರೂ ಮಾಡದ, ಈಗ ನನಗೆ ಪ್ರೀತಿಯನ್ನು ಉಂಟುಮಾಡಿರುವ ಈ ನಿನ್ನ ಮಹಾಕಾರ್ಯದಿಂದ ನಿನ್ನಲ್ಲಿ ಪ್ರಸನ್ನನಾಗಿದ್ದೇನೆ.

೨೯. ಆದುದರಿಂದ ಜಟಾಧಾರಿಯೂ, ಮಹಾಪ್ರಯತ್ನನಿರತನೂ ಆದ ನಿನಗೆ ಕೊಡದಿರುವುದು ಯಾವುದೂ ಇರುವುದಿಲ್ಲ. ವರವನ್ನು ಕೇಳಿಕೊ.

ಈಶಾನ ಉವಾಚ :—
ಯದಿ ಪ್ರಸನ್ನೋ ದೇವೇಶ ವರಯೋಗ್ಯೋಽಸ್ಮ್ಯಹಂ ಯದಿ ।
ತದೇತದತುಲಂ ತೀರ್ಥಂ ತವ ನಾಮ್ನಾಽಸ್ತು ಶಂಕರ ॥ ೩೦ ॥
ವಿಶ್ವೇಶ್ವರ ಉವಾಚ :—
ತ್ರಿಲೋಕ್ಯಾಂ ಯಾನಿ ತೀರ್ಥಾನಿ ಭೂರ್ಭುವಃ ಸ್ವಃಸ್ಥಿತಾನ್ಯಪಿ ।
ತೇಭ್ಯೋಽಖಿಲೇಭ್ಯಸ್ತೀರ್ಥೇಭ್ಯಃ ಶಿವತೀರ್ಥಮಿದಂ ಪರಂ ॥ ೩೧ ॥
ಶಿವಂ ಜ್ಞಾನಮಿತಿ ಬ್ರೂಯುಃ ಶಿವಶಬ್ದಾರ್ಥಚಿಂತಕಾಃ ।
ತಚ್ಚ ಜ್ಞಾನಂ ದ್ರವೀಭೂತಮಿಹ ಮೇ ಮಹಿಮೋದಯಾತ್ । ॥ ೩೨ ॥
ಅತೋ ಜ್ಞಾನೋದನಾಮ್ನೈತತ್ತೀರ್ಥಂ ತ್ರೈಲೋಕ್ಯವಿಶ್ರುತಂ ।
ಅಸ್ಯ ದರ್ಶನಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ॥ ೩೩ ॥
ಜ್ಞಾನೋದತೀರ್ಥಸಂಸ್ಪರ್ಶಾದಶ್ವಮೇಧಫಲಂ ಲಭೇತ್ ।
ಸ್ಪರ್ಶನಾಚಮನಾಭ್ಯಾಂ ಚ ರಾಜಸೂಯಾಽಶ್ವಮೇಧಯೋಃ ॥ ೩೪ ॥
ಫಲ್ಗುತೀರ್ಥೇ ನರಃ ಸ್ನಾತ್ವಾ ಸಂತರ್ಪ್ಯ ಚ ಪಿತಾಮಹಾನ್ ।
ಯತ್ಫಲಂ ಸಮವಾಪ್ನೋತಿ ತದತ್ರ ಶ್ರಾದ್ಧಕರ್ಮಣಾ ॥ ೩೫ ॥
ಗುರುಪುಷ್ಯಾಽಸಿತಾಷ್ಟಮ್ಯಾಂ ವ್ಯತೀಪಾತೋ ಯದಾ ಭವೇತ್ ।
ತದಾಽತ್ರ ಶ್ರಾದ್ಧಕರಣಾದ್ಗಯಾಕೋಟಿಗುಣಂ ಭವೇತ್ ॥ ೩೬ ॥

---

೩೦. ಈಶಾನನು ಹೇಳುತ್ತಾನೆ:—ದೇವೇಶ! ನೀನು ಪ್ರಸನ್ನನಾಗಿದ್ದು, ನಾನು ವರಯೋಗ್ಯನೂ ಆಗಿದ್ದರೆ ಈ ಮಹಾತೀರ್ಥವು ನಿನ್ನ ಹೆಸರಿನಿಂದ ವಿಖ್ಯಾತವಾಗಲಿ.

೩೧. ವಿಶ್ವೇಶ್ವರನು ಹೇಳುತ್ತಾನೆ:—ಭೂಮ್ಯಂತರಿಕ್ಷಸ್ವರ್ಗಗಳೆಂಬ ಮೂರು ಲೋಕಗಳ ತೀರ್ಥಗಳಿಗಿಂತ ಈ ಶಿವತೀರ್ಥವು ಉತ್ತಮವಾದುದು.

೩೨. ಶಿವಶಬ್ದಾರ್ಥವನ್ನರಿತವರು ಶಿವಶಬ್ದಕ್ಕೆ ಜ್ಞಾನವೆಂದು ಅರ್ಥವನ್ನು ಹೇಳುವರು. ಆ ಜ್ಞಾನವು ಇಲ್ಲಿ ನನ್ನ ಮಹಿಮೆಯಿಂದ ದ್ರವವಾಗಿರುವುದು.

೩೩. ಆದುದರಿಂದ ಈ ತೀರ್ಥವು ಜ್ಞಾನೋದವೆಂದು ಮೂರುಲೋಕಗಳಲ್ಲಿಯೂ ಪ್ರಸಿದ್ಧವಾಗಿರುವುದು. ಇದನ್ನು ನೋಡುವುದರಿಂದಲೇ ಮಾನವನು ಸಕಲ ಪಾಪಗಳಿಂದಲೂ ಮುಕ್ತನಾಗುವನು.

೩೪. ಈ ತೀರ್ಥದ ಜಲವನ್ನು ಮುಟ್ಟುವುದರಿಂದಲೂ, ಆಚಮನಮಾಡುವುದರಿಂದಲೂ ರಾಜಸೂಯ ಅಶ್ವಮೇಧಯಾಗಗಳ ಫಲವು ಲಭಿಸುವುದು.

೩೫. ಮಾನವನು ಇಲ್ಲಿ ಶ್ರಾದ್ಧಮಾಡುವುದರಿಂದ ಫಲ್ಗುತೀರ್ಥದಲ್ಲಿ ಮಿಂದು ಪಿತಾಮಹರನ್ನು ತರ್ಪಣಮಾಡಿದ ಫಲವು ದೊರೆಯುವುದು.

೩೬. ಪುಷ್ಯ ಬಹುಳ ಅಷ್ಟಮೀ ವ್ಯತೀಪಾತಯೋಗವಿರುವ ಗುರುವಾರದ

ಯತ್ಫಲಂ ಸಮವಾಪ್ನೋತಿ ಪಿತೄನ್ಸಂತರ್ಪ್ಯ ಪುಷ್ಕರೇ ।
ತತ್ಫಲಂ ಕೋಟಿಗುಣಿತಂ ಜ್ಞಾನತೀರ್ಥೇ ತಿಲೋದಕೈಃ ॥ ೩೭ ॥
ಸನ್ನಿಹತ್ಯಾಂ ಕುರುಕ್ಷೇತ್ರೇ ತಮೋಗ್ರಸ್ತೇ ವಿವಸ್ವತಿ ।
ಯತ್ಫಲಂ ಪಿಂಡದಾನೇನ ತದ್ಜ್ಞಾನೋದೇ ದಿನೇದಿನೇ ॥ ೩೮ ॥
ಪಿಂಡನಿರ್ವಪಣಂ ಯೇಷಾಂ ಜ್ಞಾನತೀರ್ಥೇ ಸುತೈಃ ಕೃತಂ ।
ಮೋದಂತೇ ಶಿವಲೋಕೇ ತೇ ಯಾವದಾಭೂತಸಂಪ್ಲವಂ ॥ ೩೯ ॥
ಅಷ್ಟಮ್ಯಾಂ ಚ ಚತುರ್ದಶ್ಯಾಮುಪವಾಸೀ ನರೋತ್ತಮಃ ।
ಪ್ರಾತಃ ಸ್ನಾತ್ವಾಽಥ ಪೀತಾಂಭಸ್ತ್ವಂತರ್ಲಿಂಗಮಯೋ ಭವೇತ್ ॥ ೪೦ ॥
ಏಕಾದಶ್ಯಾಮುಪೋಷ್ಯಾಽತ್ರ ಪ್ರಾಶ್ನಾತಿ ಚುಲುಕತ್ರಯಂ ।
ಹೃದಯೇ ತಸ್ಯ ಜಾಯಂತೇ ತ್ರೀಣಿ ಲಿಂಗಾನ್ಯಸಂಶಯಂ ॥ ೪೧ ॥
ಈಶಾನತೀರ್ಥೇ ಯಃ ಸ್ನಾತ್ವಾ ವಿಶೇಷಾತ್ಸೋಮವಾಸರೇ ।
ಸಂತರ್ಪ್ಯ ದೇವರ್ಷಿಪಿತೄನ್ದತ್ವಾ ದಾನಂ ಸ್ವಶಕ್ತಿತಃ ॥ ೪೨ ॥
ತತಃ ಸಮರ್ಚ್ಯ ಶ್ರೀಲಿಂಗಂ ಮಹಾಸಂಭಾರವಿಸ್ತರೈಃ ।
ಅತ್ರಾಽಪಿ ದತ್ವಾ ನಾನಾರ್ಥಾನ್ಕೃತಕೃತ್ಯೋ ಭವೇನ್ನರಃ ॥ ೪೩ ॥

---

ದಿನ ಇಲ್ಲಿ ಶ್ರಾದ್ಧಮಾಡಿದರೆ ಗಯಾಶ್ರಾದ್ಧಕ್ಕಿಂತ ಕೋಟಿಯಷ್ಟು ಹೆಚ್ಚು ಫಲವು ಉಂಟಾಗುವುದು.

೩೭. ಪುಷ್ಕರತೀರ್ಥದಲ್ಲಿ ಪಿತೃತರ್ಪಣಮಾಡಿದರೆ ಲಭಿಸುವ ಪುಣ್ಯದ ಕೋಟಿಯಷ್ಟು ಪುಣ್ಯವು ಜ್ಞಾನತೀರ್ಥದಲ್ಲಿ ತಿಲತರ್ಪಣಮಾಡುವುದರಿಂದ ದೊರೆಯುವುದು.

೩೮. ಕುರುಕ್ಷೇತ್ರದಲ್ಲಿರುವ ರಾಮಹ್ರದದಲ್ಲಿ ಸೂರ್ಯಗ್ರಹಣಕಾಲದಲ್ಲಿ ಪಿಂಡಪ್ರದಾನಮಾಡಿದ ಫಲವು ಈ ಜ್ಞಾನೋದತೀರ್ಥದಲ್ಲಿ ಪ್ರತಿದಿನವೂ ದೊರೆಯುವುದು.

೩೯. ಈ ಜ್ಞಾನತೀರ್ಥದಲ್ಲಿ ಯಾವ ಪುತ್ರರು ಪಿಂಡಪ್ರದಾನಮಾಡುವರೊ, ಅವರು ಶಿವಲೋಕದಲ್ಲಿ ಪ್ರಳಯಕಾಲದವರೆಗೆ ಆನಂದಿಸುವರು.

೪೦. ಮಾನವನು ಅಷ್ಟಮಿ, ಚತುರ್ದಶೀ ದಿನಗಳಲ್ಲಿ ಉಪವಾಸಮಾಡಿ ಬೆಳಗ್ಗೆ ಮಿಂದು ಜಲವನ್ನು ಕುಡಿದರೆ ಅಂತರ್ಲಿಂಗರೂಪನಾಗುವನು.

೪೧. ಇಲ್ಲಿ ಏಕಾದಶೀದಿನ ಉಪವಾಸಮಾಡಿ ಮೂರುಸಾರಿ ಆಚಮನ ಮಾಡಿದವನ ಹೃದಯದಲ್ಲಿ ನಿಶ್ಚಯವಾಗಿಯೂ ಮೂರುಲಿಂಗಗಳುಂಟಾಗುವುವು.

೪೨–೪೩. ಸೋಮವಾರದ ದಿನ ಈಶಾನತೀರ್ಥದಲ್ಲಿ ಮಿಂದು ದೇವರ್ಷಿಪಿತೃತರ್ಪಣಗೈದು, ಶಕ್ತ್ಯನುಸಾರ ದಾನಮಾಡಿ, ಅತಿಶಯ ಸಾಮಗ್ರಿಗಳಿಂದ ಅಲ್ಲಿರುವ ಲಿಂಗವನ್ನು ಪೂಜಿಸಿ ನಾನಾದಾನಗಳನ್ನಿತ್ತವನು ಕೃತಕೃತ್ಯನಾಗುವನು.

ಉಪಾಸ್ಯ ಸಂಧ್ಯಾಂ ಜ್ಞಾನೋದೇ ಯತ್ಪಾಪಂ ಕಾಲಲೋಪಜಂ ।
ಕ್ಷಣೇನ ತದಪಾಕೃತ್ಯ ಜ್ಞಾನವಾನ್ ಜಾಯತೇ ದ್ವಿಜಃ ॥ ೪೪ ॥
ಶಿವತೀರ್ಥಮಿದಂ ಪ್ರೋಕ್ತಂ ಜ್ಞಾನತೀರ್ಥಮಿದಂ ಶುಭಂ ।
ತಾರಕಾಖ್ಯಮಿದಂ ತೀರ್ಥಂ ಮೋಕ್ಷತೀರ್ಥಮಿದಂ ಧ್ರುವಂ ॥ ೪೫ ॥
ಸ್ಮರಣಾದಪಿ ಪಾಪೌಘೋ ಜ್ಞಾನೋದಸ್ಯ ಕ್ಷಯೇದ್ಧ್ರುವಂ ।
ದರ್ಶನಾತ್ಸ್ಪರ್ಶನಾತ್ಸ್ನಾನಾತ್ಪಾನಾದ್ಧರ್ಮಾದಿಸಂಭವಃ ॥ ೪೬ ॥
ಡಾಕಿನೀ ಶಾಕಿನೀ ಭೂತ ಪ್ರೇತ ವೇತಾಲ ರಾಕ್ಷಸಾಃ ।
ಗ್ರಹಾಃ ಕೂಶ್ಮಾಂಡಝೋಟಿಂಗಾಃ ಕಾಲಕರ್ಣೀ ಶಿಶುಗ್ರಹಾಃ ॥ ೪೭ ॥
ಜ್ವರಾಃಪಸ್ಮಾರ ವಿಸ್ಫೋಟ ದ್ವಿತೀಯಕ ಚತುರ್ಥಕಾಃ ।
ಸರ್ವೇ ಪ್ರಶಮಮಾಯಾಂತಿ ಶಿವತೀರ್ಥಜಲೇಕ್ಷಣಾತ್ ॥ ೪೮ ॥
ಜ್ಞಾನೋದತೀರ್ಥಪಾನೀಯೈರ್ಲಿಂಗಂ ಯಃ ಸ್ನಾಪಯೇತ್ಸುಧೀಃ ।
ಸರ್ವತೀರ್ಥೋದಕೈಸ್ತೇನ ಧ್ರುವಂ ಸಂಸ್ನಾಪಿತಂ ಭವೇತ್ ॥ ೪೯ ॥
ಜ್ಞಾನರೂಪೋಽಹಮೇವಾತ್ರ ದ್ರವಮೂರ್ತಿಂ ವಿಧಾಯಚ ।
ಜಾಡ್ಯವಿಧ್ವಂಸನಂ ಕುರ್ಯಾಂ ಕುರ್ಯಾಂ ಜ್ಞಾನೋಪದೇಶನಂ ॥ ೫೦ ॥

---

೪೪. ಜ್ಞಾನೋದತೀರ್ಥದಲ್ಲಿ ಸಂಧ್ಯಾವಂದನೆಮಾಡಿದವನು ಕಾಲಲೋಪದಿಂದುಂಟಾದ ಪಾಪವನ್ನು ಕ್ಷಣಕಾಲದಲ್ಲಿಯೇ ಪರಿಹರಿಸಿಕೊಂಡು ಜ್ಞಾನಿಯಾಗುವನು.

೪೫. ಈ ತೀರ್ಥವು ಶಿವತೀರ್ಥ, ಜ್ಞಾನತೀರ್ಥ, ತಾರಕತೀರ್ಥ, ಮೋಕ್ಷತೀರ್ಥವೆಂದು ವಿಖ್ಯಾತವಾಗಿರುವುದು.

೪೬. ಜ್ಞಾನೋದತೀರ್ಥದ ಸ್ಮರಣೆಯಿಂದಲೇ ಪಾಪಸಮೂಹವು ನಾಶವಾಗುವುದು. ಇದರ ದರ್ಶನ, ಸ್ಪರ್ಶನ, ಸ್ನಾನ, ಪಾನಗಳಿಂದ ಧರ್ಮಾದಿಗಳು ಉಂಟಾಗುವುವು.

೪೭–೪೮. ಈ ಜ್ಞಾನೋದತೀರ್ಥದ ಜಲವನ್ನು ನೋಡಿದ ಕೂಡಲೆ ಡಾಕಿನೀ, ಶಾಕಿನೀ, ಭೂತ, ಪ್ರೇತ, ಭೇತಾಳ, ರಾಕ್ಷಸ, ಕೂಷ್ಮಾಂಡ, ಝೋಟಿಂಗಗ್ರಹ, ಕಾಲಕರ್ಣಿ, ಶಿಶುಗ್ರಹಗಳೂ, ಜ್ವರ, ಅಪಸ್ಮಾರ, ವಿಸ್ಫೋಟ, ದ್ವಿತೀಯ ಚತುರ್ಥಕಜ್ವರಗಳೂ ಶಾಂತವಾಗುವುವು.

೪೯. ಜ್ಞಾನೋದತೀರ್ಥದ ಜಲದಿಂದ ಶಿವಲಿಂಗಕ್ಕೆ ಅಭಿಷೇಕಮಾಡಿದವನು ಸಕಲತೀರ್ಥಜಲದಿಂದ ಅಭಿಷೇಕಮಾಡಿದವನಂತಾಗುವನು.

೫೦. ಜ್ಞಾನರೂಪನಾದ ನಾನೇ ಇಲ್ಲಿ ದ್ರವರೂಪನಾಗಿ ಜಾಡ್ಯವನ್ನು ನಿವಾರಿಸಿ ಜ್ಞಾನವನ್ನು ಉಪದೇಶಮಾಡುವೆನು.

ಇತಿ ದತ್ವಾ ವರಾಂಛಂಭುಸ್ತತ್ರೈವಾಂತರಧೀಯತ ।
ಕೃತಕೃತ್ಯಮಿವಾತ್ಮಾನಂ ಸೋಽಪ್ಯಮಂಸ್ತ ತ್ರಿಶೂಲಭೃತ್ ॥ ೫೧ ॥
ಈಶಾನೋ ಜಟಿಲೋ ರುದ್ರಸ್ತತ್ಪ್ರಾಶ್ಯ ಪರಮೋದಕಂ ।
ಅವಾಪ್ತವಾನ್ಪರಂ ಜ್ಞಾನಂ ಯೇನ ನಿರ್ವೃತಿಮಾಪ್ತವಾನ್ ॥ ೫೨ ॥

ಸ್ಕಂದ ಉವಾಚ:—

ಕಲಶೋದ್ಭವ ಚಿತ್ರಾರ್ಥಮಿತಿಹಾಸಂ ಪುರಾತನಂ ।
ಜ್ಞಾನವಾಪ್ಯಾಂ ಯದ್ವೃತ್ತಂ ತದಾಖ್ಯಾಮಿ ನಿಶಾಮಯ ॥ ೫೩ ॥
ಹರಿಸ್ವಾಮೀತಿ ವಿಖ್ಯಾತಃ ಕಾಶ್ಯಾಮಾಸೀದ್ದ್ವಿಜಃ ಪುರಾ ।
ತಸ್ಯೈಕಾ ತನಯಾ ಜಾತಾ ರೂಪೇಣಾಪ್ರತಿಮಾ ಭುವಿ ॥ ೫೪ ॥
ನ ಸಮಾ ಶೀಲಸಂಪತ್ತ್ಯಾ ತಸ್ಯಾಃ ಕಾಚನ ಭೂತಲೇ ।
ಕಲಾಕಲಾಪಕುಶಲಾ ಸ್ವರೇಣ ಜಿತಕೋಕಿಲಾ ॥ ೫೫ ॥
ನ ನಾರೀ ತಾದೃಗಸ್ತೀಹ ನಾಽಮರೀ ಕಿನ್ನರೀ ನ ಚ ।
ವಿದ್ಯಾಧರೀ ನ ನೋ ನಾಗೀ ಗಂಧರ್ವೀ ನಾಽಽಸುರೀ ನ ಚ ॥ ೫೬ ॥
ಸರ್ವಸೌಂದರ್ಯನಿಲಯಾ ಸರ್ವಲಕ್ಷಣಸದ್ಮನಿಃ ।
ಅಧಿಶೇತೇ ಧ್ರುವಂ ಧ್ವಾಂತಂ ತನ್ಮೌಲಿಂ ಬ್ರಧ್ನಸಾಧ್ವಸಾತ್ ॥ ೫೭ ॥

---

೫೧. ಶಂಕರನು ಹೀಗೆ ವರಗಳನ್ನಿತ್ತು ಅಲ್ಲಿಯೇ ಅದೃಶ್ಯನಾದನು. ಶಿವನೂ ತಾನು ಕೃತಕೃತ್ಯನಾದೆನೆಂದು ಭಾವಿಸಿದನು.

೫೨. ಜಟಾಧಾರಿಯಾದ ಆ ಈಶಾನನು ಆ ಜಲವನ್ನು ಕುಡಿದು ಉತ್ತಮ ಜ್ಞಾನವನ್ನು ಪಡೆದು ಅದರಿಂದ ಮುಕ್ತನಾದನು.

೫೩. ಸ್ಕಂದನು ಹೇಳುತ್ತಾನೆ:—ಅಯ್ಯಾ ಅಗಸ್ತ್ಯನೆ! ಜ್ಞಾನೋದತೀರ್ಥದಲ್ಲಿ ನಡೆದ ಆಶ್ಚರ್ಯಕರವಾದ ಪುರಾತನೇತಿಹಾಸವೊಂದನ್ನು ನಿನಗೆ ಹೇಳುವೆನು, ಕೇಳು.

೫೪. ಹಿಂದೆ ಕಾಶಿಯಲ್ಲಿ ಹರಿಸ್ವಾಮಿಯೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನಿಗೆ ಅಪ್ರತಿಮಸುಂದರಿಯಾದ ಒಬ್ಬ ಕುವರಿಯು ಜನಿಸಿದಳು.

೫೫. ಕಲೆಗಳಲ್ಲಿ ನಿಪುಣಳೂ, ಕೋಗಿಲೆಯಂತೆ ಸ್ವರವುಳ್ಳವಳೂ ಆದ ಅವಳಂತೆ ಸತ್ತ್ವಭಾವವುಳ್ಳ ಒಬ್ಬ ಸ್ತ್ರೀಯೂ ಭೂಮಿಯಲ್ಲಿರಲಿಲ್ಲ.

೫೬. ಈ ಜಗತ್ತಿನಲ್ಲಿ ಅವಳಿಗೆ ಸಮಾನಳಾದ ಮನುಷ್ಯ, ದೇವ, ಕಿನ್ನರ, ವಿದ್ಯಾಧರ, ನಾಗ, ಗಂಧರ್ವ, ಅಸುರ ಸ್ತ್ರೀಯೊಬ್ಬಳೂ ಇರಲಿಲ್ಲ.

೫೭. ಅವಳು ಸಕಲ ಸೌಂದರ್ಯಕ್ಕೆ ಆಶ್ರಯಳೂ, ಸಮಸ್ತ ಲಕ್ಷಣಗಳಿಗೆ ಗಣಿಯೂ ಆಗಿದ್ದಳು. ಕತ್ತಲೆಯು ನಿಶ್ಚಯವಾಗಿಯೂ ಸೂರ್ಯನ ಭೀತಿಯಿಂದ ಅವಳ ತಲೆಯಲ್ಲಿ ಅಡಗಿದ್ದಿತು. ಅವಳ ಕೂದಲ ಕಪ್ಪು ಅಷ್ಟು ಮೋಹಕವಾಗಿದ್ದಿತು.

ತದಾಸ್ಯಂ ಶರಣಂ ಯಾತೋ ಮನ್ಯೇ ದರ್ಶಭಯಾಚ್ಛಶೀ ।
ದಿವಾಽಪಿ ನತ್ಯಜೇತ್ತಾಂ ತು ತ್ರಸ್ತಶ್ಚಂಡಮರೀಚಿತಃ ॥ ೫೮ ॥
ತದ್ಭ್ರೂಭ್ರಮರರಾಜೀವಗಂಡಪತ್ರಲತಾಂತರೇ ।
ಉದಂಚನ್ಯಂಚದುಡ್ಡೀನಗತೇರಭ್ಯಾಸಭಾಜಿನೀ ॥ ೫೯ ॥
ತಚ್ಚಾರುಲೋಚನಕ್ಷೇತ್ರೇ ವಿಚರಂತೌ ಚ ಖಂಜನೌ ।
ಸದೈವ ಶಾರದೀಂ ಪ್ರೀತಿಂ ನಿರ್ವಿಶೇತೇ ನಿಜೇಚ್ಛಯಾ ॥ ೬೦ ॥
ಸುದತ್ಯಾ ರದನಶ್ರೇಣೀಚ್ಛೇದೇಷು ವಿಷಮೇಷುಣಾ ।
ವಿಹಿತಾ ಕಾಂಚನೀ ರೇಖಾ ಕ್ವೇಂದಾವೇತಾವತೀ ಕಲಾ ॥ ೬೧ ॥
ಪ್ರಾಯೋ ಮದನಭೂಪಾಲಹರ್ಮ್ಯರತ್ನಾಂತರೇ ಶುಭೇ ।
ಜಿತಪ್ರವಾಲಸುಚ್ಛಾಯೇ ತಸ್ಯಾ ರದನವಾಸಸೀ ॥ ೬೨ ॥
ಸ್ವರ್ಗೇ ಮರ್ತ್ಯೇಽಚ ಪಾತಾಲೇ ನೈಷಾ ರೇಖಾ ಕ್ವಚಿತ್ ಸ್ತ್ರಿಯಾಂ ।
ತತ್ಕಂಠರೇಖಾ ತ್ರಿತಯವ್ಯಾಜೇನ ಶಪತೇ ಸ್ಮರಃ ॥ ೬೩ ॥
ಶಂಕೇ ಚಿತ್ತಭುವೋ ರಾಜ್ಞೋ ಲಸತ್ಪಟಕುಟೀದ್ವಯಂ ।
ಅನರ್ಘ್ಯರತ್ನಕೋಶಾಢ್ಯಂ ತಸ್ಯಾ ವಕ್ಷೋರುಹದ್ವಯಂ ॥ ೬೪ ॥

---

೫೮. ಚಂದ್ರನು ಅಮಾವಾಸ್ಯೆಯ ಭಯದಿಂದ ಅವಳ ಮುಖವನ್ನು ಮರೆಹೊಕ್ಕಿದ್ದನೆಂದು ತಿಳಿಯುತ್ತೇನೆ. ಆ ಚಂದ್ರನು ಹಗಲೂ ಸೂರ್ಯನ ಭಯದಿಂದ ಅವಳ ಮುಖವನ್ನು ಬಿಡಲಿಲ್ಲ.

೫೯. ಅವಳ ಹುಬ್ಬುಕಪೋಲದಲ್ಲಿ ಲಿಖಿತವಾದ ಲತೆಯ ಮಧ್ಯದಲ್ಲಿ ಮೇಲೆ ಕೆಳಗೆ ಹಾರುವ ಅಭ್ಯಾಸವನ್ನುಮಾಡುವ ದುಂಬಿಗಳ ಸಮೂಹದಂತೆ ಅವಳ ಮುಂಗುರುಳು ಪ್ರಕಾಶಿಸುತ್ತಿದ್ದಿತು.

೬೦. ಖಂಜರೀಟಪಕ್ಷಿಗಳು ಅವಳ ಸುಂದರವಾದ ಕಣ್ಣುಗಳ ಕ್ಷೇತ್ರದಲ್ಲಿ ಯಾವಾಗಲೂ ಸ್ವೇಚ್ಛೆಯಿಂದ ಶರತ್ಕಾಲಸಂಬಂಧವಾದ ಪ್ರೀತಿಯನ್ನು ಅನುಭವಿಸುತ್ತಿದ್ದುವು.

೬೧. ಮನ್ಮಥನು ಆ ಸುಂದರಿಯ ಹಲ್ಲುಗಳ ಸಾಲುಗಳೆಂಬ ಎಲೆಗಳಲ್ಲಿ ಸುವರ್ಣರೇಖೆಯನ್ನು ನಿರ್ಮಿಸಿದ್ದನು. ಚಂದ್ರನಲ್ಲಿ ಇಂತಹ ಕಲೆಯೆಲ್ಲಿ?

೬೨. ಮಂಗಳಕರಗಳೂ, ಹವಳದಕಾಂತಿಯನ್ನು ಜಯಿಸಿದುವೂ ಆದ ಅವಳ ತುಟಿಗಳು ಮಧ್ಯದಲ್ಲಿ ಮನ್ಮಥರಾಜನ ಅರಮನೆಯ ರತ್ನಗಳಂತೆ ಬೆಳಗುತ್ತಿದ್ದುವು.

೬೩. ಮನ್ಮಥನು ಸ್ವರ್ಗ, ಮರ್ತ್ಯ, ಪಾತಾಳಲೋಕಗಳಲ್ಲಿರುವ ಹೆಂಗಸರೊಬ್ಬರಲ್ಲಿಯೂ ಈ ಕಾಂತಿಯಿಲ್ಲವೆಂದು ಅವಳ ಕಂಠದಲ್ಲಿರುವ ಮೂರು ರೇಖೆಗಳ ನೆಪದಿಂದ ಶಪಥಮಾಡುತ್ತಾನೆ.

೬೪. ಅವಳ ಎರಡು ಕುಚಗಳು ಮನ್ಮಥರಾಜನ ಅಮೂಲ್ಯರತ್ನದ ಬೊಕ್ಕಸಗಳಿಂದ ಸಹಿತವಾಗಿ ವಿರಾಜಿಸುವ ಗೂಡಾರಗಳೆಂದು ಊಹಿಸುವೆನು.

ಅನಂಗಭೂನಿಯಮತೋ ದೃಶ್ಯೇ ಮಧ್ಯೇ ನತಭ್ರುವಃ ।
ರೋಮಾಲೀ ಲಕ್ಷಿಕಾ ಮೂರ್ಧ್ನಾಮಿವ ಯಷ್ಟಿಂ ವಿಧಿರ್ವ್ಯಧಾತ್ ॥ ೬೫॥
ತಸ್ಯಾ ನಾಭೀದರೀಂ ಪ್ರಾಪ್ಯ ಕಂದರ್ಪೋಽನಂಗತಾಂ ಗತಃ ।
ಪುನಃ ಪ್ರಾಪ್ತುಮಿವಾಂಗಾನಿ ತಪ್ಯತೇ ಪರಮಂ ತಪಃ ॥ ೬೬ ॥
ಗುರುಣೈತನ್ನಿತಂಬೇನ ಮಹಾಮನ್ಮಥದೀಕ್ಷಯಾ ।
ಭುವಿ ಕೇ ಕೇ ಯುವಾನೋ ನ ಸ್ವಾಧೀನಾಃ ಪ್ರಾಪಿತಾ ದೃಶಾಂ ॥ ೬೭ ॥
ಊರುಸ್ತಂಭೇನ ಚೈತಸ್ಯಾಃ ಸ್ತಂಭವತ್ಕಸ್ಯ ನೋ ಮನಃ ।
ತತ್ಸಂಭೇನ ಮುನೇರ್ವಾಽಪಿ ಸುವೃತ್ತೇ ನ ಸುವರ್ತನಂ ॥ ೬೮ ॥
ಪಾದಾಂಗುಷ್ಠನಖಜ್ಯೋತಿಃ ಪ್ರಭಯಾ ಕಸ್ಯ ನ ಪ್ರಭಾ ।
ವಿವೇಕಜನಿತಾಽಧ್ವಂಸಿ ಮುನೇ ತಸ್ಯಾ ಮೃಗೀದೃಶಃ ॥ ೬೯ ॥
ಸಾ ಪ್ರತ್ಯಹಂ ಜ್ಞಾನವಾಪ್ಯಾಂ ಸ್ನಾಯಂ ಸ್ನಾಯಂ ಶಿವಾಲಯೇ ।
ಸಮ್ಮಾರ್ಜನಾದಿ ಕರ್ಮಾಣಿ ಕುರುತೇಽನನ್ಯಮಾನಸಾ ॥ ೭೦ ॥
ತತ್ಪಾದಪ್ರತಿಬಿಂಬೇಷು ರೇಖಾಶಷ್ಪಾಂಕುರಂ ಚರನ್ ।
ನಾಽನ್ಯದ್ವನಾಂತರಂ ಯಾತಿ ಕಾಶ್ಯಾಂ ಯೂನಾಂ ಮನೋಮೃಗಃ॥ ೭೧ ॥

---

೬೫. ಬ್ರಹ್ಮನು ಮನ್ಮಥನ ಆಜ್ಞೆಯಂತೆ ಆ ಸುಂದರಿಯ ನಡುವಿನಲ್ಲಿ ಕಾಣಲಾಗದ ಒಂದು ರಹಸ್ಯಾಂಗವನ್ನು ಸೂಚಿಸಲು ರೋಮಪಂಕ್ತಿಯೆಂಬ ಒಂದು ಕೋಲನ್ನು ಸೃಜಿಸಿರುವನು.

೬೬. ಅನಂಗತ್ವವನ್ನು ಹೊಂದಿದ ಮನ್ಮಥನು ಮರಳಿ ದೇಹವನ್ನು ಹೊಂದಲಿಚ್ಛೆಯಿಂದಲೊ ಎಂಬಂತೆ ಅವಳ ನಾಭೀಕುಹರವನ್ನು ಹೊಂದಿ ಉತ್ತಮ ತಪಸ್ಸನ್ನಾಚರಿಸುವನು.

೬೭. ವಿಶಾಲವಾದ ಇವಳ ನಿತಂಬದಲ್ಲಿ ಭೂಮಿಯಲ್ಲಿರುವ ಯಾವ ಯಾವ ಯುವಕರು ಮಹಾ ಮನ್ಮಥದೀಕ್ಷೆಯಿಂದ ದೃಷ್ಟಿಯನ್ನಿಡಲಿಲ್ಲ?

೬೮. ಇವಳ ವರ್ತುಳವಾದ ತೊಡೆಯಿಂದ ಯಾವ ಸಾಮಾನ್ಯ ಮನುಷ್ಯನ ಅಥವಾ ಮುನಿಯ ಒಳ್ಳೆಯ ನಡತೆಯು ತಡೆಯಲ್ಪಡಲಿಲ್ಲ.

೬೯. ಎಲೈ ಅಗಸ್ತ್ಯನೆ! ಆ ಮೃಗಾಕ್ಷಿಯ ಕಾಲಬೆರಳಿನ ಉಗುರಿನ ಕಾಂತಿಯು ಯಾವ ಮನುಷ್ಯನ ವಿವೇಕಜನ್ಯವಾದ ಬೆಳಕನ್ನು ಅಡಗಿಸಲಿಲ್ಲ.

೭೦. ಅವಳು ಅನನ್ಯಮನಸ್ಕಳಾಗಿ ಪ್ರತಿದಿನವೂ ಜ್ಞಾನವಾಪಿಯಲ್ಲಿ ಮಿಂದು ಶಿವಾಲಯದಲ್ಲಿ ಗುಡಿಸುವುದೇ ಮೊದಲಾದ ಕೆಲಸಗಳನ್ನು ಮಾಡುತ್ತಿದ್ದಳು.

೭೧. ಕಾಶಿಯಲ್ಲಿರುವ ಯುವಕರ ಮನಸ್ಸೆಂಬ ಜಿಂಕೆಯು ಅವಳ ಪಾದದ ಪ್ರತಿ ಬಿಂಬಗಳಲ್ಲಿರುವ ಪದ್ಮಾದಿರೇಖೆಗಳೆಂಬ ಹುಲ್ಲನ್ನು ಮೇಯುತ್ತ ಬೇರೆ ಕಾಡಿಗೆ ಹೋಗಲಿಲ್ಲ.

ತದಾಸ್ಯಪಂಕಜಂ ಹಿತ್ವಾ ಯೂನಾಂ ನೇತ್ರಾಲಿಮಾಲಯಾ ।
ನ ಲತಾಂತರಮಾಸೇವಿ ಅಸ್ಯಾಮೋದಪ್ರಸೂನಯುಕ್ ॥ ೭೨ ॥
ಸುಲೋಚನಾಽಪಿ ಸಾ ಕನ್ಯಾ ಪ್ರೇಕ್ಷೇತಾಽಽಸ್ಯಂ ನ ಕಸ್ಯಚಿತ್ ।
ಸುಶ್ರವಾ ಅಪಿ ಸಾ ಬಾಲಾ ನಾದತ್ತೇ ಕಸ್ಯಚಿದ್ವಚಃ ॥ ೭೩ ॥
ಸುಶೀಲಾ ಶೀಲಸಂಪನ್ನಾ ರಹಸ್ತದ್ವಿರಹಾತುರೈಃ ।
ಪ್ರಾರ್ಥಿತಾಽಪಿ ಸುರೂಪಾಢ್ಯೈರ್ನಾಽಭಿಲಾಷಂ ಬಬಂಧ ಸಾ ॥ ೭೪ ॥
ಧನೈಸ್ತಸ್ಯಾ ಜನೇತಾಽಪಿ ಯುವಭಿಃ ಪ್ರಾರ್ಥಿತೋ ಬಹು ।
ನಾಽಶಕತ್ತಾಂ ಸುಲೀಲಾಂ ಸ ದಾತುಂ ಶೀಲೋರ್ಜಿತಶ್ರಿಯಂ ॥ ೭೫ ॥
ಜ್ಞಾನೋದತೀರ್ಥಭಜನಾತ್ಸಾ ಸುಶೀಲಾ ಕುಮಾರಿಕಾ ।
ಬಹಿರಂತಸ್ತದಾಽದ್ರಾಕ್ಷೀತ್ಸರ್ವಂ ಲಿಂಗಮಯಂ ಜಗತ್ ॥ ೭೬ ॥
ಕದಾಚಿದೇಕದಾ ತಾಂ ತು ಪ್ರಸುಪ್ತಾಂ ಸದನಾಂಗಣೇ ।
ಮೋಹಿತೋ ರೂಪಸಂಪತ್ತ್ಯಾ ಕಶ್ಚಿದ್ವಿದ್ಯಾಧರೋಽಹರತ್ ॥ ೭೭ ॥
ವ್ಯೋಮವರ್ತ್ಮನಿ ತಾಂ ರಾತ್ರೌ ಯಾವನ್ಮಲಯಪರ್ವತಂ ।
ಸ ನಿನೀಷತಿ ತಾವಚ್ಚ ವಿದ್ಯುನ್ಮಾಲೀ ಸಮಾಗತಃ ॥ ೭೮ ॥

---

೭೨. ಯುವಕರ ನಯನಗಳೆಂಬ ದುಂಬಿಗಳ ಗುಂಪು ಅವಳ ಮುಖ ಕಮಲವನ್ನು ತ್ಯಜಿಸಿ ಸುವಾಸನೆಯಾದ ಹೂವುಗಳಿಂದ ಸಹಿತವಾಗಿದ್ದರೂ ಇತರ ಬಳ್ಳಿಗಳನ್ನು ಸೇವಿಸಲಿಲ್ಲ.

೭೩–೭೫. ಆ ಕನ್ಯೆಯು ಸುಂದರನಯನಗಳಾಗಿದ್ದರೂ ಯಾವನೊಬ್ಬನ ಮುಖವನ್ನೂ ನೋಡಲಿಲ್ಲ. ಒಳ್ಳೆಯ ಕಿವಿಗಳುಳ್ಳವಳಾದರೂ ಯಾರ ಮಾತನ್ನೂ ಕೇಳಲಿಲ್ಲ. ಒಳ್ಳೆಯ ನಡತೆಯುಳ್ಳ ಸುಶೀಲೆಯೆಂಬ ಆ ಕನ್ಯೆಯು ತನ್ನ ವಿರಹದಿಂದ ವ್ಯಥೆಗೊಂಡ ಸುಂದರಪುರುಷರು ತನ್ನನ್ನು ಪ್ರಾರ್ಥಿಸಿದರೂ ಅವರನ್ನು ಕಾಮಿಸಲಿಲ್ಲ. ಅವಳ ತಂದೆಯೂ ಯುವಕರು ಹಣವನ್ನು ಕೊಟ್ಟು ಬಹುವಾಗಿಯಾಚಿಸಿದರೂ ಉತ್ಕೃಷ್ಟಸ್ವಭಾವವುಳ್ಳ ಅವಳನ್ನು ದಾನಮಾಡಲು ಸಮರ್ಥನಾಗಲಿಲ್ಲ.

೭೬. ಆ ಸುಶೀಲಾಕುಮಾರಿಯು ಜ್ಞಾನೋದತೀರ್ಥವನ್ನು ಸೇವಿಸಿದ್ದರಿಂದ ಒಳಗೂ ಹೊರಗೂ ಸಮಸ್ತ ಜಗತ್ತನ್ನೂ ಲಿಂಗಸ್ವರೂಪವಾದುದನ್ನಾಗಿ ನೋಡುತ್ತಿದ್ದಳು.

೭೭. ಒಂದಾನೊಂದು ದಿನ ಓರ್ವ ವಿದ್ಯಾಧರನು ಅವಳ ಸೌಂದರ್ಯದಿಂದ ಮೋಹಗೊಂಡು ಮನೆಯ ಅಂಗಣದಲ್ಲಿ ಮಲಗಿರುವ ಅವಳನ್ನು ಅಪಹರಿಸಿದನು.

೭೮–೭೯. ಅವನು ರಾತ್ರಿಯ ವೇಳೆಯಲ್ಲಿ ಅವಳನ್ನು ಆಕಾಶಮಾರ್ಗದಿಂದ ಒಯ್ಯಲಿಚ್ಛಿಸಲು ಭಯಂಕರಶರೀರವುಳ್ಳವನೂ, ಕಪಾಲಕುಂಡಲಧಾರಿಯೂ,

ರಾಕ್ಷಸೋ ಭೀಷಣವಪುಃ ಕಪಾಲಕೃತಕುಂಡಲಃ ।
ವಸಾರುಧಿರಲಿಪ್ತಾಂಗಃ ಶ್ಮಶ್ರುಲಃ ಪಿಂಗಲೋಚನಃ ॥ ೭೯ ॥
ರಾಕ್ಷಸ ಉವಾಚ :—
ಮಮ ದೃಗ್ಗೋಚರಂ ಯಾತೋ ವಿದ್ಯಾಧರಕುಮಾರಕ ।
ಅದ್ಯ ತ್ವಾಮನೇತಯಾ ಸಾರ್ಧಂ ಪ್ರೇಷಯಾಮಿ ಯಮಾಲಯಂ ॥ ೮೦ ॥
ಇತಿ ಶ್ರುತ್ವಾಽಥ ಸಾ ವಾಕ್ಯಂ ವ್ಯಾಘ್ರಾಽಽಘ್ರಾತಾ ಮೃಗೀಯಥಾ ।
ಚಕಂಪೇಽತೀವ ಸಂಭೀತಾ ಕದಲೀದಲವನ್ಮುಹುಃ ॥ ೮೧ ॥
ನಿಜಘಾನ ತ್ರಿಶೂಲೇನ ರಕ್ಷೋ ವಿದ್ಯಾಧರಂ ಚ ತಂ ।
ವಿದ್ಯಾಧರಕುಮಾರೋಽಪಿ ನಿತರಾಂ ಮಧುರಾಕೃತಿಃ ॥ ೮೨ ॥
ತದ್ಭೀಷಣತ್ರಿಶೂಲೇನ ಭಿನ್ನೋರಸ್ಕೋ ಮಹಾಬಲಃ ।
ಜಘಾನಮುಷ್ಟಿಘಾತೇನ ವಜ್ರಪಾತೋಪಮೇನ ತಂ ॥ ೮೩ ॥
ನರಮಾಂಸವಸಾಮತ್ತಂ ವಿದ್ಯುನ್ಮಾಲಿಸಮಾಹವೇ ।
ಚೂರ್ಣಿತೋ ಮುಷ್ಟಿಪಾತೇನ ಸೋಽಪತದ್ವಸುಧಾತಲೇ ॥ ೮೪ ॥
ರಾಕ್ಷಸೋ ಮೃತ್ಯುವಶಗೋ ವಜ್ರೇಣೇವ ಮಹೀಧರಃ ।
ವಿದ್ಯಾಧರೋಽಪಿ ತಚ್ಛೂಲಘಾತೇನ ವಿಕಲೀಕೃತಃ ॥ ೮೫ ॥
ಉವಾಚ ಗದ್ಗದಂ ವಾಕ್ಯಂ ವಿಘೂರ್ಣಿತವಿಲೋಚನಃ ।
ಪ್ರಿಯೇ ಮುಧಾ ಸಮಾನೀತಾ ಸುಶೀಲೇತ್ಯರ್ಧೋಕ್ತಿಮುಚ್ಚರನ್ ॥ ೮೬ ॥

---

ಶರೀರಕ್ಕೆ ಮೇದಸ್ಸು, ರಕ್ತಗಳನ್ನು ಹಚ್ಚಿಕೊಂಡಿರುವವನೂ, ಗಡ್ಡಮೀಸೆಗಳುಳ್ಳವನೂ, ಹಳದಿ ಕಣ್ಣುಗಳುಳ್ಳವನೂ ಆದ ವಿದ್ಯುನ್ಮಾಲಿಯೆಂಬ ರಾಕ್ಷಸನು ಬಂದನು.

೮೦. ರಾಕ್ಷಸನು ಹೇಳುತ್ತಾನೆ:—ವಿದ್ಯಾಧರ ಕುಮಾರ! ಈಗ ನನ್ನ ದೃಷ್ಟಿಗೆ ಗೋಚರನಾಗಿರುವೆಯಷ್ಟೆ? ನಿನ್ನನ್ನು ಈ ಕುಮಾರಿಯೊಡನೆಯೆ ಯಮಾಲಯಕ್ಕೆ ಕಳುಹಿಸುತ್ತೇನೆ.

೮೧. ಸುಶೀಲೆಯಾದರೊ ಆ ರಾಕ್ಷಸನ ಮಾತನ್ನು ಕೇಳಿ ಹುಲಿಯಿಂದ ಆಕ್ರಮಿಸಲ್ಪಟ್ಟ ಜಿಂಕೆಯಂತೆ ಅತ್ಯಂತವಾಗಿ ಭಯಗೊಂಡು ಬಾಳೆಯ ಎಲೆಯಂತೆ ನಡುಗಿದಳು.

೮೨–೮೭. ಆ ರಾಕ್ಷಸನು ತ್ರಿಶೂಲದಿಂದ ಆ ವಿದ್ಯಾಧರನನ್ನು ಹೊಡೆದನು. ಅತ್ಯಂತ ಸುಂದರನಾದ ವಿದ್ಯಾಧರನೂ ಅವನ ಭಯಂಕರ ತ್ರಿಶೂಲದಿಂದ ಸೀಳಿದ ಎದೆಯುಳ್ಳವನಾಗಿ ವಜ್ರದಂತಿರುವ ಮುಷ್ಟಿಯಿಂದ ನರಮಾಂಸ, ಮಜ್ಜೆಗಳಿಂದ ಮತ್ತನಾದ ಆ ರಾಕ್ಷಸನನ್ನು ಹೊಡೆದನು. ವಿದ್ಯಾಧರನ ಮುಷ್ಟಿಪ್ರಹಾರದಿಂದ ಪುಡಿಪುಡಿಯಾದ ಆ ರಾಕ್ಷಸನು ವಜ್ರಾಘಾತದಿಂದ ಬೆಟ್ಟವು ನೆಲಕ್ಕುರುಳುವಂತೆ

ಜಹೌ ಪ್ರಾಣಾನ್ರಣೇ ವೀರಸ್ತಾಂ ಪ್ರಿಯಾಂ ಪರಿತಃ ಸ್ಮರನ್ ॥ ೮೭ ॥
ಅನನ್ಯಪೂರ್ವಸಂಸ್ಪರ್ಶಸುಖಂ ಸಮನುಭೂಯ ಸಾ ।
ತಮೇವ ಚ ಪತಿಂ ಮತ್ವಾ ಚಕ್ರೇ ಶೋಕಾಗ್ನಿಸಾತ್ತನುಂ ॥ ೮೮ ॥
ಲಿಂಗತ್ರಯಶರೀರಿಣ್ಯಾಸ್ತಸ್ಯಾಃ ಸಾನ್ನಿಧ್ಯತಃ ಸ ಹಿ ।
ದಿವ್ಯಂ ವಪುಃ ಸಮಾಸಾದ್ಯ ರಾಕ್ಷಸಸ್ತ್ರಿದಿವಂ ಯಯೌ ॥ ೮೯ ॥
ರಣೇ ಪಣೀಕೃತಪ್ರಾಣೋ ವಿದ್ಯಾಧರಸುತೋಽಪಿ ಸಃ ।
ಅಂತೇ ಪ್ರಿಯಾಂ ಸ್ಮರನ್ಪ್ರಾಪ ಜನ್ಮ ಮಲಯಕೇತುತಃ ॥ ೯೦ ॥
ಧ್ಯಾಯಂತೀ ಸಾಽಪಿ ತಂ ಬಾಲಾ ವಿದ್ಯಾಧರಕುಮಾರಕಂ ।
ವಿರಹಾಽಗ್ನೌ ವಿಸೃಷ್ಟಾಽಸುಃ ಕರ್ಣಾಟೇ ಜನ್ಮಭಾಗಭೂತ್ ॥ ೯೧ ॥
ಸುತೋ ಮಲಯಕೇತೋಸ್ತಾಂ ಕಾಲೇನ ಪರಿಣೀತವಾನ್ ।
ಮಾಲ್ಯಕೇತುರನಂಗಶ್ರೀಃ ಪಿತ್ರಾ ದತ್ತಾಂ ಕಲಾವತೀಂ ॥ ೯೨ ॥
ಸಾಽಪಿ ಪ್ರಾಗ್ವಾಸನಾಯೋಗಾಲ್ಲಿಂಗಾರ್ಚನರತಾ ಸತೀ ।
ಹಿತ್ವಾ ಮಲಯಜಕ್ಷೋದಂ ವಿಭೂತಿಂ ಬಹ್ವಮಂಸ್ತ ವೈ ॥ ೯೩ ॥

---

ನೆಲದಮೇಲೆ ಬಿದ್ದು ಮಡಿದನು. ವಿದ್ಯಾಧರನೂ ರಾಕ್ಷಸನ ಶೂಲಪ್ರಹಾರದಿಂದ ವಿಕಲಾಂಗನಾಗಿ ಕಣ್ಣುಗಳನ್ನು ತಿರುಗಿಸುತ್ತ ಗದ್ಗದಧ್ವನಿಯಿಂದ, "ಸುಶಿ, ನಾನು ನಿನ್ನನ್ನು ವ್ಯರ್ಥವಾಗಿ ಕರೆತಂದೆನು" ಎಂದು ಅರ್ಧಮಾತನ್ನು ಆಡುತ್ತ ಅವಳನ್ನೇ ಸ್ಮರಿಸುತ್ತ ಪ್ರಾಣಬಿಟ್ಟನು.

೮೮. ಆ ಸುಶೀಲೆಯು ಆ ವಿದ್ಯಾಧರನ ಸ್ಪರ್ಶದಿಂದ ಸುಖವನ್ನು ಅನುಭವಿಸಿ ಮೊದಲನೆಯವನಾದ ಅವನನ್ನೇ ಪತಿಯನ್ನಾಗಿ ಭಾವಿಸಿ ಶರೀರವನ್ನು ಶೋಕದಿಂದ ಅಗ್ನಿಗೆ ಅಧೀನವನ್ನಾಗಿ ಮಾಡಿದಳು.

೮೯. ಲಿಂಗತ್ರಯರೂಪವಾದ ಶರೀರವುಳ್ಳ ಅವಳ ಸಾನ್ನಿಧ್ಯದಿಂದ ರಾಕ್ಷಸನು ದಿವ್ಯಶರೀರವನ್ನು ಹೊಂದಿ ದೇವಲೋಕಕ್ಕೆ ಹೋದನು.

೯೦. ಯುದ್ಧದಲ್ಲಿ ಮರಣಕಾಲದಲ್ಲಿ ಪ್ರಿಯೆಯನ್ನು ಸ್ಮರಿಸುತ್ತ ಮಡಿದ ಆ ವಿದ್ಯಾಧರನೂ ಮಲಯಕೇತುವಿನ ತನಯನಾಗಿ ಜನಿಸಿದನು.

೯೧. ಆ ವಿದ್ಯಾಧರಕುಮಾರನನ್ನು ಧ್ಯಾನಿಸುತ್ತ ವಿರಹಾಗ್ನಿಯಲ್ಲಿ ಪ್ರಾಣವನ್ನು ತ್ಯಜಿಸಿದ ಸುಶೀಲೆಯೂ ಕರ್ಣಾಟದೇಶದಲ್ಲಿ ಜನ್ಮವನ್ನು ತಾಳಿದಳು.

೯೨. ಮಲಯಕೇತುವಿನ ಮಗನಾದ ಸುಂದರನಾದ ಆ ವಿದ್ಯಾಧರನು, ತಂದೆಯು ಮದುವೆಮಾಡಿಕೊಟ್ಟ ಕಲಾವತಿಯನ್ನು ಪತ್ನಿಯನ್ನಾಗಿ ಪಡೆದನು.

೯೩. ಕಲಾವತಿಯಾದರೊ ಹಿಂದಿನಜನ್ಮದ ವಾಸನಾವಶದಿಂದ ಲಿಂಗಾರ್ಚನೆಯಲ್ಲಿ ಆಸಕ್ತಳಾಗಿ, ಗಂಧವನ್ನು ತ್ಯಜಿಸಿ ವಿಭೂತಿಯನ್ನು ಹಚ್ಚಿಕೊಳ್ಳಲಾರಂಭಿಸಿದಳು.

ಮುಕ್ತಾವೈಡೂರ್ಯಮಾಣಿಕ್ಯಪುಷ್ಪರಾಗೇಭ್ಯ ಏವ ಸಾ ।
ಮೇನೇ ರುದ್ರಾಕ್ಷನೇಪಥ್ಯಮನರ್ಘ್ಯಂ ಗರ್ಭಸುಂದರೀ ॥ ೯೪ ॥
ಕಲಾವತೀ ಮಾಲ್ಯಕೇತುಂ ಪತಿಂ ಪ್ರಾಪ್ಯ ಪತಿವ್ರತಾ ।
ಅಪತ್ಯತ್ರಿತಯಂ ಲೇಭೇ ದಿವ್ಯಭೋಗಸಮೃದ್ಧಿಭಾಕ್ ॥ ೯೫ ॥
ಏಕದಾ ಕಶ್ಚಿದೌದೀಚ್ಯೋ ಮಾಲ್ಯಕೇತುಂ ನರೇಶ್ವರಂ ।
ಚಿತ್ರಕೃಚ್ಚಿತ್ರಪಟಿಕಾಂ ಚಿತ್ರಾಂ ದರ್ಶಿತವಾನಥ ॥ ೯೬ ॥
ತಾಂ ತು ಚಿತ್ರಪಟೀಂ ರಾಜಾ ಕಲಾವತ್ಯೈ ಸಮರ್ಪಯತ್ ।
ಸಾಥ ಚಿತ್ರಪಟೀಂ ರಮ್ಯಾಂ ಸಂಪ್ರಹೃಷ್ಟತನೂರುಹಾ ॥ ೯೭ ॥
ಮುಹುರ್ಮುಹುಃ ಪ್ರಪಶ್ಯಂತೀ ರಹಸಿ ಪ್ರಾಣದೇವತಾಂ ।
ವಿಸಸ್ಮಾರ ಸ್ವಮಪಿ ಚ ಸಮಾಧಿಸ್ಥೇವ ಯೋಗಿನೀ ॥ ೯೮ ॥
ಕ್ಷಣಮುನ್ಮೀಲ್ಯ ನಯನೇ ಕೃತ್ವಾ ನೇತ್ರಾತಿಥಿಂ ಪಟೀಂ ।
ತರ್ಜನ್ಯಗ್ರಮಥೋತ್ಕ್ಷಿಪ್ಯ ಸ್ವಾತ್ಮಾನಂ ಸಮಬೋಧಯತ್ ॥ ೯೯ ॥
ಸಂಭೇದೋಽಯಮಸೇ ರಮ್ಯ ಉಪಲೋಲಾರ್ಕಮಗ್ರತಃ ।
ಉಪಶ್ರೀ ಕೇಶವಪದಂ ವರಣೈಷಾ ಸರಿದ್ವರಾ ॥ ೧೦೦ ॥

---

೯೪. ಹುಟ್ಟಿದ ಮೊದಲ್ಗೊಂಡು ಸುಂದರಿಯಾದ ಅವಳು ಮುತ್ತು, ವೈಡೂರ್ಯ, ಮಾಣಿಕ್ಯ, ಪುಷ್ಪರಾಗ ಮಣಿಗಳಿಗಿಂತಲೂ ರುದ್ರಾಕ್ಷಧಾರಣೆಯೆ ಅಮೂಲ್ಯವಾದುದೆಂದು ಭಾವಿಸಿದಳು.

೯೫. ದಿವ್ಯಭೋಗಗಳಸಮೃದ್ಧಿಯನ್ನಾಂತ ಸಾಧ್ವಿಯಾದ ಆ ಕಲಾವತಿಯು ಮಾಲ್ಯಕೇತುವನ್ನು ಪತಿಯನ್ನಾಗಿ ಪಡೆದಮೇಲೆ ಮೂರು ಮಕ್ಕಳನ್ನು ಪಡೆದಳು.

೯೬. ಒಂದಾನೊಂದು ದಿನ ಉತ್ತರದೇಶದ ಒಬ್ಬ ಚಿತ್ರಕಾರನು ಮಾಲ್ಯಕೇತುರಾಜನೆಡೆಗೆ ಬಂದು ಆಶ್ಚರ್ಯಕರವಾದ ಒಂದು ಚಿತ್ರಪಟವನ್ನು ತೋರಿಸಿದನು.

೯೭–೯೮. ದೊರೆಯು ಆ ಚಿತ್ರಪಟವನ್ನು ಕಲಾವತಿಗೆ ಕೊಡಲು ಅವಳು ರಮ್ಯವಾದ ಆ ಚಿತ್ರಪಟವನ್ನು ರಹಸ್ಯವಾಗಿ ನೋಡುತ್ತ ರೋಮಾಂಚಗೊಂಡವಳಾಗಿ ಸಮಾಧಿಮಗ್ನಳಾದ ಯೋಗಿನಿಯಂತೆ ಪತಿಯನ್ನೂ, ತನ್ನನ್ನೂ ಮರೆತಳು.

೯೯. ಸ್ವಲ್ಪಹೊತ್ತಿನಲ್ಲಿಯೆ ಕಣ್ಣುಗಳನ್ನು ತೆರೆದು ಆ ಚಿತ್ರಪಟವನ್ನು ನೋಡಿ ತರ್ಜನೀಬೆರಳಿನ ಕೊನೆಯನ್ನು ಮೇಲಕ್ಕೆತ್ತಿ ತನ್ನನ್ನು ತಾನರಿತಳು.

೧೦೦. "ಇಲ್ಲಿ ಲೋಲಾರ್ಕನ ಬಳಿ ಅಸಿಸಂಭೇಧತೀರ್ಥವೂ, ಕೇಶವನ ಸಮಿಪಪದಲ್ಲಿ ವರಣಾನದಿಯೂ ಇರುವುದು.

ಸ್ವರ್ಗೇ ಪ್ರಾರ್ಥಿತಸಂಸ್ಪರ್ಶಾ ಸೈಷಾ ಸ್ವರ್ಗತರಂಗಿಣೀ ।
ಉದಗ್ವಹಾಽಭಿಲಷ್ಯಂತಿ ಯಾಂ ದಿವ್ಯೋದ್ಯುಸದಃ ಸದಾ ॥ ೧೦೧ ॥
ಅಲಕ್ಷ್ಯ ಮೋಕ್ಷಲಕ್ಷ್ಮೀರ್ಯಾ ವೇದಾಂತೇ ಪರಿಪಠ್ಯತೇ ।
ವಿಮುಕ್ತಯೇ ಸತಾಂ ಸೈಷಾ ಶ್ರೀಮತೀ ಮಣಿಕರ್ಣಿಕಾ ॥ ೧೦೨ ॥
ಮರಣಂ ಮಂಗಲಂ ಯತ್ರ ಸಫಲಂ ಯತ್ರ ಜೀವಿತಂ ।
ಸ್ವರ್ಗಸ್ತೃಣಾಯತೇ ಯತ್ರ ಸೈಷಾ ಶ್ರೀಮಣಿಕರ್ಣಿಕಾ ॥ ೧೦೩ ॥
ಯತ್ರ ಸಂಪತ್ತಿಸಂಭಾರಾನ್ವಿಶ್ರಾಣ್ಯ ನಿಧನೇಚ್ಛಯಾ ।
ಯತಿವ್ರತಂ ಸಮಾಲಂಬ್ಯ ತಿಷ್ಠತೇ ಮೂಲಕಂದಭುಕ್ ॥ ೧೦೪ ॥
ಯತ್ರ ತ್ರಿಮಾರ್ಗಗಾಂ ಗಂಗಾಂ ಮಾರ್ಗಮಾಣೋ ಮೃತಾನ್ತರಃ ।
ಸ್ವಮೌಲಿಬಾಲಚಂದ್ರೇಣ ಮುಕ್ತಿಮಾರ್ಗಂ ಪ್ರದರ್ಶಯನ್ ॥ ೧೦೫ ॥
ಸಂಸಾರಂ ಯತ್ರ ದುರ್ವಾರಂ ಪ್ರತಾರಯತಿ ಶಂಕರಃ ।
ಮೃತಾ ಅಪ್ಯಮೃತಾಯಂತೇ ಕರ್ಣಧಾರಾದ್ಯತೋ ನರಾಃ ॥ ೧೦೬ ॥
ಸಂಸಾರಾಸಾರಪದವೀ ಯತ್ರ ಸ್ಯಾದದವೀಯಸೀ ।
ಕರ್ಣೇ ಜಪಾನ್ಮಹೇಶಾನಾತ್ಕರುಣಾವರುಣಾಲಯಾತ್ ॥ ೧೦೭ ॥

---

೧೦೧. ಇದು ಸ್ವರ್ಗದಲ್ಲಿ ಪ್ರಸಿದ್ಧವಾಗಿ ಉತ್ತರದಿಕ್ಕಿಗೆ ಹರಿಯುತ್ತಿರುವ ಮಂದಾಕಿನಿಯು. ಇದನ್ನು ಯಾವಾಗಲೂ ದೇವತೆಗಳು ಅಪೇಕ್ಷಿಸುತ್ತಾರೆ.

೧೦೨. ವೇದಾನ್ತಪ್ರತಿಪಾದ್ಯವಾದ ಅಲಕ್ಷ್ಯಮೋಕ್ಷಸಂಪತ್ತನ್ನು ಸಜ್ಜನರಿಗೆ ಕೊಡಲೋಸುಗವೇ ಮಣಿಕರ್ಣಿಕೆಯು ಇಲ್ಲಿರುವುದು.

೧೦೩. ಎಲ್ಲಿ ಮರಣವನ್ನು ಮಂಗಳಕರವಾದುದನ್ನಾಗಿಯೂ, ಜೀವಿತವನ್ನು ಸಫಲವನ್ನಾಗಿಯೂ, ಸ್ವರ್ಗವನ್ನು ತೃಣಕ್ಕೆ ಸಮಾನವನ್ನಾಗಿಯೂ ಭಾವಿಸುವರೊ, ಅದೇ ಈ ಮಣಿಕರ್ಣಿಕೆಯು.

೧೦೪. ಇಲ್ಲಿಯೇ ಪುಣ್ಯವಂತರು ಮರಣೇಚ್ಛೆಯಿಂದ ಸಂಪತ್ತುಗಳನ್ನು ದಾನಮಾಡಿ ಸನ್ನ್ಯಾಸವ್ರತವನ್ನಾಶ್ರಯಿಸಿ ಗೆಡ್ಡೆಗೆಣಸುಗಳನ್ನು ತಿಂದು ಜೀವಿಸುತ್ತಿರುವರು.

೧೦೫–೧೦೬. ಇಲ್ಲಿ ತ್ರಿಮಾರ್ಗಗಳಿಂದ ಹರಿಯುತ್ತಿರುವ ಗಂಗೆಯನ್ನು ಹುಡುಕುತ್ತ ಮೃತರಾದವರಿಗೆ ಶಂಕರನು ತನ್ನ ಮಸ್ತಕದ ಬಾಲಚಂದ್ರನಿಂದ ಮುಕ್ತಿಮಾರ್ಗವನ್ನು ತೋರಿಸಿ ಸಂಸಾರದಿಂದ ದಾಟಿಸುವನು. ನಾವಿಕನಂತಿರುವ ಆ ಶಂಕರನಿಂದ ಇಲ್ಲಿ ಮೃತರಾದವರು ಮೋಕ್ಷವನ್ನು ಪಡೆಯುವರು.

೧೦೭. ಮಾರ್ಗಸೂಚಕನೂ, ಕರುಣಾಸಮುದ್ರನೂ ಆದ ಮಹೇಶ್ವರನಿಂದ ಸಂಸಾರವೆಂಬ ಸಾಗರವಿಲ್ಲದ ದಾರಿಯು ಇಲ್ಲಿ ಹತ್ತಿರವಾಗಿರುವುದು.

ಅನೇಕಭವಸಂಭೂತಪ್ರಭೂತಸುಕೃತೈರ್ನರಾಃ ।
ಕರ್ಣೇಜಪಂ ಭವಂ ಯತ್ರ ಲಭಂತೇ ತೇ ಭವಾಽಪಹಂ ॥ ೧೦೮ ॥
ಸ್ವೀಕೃತ್ಯ ಕ್ಷೇತ್ರಸನ್ನ್ಯಾಸಂ ಯದ್ಬಲೇನ ಮಹಾಧಿಯಃ ।
ತೃಣಂ ಕೃತಾಂತಂ ಮನ್ಯಂತೇ ಸೇಯಂ ಶ್ರೀಮಣಿಕರ್ಣಿಕಾ ॥ ೧೦೯ ॥
ತೃಣೀಕೃತ್ಯ ನಿಜಂ ದೇಹಂ ಯತ್ರ ರಾಜರ್ಷಿಸತ್ತಮಃ ।
ಹರಿಶ್ಚಂದ್ರಃ ಸಪತ್ನೀಕೋ ವ್ಯಕ್ರೀಣಾದ್ಭೂರಿಯಂ ಹಿ ಸಾ ॥ ೧೧೦ ॥
ಅಭಿಲಷ್ಯಂತಿ ಯತ್ರತ್ಯಮಪಿ ವೈಕುಂಠವಾಸಿನಃ ।
ಸೈಕತಂ ಮೃದುಲಂ ತಲ್ಪಂ ಸೈಷಾ ಶ್ರೀ ಮಣಿಕರ್ಣಿಕಾ ॥ ೧೧೧ ॥
ಅನೇಕಜನ್ಮಜನಿತಕರ್ಮಸೂತ್ರನಿಯಂತ್ರಣಂ ।
ಉನ್ಮುಚ್ಯ ಯತ್ರ ಮುಕ್ತಾಃ ಸ್ಯುಃ ಸೈಷಾ ಶ್ರೀ ಮಣಿಕರ್ಣಿಕಾ ॥ ೧೧೨ ॥
ಸತ್ಯಲೋಕೇಽಪಿ ಯೇ ಲೋಕಾಸ್ತೇಽರ್ಥಯಂತಿ ನಿರಂತರಂ ।
ಯಾಮಹೋ ದೀರ್ಘನಿದ್ರಾಯೈ ಸೇಯಂ ಶ್ರೀ ಮಣಿಕರ್ಣಿಕಾ ॥ ೧೧೩ ॥
ಅಯಂ ಹಿ ಸ ಕುಲಸ್ತಂಭೋ ಯತ್ರ ಶ್ರೀ ಕಾಲಭೈರವಃ ।
ಕ್ಷೇತ್ರಪಾಪಕೃತಃ ಶಾಸ್ತಿ ದರ್ಶಯಂಸ್ತೀವ್ರಯಾತನಾಂ ॥ ೧೧೪ ॥
ಅನ್ಯತ್ರ ವಿಹಿತಂ ಪಾಪಂ ನಶ್ಯೇತ್ಕಾಶೀನಿರೀಕ್ಷಣಾತ್ ।
ಕಾಶ್ಯಾಂ ಕೃತಾನಾಂ ಪಾಪಾನಾಂ ದಾರುಣೇಯಂ ತು ಯಾತನಾ॥ ೧೧೫ ॥

---

೧೦೮–೧೦೯. ಇಲ್ಲಿ ಮಾನವರು ಅನೇಕ ಸಂಸಾರದಿಂದುಂಟಾದ ಪುಣ್ಯಗಳಿಂದ ಸಂಸಾರನಾಶಕನಾದ ಮಹೇಶನನ್ನು ಮೋಕ್ಷಮಾರ್ಗಸೂಚಕನನ್ನಾಗಿ ಪಡೆಯುವರು. ಇಲ್ಲಿ ಪ್ರಾಜ್ಞರು ಕ್ಷೇತ್ರಸನ್ನ್ಯಾಸವನ್ನು ಸ್ವೀಕರಿಸಿ ಅದರ ಬಲದಿಂದ ಯಮನನ್ನು ತೃಣಕ್ಕೆ ಸಮಾನನನ್ನಾಗಿ ಭಾವಿಸುವರು. ಇದು ಅಂಥ ಮಣಿಕರ್ಣಿಕೆಯು.

೧೧೦. ಹರಿಶ್ಚಂದ್ರನೆಂಬ ರಾಜರ್ಷಿಯು ತನ್ನ ಶರೀರವನ್ನು ಹುಲ್ಲಿಗೆ ಸಮಾನವನ್ನಾಗಿ ಭಾವಿಸಿ ಪತ್ನಿಯೊಡನೆ ಅದನ್ನು ಮಾರಿದ ಭೂಮಿಯೇ ಇದು.

೧೧೧. ವೈಕುಂಠವಾಸಿಗಳೂ ಇಲ್ಲಿರುವ ಮೃದುವಾದ ಮರಳಿನ ಹಾಸಿಗೆಯನ್ನು ಅಪೇಕ್ಷಿಸುವರು ; ಇದೇ ಆ ಮಣಿಕರ್ಣಿಕೆಯು.

೧೧೨. ಮಾನವರು ಅನೇಕ ಜನ್ಮಗಳಲ್ಲಿ ಸಗಿದ ಕರ್ಮಸೂತ್ರಬಂಧನವನ್ನು ಬಿಡಿಸಿಕೊಂಡು ಇಲ್ಲಿಯೆ ಮುಕ್ತರಾಗುವ ಮಣಿಕರ್ಣಿಕೆಯಿದು.

೧೧೩. ಯಾವುದನ್ನು ಸತ್ಯಲೋಕದಲ್ಲಿ ವಾಸಿಸುವ ಜನರು ಯಾವಾಗಲೂ ಮರಣಕ್ಕಾಗಿ ಪ್ರಾರ್ಥಿಸುವರೊ ಅದೇ ಈ ಮಣಿಕರ್ಣಿಕೆಯು.

೧೧೪. ಎಲ್ಲಿ ಯಾವನು ಕ್ಷೇತ್ರಪಾಪಿಗಳನ್ನು ತೀವ್ರಪೀಡೆಯನ್ನೆಸಗಿ ಶಿಕ್ಷಿಸುವನೊ, ಆ ಕಾಲಭೈರವನು ಇವನೇ!

೧೧೫. ಇತರ ಕಡೆಗಳಲ್ಲಿ ಮಾಡಿದ ಪಾಪವು ಕಾಶಿಯನ್ನು ನೋಡುವುದ

ಕಪಾಲಮೋಚನಂ ತೀರ್ಥಮೇತತ್ತದಪಿ ಪಾವನಂ ।
ಕಪಾಲಂ ಪತಿತಂ ಯತ್ರ ವಿಧೇರ್ಭೈರವಪಾಣಿತಃ ॥ ೧೧೬ ॥
ಋಣತ್ರಯಾದ್ವಿಮುಚ್ಯಂತೇ ಯತ್ರ ಸ್ನಾತಾ ನರೋತ್ತಮಾಃ ।
ತೀರ್ಥಂ ವಿಶುದ್ಧಿಜನಕಂ ತದೇತದೃಣಮೋಚನಂ ॥ ೧೧೭ ॥
ಪ್ರಣವಾಖ್ಯಂ ಪರಂ ಬ್ರಹ್ಮ ಯತ್ರ ನಿತ್ಯಂ ಪ್ರಕಾಶತೇ ।
ಸ ಪಂಚಾಯತನೋಪೇತ ಓಂಕಾರೇಶೋಽಯಮದ್ಭುತಂ ॥ ೧೧೮ ॥
ಅಶ್ಚ ಉಶ್ಚ ಮಕಾರಶ್ಚ ನಾದೋ ಬಿಂದುಶ್ಚ ಪಂಚಮಃ ।
ಪಂಚಾತ್ಮಕಂ ಪರಂ ಬ್ರಹ್ಮ ಯತ್ರ ನಿತ್ಯಂ ಪ್ರಕಾಶತೇ ॥ ೧೧೯ ॥
ಏಷಾ ಮತ್ಸ್ಯೋದರೀ ರಮ್ಯಾ ಯತ್ಸ್ನಾತೋ ಮಾನವೋತ್ತಮಃ ।
ಮಾತುರ್ಜಾತೂದರದರೀಂ ನ ವಿಶೇದೇಷ ನಿಶ್ಚಯಃ ॥ ೧೨೦ ॥
ತ್ರಿಲೋಚನೋಽಯಂ ಭಗವಾನ್ಕುರ್ಯಾದೇವ ತ್ರಿಲೋಚನಂ ।
ನಿಜಭಕ್ತಂ ಕೃಪಾಯುಕ್ತಸ್ತ್ವಪಿ ದೇಶಾಂತರಸ್ಥಿತಂ ॥ ೧೨೧ ॥
ಅಸೌ ಕಾಮೇಶ್ವರೋ ದೇವೋ ಯಃ ಕಾಮಾನ್ಪೂರಯೇತ್ಸತಾಂ ।
ದುರ್ವಾಸಾ ಅಪಿ ಯತ್ರಾಪ ನಿಜಕಾಮಮಹೋದಯಂ ॥ ೧೨೨ ॥

---

ರಿಂದ ಪರಿಹಾರವಾಗುವುದು. ಕಾಶಿಯಲ್ಲಿ ಮಾಡಿದ ಪಾಪಗಳಿಗೆ ಈ ಕಠಿನ ಯಾತನೆಯೂ ಸಂಭವಿಸುವುದು.

೧೧೬. ಭೈರವನ ಕೈಯಿಂದ ಬ್ರಹ್ಮನ ಕಪಾಲವು ಬಿದ್ದ ಪಾವನವಾದ ಕಪಾಲಮೋಚನತೀರ್ಥವು ಇದೇ!

೧೧೭. ಇಲ್ಲಿ ಮಿಂದ ನರನು ತ್ರಿವಿಧಋಣಗಳಿಂದ ಮುಕ್ತನಾಗುವನು. ಇದು ವಿಶುದ್ಧಿಯನ್ನುಂಟುಮಾಡುವ ಆ ಋಣಮೋಚನತೀರ್ಥವು.

೧೧೮. ಇಲ್ಲಿ ಪ್ರಣವಪ್ರತಿಪಾದ್ಯನಾದ ಪರಬ್ರಹ್ಮನು ಯಾವಾಗಲೂ ವಿರಾಜಿಸುತ್ತಿರುವನು. ಪಂಚಾಯತನಗಳಿಂದ ಕೂಡಿದವನೂ, ಆಶ್ಚರ್ಯಕರನೂ ಆದ ಓಂಕಾರೇಶನು ಇವನೇ!

೧೧೯. ಇಲ್ಲಿ ಅಕಾರ, ಉಕಾರ, ಮಕಾರ, ನಾದ, ಬಿಂದುಗಳೆಂಬ ಐದು ರೂಪಗಳುಳ್ಳ ಪರಬ್ರಹ್ಮನು ಯಾವಾಗಲೂ ವಿರಾಜಿಸುವನು.

೧೨೦. ಇದು ಮನೋಹರವಾದ ಮತ್ಸ್ಯೋದರಿಯು. ಇಲ್ಲಿ ಮಿಂದ ಮಾನವೋತ್ತಮನು ಯಾವಾಗಲೂ ತಾಯಿಯ ಜಠರಗುಹೆಯನ್ನು ಪ್ರವೇಶಿಸುವುದಿಲ್ಲ. ಇದು ನಿಶ್ಚಯವು.

೧೨೧. ತ್ರಿಲೋಚನನಾದ ಈ ಮಹೇಶ್ವರನು ದಯೆಯಿಂದ ತನ್ನ ಭಕ್ತರು ದೇಶಾಂತರದಲ್ಲಿದ್ದರೂ ಅವರನ್ನು ತ್ರಿಲೋಚನನನ್ನಾಗಿಸುವನು.

೧೨೨. ಇವನು ಸಜ್ಜನರ ಮನೋರಥವನ್ನು ಪೂರೈಸುವ ಕಾಮೇಶ್ವರನು. ಇಲ್ಲಿ ದುರ್ವಾಸನು ತನ್ನ ಅಭೀಪ್ಸಿತವನ್ನು ಹೊಂದಿರುವನು.

ಸ್ವಯಂ ಲೀನೋ ಮಹೇಶೋಽತ್ರ ಭಕ್ತಕಾಮಸಮೃದ್ಧಯೇ ।
ತಸ್ಮಾತ್ಸ್ವರ್ಲೀನಸಂಜ್ಞಾಸ್ಯ ದೇವದೇವಸ್ಯ ಶೂಲಿನಃ ॥ ೧೨೩ ॥
ವಾರಾಣಸ್ಯಾಂ ಮಹಾದೇವೋ ಯಃ ಪುರಾಣೇಷು ಪಠ್ಯತೇ ।
ಕ್ಷೇತ್ರಾಭಿಮಾನೀ ಭಗವಾಂಸ್ತತ್ಪ್ರಸಾದೋಽಯಮುದ್ಭುತಃ ॥ ೧೨೪ ॥
ಅಸೌ ಸ್ಕಂದೇಶ್ವರೋ ದೇವಃ ಶ್ರದ್ಧಯಾ ಯದ್ವಿಲೋಕನಾತ್ ।
ಆಜನ್ಮಬ್ರಹ್ಮಚರ್ಯಸ್ಯ ಫಲಮಾಪ್ನೋತಿ ಮಾನವಃ ॥ ೧೨೫ ॥
ವಿನಾಯಕೇಶ್ವರಶ್ಚಾಯಂ ಸರ್ವಸಿದ್ಧಿಪ್ರದಾಯಕಃ ।
ಯತ್ಸೇವಯಾ ಪ್ರಣಶ್ಯಂತಿ ನೃಣಾಂ ಸರ್ವೇ ವಿನಾಯಕಾಃ ॥ ೧೨೬ ॥
ಇಯಂ ವಾರಾಣಸೀ ದೇವೀ ಸಾಕ್ಷಾನ್ಮೂರ್ತಿಮಯೀ ಶುಭಾ ।
ಯಸ್ಯಾ ವಿಲೋಕನಾತ್ಪುಂಸಾಂ ಭೂಯೋ ನೋ ಗರ್ಭಸಂಭವಃ ॥ ೧೨೭ ॥
ಪಾರ್ವತೀಶ್ವರಲಿಂಗಸ್ಯ ಮಹದಾಯತನಂ ತ್ವಿದಂ ।
ಯತ್ರ ನಿತ್ಯಂ ಮಹೇಶಾನೋ ಗೌರ್ಯಾ ಸಹ ವಿಮುಕ್ತಿದಃ ॥ ೧೨೮ ॥
ಏಷ ಭೃಂಗೀಶ್ವರಃ ಶ್ರೀಮಾನ್ ಮಹಾಪಾತಕನಾಶನಃ ।
ಜೀವನ್ಮುಕ್ತೋಽಭವದ್ಭೃಂಗೀ ಯಸ್ಯ ಲಿಂಗಸ್ಯ ಸೇವಯಾ ॥ ೧೨೯ ॥
ಚತುರ್ವೇದೇಶ್ವರಶ್ಚೈಷ ಚತುರ್ವೇದಧರೋ ವಿಧಿಃ ।
ಲಭೇದ್ಯದ್ವೀಕ್ಷಣಾದ್ವಿಪ್ರೋ ವೇದಾಽಧ್ಯಯನಜಂ ಫಲಂ ॥ ೧೩೦ ॥

---

೧೨೩. ಇಲ್ಲಿ ಮಹೇಶ್ವರನು ಭಕ್ತರ ಇಷ್ಟಾರ್ಥಸಿದ್ಧಿಗಾಗಿ ಅಡಗಿಕೊಂಡಿರುವನು. ಆದ್ದರಿಂದ ಶಂಕರನಿಗೆ ಸ್ವರ್ಲೀನ ಎಂದು ಹೆಸರಾಗಿರುವುದು.

೧೨೪. ಕಾಶೀಕ್ಷೇತ್ರಕ್ಕೆ ಮಹಾದೇವನು ಅಭಿಮಾನಿಯೆಂದು ಪುರಾಣದಲ್ಲಿ ಪ್ರತಿಪಾದಿತವಾಗಿರುವುದು. ಇವನ ಅನುಗ್ರಹವು ಅದ್ಭುತವಾದುದು.

೧೨೫. ಇವನು ಸ್ಕಂದೇಶ್ವರನು. ಶ್ರದ್ಧೆಯಿಂದ ಇವನನ್ನು ದರ್ಶನಮಾಡುವುದರಿಂದ ಮಾನವನು ಆಜನ್ಮಬ್ರಹ್ಮಚರ್ಯದ ಫಲವನ್ನು ಪಡೆಯುವನು.

೧೨೬. ಇವನು ಸಕಲಸಿದ್ಧಿಯನ್ನೀಯುವ ವಿನಾಯಕೇಶ್ವರನು. ಇವನ ಸೇವೆಯಿಂದ ಮಾನವರ ಸಕಲವಿಘ್ನಕಾರಣಗಳೂ ನಾಶವಾಗುವುವು.

೧೨೭. ಇವಳು ದೇಹವನ್ನು ಧರಿಸಿದ ಮಂಗಳಕರಳಾದ ವಾರಾಣಸೀ ದೇವಿಯು. ಇವಳನ್ನು ನೋಡುವುದರಿಂದ ಮಾನವರಿಗೆ ಮರಳಿ ಜನ್ಮವಿರುವುದಿಲ್ಲ.

೧೨೮. ಇದು ಪಾರ್ವತೀಶ್ವರಲಿಂಗದ ಆಲಯವು. ಇಲ್ಲಿ ಯಾವಾಗಲೂ ಶಂಕರನು ಗೌರಿಯೊಡನೆ ಮುಕ್ತಿಯನ್ನು ಕೊಡುವನು.

೧೨೯. ಇವನು ಮಹಾಪಾತಕವನ್ನು ನಿವಾರಿಸುವ ಭೃಂಗೀಶ್ವರನು. ಈ ಲಿಂಗದ ಸೇವೆಯಿಂದ ಭೃಂಗಿಯು ಜೀವನ್ಮುಕ್ತನಾದನು.

೧೩೦. ಇವನು ನಾಲ್ಕು ವೇದಗಳನ್ನು ಧರಿಸಿದ ಚತುರ್ವೇದೇಶ್ವರನೆಂಬ

ಯಜ್ಞೈಃ ಸಂಸ್ಥಾಪಿತಂ ಚೈತಲ್ಲಿಂಗಂ ಯಜ್ಞೇಶ್ವರಾಽಭಿಧಂ ।
ಯದರ್ಚನಾಲ್ಲಭೇನ್ಮರ್ತ್ಯಃ ಸರ್ವಯಾಗಫಲಂ ಮಹತ್ ॥ ೧೩೧ ॥
ಪುರಾಣೇಶ್ವರ ನಾಮ್ನೈತಲ್ಲಿಂಗಮಷ್ಟಾದಶಾಂಗುಲಂ ।
ಅಷ್ಟಾದಶಾನಾಂ ವಿದ್ಯಾನಾಂ ಸ್ಯಾದಾಧಾರೋ ಯದೀಕ್ಷಣಾತ್॥ ೧೩೨ ॥
ಧರ್ಮಶಾಸ್ತ್ರೇಶ್ವರಶ್ಚಾಽಯಂ ಸ್ಮೃತಿಭಿಶ್ಚ ಪ್ರತಿಷ್ಠಿತಃ ।
ಸ್ಮೃತ್ಯಧ್ಯಯನಜಂ ಪುಣ್ಯಂ ಯದ್ವಿಲೋಕನತೋ ಭವೇತ್ ॥ ೧೩೩ ॥
ಸಾರಸ್ವತಮಿದಂ ಲಿಂಗಂ ಸರ್ವಜಾಡ್ಯವಿನಾಶಕೃತ್ ।
ಸರ್ವತೀರ್ಥೇಶ್ವರಂ ಲಿಂಗಮೇತತ್ಸದ್ಯೋ ವಿಶುದ್ಧಿದಂ ॥ ೧೩೪ ॥
ಶೈಲೇಶ್ವರಸ್ಯ ಲಿಂಗಸ್ಯ ಮಂಡಪೋಽಯಂ ಮಹಾಽದ್ಭುತಃ ।
ಸರ್ವೇಷಾಂ ರತ್ನಜಾತಾನಾಂ ಯೋ ಬಿಭರ್ತಿ ಪರಾಂ ಶ್ರಿಯಂ ॥ ೧೩೫ ॥
ಸಪ್ತಸಾಗರಸಂಜ್ಞಂ ವೈ ಲಿಂಗಮೇತನ್ಮನೋಹರಂ ।
ಯದ್ವೀಕ್ಷಣಾಲ್ಲಭೇನ್ಮರ್ತ್ಯಃ ಸಪ್ತಾಽಬ್ಧಿಸ್ನಾನಜಂ ಫಲಂ ॥ ೧೩೬ ॥

---

ಬ್ರಹ್ಮನು. ಬ್ರಾಹ್ಮಣನು ಇವನ ದರ್ಶನದಿಂದ ವೇದಾಧ್ಯಯನದಿಂದುಂಟಾದ ಫಲವನ್ನು ಪಡೆಯುವನು.

೧೩೧. ಇದು ಯಜ್ಞಗಳು ಪ್ರತಿಷ್ಠೆಮಾಡಿದ ಯಜ್ಞೇಶ್ವರವೆಂಬ ಲಿಂಗವು. ಇದನ್ನು ಪೂಜಿಸುವುದರಿಂದ ಮಾನವನು ಸಕಲ ಯಾಗಗಳ ಫಲವನ್ನು ಪಡೆಯುವನು.

೧೩೨. ಇದು ಹದಿನೆಂಟು ಅಂಗುಲಗಳ ಉದ್ದದ ಪುರಾಣೇಶ್ವರವೆಂಬ ಲಿಂಗವು. ಇದನ್ನು ನೋಡುವುದರಿಂದ ಮಾನವನು ಹದಿನೆಂಟು ವಿದ್ಯೆಗಳಿಗೂ ಆಶ್ರಯನಾಗುವನು.

೧೩೩. ಇವನು ಸ್ಮೃತಿಗಳು ಪ್ರತಿಷ್ಠೆಮಾಡಿದ ಧರ್ಮಶಾಸ್ತ್ರೇಶ್ವರನು. ಇವನನ್ನು ನೋಡುವುದರಿಂದ ಸ್ಮೃತಿಗಳನ್ನು ಅಧ್ಯಯನಮಾಡಿದ ಪುಣ್ಯವು ಲಭಿಸುವುದು.

೧೩೪. ಇದು ಸಕಲಾಜ್ಞಾನವನ್ನು ನಿವಾರಿಸುವ ಸಾರಸ್ವತಲಿಂಗವು. ಇದು ಕೂಡಲೆ ಶುದ್ಧಿಯನ್ನುಂಟುಮಾಡುವ ಸರ್ವತೀರ್ಥೇಶ್ವರಲಿಂಗವು.

೧೩೫. ಇದು ಅತ್ಯಾಶ್ಚರ್ಯಕರವಾದ ಶೈಲೇಶ್ವರಲಿಂಗದ ಮಂಡಪವು. ಇದು ಸಮಸ್ತ ರತ್ನಗಳ ಸಮೂಹಗಳ ಉತ್ತಮ ಕಾಂತಿಯನ್ನು ಧರಿಸಿರುವುದು.

೧೩೬. ಇದು ಸಪ್ತಸಾಗರವೆಂದು ಹೆಸರುಳ್ಳ ಮನೋಹರವಾದ ಲಿಂಗವು. ಮಾನವನು ಇದನ್ನು ನೋಡುವುದರಿಂದ ಏಳು ಸಮುದ್ರಗಳಲ್ಲಿ ಮಿಂದ ಫಲವನ್ನು ಪಡೆಯುವನು.

ಅಸೌ ಮಂತ್ರೇಶ್ವರಃ ಶ್ರೀಮಾನ್ ಮಂತ್ರಜಾಪ್ಯಫಲಪ್ರದಃ ।
ಸಪ್ತಕೋಟಿಮಹಾಮಂತ್ರೈಃ ಸ್ಥಾಪಿತೋ ಯಃ ಪುರಾ ಯುಗೇ ॥ ೧೩೭ ॥
ತ್ರಿಪುರೇಶಸ್ಯ ಲಿಂಗಸ್ಯ ಪುರಃ ಕುಂಡಮಿದಂ ಮಹತ್ ।
ತ್ರಿಪುರೈಃ ಖಾನಿತಂ ಪೂರ್ವಂ ತ್ರಿಪುರಾಽರಿಪ್ರಿಯಂ ಪರಂ ॥ ೧೩೮ ॥
ಇದಂ ಬಾಣೇಶ್ವರಂ ಲಿಂಗಂ ಸಹಸ್ರಭುಜಪೂಜಿತಂ ।
ದ್ವಿಭುಜಸ್ಯಾಽಪಿ ಬಾಣಸ್ಯ ಸಹಸ್ರಭುಜಹೇತುಕಂ ॥ ೧೩೯ ॥
ವೈರೋಚನೇಶ್ವರಶ್ಚೈಷ ಪುರಃಪ್ರಹ್ಲಾದ ಕೇಶವಾತ್ ।
ಬಲಿಕೇಶವನಾಮಾಸಾವೇಷ ನಾರದಕೇಶವಃ ॥ ೧೪೦ ॥
ಆದಿಕೇಶವ ಪೂರ್ವೇಣ ತ್ವಯಮಾದಿತ್ಯಕೇಶವಃ ।
ಭೀಷ್ಮಕೇಶವ ನಾಮಾಽಸೌ ದತ್ತಾತ್ರೇಯೇಶ್ವರಸ್ತ್ವಯಂ ॥ ೧೪೧ ॥
ದತ್ತಾತ್ರೇಯೇಶ್ವರಾತ್ಪೂರ್ವಮೇಷ ಆದಿ ಗದಾಧರಃ ।
ಭೃಗುಕೇಶವನಾಮಾಸಾವೇಷ ವಾಮನಕೇಶವಃ ॥ ೧೪೨ ॥
ನರನಾರಾಯಣಾವೇತೌ ಯಜ್ಞವಾರಾಹಕೇಶವಃ ।
ವಿದಾರನಾರಸಿಂಹೋಽಯಂ ಗೋಪೀಗೋವಿಂದ ಏಷ ಹ ॥ ೧೪೩ ॥
ಏಷ ಲಕ್ಷ್ಮೀನೃಸಿಂಹಸ್ಯ ಪ್ರಾಸಾದೋ ರತ್ನಕೇತನಃ ।
ಯಸ್ಯ ಪ್ರಸಾದಾತ್ಪ್ರಹ್ಲಾದಃ ಪದಮೈಂದ್ರಮವಾಪ್ತವಾನ್ ॥ ೧೪೪ ॥

---

೧೩೭. ಇವನು ಮಂತ್ರಜಪದ ಫಲವನ್ನೀಯುವ ಮಂತ್ರೇಶ್ವರನು. ಹಿಂದಿನ ಯುಗದಲ್ಲಿ ಇವನನ್ನು ಏಳುಕೋಟಿ ಮಹಾಮಂತ್ರಗಳು ಪ್ರತಿಷ್ಠೆ ಮಾಡಿರುವುವು.

೧೩೮. ಹಿಂದೆ ತ್ರಿಪುರೇಶನಮುಂದೆ ತ್ರಿಪುರಗಳು ಶಂಕರಪ್ರಿಯವಾದ ಈ ಮಹಾಕುಂಡವನ್ನು ಪ್ರತಿಷ್ಠೆ ಮಾಡಿರುವುವು.

೧೩೯. ಇದು ಸಹಸ್ರಭುಜವುಳ್ಳ ಬಾಣನು ಪ್ರತಿಷ್ಠೆಮಾಡಿದ ಬಾಣೇಶ್ವರ ಲಿಂಗವು. ಇದು ದ್ವಿಭುಜನಾದ ಬಾಣನಿಗೆ ಸಹಸ್ರಭುಜಗಳನ್ನು ಕೊಟ್ಟಿರುವುದು.

೧೪೦. ಪ್ರಹ್ಲಾದಕೇಶವನ ಮುಂದಿರುವ ಇವನು ವೈರೋಚನೇಶ್ವರನು. ಇವನು ಬಲಿಕೇಶವನು. ಇವನೇ ನಾರದಕೇಶವನು.

೧೪೧. ಆದಿಕೇಶವನ ಮುಂದಿರುವ ಇವನು ಆದಿತ್ಯಕೇಶವನು. ಇವನು ಭೀಷ್ಮಕೇಶವನು. ಇವನೇ ದತ್ತಾತ್ರೇಯೇಶ್ವರನು.

೧೪೨. ದತ್ತಾತ್ರೇಯೇಶ್ವರನ ಮುಂದಿರುವ ಇವನು ಆದಿಗದಾಧರನು. ಇವನು ಭೃಗುಕೇಶವನು. ಇವನು ವಾಮನಕೇಶವನು.

೧೪೩. ಇವರು ನರನಾರಾಯಣರು. ಇವನು ಯಜ್ಞವರಾಹಕೇಶವನು. ಇವನು ವಿದಾರನಾರಸಿಂಹನು. ಇವನು ಗೋಪೀಗೋವಿಂದನು.

೧೪೪. ರತ್ನಧ್ವಜವುಳ್ಳ ಇದು ಲಕ್ಷ್ಮೀನೃಸಿಂಹನ ಆಲಯವು. ಈ ನೃಸಿಂಹನ ಅನುಗ್ರಹದಿಂದ ಪ್ರಹ್ಲಾದನು ಇಂದ್ರಪದವಿಯನ್ನು ಪಡೆದನು.

ಅಖರ್ವಸಿದ್ಧಿದಃ ಪುಂಸಾಮೇಷ ಖರ್ವವಿನಾಯಕಃ ।
ಶೇಷಮಾಧವನಾಮಾಽಸೌ ಶೇಷೇಣ ಸ್ಥಾಪಿತಃ ಪುರಾ ॥ ೧೪೫ ॥
ಯಸ್ಯ ಭಕ್ತಾ ನ ದಹ್ಯಂತೇ ತ್ವಪಿ ಸಂವರ್ತವಹ್ನಿನಾ ।
ಶಂಖಮಾಧವನಾಮಾಽಸೌ ಶಂಖಂ ಹತ್ವಾಽತ್ರ ಸಂಸ್ಥಿತಃ ॥ ೧೪೬ ॥
ಇದಂ ಸಾರಸ್ವತಂ ಸ್ರೋತಃ ಪರಂ ಬ್ರಹ್ಮರಸಾಯನಂ ।
ಸರಸ್ವತ್ಯಾ ಮಹಾನದ್ಯಾಃ ಸಂಗಮೋ ಯತ್ರ ಗಂಗಯಾ ॥ ೧೪೭ ॥
ಯತ್ರಾಪ್ಲುತಾ ನರಾ ಭೂಯಃ ಸಂಭವಂತಿ ನ ಭೂತಲೇ ।
ಶ್ರೀ ಬಿಂದುಮಾಧವಸ್ತ್ವೇಷ ಸಾಕ್ಷಾಲ್ಲಕ್ಷ್ಮೀಪತಿಃ ಪರಃ ॥ ೧೪೮ ॥
ಶ್ರದ್ಧಯಾಯಂ ನಮನ್ಮರ್ತ್ಯೋ ನವಸೇದ್ಗರ್ಭವೇಶ್ಮನಿ ।
ನ ದಾರಿದ್ರ್ಯಮವಾಪ್ನೋತಿ ವ್ಯಾಧಿಭಿರ್ನಾಽಭಿಭೂಯತೇ ॥ ೧೪೯ ॥
ಬಿಂದುಮಾಧವಭಕ್ತೋಯಸ್ತಂ ಯಮೋಽಪಿ ನಮಸ್ಯತಿ ।
ಪ್ರಣವಾತ್ಮಾ ಯ ಏಕೋಽಸ್ತಿ ನಾದಬಿಂದುಸ್ವರೂಪಧೃಕ್ ॥ ೧೫೦ ॥
ಅಮೂರ್ತಂ ಯತ್ಪರಂ ಬ್ರಹ್ಮ ಬಿಂದುಮಾಧವ ಏವ ಸಃ ।
ಏತತ್ಪಂಚನದಂ ತೀರ್ಥಂ ಪಂಚಬ್ರಹ್ಮಾತ್ಮಸಂಜ್ಞಕಂ ॥ ೧೫೧ ॥
ಯತ್ರ ಸ್ನಾತೋ ನ ಗೃಹ್ಣೀಯಾಚ್ಛರೀರಂ ಪಾಂಚಭೌತಿಕಂ ।
ಏಷಾ ಸಾ ಮಂಗಲಾ ಗೌರೀ ಕಾಶ್ಯಾಂ ಪರಮಮಂಗಲಂ ॥ ೧೫೨ ॥

---

೧೪೫. ಇವನು ಮಾನವರಿಗೆ ಸಂಪೂರ್ಣಸಿದ್ಧಿಯನ್ನೀಯುವ ಖರ್ವವಿನಾಯಕನು. ಇವನು ಹಿಂದೆ ಶೇಷನು ಸ್ಥಾಪಿಸಿರುವ ಶೇಷಮಾಧವನು.

೧೪೬. ಇವನು ಶಂಖನನ್ನು ಕೊಂದು ಇಲ್ಲಿ ನೆಲೆಸಿರುವ ಶಂಖಮಾಧವನು. ಇವನ ಭಕ್ತರು ಪ್ರಳಯಾಗ್ನಿಯಿಂದಲೂ ದಗ್ಧರಾಗುವುದಿಲ್ಲ.

೧೪೭. ಇದು ಬ್ರಹಾನಂದವನ್ನೀಯುವ ಸರಸ್ವತೀನದಿಯ ಪ್ರವಾಹವು. ಇಲ್ಲಿ ಸರಸ್ವತೀಮಹಾನದಿಗೆ ಗಂಗೆಯೊಡನೆ ಸಂಗಮವಾಗಿರುವುದು.

೧೪೮–೧೪೯. ಇಲ್ಲಿ ಮಿಂದ ಮಾನವರು ಮರಳಿ ಭೂಮಿಯಲ್ಲಿ ಜನಿಸುವುದಿಲ್ಲ. ಇವನು ಸಾಕ್ಷಾತ್ ಲಕ್ಷ್ಮೀಪತಿಯಾದ ಬಿಂದುಮಾಧವನು. ಇವನನ್ನು ಶ್ರದ್ಧೆಯಿಂದ ವಂದಿಸುವ ಮಾನವನು ಗರ್ಭವಾಸಮಾಡುವುದಿಲ್ಲ; ದಾರಿದ್ರ್ಯವನ್ನು ಹೊಂದುವುದಿಲ್ಲ; ವ್ಯಾಧಿಪೀಡಿತನಾಗುವುದಿಲ್ಲ.

೧೫೦–೧೫೨. ಈ ಬಿಂದುಮಾಧವನ ಭಕ್ತನನ್ನು ಯಮನೂ ವಂದಿಸುವನು. ನಾದ ಬಿಂದುಗಳ ಸ್ವರೂಪವನ್ನು ತಾಳಿರುವ ಪ್ರಣವರೂಪನಾದ ಪರಬ್ರಹ್ಮನೇ ಬಿಂದುಮಾಧವನು. ಇದು ಸದ್ಯೋಜಾತಾದಿ ಪಂಚಬ್ರಹ್ಮಸ್ವರೂಪವಾದ ಪಂಚನದತೀರ್ಥವು. ಇಲ್ಲಿ ಮಿಂದ ಮಾನವನು ಪಾಂಚಭೌತಿಕಶರೀರವನ್ನು ಸ್ವೀಕರಿಸುವುದಿಲ್ಲ. ಇವಳು ಮಂಗಳಗೌರಿಯು. ಇವಳ ಅನುಗ್ರಹದಿಂದ ಕಾಶಿ

ಯತ್ಪ್ರಸಾದಾದವಾಪ್ನೋತಿ ನರೋಽತ್ರ ಚ ಪರತ್ರ ಚ ।
ಮಯೂಖಾದಿತ್ಯ ಸಂಜ್ಞೋಽಯಂ ರಶ್ಮಿಮಾಲೀ ತಮೋಽಪಹಃ ॥ ೧೫೩ ॥
ಗಭಸ್ತೀಶೋ ಮಹಾಲಿಂಗಮೇತದ್ದಿವ್ಯಮಹಃಪ್ರದಂ ।
ಮೃಕಂಡುಸೂನುನಾಽಪ್ಯತ್ರ ತಪಸ್ತಪ್ತಂ ಪುರಾ ಮಹತ್ ॥ ೧೫೪ ॥
ಲಿಂಗಂ ಸಂಸ್ಥಾಪ್ಯ ಪರಮಂ ಸ್ವನಾಮ್ನಾಯುಃಪ್ರದಂ ಪರಂ ।
ಕಿರಣೇಶ್ವರನಾಮ್ನೈತಲ್ಲಿಂಗಂ ತ್ರೈಲೋಕ್ಯವಿಶ್ರುತಂ ॥ ೧೫೫ ॥
ಸಕೃನ್ನತಮಿದಂ ಲೋಕಂ ನಯೇತ್ಕಿರಣಮಾಲಿನಃ ।
ಧೌತಪಾಪೇಶ್ವರಂ ಲಿಂಗಮೇತತ್ಪಾತಕಧಾವನಂ ॥ ೧೫೬ ॥
ನಿರ್ವಾಣನರಸಿಂಹೋಽಯಂ ಭಕ್ತನಿರ್ವಾಣಕಾರಣಂ ।
ಮಣಿಪ್ರದೀಪನಾಮೋಽಯಂ ಮಹಾಮಣಿವಿಭೂಷಣಃ ॥ ೧೫೭ ॥
ಯದರ್ಚನಾನ್ನರೋ ಜಾತು ನ ನಾಗೈಃ ಪರಿಭೂಯತೇ ।
ಕಪಿಲೇಶಮಿದಂ ಲಿಂಗಂ ಕಪಿಲೇನ ಪ್ರತಿಷ್ಠಿತಂ ॥ ೧೫೮ ॥
ಮುಚ್ಯಂತೇ ಕಪಯೋಽಪ್ಯಸ್ಯ ದರ್ಶನಾತ್ಕಿಮು ಮಾನವಾಃ ।
ಪ್ರಿಯವ್ರತೇಶ್ವರಂ ಲಿಂಗಂ ಮಹದೇತತ್ಪ್ರಕಾಶತೇ ॥ ೧೫೯ ॥
ಯಸ್ಯಾರ್ಚನಾಲ್ಲಭೇಜ್ಜಂತುಃ ಪ್ರಿಯತ್ವಂ ಸರ್ವಜಂತುಷು ।
ಇದಮಾಯತನಂ ಶ್ರೇಷ್ಠಂ ಮಣಿಮಾಣಿಕ್ಯನಿರ್ಮಿತಂ ॥ ೧೬೦ ॥

---

ಯಲ್ಲಿ ಮಾನವನು ಇಹಪರಗಳಲ್ಲಿ ಅತಿಶಯಮಂಗಳವನ್ನು ಪಡೆಯುವನು. ಇವನು ಕತ್ತಲೆಯನ್ನು ನಿವಾರಿಸುವ ಮಯೂಖಾದಿತ್ಯನೆಂದು ಹೆಸರುಳ್ಳ ಸೂರ್ಯನು.

೧೫೪–೧೫೬. ಇದು ದಿವ್ಯತೇಜಸ್ಸನ್ನುಕೊಡುವ ಗಭಸ್ತೀಶವೆಂಬ ಮಹಾ ಲಿಂಗವು. ಹಿಂದೆ ಇಲ್ಲಿ ಮಾರ್ಕಂಡೇಯನು ಆಯುಸ್ಸನ್ನು ಕೊಡುವ ಉತ್ತಮ ಲಿಂಗವನ್ನು ತನ್ನ ಹೆಸರಿನಿಂದ ಸ್ಥಾಪಿಸಿ ಮಹಾತಪಸ್ಸನ್ನಾಚರಿಸಿರುವನು. ಇದು ತ್ರೈಲೋಕ್ಯಪ್ರಸಿದ್ಧವಾದ ಕಿರಣೇಶ್ವರವೆಂಬ ಲಿಂಗವು. ಒಂದು ಸಾರಿ ನಮಸ್ಕಾರ ಮಾಡುವುದರಿಂದ ಇದು ನರನನ್ನು ಸೂರ್ಯಲೋಕಕ್ಕೆ ಒಯ್ಯುವುದು. ಇದು ಪಾತಕವನ್ನು ತೊಳೆಯುವ ಧೌತಪಾಪೇಶ್ವರಲಿಂಗವು.

೧೫೭–೧೬೮. ಇವನು ಭಕ್ತರಿಗೆ ಮೋಕ್ಷವನ್ನು ಕೊಡುವ ನಿರ್ವಾಣ ನರಸಿಂಹನು. ಇವನು ಮಹಾರತ್ನದಿಂದ ಅಲಂಕಾರಗೊಂಡ ಮಣಿಪ್ರದೀಪ ನಾಗನು. ಇವನನ್ನು ಪೂಜಿಸುವುದರಿಂದ ಮನುಷ್ಯನು ಯಾವಾಗಲೂ ಸರ್ಪ ಗಳಿಂದ ಆಪತ್ತನ್ನು ಹೊಂದುವುದಿಲ್ಲ. ಇದು ಕಪಿಲನು ಪ್ರತಿಷ್ಠಿಸಿದ ಲಿಂಗವು. ಇದರ ದರ್ಶನದಿಂದ ಕಪಿಗಳೂ ಮುಕ್ತಿಯನ್ನು ಹೊಂದುವವು. ಮನುಷ್ಯರ ವಿಷಯವೇನು? ಹೆಚ್ಚಾಗಿ ಪ್ರಕಾಶಿಸುತ್ತಿರುವ ಇದು ಪ್ರಿಯವ್ರತೇಶಲಿಂಗವು.

ಶ್ರೀಮತಃ ಕಾಲರಾಜಸ್ಯ ಕಲಿಕಾಲಾರ್ತಿಹಾರಿಣಃ ।
ನಿಜಭಕ್ತಂ ಜನಂ ಪಾತಿ ಯಃ ಪಾಪಾತ್ಪಾಪಭಕ್ಷಣಃ ॥ ೧೬೧ ॥
ಕ್ಷೇತ್ರವಿಘ್ನಕರಾನ್ಪಾಪಾನ್ಯಾತಯನ್ಯಾತನಾಶತೈಃ ।
ಇಯಂ ಮಂದಾಕಿನೀ ರಮ್ಯಾ ತಪಸ್ತಪ್ತುಮಿಹಾಗತಾ ॥ ೧೬೨ ॥
ಕಾಶೀವಾಸಸುಖಂ ಪ್ರಾಪ್ಯ ನಾಽದ್ಯಾಪಿ ದಿವಮೀಹತೇ ।
ಸ್ನಾತ್ವಾಽತ್ರ ಸಂತರ್ಪ್ಯ ಪಿತೄಂಛ್ರಾದ್ಧಂ ಕೃತ್ವಾ ವಿಧಾನತಃ ॥ ೧೬೩ ॥
ನರೋ ನ ನರಕಂ ಪಶ್ಯೇದಪಿ ದುಷ್ಕೃತಕರ್ಮಕೃತ್ ।
ಯಾನಿ ಕಾನಿ ಚ ಲಿಂಗಾನಿ ಕಾಶ್ಯಾಂ ಸಂತಿ ಸಹಸ್ರಶಃ ॥ ೧೬೪ ॥
ರತ್ನಭೂತಮಿದಂ ತೇಷು ಲಿಂಗಂ ರತ್ನೇಶ್ವರಾಽಭಿಧಂ ।
ರತ್ನೇಶ್ವರಪ್ರಸಾದೇನ ಭುಕ್ತ್ವಾ ರತ್ನಾನ್ಯನೇಕಶಃ ॥ ೧೬೫ ॥
ಪುರುಷಾರ್ಥಮಹಾರತ್ನಂ ನಿರ್ವಾಣಂ ಕೋ ನ ಲಬ್ಧವಾನ್ ।
ಕೃತ್ತಿವಾಸೇಶ್ವರಸ್ಯೈಷಾ ಮಹಾಪ್ರಾಸಾದನಿರ್ಮಿತಃ ॥ ೧೬೬ ॥
ಯಾಂ ದೃಷ್ಟ್ವಾಽಪಿ ನರೋ ದೂರಾತ್ಕೃತ್ತಿವಾಸಪದಂ ಲಭೇತ್ ।
ಸರ್ವೇಷಾಮಪಿ ಲಿಂಗಾನಾಂ ಮೌಲಿತ್ವಂ ಕೃತ್ತಿವಾಸಸಃ ॥ ೧೬೭ ॥
ಓಂಕಾರೇಶಃ ಶಿಖಾ ಜ್ಞೇಯಾ ಲೋಚನಾನಿ ತ್ರಿಲೋಚನಃ ।
ಗೋಕರ್ಣಭಾರಭೂತೇಶೌ ತತ್ಕರ್ಣೌ ಪರಿಕೀರ್ತಿತೌ ॥ ೧೬೮ ॥

---

ಇದನ್ನು ಪೂಜಿಸುವುದರಿಂದ ಜಂತುವು ಸಕಲಪ್ರಾಣಿಗಳಿಗೆ ಪ್ರಿಯವಾಗುವುದು. ರತ್ನಮಾಣಿಕ್ಯನಿರ್ಮಿತವಾದ ಇದು ಕಲಿಕಾಲದ ದುಃಖವನ್ನು ಪರಿಹರಿಸುವ ಕಾಲರಾಜನ ಆಲಯವು. ಪಾಪವನ್ನು ನುಂಗುವ ಈ ಕಾಲರಾಜನು, ಕ್ಷೇತ್ರಕ್ಕೆ ವಿಘ್ನವನ್ನುಂಟುಮಾಡುವ ಪಾಪಿಗಳನ್ನು ಅನೇಕ ಬಗೆಯ ಪೀಡೆಗಳಿಂದ ಬಾಧಿಸುತ್ತ ಭಕ್ತರನ್ನು ಪಾಪದಿಂದ ಕಾಪಾಡುವನು. ಇಲ್ಲಿಗೆ ತಪಸ್ಸನ್ನು ಮಾಡಲು ಬಂದ ಈ ಗಂಗೆಯು ಕಾಶೀವಾಸದ ಸುಖವನ್ನು ಪಡೆದು ಈಗಲೂ ಸ್ವರ್ಗವನ್ನು ಅಪೇಕ್ಷಿಸುವುದಿಲ್ಲ. ಮನುಷ್ಯನು ಪಾಪಕರ್ಮಗಳನ್ನಾಚರಿಸಿದ್ದರೂ ಇಲ್ಲಿ ಮಿಂದು ಪಿತೃಗಳಿಗೆ ವಿಧಿಯಂತೆ ತರ್ಪಣ, ಶ್ರಾದ್ಧಗಳನ್ನು ಮಾಡಿದವನು ನರಕವನ್ನು ನೋಡುವುದಿಲ್ಲ. ಕಾಶಿಯಲ್ಲಿರುವ ಸಾವಿರಾರು ಲಿಂಗಗಳಲ್ಲಿ ಈ ರತ್ನೇಶ್ವರ ಲಿಂಗವು ಶ್ರೇಷ್ಠವಾದುದು. ರತ್ನೇಶ್ವರನ ಅನುಗ್ರಹದಿಂದ ಅನೇಕ ಅಮೂಲ್ಯ ಭೋಗ್ಯವಸ್ತುಗಳನ್ನನುಭವಿಸಿ ಪುರುಷಾರ್ಥಗಳಲ್ಲಿ ಉತ್ತಮವಾದ ಮೋಕ್ಷವೆಂಬ ಮಹಾರತ್ನವನ್ನು ಯಾರುತಾನೆ ಹೊಂದಲಿಲ್ಲ. ಇದು ಕೃತ್ತಿವಾಸೇಶ್ವರನ ಆಲಯವು. ಮನುಷ್ಯನು ದೂರದಿಂದಲೇ ಇದನ್ನು ನೋಡಿ ಈಶ್ವರನ ಸ್ಥಾನವನ್ನು ಹೊಂದಿಯಾನು. ಸಕಲ ಲಿಂಗಗಳಿಗೆ ಕೃತ್ತಿವಾಸನು ಶಿರೋಮಣಿಪ್ರಾಯನು. ಓಂಕಾರೇಶನು ಶಿಖೆಯು. ತ್ರಿಲೋಚನನು ಕಣ್ಣುಗಳು. ಗೋಕರ್ಣೇಶ್ವರ ಭಾರಭೂತೇಶ್ವರರು ಕಿವಿಗಳು.

ವಿಶ್ವೇಶ್ವರಾಽವಿಮುಕ್ತೌ ಚ ದ್ವಾವೇತೌ ದಕ್ಷಿಣೌ ಕರೌ ।
ಧರ್ಮೇಶಮಣಿಕರ್ಣೀಶೌ ದ್ವೌ ಕರೌ ದಕ್ಷಿಣೇತರೌ ॥ ೧೬೯ ॥
ಕಾಲೇಶ್ವರಕಪರ್ದೀಶೌ ಚರಣಾವತಿನಿರ್ಮಲೌ ।
ಜ್ಯೇಷ್ಠೇಶ್ವರೋ ನಿತಂಬಶ್ಚ ನಾಭಿರ್ವೈ ಮಧ್ಯಮೇಶ್ವರಃ ॥ ೧೭೦ ॥
ಕಪರ್ದೋಽಸ್ಯ ಮಹಾದೇವಃ ಶಿರೋಭೂಷಾ ಶ್ರುತೀಶ್ವರಃ ।
ಚಂದ್ರೇಶೋ ಹೃದಯಂ ತಸ್ಯ ಆತ್ಮಾ ವೀರೇಶ್ವರಃ ಪರಃ ॥ ೧೭೧ ॥
ಲಿಂಗಂ ತಸ್ಯ ತು ಕೇದಾರಃ ಶುಕ್ರಂ ಶುಕ್ರೇಶ್ವರಂ ವಿದುಃ ।
ಅನ್ಯಾನಿ ಯಾನಿ ಲಿಂಗಾನಿ ಪರಃ ಕೋಟಿಶತಾನಿ ಚ ॥ ೧೭೨ ॥
ಜ್ಞೇಯಾನಿ ನಖಲೋಮಾನಿ ವಪುಷೋ ಭೂಷಣಾನ್ಯಪಿ ।
ಯಾವೇತೌ ದಕ್ಷಿಣೌ ಹಸ್ತೌ ನಿತ್ಯನಿರ್ವಾಣದೌ ಹಿ ತೌ ॥ ೧೭೩ ॥
ಜಂತೂನಾಮಭಯಂ ದತ್ವಾ ಪತತಾಂ ಮೋಹಸಾಗರೇ ।
ಇಯಂ ದುರ್ಗಾ ಭಗವತೀ ಪಿತೃಲಿಂಗಮಿದಂ ಪರಂ ॥ ೧೭೪ ॥
ಇಯಂ ಹಿ ಚಿತ್ರಘಂಟೇಶೀ ಘಂಟಾಕರ್ಣಹ್ರದಸ್ತ್ವಯಂ ।
ಇಯಂ ಸಾ ಲಲಿತಾ ಗೌರೀ ವಿಶಾಲಾಕ್ಷೀಯಮದ್ಭುತಾ ॥ ೧೭೫ ॥
ಆಶಾವಿನಾಯಕಸ್ತ್ವೇಷ ಧರ್ಮಕೂಪೋಽಯಮದ್ಭುತಃ ।
ಯತ್ರ ಪಿಂಡಾನ್ನರೋ ದತ್ವಾ ಪಿತೄನ್ಬ್ರಹ್ಮಪದಂ ನಯೇತ್ ॥ ೧೭೬ ॥

---

೧೬೯. ವಿಶ್ವೇಶ್ವರ ಅಮುಕ್ತೇಶ್ವರರಿಬ್ಬರೂ ಬಲಗೈಗಳು. ಧರ್ಮೇಶ ಮಣಿಕರ್ಣೇಶರು ಎಡಗೈಗಳು.

೧೭೦. ಕಾಲೇಶ್ವರ ಕಪರ್ದೀಶರು ಅತ್ಯಂತ ನಿರ್ಮಲವಾದ ಪಾದಗಳು. ಜ್ಯೇಷ್ಠೇಶ್ವರನು ನಿತಂಬವು. ಮಧ್ಯಮೇಶ್ವರನೇ ನಾಭಿಯು.

೧೭೧. ಮಹಾದೇವನು ಜಟೆಯಸಮೂಹವು. ಶ್ರುತೀಶ್ವರನು ಮುಡಿಯ ಅಲಂಕಾರವು. ಚಂದ್ರೇಶನು ಹೃದಯವು. ವಿರೇಶ್ವರನೇ ಆತ್ಮವು.

೧೭೨–೧೭೩. ಕೇದಾರೇಶ್ವರನು ಅವನ ಲಿಂಗವು. ಶುಕ್ರೇಶ್ವರನು ಶುಕ್ರವು. ನೂರುಕೋಟಿ ಇತರ ಲಿಂಗಗಳು ಅವನ ಉಗುರು, ರೋಮ ಮತ್ತು ಒಡವೆಗಳು. ಈ ದಕ್ಷಿಣಹಸ್ತಗಳು ಯಾವಾಗಲೂ ಮೋಕ್ಷವನ್ನು ಕೊಡುವುವು.

೧೭೪. ಇವಳೇ ಅಜ್ಞಾನಸಾಗರದಲ್ಲಿ ಬೀಳುತ್ತಿರುವ ಜಂತುಗಳಿಗೆ ಅಭಯವನ್ನು ಕೊಡುವ ದುರ್ಗೆಯು. ಇದೇ ಪಿತೃಲಿಂಗವು.

೧೭೫. ಇವಳು ಚಿತ್ರಘಂಟೇಶಿಯು. ಇದು ಘಂಟಾಕರ್ಣಹ್ರದವು. ಇವಳು ಲಲಿತೆಯು; ಇವಳೇ ವಿಶಾಲಾಕ್ಷಿಯು.

೧೭೬. ಇವನು ಆಶಾವಿನಾಯಕನು. ಇದು ಅದ್ಭುತವಾದ ಧರ್ಮಕೂಪವು. ಇಲ್ಲಿ ಮಾನವನು ಪಿಂಡಪ್ರದಾನಮಾಡಿ ಪಿತೃಗಳನ್ನು ಬ್ರಹ್ಮಪದವಿಗೊಯ್ಯುವನು.

ಏಷಾ ವಿಶ್ವಭುಜಾ ದೇವೀ ವಿಶ್ವೈಕಜನನೀ ಪರಾ ।
ಅಸೌ ಬಂದೀ ಮಹಾದೇವೀ ನಿತ್ಯಂ ತ್ರೈಲೋಕ್ಯವಂದಿತಾ ॥ ೧೭೭ ॥
ನಿಗಡಸ್ಥಾನಪಿ ಜನಾನ್ಪಾಶಾನ್ಮೋಚಯತಿ ಸ್ಮೃತಾ ।
ದಶಾಽಶ್ವಮೇಧಿಕಂ ತೀರ್ಥಮೇತತ್ತ್ರೈಲೋಕ್ಯವಂದಿತಂ ॥ ೧೭೮ ॥
ಯತ್ರಾಹುತಿತ್ರಯೇಣಾಽಪಿ ಅಗ್ನಿಹೋತ್ರಫಲಂ ಲಭೇತ್ ।
ಪ್ರಯಾಗಾಖ್ಯಮಿದಂ ಸ್ರೋತಃ ಸರ್ವತೀರ್ಥೋತ್ತಮೋತ್ತಮಂ॥ ೧೭೯ ॥
ಅಶೋಕಾಖ್ಯಮಿದಂ ತೀರ್ಥಂ ಗಂಗಾಕೇಶವ ಏಷ ವೈ ।
ಮೋಕ್ಷದ್ವಾರಮಿದಂ ಶ್ರೇಷ್ಠಂ ಸ್ವರ್ಗದ್ವಾರಮಿದಂ ವಿದುಃ ॥ ೧೮೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಜ್ಞಾನವಾಪೀವರ್ಣನಂ"
ನಾಮ ತ್ರಯಸ್ತ್ರಿಂಶೋಽಧ್ಯಾಯಃ

---

೧೭೭. ಇವಳು ಪ್ರಪಂಚ ಮಾತೆಯಾದ ವಿಶ್ವಭುಜಾದೇವಿಯು. ಇವಳು ಯಾವಾಗಲೂ ತ್ರಿಲೋಕವಂದಿತೆಯಾದ ಬಂದೀಮಹಾದೇವಿಯು.

೧೭೮. ಇವಳು, ಸ್ಮರಿಸುವುದರಿಂದಲೇ ಸಂಕೋಲೆಯಿಂದ ಕಟ್ಟಲ್ಪಟ್ಟ ಜನರ ಪಾಶವನ್ನು ಬಿಡಿಸುವಳು. ಇದು ಮೂರುಲೋಕದ ಜನರಿಂದ ಪೂಜಿತವಾದ ದಶಾಶ್ವಮೇಧಿಕತೀರ್ಥವು.

೧೭೯. ಇಲ್ಲಿ ಮೂರು ಆಹುತಿಗಳನ್ನು ಕೊಡುವುದರಿಂದಲೆ ಅಗ್ನಿಹೋತ್ರದ ಫಲವು ದೊರೆಯುವುದು. ಇದು ಸಕಲತೀರ್ಥಗಳಲ್ಲಿ ಉತ್ತಮವಾದ ಪ್ರಯಾಗವೆಂಬ ತೀರ್ಥವು.

೧೮೦. ಇದು ಅಶೋಕತೀರ್ಥವು. ಇವನು ಗಂಗಾಕೇಶವನು. ಇದು ಮೋಕ್ಷದ್ವಾರವು. ಇದೇ ಸ್ವರ್ಗದ್ವಾರವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಜ್ಞಾನವಾಪೀವರ್ಣನ"ವೆಂಬ
ಮೂವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಸ್ತ್ರಿಂಶೋಽಧ್ಯಾಯಃ

### ಜ್ಞಾನವಾಪೀಪ್ರಶಂಸನಂ

ಸ್ಕಂದ ಉವಾಚ :—

ಪುನರ್ದದರ್ಶ ತನ್ವಂಗೀ ಚಿತ್ರಪಟ್ಯಾಂ ಘಟೋದ್ಭವ ।
ಸ್ವರ್ಗದ್ವಾರಾತ್ಪುರೋ ಭಾಗೇ ಶ್ರೀಮತೀಂ ಮಣಿಕರ್ಣಿಕಾಂ ॥ ೧ ॥
ಸಂಸಾರಸರ್ಪದಷ್ಟಾನಾಂ ಜಂತೂನಾಂ ಯತ್ರ ಶಂಕರಃ ।
ಅಪಸವ್ಯೇನ ಹಸ್ತೇನ ಬ್ರೂತೇ ಬ್ರಹ್ಮ ಸ್ಪೃಶಂಛ್ರುತಿಂ ॥ ೨ ॥
ನ ಕಾಪಿಲೇನ ಯೋಗೇನ ನ ಸಾಂಖ್ಯೇನ ನ ಚ ವ್ರತೈಃ ।
ಯಾ ಗತಿಃ ಪ್ರಾಪ್ಯತೇ ಪುಂಭಿಸ್ತಾಂ ದದ್ಯಾನ್ಮೋಕ್ಷಭೂರಿಯಂ ॥ ೩ ॥
ವೈಕುಂಠೇ ವಿಷ್ಣುಭವನೇ ವಿಷ್ಣುಭಕ್ತಿಪರಾಯಣಾಃ ।
ಜಪೇಯುಃ ಸತತಂ ಮುಕ್ತ್ಯೈ ಶ್ರೀಮತೀಂ ಮಣಿಕರ್ಣಿಕಾಂ ॥ ೪ ॥
ಹುತ್ವಾಽಗ್ನಿಹೋತ್ರಮಪಿ ಚ ಯಾವಜ್ಜೀವಂ ದ್ವಿಜೋತ್ತಮಾಃ ।
ಅಂತೇ ಶ್ರಯಂತೇ ಮುಕ್ತ್ಯೈ ಯಾಂ ಸೇಯಂ ಶ್ರೀಮಣಿಕರ್ಣಿಕಾ ॥ ೫ ॥
ವೇದಾನ್ಪಠಿತ್ವಾ ವಿಧಿವದ್ಬ್ರಹ್ಮಯಜ್ಞರತಾ ಭುವಿ ।
ಯಾಂ ಶ್ರಯಂತಿ ದ್ವಿಜಾ ಮುಕ್ತ್ಯೈ ಸೇಯಂ ಶ್ರೀಮಣಿಕರ್ಣಿಕಾ ॥ ೬ ॥

---

## ಕನ್ನಡದ ಅನುವಾದ

### ಜ್ಞಾನವಾಪೀಪ್ರಶಂಸನ

೧. ಸ್ಕಂದನು ಹೇಳುತ್ತಾನೆ:—ಅಗಸ್ತ್ಯನೆ! ಆ ಸುಂದರಿಯು ಮರಳಿ ಚಿತ್ರಪಟದಲ್ಲಿ ಸ್ವರ್ಗದ್ವಾರದ ಮುಂದಿರುವ ಮಣಿಕರ್ಣಿಕೆಯನ್ನು ಕಂಡಳು.

೨. ಇಲ್ಲಿ ಶಂಕರನು ಸಂಸಾರವೆಂಬ ಸರ್ಪದಿಂದ ಕಚ್ಚಲ್ಪಟ್ಟ ಜಂತುಗಳ ಕಿವಿಯನ್ನು ಎಡಗೈಯಿಂದ ಮುಟ್ಟುತ್ತ ಬ್ರಹ್ಮಜ್ಞಾನವನ್ನು ಉಪದೇಶಿಸುತ್ತಾನೆ.

೩. ಈ ಮೋಕ್ಷಭೂಮಿಯು ಮಾನವರು ಕಪಿಲಸಾಂಖ್ಯಯೋಗಗಳಿಂದಲೂ, ವ್ರತಗಳಿಂದಲೂ ಹೊಂದುವ ಗತಿಯನ್ನು ಕೊಡುವುದು.

೪. ವಿಷ್ಣುವಿನ ನಿವಾಸಸ್ಥಾನವಾದ ವೈಕುಂಠಲೋಕದಲ್ಲಿರುವ ಭಕ್ತರು ಮಣಿಕರ್ಣಿಕೆಯನ್ನು ಯಾವಾಗಲೂ ಮುಕ್ತಿಗಾಗಿ ಜಪಿಸುವರು.

೫. ದ್ವಿಜೋತ್ತಮರು ಅವಸಾನಕಾಲದವರೆಗೆ ಅಗ್ನಿಹೋತ್ರವನ್ನು ಅನುಷ್ಠಿಸಿ ಮುಕ್ತಿಗಾಗಿ ಕೊನೆಯಲ್ಲಿ ಯಾವುದನ್ನು ಆಶ್ರಯಿಸುವರೊ ಆ ಮಣಿಕರ್ಣಿಕೆಯು ಇದೇ.

೬. ಭೂಮಿಯಲ್ಲಿ ಬ್ರಹ್ಮಯಜ್ಞದಲ್ಲಿ ನಿರತರಾದ ಬ್ರಾಹ್ಮಣರು ವಿಧಿಯಂತೆ

ಇಷ್ಟ್ವಾ ಕ್ರತೂನಪಿ ನೃಪಾ ಬಹೂನ್ಸರ್ಯಾಪ್ತದಕ್ಷಿಣಾನ್ ।
ಶ್ರಯಂತೇ ಶ್ರೇಯಸೇ ಧನ್ಯಾಃ ಪ್ರಾಂತೇಽಧಿಮಣಿಕರ್ಣಿಕಂ ॥ ೭ ॥
ಸೀಮಂತಿನ್ಯೋಽಪಿ ಸತತಂ ಪತಿವ್ರತಪರಾಯಣಾಃ ।
ಮುಕ್ತ್ಯೈ ಪತಿಮನುವ್ರಜ್ಯ ಶ್ರಯಂತಿ ಮಣಿಕರ್ಣಿಕಾಂ ॥ ೮ ॥
ವೈಶ್ಯಾ ಅಪಿ ಚ ಸೇವಂತೇ ನ್ಯಾಯೋಪಾರ್ಜಿತಸಂಪದಃ ।
ಧನಾನಿ ಸಾಧುಸಾತ್ಕೃತ್ವಾ ಪ್ರಾಂತೇ ಶ್ರೀ ಮಣಿಕರ್ಣಿಕಾಂ ॥ ೯ ॥
ತ್ಯಕ್ತ್ವಾ ಪುತ್ರಕಲತ್ರಾದಿ ಸಚ್ಛೂದ್ರಾ ನ್ಯಾಯಮಾರ್ಗಗಾಃ ।
ನಿರ್ವಾಣಪ್ರಾಪ್ತಯೇ ಚೈನಾಂ ಭಜೇಯುರ್ಮಣಿಕರ್ಣಿಕಾಂ ॥ ೧೦ ॥
ಯಾವಜ್ಜೀವಂ ಚರಂತೋಽಪಿ ಬ್ರಹ್ಮಚರ್ಯಂ ಜಿತೇಂದ್ರಿಯಾಃ ।
ನಿಃಶ್ರೇಯಸೇ ಶ್ರಯಂತ್ಯೇನಾಂ ಶ್ರೀಮತೀಂ ಮಣಿಕರ್ಣಿಕಾಂ ॥ ೧೧ ॥
ಅತಿಥೀನಪಿ ಸಂತರ್ಪ್ಯ ಪಂಚಯಜ್ಞರತಾ ಅಪಿ ।
ಗೃಹಸ್ಥಾಶ್ರಮಿಣೋ ನೇಮಾಂ ತ್ಯಜೇಯುರ್ಮಣಿಕರ್ಣಿಕಾಂ ॥ ೧೨ ॥
ವಾನಪ್ರಸ್ಥಾಶ್ರಮಯುಜೋ ಜ್ಞಾತ್ವಾ ನಿರ್ವಾಣಸಾಧನಂ ।
ಸನ್ನಿಯಮ್ಯೇಂದ್ರಿಯಗ್ರಾಮಂ ಮಣಿಕರ್ಣೀಮುಪಾಸತೇ ॥ ೧೩ ॥

---

ವೇದಾಧ್ಯಯನಮಾಡಿ ಯಾವುದನ್ನು ಆಶ್ರಯಿಸುವರೊ ಅದೇ ಈ ಮಣಿಕರ್ಣಿಕೆಯು.

೭. ದೊರೆಗಳು ಬಹುದಕ್ಷಿಣೆಯುಳ್ಳ ಬಹು ಯಾಗಗಳನ್ನು ಮಾಡಿ ಧನ್ಯರಾಗಿ ಶ್ರೇಯಸ್ಸಿಗಾಗಿ ಕೊನೆಯಲ್ಲಿ ಈ ಮಣಿಕರ್ಣಿಕೆಯನ್ನೆ ಆಶ್ರಯಿಸುವರು.

೮. ಪತಿವ್ರತೆಯರಾದ ಸ್ತ್ರೀಯರು ಮುಕ್ತಿಗಾಗಿ ಪತಿಯೊಡನೆ ಸಹಗಮನ ಮಾಡಿ ಮಣಿಕರ್ಣಿಕೆಯನ್ನು ಆಶ್ರಯಿಸುತ್ತಾರೆ.

೯. ವೈಶ್ಯರೂ ನ್ಯಾಯದಿಂದ ಸಂಪತ್ತುಗಳನ್ನು ಸಂಪಾದಿಸಿ, ಧನಗಳನ್ನು ಸಜ್ಜನರಿಗೆ ದಾನಮಾಡಿ ಕೊನೆಯಲ್ಲಿ ಮಣಿಕರ್ಣಿಕೆಯನ್ನು ಆಶ್ರಯಿಸುತ್ತಾರೆ.

೧೦. ನ್ಯಾಯಮಾರ್ಗನಿರತರಾದ ಸಚ್ಛೂದ್ರರು ಪತ್ನೀಪುತ್ರರನ್ನು ತ್ಯಜಿಸಿ ಮೋಕ್ಷಕ್ಕಾಗಿ ಈ ಮಣಿಕರ್ಣಿಕೆಯನ್ನು ಸೇವಿಸುತ್ತಾರೆ.

೧೧. ಜಿತೇಂದ್ರಿಯರು ಅವಸಾನಕಾಲದವರೆಗೂ ಬ್ರಹ್ಮಚರ್ಯೆಯನ್ನು ಅನುಷ್ಠಾನಮಾಡಿದರೂ ಶ್ರೇಯಸ್ಸಿಗಾಗಿ ಮಣಿಕರ್ಣಿಕೆಯನ್ನೇ ಆಶ್ರಯಿಸುತ್ತಾರೆ.

೧೨. ಗೃಹಸ್ಥಾಶ್ರಮಿಗಳು ಪಂಚಯಜ್ಞನಿರತರಾಗಿ ಅತಿಥಿಗಳನ್ನು ತೃಪ್ತಿಗೊಳಿಸುವವರಾದರೂ ಈ ಮಣಿಕರ್ಣಿಕೆಯನ್ನು ಬಿಡುವುದಿಲ್ಲ.

೧೩. ವಾನಪ್ರಸ್ಥಾಶ್ರಮಿಗಳು ಮೋಕ್ಷಸಾಧನವನ್ನು ತಿಳಿದು ಇಂದ್ರಿಯಗಳನ್ನು ಜಯಿಸಿದವರಾದರೂ ಮಣಿಕರ್ಣಿಕೆಯನ್ನು ಸೇವಿಸುತ್ತಾರೆ.

ಅನನ್ಯಸಾಧನಾಂ ಮುಕ್ತಿಂ ಜ್ಞಾತ್ವಾ ಶಾಸ್ತ್ರೈರನೇಕಧಾ ।
ಮುಮುಕ್ಷುಭಿಸ್ತ್ವೇಕದಂಡೈಃ ಸೇವ್ಯತೇ ಮಣಿಕರ್ಣಿಕಾ ॥ ೧೪ ॥
ದಂಡಯಿತ್ವಾ ಮನೋವಾಚಂ ಕಾಯಂ ನಿತ್ಯಂ ತ್ರಿದಂಡಿನಃ ।
ನೈಃಶ್ರೇಯಸೀಂ ಶ್ರಿಯಂ ಪ್ರಾಪ್ತುಂ ಶ್ರಯಂತೇ ಮಣಿಕರ್ಣಿಕಾಂ ॥ ೧೫ ॥
ಸಂನ್ಯಸ್ತಾಽಖಿಲಕರ್ಮಾಣೋ ದಂಡಯಿತ್ವಾಽಚಲಂ ಮನಃ ।
ಏಕದಂಡವ್ರತಾ ಮುಕ್ತ್ಯೈ ಭಜೇಯುರ್ಮಣಿಕರ್ಣಿಕಾಂ ॥ ೧೬ ॥
ಶಿಖೀ ಮುಂಡೀ ಜಟೀ ವಾಽಪಿ ಕೌಪೀನೀ ವಾ ದಿಗಂಬರಃ ।
ಮುಮುಕ್ಷುಃ ಕೋ ನ ಸೇವೇತ ಮುಕ್ತಿದಾಂ ಮಣಿಕರ್ಣಿಕಾಂ ॥ ೧೭ ॥
ತಪಃಕರ್ತುಂ ನ ಶಕ್ತಾ ಯೇ ದಾನಂ ವಾ ದಾತುಮಕ್ಷಮಾಃ ।
ಯೋಗಾಽಭ್ಯಾಸವಿಹೀನಾ ಯೇ ತೇಷಾಮೇಷಾ ವಿಮುಕ್ತಿದಾ ॥ ೧೮ ॥
ಸಂತ್ಯುಪಾಯಾಃ ಸಹಸ್ರಂ ತು ಮುಕ್ತಯೇ ನ ತಥಾ ಮುನೇ ।
ಹೇಲಯೈಷಾ ಯಥಾ ದದ್ಯಾನ್ನಿರ್ವಾಣಂ ಮಣಿಕರ್ಣಿಕಾ ॥ ೧೯ ॥
ಅನಶನವ್ರತಭೃತೇ ತ್ರಿಕಾಲಾಽಭ್ಯವಹಾರಿಣೇ ।
ಪ್ರಾಂತೇ ದದ್ಯಾತ್ಸಮಾಂ ಮುಕ್ತಿಮುಭಾಭ್ಯಾಂ ಮಣಿಕರ್ಣಿಕಾ ॥ ೨೦ ॥

---

೧೪. ಮುಮುಕ್ಷುಗಳಾದ ಏಕದಂಡಯತಿಗಳು ಮುಕ್ತಿಗೆ ಬೇರೆ ಸಾಧನ ವಿಲ್ಲವೆಂದರಿತು ಮಣಿಕರ್ಣಿಕೆಯನ್ನು ಸೇವಿಸುತ್ತಾರೆ.

೧೫. ತ್ರಿದಂಡಸನ್ಯಾಸಿಗಳು ನಿತ್ಯವೂ ಮನೋವಕ್ಕಾಯಗಳನ್ನು ದಂಡಿಸಿ ಮೋಕ್ಷಲಕ್ಷ್ಮಿಯನ್ನು ಪಡೆಯಲು ಮಣಿಕರ್ಣಿಕೆಯನ್ನು ಆಶ್ರಯಿಸುತ್ತಾರೆ.

೧೬. ಅಖಿಲ ಕರ್ಮಗಳನ್ನೂ ತ್ಯಜಿಸಿದ ಏಕದಂಡಿಗಳಾದ ಯತಿಗಳು ಚಂಚಲವಾದ ಮನಸ್ಸನ್ನು ದಂಡಿಸಿ ಮುಕ್ತಿಗಾಗಿ ಮಣಿಕರ್ಣಿಕೆಯನ್ನು ಸೇವಿಸುತ್ತಾರೆ.

೧೭. ಮೋಕ್ಷಾರ್ಥಿಯಾದ ತ್ರಿದಂಡಿಯಾಗಲಿ, ಏಕದಂಡಿಯಾಗಲಿ, ಕೌಪೀನಧಾರಿಯಾಗಲಿ, ದಿಗಂಬರನಾಗಲಿ ಯಾವನು ತಾನೆ ಮುಕ್ತಿಯನ್ನು ಕೊಡುವ ಈ ಮಣಿಕರ್ಣಿಕೆಯನ್ನು ಸೇವಿಸುವುದಿಲ್ಲ?

೧೮. ತಪಸ್ಸನ್ನು ಮಾಡಲೂ, ದಾನವನ್ನು ಕೊಡಲೂ ಅಸಮರ್ಥರೂ, ಯೋಗಾಭ್ಯಾಸಹೀನರೂ ಆದ ಜನರಿಗೆ ಈ ಮಣಿಕರ್ಣಿಕೆಯು ಮುಕ್ತಿಯನ್ನು ಕೊಡುವುದು.

೧೯. ಮುನಿಯೆ! ಮುಕ್ತಿಗೆ ಅನೇಕೋಪಾಯಗಳಿವೆ. ಆದರೆ ಅನಾಯಾಸ ವಾಗಿ ಈ ಮಣಿಕರ್ಣಿಕೆಯು ಮುಕ್ತಿಯನ್ನು ನೀಡುವಂತೆ ಯಾವುದೂ ನೀಡು ವುದಿಲ್ಲ.

೨೦. ಈ ಮಣಿಕರ್ಣಿಕೆಯು ಉಪವಾಸಮಾಡುವವನಿಗೂ, ತ್ರಿಕಾಲ

ಯಥೋಕ್ತಮಾಚರೇದೇಕೋ ನಿಷ್ಠಾಪಾಶುಪತಂ ವ್ರತಂ ।
ನಿರಂತರಂ ಸ್ಮರೇದೇಕೋ ಹೃದ್ಯೇನಾಂ ಮಣಿಕರ್ಣಿಕಾಂ ॥ ೨೧ ॥
ದೃಷ್ಟ್ವಾಽತ್ರ ವಪುಷಃ ಪಾತೇ ದ್ವಯೋಶ್ಚ ಸದೃಶೀ ಗತಿಃ ।
ತಸ್ಮಾತ್ಸರ್ವಂ ವಿಹಾಯಾಶು ಸೇವ್ಯೈಷಾ ಮಣಿಕರ್ಣಿಕಾ ॥ ೨೨ ॥
ಸ್ವರ್ಗದ್ವಾರೇ ವಿಶೇಯುರ್ಯೇ ವಿಗಾಹ್ಯ ಮಣಿಕರ್ಣಿಕಾಂ ।
ತೇಷಾಂ ವಿಧೂತಪಾಪಾನಾಂ ಕ್ವಾಽಪಿ ಸ್ವರ್ಗೋ ನ ದೂರತಃ ॥ ೨೩ ॥
ಸ್ವರ್ಗದ್ವಾಃ ಸ್ವರ್ಗಭೂರೇಷಾ ಮೋಕ್ಷಭೂರ್ಮಣಿಕರ್ಣಿಕಾ ।
ಸ್ವರ್ಗಾಽಪವರ್ಗಾವತ್ರೈವ ನೋಪರಿಷ್ಟಾನ್ನಚಾಽಪ್ಯಧಃ ॥ ೨೪ ॥
ದತ್ತ್ವಾ ದಾನಾನ್ಯನೇಕಾನಿ ವಿಗಾಹ್ಯ ಮಣಿಕರ್ಣಿಕಾಂ ।
ಸ್ವರ್ಗದ್ವಾರಂ ಪ್ರವಿಶ್ಯಾ ಯೇ ನ ತೇ ನಿರಯಗಾಮಿನಃ ॥ ೨೫ ॥
ಸ್ವರ್ಗಾಽಪವರ್ಗಯೋರರ್ಥಃ ಕೋವಿದೈಶ್ಚ ನಿರೂಪಿತಃ ।
ಸ್ವರ್ಗಃ ಸುಖಂ ಸಮುದ್ದಿಷ್ಟಮಪವರ್ಗೋ ಮಹಾಸುಖಂ ॥ ೨೬ ॥
ಮಣಿಕರ್ಣ್ಯುಪವಿಷ್ಟಸ್ಯ ಯತ್ಸುಖಂ ಜಾಯತೇ ಸತಃ ।
ಸಿಂಹಾಸನೋಪವಿಷ್ಟಸ್ಯ ತತ್ಸುಖಂ ಕ್ವ ಶತಕ್ರತೋಃ ॥ ೨೭ ॥

---

ಭೋಜನಮಾಡುವವನಿಗೂ ಸಮಾನವಾದ ಮುಕ್ತಿಯನ್ನು ಅವಸಾನಕಾಲದಲ್ಲಿ ಕೊಡುವುದು.

೨೧-೨೨. ವಿಧಿಯಂತೆ ನಿಷ್ಠೆಯಿಂದ ಪಾಶುಪತವ್ರತವನ್ನಾಚರಿಸುವವನಿಗೂ, ಯಾವಾಗಲೂ ಮಣಿಕರ್ಣಿಕೆಯನ್ನು ಸ್ಮರಿಸುವವನಿಗೂ ಮರಣಾನಂತರ ಸಮಾನ ಮುಕ್ತಿಯಾಗಿರುವುದನ್ನು ನೋಡಿದ್ದೇನೆ. ಆದ್ದರಿಂದ ಎಲ್ಲವನ್ನೂ ತ್ಯಜಿಸಿ ಈ ಮಣಿಕರ್ಣಿಕೆಯನ್ನೇ ಸೇವಿಸಬೇಕು.

೨೩. ಮಣಿಕರ್ಣಿಕೆಯಲ್ಲಿ ಮಿಂದು ಸ್ವರ್ಗದ್ವಾರವನ್ನು ಪ್ರವೇಶಿಸಿ ಪಾಪರಹಿತರಾದವರಿಗೆ ಸ್ವರ್ಗವು ದೂರವಾಗುವುದಿಲ್ಲ.

೨೪. ಈ ಮಣಿಕರ್ಣಿಕೆಯು ಸ್ವರ್ಗದ್ವಾರವೂ, ಸ್ವರ್ಗಭೂಮಿಯೂ, ಮೋಕ್ಷಭೂಮಿಯೂ ಆಗಿದೆ.

೨೫. ಮಣಿಕರ್ಣಿಕೆಯಲ್ಲಿ ಮಿಂದು ಅನೇಕ ದಾನಗಳನ್ನು ಕೊಟ್ಟು ಸ್ವರ್ಗದ್ವಾರವನ್ನು ಪ್ರವೇಶಿಸಿದವರು ನರಕವಾಸಿಗಳಾಗುವುದಿಲ್ಲ.

೨೬. ಪಂಡಿತರು ಸ್ವರ್ಗ ಮತ್ತು ಅಪವರ್ಗಗಳ ಅರ್ಥವನ್ನು ನಿರೂಪಿಸಿರುವರು. ಅವರು ಸ್ವರ್ಗವು ಸುಖವೆಂದೂ, ಅಪವರ್ಗವು ಮಹಾಸುಖವೆಂದೂ ಹೇಳಿದ್ದಾರೆ.

೨೭. ಮಣಿಕರ್ಣಿಕೆಯಲ್ಲಿ ಕುಳಿತವನಿಗೆ ಉಂಟಾಗುವ ಸುಖವು ಸಿಂಹಾಸನದಲ್ಲಿ ಕುಳಿತಿರುವ ದೇವೇಂದ್ರನಿಗೂ ಉಂಟಾಗುವುದಿಲ್ಲ.

ಮಹಾಸುಖಂ ಯದುದ್ದಿಷ್ಟಂ ಸಮಾಧೌ ವಿಸ್ಮೃತಾತ್ಮನಾಂ ।
ಶ್ರೀಮತ್ಯಾಂ ಮಣಿಕರ್ಣ್ಯಾಂ ತತ್ಸಹಜೇನೈವ ಜಾಯತೇ ॥ ೨೮ ॥
ಸ್ವರ್ಗದ್ವಾರಾತ್ಪುರೋಭಾಗೇ ದೇವನದ್ಯಾಶ್ಚ ಪಶ್ಚಿಮೇ ।
ಸೌಭಾಗ್ಯಭಾಗ್ಯೈಕನಿಧಿಃ ಕಾಚಿದೇಕಾ ಮಹಾಸ್ಥಲೀ ॥ ೨೯ ॥
ಯಾವಂತೋ ಭಾಸ್ವತಃ ಸ್ಪರ್ಶಾದ್ಭಾಸಂತೇ ಸೈಕತಾಃ ಕಣಾಃ ।
ತಾವಂತೋ ದ್ರುಹಿಣಾ ಜಗ್ಮುರ್ನೈರ್ತ್ಯೇಷಾ ಮಣಿಕರ್ಣಿಕಾ ॥ ೩೦ ॥
ಸಂತಿ ತೀರ್ಥಾನಿ ತಾವಂತಿ ಪರಿತೋ ಮಣಿಕರ್ಣಿಕಾಂ ।
ಯಾವದ್ಭಿಸ್ತಿಲಮಾತ್ರಾಽಪಿ ನ ಭೂಮಿರ್ವಿರಲೀಕೃತಾ ॥ ೩೧ ॥
ಯದನ್ವಯೇ ಕೋಽಪಿ ಮುಕ್ತಃ ಸಂಪ್ರಾಪ್ಯ ಮಣಿಕರ್ಣಿಕಾಂ ।
ತದ್ವಂಶ್ಯಾಸ್ತತ್ಪ್ರಭಾವೇಣ ಮಾನ್ಯಾಃ ಸ್ವರ್ಗೌಕಸಾಮಪಿ ॥ ೩೨ ॥
ತರ್ಪಿತಾಃ ಪಿತರೋ ಯೇನ ಸಂಪ್ರಾಪ್ಯ ಮಣಿಕರ್ಣಿಕಾಂ ।
ಸಪ್ತ ಸಪ್ತ ತಥಾ ಸಪ್ತ ಪೂರ್ವಜಾಸ್ತೇನ ತಾರಿತಾಃ ॥ ೩೩ ॥
ಆಮಧ್ಯಾದ್ದೇವಸರಿತ ಆಹರಿಶ್ಚಂದ್ರಮಂಡಪಾತ್ ।
ಆಗಂಗಾಕೇಶವಾದಾಚ ಸ್ವರ್ದ್ವಾರಾನ್ಮಣಿಕರ್ಣಿಕಾ ॥ ೩೪ ॥

---

೨೮. ಸಮಾಧಿನಿರತರಾದವರಿಗೆ ಉಂಟಾಗುವ ಸೌಖ್ಯವು ಮಣಿಕರ್ಣಿಕೆಯಲ್ಲಿ ಸ್ವಾಭಾವಿಕವಾಗಿಯೇ ದೊರೆಯುವುದು.

೨೯. ಸ್ವರ್ಗದ್ವಾರದ ಪೂರ್ವಪಲ್ಲಿಯೂ, ಗಂಗೆಯ ಪಶ್ಚಿಮದಲ್ಲಿಯೂ ಸೌಭಾಗ್ಯಭಾಗ್ಯಕ್ಕೆ ಆಶ್ರಯವಾದ ಒಂದು ಮಹಾಸ್ಥಳವಿರುವುದು.

೩೦. ಸೂರ್ಯನ ಸ್ಪರ್ಶದಿಂದ ಎಷ್ಟು ಮರಳಿನ ಕಣಗಳು ಹೊಳೆಯುವುವೊ, ಅಷ್ಟು ಮಂದಿ ಬ್ರಹ್ಮರು ಆಗಿಹೋದರು. ಆದರೆ ಈ ಮಣಿಕರ್ಣಿಕೆಯು ಮಾತ್ರ ಹೋಗಲಿಲ್ಲ. ಅಂತೆಯೇ ವಿರಾಜಿಸುತ್ತಿರುವುದು.

೩೧. ಭೂಮಿಯಲ್ಲಿ ಮಣಿಕರ್ಣಿಕೆಯ ಸುತ್ತಲೂ ಎಳ್ಳಿನಷ್ಟು ಎಡೆಯಿಲ್ಲದ ಹಾಗೆ ಅನೇಕ ತೀರ್ಥಗಳಿರುವುವು.

೩೨. ಯಾವನ ವಂಶದಲ್ಲಿ ಯಾವನಾದರೂ ಒಬ್ಬನು ಮಣಿಕರ್ಣಿಕೆಯನ್ನು ಹೊಂದಿ ಮುಕ್ತನಾಗಿರುವನೊ, ಅವನ ವಂಶದವರೆಲ್ಲ ಆ ಮಣಿಕರ್ಣಿಕೆಯ ಪ್ರಭಾವದಿಂದ ದೇವತೆಗಳಿಗೂ ಪೂಜ್ಯರಾಗುವರು.

೩೩. ಮಣಿಕರ್ಣಿಕೆಯನ್ನು ಹೊಂದಿ ಪಿತೃತರ್ಪಣಮಾಡಿದವನಿಂದ ಹಿಂದಿನ ಏಳು ತಲೆಯ ಪಿತೃಗಳೂ ಉದ್ಧೃತರಾಗುವರು.

೩೪. ಮಣಿಕರ್ಣಿಕೆಯು ಗಂಗೆಯ ಮಧ್ಯ, ಹರಿಶ್ಚಂದ್ರಮಂಡಪ, ಗಂಗಾಕೇಶವ, ಸ್ವರ್ಗದ್ವಾರ ಇವುಗಳ ನಡುವೆ ಇದೆ.

ಏತದ್ರಜಃಕಣತುಲಾಂ ತ್ರಿಲೋಕ್ಯಪಿ ನ ಗಚ್ಛತಿ ।
ಏತತ್ಪ್ರಾಪ್ತ್ಯೈ ಪ್ರಯತತೇ ತ್ರಿಲೋಕಸ್ಥೋಽಖಿಲೋ ಭವೀ ॥ ೩೫ ॥
ಕಲಾವತೀ ಚಿತ್ರಪಟೀಂ ಪಶ್ಯಂತೀತ್ಥಂ ಮುಹುರ್ಮುಹುಃ ।
ಜ್ಞಾನವಾಪೀಂ ದದರ್ಶಾಽಥ ಶ್ರೀವಿಶ್ವೇಶ್ವರದಕ್ಷಿಣೇ ॥ ೩೬ ॥
ಯದಂಬು ಸತತಂ ರಕ್ಷೇದ್ದುರ್ವೃತ್ತಾದ್ದಂಡನಾಯಕಃ ।
ಸಂಭ್ರಮೋ ವಿಭ್ರಮಶ್ಚಾಽಸೌ ದತ್ವಾ ಭ್ರಾಂತಿಂ ಗರೀಯಸೀಂ ॥ ೩೭ ॥
ಯೋಽಷ್ಟಮೂರ್ತಿರ್ಮಹಾದೇವಃ ಪುರಾಣೇ ಪರಿಪಠ್ಯತೇ ।
ತಸ್ಯೈಷಾಂಬುಮಯೀ ಮೂರ್ತಿರ್ಜ್ಞಾನದಾ ಜ್ಞಾನವಾಪಿಕಾ ॥ ೩೮ ॥
ನೇತ್ರಯೋರತಿಥೀಕೃತ್ಯ ಜ್ಞಾನವಾಪೀಂ ಕಲಾವತೀ ।
ಕದಂಬಕುಸುಮಾಕಾರಾಂ ಬಭಾರ ಕ್ಷಣತಸ್ತನುಂ ॥ ೩೯ ॥
ಅಂಗಾನಿ ವೇಪಥುಂ ಪ್ರಾಪುಃ ಸ್ವಿನ್ನಾ ಭಾಲಸ್ಥಲೀ ಭೃಶಂ ।
ಹರ್ಷಬಾಷ್ಪಾಂಬುಕಲಿಲೇ ಜಾತೇ ತಸ್ಯ ವಿಲೋಚನೇ ॥ ೪೦ ॥
ತಸ್ತಂಭ ಗಾತ್ರಲತಿಕಾ ಮುಖಂ ವೈವರ್ಣ್ಯಮಾಪಚ ।
ಸ್ವರೋಥ ಗದ್ಗದೋ ಜಾತೋ ವ್ಯಭ್ರಂಶತ್ತತ್ಕರಾತ್ಪಟೀ ॥ ೪೧ ॥
ಸಾ ಕ್ಷಣಂ ಸ್ವಾಂ ವಿಸಸ್ಮಾರ ಕಾಽಹಂ ಕ್ವಾಽಹಂ ನ ವೇತ್ತಿ ಚ ।
ಸೌಷುಪ್ತಾಯಾಂ ದಶಯಾಂ ಚ ಪರಮಾತ್ಮೇವ ನಿಶ್ಚಲಾ ॥ ೪೨ ॥

---

೩೫. ಮೂರು ಲೋಕಗಳೂ ಇದರ ದೂಳಿಗಳ ಸಾಮ್ಯವನ್ನು ಹೊಂದುವುದಿಲ್ಲ. ಮೂರು ಲೋಕದಲ್ಲಿರುವ ಎಲ್ಲ ಸಂಸಾರಿಗಳೂ ಇದನ್ನು ಹೊಂದಲು ಪ್ರಯತ್ನಿಸುತ್ತಾರೆ.”

೩೬. ಕಲಾವತಿಯು ಹೀಗೆ ಬಾರಿಬಾರಿಗೂ ಚಿತ್ರಪಟವನ್ನು ನೋಡುತ್ತ ವಿಶ್ವೇಶ್ವರನ ದಕ್ಷಿಣದಲ್ಲಿರುವ ಜ್ಞಾನವಾಪಿಯನ್ನು ನೋಡಿದಳು.

೩೭. ಇದರ ನೀರನ್ನು ಸಂಭ್ರಮ ವಿಭ್ರಮರೆಂಬ ದಂಡನಾಯಕರು ಹೆಚ್ಚಾದ ಭ್ರಾಂತಿಯನ್ನುಂಟುಮಾಡಿ ದುರಾತ್ಮರಿಂದ ರಕ್ಷಿಸುವರು.

೩೮. ಜ್ಞಾನವನ್ನು ಕೊಡುವ ಈ ಜ್ಞಾನವಾಪಿಕೆಯು ಪುರಾಣಪ್ರತಿಪಾದ್ಯನಾದ ಮಹೇಶ್ವರನ ಜಲರೂಪ ಶರೀರವು.

೩೯. ಕಲಾವತಿಯು ಜ್ಞಾನವಾಪಿಯನ್ನು ನೋಡಿ ಕ್ಷಣಕಾಲದಲ್ಲಿಯೇ ಈಚಲಹೂವಿನಂತಿರುವ ಪೇಲವಶರೀರವನ್ನು ಧರಿಸಿದಳು. ರೋಮಾಂಚಗೊಂಡಳು.

೪೦. ಅವಳ ಅಂಗಗಳು ನಡುಗಿದುವು. ಹಣೆಯು ಅತಿಯಾಗಿ ಬೆವರಿತು. ಕಣ್ಣುಗಳು ಆನಂದಬಾಷ್ಪಗಳಿಂದ ತುಂಬಿದುವು.

೪೧. ಕೃಶವಾದ ಶರೀರವು ಸ್ತಬ್ಧವಾಯಿತು. ಮುಖವು ವಿವರ್ಣವಾಯಿತು. ಧ್ವನಿಯು ಗದ್ಗದವಾಯಿತು. ಅವಳ ಕೈಯಿಂದ ಚಿತ್ರಪಟವು ಜಾರಿ ಬಿದ್ದಿತು.

೪೨. ಅವಳು ಕ್ಷಣಕಾಲ ತಾನಾರೆಂಬುದನ್ನು ಮರೆತಳು. ನಾನೆಲ್ಲಿರುವೆ

ಅಥ ತತ್ಪರಿಚಾರಿಣ್ಯಸ್ತ್ವರಮಾಣಾ ಇತಸ್ತತಃ ।
ಕಿಂ ಕಿಂ ಕಿಮೇತದೇತತ್ಕಿಂ ಪೃಚ್ಛಂತಿಸ್ಮ ಪರಸ್ಪರಂ ॥ ೪೩ ॥
ತದವಸ್ಥಾಂ ಸಮಾಲೋಕ್ಯ ತಾಂ ತಾಶ್ಚತುರಚೇತಸಃ ।
ವಿಜ್ಞಾಯ ಸಾತ್ವಿಕೈರ್ಭಾವೈರಿದಮೂಚುಃ ಪರಸ್ಪರಂ ॥ ೪೪ ॥
ಭವಾಂತರೇ ಪ್ರೇಮಪಾತ್ರಮೇತಯೈಕ್ಷಿತು ಕಿಂಚನ ।
ಚಿರಾತ್ತೇನ ಚ ಸಂಗತ್ಯ ಸುಖಮೂರ್ಛಾಮವಾಪಹ ॥ ೪೫ ॥
ಅಥ ನೇತ್ಥಂ ಕಥಮಿಯಮಕಾಂಡಾತ್ಪರ್ಯಮೂಮುರತ್ ।
ಪ್ರೇಕ್ಷಮಾಣಾ ರಹಶ್ಚಿತ್ರಪಟೀಮತಿ ಪಟೀಯಸೀಂ ॥ ೪೬ ॥
ತನ್ಮೋಹಸ್ಯ ನಿದಾನಂ ತಾಃ ಸಮ್ಯಗೇವ ವಿಚಾರ್ಯ ಚ ।
ಉಪಚೇರುರ್ಮಹಾಶಾಂತೈರುಪಚಾರೈರನಾಕುಲಂ ॥ ೪೭ ॥
ಕಾಚಿತ್ತಾಂ ವೀಜಯಾಂಚಕ್ರೇ ಕದಲೀತಾಲವೃಂತಕೈಃ ।
ಬಿಸಿನೀವಲಯೈರನ್ಯಾ ಧನ್ಯಾಂ ತಾಂ ಪರ್ಯಭೂಷಯತ್ ॥ ೪೮ ॥
ಅಮಂದೈಶ್ಚಂದನರಸೈರಭ್ಯಷಿಂಚದಮುಂ ಪರಾ ।
ಅಶೋಕಪಲ್ಲವೈರಸ್ಯಾಃ ಕಾಚಿಚ್ಛೋಕಮನೀನಶತ್ ॥ ೪೯ ॥

---

ನೆಂಬುದನ್ನರಿಯಲಿಲ್ಲ. ಸುಷುಪ್ತಿದಶೆಯಲ್ಲಿರುವ ಪರಮಾತ್ಮನಂತೆ ನಿಶ್ಚಲಳಾದಳು.

೪೩–೪೪. ಬಳಿಕ ಅವಳ ಪರಿಚಾರಿಕೆಯರು ಇಲ್ಲಿ ಅಲ್ಲಿ ತ್ವರೆಗೊಳ್ಳುತ್ತ ಇದೇನಿದೇನೆಂದು ಪರಸ್ಪರ ಪ್ರಶ್ನಿಸಿದರು. ಕುಶಲ ಬುದ್ಧಿಯುಳ್ಳ ಅವರು ಆ ಸ್ಥಿತಿಯಲ್ಲಿರುವ ಅವಳನ್ನು ನೋಡಿ ಸಾತ್ವಿಕಭಾವಗಳಿಂದ ಅವಳ ನಿಜಸ್ಥಿತಿಯನ್ನರಿತು ಪರಸ್ಪರ ಹೀಗೆ ಮಾತಾಡಿಕೊಂಡರು.

೪೫. "ಇವಳು ಜನ್ಮಾಂತರದಲ್ಲಿ ಪ್ರಿಯವಾಗಿದ್ದ ವಸ್ತುವೊಂದನ್ನು ನೋಡಿರಬೇಕು. ಇವಳು ಬಹಳ ಕಾಲದಮೇಲೆ ಅದನ್ನು ಹೊಂದಿ ಸುಖಮೂರ್ಛೆಯನ್ನು ಹೊಂದಿರುವಳು.

೪೬. ಹಾಗಿಲ್ಲದಿದ್ದರೆ ಇವಳು ಅತಿ ಮನೋಹರವಾದ ಈ ಚಿತ್ರಪಟವನ್ನು ಕಂಡು ಹೀಗೇಕೆ ಆಕಸ್ಮಿಕವಾಗಿ ಹೀಗೆ ಮೂರ್ಛೆಗೊಳ್ಳಬೇಕು?"

೪೭. ಆ ದಾಸಿಯರು ಅವಳ ಮೂರ್ಛೆಯ ಕಾರಣವನ್ನರಿತು ಶೈತ್ಯೋಪಚಾರಗಳಿಂದ ಅವಳನ್ನು ಉಪಚರಿಸಿದರು.

೪೮. ಒಬ್ಬಳು ಅವಳನ್ನು ಬಾಳೆಯೆಲೆಯ ಬೀಸಣಿಗೆಯಿಂದ ಬೀಸಿದಳು. ಮತ್ತೊಬ್ಬಳು ಧನ್ಯಳಾದ ಅವಳನ್ನು ತಾವರೆದಂಟಿನ ಬಳೆಗಳಿಂದ ಅಲಂಕರಿಸಿದಳು.

೪೯. ಇನ್ನೊಬ್ಬಳು ಅವಳನ್ನು ಅಧಿಕ ಗಂಧದಿಂದ ಅಭಿಷೇಕಮಾಡಿದಳು. ಒಬ್ಬಳು ಇವಳ ದುಃಖವನ್ನು ಅಶೋಕದ ಚಿಗುರುಗಳಿಂದ ಪರಿಹರಿಸಿದಳು.

ಧಾರಾಮಂಡಪಧಾರಾಂಬುಸೀಕರೈಸ್ತತ್ತನೂಲತಾಂ ।
ಇಷ್ಟಾರ್ಥಂ ವಿರಹಗ್ಲಾನಾಂ ಸಿಂಚಯಾಮಾಸ ಕಾಚನ ॥ ೫೦ ॥
ಜಲಾರ್ದ್ರವಾಸಸಾ ಕಾಚಿದೇತಸ್ಯಾಸ್ತನುಮಾವೃಣೋತ್ ।
ಕರ್ಪೂರಕರ್ದಮಜಾಲೇಷ್ಯೈರನ್ಯಾಸ್ತಾಮನ್ವಲೇಪಯನ್ ॥ ೫೧ ॥
ಪದ್ಮಿನೀದಲಶಯ್ಯಾಂ ಚ ಕಾಚಿದ್ವಿರಚಯನ್ಮೃದುಂ ।
ಕಾಚಿತ್ಕುಲಿಶನೇಪಥ್ಯಂ ದೂರೀಕೃತ್ಯ ತದಂಗತಃ ॥ ೫೨ ॥
ಮುಕ್ತಾಕಲಾಪಂ ರಚಯಾಂಚಕ್ರೇ ವಕ್ಷೋಜಮಂಡಲೇ ।
ಕಾಚಿಚ್ಛಶಿಮುಖೀ ತಾಂ ತು ಚಂದ್ರಕಾಂತಶಿಲಾತಲೇ ॥ ೫೩ ॥
ಸ್ನಾಪಯಾಮಾಸ ತನ್ವಂಗೀಂ ಸ್ರವಚ್ಛೀತಾಂಬುಶೀತಲೇ ।
ದೃಷ್ಟ್ವೋಪಚಾರ್ಯಮಾಣಾಂ ತಾಮಿತ್ಥಂ ಬುದ್ಧಿಶರೀರಿಣೀ ॥ ೫೪ ॥
ಅತಿತಾಪಪರೀತಾಂಗೀಂ ತಾಃ ಸಖೀಃ ಪ್ರತ್ಯಭಾಷತ ।
ಏತಸ್ಯಾಸ್ತಾಪಶಾಂತ್ಯರ್ಥಂ ಜಾನೇಽಹಂ ಪರಮೌಷಧಂ ॥ ೫೫ ॥
ಉಪಚಾರಾನಿಮಾನ್ಸರ್ವಾನ್ದೂರೀಕುರುತ ಮಾಚಿರಂ ।
ಅಪತಾಪಾಂ ಕರೋಮ್ಯೇನಾಂ ಸದ್ಯಃ ಪಶ್ಯತ ಕೌತುಕಂ ॥ ೫೬ ॥
ದೃಷ್ಟ್ವಾ ಚಿತ್ರಪಟೀಮೇಷಾ ಸದ್ಯೋ ವಿಹ್ವಲತಾಮಗಾತ್ ।
ಅತ್ರೈವ ಕಾಚಿದೇತಸ್ಯಾಃ ಪ್ರೇಮಭೂರಸ್ತಿ ನಿಶ್ಚಿತಂ ॥ ೫೭ ॥

---

೫೦. ಮತ್ತೊಬ್ಬಳು ಅವಳ ಇಷ್ಟವಸ್ತುವಿನ ವಿರಹದಿಂದ ಬಾಡಿದ ಕೃಶ ಶರೀರವನ್ನು ಧಾರಾಮಂಡಪದ ಜಲಧಾರೆಯ ಹನಿಗಳಿಂದ ಸಿಂಪಡಿಸಿದಳು.

೫೧. ಒಬ್ಬಳು ನೀರಿನಿಂದ ಒದ್ದೆಯಾದ ಬಟ್ಟೆಯಿಂದ ಅವಳ ಶರೀರವನ್ನು ಮುಚ್ಚಿದಳು. ಇತರರು ಅವಳನ್ನು ಕರ್ಪೂರದ ಗಂಧದಿಂದ ಲೇಪಿಸಿದರು.

೫೨–೫೬. ಒಬ್ಬಳು ಅವಳಿಗೆ ಕಮಲದೆಲೆಯಿಂದ ಮೃದುವಾದ ಹಾಸಿಗೆಯನ್ನು ರಚಿಸಿದಳು. ಮತ್ತೊಬ್ಬಳು ಅವಳ ಶರೀರದಿಂದ ವಜ್ರಾಲಂಕಾರವನ್ನು ತೆಗೆದು ಕುಚಗಳಲ್ಲಿ ಮುತ್ತಿನಸರವನ್ನು ಹಾಕಿದಳು. ಒಬ್ಬ ಚಂದ್ರಮುಖಿಯು ಅವಳನ್ನು ತಣ್ಣಗಿರುವ ಚಂದ್ರಕಾಂತಶಿಲೆಯಮೇಲೆ ಮಲಗಿಸಿದಳು. ಹೀಗೆ ಸಖಿಯರು ಉಪಚರಿಸುತ್ತಿರಲು ಬುದ್ಧಿಶರೀರಿಣಿಯೆಂಬೋರ್ವ ಸಖಿಯು ಅತ್ಯಂತ ಸಂತಾಪಗೊಂಡವಳಾಗಿ ಆ ಸಖಿಯರನ್ನು ಕುರಿತು ಇಂತೆಂದಳು. "ಇವಳ ತಾಪವನ್ನು ಪರಿಹರಿಸಲು ನಾನು ಔಷಧವನ್ನರಿತಿರುವೆನು. ಶೀಘ್ರವಾಗಿ ಈ ಸಕಲೋಪಚಾರಗಳನ್ನು ದೂರಮಾಡಿರಿ. ಕೂಡಲೆ ಇವಳ ತಾಪವನ್ನು ಹೋಗಲಾಡಿಸುವೆನು. ಈ ಕೌತುಕವನ್ನು ನೋಡಿರಿ.

೫೭. ಇವಳು ಚಿತ್ರಪಟವನ್ನು ಕಂಡು ಕೂಡಲೆ ವ್ಯಥೆಗೊಂಡಿರುವಳು. ನಿಶ್ಚಯವಾಗಿಯೂ ಈ ಚಿತ್ರಪಟದಲ್ಲಿ ಇವಳಿಗೆ ಪ್ರಿಯವಾದ ಒಂದು ವಸ್ತುವಿದೆ.

ಅತಶ್ಚಿತ್ರಪಟೇಸ್ಪರ್ಶಾತ್ಪರಿತಾಪಂ ವಿಹಾಸ್ಯತಿ ।
ವಾಕ್ಯಾದ್ಬುದ್ಧಿ ಶರೀರಿಣ್ಯಾಸ್ತತಸ್ತತ್ಪರಿಚಾರಿಕಾಃ ॥ ೫೮ ॥
ನಿಧಾಯ ತತ್ಪುರಃ ಪ್ರೋಚುಃ ಪಟೇಂ ಪಶ್ಯ ಕಲಾವತಿ ।
ತವಾನಂದಕರೀ ಯತ್ರ ಕಾಚಿದಸ್ತೀಷ್ಟದೇವತಾ ॥ ೫೯ ॥
ಸಾಪೀಷ್ಟದೇವತಾನಾಮ್ನಾ ತತ್ಪಟೇದರ್ಶನೇನ ಚ ।
ಸುಧಾಸೇಕಮಿವ ಪ್ರಾಪ್ಯ ಮೂರ್ಛಾಂ ಹಿತ್ವೋತ್ಥಿತಾ ದ್ರುತಂ ॥ ೬೦ ॥
ಅವಗ್ರಹಪರಿಮ್ಲಾನಾ ವರ್ಷಾಸಾರೈರಿವೌಷಧೀಃ ।
ಪುನರಾಲೋಕಯಾಂಚಕ್ರೇ ಜ್ಞಾನದಾಂ ಜ್ಞಾನವಾಪಿಕಾಂ ॥ ೬೧ ॥
ಸ್ಪೃಷ್ಟ್ವಾ ಕಲಾವತೀ ತಾಂ ತು ವಾಪೀಂ ಚಿತ್ರಗತಾಮಪಿ ।
ಲೇಭೇ ಭವಾಂತರಜ್ಞಾನಂ ಯಥಾಸೀತ್ಪೂರ್ವಜನ್ಮನಿ ॥ ೬೨ ॥
ಪುನರ್ವಿಚಾರಯಾಂಚಕ್ರೇ ವಾಪೀಮಾಹಾತ್ಮ್ಯಮುತ್ತಮಂ ।
ಅಹೋ ಚಿತ್ರಗತಾಽಪೀಯಂ ಸಂಸ್ಪೃಷ್ಟಾ ಜ್ಞಾನವಾಪಿಕಾ ॥ ೬೩ ॥
ಜ್ಞಾನಂ ಮೇ ಜನಯಾಮಾಸ ಭವಾಂತರಸಮುದ್ಭವಂ ।
ಅಥ ತಾಸಾಂ ಪುರೋ ಹೃಷ್ಟಾ ಕಥಯಾಮಾಸ ಸುಂದರೀ ॥ ೬೪ ॥
ನಿಜಂ ಪ್ರಾಗ್ಭವವೃತ್ತಾಂತಂ ಜ್ಞಾನವಾಪೀಪ್ರಭಾವಜಂ ॥ ೬೫ ॥

---

೫೮–೫೯. ಆದ್ದರಿಂದ ಈ ಚಿತ್ರಪಟಿಯ ಸ್ಪರ್ಶದಿಂದ ಸಂತಾಪವನ್ನು ಬಿಡುವಳು.'' ಅವಳ ಸೇವಕರು ಬುದ್ಧಿಶರೀರಿಣಿಯ ಮಾತಿನಿಂದ ಚಿತ್ರಪಟವನ್ನು ಅವಳ ಮುಂದಿರಿಸಿ ಹೀಗೆಂದರು. "ಕಲಾವತಿ! ಚಿತ್ರಪಟವನ್ನು ನೋಡು. ಇದರಲ್ಲಿ ನಿನಗೆ ಆನಂದವನ್ನುಂಟುಮಾಡುವ ಒಂದು ಇಷ್ಟದೇವತೆಯು ಇದೆ.''

೬೦. ಅವಳೂ ಇಷ್ಟದೇವತೆಯ ಹೆಸರಿನಿಂದಲೂ, ಆ ಚಿತ್ರಪಟದ ದರ್ಶನ ದಿಂದಲೂ ಅಮೃತದಿಂದ ಸಿಂಪಡಿಸಲ್ಪಟ್ಟವಳಂತೆ ಮೂರ್ಛೆಯನ್ನು ಬಿಟ್ಟು ಶೀಘ್ರವಾಗಿ ಎದ್ದಳು.

೬೧. ಮಳೆಯಿಲ್ಲದಿರುವುದರಿಂದ ಬಾಡಿದ ಓಷಧಿಯು ಮಳೆಯಿಂದಲೋ ಪಾದಿಯಲ್ಲಿ ಮರಳಿ ಜ್ಞಾನವನ್ನೀಯುವ ಜ್ಞಾನವಾಪಿಕೆಯನ್ನು ನೋಡಿದಳು.

೬೨. ಕಲಾವತಿಯು ಚಿತ್ರದಲ್ಲಿರುವ ಆ ಜ್ಞಾನವಾಪಿಯನ್ನು ಮುಟ್ಟಿ ಪೂರ್ವಜನ್ಮದ ಜ್ಞಾನವನ್ನು ಹೊಂದಿದಳು.

೬೩–೬೫. ತಿರುಗಿ ಉತ್ತಮವಾದ ಜ್ಞಾನವಾಪಿಯ ಮಾಹಾತ್ಮ್ಯವನ್ನು ವಿಚಾರಮಾಡಿದಳು. "ಈ ಜ್ಞಾನವಾಪಿಕೆಯು ಚಿತ್ರದಲ್ಲಿದ್ದರೂ ಸ್ಪರ್ಶದಿಂದ ನನಗೆ ಜನ್ಮಾಂತರದ ಜ್ಞಾನವನ್ನುಂಟುಮಾಡಿದೆ. ಆಶ್ಚರ್ಯ!'' ಬಳಿಕ ಅವಳು ಸಖಿಯರ ಮುಂದೆ ಸಂತೋಷಗೊಂಡವಳಾಗಿ ಜ್ಞಾನವಾಪಿಯ ಪ್ರಭಾವ ದಿಂದುಂಟಾದ ತನ್ನ ಹಿಂದಿನ ಜನ್ಮದ ವೃತ್ತಾಂತವನ್ನು ಹೇಳಿದಳು.

ಕಲಾವತ್ಯುವಾಚ :—

ಏತಸ್ಮಾಜ್ಜನ್ಮನಃ ಪೂರ್ವಮಹಂ ಬ್ರಾಹ್ಮಣಕನ್ಯಕಾ ।
ಉಪವಿಶ್ವೇಶ್ವರಂ ಕಾಶ್ಯಾಂ ಜ್ಞಾನವಾಪ್ಯಾಂ ರಮೇ ಮುದಾ ।
ಜನಕೋ ಮೇ ಹರಿಸ್ವಾಮೀ ಜನಯಿತ್ರೀ ಪ್ರಿಯಂವದಾ ॥ ೬೬ ॥
ಆಖ್ಯಾ ಮಮ ಸುಶೀಲೇತಿ ಮಾಂ ಚ ವಿದ್ಯಾಧರೋಽಹರತ್ ।
ಮಧ್ಯೇ ಮಾರ್ಗಂ ನಿಶೀಥೇಽಥ ತದೋಪಮಲಯಾಚಲಂ ॥ ೬೭ ॥
ರಕ್ಷಸಾ ಸ ಹತೋ ವೀರೋ ರಾಕ್ಷಸಂ ಸ ಜಘಾನ ಹ ।
ರಕ್ಷೋಽಪಿ ಮುಕ್ತಂ ಶಾಪಾತ್ತು ದಿವ್ಯಂ ವಪುರವಾಪ ಹ ॥ ೬೮ ॥
ಅವಾಪ ಜನ್ಮ ಗಂಧರ್ವಸ್ತ್ವಸೌ ಮಲಯಕೇತುತಃ ।
ಕರ್ಣಾಟನೃಪತೇಃ ಕನ್ಯಾ ಬಭೂವಾಽಹಂ ಕಲಾವತೀ ॥ ೬೯ ॥
ಇತಿ ಜ್ಞಾನಂ ಮಮೋದ್ಭೂತಂ ಜ್ಞಾನವಾಪೀಕ್ಷಣಾತ್ಕ್ಷಣಾತ್ ।
ಇತಿ ತಸ್ಯಾ ವಚಃ ಶ್ರುತ್ವಾ ಸಾಽಪಿ ಬುದ್ಧಿಶರೀರಿಣೀ ॥ ೭೦ ॥
ಶಾಶ್ಚ ತತ್ಪರಿಚಾರಿಣ್ಯಃ ಪ್ರಹೃಷ್ಟಾಸ್ಯಾಸ್ತದಾಽಭವನ್ ।
ಪ್ರೋಚುಸ್ತಾಂ ಪ್ರಣಿಪತ್ಯಾಽಥ ಪುಣ್ಯಶೀಲಾಂ ಕಲಾವತೀಂ ॥ ೭೧ ॥
ಅಹೋ ಕಥಂ ಹಿ ಸಾ ಲಭ್ಯಾ ಯತ್ರಭಾವೋಽಯಮೀದೃಶಃ ।
ಧಿಗ್ಜನ್ಮ ತೇಷಾಂ ಮರ್ತ್ಯೇಽಸ್ಮಿನ್ಯೈರ್ನದೃಕ್ಷಿ ಜ್ಞಾನವಾಪಿಕಾ ॥ ೭೨ ॥

---

೬೬–೬೮. ಕಲಾವತಿಯು ಹೇಳುತ್ತಾಳೆ:—"ನಾನು ಈ ಜನ್ಮಕ್ಕಿಂತ ಹಿಂದಿನ ಜನ್ಮದಲ್ಲಿ ಬ್ರಾಹ್ಮಣಕನ್ಯೆಯಾಗಿದ್ದು ಕಾಶಿಯಲ್ಲಿ ವಿಶ್ವೇಶ್ವರನ ಹತ್ತಿರವಿರುವ ಜ್ಞಾನವಾಪಿಯಲ್ಲಿ ಸಂತೋಷದಿಂದ ವಿನೋದಪಟ್ಟೆನು. ನನ್ನ ತಂದೆಯು ಹರಿಸ್ವಾಮಿಯು. ತಾಯಿಯು ಪ್ರಿಯಂವದೆಯು. ಸುಶೀಲಾ ಎಂಬ ಹೆಸರುಳ್ಳ ನನ್ನನ್ನು ವಿದ್ಯಾಧರನು ಅಪಹರಿಸಿದನು. ಬಳಿಕ ಮಲಯಾಚಲದ ಹತ್ತಿರ ಅರ್ಧರಾತ್ರಿಯ ವೇಳೆ ದಾರಿಯ ನಡುವೆ ಅವನನ್ನು ರಾಕ್ಷಸನು ಕೊಂದನು. ರಾಕ್ಷಸನನ್ನೂ ವಿದ್ಯಾಧರನು ಕೊಂದನು. ರಾಕ್ಷಸನು ಶಾಪಮುಕ್ತನಾಗಿ ದಿವ್ಯ ರೂಪವನ್ನು ಹೊಂದಿದನು.

೬೯. ಆ ಗಂಧರ್ವನು ಮಲಯಕೇತುವಿನ ಮಗನಾಗಿ ಜನಿಸಲು ನಾನು ಕರ್ಣಾಟಕ ರಾಜನ ಮಗಳಾದ ಕಲಾವತಿಯಾದೆನು.

೭೦–೭೧. ಈ ಜ್ಞಾನವಾಪಿಯನ್ನು ನೋಡಿದಕೂಡಲೆ ಹೀಗೆ ನನಗೆ ಜ್ಞಾನ ವುಂಟಾಯಿತು." ಎಂದು ಅವಳು ಹೇಳಲು ಬುದ್ಧಿಶರೀರಿಣಿಯೂ ಅವಳ ಸಖಿಯರೂ ಈ ಮಾತನ್ನು ಕೇಳಿ ಸಂತೋಷಗೊಂಡರು. ಅನಂತರ ಅವರು ಅವಳನ್ನು ವಂದಿಸಿ ಹೀಗೆಂದರು.

೭೨. "ಇಂತಹ ಮಾಹಾತ್ಮ್ಯೆಯುಳ್ಳ ಆ ಜ್ಞಾನವಾಪಿಯು ದೊರೆಯುವ

ಕಲಾವತಿ ನಮುಸ್ತುಭ್ಯಂ ಕುರು ನೋಽಪಿ ಸಮಿಾಹಿತಂ ।
ಜನಿಂ ಸಫಲಯಾಸ್ಮಾಕಂ ನಯ ನಃ ಪ್ರಾರ್ಥ್ಯ ಭೂಪತಿಂ ॥ ೭೩ ॥
ಅಯಂ ಚ ನಿಯಮೋಽಸ್ಮಾಕಮುದ್ಯಾರಭ್ಯ ಕಲಾವತಿ ।
ನಿರ್ವೇಕ್ಷ್ಯಾಮೋ ಮಹಾಭೋಗಾನ್ ದೃಷ್ಟ್ವಾ ತಾಂ ಜ್ಞಾನವಾಪಿಕಾಂ ॥
ಅವಶ್ಯಂ ಜ್ಞಾನವಾಪೀ ಸಾ ನಾಮ್ನಾ ಭವಿತುಮರ್ಹತಿ ।
ಚಿತ್ರಂ ಚಿತ್ರಗತಾಽಪೀಹ ಯಾ ತವ ಜ್ಞಾನದಾಯಿನೀ ॥ ೭೫ ॥
ಓಂಕೃತ್ಯ ತಾಸಾಂ ವಾಕ್ಯಂ ಸಾ ಸ್ವಾಕಾರಂ ಪರಿಗೋಪ್ಯ ಚ ।
ಪ್ರಿಯಾಣಿ ಕೃತ್ವಾ ಭೂಭರ್ತುಃ ಪ್ರಸ್ತಾವಜ್ಞಾ ವ್ಯಜಿಜ್ಞಪತ್ ॥ ೭೬ ॥

ಕಲಾವತ್ಯುವಾಚ :—

ಜೀವಿತೇಶ ನಮೇ ತ್ವತ್ತಃ ಕಿಂಚಿತ್ಪ್ರಿಯತರಂ ಕ್ವಚಿತ್ ।
ತ್ವಾಮಾಸಾದ್ಯ ಪತಿಂ ರಾಜನ್ಪ್ರಾಪ್ತಾಃ ಸರ್ವೇ ಮನೋರಥಾಃ ॥ ೭೭ ॥
ಏಕೋ ಮನೋರಥಃ ಪ್ರಾರ್ಥ್ಯೋ ಮಯಾಸ್ತ್ಯತ್ರಾರ್ಯಪುತ್ರಕ ।
ವಿಚಾರಪಥಮಾಪನ್ನಸ್ತವಾಽಪಿ ಸ ಮಹಾಹಿತಃ ॥ ೭೮ ॥

---

ಬಗೆ ಹೇಗೆ? ಈ ಲೋಕದಲ್ಲಿ ಆ ಜ್ಞಾನವಾಪಿಯನ್ನು ಕಾಣದ ಮಾನವರ ಜನ್ಮವು ನಿಂದ್ಯವಾದುದು.

೭೩. ಕಲಾವತಿ! ಇದೋ ನಿನಗೆ ಕೈಮುಗಿಯುವೆವು. ನಮ್ಮ ಅಭೀಪ್ಸಿತವನ್ನು ನೆರವೇರಿಸು. ದೊರೆಯನ್ನು ಪ್ರಾರ್ಥಿಸಿ ನಮ್ಮ ಜನ್ಮವನ್ನು ಸಫಲಗೊಳಿಸು.

೭೪. ಕಲಾವತಿ! ಇದೇ ನಮ್ಮ ನಿಯಮವು. ಇದು ಮೊದಲ್ಗೊಂಡು. ನಾವು ಆ ಜ್ಞಾನವಾಪಿಕೆಯನ್ನು ನೋಡಿ ಮಹಾಭೋಗಗಳನ್ನು ಅನುಭವಿಸುವೆವು.

೭೫. ಚಿತ್ರದಲ್ಲಿ ಬರೆದ ಆ ಜ್ಞಾನವಾಪಿಯು ನಿನಗೆ ಜ್ಞಾನವನ್ನಿತ್ತುದರಿಂದ ನಿಶ್ಚಯವಾಗಿಯೂ ಅದು ಜ್ಞಾನವಾಪಿಯೆಂಬ ಆ ಹೆಸರನ್ನು ಪಡೆಯಲು ಅರ್ಹವಾಗಿದೆ.''

೭೬. ಅವಳು ಆ ಸಖಿಯರ ಮಾತನ್ನು ಒಪ್ಪಿ ತನ್ನ ಆಕಾರವನ್ನು ಮರೆಮಾಡಿಕೊಂಡು ದೊರೆಗೆ ಹಿತಕರವಾದ ಕಾರ್ಯವನ್ನೆಸಗಿ ಸಂದರ್ಭಾನುಸಾರವಾಗಿ ಅವನಲ್ಲಿ ಹೀಗೆ ವಿಜ್ಞಾಪಿಸಿಕೊಂಡಳು.

೭೭. ಕಲಾವತಿಯು ಹೇಳುತ್ತಾಳೆ :—''ನಾಥ! ನನಗೆ ನಿನಗಿಂತ ಪ್ರಿಯವಾದ ಯಾವ ವಸ್ತುವೂ ಇಲ್ಲ. ದೊರೆಯೆ! ನಾನು ನಿನ್ನನ್ನು ಪತಿಯನ್ನಾಗಿ ವರಿಸಿ ಸಮಸ್ತಾಭೀಷ್ಟಗಳನ್ನೂ ಪಡೆದೆನು.

೭೮. ಪ್ರಿಯನೆ! ನನಗೆ ಪ್ರಾರ್ಥನೀಯವಾದ ಒಂದು ಮನೋರಥವಿದೆ. ವಿಚಾರಮಾಡಿದರೆ ಅದು ನಿನಗೂ ಅತ್ಯಂತ ಹಿತಕರವಾದುದು.

ಮಮ ತು ತ್ವದಧೀನಾಯಾಃ ಸುದುಷ್ಪ್ರಾಪತರೋ ಮಹಾನ್ ।
ತವ ಸ್ವಾಧೀನವೃತ್ತೇಸ್ತು ಸಿದ್ಧಪ್ರಾಯೋ ಮನೋರಥಃ ॥ ೭೯ ॥
ಪ್ರಾಣೇಶ ಕಿಂ ಬಹೂಕ್ತೇನ ಯದಿ ಪ್ರಾಣೈಃ ಪ್ರಯೋಜನಂ ।
ತದಾಽಭಿಲಷಿತಂ ದೇಹಿ ಪ್ರಾಣಾ ಯಾಸ್ಯಂತ್ಯಥಾಽನ್ಯಥಾ ॥ ೮೦ ॥
ಪ್ರಾಣೇಭ್ಯೋಽಪಿ ಗರೀಯಸ್ಯಾಸ್ತಸ್ಯಾ ವಾಕ್ಯಂ ನಿಶಮ್ಯ ಸಃ ।
ಉವಾಚ ವಚನಂ ರಾಜಾ ತಸ್ಯಾಃ ಸ್ವಸ್ಯಾಽಪಿ ಚ ಪ್ರಿಯಂ ॥ ೮೧ ॥

ರಾಜೋವಾಚ :—

ನಾಽಹಂ ಪ್ರಿಯೇ ತವಾಽದೇಯಮಿಹ ಪಶ್ಯಾಮಿ ಭಾಮಿನಿ ।
ಪ್ರಾಣಾ ಅಪಿ ಮಮ ಕ್ರೀತಾಸ್ತ್ವಯಾ ಶೀಲಕಲಾಗುಣೈಃ ॥ ೮೨ ॥
ಅವಿಲಂಬಿತಮಾಚಕ್ಷ್ವ ಕೃತಂ ವಿದ್ಧಿ ಕಲಾವತಿ ।
ಭವದ್ವಿಧಾನಾಂ ಸಾಧ್ವೀನಾಂ ಮನ್ಯೇಽಪ್ರಾಪ್ಯಂ ನ ಕಿಂಚನ ॥ ೮೩ ॥
ಕಃ ಪ್ರಾರ್ಥ್ಯಃ ಪ್ರಾರ್ಥನೀಯಂ ಕಿಂ ಕೋ ವಾ ಪ್ರಾರ್ಥಯಿತಾ ಪ್ರಿಯೇ ।
ನ ಪೃಥಗ್ಜನವತ್ಕಿಂಚಿದ್ವರ್ತನಂ ನೌ ಕಲಾವತಿ ॥ ೮೪ ॥
ದೇಶಃ ಕೋಶೋ ಬಲಂ ದುರ್ಗಂ ಯದನ್ಯದಪಿ ಭಾಮಿನಿ ।
ತತ್ತ್ವದೀಯಂ ನ ಮೇ ಕಿಂಚಿತ್ಸ್ವಾಮ್ಯಮಾತ್ರಮಿಹಾಽಸ್ತಿ ಮೇ ॥ ೮೫ ॥

---

೭೯. ನಿನ್ನ ಅಧೀನದಲ್ಲಿರುವ ನನಗೆ ಅದು ಅತ್ಯಂತ ದುರ್ಲಭವಾಗಿರುವುದು. ಸ್ವತಂತ್ರನಾದ ನಿನಗೆ ಅದು ಪ್ರಾಯಶಃ ಸಿದ್ಧವಾಗಿದೆ.

೮೦. ಪ್ರಿಯನೆ! ಹೆಚ್ಚುಮಾತಿನಿಂದೇನು. ನನ್ನ ಪ್ರಾಣದಿಂದ ಪ್ರಯೋಜನ ವಿರುವುದಾದರೆ ಈಗ ನನ್ನ ಇಷ್ಟಾರ್ಥವನ್ನು ನೆರವೇರಿಸಿಕೊಡು. ಇಲ್ಲದಿದ್ದರೆ ನನ್ನ ಪ್ರಾಣವು ಉಳಿಯದು.''

೮೧. ಆ ದೊರೆಯು ಪ್ರಾಣಕ್ಕಿಂತಲೂ ಪ್ರಿಯತಮಳಾದ ಅವಳ ಮಾತನ್ನು ಕೇಳಿ ತನಗೂ ಅವಳಿಗೂ ಹಿತವಾದ ಮಾತನಾಡಿದನು.

೮೨. ರಾಜನು ಹೇಳುತ್ತಾನೆ:—''ಪ್ರಿಯಳೆ! ನಾನು ನಿನಗೆ ಕೊಡಲನರ್ಹ ವಾದುದನ್ನು ಈ ಲೋಕದಲ್ಲಿ ಯಾವುದನ್ನೂ ಕಾಣುವುದಿಲ್ಲ. ನೀನು ನಿನ್ನ ನಡತೆ, ಕಲೆ ಮತ್ತು ಗುಣಗಳಿಂದ ನನ್ನ ಪ್ರಾಣವನ್ನೇ ಕೊಂಡುಕೊಂಡಿರುವೆ.

೮೩. ಶೀಘ್ರವಾಗಿ ಹೇಳು. ಅದು ನೆರವೇರಿತೆಂದು ತಿಳಿ. ಕಲಾವತಿ! ನಿನ್ನಂತಹ ಪತಿವ್ರತೆಯರಿಗೆ ಹೊಂದಲಶಕ್ಯವಾದುದು ಯಾವುದೂ ಇಲ್ಲ.

೮೪. ಯಾರನ್ನು ಪ್ರಾರ್ಥಿಸಬೇಕು. ಪ್ರಾರ್ಥಿಸುವುದು ಯಾವುದು? ಪ್ರಾರ್ಥನೆ ಮಾಡುವವರಾರು? ನಮ್ಮ ನಡತೆಯು ಸಾಮಾನ್ಯಜನರಂತಲ್ಲ.

೮೫. ದೇಶ, ಬೊಕ್ಕಸ, ಬಲ, ಕೋಟೆಗಳೂ ಇತರ ವಸ್ತುಗಳೂ ನಿನ್ನವು-ನನ್ನವಲ್ಲ. ಇವುಗಳಿಗೆ ನಾನು ಸ್ವಾಮಿಯು ಮಾತ್ರವಾಗಿದ್ದೇನೆ.

ತಚ್ಚ ಸ್ವಾಮ್ಯಂ ಮಮಾಽನ್ಯತ್ರ ತ್ವದೃತೇ ಜೀವಿತೇಶ್ವರಿ ।
ರಾಜ್ಯಂ ತ್ಯಜೇಯಂ ತ್ವದ್ವಾಕ್ಯಾತ್ತೃಣೀಕೃತ್ಯಾಽಪಿ ಮಾನಿನಿ ॥ ೮೬ ॥
ಮಾಲ್ಯಕೇತೋರ್ಮಹೀಜಾನೇರಿತಿವಾಕ್ಯಂ ನಿಶಮ್ಯ ಸಾ ।
ಪ್ರಾಹ ಗಂಭೀರಯಾ ವಾಚಾ ವಚಶ್ಚಾರು ಕಲಾವತೀ ॥ ೮೭ ॥

ಕಲಾವತ್ಯುವಾಚ :—

ನಾಥ ಪ್ರಜಾಸೃಜಾ ಪೂರ್ವಂ ಸೃಷ್ಟ್ವಾ ನಾನಾವಿಧಾಃ ಪ್ರಜಾಃ ।
ಪ್ರಜಾಹಿತಾಯ ಸಂಸೃಷ್ಟಂ ಪುರುಷಾರ್ಥಚತುಷ್ಟಯಂ ॥ ೮೮ ॥
ತದ್ವಿಹೀನಾ ಜನಿರಪಿ ಜಲಬುದ್ಬುದವನ್ಮೃಥಾ ।
ತಸ್ಮಾದೇಕೋಽಪಿ ಸಂಸಾಧ್ಯಃ ಪರತ್ರೇಹ ಚ ಶರ್ಮಣೇ ॥ ೮೯ ॥
ಯತ್ರಾನುಕೂಲ್ಯಂ ದಂಪತ್ಯೋಸ್ತ್ರಿವರ್ಗಸ್ತತ್ರ ವರ್ಧತೇ ।
ಯದುಚ್ಯತೇ ಪುರಾವಿದ್ಭಿರಿತಿ ತತ್ತಥ್ಯಮೀಕ್ಷಿತಂ ॥ ೯೦ ॥
ಮದ್ವಿಧಾನಾಂ ತು ದಾಸೀನಾಂ ಶತಂ ತೇಽಸ್ತೀಹ ಮಂದಿರೇ ।
ತಥಾಽಪಿ ನಿತರಾಂ ಪ್ರೇಮ ಸ್ವಾಮಿನೋ ಮಯಿ ದೃಶ್ಯತೇ ॥ ೯೧ ॥
ತವ ದಾಸ್ಯಪಿ ಭೋಗಾಢ್ಯಾ ಕಿಮುತಾಂಕಸ್ಥಲೀಚರೀ ।
ತತ್ರಾಽಪ್ಯನನ್ಯಸಂಪತ್ತಿಸ್ತತ್ರ ಸ್ವಾಧೀನಭರ್ತೃತಾ ॥ ೯೨ ॥

---

೮೬. ಪ್ರಾಣೇಶ್ವರಿ! ಆ ಸ್ವಾಮ್ಯವೂ ನಿನ್ನನ್ನು ಬಿಟ್ಟು ಬೇರೆ ವಸ್ತುಗಳಲ್ಲಿರುವುದು. ನಿನ್ನ ಮಾತಿನಿಂದ ರಾಜ್ಯವನ್ನೂ ತೃಣಕ್ಕೆ ಸಮಾನವನ್ನಾಗಿ ಭಾವಿಸಿ ತೊರೆಯುವೆನು.''

೮೭. ಆ ಕಲಾವತಿಯು ಮಾಲ್ಯಕೇತುರಾಜನ ಈ ಮಾತನ್ನು ಕೇಳಿ ಗಂಭೀರವಾಣಿಯಿಂದ ಮಧುರವಾಗಿ ಹೀಗೆ ನುಡಿದಳು.

೮೮. ಕಲಾವತಿಯು ಹೇಳುತ್ತಾಳೆ:—''ನಾಥ! ಬ್ರಹ್ಮನು ಹಿಂದೆ ನಾನಾ ವಿಧ ಪ್ರಜೆಗಳನ್ನು ಸೃಜಿಸಿರುವನು. ಆ ಪ್ರಜೆಗಳ ಹಿತಕ್ಕಾಗಿ ಪುರುಷಾರ್ಥ ಚತುಷ್ಟಯವೂ ಆತನಿಂದಲೇ ನಿರ್ಮಿತವಾಗಿರುವುದು.

೮೯. ಆ ಪುರುಷಾರ್ಥಗಳಿಲ್ಲದವನ ಉತ್ಪತ್ತಿಯು ನೀರಿನಮೇಲಿರುವ ಗುಳ್ಳೆಯಂತೆ ವ್ಯರ್ಥವು. ಆದುದರಿಂದ ಇಹಪರಲೋಕಗಳ ಸುಖಕ್ಕಾಗಿ ಅವುಗಳಲ್ಲಿ ಒಂದನ್ನಾದರೂ ಸಾಧಿಸಬೇಕು.

೯೦–೯೧. 'ಎಲ್ಲಿ ದಂಪತಿಗಳು ಅನುಕೂಲರಾಗಿರುವರೊ, ಅಲ್ಲಿ ತ್ರಿವರ್ಗವು ಅಭಿವೃದ್ಧಿಗೊಳ್ಳುವುದು' ಎಂದು ಹಿಂದಿನವರು ಹೇಳುವ ಈ ಮಾತು ನಿಜವಾಗಿ ಕಾಣುವುದು. ನಿನ್ನ ಈ ಅರಮನೆಯಲ್ಲಿ ನನ್ನಂತಹ ನೂರುಮಂದಿ ದಾಸಿಯರಿರುವರು. ಹಾಗಾದರೂ ಸ್ವಾಮಿಗೆ ನನ್ನಲ್ಲಿಯೆ ಹೆಚ್ಚು ಪ್ರೀತಿಯು ಕಾಣುವುದು.

೯೨. ನಿನ್ನ ಸೇವಕಳೂ ಸುಖವನ್ನನುಭವಿಸುವಳು. ತೊಡೆಯಲ್ಲಿ ಕುಳಿತು

**ವಿಪಶ್ಚಿತ್ಸಂಚಯೇದರ್ಥಾನಿಷ್ಟಾಪೂರ್ತಾಯ ಕರ್ಮಣೇ ।**
**ತಪೋರ್ಥಮಾಯುರ್ನಿರ್ವಿಘ್ನಂ ದಾರಾಂಶ್ಚಾಽಪತ್ಯಲಬ್ಧಯೇ ॥ ೯೩ ॥**
**ತವೈತತ್ಸರ್ವಮಸ್ತೀಹ ವಿಶ್ವೇಶಾಽನುಗ್ರಹಾತ್ಪ್ರಿಯ ।**
**ಪೂರಣೀಯೋಽಭಿಲಾಷೋ ಮೇ ಯದಿ ತದ್ವಚ್ಮ್ಯಹಂ ಶೃಣು ॥ ೯೪ ॥**
**ತೂರ್ಣಂ ಪ್ರಹಿಣು ಮಾಂ ನಾಥ ವಿಶ್ವನಾಥಪುರೀಂ ಪ್ರತಿ ।**
**ಪ್ರಾಣಾಃ ಪ್ರಯಾತಾಃ ಪ್ರಾಗೇವ ವಪುಃಶೇಷಾಽಸ್ಮಿ ಕೇವಲಂ ॥ ೯೫ ॥**
**ಮಾಲ್ಯಕೇತುಃ ಕಲಾವತ್ಯಾ ಇತ್ಯಾಕರ್ಣ್ಯ ವಚಃ ಸ್ಫುಟಂ ।**
**ಕ್ಷಣಂ ವಿಚಾರ್ಯ ಸ್ವಹೃದಿ ರಾಜಾ ಪ್ರೋವಾಚ ತಾಂ ಪ್ರಿಯಾಂ ॥ ೯೬ ॥**
**ಪ್ರಿಯೇ ಕಲಾವತಿ ಯದಿ ತವ ಗಂತವ್ಯಮೇವ ಹಿ ।**
**ರಾಜಲಕ್ಷ್ಮ್ಯಾಽನಯಾ ಕಿಂ ಮೇ ಚಲಯಾ ತ್ವದ್ವಿಹೀನಯಾ ॥ ೯೭ ॥**
**ನ ರಾಜ್ಯಂ ರಾಜ್ಯಮಿತ್ಯಾಹೂ ರಾಜ್ಯಶ್ರೀಃ ಪ್ರೇಯಸೀ ಧ್ರುವಂ ।**
**ಸಪ್ತಾಂಗಮಪಿ ತದ್ರಾಜ್ಯಂ ತಯಾ ಹೀನಂ ತೃಣಾಯತೇ ॥ ೯೮ ॥**
**ನಿಃಸಪತ್ನಂ ಕೃತಂ ರಾಜ್ಯಂ ಭುಕ್ತ್ವಾ ಭೋಗಾನ್ನಿರಂತರಂ ।**
**ಹೃಷೀಕಾರ್ಥಾಃ ಕೃತಾರ್ಥಾಶ್ಚ ವಿಧೃತಾ ಅಧೃತಿಃ ಪ್ರಿಯೇ ॥ ೯೯ ॥**

---

ಕೊಳ್ಳುವಳೂ, ಅದರಲ್ಲಿಯೂ ಸ್ವಾಧೀನಸಂಪತ್ತುಳ್ಳವಳೂ, ಅದರಲ್ಲಿಯೂ ಸ್ವಾಧೀನನಾದ ಪತಿಯುಳ್ಳವಳೂ ಆಗಿರುವ ಸ್ತ್ರೀಯ ವಿಷಯದಲ್ಲಿ ಏನನ್ನು ಹೇಳಲಿ.

೯೩. ವಿದ್ವಾಂಸನು ಯಾಗಕರಣ, ತಟಾಕನಿರ್ಮಾಣ ಮುಂತಾದ ಕಾರ್ಯಗಳಿಗೋಸ್ಕರ ಹಣಗಳನ್ನೂ, ತಪಸ್ಸಿಗಾಗಿ ಆಯುಸ್ಸನ್ನೂ, ಮಕ್ಕಳಿಗಾಗಿ ಪತ್ನಿಯನ್ನೂ ಸಂಗ್ರಹಿಸಬೇಕು..

೯೪. ಪ್ರಿಯನೆ! ಅವೆಲ್ಲವೂ ವಿಶ್ವೇಶ್ವರನ ಅನುಗ್ರಹದಿಂದ ನಿನಗುಂಟಾಗಿವೆ. ನನ್ನ ಅಭಿಲಾಷೆಯನ್ನು ಪೂರ್ತಿಗೊಳಿಸುವುದಾದರೆ ಅದನ್ನು ಹೇಳುವೆನು ಕೇಳು.

೯೫. ನಾಥ! ನನ್ನನ್ನು ಶೀಘ್ರವಾಗಿ ವಾರಾಣಸಿಗೆ ಕಳುಹಿಸು. ಮೊದಲೇ ನನ್ನ ಪ್ರಾಣಗಳು ಅಲ್ಲಿಗೆ ಹೊರಟುಹೋಗಿವೆ. ಕೇವಲ ಶರೀರವು ಮಾತ್ರ ಇಲ್ಲಿದೆ.”

೯೬. ಮಾಲ್ಯಕೇತುವು ಕಲಾವತಿಯ ಸ್ಪಷ್ಟವಾದ ಈ ಮಾತನ್ನು ಕೇಳಿ ಸ್ವಲ್ಪಹೊತ್ತು ಮನಸ್ಸಿನಲ್ಲಿಯೆ ಆಲೋಚಿಸಿ ಅವಳನ್ನು ಕುರಿತು ಇಂತೆಂದನು.

೯೭. “ಪ್ರಿಯೆ! ಕಲಾವತಿ! ನೀನು ಅಲ್ಲಿಗೆ ಹೋಗಲೇಬೇಕಾದರೆ ನನಗೆ ನೀನಿಲ್ಲದ ಈ ಚಂಚಲರಾಜ್ಯಸಂಪತ್ತಿನಿಂದೇನು ಪ್ರಯೋಜನ?

೯೮–೯೯. ರಾಜ್ಯಲಕ್ಷ್ಮೀವಿಹೀನವಾದ ರಾಜ್ಯವನ್ನು ರಾಜ್ಯವಲ್ಲವೆನ್ನುವರು. ಪ್ರಿಯಳೇ ರಾಜ್ಯಲಕ್ಷ್ಮಿಯು. ಅವಳಿಲ್ಲದಿದ್ದರೆ ಸಪ್ತಾಂಗರಾಜ್ಯವೂ ತೃಣಸಮಾನವಾಗುವುದು. ನಾನಾದರೋ ರಾಜ್ಯವನ್ನು ಶತ್ರುಗಳಿಲ್ಲದಂತೆ ಮಾಡಿರುವೆನು. ಯಾವಾಗಲೂ ಭೋಗಗಳನ್ನನುಭವಿಸಿ ಇಂದ್ರಿಯಗಳು ಕೃತಾರ್ಥವಾಗಿವೆ. ಮನಸ್ಸು ಒಂದು ಸ್ಥಿತಿಗೆ ಬಂದಿರುವುದು.

ಅಪತ್ಯಾನ್ಯಪಿ ಜಾತಾನಿ ಕಿಂ ಕರ್ತವ್ಯಮಿಹಾಽಸ್ತಿ ಮೇ ।
ಅವಶ್ಯಮೇವ ಗಂತವ್ಯಾಽಽವಾಭ್ಯಾಂ ವಾರಾಣಸೀಪುರೀ ॥ ೧೦೦ ॥
ಮಾಲ್ಯಕೇತುಃ ಪ್ರಿಯಾಮಿತ್ಥಮಾಶ್ವಾಸ್ಯ ಕೃತನಿಶ್ಚಯಃ ।
ಸಮಾಹೂಯ ಚ ದೈವಜ್ಞಾನ್ಪ್ರಕೃತೀಃ ಪರಿಪೂಜ್ಯ ಚ ॥ ೧೦೧ ॥
ಪುತ್ರೇ ರಾಜ್ಯಂ ನಿಧಾಯಾಽಥ ರಾಜಾ ಕಾಶೀಂ ಪ್ರತಸ್ಥಿವಾನ್ ।
ರತ್ನಜಾತಂ ಕಿಯದಪಿ ಪುತ್ರಾದರ್ಥಂ ಪ್ರಗೃಹ್ಯ ಚ ॥ ೧೦೨ ॥
ದೃಷ್ಟ್ವಾ ವಿಶ್ವೇಶ್ವರಪುರೀಂ ಹೃಷ್ಟರೋಮಾ ನರೇಶ್ವರಃ ।
ಮೇನೇ ಕೃತಾರ್ಥಮಾತ್ಮಾನಂ ಸಂಸಾರಾಂಬುಧಿಪಾರಗಂ ॥ ೧೦೩ ॥
ಪ್ರಾಗ್ಜನ್ಮವಾಸನಾಯೋಗಾತ್ಸಾಪಿ ರಾಜ್ಞೀ ಕಲಾವತೀ ।
ಗ್ರಾಮಾಂತರಾದಾಗತೇವ ಪುರೀಮಾರ್ಗಾನವೈತ್ಸ್ವಯಂ ॥ ೧೦೪ ॥
ಮಣಿಕರ್ಣ್ಯಾಮಥ ಸ್ನಾತ್ವಾ ಭೂರಿ ದತ್ವಾ ತತೋ ವಸು ।
ವಿಶ್ವೇಶಮರ್ಚಯಿತ್ವಾಽಥ ರತ್ನಜಾತೈರನೇಕಶಃ ॥ ೧೦೫ ॥
ದತ್ವಾ ತತ್ರಾಽಪಿ ರತ್ನಾನಿ ಗಜಾನಶ್ವಾನ್ಗವಾಂ ವ್ರಜಂ ।
ದುಕೂಲಾನಿ ವಿಚಿತ್ರಾಣಿ ಪೂಜೋಪಕರಣಾನಿ ಚ ॥ ೧೦೬ ॥
ಸುವರ್ಣರೂಪ್ಯಕಲಶಾನ್ದೀಪೀದರ್ಪಣಚಾಮರಾನ್ ।
ಧ್ವಜಸ್ತಂಭಪತಾಕಾಶ್ಚ ವಿಚಿತ್ರೋಲ್ಲೋಚಕಾನಿಚ ॥ ೧೦೭ ॥

---

೧೦೦. ಮಕ್ಕಳೂ ಜನಿಸಿರುವರು. ಇನ್ನು ನನಗೆ ಇಲ್ಲಿ ಮಾಡಬೇಕಾದುದು ಏನಿದೆ? ನಾವಿಬ್ಬರೂ ಕಾಶಿಗೆ ಹೋಗೋಣ.''

೧೦೧–೧೦೨. ಮಾಲ್ಯಕೇತುವು ಹೀಗೆ ನಿಶ್ಚಯಿಸಿ ಪ್ರಿಯಳನ್ನು ಸಮಾಧಾನ ಗೊಳಿಸಿ ಜ್ಯೋತಿಷ್ಕರನ್ನೂ, ಪ್ರಜೆಗಳನ್ನೂ ಕರೆಯಿಸಿ ಅವರನ್ನು ಪೂಜಿಸಿ ಪುತ್ರನಲ್ಲಿ ರಾಜ್ಯವನ್ನಿರಿಸಿ ಅವನಿಂದ ಕೆಲವು ರತ್ನಗಳನ್ನೂ, ದ್ರವ್ಯಗಳನ್ನೂ ತೆಗೆದುಕೊಂಡು ಕಾಶಿಗೆ ಪ್ರಯಾಣ ಮಾಡಿದನು.

೧೦೩. ದೊರೆಯು ಕಾಶಿಯನ್ನು ಈಕ್ಷಿಸಿ ರೋಮಾಂಚಗೊಂಡು, ತನ್ನನ್ನು ಸಂಸಾರಸಮುದ್ರವನ್ನು ದಾಟಿ ಧನ್ಯನಾದವನನ್ನಾಗಿ ತಿಳಿದನು.

೧೦೪. ರಾಣಿಯಾದ ಕಲಾವತಿಯು ಹಿಂದಿನ ಜನ್ಮದ ವಾಸನಾಬಲದಿಂದ ಬೇರೆ ಗ್ರಾಮದಿಂದ ಬಂದವಳಂತೆ ಪಟ್ಟಣದ ದಾರಿಯನ್ನು ತಾನೇ ತಿಳಿದಳು.

೧೦೫–೧೧೦. ತರುವಾಯ ಮಣಿಕರ್ಣಿಕೆಯಲ್ಲಿ ಮಿಂದು ಬಹುಧನ ಗಳನ್ನು ದಾನಮಾಡಿ, ಅನೇಕ ರತ್ನಗಳಿಂದ ವಿಶ್ವೇಶ್ವರನನ್ನು ಪೂಜಿಸಿ ಅಲ್ಲಿಯೂ ರತ್ನ, ಆನೆ, ಕುದುರೆ, ಗೋವುಗಳನ್ನೂ, ಪಟ್ಟೆವಸ್ತ್ರ, ಪೂಜಾಸಾಮಗ್ರಿಗಳು, ಚಿನ್ನಬೆಳ್ಳಿಯ ಕಲಶಗಳು, ದೀಪ, ಕನ್ನಡಿ, ಚಾಮರ, ಧ್ವಜಸ್ತಂಭ, ಪತಾಕೆ, ನಾನಾ ಬಗೆಯ ಮೇಲ್ಕಟ್ಟುಗಳು ಇವುಗಳನ್ನೂ ದಾನಮಾಡಿ ಪ್ರದಕ್ಷಿಣೆಗೈದು

ಅಥ ಪ್ರದಕ್ಷಿಣೀಕೃತ್ಯ ಮುಕ್ತಿಮಂಡಪಮಾವಿಶತ್ ।
ತತ್ರ ಧರ್ಮಕಥಾಂ ಶ್ರುತ್ವಾ ದತ್ವಾ ತತ್ರಾऽಪಿ ಸದ್ಧನಂ ॥ ೧೦೮ ॥
ಸಾಯಂತನೀಂ ಮಹಾಪೂಜಾಂ ಪುನಃ ಕೃತ್ವಾ ಕ್ಷಿತೀಶ್ವರಃ ।
ತತ್ರ ಜಾಗರಣಂ ಕೃತ್ವಾ ತೌರ್ಯತ್ರಿಕಮಹೋತ್ಸವೈಃ ॥ ೧೦೯ ॥
ಅಥ ಪ್ರಾತಃ ಸಮುತ್ಥಾಯ ಕೃತ್ವಾ ಶೌಚಾಚಮಕ್ರಿಯಾಂ ।
ರಾಜ್ಞ್ಯಾ ವಿನಿರ್ದಿಷ್ಟಪಥಾ ಜ್ಞಾನವಾಪೀಂ ನೃಪೋ ಯಯೌ ॥ ೧೧೦ ॥
ನೃಪಃ ಸಾರ್ಧಂ ಕಲಾವತ್ಯಾ ತತ್ರ ಸಸ್ನೌ ಪ್ರಹೃಷ್ಟವತ್ ।
ಅಥ ಪಿಂಡಾನ್ ನಿರ್ವಾಪ್ಯ ಸಂತರ್ಪ್ಯ ಶ್ರದ್ಧಯಾ ಪಿತೄನ್ ॥ ೧೧೧ ॥
ತತ್ರ ರೂಪ್ಯಸುವರ್ಣಾದಿ ಪಾತ್ರೇಭ್ಯಃ ಪ್ರತಿಪಾದ್ಯ ಚ ।
ದೀನಾऽಂಧಕೃಪಣಾऽನಾಥಾನ್ಮಹಾರ್ಹೈ ರತ್ನಜಾತಕೈಃ ॥ ೧೧೨ ॥
ಪ್ರೀಣಯಿತ್ವಾ ನರಪತಿಃ ಪಾರಣಾಂ ಕೃತವಾಂಸ್ತತಃ ।
ಸಂಸ್ಕಾರ್ಯ ರತ್ನಸೋಪಾನೈರ್ಜ್ಞಾನವಾಪೀಂ ಕಲಾವತೀ ॥ ೧೧೩ ॥
ಆಬಬಂಧ ರತಿಂ ತತ್ರ ಸಹ ಭರ್ತ್ರಾ ತಪಸ್ವಿನೀ ।
ಏಕಾಂತರೋಪವಾಸೈಶ್ಚ ಕದಾಚಿಚ್ಚ ತ್ರ್ಯಹೋವ್ರತೈಃ ॥ ೧೧೪ ॥
ಷಡಹೋಭೋಜನೈಶ್ಚಾऽಪಿ ಪಕ್ಷಾರ್ಧನಿಯಮೈರಥ ।
ಪಕ್ಷಾಂತರೋಪವಾಸೈಶ್ಚ ಮಾಸೋಪವಸನಾದಿಭಿಃ ॥ ೧೧೫ ॥
ಚಾಂದ್ರಾಯಣವ್ರತೈಃ ಕೃಚ್ಛ್ರೈರ್ಭರ್ತುಃ ಶುಶ್ರೂಷಣೈರಪಿ ।
ನಿನಾಯ ಕ್ಷಣವತ್ಕಾಲಮಾಯುಃಶೇಷಸ್ಯ ಸಾऽನಘಾ ॥ ೧೧೬ ॥

---

ಮುಕ್ತಿಮಂಡಪವನ್ನು ಪ್ರವೇಶಿಸಿದನು. ಅಲ್ಲಿ ಧರ್ಮಕಥೆಯನ್ನು ಕೇಳಿ ದ್ರವ್ಯವನ್ನು ದಾನಮಾಡಿ ಸಾಯಂಕಾಲದ ಮಹಾಪೂಜೆಯನ್ನು ಪೂರಯಿಸಿ ವಾದ್ಯಗಳಿಂದಲೂ, ಉತ್ಸವಗಳಿಂದಲೂ ಜಾಗರಣೆಗೈದು, ಬೆಳಗ್ಗೆದ್ದು ಶೌಚಾಚಮನಗಳನ್ನು ಮಾಡಿ ರಾಣಿಯು ತೋರಿಸಿದ ದಾರಿಯಿಂದ ಜ್ಞಾನವಾಪಿಗೆ ಹೋದನು.

೧೧೧–೧೧೬. ದೊರೆಯು ಆ ಕಲಾವತಿಯೊಡನೆ ಬಹು ಸಂತೋಷದಿಂದ ಅಲ್ಲಿ ಮಿಂದನು. ಬಳಿಕ ಅವನು ಶ್ರದ್ಧೆಯಿಂದ ಪಿಂಡಪ್ರದಾನಮಾಡಿ ಪಿತೃಗಳಿಗೆ ತರ್ಪಣಗೈದು ಸತ್ಪಾತ್ರರಿಗೆ ಚಿನ್ನ ಬೆಳ್ಳಿ ಮೊದಲಾದುವುಗಳನ್ನು ದಾನಮಾಡಿ ದೀನ, ಕುರುಡ, ಕೃಪಣ, ಅನಾಥರನ್ನು ಅತ್ಯಮೂಲ್ಯರತ್ನಗಳಿಂದ ಸಂತೋಷಗೊಳಿಸಿ ಪಾರಣೆಮಾಡಿದನು. ಕಲಾವತಿಯು ಜ್ಞಾನವಾಪಿಯನ್ನು ರತ್ನದ ಮೆಟ್ಟಲುಗಳಿಂದ ಸಂಸ್ಕರಿಸಿ ಪತಿಯೊಡನೆ ಸೇವೆಗಾಗಿ ಅಲ್ಲಿಯೆ ನಿಂತಳು. ನಿರ್ದುಷ್ಟಳಾದ ಅವಳು ದಿನಬಿಟ್ಟು ದಿನ ಉಪವಾಸಗಳಿಂದಲೂ, ಮೂರು ದಿನಗಳ ಉಪವಾಸ ವ್ರತಗಳಿಂದಲೂ, ಆರು ದಿನ ಭೋಜನಗಳಿಂದಲೂ, ಪಕ್ಷಾರ್ಧನಿಯಮಗಳಿಂದಲೂ, ಪಕ್ಷದ ಕೊನೆಯ ಉಪವಾಸಗಳಿಂದಲೂ, ತಿಂಗಳು ಉಪವಾಸಮಾಡುವುದ

ಏಕದಾ ಜ್ಞಾನವಾಪ್ಯಾಂ ತು ಪ್ರಾತಃ ಸ್ನಾತ್ವೋಪವಿಷ್ಟಯೋಃ ।
ಆಗತ್ಯ ಜಟಿಲಃ ಕಶ್ಚಿದ್ವಿಭೂತಿಂ ದತ್ತವಾನ್ಕರೇ ॥ ೧೧೭ ॥
ಉವಾಚ ಚ ಪ್ರಸನ್ನಾಸ್ಯ ಆಶೀರ್ಭಿರಭಿನಂದ್ಯ ಚ ।
ಉತ್ತಿಷ್ಠತಂ ಪ್ರಕುರುತಂ ಮಹಾನೇಪಥ್ಯಮದ್ಯ ವೈ ॥ ೧೧೮ ॥
ತಾರಕೋದಯಸಂಪ್ರಾಪ್ತಿರ್ಭವಿತ್ರೀ ವಾಂ ಕ್ಷಣಾದಿಹ ।
ಯಾವದಿತ್ಥಂ ಸಮಾಚಷ್ಟ ಜಟಿಲೋಽಗ್ರೇ ತಯೋರ್ವಚಃ ॥ ೧೧೯ ॥
ತಾವದ್ವಿಮಾನಮಾಪನ್ನಂ ಸಕ್ವಣತ್ಕಿಂಕಿಣೀಗಣಂ ।
ಪಶ್ಯತಾಂ ಸರ್ವಲೋಕಾನಾಂ ಚಂದ್ರಮೌಲಿರಥೋ ರಥಾತ್ ॥ ೧೨೦ ॥
ಉತ್ತೀರ್ಯ ತಚ್ಛ್ರುತಿಪುಟೇ ಕಿಮಪಿ ಸ್ವಯಮಾದಿಶತ್ ।
ಅನಾಖ್ಯಂ ಯತ್ಪರಂಜ್ಯೋತಿರುಚ್ಚಕ್ರಾಮ ಚ ತತ್ಕ್ಷಣಾತ್ ॥ ೧೨೧ ॥
ಉದ್ದ್ಯೋತಯನ್ನಭೋ ವರ್ತ್ಮ ದೇವೋಽಪಿ ಸ್ವಾಲಯಂ ಯಯೌ ।
ಸ್ಕಂದ ಉವಾಚ :—
ತದಾ ಪ್ರಭೃತಿ ಲೋಕೇತ್ರ ಜ್ಞಾನವಾಪೀ ವಿಶಿಷ್ಯತೇ ॥ ೧೨೨ ॥
ಸರ್ವೇಭ್ಯಸ್ತೀರ್ಥಮುಖ್ಯೇಭ್ಯಃ ಪ್ರತ್ಯಕ್ಷಜ್ಞಾನದಾ ಮುನೇ ।
ಸರ್ವಜ್ಞಾನಮಯೀ ಚೈಷಾ ಸರ್ವಲಿಂಗಮಯೀ ಶುಭಾ ॥ ೧೨೩ ॥

---

ರಿಂದಲೂ, ಕೃಚ್ಛ್ರಚಾಂದ್ರಾಯಣವ್ರತಗಳಿಂದಲೂ, ಪತಿಸೇವೆಯಿಂದಲೂ ಉಳಿದ ಆಯುಸ್ಸಿನ ಕಾಲವನ್ನು ಕ್ಷಣಕಾಲದಂತೆ ಕಳೆದಳು.

೧೧೭. ಒಂದಾನೊಂದು ದಿನ ಬೆಳಗ್ಗೆ ಅವರಿಬ್ಬರೂ ಜ್ಞಾನವಾಪಿಯಲ್ಲಿ ಮಿಂದು ಕುಳಿತಿರಲು, ಒಬ್ಬ ಜಟಾಧಾರಿಯಾದ ಮುನಿಯು ಬಂದು ಕೈಗೆ ವಿಭೂತಿಯನ್ನಿತ್ತನು.

೧೧೮–೧೨೧. ಆ ಮುನಿಯು ಪ್ರಸನ್ನಮುಖವುಳ್ಳವನಾಗಿ ಅವರನ್ನು ಆಶೀರ್ವಾದಗಳಿಂದ ಸಂತೋಷಗೊಳಿಸಿ, "ಮೇಲಕ್ಕೇಳಿರಿ. ಒಳ್ಳೆ ಉಡುಪನ್ನು ಧರಿಸಿರಿ. ನಿಮಗೆ ಇಲ್ಲಿ ಕ್ಷಣಕಾಲದಲ್ಲಿಯೇ ತಾರಕಮಂತ್ರವು ಲಭಿಸುವುದು" ಎಂದನು. ಹೀಗೆ ಆ ಯತಿಯು ಹೇಳುವಷ್ಟರಲ್ಲಿಯೆ ಶಬ್ದಮಾಡುತ್ತಿರುವ ಗಂಟೆಗಳುಳ್ಳ ವಿಮಾನವು ಅಲ್ಲಿಗೆ ಬಂದಿತು. ಬಳಿಕ ಸಮಸ್ತಜನರೂ ನೋಡುತ್ತಿರುವಂತೆಯೆ ಮಹೇಶ್ವರನು ರಥದಿಂದಿಳಿದು ಅವರ ಕಿವಿಯಲ್ಲಿ ಬ್ರಹ್ಮಜ್ಞಾನವನ್ನು ಉಪದೇಶಮಾಡಲು ಕೂಡಲೆ ವಿಮಾನವು ಮೇಲಕ್ಕೆದ್ದಿತು.

೧೨೨. ಮಹಾದೇವನೂ ಆಕಾಶಮಾರ್ಗವನ್ನು ಪ್ರಕಾಶಗೊಳಿಸುತ್ತ ತನ್ನ ಸ್ಥಾನಕ್ಕೆ ಹೊರಟುಹೋದನು. ಸ್ಕಂದನು ಹೇಳುತ್ತಾನೆ:—ಅದು ಮೊದಲ್ಗೊಂಡು ಜ್ಞಾನವಾಪಿಯು ಲೋಕದಲ್ಲಿ ಉತ್ಕೃಷ್ಟವಾಗಿರುವುದು.

೧೨೩–೧೨೫. ಮುನಿಯೆ! ಸಕಲ ಉತ್ತಮ ತೀರ್ಥಗಳಿಗಿಂತಲೂ ಪ್ರತ್ಯಕ್ಷ

**ಸಾಕ್ಷಾಚ್ಛಿವಮಯೀ ಮೂರ್ತಿರ್ಜ್ಞಾನಕೃಜ್ಜ್ಞಾನವಾಪಿಕಾ ।**
**ಸಂತಿ ತೀರ್ಥಾನ್ಯನೇಕಾನಿ ಸದ್ಯಃ ಶುಚಿಕರಾಣ್ಯಪಿ ॥ ೧೨೪ ॥**
**ಪರಂ ತು ಜ್ಞಾನವಾಪ್ಯಾ ಹಿ ಕಲಾಂ ನಾಽರ್ಹಂತಿ ಷೋಡಶೀಂ ।**
**ಜ್ಞಾನವಾಪ್ಯಾಃ ಸಮುತ್ಪತ್ತಿಂ ಯಃ ಶ್ರೋಷ್ಯತಿ ಸಮಾಹಿತಃ ।**
**ನ ತಸ್ಯ ಜ್ಞಾನವಿಭ್ರಂಶೋ ಮರಣೇ ಜಾಯತೇ ಕ್ವಚಿತ್ ॥ ೧೨೫ ॥**
**ಮಹಾಖ್ಯಾನಮಿದಂ ಪುಣ್ಯಂ ಮಹಾಪಾತಕನಾಶನಂ ।**
**ಮಹಾದೇವಸ್ಯ ಗೌರ್ಯಾಶ್ಚ ಮಹಾಪ್ರೀತಿವಿವರ್ಧನಂ ॥ ೧೨೬ ॥**
**ಪಠಿತ್ವಾ ಪಾಠಯಿತ್ವಾ ವಾ ಶ್ರುತ್ವಾ ವಾ ಶ್ರದ್ಧಯಾನ್ವಿತಃ ।**
**ಜ್ಞಾನವಾಪ್ಯಾಃ ಶುಭಾಽಖ್ಯಾನಂ ಶಿವಲೋಕೇ ಮಹೀಯತೇ ॥ ೧೨೭ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಜ್ಞಾನವಾಪೀಪ್ರಶಂಸನಂ"
ನಾಮ ಚತುಸ್ತ್ರಿಂಶೋಽಧ್ಯಾಯಃ

---

ಜ್ಞಾನವನ್ನು ಕೊಡುವ ಈ ಜ್ಞಾನವಾಪಿಕೆಯು ಸಕಲ ಜ್ಞಾನರೂಪವೂ, ಸಮಸ್ತ ಲಿಂಗರೂಪವೂ, ಶಿವರೂಪವೂ ಆಗಿರುವುದು. ಲೋಕದಲ್ಲಿ ಶುದ್ಧಿಯನ್ನುಂಟು ಮಾಡುವ ಅನೇಕ ತೀರ್ಥಗಳಿವೆ. ಆದರೆ ಅವು ಜ್ಞಾನವಾಪಿಯ ಹದಿನಾರನೆಯ ಒಂದು ಭಾಗದ ಮಾಹಾತ್ಮ್ಯವನ್ನೂ ಹೊಂದಿರುವುದಿಲ್ಲ. ಈ ಜ್ಞಾನವಾಪಿಯ ಉತ್ಪತ್ತಿಯನ್ನು ಸಾವಧಾನಮನಸ್ಸಿನಿಂದ ಕೇಳಿದವನಿಗೆ ಮರಣಕಾಲದಲ್ಲಿಯೂ ಜ್ಞಾನಭ್ರಂಶವಾಗುವುದಿಲ್ಲ.

೧೨೬. ಈ ಕಥೆಯು ಪುಣ್ಯಕರವೂ, ಮಹಾಪಾತಕಗಳನ್ನು ಪರಿಹರಿಸುವುದೂ, ಉಮಾಮಹೇಶ್ವರರಿಗೆ ಅತ್ಯಂತ ಪ್ರೀತಿಯನ್ನು ಹೆಚ್ಚಿಸುವುದೂ ಆಗಿರುವುದು.

೧೨೭. ಈ ಜ್ಞಾನವಾಪಿಯ ಕಥೆಯನ್ನು ಶ್ರದ್ಧೆಯಿಂದ ಹೇಳಿದವನೂ, ಹೇಳಿಸಿದವನೂ, ಕೇಳಿದವನೂ ಶಿವಲೋಕದಲ್ಲಿ ಪೂಜ್ಯನಾಗುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಜ್ಞಾನವಾಪೀಪ್ರಶಂಸನ"ವೆಂಬ
ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚತ್ರಿಂಶೋಽಧ್ಯಾಯಃ

## ಸದಾಚಾರವರ್ಣನಂ

**ಕುಂಭಯೋನಿರುವಾಚ :—**

**ಅವಿಮುಕ್ತಂ ಮಹಾಕ್ಷೇತ್ರಂ ಪರಂ ನಿರ್ವಾಣಕಾರಣಂ ।**
**ಕ್ಷೇತ್ರಾಣಾಂ ಪರಮಂ ಕ್ಷೇತ್ರಂ ಮಂಗಲಾನಾಂ ಚ ಮಂಗಳಂ ॥ ೧ ॥**
**ಶ್ಮಶಾನಾನಾಂ ಚ ಸರ್ವೇಷಾಂ ಶ್ಮಶಾನಂ ಪರಮಂ ಮಹತ್ ।**
**ಪೀಠಾನಾಂ ಪರಮಂ ಪೀಠಮೂಷರಾಣಾಂ ಮಹೋಷರಂ ॥ ೨ ॥**
**ಧರ್ಮಾಽಭಿಲಾಷಿಬುದ್ಧೀನಾಂ ಧರ್ಮರಾಶಿಕರಂ ಪರಂ ।**
**ಅರ್ಥಾರ್ಥಿನಾಂ ಶಿಖಿರಥ ಪರಮಾರ್ಥಪ್ರಕಾಶಕಂ ॥ ೩ ॥**
**ಕಾಮಿನಾಂ ಕಾಮಜನನಂ ಮುಮುಕ್ಷೂಣಾಂ ಚ ಮೋಕ್ಷದಂ ।**
**ಶ್ರೂಯತೇ ಯತ್ರ ಯತ್ರೈತತ್ತತ್ರ ತತ್ರ ಪರಾಽಮೃತಂ ॥ ೪ ॥**
**ಕ್ಷೇತ್ರೈಕದೇಶವರ್ತಿನ್ಯಾ ಜ್ಞಾನವಾಪ್ಯಾಃ ಕಥಾಂ ಪರಾಂ ।**
**ಶ್ರುತ್ವೇಮಾಮಿತಿ ಮನ್ಯೇಽಹಂ ಗೌರೀಹೃದಯನಂದನ ॥ ೫ ॥**
**ಅಣು ಪ್ರಮಾಣಮಪಿ ಯಾ ಮಧ್ಯೇ ಕಾಶೀವಿಕಾಸಿನೀ ।**
**ಮಹೀ ಮಹೀಯಸೀ ಜ್ಞೇಯಾ ಸಾ ಸಿದ್ಧ್ಯೈ ನ ಮುಧಾ ಕ್ವಚಿತ್ ॥ ೬ ॥**

---

## ಕನ್ನಡದ ಅನುವಾದ

### ಸದಾಚಾರವರ್ಣನ

೧-೪. ಅಗಸ್ತ್ಯನು ಹೇಳುತ್ತಾನೆ :—ಅವಿಮುಕ್ತಮಹಾಕ್ಷೇತ್ರವು ಮೋಕ್ಷಕ್ಕೆ ಕಾರಣವೂ, ಕ್ಷೇತ್ರಗಳಲ್ಲಿ ಉತ್ತಮ ಕ್ಷೇತ್ರವೂ, ಮಂಗಳಗಳಿಗೆ ಮಂಗಳಕರವೂ, ಸಕಲ ಶ್ಮಶಾನಗಳಿಗೂ ಉತ್ತಮಶ್ಮಶಾನವೂ, ಪೀಠಗಳಲ್ಲಿ ಉತ್ತಮ ಪೀಠವೂ, ಊಷರಗಳಿಗೆ ಮಹೋಷರಕ್ಷೇತ್ರವೂ, ಧರ್ಮವನ್ನು ಅಪೇಕ್ಷಿಸುವವರಿಗೆ ಧರ್ಮವನ್ನುಂಟುಮಾಡುವುದೂ, ಅರ್ಥಾಪೇಕ್ಷಿಗಳಿಗೆ ಪರಮಾರ್ಥವನ್ನು ಪ್ರಕಾಶಗೊಳಿಸುವುದೂ, ಕಾಮಿಗಳಿಗೆ ಕಾಮವನ್ನುಂಟುಮಾಡುವುದೂ, ಮೋಕ್ಷಾರ್ಥಿಗಳಿಗೆ ಮೋಕ್ಷವನ್ನೀಯುವುದೂ ಆಗಿರುವುದು. ಈ ಕಾಶೀಕ್ಷೇತ್ರದ ವಿಷಯವು ಕೇಳಬರುವ ಸ್ಥಳಗಳಲ್ಲೆಲ್ಲ ಮೋಕ್ಷವು ಲಭಿಸುವುದು.

೫. ಗೌರಿಯ ಮನಸ್ಸನ್ನು ಆನಂದಗೊಳಿಸುವ ಸ್ಕಂದನೆ! ಈ ಕ್ಷೇತ್ರದ ಒಂದೆಡೆಯಲ್ಲಿರುವ ಜ್ಞಾನವಾಪಿಯ ಈ ಉತ್ತಮ ಕಥೆಯನ್ನು ಕೇಳಿ ಹೀಗೆ ತಿಳಿಯುತ್ತೇನೆ.

೬. ಕಾಶಿಯ ಮಧ್ಯದಲ್ಲಿ ಪ್ರಕಾಶಿಸುವ ಅಣುಮಾತ್ರವಾದ ಭೂಮಿಯೂ ಶ್ರೇಷ್ಠವಾದುದು. ಅದು ಸಿದ್ಧಿಯನ್ನೀಯುವುದಲ್ಲದೆ ವ್ಯರ್ಥವೆನಿಸುವುದಿಲ್ಲ.

ಕಿಯಂತಿ ಸಂತಿ ತೀರ್ಥಾನಿ ನೇಹ ಕ್ಷೋಣೀತಲೇಽಖಿಲೇ ।
ಪರಂ ಕಾಶೀರಜೋಮಾತ್ರ ತುಲಾಸಾಮ್ಯಂ ಕ್ವ ತೇಷ್ವಪಿ ॥ ೭ ॥
ಕಿಯಂತ್ಯೋ ನ ಸ್ರವಂತ್ಯೋಽತ್ರ ರತ್ನಾಕರಮುದಾವಹಾಃ ।
ಪರಂ ಸ್ವರ್ಗತರಂಗಿಣ್ಯಾಃ ಕಾಶ್ಯಾಂ ಕಾ ಸಾಮ್ಯಮುದ್ವಹೇತ್ ॥ ೮ ॥
ಕಿಯಂತಿ ಸಂತಿ ನೋ ಭೂಮ್ಯಾಂ ಮೋಕ್ಷಕ್ಷೇತ್ರಾಣಿ ಷಣ್ಮುಖ ।
ಪರಂ ಮನ್ಯೇಽವಿಮುಕ್ತಸ್ಯ ಕೋಟ್ಯಂಶೋಽಪಿ ನ ತೇಷ್ವಹೋ ॥ ೯ ॥
ಗಂಗಾ ವಿಶ್ವೇಶ್ವರಃ ಕಾಶೀ ಜಾಗರ್ತಿ ತ್ರಿತಯಂ ಯತಃ ।
ತತ್ರ ನೈಃ ಶ್ರೇಯಸೀ ಲಕ್ಷ್ಮೀರ್ಲಭ್ಯತೇ ಚಿತ್ರಮತ್ರ ಕಿಂ ॥ ೧೦ ॥
ಕಥಮೇಷಾ ತ್ರಯೀ ಸ್ಕಂದ ಪ್ರಾಪ್ಯತೇ ನಿಯತಂ ನರೈಃ ।
ತಿಷ್ಯೇ ಯುಗೇ ವಿಶೇಷೇಣ ನಿತರಾಂ ಚಂಚಲೇಂದ್ರಿಯೈಃ ॥ ೧೧ ॥
ತಪಸ್ತಾದೃಕ್ಕ್ವವಾ ತಿಷ್ಯೇ ತಿಷ್ಯೇ ಯೋಗಃ ಕ್ವ ತಾದೃಶಃ ।
ಕ್ವ ವಾ ವ್ರತಂ ಕ್ವ ವಾ ದಾನಂ ತಿಷ್ಯೇ ಮೋಕ್ಷಸ್ತ್ವತಃ ಕುತಃ ॥ ೧೨ ॥
ವಿನಾಽಪಿ ತಪಸಾ ಸ್ಕಂದ ವಿನಾ ಯೋಗೇನ ಷಣ್ಮುಖ ।
ವಿನಾ ವ್ರತೈರ್ವಿನಾ ದಾನೈಃ ಕಾಶ್ಯಾಂ ಮೋಕ್ಷಸ್ತ್ವಯೇರಿತಃ ॥ ೧೩ ॥
ಕಿಂ ಕಿಮಾಚರತಾ ಸ್ಕಂದ ಕಾಶೀ ಪ್ರಾಪ್ಯೇತ ತದ್ವದ ।
ಮನ್ಯೇ ವಿನಾ ಸದಾಚಾರಂ ನ ಸಿದ್ಧ್ಯೇಯುರ್ಮನೋರಥಾಃ ॥ ೧೪ ॥

---

೭. ಸಮಗ್ರಭೂಮಂಡಲದಲ್ಲಿ ಎಷ್ಟು ತೀರ್ಥಗಳಿಲ್ಲ. ಆದರೆ ಅವು ಕಾಶಿಯ ದೂಳಿಯ ಸಾಮ್ಯವನ್ನೂ ಹೊಂದುವುದಿಲ್ಲ.

೮. ಸಮುದ್ರದಂತೆ ಸಂತೋಷವನ್ನುಂಟುಮಾಡುವ ಎಷ್ಟು ನದಿಗಳಿಲ್ಲ. ಆದರೆ ಕಾಶಿಯಲ್ಲಿರುವ ಅಮರಗಂಗೆಯ ಸಾಮ್ಯವನ್ನು ಯಾವುದುತಾನೆ ಹೊಂದಿರುವುದು?

೯. ಷಣ್ಮುಖ! ಭೂಮಿಯಲ್ಲಿ ಎಷ್ಟು ಮೋಕ್ಷಕ್ಷೇತ್ರಗಳಿಲ್ಲ. ಆದರೆ ಅವುಗಳಲ್ಲಿ ಅವಿಮುಕ್ತಕ್ಷೇತ್ರದ ಮಾಹಾತ್ಮ್ಯದ ಕೋಟ್ಯಂಶವೂ ಇರುವುದಿಲ್ಲ.

೧೦. ಇಲ್ಲಿ ಗಂಗೆ, ವಿಶ್ವೇಶ್ವರ, ಕಾಶೀ ಇವು ಮೂರೂ ಇರುವುದರಿಂದ ಮೋಕ್ಷವು ಲಭಿಸುವುದರಲ್ಲಿ ಆಶ್ಚರ್ಯವೇನಿದೆ?

೧೧–೧೨. ಸ್ಕಂದ! ಈ ಕಲಿಯುಗದಲ್ಲಿ ಅತ್ಯಂತ ಚಂಚಲೇಂದ್ರಿಯರಾದ ಮಾನವರಿಗೆ ಈ ಮೂರೂ ಹೇಗೆ ಲಭಿಸುವುದು? ಈ ಕಲಿಯುಗದಲ್ಲಿ ಅಂತಹ ತಪಸ್ಸೂ, ಯೋಗವೂ, ವ್ರತವೂ, ದಾನವೂ, ಮೋಕ್ಷವೂ ಎಲ್ಲಿರುವುದು?

೧೩. ಸ್ಕಂದ! ನೀನು ತಪಸ್ಸು, ಯೋಗ, ವ್ರತ, ದಾನಗಳಿಲ್ಲದೆ ಮೋಕ್ಷವು ದೊರೆಯುವುದೆಂದು ಹೇಳಿರುವೆ.

೧೪. ಸ್ಕಂದ! ಏನೇನನ್ನು ಮಾಡಿದರೆ ಕಾಶಿಯು ಲಭಿಸುವುದು. ಅದನ್ನು ಹೇಳು. ಸದಾಚಾರವಿಲ್ಲದೆ ಅಭಿಲಾಷೆಗಳು ಸಿದ್ಧಿಸಲಾರವಷ್ಟೆ.

**ಆಚಾರಃ ಪರಮೋ ಧರ್ಮ ಆಚಾರಃ ಪರಮಂ ತಪಃ ।**
**ಆಚಾರಾದ್ವರ್ಧತೇ ಹ್ಯಾಯುರಾಚಾರಾತ್ಪಾಪಸಂಕ್ಷಯಃ ॥ ೧೫ ॥**
**ಆಚಾರಮೇವ ಪ್ರಥಮಂ ತಸ್ಮಾದಾಚಕ್ಷ್ವ ಷಣ್ಮುಖ ।**
**ದೇವದೇವೋ ಯಥಾ ಪ್ರಾಹ ತವಾಽಗ್ರೇ ತ್ವಂ ತಥಾ ವದ ॥ ೧೬ ॥**
ಸ್ಕಂದ ಉವಾಚ :—
ಮಿತ್ರಾವರುಣಜಾಖ್ಯಾಮಿ ಸದಾಚಾರಂ ಸತಾಂ ಹಿತಂ ।
ಯದಾಚರನ್ನರೋ ನಿತ್ಯಂ ಸರ್ವಾನ್ಕಾಮಾನವಾಪ್ನುಯಾತ್ ॥ ೧೭ ॥
ಸ್ಥಾವರಾಃ ಕೃಮಯೋಽಬ್ಜಾಶ್ಚ ಪಕ್ಷಿಣಃ ಪಶವೋ ನರಾಃ ।
ಕ್ರಮೇಣ ಧಾರ್ಮಿಕಾಸ್ತ್ವೇತೇ ಹ್ಯೇತೇಭ್ಯೋ ಧಾರ್ಮಿಕಾಃ ಸುರಾಃ॥೧೮॥
ಸಹಸ್ರಭಾಗಃ ಪ್ರಥಮಾದ್ದ್ವಿತೀಯೋಽನುಕ್ರಮಾತ್ತಥಾ ।
ಸರ್ವ ಏತೇ ಮಹಾಭಾಗಾ ಯಾವನ್ಮುಕ್ತಿಸಮಾಶ್ರಯಾಃ ॥ ೧೯ ॥
ಚತುರ್ಣಾಮಪಿ ಭೂತಾನಾಂ ಪ್ರಾಣಿನೋಽತೀವ ಚೋತ್ತಮಾಃ ।
ಪ್ರಾಣಿಭ್ಯೋಽಪಿ ಮುನೇ ಶ್ರೇಷ್ಠಾಃ ಸರ್ವೇ ಬುದ್ಧ್ಯುಪಜೀವಿನಃ ॥ ೨೦ ॥
ಮತಿಮದ್ಭ್ಯೋ ನರಾಃ ಶ್ರೇಷ್ಠಾಸ್ತೇಭ್ಯಃ ಶ್ರೇಷ್ಠಾಸ್ತು ವಾಡವಾಃ ।
ವಿಪ್ರೇಭ್ಯೋಽಪಿ ಚ ವಿದ್ವಾಂಸೋ ವಿದ್ವದ್ಭ್ಯಃ ಕೃತಬುದ್ಧಯಃ ॥ ೨೧ ॥

---

೧೫. ಆಚಾರವು ಉತ್ತಮ ಧರ್ಮವೂ, ಉತ್ತಮ ತಪಸ್ಸೂ, ಆಗಿರುವುದು. ಆಚಾರದಿಂದ ಆಯುಸ್ಸು ಹೆಚ್ಚುವುದು. ಪಾಪವು ಕ್ಷಯಿಸುವುದು.

೧೬. ಓ ಷಣ್ಮುಖ! ಆಚಾರವೇ ಉತ್ತಮವಾದುದರಿಂದ ಮಹೇಶ್ವರನು ನಿನಗೆ ಹೇಳಿದಂತೆ ಅದನ್ನು ಹೇಳು.

೧೭. ಸ್ಕಂದನು ಹೇಳುತ್ತಾನೆ:—ಅಯ್ಯಾ ಅಗಸ್ತ್ಯನೆ! ಮನುಷ್ಯರು ಯಾವುದನ್ನು ಆಚರಿಸುವುದರಿಂದ ಸಕಲೇಷ್ಟಾರ್ಥಗಳನ್ನು ಪಡೆಯುವರೊ, ಸಜ್ಜನರಿಗೆ ಹಿತಕರವೋ ಆ ಸದಾಚಾರವನ್ನು ನಿನಗೆ ಹೇಳುವೆನು.

೧೮–೧೯. ವೃಕ್ಷಗಳು, ಕ್ರಿಮಿಗಳು, ಜಲಚರಗಳು, ಪಕ್ಷಿಗಳು, ಪಶುಗಳು, ನರರು, ಸುರರು ಇವರಲ್ಲಿ ಮೊದಲನೆಯವರಿಗಿಂತ ಅನಂತರದವರು ಕ್ರಮವಾಗಿ ಸಾವಿರಭಾಗದಷ್ಟು ಹೆಚ್ಚು ಧಾರ್ಮಿಕರು. ಇವರಲ್ಲಿ ಅತಿ ಭಾಗ್ಯವಂತರಾದವರು ಮುಕ್ತಿಯನ್ನು ಪಡೆಯುತ್ತಾರೆ.

೨೦. ನಾಲ್ಕುಬಗೆಯ ಭೂತಗಳಲ್ಲಿ ಪ್ರಾಣಿಗಳು ಉತ್ತಮರು. ಪ್ರಾಣಗಳಲ್ಲಿ ಬುದ್ಧಿಯಿಂದ ಜೀವಿಸುವವರು ಶ್ರೇಷ್ಠರು.

೨೧–೨೨. ಜ್ಞಾನವುಳ್ಳ ಪ್ರಾಣಿಗಳಲ್ಲಿ ಮನುಷ್ಯರೂ, ಅವರಲ್ಲಿ ಬ್ರಾಹ್ಮಣರೂ, ಬ್ರಾಹ್ಮಣರಲ್ಲಿ ವಿದ್ವಾಂಸರೂ, ವಿದ್ವಾಂಸರಲ್ಲಿ ನಿಶ್ಚಯ ಜ್ಞಾನವುಳ್ಳವರೂ,

ಕೃತಧೀಭ್ಯೋಽಪಿ ಕರ್ತಾರಃ ಕರ್ತೃಭ್ಯೋ ಬ್ರಹ್ಮತತ್ಪರಾಃ ।
ನ ತೇಷಾಮರ್ಚನೀಯೋಽನ್ಯಸ್ತ್ರಿಷು ಲೋಕೇಷು ಕುಂಭಜ ॥ ೨೨ ॥
ಅನ್ಯೋನ್ಯಮರ್ಚಕಾಸ್ತೇ ವೈ ತಪೋವಿದ್ಯಾಽವಿಶೇಷತಃ ।
ಬ್ರಾಹ್ಮಣೋ ಬ್ರಹ್ಮಣಾ ಸೃಷ್ಟಃ ಸರ್ವಭೂತೇಶ್ವರೋ ಯತಃ ॥ ೨೩ ॥
ಅತೋ ಜಗತ್ಸ್ಥಿತಂ ಸರ್ವಂ ಬ್ರಾಹ್ಮಣೋಽರ್ಹತಿ ನಾಽಪರಃ ।
ಸದಾಚಾರೋ ಹಿ ಸರ್ವಾರ್ಹೋ ಸಾಚಾರಾದ್ವಿಚ್ಯುತಃ ಪುನಃ ।
ತಸ್ಮಾದ್ವಿಪ್ರೇಣ ಸತತಂ ಭಾವ್ಯಮಾಚಾರಶೀಲಿನಾ ॥ ೨೪ ॥
ವಿದ್ವೇಷರಾಗರಹಿತಾ ಅನುತಿಷ್ಠಂತಿ ಯಂ ಮುನೇ ।
ವಿದ್ವಾಂಸಸ್ತಂ ಸದಾಚಾರಂ ಧರ್ಮಮೂಲಂ ವಿದುರ್ಬುಧಾಃ ॥ ೨೫ ॥
ಲಕ್ಷಣೈಃ ಪರಿಹೀನೋಽಪಿ ಸಮ್ಯಗಾಚಾರತತ್ಪರಃ ।
ಶ್ರದ್ಧಾಲುರನಸೂಯಶ್ಚ ನರೋ ಜೀವೇತ್ಸಮಾಃ ಶತಂ ॥ ೨೬ ॥
ಶ್ರುತಿಸ್ಮೃತಿಭ್ಯಾಮುದಿತಂ ಸ್ವೇಷು ಸ್ವೇಷು ಚ ಕರ್ಮಸು ।
ಸದಾಚಾರಂ ನಿಷೇವೇತ ಧರ್ಮಮೂಲಮತಂದ್ರಿತಃ ॥ ೨೭ ॥
ದುರಾಚಾರರತೋ ಲೋಕೇ ಗರ್ಹಣೀಯಃ ಪುಮಾನ್ಭವೇತ್ ।
ವ್ಯಾಧಿಭಿಶ್ಚಾಽಭಿಭೂಯೇತ ಸದಾಽಲ್ಪಾಯುಃ ಸುದುಃಖಭಾಕ್ ॥ ೨೮ ॥

---

ಅವರಲ್ಲಿ ಅನುಷ್ಠಾನಮಾಡುವವರೂ, ಅವರಲ್ಲಿ ಬ್ರಹ್ಮಜ್ಞಾನಿಗಳೂ ಉತ್ತಮರು. ಆ ಬ್ರಹ್ಮಜ್ಞಾನಿಗಳಿಗೆ ಮೂರು ಲೋಕಗಳಲ್ಲಿ ಪೂಜ್ಯರಾರೂ ಇರುವುದಿಲ್ಲ.

೨೩–೨೪. ತಪಸ್ಸು ಬ್ರಹ್ಮಜ್ಞಾನಗಳು ಸಮಾನವಾದುದರಿಂದ ಆ ಬ್ರಹ್ಮಜ್ಞಾನಿಗಳು ಪರಸ್ಪರ ಪೂಜ್ಯರು, ಆ ಬ್ರಾಹ್ಮಣನನ್ನು ಸಕಲಪ್ರಾಣಿಗಳಿಗೆ ಒಡೆಯನಾದ ಬ್ರಹ್ಮನೇ ಸೃಜಿಸಿರುವುದರಿಂದ ಅವನು ಜಗತ್ತಿನಲ್ಲಿರುವ ಸಮಸ್ತಕ್ಕೂ ಅರ್ಹನು. ಇತರರಾರೂ ಅರ್ಹರಲ್ಲ. ಸದಾಚಾರವು ಸಮಸ್ತರಿಗೂ ಅರ್ಹವಾದುದು. ಆಚಾರಭ್ರಷ್ಟನಾದವನು ಯಾವುದಕ್ಕೂ ಅರ್ಹನಲ್ಲ. ಆದುದರಿಂದ ಬ್ರಾಹ್ಮಣನು ಯಾವಾಗಲೂ ಆಚಾರಶೀಲನಾಗಬೇಕು.

೨೫. ಮುನಿಯೆ! ರಾಗದ್ವೇಷವಿಲ್ಲದ ವಿದ್ವಾಂಸರು ಯಾವುದನ್ನು ಆಚರಿಸುವರೊ, ಜ್ಞಾನಿಗಳು ಅದನ್ನು ಧರ್ಮಕ್ಕೆ ಕಾರಣವಾದ ಸದಾಚಾರವೆಂದು ತಿಳಿದಿರುವರು.

೨೬. ಲಕ್ಷಣಗಳಿಲ್ಲದಿದ್ದರೂ ಮನುಷ್ಯನು ಆಚಾರನಿರತನೂ, ಶ್ರದ್ಧೆಯುಳ್ಳವನೂ, ಅಸೂಯೆಯಿಲ್ಲದವನೂ ಆದರೆ ನೂರುವರ್ಷಕಾಲ ಬದುಕಿಯಾನು.

೨೭. ಎಲ್ಲರೂ ತಮ್ಮತಮ್ಮ ಕರ್ಮಗಳ ವಿಷಯದಲ್ಲಿ ಶ್ರುತಿಸ್ಮೃತಿಗಳು ಹೇಳಿದ ಧರ್ಮಕ್ಕೆ ಕಾರಣವಾದ ಸದಾಚಾರವನ್ನು ಆಲಸ್ಯವಿಲ್ಲದೆ ಸೇವಿಸಬೇಕು.

೨೮. ಲೋಕದಲ್ಲಿ ದುರಾಚಾರದಲ್ಲಿ ಆಸಕ್ತನಾದ ಮಾನವನು ನಿಂದ್ಯ,

**ತ್ಯಾಜ್ಯಂ ಕರ್ಮ ಪರಾಧೀನಂ ಕಾರ್ಯಮಾತ್ಮವಶಂ ಸದಾ ।**
**ದುಃಖೀ ಯತಃ ಪರಾಧೀನಃ ಸದೈವಾತ್ಮವಶಃ ಸುಖೀ ॥ ೨೯ ॥**
**ಯಸ್ಮಿನ್ಕರ್ಮಣ್ಯಂತರಾತ್ಮಾ ಕ್ರಿಯಮಾಣೇ ಪ್ರಸೀದತಿ ।**
**ತದೇವ ಕರ್ಮ ಕರ್ತವ್ಯಂ ವಿಪರೀತಂ ನ ಚ ಕ್ವಚಿತ್ ॥ ೩೦ ॥**
**ಪ್ರಥಮಂ ಧರ್ಮಸರ್ವಸ್ವಂ ಪ್ರೋಕ್ತಾ ಯನ್ನಿಯಮಾ ಯಮಾಃ ।**
**ಅತಸ್ತೇಷ್ವೇವ ವೈ ಯತ್ನಃ ಕರ್ತವ್ಯೋ ಧರ್ಮಮಿಚ್ಛತಾ ॥ ೩೧ ॥**
**ಸತ್ಯಂ ಕ್ಷಮಾರ್ಜವಂ ಧ್ಯಾನಮಾನೃಶಂಸ್ಯಮಹಿಂಸನಂ ।**
**ದಮಃ ಪ್ರಸಾದೋ ಮಾಧುರ್ಯಂ ಮೃದುತೇತಿ ಯಮಾ ದಶ ॥ ೩೨ ॥**
**ಶೌಚಂ ಸ್ನಾನಂ ತಪೋ ದಾನಂ ಮೌನೇಜ್ಯಾಽಧ್ಯಯನಂ ವ್ರತಂ ।**
**ಉಪೋಷಣೋಪಸ್ಥದಂಡೌ ದಶೈತೇ ನಿಯಮಾಃ ಸ್ಮೃತಾಃ ॥ ೩೩ ॥**
**ಕಾಮಂ ಕ್ರೋಧಂ ಮದಂ ಮೋಹಂ ಮಾತ್ಸರ್ಯಂ ಲೋಭಮೇವ ಚ ।**
**ಅಮೂನ್ಷಡ್ವೈರಿಣೋ ಜಿತ್ವಾ ಸರ್ವತ್ರ ವಿಜಯೀ ಭವೇತ್ ॥ ೩೪ ॥**

---

ನಾಗುವನು. ಅವನು ಯಾವಾಗಲೂ ವ್ಯಾಧಿಗ್ರಸ್ತನಾಗಿ ಅಲ್ಪಾಯುವೂ ದುಃಖ ಭಾಗಿಯೂ ಆಗುವನು.

೨೯. ಯಾವಾಗಲೂ ಪರಾಧೀನವಾದ ಕಾರ್ಯವನ್ನು ತ್ಯಜಿಸಿ ಸ್ವತಂತ್ರ ಕಾರ್ಯವನ್ನು ಆಚರಿಸಬೇಕು. ಪರಾಧೀನನು ದುಃಖಿಯೂ, ಸ್ವತಂತ್ರನು ಸುಖಿಯೂ ಆಗುವರು.

೩೦. ಯಾವ ಕೆಲಸವನ್ನು ಮಾಡುವಾಗ ಮನಸ್ಸು ಸಂತೋಷಗೊಳ್ಳು ವುದೊ, ಅದೇ ಕೆಲಸವನ್ನೇ ಮಾಡಬೇಕು. ವಿರುದ್ಧವಾದ ಕಾರ್ಯವನ್ನು ಮಾಡಕೂಡದು.

೩೧. ಯಮನಿಯಮಗಳು ಮೊದಲನೆಯ ಧರ್ಮದ ಸರ್ವಸ್ವವೆಂದು ಹೇಳಿರುವುದರಿಂದ ಧರ್ಮವನ್ನಪೇಕ್ಷಿಸುವವನು ಆ ಯಮನಿಯಮಗಳಲ್ಲಿಯೇ ಪ್ರಯತ್ನಮಾಡಬೇಕು.

೩೨. ಯಮವು ಸತ್ಯ, ಕ್ಷಮಾ, ಆರ್ಜವ, ಧ್ಯಾನ, ಆನೃಶಂಸ್ಯ, ಅಹಿಂಸಾ, ದಮ, ಪ್ರಸಾದ, ಮಾಧುರ್ಯ, ಮೃದುತೆ ಎಂದು ಹತ್ತುವಿಧ ವಾಗಿರುವುದು.

೩೩. ನಿಯಮಗಳು ಶೌಚ, ಸ್ನಾನ, ತಪಸ್ಸು, ದಾನ, ಮೌನ, ಇಜ್ಯಾ, ಅಧ್ಯಯನ, ವ್ರತ, ಉಪೋಷಣ, ಗುಹ್ಯೇಂದ್ರಿಯನಿಯಮನ ಎಂದು ಹತ್ತು ಪ್ರಕಾರವಾಗಿವೆ.

೩೪. ಮನುಷ್ಯನು, ಕಾಮ, ಕ್ರೋಧ, ಮದ, ಮೋಹ, ಮಾತ್ಸರ್ಯ, ಲೋಭ ಎಂಬ ಆರು ಶತ್ರುಗಳನ್ನು ಜಯಿಸಿದರೆ ಎಲ್ಲ ವಿಷಯದಲ್ಲಿಯೂ ಜಯ ಶಾಲಿಯಾಗುವನು.

ಶನೈಃ ಶನೈಃ ಸಂಚಿನುಯಾದ್ಧರ್ಮಂ ವಲ್ಮೀಕಶೃಂಗವತ್ ।
ಪರಪೀಡಾಮಕುರ್ವಾಣಃ ಪರಲೋಕಸಹಾಯಿನಂ ॥ ೩೫ ॥
ಧರ್ಮ ಏವ ಸಹಾಯೀ ಸ್ಯಾದಮುತ್ರ ನ ಪರಿಚ್ಛದಃ ।
ಪಿತೃಮಾತೃಸುತಭ್ರಾತೃಯೋಷಿದ್ಬಂಧುಜನಾದಿಕಃ ॥ ೩೬ ॥
ಜಾಯತೇ ಚೈಕಲಃ ಪ್ರಾಣೀ ಪ್ರಮ್ರಿಯೇತ ತಥೈಕಲಃ ।
ಏಕಲಃ ಸುಕೃತಂ ಭುಂಕ್ತೇ ಭುಂಕ್ತೇ ದುಷ್ಕೃತಮೇಕಲಃ ॥ ೩೭ ॥
ದೇಹಂ ಪಂಚತ್ವಮಾಪನ್ನಂ ತ್ಯಕ್ತ್ವಾ ಕಾಷ್ಠಲೋಷ್ಟವತ್ ।
ಬಾಂಧವಾ ವಿಮುಖಾ ಯಾಂತಿ ಧರ್ಮೋ ಯಾಂತಮನುವ್ರಜೇತ್ ॥ ೩೮ ॥
ಕೃತೀ ಸಂಚಿನುಯಾದ್ಧರ್ಮಂ ತತೋಽಮುತ್ರ ಸಹಾಯಿನಂ ।
ಧರ್ಮಂ ಸಹಾಯಿನಂ ಲಬ್ಧ್ವಾ ಸಂತರೇದ್ದುಸ್ತರಂ ತಮಃ ॥ ೩೯ ॥
ಸಂಬಂಧಾನಾಚರೇನ್ನಿತ್ಯಮುತ್ತಮೈರುತ್ತಮೈಃ ಸುಧೀಃ ।
ಅಧಮಾನಧಮಾಂಸ್ತ್ಯಕ್ತ್ವಾ ಕುಲಮುತ್ಕರ್ಷತಾಂ ನಯೇತ್ ॥ ೪೦ ॥
ಉತ್ತಮಾನುತ್ತಮಾನೇವ ಗಚ್ಛನ್ಹೀನಾಂಶ್ಚ ವರ್ಜಯನ್ ।
ಬ್ರಾಹ್ಮಣಃ ಶ್ರೇಷ್ಠತಾಮೇತಿ ಪ್ರತ್ಯವಾಯೇನ ಶೂದ್ರತಾಂ ॥ ೪೧ ॥

---

೩೫. ಹುತ್ತದ ಶಿಖರದಂತೆ ಇತರರನ್ನು ಪೀಡಿಸದೆ ಪರಲೋಕಕ್ಕೆ ಸಹಾಯಕವಾದ ಧರ್ಮವನ್ನು ಮೆಲ್ಲಮೆಲ್ಲನೆ ಸಂಗ್ರಹಿಸಬೇಕು.

೩೬. ಧರ್ಮವೇ ಪರಲೋಕದಲ್ಲಿ ಸಹಾಯಕವಾಗುವುದು. ಸಾಮಗ್ರಿಗಳೂ, ತಾಯಿ, ತಂದೆ, ಮಗ, ಸಹೋದರ, ಪತ್ನಿ ಬಂಧುಜನಗಳೂ ಸಹಾಯಕರಾಗುವುದಿಲ್ಲ.

೩೭. ಪ್ರಾಣಿಯು ಒಂಟಿಯಾಗಿಯೆ ಹುಟ್ಟುವುದು; ಸಾಯುವುದು; ಪುಣ್ಯಪಾಪಗಳನ್ನೂ ಅನುಭವಿಸುವುದು.

೩೮. ಬಾಂಧವರು ಭೂಮಿಯಲ್ಲಿ ಮೃತವಾದ ಶರೀರವನ್ನು ಕಟ್ಟಿಗೆ, ಮಣ್ಣಿನ ಹೆಂಟೆ ಇವುಗಳಂತೆ ತ್ಯಜಿಸಿ ವಿಮುಖರಾಗಿ ಹೊರಟು ಹೋಗುವರು. ಧರ್ಮವು ಮೃತನಾಗಿ ಪರಲೋಕಕ್ಕೆ ಹೋಗುತ್ತಿರುವವನನ್ನು ಅನುಸರಿಸುವುದು.

೩೯. ಆದುದರಿಂದ ಕುಶಲನಾದ ಮಾನವನು ಪರಲೋಕದಲ್ಲಿ ಸಹಾಯ ಮಾಡುವ ಧರ್ಮವನ್ನು ಹೊಂದಿ ದಾಟಲಾಗದ ಅಜ್ಞಾನವನ್ನು ದಾಟಿಯಾನು.

೪೦. ಪಂಡಿತನು ಯಾವಾಗಲೂ ಉತ್ತಮರೊಡನೆ ಸಂಬಂಧಮಾಡಬೇಕು. ಅಧಮರನ್ನು ತ್ಯಜಿಸಿ ವಂಶವನ್ನು ಉತ್ಕೃಷ್ಟಗೊಳಿಸಬೇಕು.

೪೧. ಬ್ರಾಹ್ಮಣನು ಉತ್ತಮರ ಸಹವಾಸವನ್ನು ಮಾಡುತ್ತ ನೀಚರನ್ನು ತ್ಯಜಿಸುತ್ತ ಶ್ರೇಷ್ಠನಾಗುವನು. ನೀಚಸಂಬಂಧವಾದ ಪಾಪದಿಂದ ಬ್ರಾಹ್ಮಣನು ಶೂದ್ರನಾಗುವನು.

ಅನಧ್ಯಯನಶೀಲಂ ಚ ಸದಾಚಾರವಿಲಂಘಿನಂ ।
ಸಾಲಸಂಚದುರನ್ನಾದಂ ಬ್ರಾಹ್ಮಣಂ ಬಾಧತೇಽಂತಕಃ ॥ ೪೨ ॥
ತತೋಽಭ್ಯಸೇತ್ಪ್ರಯತ್ನೇನ ಸದಾಚಾರಂ ಸದಾ ದ್ವಿಜಃ ।
ತೀರ್ಥಾನ್ಯಪ್ಯಭಿಲಷ್ಯಂತಿ ಸದಾಚಾರಿಸಮಾಗಮಂ ॥ ೪೩ ॥
ರಜನೀಪ್ರಾಂತಯಾಮಾರ್ಧಂ ಬ್ರಾಹ್ಮಃ ಸಮಯ ಉಚ್ಯತೇ ।
ಸ್ವಹಿತಂ ಚಿಂತಯೇತ್ಪ್ರಾಜ್ಞಸ್ತಸ್ಮಿಂಶ್ಚೋತ್ಥಾಯ ಸರ್ವದಾ ॥ ೪೪ ॥
ಗಜಾಸ್ಯಂ ಸಂಸ್ಮರೇದಾದೌ ತತ ಈಶಂ ಸಹಾಂಬಯಾ ।
ಶ್ರೀರಂಗಂ ಶ್ರೀಸಮೇತಂ ತು ಬ್ರಹ್ಮಾಣ್ಯಾ ಕಮಲೋದ್ಭವಂ ॥ ೪೫ ॥
ಇಂದ್ರಾದೀನ್ಸಕಲಾನ್ದೇವಾನ್ವಸಿಷ್ಠಾದೀನ್ಮುನೀನಪಿ ।
ಗಂಗಾದ್ಯಾಃ ಸರಿತಃ ಸರ್ವಾಃ ಶ್ರೀಶೈಲಾದ್ಯಖಿಲಾನ್ಗಿರೀನ್ ॥ ೪೬ ॥
ಕ್ಷೀರೋದಾದೀನ್ಸಮುದ್ರಾಂಶ್ಚ ಮಾನಸಾದಿ ಸರಾಂಸಿ ಚ ।
ವನಾನಿ ನಂದನಾದೀನಿ ಧೇನೂಃ ಕಾಮದುಘಾದಿಕಾಃ ॥ ೪೭ ॥
ಕಲ್ಪವೃಕ್ಷಾದಿವೃಕ್ಷಾಂಶ್ಚ ಧಾತೂನ್ಕಾಂಚನಮುಖ್ಯತಃ ।
ದಿವ್ಯಸ್ತ್ರೀರುರ್ವಶೀಮುಖ್ಯಾ ಗರುಡಾದೀನ್ಪತತ್ರಿಣಃ ॥ ೪೮ ॥
ನಾಗಾಂಶ್ಚ ಶೇಷಪ್ರಮುಖಾನ್ಗಜಾನ್ಐರಾವತಾದಿಕಾನ್ ।
ಅಶ್ವಾನುಚ್ಚೈಃಶ್ರವೋಮುಖ್ಯಾನ್ಕೌಸ್ತುಭಾದೀನ್ಮಣೀಂಛುಭಾನ್ ॥ ೪೯ ॥

---

೪೨. ವೇದಾಧ್ಯಯನಮಾಡದವನನ್ನೂ, ಸದಾಚಾರವನ್ನು ಉಲ್ಲಂಘಿಸಿದವನನ್ನೂ, ಆಲಸ್ಯವುಳ್ಳವನನ್ನೂ, ದುಷ್ಟಾನ್ನವನ್ನು ತಿನ್ನುವನನ್ನೂ, ಯಮನು ಪೀಡಿಸುವನು.

೪೩. ಆದುದರಿಂದ ಬ್ರಾಹ್ಮಣನು ಯಾವಾಗಲೂ ಪ್ರಯತ್ನಿಸಿ ಸದಾಚಾರವನ್ನು ಅಭ್ಯಾಸಮಾಡಬೇಕು. ತೀರ್ಥಗಳೂ ಸದಾಚಾರಿಗಳ ಸಮಾಗಮವನ್ನು ಬಯಸುವುವು.

೪೪. ರಾತ್ರಿಯ ಕೊನೆಯ ಯಾಮದ ಅರ್ಧಭಾಗವು ಬ್ರಾಹ್ಮಸಮಯವೆಂದು ಹೇಳಿಸಿಕೊಳ್ಳುವುದು. ಪ್ರಾಜ್ಞನು ಆ ಸಮಯದಲ್ಲಿ ಎದ್ದು ಯಾವಾಗಲೂ ತನ್ನಹಿತವನ್ನು ಆಲೋಚಿಸಬೇಕು.

೪೫–೫೪. ಮೊದಲು ಗಣೇಶನನ್ನು ಸ್ಮರಿಸಬೇಕು. ಅನಂತರ ಉಮಾಸಹಿತನಾದ ಮಹೇಶ್ವರ, ಶ್ರೀ ಸಮೇತನಾದ ಶ್ರೀರಂಗ, ಸರಸ್ವತಿಯಿಂದ ಕೂಡಿದ ಬ್ರಹ್ಮ, ಇಂದ್ರಾದಿಸಕಲದೇವತೆಗಳು, ವಸಿಷ್ಠಾದಿಮುನಿಗಳು, ಗಂಗಾದಿಸಕಲ ನದಿಗಳು, ಶ್ರೀಶೈಲ ಮೊದಲಾದ ಪರ್ವತಗಳು, ಕ್ಷೀರಸಮುದ್ರ ಮೊದಲಾದ ಸಮುದ್ರಗಳು, ಮಾನಸಾದಿ ಸರೋವರಗಳು, ನಂದನಾದಿವನಗಳು, ಕಾಮಧೇನು ಮೊದಲಾದ ಧೇನುಗಳು, ಕಲ್ಪವೃಕ್ಷಾದಿವೃಕ್ಷಗಳು, ಚಿನ್ನ ಮೊದಲಾದ

ಸ್ಮರೇದರುಂಧತೀಮುಖ್ಯಾಃ ಪತಿವ್ರತವತೀರ್ವಧೂಃ ।
ನೈಮಿಷಾದೀನ್ಯರಣ್ಯಾನಿ ಪುರೀಃ ಕಾಶೀಪುರೀಮುಖಾಃ ॥ ೫೦ ॥
ವಿಶ್ವೇಶಾದೀನಿ ಲಿಂಗಾನಿ ವೇದಾನೃಕ್ಪ್ರಮುಖಾನಪಿ ।
ಗಾಯತ್ರೀಪ್ರಮುಖಾನ್ಮಂತ್ರಾನ್ಯೋಗಿನಃ ಸನಕಾದಿಕಾನ್ ॥ ೫೧ ॥
ಪ್ರಣವಾದಿ ಮಹಾಬೀಜಂ ನಾರದಾದೀಂಶ್ಚ ವೈಷ್ಣವಾನ್ ।
ಶಿವಭಕ್ತಾಂಶ್ಚ ಬಾಣಾದೀನ್ಪ್ರಹ್ಲಾದಾದೀನ್ದೃಢವ್ರತಾನ್ ॥ ೫೨ ॥
ವದಾನ್ಯಾಂಶ್ಚ ದಧೀಚ್ಯಾದೀನ್ಹರಿಶ್ಚಂದ್ರಾದಿಭೂಪತೀನ್ ।
ಜನನೀಚರಣೌ ಸ್ಮೃತ್ವಾ ಸರ್ವತೀರ್ಥೋತ್ತಮೋತ್ತಮೌ ॥ ೫೩ ॥
ಪಿತರಂ ಚ ಗುರೂಂಶ್ಚಾಽಪಿ ಹೃದಿ ಧ್ಯಾತ್ವಾ ಪ್ರಸನ್ನಧೀಃ ।
ತತಶ್ಚಾಽವಶ್ಯಕಂ ಕರ್ತುಂ ನೈಋತೀಂ ದಿಶಮಾಶ್ರಯೇತ್ ॥ ೫೪ ॥
ಗ್ರಾಮಾದ್ಧನುಃಶತಂ ಗಚ್ಛೇನ್ನಗರಾಚ್ಚ ಚತುರ್ಗುಣಂ ।
ತೃಣೈರಾಚ್ಛಾದ್ಯ ವಸುಧಾಂ ಶಿರಃ ಪ್ರಾವೃತ್ಯ ವಾಸಸಾ ॥ ೫೫ ॥
ಕರ್ಣೋಪವೀತ್ಯುದಗ್ವಕ್ತ್ರೋ ದಿವಸೇ ಸಂಧ್ಯಯೋರಪಿ ।
ವಿಣ್ಮೂತ್ರೇ ವಿಸೃಜೇನ್ಮೌನೀ ನಿಶಾಯಾಂ ದಕ್ಷಿಣಾಮುಖಃ ॥ ೫೬ ॥

---

ಧಾತುಗಳು, ಊರ್ವಶೀ ಮೊದಲಾದ ದೇವತಾಸ್ತ್ರೀಯರು, ಗರುಡನೇ ಮೊದಲಾದ ಪಕ್ಷಿಗಳು, ಶೇಷನೇ ಮೊದಲಾದ ನಾಗಗಳು, ಐರಾವತವೇ ಮೊದಲಾದ ಆನೆಗಳು, ಉಚ್ಚೈಶ್ರವಸ್ಸೇ ಮೊದಲಾದ ಕುದುರೆಗಳು, ಕೌಸ್ತುಭವೇ ಮೊದಲಾದ ಮಣಿಗಳು, ಅರುಂಧತಿ ಮೊದಲಾದ ಪತಿವ್ರತೆಯರು, ನೈಮಿಷಾದ್ಯರಣ್ಯಗಳು, ಕಾಶಿ ಮೊದಲಾದ ಪಟ್ಟಣಗಳು, ವಿಶ್ವೇಶ್ವರಾದಿ ಲಿಂಗಗಳು, ಋಗ್ವೇದ ಮೊದಲಾದ ವೇದಗಳು, ಗಾಯತ್ರೀ ಮೊದಲಾದ ಮಂತ್ರಗಳು, ಸನಕಾದಿಯೋಗಿಗಳು, ಪ್ರಣವಾದಿ ಬೀಜಮಂತ್ರಗಳು, ನಾರದಾದಿ ವಿಷ್ಣುಭಕ್ತರು, ಶಿವಭಕ್ತರಾದ ಬಾಣಾದಿಗಳು, ಸ್ಥಿರನಿಯಮವುಳ್ಳ ಪ್ರಹ್ಲಾದ ಮೊದಲಾದವರು, ದಾನಶೌಂಡರಾದ ದಧೀಚ್ಯಾದಿಗಳು, ಹರಿಶ್ಚಂದ್ರ ಮೊದಲಾದ ನೃಪತಿಗಳು, ತಾಯಿಯ ಚರಣ, ಸಮಸ್ತೋತ್ತಮತೀರ್ಥಗಳು, ತಂದೆ, ಗುರು ಇವರೆಲ್ಲರನ್ನೂ ಮನಸ್ಸಿನಲ್ಲಿ ಚಿಂತಿಸಿ ಪ್ರಸನ್ನಮನಸ್ಕನಾಗಿ ಆವಶ್ಯಕಕಾರ್ಯವನ್ನು ಮಾಡಲು ನೈಋತ್ಯ ದಿಕ್ಕಿಗೆ ಹೋಗಬೇಕು.

೫೫–೫೬. ಹಳ್ಳಿಯಿಂದ ನೂರು ಬಿಲ್ಲುಗಳಷ್ಟು, ಪಟ್ಟಣದಿಂದ ಇದಕ್ಕೆ ನಾಲ್ಕರಷ್ಟು ದೂರ ಹೋಗಿ ಭೂಮಿಯನ್ನು ಹುಲ್ಲುಗಳಿಂದ ಮುಚ್ಚಿ ತಲೆಗೆ ಬಟ್ಟೆಯನ್ನು ಸುತ್ತಿಕೊಂಡು ಯಜ್ಞೋಪವೀತವನ್ನು ಕಿವಿಯಲ್ಲಿ ಸಿಕ್ಕಿಸಿ, ಹಗಲು ಸಂಧ್ಯಾಕಾಲಗಳಲ್ಲಿ ಉತ್ತರಾಭಿಮುಖವಾಗಿಯೂ, ರಾತ್ರಿಯಲ್ಲಿ ದಕ್ಷಿಣಾಭಿಮುಖನಾಗಿಯೂ ಮೌನದಿಂದ ಮಲಮೂತ್ರಗಳನ್ನು ವಿಸರ್ಜಿಸಬೇಕು.

ನ ತಿಷ್ಠನ್ನಾಽಪ್ಸು ನೋ ವಿಪ್ರ ಗೋವಹ್ನ್ಯನಿಲಸಂಮುಖಃ ।
ನ ಫಾಲಕೃಷ್ಟೇ ಭೂಭಾಗೇ ನ ರಥ್ಯಾ ಸೇವ್ಯಭೂತಲೇ ॥ ೫೭ ॥
ನಾಽಽಲೋಕಯೇದ್ದಿಶೋಭಾಗಾಂಜ್ಯೋತಿಶ್ಚಕ್ರಂ ನಭೋಽಮಲಂ ।
ವಾಮೇನ ಪಾಣಿನಾ ಶಿಶ್ನಂ ಧೃತ್ವೋತ್ತಿಷ್ಠೇತ್ಪ್ರಯತ್ನವಾನ್ ॥ ೫೮ ॥
ಅಥೋ ಮೃದಂ ಸಮಾದಾಯ ಜಂತುಕರ್ಕರವರ್ಜಿತಾಂ ।
ವಿಹಾಯ ಮೂಷಿಕೋತ್ಖಾತಾಂ ಶೌಚೋಚ್ಛಿಷ್ಟಾಂ ಚ ನಾಕುಲಾಂ ॥ ೫೯ ॥
ಗುಹ್ಯೇ ದದ್ಯಾನ್ಮೃದಂ ಚೈಕಾಂ ಪಾಯೌ ಪಂಚಾಂಬುಸಾಂತರಾಃ ।
ದಶ ವಾಮಕರೇ ಚಾಽಪಿ ಸಪ್ತಪಾಣಿದ್ವಯೇ ಮೃದಃ ॥ ೬೦ ॥
ಏಕೈಕಾಂ ಪಾದಯೋರ್ದದ್ಯಾತ್ತಿಸ್ರಃ ಪಾಣ್ಯೋರ್ಮೃದಸ್ತಥಾ ।
ಇತ್ಥಂ ಶೌಚಂ ಗೃಹೀ ಕುರ್ಯಾದ್ಗಂಧಲೇಪಕ್ಷಯಾಽವಧಿ ॥ ೬೧ ॥
ಕ್ರಮಾದ್ದ್ವೈಗುಣ್ಯಮೇತಸ್ಮಾದ್ಬ್ರಹ್ಮಚರ್ಯಾದಿಷು ತ್ರಿಷು ।
ದಿವಾ ವಿಹಿತಶೌಚಸ್ಯ ರಾತ್ರಾವರ್ಧಂ ಸಮಾಚರೇತ್ ॥ ೬೨ ॥
ರುಜ್ಯರ್ಧಂ ಚ ತದರ್ಧಂ ಚ ಪಥಿ ಚೋರಾದಿಬಾಧಿತೇ ।
ತದರ್ಧಂ ಯೋಷಿತಾಂ ಚಾಽಪಿ ಸುಸ್ಥೇ ನೂನಂ ನ ಕಾರಯೇತ್ ॥ ೬೩ ॥

---

೫೭. ನಿಂತುಕೊಂಡೂ, ನೀರಿನಲ್ಲಿಯೂ, ಬ್ರಾಹ್ಮಣ, ಗೋವು, ಬೆಂಕಿ, ಗಾಳಿಗಳ ಸಮ್ಮುಖದಲ್ಲಿಯೂ, ಉತ್ತಭೂಮಿಯಲ್ಲಿಯೂ, ಬೀದಿ, ನಡೆಯುವ ಭೂಮಿಗಳಲ್ಲಿಯೂ ಮಲಮೂತ್ರಗಳನ್ನು ವಿಸರ್ಜಿಸಬಾರದು.

೫೮. ದಿಕ್ಕುಗಳ ಭಾಗಗಳನ್ನೂ, ನಕ್ಷತ್ರಗಳ ಸಮೂಹವನ್ನೂ, ಆಕಾಶವನ್ನೂ, ಮಲವನ್ನೂ ನೋಡಬಾರದು. ಎಡಗೈಯಿಯಿಂದ ಶಿಶ್ನವನ್ನು ಹಿಡಿದುಕೊಂಡು ಮೇಲಕ್ಕೇಳಬೇಕು.

೫೯–೬೧. ಬಳಿಕ ಪ್ರಾಣಿಯು, ಗಟ್ಟಿಮಣ್ಣುಗಳಿಲ್ಲದಿರುವುದೂ, ಇಲಿಯಿಂದ ಅಗೆಯಲ್ಪಡದಿರುವುದೂ, ಶೌಚಮಾಡಿ ಉಳಿದುದಲ್ಲದಿರುವುದೂ, ಮುಂಗಿಸಿಯು ಅಗೆದು ಹಾಕದಿರುವುದೂ ಆದ ಮಣ್ಣನ್ನು ತೆಗೆದುಕೊಂಡು ನೀರಿನೊಡನೆ ಗುಹ್ಯದಲ್ಲಿ ಒಂದು ಸಾರಿಯೂ, ಗುಹ್ಯೇಂದ್ರಿಯದಲ್ಲಿ ಐದು ಸಾರಿಯೂ, ಎಡಗೈಯಲ್ಲಿ ಹತ್ತುಸಾರಿಯೂ, ಎರಡು ಕೈಗಳಲ್ಲಿ ಏಳುಸಾರಿಯೂ ಕಾಲುಗಳಲ್ಲಿ ಒಂದೊಂದು ಸಾರಿಯೂ, ತಿರುಗಿ ಮೂರಾವೃತ್ತಿ ಎರಡು ಕೈಗಳಲ್ಲಿಯೂ ಮಲಮೂತ್ರಗಳ ವಾಸನೆಯು ಹೋಗುವವರೆಗೆ ಗೃಹಸ್ಥನು ಶೌಚವನ್ನು ಮಾಡಬೇಕು.

೬೨. ಬ್ರಹ್ಮಚರ್ಯಾದಿ ಮೂರು ಆಶ್ರಮಗಳಲ್ಲಿರುವವರು ಕ್ರಮವಾಗಿ ಇದರ ಇಮ್ಮಡಿ ಶೌಚ ಮಾಡಬೇಕು. ಹಗಲು ಶೌಚಮಾಡಿದವನು ರಾತ್ರಿಯಲ್ಲಿ ಅದರಲ್ಲಿ ಅರ್ಧವನ್ನು ಮಾಡಬೇಕು.

೬೩. ರೋಗದಲ್ಲಿಯೂ, ಚೋರಾದಿಬಾಧಿತವಾದ ಹಾದಿಗಳಲ್ಲಿಯೂ,

ಅಪಿ ಸರ್ವನದೀತೋಯೈರ್ಮೃತ್ಕೂಟೈಶ್ಚಾಽಪಿ ಗೋಮಯೈಃ ।
ಆಪಾದಮಾಚರಂಛೌಚಂ ಭಾವದುಷ್ಟೋ ನ ಶುದ್ಧಿಭಾಕ್ ॥ ೬೪ ॥
ಆರ್ದ್ರಧಾತ್ರೀಫಲೋನ್ಮಾನಾ ಮೃದಃ ಶೌಚೇ ಪ್ರಕೀರ್ತಿತಾಃ ।
ಸರ್ವಾಶ್ಚಾಹುತಯೋಽಪ್ಯೇವಂ ಗ್ರಾಸಾಶ್ಚಾಂದ್ರಾಯಣೇಽಪಿ ಚ ॥ ೬೫ ॥
ಪ್ರಾಗಾಸ್ಯ ಉದಗಾಸ್ಯೋವಾ ಸೂಪವಿಷ್ಟಃ ಶುಚೌ ಭುವಿ ।
ಉಪಸ್ಪೃಶೇದ್ವಿಹೀನಾಯಾಂ ತುಷಾಂಗಾರಾಸ್ಥಿಭಸ್ಮಭಿಃ ॥ ೬೬ ॥
ಅನುಷ್ಣಾಭಿರಫೇನಾಭಿರದ್ಭಿರ್ಹೃದ್ಗಾಭಿರತ್ವರಃ ।
ಬ್ರಾಹ್ಮಣೋ ಬ್ರಾಹ್ಮತೀರ್ಥೇನ ದೃಷ್ಟಿಪೂತಾಭಿರಾಚಮೇತ್ ॥ ೬೭ ॥
ಕಂಠಗಾಭಿರ್ನೃಪಃ ಶುದ್ಧ್ಯೇತ್ತಾಲುಗಾಭಿಸ್ತಥೋರುಜಃ ।
ಸ್ತ್ರೀಶೂದ್ರಾವಾಸ್ಯಸಂಸ್ಪರ್ಶಮಾತ್ರೇಣಾಽಪಿ ವಿಶುದ್ಧ್ಯತಃ ॥ ೬೮ ॥
ಶಿರಃ ಪ್ರಾವೃತ್ಯ ಕಂಠಂ ವಾ ಜಲೇ ಮುಕ್ತಶಿಖೋಽಪಿ ಚ ।
ಅಕ್ಷಾಲಿತ ಪದದ್ವಂದ್ವ ಆಚಾಂತೋಽಪ್ಯಶುಚಿರ್ಮತಃ ॥ ೬೯ ॥

---

ಸ್ತ್ರೀಯರ ವಿಷಯದಲ್ಲಿಯೂ ಅರ್ಧ ಶೌಚವು ವಿಹಿತವಾಗಿರುವುದು. ಸುಖವಾಗಿರುವವನು ಶೌಚವನ್ನು ಕಡಮೆ ಮಾಡಕೂಡದು.

೬೪. ಅಂತಃಕರಣಶುದ್ಧಿಯಿಲ್ಲದವನು ಪಾದದವರೆಗೆ ಸಮಸ್ತ ನದಿಗಳ ನೀರಿನಿಂದಲೂ, ಮಣ್ಣಿನ ರಾಶಿಗಳಿಂದಲೂ, ಗೋಮಯಗಳಿಂದಲೂ ಶೌಚವನ್ನು ಮಾಡಿಕೊಂಡರೂ ಶುದ್ಧನಾಗುವುದಿಲ್ಲ.

೬೫. ಶೌಚದಲ್ಲಿ ಹಸಿನೆಲ್ಲಿಕಾಯಿಯ ಪ್ರಮಾಣದಷ್ಟು ಮಣ್ಣು ವಿಹಿತವಾಗಿರುವುದು. ಎಲ್ಲ ಆಹುತಿಗಳೂ, ಚಾಂದ್ರಾಯಣದಲ್ಲಿ ಗ್ರಾಸಗಳೂ ಇಷ್ಟೇ ಪ್ರಮಾಣವಾಗಿರಬೇಕು.

೬೬. ಹೊಟ್ಟು, ಇದ್ದಲು, ಮೂಳೆ, ಬೂದಿಗಳಿಲ್ಲದ ಶುದ್ಧಭೂಮಿಯಲ್ಲಿ ಪೂರ್ವ ಅಥವಾ ಉತ್ತರಾಭಿಮುಖನಾಗಿ ಆಚಮನಮಾಡಬೇಕು.

೬೭. ಬ್ರಾಹ್ಮಣನು ಬ್ರಾಹ್ಮತೀರ್ಥದಿಂದ ತಣ್ಣಗಿರುವುದೂ, ನೊರೆಯಿಲ್ಲದಿರುವುದೂ, ಹೃದಯವನ್ನು ಮುಟ್ಟುವುದೂ, ದೃಷ್ಟಿಯಿಂದ ಶುದ್ಧವಾದುದೂ ಆದ ನೀರಿನಿಂದ ಆಚಮನಮಾಡಬೇಕು.

೬೮. ಕ್ಷತ್ರಿಯನು ಕಂಠವನ್ನು ಮುಟ್ಟುವುದೂ, ವೈಶ್ಯನು ಕೆನ್ನೆಯನ್ನು ಮುಟ್ಟುವುದೂ, ಸ್ತ್ರೀ ಶೂದ್ರರು ಬಾಯಿಯನ್ನು ಮುಟ್ಟುವುದೂ ಆದ ನೀರಿನಿಂದ ಶುದ್ಧರಾಗುವರು.

೬೯. ತಲೆಯನ್ನೂ, ಕಂಠವನ್ನೂ ಬಟ್ಟೆಯಿಂದ ಸುತ್ತಿಕೊಂಡವನೂ, ನೀರಿನಲ್ಲಿ ಶಿಖೆಯನ್ನು ಬಿಡಿಸಿಕೊಂಡಿರುವವನೂ, ಕಾಲನ್ನು ತೊಳೆಯದವನೂ ಆಚಮನಮಾಡಿದರೂ ಅಶುದ್ಧನಾಗುವನು.

ತ್ರಿಃ ಪೀತ್ವಾಽಂಬು ವಿಶುದ್ಧ್ಯರ್ಥಂ ತತಃ ಖಾನಿ ವಿಶೋಧಯೇತ್ ।
ಅಂಗುಷ್ಠಮೂಲದೇಶೇನ ದ್ವಿರ್ದ್ವಿರೋಷ್ಠಾಧರೌ ಸ್ಪೃಶೇತ್ ॥ ೭೦ ॥
ಅಂಗುಲೀಭಿಸ್ತ್ರಿಭಿಃ ಪಶ್ಚಾತ್ಪುನರಾಸ್ಯಂ ಸ್ಪೃಶೇತ್ಸುಧೀಃ ।
ತರ್ಜನ್ಯಂಗುಷ್ಠಕೋಟ್ಯಾ ಚ ಘ್ರಾಣರಂಧ್ರೇ ಪುನಃ ಪುನಃ ॥ ೭೧ ॥
ಅಂಗುಷ್ಠಾನಾಮಿಕಾಗ್ರಾಭ್ಯಾಂ ಚಕ್ಷುಃಶ್ರೋತ್ರೇ ಪುನಃ ಪುನಃ ।
ಕನಿಷ್ಠಾಂಗುಷ್ಠಯೋಗೇನ ನಾಭಿರಂಧ್ರಮುಪಸ್ಪೃಶೇತ್ ॥ ೭೨ ॥
ಸ್ಪೃಷ್ಟ್ವಾ ತಲೇನ ಹೃದಯಂ ಸಮಸ್ತಾಭಿಃ ಶಿರಃ ಸ್ಪೃಶೇತ್ ।
ಅಂಗುಲ್ಯಗ್ರೈಸ್ತಥಾ ಸ್ಕಂಧೌ ಸಾಂಬುಸರ್ವತ್ರ ಸಂಸ್ಪೃಶೇತ್ ॥ ೭೩ ॥
ಆಚಾಂತಃ ಪುನರಾಚಾಮೇತ್ಕೃತೇರಥ್ಯೋಪಸರ್ಪಣೇ ।
ಸ್ನಾತ್ವಾ ಭುಕ್ತ್ವಾ ಪಯಃ ಪೀತ್ವಾ ಪ್ರಾರಂಭೇ ಶುಭಕರ್ಮಣಾಂ ॥ ೭೪ ॥
ಸುಪ್ತ್ವಾ ವಾಸಃ ಪರೀಧಾಯ ತಥಾ ದೃಷ್ಟ್ವಾಽಪ್ಯಮಂಗಲಂ ।
ಪ್ರಮಾದಾದಶುಚಿಂ ಸ್ಪೃಷ್ಟ್ವಾ ದ್ವಿರಾಚಾಂತಃ ಶುಚಿರ್ಭವೇತ್ ॥ ೭೫ ॥
ಅಥೋ ಮುಖವಿಶುದ್ಧ್ಯರ್ಥಂ ಗೃಹ್ಣೀಯಾದ್ದಂತಧಾವನಂ ।
ಆಚಾಂತೋಽಪ್ಯಶುಚಿರ್ಯಸ್ಮಾದಕೃತ್ವಾ ದಂತಧಾವನಂ ॥ ೭೬ ॥

---

೭೦–೭೩. ಶುದ್ಧಿಗಾಗಿ ಜಲವನ್ನು ಮೂರುಸಾರಿ ಕುಡಿದು ಇಂದ್ರಿಯಗಳನ್ನು ಶುದ್ಧಿಗೊಳಿಸಬೇಕು. ಹೆಬ್ಬೆರಳಿನ ಬುಡದಿಂದ ಕೆಳಮೇಲಿನ ತುಟಿಗಳನ್ನೂ, ಅನಂತರ ಮೂರು ಬೆರಳುಗಳಿಂದ ಬಾಯಿಯನ್ನೂ, ತರ್ಜನೀ ಅಂಗುಷ್ಠ ಬೆರಳುಗಳ ಕೊನೆಯಿಂದ ಘ್ರಾಣರಂಧ್ರಗಳನ್ನೂ, ಹೆಬ್ಬೆರಳು ಅನಾಮಿಕ ಬೆರಳುಗಳಿಂದ ಕಣ್ಣು ಕಿವಿಗಳನ್ನೂ, ಕನಿಷ್ಠಾಂಗುಷ್ಠಗಳಿಂದ ಹೊಕ್ಕಳನ್ನೂ, ಅಂಗೈಯಿಂದ ಎದೆಯನ್ನೂ, ಎಲ್ಲಾ ಬೆರಳುಗಳಿಂದ ತಲೆಯನ್ನೂ ಮುಟ್ಟಬೇಕು. ಹಾಗೆಯೇ ಬೆರಳುಗಳ ತುದಿಯಿಂದ ಹೆಗಲನ್ನು ಮುಟ್ಟಬೇಕು.

೭೪–೭೫. ಆಚಮನ ಮಾಡಿದವನು ಬೀದಿಗಳಲ್ಲಿ ತಿರುಗಾಡಿದರೆ ತಿರುಗಿ ಆಚಮನಮಾಡಬೇಕು. ಸ್ನಾನ, ಭೋಜನ, ಪಯಃಪಾನಗಳನ್ನು ಮಾಡಿದಾಗಲೂ, ಶುಭಕರ್ಮಗಳ ಆರಂಭದಲ್ಲಿಯೂ, ನಿದ್ರಿಸಿದಾಗಲೂ, ವಸ್ತ್ರವನ್ನು ಉಟ್ಟಾಗಲೂ, ಅಮಂಗಳವಸ್ತುವನ್ನು ನೋಡಿದಾಗಲೂ, ಪ್ರಮಾದದಿಂದ ಅಶುದ್ಧವಸ್ತುವನ್ನು ಮುಟ್ಟಿದಾಗಲೂ ಎರಡುಸಾರಿ ಆಚಮನಮಾಡಿದರೆ ಶುದ್ಧನಾಗುವನು.

೭೬. ಮುಖಶುದ್ಧಿಗಾಗಿ ಹಲ್ಲುಗಳನ್ನು ಉಜ್ಜಿಕೊಳ್ಳಬೇಕು. ಹಲ್ಲುಗಳನ್ನು ತೊಳೆಯದೆ ಆಚಮನಮಾಡಿದವನು ಶುದ್ಧನಾಗುವುದಿಲ್ಲ.

ಪ್ರತಿಪದ್ದರ್ಶಷಷ್ಠೀಷು ನವಮ್ಯಾಂ ರವಿವಾಸರೇ ।
ದಂತಾನಾಂ ಕಾಷ್ಠಸಂಯೋಗೋ ದಹೇದಾಸಪ್ತಮಂ ಕುಲಂ ॥ ೭೭ ॥
ಅಲಾಭೇ ದಂತಕಾಷ್ಠಾನಾಂ ನಿಷಿದ್ಧೇವಾಽಥ ವಾಸರೇ ।
ಗಂಡೂಷಾ ದ್ವಾದಶ ಗ್ರಾಹ್ಯಾ ಮುಖಸ್ಯ ಪರಿಶುದ್ಧಯೇ ॥ ೭೮ ॥
ಕನಿಷ್ಠಾಗ್ರಪರೀಮಾಣಂ ಸತ್ವಚಂ ನಿರ್ವ್ರಣಂ ಋಜುಂ ।
ದ್ವಾದಶಾಽಂಗುಲಮಾನಂ ಚ ಸಾರ್ಧಂ ಸ್ಯಾದ್ದಂತಧಾವನಂ ॥ ೭೯ ॥
ಏಕೈಕಾಂಗುಲಹ್ರಾಸೇನ ವರ್ಣೇಷ್ವನ್ಯೇಷು ಕೀರ್ತಿತಂ ।
ಆಮ್ರಾಮ್ರಾತಕ ಧಾತ್ರೀಣಾಂ ಕಂಕೋಲಖದಿರೋದ್ಭವಂ ॥ ೮೦ ॥
ಶಮ್ಯಪಾಮಾರ್ಗಖರ್ಜೂರೀ ಶೇಲು ಶ್ರೀಪರ್ಣಿ ಪೀಲುಜಂ ।
ರಾಜಾದನಂ ಚ ನಾರಂಗಂ ಕಷಾಯಕಟುಕಂಟಕಂ ॥ ೮೧ ॥
ಕ್ಷೀರವೃಕ್ಷೋದ್ಭವಂ ವಾಽಪಿ ಪ್ರಶಸ್ತಂ ದಂತದಾವನಂ ।
ಜಿಹ್ವೋಲ್ಲೇಖನಿಕಾಂ ಚಾಽಪಿ ಕುರ್ಯಾಚ್ಚಾಪಾಕೃತಿಂ ಶುಭಾಂ ॥ ೮೨ ॥
ಅನ್ನಾದ್ಯಾಯ ವ್ಯೂಹಧ್ವಂ ಸೋಮೋರಾಜಾಽಯಮಾಗಮತ್ ।
ಸಮೇ ಮುಖಂ ಪ್ರಮಾರ್ಕ್ಷ್ಯತೇ ಯಶಸಾ ಚ ಭಗೇನ ಚ ॥ ೮೩ ॥

---

೭೭. ಪಾಡ್ಯ, ಅಮಾವಾಸ್ಯೆ, ಷಷ್ಠೀ, ನವಮಿ, ಭಾನುವಾರದಿನಗಳಲ್ಲಿ ಹಲ್ಲುಗಳನ್ನು ಉಜ್ಜಿಕೊಳ್ಳುವುದರಿಂದ ಏಳುತಲೆಯ ಪಿತೃಗಳು ದಗ್ಧರಾಗುವರು.

೭೮. ದಂತಕಾಷ್ಠವು ಸಿಕ್ಕುತ್ತಿರುವಾಗಲೂ, ನಿಷಿದ್ಧದಿನದಲ್ಲಿಯೂ ಮುಖಶುದ್ಧಿಗಾಗಿ ಹನ್ನೆರಡುಸಾರಿ ಗಂಡೂಷಮಾಡಬೇಕು.

೭೯–೮೨. ಕಿರುಬೆರಳಿನ ಕೊನೆಯಷ್ಟಿರುವುದೂ, ತೊಗಟೆಯಿಂದ ಸಹಿತವಾಗಿರುವುದೂ, ವ್ರಣವಿಲ್ಲದಿರುವುದೂ, ನೆಟ್ಟಗಿರುವುದೂ, ಹನ್ನೆರಡು ಅಂಗುಲ ಉದ್ದವಿರುವುದೂ, ಅರ್ಧದಿಂದ ಕೂಡಿರುವುದೂ ದಂತಕಾಷ್ಠವೆನ್ನಿಸಿಕೊಳ್ಳುವುದು. ಇದರಲ್ಲಿ ಒಂದೊಂದಂಗುಲ ಕಮ್ಮಿಯಾಗದೆ ಇತರ ಜಾತಿಯವರಿಗೆ ದಂತಕಾಷ್ಠವಾಗುವುದು. ಮಾವು, ಆಮಟೆ, ನೆಲ್ಲಿ, ಕಂಕೋಲ, ಖದಿರ, ಶಮಿ, ಅಪಾಮಾರ್ಗ, ಖರ್ಜೂರ, ಶೇಲು, ಶ್ರೀಪಣಿ, ಪೀಲು, ರಾಜಾದನ, ಕಿತ್ತಳೆ, ವಗರು, ಕಹಿ, ಮುಳ್ಳುಗಳುಳ್ಳ, ಆಲ ಮೊದಲಾದ ಕ್ಷೀರವೃಕ್ಷ ಇವುಗಳ ಉತ್ತಮ ಕಾಷ್ಠಗಳು ದಂತಧಾವನಕ್ಕೆ ಉತ್ತಮವು. ಈ ದಂತಕಾಷ್ಠವನ್ನು ಬಿಲ್ಲಿನಂತೆ ಬಗ್ಗಿಸಿ ನಾಲಿಗೆಯನ್ನು ಉಜ್ಜಿಕೊಳ್ಳಬೇಕು.

೮೩. ಎಲೈ ದಂತಗಳೆ! ನೀವು ಅನ್ನವನ್ನು ಭಕ್ಷಿಸುವುದಕ್ಕಾಗಿ ನಿರ್ಮಲವಾಗಿ ಸಾಲಾಗಿ ಗಟ್ಟಿಯಾಗಿರಿ. ಈ ಚಂದ್ರನು ಕಾಷ್ಠರೂಪನಾಗಿ ಬಂದಿರುವನು. ಅವನ ಕೀರ್ತಿಯಿಂದಲೂ, ಭಾಗ್ಯದಿಂದಲೂ ನನ್ನ ಮುಖವನ್ನು ಶುದ್ಧಿಗೊಳಿಸುವನು.

ಆಯುರ್ಬಲಂ ಯಶೋವರ್ಚಃ ಪ್ರಜಾಃ ಪಶುವಸೂನಿ ಚ ।
ಬ್ರಹ್ಮಪ್ರಜ್ಞಾಂ ಚ ಮೇಧಾಂ ಚ ತ್ವಂ ನೋ ದೇಹಿ ವನಸ್ಪತೇ ॥ ೮೪ ॥
ಮಂತ್ರಾವೇತೌ ಸಮುಚ್ಚಾರ್ಯ ಯಃ ಕುರ್ಯಾದ್ದಂತಧಾವನಂ ।
ವನಸ್ಪತಿಗತಃ ಸೋಮಸ್ತಸ್ಯ ನಿತ್ಯಂ ಪ್ರಸೀದತಿ ॥ ೮೫ ॥
ಮುಖೇ ಪರ್ಯುಷಿತೇ ಯಸ್ಮಾದ್ಭವೇದಶುಚಿಭಾಙ್ನರಃ ।
ತತಃ ಕುರ್ಯಾತ್ಪ್ರಯತ್ನೇನ ಶುದ್ಧ್ಯರ್ಥಂ ದಂತಧಾವನಂ ॥ ೮೬ ॥
ಉಪವಾಸೇಽಪಿ ನೋ ದುಷ್ಯೇದ್ದಂತಧಾವನಮಂಜನಂ ।
ಗಂಧಾಲಂಕಾರಸದ್ವಸ್ತ್ರಪುಷ್ಪಮಾಲಾನುಲೇಪನಂ ॥ ೮೭ ॥
ಪ್ರಾತಃ ಸಂಧ್ಯಾಂ ತತಃ ಕುರ್ಯಾದ್ದಂತಧಾವನಪೂರ್ವಿಕಾಂ ।
ಪ್ರಾತಃಸ್ನಾನಂ ಚರಿತ್ವಾ ಚ ಶುದ್ಧೇ ತೀರ್ಥೇ ವಿಶೇಷತಃ ॥ ೮೮ ॥
ಪ್ರಾತಃಸ್ನಾನಾದ್ಯತಃ ಶುದ್ಧ್ಯೇತ್ಕಾಯೋಽಯಂ ಮಲಿನಃ ಸದಾ ।
ಛಿದ್ರಿತೋ ನವಭಿಶ್ಛಿದ್ರೈಃ ಸ್ರವತ್ಯೇವ ದಿವಾನಿಶಂ ॥ ೮೯ ॥
ಉತ್ಸಾಹಮೇಧಾಸೌಭಾಗ್ಯರೂಪಸಂಪತ್ಪ್ರವರ್ತಕಂ ।
ಮನಃ ಪ್ರಸನ್ನತಾಹೇತುಃ ಪ್ರಾತಃ ಸ್ನಾನಂ ಪ್ರಶಸ್ಯತೇ ॥ ೯೦ ॥

---

೮೪. ವನಸ್ಪತಿಯೆ! ನೀನು ನನಗೆ ಆಯುಸ್ಸು, ಬಲ, ಕೀರ್ತಿ, ವರ್ಚಸ್ಸು, ಪುತ್ರರು, ಪಶುಗಳು, ದ್ರವ್ಯಗಳನ್ನೂ, ಬ್ರಹ್ಮಜ್ಞಾನವನ್ನೂ, ಪ್ರಜ್ಞೆ, ಬುದ್ಧಿಗಳನ್ನೂ ನೀಡು."

೮೫. ಈ ಎರಡು ಮಂತ್ರಗಳನ್ನು ಉಚ್ಚರಿಸಿ ದಂತಧಾವನವನ್ನು ಮಾಡಿಕೊಂಡವನಿಗೆ ವನಸ್ಪತಿಗತನಾದ ಚಂದ್ರನು ಯಾವಾಗಲೂ ಪ್ರಸನ್ನನಾಗುವನು.

೮೬. ಬಾಯಿಯು ತಂಗಳಾಗಲು ಮಾನವನು ಅಶುದ್ಧನಾಗುವನು. ಆದುದರಿಂದ ಶುದ್ಧಿಗಾಗಿ ಹಲ್ಲುಗಳನ್ನು ಉಜ್ಜಿಕೊಳ್ಳಬೇಕು.

೮೭. ಉಪವಾಸದ ದಿನವಲ್ಲಿ ಹನ್ನೆರಡುಸಾರಿ ಗಂಡೂಷಮಾಡುವುದು (ಮುಕ್ಕಳಿಸುವುದು), ಕಾಡಿಗೆ, ಗಂಧ, ಅಲಂಕಾರ, ಒಳ್ಳೆಬಟ್ಟೆ, ಹೂವಿನಮಾಲೆ, ಅನುಲೇಪನ ಇವುಗಳು ದೂಷ್ಯವಾಗುವುದಿಲ್ಲ.

೮೮. ದಂತಧಾವನಪೂರ್ವಕವಾಗಿ ಶುದ್ಧತೀರ್ಥದಲ್ಲಿ ಮಿಂದು ಪ್ರಾತಃ ಸಂಧ್ಯಾವಂದನೆಯನ್ನು ಮಾಡಬೇಕು.

೮೯. ಹಗಲು ರಾತ್ರಿ ಒಂಬತ್ತು ರಂಧ್ರಗಳಿಂದ ಮಲವನ್ನು ಸ್ರವಿಸುತ್ತಿರುವುದರಿಂದ ಯಾವಾಗಲೂ ಮಲಿನವಾದ ಈ ಶರೀರವು ಪ್ರಾತಃಸ್ನಾನದಿಂದ ಶುದ್ಧವಾಗುವುದು.

೯೦. ಪ್ರಾತಃಸ್ನಾನವು ಉತ್ಸಾಹ, ಮೇಧಾ, ಸೌಭಾಗ್ಯ, ರೂಪ, ಸಂಪತ್ತು, ಮನಃಪ್ರಸಾದ ಇವುಗಳಿಗೆ ಕಾರಣವಾದ್ದರಿಂದ ಉತ್ಕೃಷ್ಟವಾಗಿರುವುದು.

ಪ್ರಸ್ವೇದಲಾಲಾದ್ಯಾಕ್ಲಿನ್ನೋ ನಿದ್ರಾಧೀನೋ ಯತೋ ನರಃ ।
ಪ್ರಾತಃ ಸ್ನಾನಾತ್ತತೋಽರ್ಹಃ ಸ್ಯಾನ್ಮಂತ್ರಸ್ತೋತ್ರಜಪಾದಿಷು ॥ ೯೧ ॥
ಪ್ರಾತಃಪ್ರಾತಸ್ತು ಯತ್ಸ್ನಾನಂ ಸಂಜಾತೇ ಚಾಽರುಣೋದಯೇ ।
ಪ್ರಾಜಾಪತ್ಯಸಮಂ ಪ್ರಾಹುಸ್ತನ್ಮಹಾಽಘವಿಘಾತಕೃತ್ ॥ ೯೨ ॥
ಪ್ರಾತಃಸ್ನಾನಂ ಹರೇತ್ಪಾಪಮಲಕ್ಷ್ಮೀಂ ಗ್ಲಾನಿಮೇವ ಚ ।
ಅಶುಚಿತ್ವಂ ಚ ದುಃಸ್ವಪ್ನಂ ತುಷ್ಟಿಂ ಪುಷ್ಟಿಂ ಪ್ರಯಚ್ಛತಿ ॥ ೯೩ ॥
ನೋಪಸರ್ಪಂತಿ ವೈ ದುಷ್ಟಾಃ ಪ್ರಾತಃ ಸ್ನಾಯಿಜನಂ ಕ್ವಚಿತ್ ।
ದೃಷ್ಟಾಽದೃಷ್ಟಫಲಂ ಯಸ್ಮಾತ್ಪ್ರಾತಃಸ್ನಾನಂ ಸಮಾಚರೇತ್ ॥ ೯೪ ॥
ಪ್ರಸಂಗತಃ ಸ್ನಾನವಿಧಿಂ ವಕ್ಷ್ಯಾಮಿ ಕಲಶೋದ್ಭವ ।
ವಿಧಿಸ್ನಾನಂ ಯತಃ ಪ್ರಾಹುಃ ಸ್ನಾನಾಚ್ಛತಗುಣೋತ್ತರಂ ॥ ೯೫ ॥
ವಿಶುದ್ಧಾಂ ಮೃದಮಾದಾಯ ಬರ್ಹೀಂಷಿ ತಿಲಗೋಮಯಂ ।
ಶುಚೌ ದೇಶೇ ಪರಿಸ್ಥಾಪ್ಯ ತ್ವಾಚಮ್ಯ ಸ್ನಾನಮಾಚರೇತ್ ॥ ೯೬ ॥
ಉಪಗ್ರಹೀ ಬದ್ಧಶಿಖೋ ಜಲಮಧ್ಯೇ ಸಮಾವಿಶೇತ್ ।
ಉರುಜ್ಹೀತಿಮಂತ್ರೇಣ ತೋಯಮಾವರ್ತ್ಯ ಸ್ಪೃಷ್ಟಿತಃ ॥ ೯೭ ॥

---

೯೧. ನಿದ್ರಿಸುವ ಮಾನವನು ಬೆವರು, ಜೊಲ್ಲುಗಳಿಂದ ಒದ್ದೆಯಾಗಿ ಮಲಿನಗೊಳ್ಳುವುದರಿಂದ ಪ್ರಾತಃಸ್ನಾನ ಮಾಡಿದಲ್ಲಿ ಮಂತ್ರ, ಸ್ತೋತ್ರ, ಜಪಾದಿಗಳಲ್ಲಿ ಅರ್ಹನಾಗುವನು.

೯೨. ಅರುಣೋದಯಕಾಲದಲ್ಲಿ ಪ್ರತಿದಿನವೂ ಮಾಡುವ ಪ್ರಾತಃಸ್ನಾನವು ಪ್ರಾಜಾಪತ್ಯಕೃಚ್ಛ್ರಕ್ಕೆ ಸಮವಾಗಿ ಮಹಾಪಾತಕಗಳನ್ನು ಪರಿಹರಿಸುವುದು.

೯೩. ಪ್ರಾತಃಸ್ನಾನವು ಪಾಪ, ಅಲಕ್ಷ್ಮೀ, ಗ್ಲಾನಿ, ಅಶುದ್ಧಿ, ದುಸ್ಸ್ವಪ್ನಗಳನ್ನು ಪರಿಹರಿಸಿ ಸಂತೋಷಪುಷ್ಟಿಗಳನ್ನು ಕೊಡುವುದು.

೯೪. ಬೆಳಗ್ಗೆ ಸ್ನಾನಮಾಡುವವನನ್ನು ದುಷ್ಟರು ಸಮೀಪಿಸುವುದಿಲ್ಲ. ಈ ಪ್ರಾತಃಸ್ನಾನವು ದೃಷ್ಟಾದೃಷ್ಟಫಲಗಳನ್ನೀಯುವುದರಿಂದ ಯಾವಾಗಲೂ ಮಾಡಬೇಕು.

೯೫. ಅಗಸ್ತ್ಯನೆ! ವಿಧಿಸ್ನಾನವು ಸಾಮಾನ್ಯ ಸ್ನಾನಕ್ಕಿಂತ ನೂರರಷ್ಟು ಉತ್ತಮವಾದ್ದರಿಂದ ಆ ಸ್ನಾನವಿಧಿಯನ್ನು ಹೇಳುವೆನು.

೯೬. ಶುದ್ಧವಾದ ಮೃತ್ತಿಕೆ, ದರ್ಭೆ, ಎಳ್ಳು, ಗೋಮಯ ಇವುಗಳನ್ನು ತೆದುಕೊಂಡು ಶುದ್ಧವಾದ ಸ್ಥಳದಲ್ಲಿರಿಸಿ ಆಚಮನಮಾಡಿ ಸ್ನಾನಮಾಡಬೇಕು.

೯೭–೧೦೦. ದರ್ಭೆಯನ್ನು ಹಿಡಿದುಕೊಂಡು, ಶಿಖೆಯನ್ನು ಕಟ್ಟಿಕೊಂಡು ನೀರಿನಲ್ಲಿಳಿದು "ಉರುಜ್ಹಿ" ಇತ್ಯಾದಿ ಮಂತ್ರಗಳಿಂದ ನೀರನ್ನು ಕಲಕಿ ನೀರನ್ನು ಆಮಂತ್ರಿಸುವುದಕ್ಕಾಗಿ "ಯೇತೇ ಶತಂ" ಇತ್ಯಾದಿಮಂತ್ರವನ್ನು ಜಪಿಸಿ

ಯೇತೇ ಶತಂ ತತೋ ಜಪ್ತ್ವಾ ತೋಯಸ್ಯಾಮಂತ್ರಣಾಯ ಚ ।
ಸುಮಿತ್ರಿಯಾ ನೋ ಮಂತ್ರೇಣ ಪೂರ್ವಂ ಕೃತ್ವಾ ಜಲಾಂಜಲಿಂ ।
ಕ್ಷಿಪೇದ್ದ್ವೇಷ್ಯಂ ಸಮುದ್ದಿಶ್ಯ ಜಪನ್ದುರ್ಮಿತ್ರಿಯಾ ಇತಿ ॥ ೯೮ ॥
ಇದಂ ವಿಷ್ಣುರಿಮಂ ಜಪ್ತ್ವಾ ಲಿಂಪೇದಂಗಾನಿ ಮೃತ್ಸ್ನಯಾ ।
ಮೃದೈಕಯಾ ಶಿರಃ ಕ್ಷಾಲ್ಯ ದ್ವಾಭ್ಯಾಂ ನಾಭೇಸ್ತಥೋಪರಿ ॥ ೯೯ ॥
ನಾಭೇರಧಸ್ತು ತಿಸೃಭಿಃ ಪಾದೌ ಷಡ್ಭಿರ್ವಿಶೋಧಯೇತ್ ।
ಮಜ್ಜೇತ್ಪ್ರವಾಹಾಭಿಮುಖ ಆಪೋ ಅಸ್ಮಾನಿಮಂ ಜಪನ್ ॥ ೧೦೦ ॥
ಉದಿದಾಭ್ಯಃ ಶುಚಿರಿತಿ ಮಂತ್ರ ಉನ್ಮಜ್ಜನೇ ಮತಃ ।
ಮಾನಸ್ತೋಕ ಇಮಂ ಜಪ್ತ್ವಾ ಲಿಂಪೇದ್ಗಾತ್ರಾಣಿ ಗೋಮಯೈಃ ॥೧೦೧॥
ಇಮಂ ಮೇ ವರುಣೇತ್ಯಾದಿ ಮಂತ್ರಃ ಸ್ನಾತ್ವಾಽಭಿಷೇಚನಂ ।
ತತ್ವಾಯಾಮಿ ತಥಾ ತ್ವನ್ನಃ ಸತ್ವನ್ನಶ್ಚಾಽಪ್ಯುದುತ್ತಮಂ ॥ ೧೦೨ ॥
ಧಾಮ್ನೋ ಧಾಮ್ನಸ್ತಥಾ ಮಾಪೋಮೌಷಧೀರಿತಿ ಸಂಜಪೇತ್ ।
ಯದಾಹುರಘ್ನ್ಯಾಮುಂಚಂತು ಮೇತಿಚಾಽವಭೃಥೇತಿ ಚ ॥ ೧೦೩ ॥
ಅಬ್ದೈವತಾ ಇಮೇ ಮಂತ್ರಾಃ ಪ್ರೋಕ್ತಾಃ ಸ್ನಾತ್ವಾಽಭಿಷೇಚನೇ ।
ಪ್ರಣವೇನ ತತೋ ವಿಪ್ರೋ ಮಹಾವ್ಯಾಹೃತಿಭಿಸ್ತತಃ ॥ ೧೦೪ ॥

---

"ಸುಮಿತ್ರಿಯಾ ನೋ" ಮಂತ್ರದಿಂದ ಮೊದಲು ನೀರಿನ ಬೊಗಸೆಯನ್ನು ಹಿಡಿದು, ಶತ್ರುವನ್ನುದ್ದೇಶಿಸಿ, "ದುರ್ಮಿತ್ರಿಯಾ" ಇತ್ಯಾದಿ ಮಂತ್ರದಿಂದ ಎಸೆದು, "ಇದಂ ವಿಷ್ಣುಃ" ಇತ್ಯಾದಿ ಮಂತ್ರವನ್ನು ಜಪಿಸಿ ಮೃತ್ತಿಕೆಯನ್ನು ಅಂಗಗಳಿಗೆ ಲೇಪಿಸಿಕೊಂಡು ಒಂದುಮುದ್ದೆ ಮಣ್ಣಿನಿಂದ ತಲೆಯನ್ನೂ, ಎರಡುಮುದ್ದೆ ಮಣ್ಣಿನಿಂದ ಹೊಕ್ಕಳಿನ ಮೇಲ್ಭಾಗವನ್ನೂ, ಮೂರುಮುದ್ದೆಗಳಿಂದ ಹೊಕ್ಕಳಿನ ಕೆಳಭಾಗವನ್ನೂ, ಆರುಮುದ್ದೆಗಳಿಂದ ಕಾಲುಗಳನ್ನೂ ಶುದ್ಧಿಮಾಡಿಕೊಂಡು, "ಆಪೋ ಅಸ್ಮಾನ್" ಇತ್ಯಾದಿ ಮಂತ್ರವನ್ನು ಜಪಿಸುತ್ತ ಪ್ರವಾಹಾಭಿಮುಖವಾಗಿ ಸ್ನಾನಮಾಡಬೇಕು.

೧೦೧. ಸ್ನಾನಮಾಡಿ ಮೇಲಕ್ಕೇಳುವಾಗ "ಉದಿದಾಭ್ಯಃಶುಚಿಃ" ಇತ್ಯಾದಿ ಮಂತ್ರವನ್ನುಚ್ಚರಿಸಬೇಕು. "ಮಾನಸ್ತೋಕೇ" ಇತ್ಯಾದಿ ಮಂತ್ರವನ್ನು ಜಪಿಸಿ ಗೋಮಯವನ್ನು ಶರೀರಕ್ಕೆ ಹಚ್ಚಿಕೊಳ್ಳಬೇಕು.

೧೦೨–೧೦೩. "ಇಮಂ ಮೇ ವರುಣ", "ತತ್ವಾಯಾಮಿ", ತ್ವನಃ", "ಸತ್ವಂನ", "ಉದುತ್ತಮಂ", "ಧಾಮ್ನೋಧಾಮ್ನಃ", "ಮಾಪೋಮೌಷಧೀ", "ಅಘ್ನ್ಯಾಮುಂಚಂತು", "ಅವಭೃತೇ" ಇತ್ಯಾದಿ ಮಂತ್ರಗಳನ್ನು ಉಚ್ಚರಿಸಬೇಕು.

೧೦೪–೧೦೫. ಸ್ನಾನದಲ್ಲಿ ಜಲದೇವತಾಕವಾದ ಈ ಮಂತ್ರಗಳು ಉಕ್ತವಾಗಿವೆ. ಬಳಿಕ ಬ್ರಾಹ್ಮಣನು ಪ್ರಣವ, ಮಹಾವ್ಯಾಹೃತಿ, ಗಾಯತ್ರಿ ಇವುಗಳಿಂದ

ಆತ್ಮಾನಂ ಪಾವಯೇದ್ವಿದ್ವಾನ್ನಾಯತ್ರ್ಯಾ ಚ ತತಃ ಕೃತೀ ।
ಆಪೋಹಿಷ್ಠೇತಿ ತಿಸೃಭಿಃ ಪ್ರತ್ಯೃಚಂ ಪಾವನಂ ಸ್ಮೃತಂ ॥ ೧೦೫ ॥
ಏತೇಽಪಿ ಪಾವನಾ ಮಂತ್ರಾ ಇದಮಾಪೋಹವಿಷ್ಮತೀಃ ।
ದೇವೀರಾಪ ಅಪೋ ದೇವಾ ದ್ರುಪದಾದಿವ ಸಂಜ್ಞಕಾಃ ॥ ೧೦೬ ॥
ಶನ್ನೋ ದೇವೀರಪೋ ದೇವೀಸ್ತಥಾಪಾಂರಸಮಿತ್ಯಪಿ ।
ಪುನಂತು ಮೇತಿ ಚ ನವ ಪಾವನಾನ್ಯಃ ಪ್ರಕೀರ್ತಿತಾಃ ॥ ೧೦೭ ॥
ತತೋಽಘಮರ್ಷಣಂ ಜಪ್ತ್ವಾ ದ್ರುಪದಾಂ ಚ ತತೋ ಜಪೇತ್ ।
ಪ್ರಾಣಾಯಾಮಂ ಚ ವಿಧಿವದಥವಾಂತರ್ಜಲೇ ಜಪೇತ್ ॥ ೧೦೮ ॥
ಪ್ರಣವಂ ತ್ರಿರ್ಜಪೇದ್ವಾಽಪಿ ವಿಷ್ಣುಂ ವಾ ಸಂಸ್ಮರೇತ್ಸುಧೀಃ ।
ಸ್ನಾತ್ವೇತ್ಥಂ ವಸ್ತ್ರಮಾಪೀಡ್ಯ ಗೃಹ್ಣೀಯಾದ್ಧೌತವಾಸಸೀ ॥ ೧೦೯ ॥
ಆಚಮ್ಯ ಚ ತತಃ ಕುರ್ಯಾತ್ಪ್ರಾತಃ ಸಂಧ್ಯಾಂ ಕುಶಾನ್ವಿತಾಂ ।
ಯೋ ನ ಸಂಧ್ಯಾಮುಪಾಸೀತ ಬ್ರಾಹ್ಮಣೋ ಹಿ ವಿಶೇಷತಃ ॥ ೧೧೦ ॥
ಸ ಜೀವನ್ನೇವ ಶೂದ್ರಸ್ತು ಮೃತಃ ಶ್ವಾ ಜಾಯತೇ ಧ್ರುವಂ ।
ಸಂಧ್ಯಾಹೀನೋಽಶುಚಿರ್ನಿತ್ಯಮನರ್ಹಃ ಸರ್ವಕರ್ಮಸು ॥ ೧೧೧ ॥
ಯದನ್ಯತ್ಕುರುತೇ ಕರ್ಮ ನ ತಸ್ಯ ಫಲಭಾಗ್ಭವೇತ್ ।
ಪ್ರಣವಂ ಪ್ರಾಗ್ದಿಶಿ ಸ್ಮೃತ್ವಾ ತತೋ ದತ್ವಾ ಕುಶಾಸನಂ ॥ ೧೧೨ ॥

---

ತನ್ನನ್ನು ಪವಿತ್ರಗೊಳಿಸಿಕೊಳ್ಳಬೇಕು. ಅನಂತರ "ಆಪೋಹಿಷ್ಠ" ಇತ್ಯಾದಿ ಮೂರು ಋಕ್ಕುಗಳಿಂದ ಮಾರ್ಜನಮಾಡಿಕೊಳ್ಳಬೇಕು. ಇವುಗಳಲ್ಲಿ ಪ್ರತಿಯೊಂದು ಋಕ್ಕೂ ಪವಿತ್ರವಾದುದು.

೧೦೬–೧೦೭. "ಇದಮಾಪಃ, ಹವಿಷ್ಮತೀ, ದೇವಿರಾಪ, ಅಪೋದೇವಾ, ದ್ರುಪದ, ಶನ್ನೋದೇವೀ, ಅಪೋದೇವೀ, ಅಪಾಂ ರಸಂ, ಪುನಂತು ಮಾಂ" ಇತ್ಯಾದಿ ಮಂತ್ರಗಳು ಪವಿತ್ರವಾದುವು.

೧೦೮–೧೦೯. ಬಳಿಕ ಅಘಮರ್ಷಣ, ದ್ರುಪದಾ ಮಂತ್ರಗಳನ್ನು ಜಪಿಸಬೇಕು. ನೀರಿನಲ್ಲಿ ನಿಂತು ಪ್ರಾಣಾಯಾಮವನ್ನು ಮಾಡಿ ವಿಧಿಯಂತೆ ಪ್ರಣವವನ್ನು ಜಪಿಸಬೇಕು. ಹೀಗೆ ಮೂರು ಸಾರಿ ಪ್ರಣವವನ್ನು ಜಪಿಸಬೇಕು. ಅಥವಾ ವಿಷ್ಣುವನ್ನು ಸ್ಮರಿಸಬೇಕು. ಹೀಗೆ ಮಿಂದು ವಸ್ತ್ರವನ್ನು ಹಿಂಡಿಕೊಂಡು ಒಗೆದ ವಸ್ತ್ರವನ್ನು ಧರಿಸಬೇಕು.

೧೧೦–೧೧೪. ಬಳಿಕ ಆಚಮನ ಮಾಡಿ ದರ್ಭೆಯನ್ನು ಹಿಡಿದುಕೊಂಡು ಪ್ರಾತಃಕಾಲದ ಸಂಧ್ಯಾವಂದನೆಯನ್ನಾಚರಿಸಬೇಕು. ಈ ರೀತಿ ಸಂಧ್ಯಾವಂದನೆ ಮಾಡದ ಬ್ರಾಹ್ಮಣನು ಬದುಕಿರುವಾಗಲೆ ಶೂದ್ರನಾಗುವನು. ಮೃತನಾದರೆ ನಾಯಿಯಾಗಿ ಜನಿಸುವನು. ಸಂಧ್ಯಾವಂದನೆ ಮಾಡದವನು ಯಾವಾಗಲೂ,

ಚತುಃಸ್ರಕ್ತಿರಿಮಂ ಮಂತ್ರಂ ಪಠಿತ್ವಾ ನಾಽನ್ಯದೃಙ್ಮನಾಃ ॥ ೧೧೩ ॥
ಪ್ರಾಙ್ಮುಖೋ ಬದ್ಧಚೂಡೋ ವಾಽಪ್ಯುಪವಿಷ್ಟ ಉದಙ್ಮುಖಃ ।
ಪ್ರದಕ್ಷಿಣಂ ಸ್ವಮಭ್ಯುಕ್ಷ್ಯ ಪ್ರಾಣಾಯಾಮಂ ಸಮಾಚರೇತ್ ॥ ೧೧೪ ॥
ಗಾಯತ್ರೀಂ ಶಿರಸಾ ಸಾರ್ಧಂ ಸಪ್ತವ್ಯಾಹೃತಿಪೂರ್ವಿಕಾಂ ।
ತ್ರಿರ್ಜಪೇತ್ಸ ದಶೋಂಕಾರಃ ಪ್ರಾಣಾಯಾಮೋಽಯಮುಚ್ಯತೇ ॥ ೧೧೫ ॥
ಪ್ರಾಣಾಯಾಮಾಂಶ್ಚರನ್ವಿಪ್ರೋ ನಿಯತೇಂದ್ರಿಯಮಾನಸಃ ।
ಅಹೋರಾತ್ರಕೃತೈಃ ಪಾಪೈರ್ಮುಕ್ತೋ ಭವತಿ ತತ್ಕ್ಷಣಾತ್ ॥ ೧೧೬ ॥
ದಶ ದ್ವಾದಶ ಸಂಖ್ಯಾ ವಾ ಪ್ರಾಣಾಯಾಮಾಃ ಕೃತಾ ಯದಿ ।
ನಿಯಮ್ಯ ಮಾನಸಂ ತೇನ ತದಾ ತಪ್ತಂ ಮಹತ್ತಪಃ ॥ ೧೧೭ ॥
ಸವ್ಯಾಹೃತಿಪ್ರಣವಕಾಃ ಪ್ರಾಣಾಯಾಮಾಸ್ತು ಷೋಡಶ ।
ಅಪಿ ಭ್ರೂಣಹನಂ ಮಾಸಾತ್ಪುನಂತ್ಯಹರಹಃ ಕೃತಾಃ ॥ ೧೧೮ ॥
ಯಥಾ ಪಾರ್ಥಿವಧಾತೂನಾಂ ದಹ್ಯಂತೇ ಧಮನಾನ್ಮಲಾಃ ।
ತಥೇಂದ್ರಿಯೈಃ ಕೃತಾ ದೋಷಾ ಜ್ವಾಲ್ಯಂತೇ ಪ್ರಾಣಸಂಯಮಾತ್ ॥

---

ಅಶುದ್ಧನೂ, ಸಮಸ್ತ ಕರ್ಮಗಳಲ್ಲಿ ಅನರ್ಹನೂ ಆಗುವನು. ಅವನು ಇತರ ಕರ್ಮವನ್ನು ಮಾಡಿದರೂ ಅದರ ಫಲವನ್ನು ಪಡೆಯುವುದಿಲ್ಲ. ಪೂರ್ವದಿಕ್ಕಿಗಭಿಮುಖನಾಗಿ ಪ್ರಣವವನ್ನು ಸ್ಮರಿಸಿ ದರ್ಭೆಯ ಆಸನವನ್ನು ಹಾಕಿಕೊಂಡು "ಚತುಸ್ಸ್ರಕ್ತಿ" ಇತ್ಯಾದಿ ಮಂತ್ರವನ್ನು ಪಠಿಸಿ ಇತರ ಕಡೆ ದೃಷ್ಟಿ ಮತ್ತು ಮನಸ್ಸುಗಳಿಲ್ಲದವನಾಗಿ ತಲೆಗೂದಲುಗಳನ್ನು ಕಟ್ಟಿಕೊಂಡು ಪೂರ್ವ ಅಥವಾ ಉತ್ತರಾಭಿಮುಖವಾಗಿ ಕುಳಿತು ತನ್ನನ್ನು ಪ್ರದಕ್ಷಿಣಾರೂಪದಿಂದ ಪ್ರೋಕ್ಷಿಸಿಕೊಂಡು ಪ್ರಾಣಾಯಾಮ ಮಾಡಬೇಕು.

೧೧೫. ಏಳು ವ್ಯಾಹೃತಿಗಳು, ಹತ್ತು ಓಂಕಾರಗಳೊಡನೆ 'ಆಪೋಜ್ಯೋತಿ' ಇತ್ಯಾದಿ ಶಿರಸ್ಸಿನಿಂದ ಸಹಿತವಾಗಿ ಗಾಯತ್ರಿಯನ್ನು ಮೂರುಸಾರಿ ಜಪಿಸಿದರೆ ಅದು ಪ್ರಾಣಾಯಾಮವೆನಿಸುವುದು.

೧೧೬. ಜಿತೇಂದ್ರಿಯನಾಗಿ ಪ್ರಾಣಾಯಾಮವನ್ನು ಮಾಡುವ ಮಾನವನು ಹಗಲು ರಾತ್ರಿಗಳಲ್ಲಿ ಮಾಡಿದ ಪಾಪಗಳಿಂದ ಕೂಡಲೆ ಮುಕ್ತನಾಗುವನು.

೧೧೭. ಮನಸ್ಸನ್ನು ತಡೆದು ಹತ್ತು ಅಥವಾ ಹನ್ನೆರಡು ಪ್ರಾಣಾಯಾಮಗಳನ್ನು ಮಾಡಿದರೆ ಮಹಾತಪಸ್ಸನ್ನಾಚರಿಸಿದಂತಾಗುವುದು.

೧೧೮. ನರನು ಪ್ರತಿದಿನವೂ ವ್ಯಾಹೃತಿಪ್ರಣವಗಳೊಡನೆ ಹದಿನಾರು ಪ್ರಾಣಾಯಾಮಗಳನ್ನು ಮಾಡಿದರೆ ಶಿಶುಹತ್ಯೆ ಮಾಡಿದ್ದರೂ ಪವಿತ್ರನಾಗುವನು.

೧೧೯. ಲೋಹಗಳ ಕೊಳೆಯು ಪುಟಹಾಕುವುದರಿಂದ ಭಸ್ಮವಾಗುವಂತೆ ಇಂದ್ರಿಯಕೃತವಾದ ದೋಷವು ಪ್ರಾಣಾಯಾಮದಿಂದ ಪರಿಹಾರವಾಗುವುದು.

ಏಕಂ ಸಂಭೋಜ್ಯ ವಿಧಿವದ್ಬ್ರಾಹ್ಮಣಂ ಯತ್ಫಲಂ ಲಭೇತ್ ।
ಪ್ರಾಣಾಯಾಮೈರ್ದ್ವಾದಶಭಿಸ್ತತ್ಫಲಂ ಶ್ರದ್ಧಯಾಽಽಪ್ಯತೇ ॥ ೧೨೦ ॥
ವೇದಾದಿ ವಾಙ್ಮಯಂ ಸರ್ವಂ ಪ್ರಣವೇ ಯತ್ಪ್ರತಿಷ್ಠಿತಂ ।
ತತಃ ಪ್ರಣವಮಭ್ಯಸ್ಯೇದ್ವೇದಾದಿಂ ವೇದಜಾಪಕಃ ॥ ೧೨೧ ॥
ಪ್ರಣವೇ ನಿತ್ಯಯುಕ್ತಸ್ಯ ಸಪ್ತಸು ವ್ಯಾಹೃತಿಷ್ವಪಿ ।
ತ್ರಿಪದಾಯಾಂ ತು ಗಾಯತ್ರ್ಯಾಂ ನ ಭಯಂ ಜಾಯತೇ ಕ್ವಚಿತ್ ॥೧೨೨॥
ಏಕಾಕ್ಷರಂ ಪರಂ ಬ್ರಹ್ಮ ಪ್ರಾಣಾಯಾಮಃ ಪರಂ ತಪಃ ।
ಗಾಯತ್ರ್ಯಾಸ್ತು ಪರಂ ನಾಸ್ತಿ ಪಾವನಂ ಕಲಶೋದ್ಭವ ॥ ೧೨೩ ॥
ಕರ್ಮಣಾ ಮನಸಾ ವಾಚಾ ಯದ್ರಾತ್ರೌ ಕುರುತೇ ತ್ವಘಂ ।
ಉತ್ತಿಷ್ಠನ್ಪೂರ್ವಸಂಧ್ಯಾಯಾಂ ಪ್ರಾಣಾಯಾಮೈರ್ವಿಶೋಧಯೇತ್ ॥
ಯದಹ್ನಾ ಕುರುತೇ ಪಾಪಂ ಮನೋವಾಕ್ಕಾಯಕರ್ಮಭಿಃ ।
ಆಸೀನಃ ಪಶ್ಚಿಮಾಂ ಸಂಧ್ಯಾಂ ತತ್ಪ್ರಾಣಾಯಾಮತೋ ಹರೇತ್ ॥ ೧೨೫ ॥
ಪೂರ್ವಾಂ ಸಂಧ್ಯಾಂ ಜಪಂಸ್ತಿಷ್ಠೇತ್ಸಾವಿತ್ರೀಮಾಽರ್ಕ ದರ್ಶನಾತ್ ।
ಪಶ್ಚಿಮಾಂ ತು ಸಮಾಸೀನಃ ಸಮ್ಯಗೃಕ್ಷವಿಭಾವನಾತ್ ॥ ೧೨೬ ॥

---

೧೨೦. ವಿಧಿಯಂತೆ ಒಬ್ಬ ಬ್ರಾಹ್ಮಣನನ್ನು ಭೋಜನಮಾಡಿಸಿದ ಫಲವು ಶ್ರದ್ಧೆಯಿಂದ ಹನ್ನೆರಡು ಪ್ರಾಣಾಯಾಮಗಳನ್ನು ಮಾಡುವುದರಿಂದ ಲಭಿಸುವುದು.

೧೨೧. ವೇದಾದಿ ವಾಙ್ಮಯವೆಲ್ಲ ಪ್ರಣವದಲ್ಲಿರುವುದರಿಂದ ವೇದಾಧ್ಯಯನ ಮಾಡುವವನು ವೇದಕ್ಕೆ ಆದಿಯಾದ ಪ್ರಣವವನ್ನು ಅಭ್ಯಾಸಮಾಡಬೇಕು.

೧೨೨. ಪ್ರಣವ, ಸಪ್ತವ್ಯಾಹೃತಿ, ತ್ರಿಪದಗಳುಳ್ಳ ಗಾಯತ್ರಿ ಇವುಗಳನ್ನು ಜಪಿಸುವವನಿಗೆ ಒಂದೆಡೆಯಲ್ಲಿಯೂ ಭಯವುಂಟಾಗುವುದಿಲ್ಲ.

೧೨೩. ಅಯ್ಯಾ ಅಗಸ್ತ್ಯನೆ! ಒಂದಕ್ಷರವುಳ್ಳ ಪ್ರಣವ, ಉತ್ತಮ ತಪಸ್ಸಾದ ಪ್ರಾಣಾಯಾಮ, ಗಾಯತ್ರೀ ಇವುಗಳಿಗಿಂತ ಪವಿತ್ರವಾದುದು ಯಾವುದೂ ಇರುವುದಿಲ್ಲ.

೧೨೪–೧೨೫. ರಾತ್ರಿಯಲ್ಲಿ ವಾಕ್, ಕರ್ಮ, ಮನಸ್ಸುಗಳಿಂದ ಮಾಡಿದ ಪಾಪವನ್ನು ಪೂರ್ವಸಂಧ್ಯಾಕಾಲದಲ್ಲಿ ಎದ್ದು ಪ್ರಾಣಾಯಾಮ ಮಾಡುವುದರಿಂದ ಪರಿಹರಿಸಿಕೊಳ್ಳಬೇಕು. ಹಗಲು ಮನಸ್ಸು, ವಾಕ್ಕಾಯಗಳು ಮಾಡುವ ಕರ್ಮಗಳಿಂದ ಉಂಟಾದ ಪಾಪವನ್ನು ಪಶ್ಚಿಮಸಂಧ್ಯಾಕಾಲದಲ್ಲಿ ಕುಳಿತು ಪ್ರಾಣಾಯಾಮಮಾಡುವುದರಿಂದ ಪರಿಹರಿಸಿಕೊಳ್ಳಬೇಕು.

೧೨೬. ಪ್ರಾತಃಕಾಲ ಸೂರ್ಯನು ಕಾಣುವವರೆಗೆ ನಿಂತುಕೊಂಡು ಗಾಯತ್ರಿಯನ್ನು ಜಪಿಸಬೇಕು. ಸಾಯಂಕಾಲ ಚೆನ್ನಾಗಿ ನಕ್ಷತ್ರಗಳು ಕಾಣುವವರೆಗೆ ಕುಳಿತು ಗಾಯತ್ರಿಯನ್ನು ಜಪಿಸಬೇಕು.

ಪೂರ್ವಾಂ ಸಂಧ್ಯಾಂ ಜಪಂಸ್ತಿಷ್ಠನ್ನೈಶಮೇನೋ ವ್ಯಪೋಹತಿ ।
ಪಶ್ಚಿಮಾಂ ತು ಸಮಾಸೀನೋ ಮಲಂ ಹಂತಿ ದಿವಾ ಕೃತಂ ॥ ೧೨೭ ॥
ನೋಪತಿಷ್ಠೇತ್ತು ಯಃ ಪೂರ್ವಾಂ ನೋಪಾಸ್ತೇ ಯಸ್ತು ಪಶ್ಚಿಮಾಂ ।
ಸ ಶೂದ್ರವದ್ಬಹಿಷ್ಕಾರ್ಯಃ ಸರ್ವಸ್ಮಾದ್ದ್ವಿಜಕರ್ಮಣಃ ॥ ೧೨೮ ॥
ಅಪಾಂ ಸಮೀಪಮಾಸಾದ್ಯ ನಿತ್ಯಕರ್ಮ ಸಮಾಚರೇತ್ ।
ಗಾಯತ್ರೀಮಪ್ಯಧೀಯೀತ ಗತ್ವಾಽರಣ್ಯಂ ಸಮಾಹಿತಃ ॥ ೧೨೯ ॥
ಗೃಹಾದ್ಬಹುಗುಣಾ ಯಸ್ಮಾತ್ಸಂಧ್ಯಾ ಬಹಿರುಪಾಸಿತಾ ।
ಗಾಯತ್ರ್ಯಭ್ಯಾಸಮಾತ್ರೋಽಪಿ ವರಂ ವಿಪ್ರೋ ಜಿತೇಂದ್ರಿಯಃ ॥ ೧೩೦ ॥
ತ್ರಿವೇದ್ಯಪಿ ಚ ನೋ ಮಾನ್ಯಃ ಸರ್ವಭುಕ್ಸರ್ವವಿಕ್ರಯೀ ।
ಸವಿತಾ ದೇವತಾ ಯಸ್ಯಾ ಮುಖಮಗ್ನಿಸ್ತ್ರಿಪಾಚ್ಚ ಯಾ ॥ ೧೩೧ ॥
ವಿಶ್ವಾಮಿತ್ರೋ ಋಷಿಶ್ಛಂದೋ ಗಾಯತ್ರೀ ಸಾ ವಿಶಿಷ್ಯತೇ ।
ಗಾಯತ್ರೀಮುಷಸಿ ಧ್ಯಾಯೇಲ್ಲೋಹಿತಾಂ ಬ್ರಹ್ಮದೈವತಾಂ ॥ ೧೩೨ ॥
ಹಂಸಾರೂಢಾಮಷ್ಟವರ್ಷಾಂ ರಕ್ತಸ್ರಗನುಲೇಪನಾಂ ।
ಋಕ್ಸ್ವರೂಪಾಮಭಯದಾಮಕ್ಷಮಾಲಾಽವಲಂಬಿನೀಂ ॥ ೧೩೩ ॥

---

೧೨೭. ಬೆಳಗ್ಗೆ ನಿಂತು ಜಪಿಸುವುದರಿಂದ ರಾತ್ರಿಯ ಪಾಪವೂ, ಸಾಯಂಕಾಲ ಕುಳಿತು ಜಪಿಸುವುದರಿಂದ ಹಗಲು ಮಾಡಿದ ಪಾಪವೂ ಪರಿಹಾರವಾಗುವುದು.

೧೨೮. ಪ್ರಾತಃಸಾಯಂಸಂಧ್ಯಾವಂದನೆಯನ್ನು ಮಾಡದಿರುವವನು ಶೂದ್ರನಂತೆ ಸಮಸ್ತ ಬ್ರಾಹ್ಮಣ ಕರ್ಮಗಳಿಂದಲೂ ಬಹಿಷ್ಕೃತನಾಗುವನು.

೧೨೯. ಜಲದ ಸಮೀಪವನ್ನು ಹೊಂದಿ ನಿತ್ಯಕರ್ಮವನ್ನು ಮಾಡಬೇಕು. ಕಾಡಿಗೆ ಹೋಗಿ ಸಾವಧಾನ ಮನಸ್ಸಿನಿಂದ ಗಾಯತ್ರಿಯನ್ನು ಅಧ್ಯಯನಮಾಡಬೇಕು.

೧೩೦. ಮನೆಯಿಂದ ಹೊರಗೆ ಮಾಡಿದ ಸಂಧ್ಯಾವಂದನೆಯು ಅತಿಶಯ ಗುಣವುಳ್ಳದು. ಗಾಯತ್ರಿಯೊಂದನ್ನಾದರೂ ಜಪಿಸುವ ಜಿತೇಂದ್ರಿಯನಾದ ಬ್ರಾಹ್ಮಣನೇ ಶ್ರೇಷ್ಠನು.

೧೩೧–೧೩೪. ಸಮಸ್ತವನ್ನೂ ಭುಜಿಸುವವನೂ, ಸಕಲವನ್ನೂ ಮಾರುವವನೂ ಮೂರುವೇದಗಳಲ್ಲಿ ಪಾರಂಗತನಾಗಿದ್ದರೂ ಪೂಜ್ಯನಲ್ಲ. ಸೂರ್ಯನು ದೇವತೆಯಾಗುಳ್ಳದೂ, ಅಗ್ನಿಮುಖವೂ, ಮೂರುಪಾದಗಳುಳ್ಳದೂ, ವಿಶ್ವಾಮಿತ್ರನು ಋಷಿಯಾಗುಳ್ಳದೂ, ಗಾಯತ್ರೀಛಂದಸ್ಸಾಗುಳ್ಳದೂ ಆದ ಗಾಯತ್ರಿಯು ಉತ್ಕೃಷ್ಟವಾದುದು. ಪ್ರಾತಃಕಾಲದಲ್ಲಿ ಲೋಹಿತವರ್ಣಳೂ, ಬ್ರಹ್ಮದೈವತಳೂ, ಹಂಸವನ್ನು ಏರಿರುವವಳೂ, ಎಂಟುವರ್ಷ ವಯಸ್ಸುಳ್ಳವಳೂ, ಕೆಂಪುಹೂಮಾಲೆ, ಗಂಧಾನುಲೇಪನವುಳ್ಳವಳೂ, ಋಗ್ವೇದಸ್ವರೂಪಳೂ, ಅಭಯವನ್ನು ಕೊಡುವ

ವ್ಯಾಸರ್ಷಿಣಾ ಸ್ತೂಯಮಾನಾಂ ಛಂದಸಾಽನುಷ್ಟುಭಾ ಯುತಾಂ ।
ಏತದ್ಧ್ಯಾನಾದುಷರ್ದೇವ್ಯಾ ನೈಶಮೇನೋ ವ್ಯಪೋಹತಿ ॥ ೧೩೪ ॥
ಸೂರ್ಯಶ್ಚೇತಿ ಚ ಮಂತ್ರೇಣ ಸ್ಯಾದಾಚಮನಮುತ್ತಮಂ ।
ಆಪೋಹಿಷ್ಠೇತಿ ತಿಸೃಭಿರ್ಮಾರ್ಜನಂ ತು ತತಶ್ಚರೇತ್ ॥ ೧೩೫ ॥
ಭೂಮೌ ಶಿರಸಿ ಚಾಕಾಶ ಆಕಾಶೇ ಭುವಿ ಮಸ್ತಕೇ ।
ಮಸ್ತಕೇ ಚ ತಥಾಕಾಶೇ ಭೂಮೌ ಚ ನವಧಾ ಕ್ಷಿಪೇತ್ ॥ ೧೩೬ ॥
ಭೂಮಿಶಬ್ದೇನ ಚರಣಾವಾಕಾಶಂ ಹೃದಯಂ ಸ್ಮೃತಂ ।
ಶಿರಸ್ಯೇವ ಶಿರಃ ಶಬ್ದೋ ಮಾರ್ಜನಜ್ಞೈರುದಾಹೃತಃ ॥ ೧೩೭ ॥
ವಾರುಣಾದಪಿ ಚಾಽಽಗ್ನೇಯಾದ್ವಾಯವ್ಯಾದಪಿ ಚೈಂದ್ರತಃ ।
ಮಂತ್ರಸ್ನಾನಾದಪಿ ಪರಂ ಬ್ರಾಹ್ಮಂ ಸ್ನಾನಮಿದಂ ಪರಂ ॥ ೧೩೮ ॥
ಬ್ರಾಹ್ಮಸ್ನಾನೇನ ಯಃ ಸ್ನಾತಃ ಸ ಬಾಹ್ಯಾಽಭ್ಯಂತರೇ ಶುಚಿಃ ।
ಸರ್ವತ್ರ ಚಾರ್ಹತಾಮೇತಿ ದೇವಪೂಜಾದಿಕರ್ಮಣಿ ॥ ೧೩೯ ॥
ನಕ್ತಂದಿನಂ ನಿಮಜ್ಜ್ಯಾಪ್ಸು ಕೈವರ್ತಾಃ ಕಿಮು ಪಾವನಾಃ ।
ಶತಶೋಽಪಿ ತಥಾ ಸ್ನಾತಾ ನ ಶುದ್ಧಾ ಭಾವದೂಷಿತಾಃ ॥ ೧೪೦ ॥

---

ವಳೂ, ಜಪಸರವನ್ನು ಹಿಡಿದಿರುವವಳೂ, ವ್ಯಾಸಮಹರ್ಷಿಯಿಂದ ಸ್ತುತಿಸಲ್ಪಟ್ಟವಳೂ, ಅನುಷ್ಟುಪ್‌ಛಂದಸ್ಸುಳ್ಳವಳೂ ಆದ ಗಾಯತ್ರೀದೇವಿಯನ್ನು ಪ್ರಾತಃಕಾಲದಲ್ಲಿ ಧ್ಯಾನಿಸುವುದರಿಂದ ರಾತ್ರಿಯ ಪಾಪವು ಪರಿಹಾರವಾಗುವುದು.

೧೩೫. "ಸೂರ್ಯಶ್ಚ" ಇತ್ಯಾದಿ ಮಂತ್ರಗಳಿಂದ ಮಾಡುವ ಆಚಮನವು ಉತ್ತಮವಾದುದು. ಬಳಿಕ ಆಪೋಹಿಷ್ಠೇತ್ಯಾದಿಮಂತ್ರಗಳಿಂದ ಮಾರ್ಜನಮಾಡಬೇಕು.

೧೩೬. ಭೂಮಿ ಶಿರಸ್ಸು ಆಕಾಶ, ಆಕಾಶ ಭೂಮಿ ಶಿರಸ್ಸು, ಶಿರಸ್ಸು ಆಕಾಶ ಭೂಮಿ ಹೀಗೆ ಒಂಬತ್ತು ಬಗೆಯಾಗಿ ಜಲವನ್ನು ಪ್ರೋಕ್ಷಿಸಿಕೊಳ್ಳಬೇಕು.

೧೩೭. ಭೂಮಿ ಶಬ್ದದಿಂದ ಪಾದಗಳೂ, ಆಕಾಶ ಶಬ್ದದಿಂದ ಎದೆಯೂ, ಶಿರಶ್ಶಬ್ದದಿಂದ ತಲೆಯೂ ಉಕ್ತವಾಗುವುದೆಂದು ಮಾರ್ಜನಕ್ರಮವನ್ನರಿತವರು ಹೇಳುವರು.

೧೩೮. ವಾರುಣ, ಆಗ್ನೇಯ, ವಾಯವ್ಯ, ಇಂದ್ರ ಮತ್ತು ಮಂತ್ರಸ್ನಾನಗಳಿಗಿಂತಲೂ ಈ ಬ್ರಾಹ್ಮಸ್ನಾನವು ಉತ್ತಮವಾಗಿರುವುದು.

೧೩೯. ಬ್ರಾಹ್ಮಸ್ನಾನ ಮಾಡಿದವನು ಬಾಹ್ಯಾಭ್ಯಂತರಗಳಲ್ಲಿ ಶುದ್ಧನಾಗಿ ದೇವಪೂಜಾದಿ ಸಮಸ್ತ ಕರ್ಮಗಳಿಗೂ ಅರ್ಹನಾಗುವನು.

೧೪೦. ಬೆಸ್ತರು ಹಗಲು ರಾತ್ರಿ ನೀರಿನಲ್ಲಿ ಮಿಂದರೂ ಪವಿತ್ರರಾಗುವರೇನು? ಹಾಗೆಯೇ ನೂರಾರುಸಾರಿ ಸ್ನಾನಮಾಡಿದರೂ ಅಂತಃಕರಣಶುದ್ಧಿಯಿಲ್ಲದವರು ಶುದ್ಧರಾಗುವುದಿಲ್ಲ.

ಅಂತಃಕರಣಶುದ್ಧಾ ಯೇ ತಾನ್ವಿಭೂತಿಃ ಪವಿತ್ರಯೇತ್ ।
ಕಿಂ ಪಾವನಾಃ ಪ್ರಕೀರ್ತ್ಯಂತೇ ರಾಸಭಾ ಭಸ್ಮಧೂಸರಾಃ ॥ ೧೪೧ ॥
ಸ ಸ್ನಾತಃ ಸರ್ವತೀರ್ಥೇಷು ಸ ಸರ್ವಮಲವರ್ಜಿತಃ ।
ತೇನ ಕ್ರತುಶತೈರಿಷ್ಟಂ ಚೇತೋ ಯಸ್ಯೇಹ ನಿರ್ಮಲಂ ॥ ೧೪೨ ॥
ತದೇವ ನಿರ್ಮಲಂ ಚೇತೋ ಯಥಾ ಸ್ಯಾತ್ತನ್ಮುನೇ ಶೃಣು ।
ವಿಶ್ವೇಶಶ್ಚೇತ್ಪ್ರಸನ್ನಃ ಸ್ಯಾತ್ತದಾ ಸ್ಯಾನ್ನಾಽನ್ಯಥಾ ಕ್ವಚಿತ್ ॥ ೧೪೩ ॥
ತಸ್ಮಾಚ್ಚೇತೋವಿಶುದ್ಧ್ಯರ್ಥಂ ಕಾಶೀನಾಥಂ ಸಮಾಶ್ರಯೇತ್ ।
ತದಾಶ್ರಯೇಣ ನಿಯತಂ ಸಂಕ್ಷೀಯಂತೇ ಮನೋಮಲಾಃ ॥ ೧೪೪ ॥
ಸಂಕ್ಷೀಣಮಾನಸಮಲೋ ವಿಶ್ವೇಶಾಽನುಗ್ರಹಾತ್ಪರಾತ್ ।
ಇದಂ ಶರೀರಮುತ್ಸೃಜ್ಯ ಪರಂ ಬ್ರಹ್ಮಾಧಿಗಚ್ಛತಿ ॥ ೧೪೫ ॥
ವಿಶ್ವೇಶಾಽನುಗ್ರಹೇ ಹೇತುಃ ಸದಾಚಾರೋ ಮತೋ ನೃಣಾಂ ।
ಶ್ರುತಿಸ್ಮೃತಿಭ್ಯಾಮುದಿತಂ ತಸ್ಮಾತ್ತಮನುಸಂಶ್ರಯೇತ್ ॥ ೧೪೬ ॥
ದ್ರುಪದಾಂ ತು ತತೋ ಜಪ್ತ್ವಾ ಜಲಮಾದಾಯ ಪಾಣಿನಾ ।
ಕುರ್ಯಾದೃತಂ ಚ ಮಂತ್ರೇಣ ವಿಧಿಜ್ಞಸ್ತ್ವಘಮರ್ಷಣಂ ॥ ೧೪೭ ॥

---

೧೪೧. ಅಂತಃಕರಣಶುದ್ಧರಾದವರನ್ನು ಭಸ್ಮವು ಪವಿತ್ರಗೊಳಿಸುವುದು. ಭಸ್ಮದಿಂದ ಮಲಿನವಾದ ಕತ್ತೆಗಳನ್ನು ಶುದ್ಧವಾದವೆಂದು ಹೇಳುವರೇ?

೧೪೨. ಈ ಲೋಕದಲ್ಲಿ ಯಾವನ ಮನಸ್ಸು ನಿರ್ಮಲವಾಗಿರುವುದೊ, ಅವನು ಸಮಸ್ತ ತೀರ್ಥಗಳಲ್ಲಿ ಮಿಂದವನೂ, ಯಾವ ಮಲವೂ ಇಲ್ಲದವನೂ, ಅನೇಕ ಯಜ್ಞಗಳನ್ನು ಮಾಡಿದವನೂ ಆಗುವನು.

೧೪೩. ಮುನಿಯೆ! ಮನಸ್ಸು ಹೇಗೆ ನಿರ್ಮಲವಾಗುವುದೆಂಬುದನ್ನು ಕೇಳು. ವಿಶ್ವೇಶ್ವರನು ಪ್ರಸನ್ನನಾದರೆ ಮಾತ್ರ ಮನಸ್ಸು ಶುದ್ಧವಾಗುವುದು. ಬೇರೆ ವಿಧದಿಂದ ಆಗುವುದಿಲ್ಲ.

೧೪೪. ಆದ್ದರಿಂದ ಮನಸ್ಸಿನ ಶುದ್ಧಿಗಾಗಿ ಕಾಶೀನಾಥನನ್ನೇ ಆಶ್ರಯಿಸಬೇಕು. ಅವನನ್ನು ಆಶ್ರಯಿಸುವುದರಿಂದ ನಿಶ್ಚಯವಾಗಿಯೂ ಮನಸ್ಸಿನ ಮಲವು ಪರಿಹಾರವಾಗುವುದು.

೧೪೫. ನಷ್ಟವಾದ ಮನಸ್ಸಿನ ದೋಷವುಳ್ಳವನು ಉತ್ತಮವಾದ ವಿಶ್ವೇಶ್ವರನ ಅನುಗ್ರಹದಿಂದ ಈ ಶರೀರವನ್ನು ತ್ಯಜಿಸಿ ಪರಬ್ರಹ್ಮನನ್ನು ಹೊಂದುವನು.

೧೪೬. ವಿಶ್ವೇಶ್ವರನ ಅನುಗ್ರಹಕ್ಕೆ ಶ್ರುತಿಸ್ಮೃತಿಗಳಿಂದ ಉಕ್ತವಾದ ಸದಾಚಾರವು ಕಾರಣವಾಗಿರುವುದು. ಆದುದರಿಂದ ಅದನ್ನು ಆಶ್ರಯಿಸಬೇಕು.

೧೪೭. ಬಳಿಕ ವಿಧಿಯನ್ನರಿತವನು, 'ದ್ರುಪದಾ' ಇತ್ಯಾದಿ ಮಂತ್ರವನ್ನು ಜಪಿಸಿ ಕೈಯಿಂದ ನೀರನ್ನು ತೆಗೆದುಕೊಂಡು 'ಋತಂಚ' ಇತ್ಯಾದಿ ಮಂತ್ರಗಳಿಂದ ಅಘಮರ್ಷಣವನ್ನು ಜಪ ಮಾಡಬೇಕು.

ನಿಮಜ್ಯಾಽಪ್ಸು ಚ ಯೋ ವಿದ್ವಾಂಜಪೇತ್ತ್ರಿರಘಮರ್ಷಣಂ ।
ಯಥಾಽಶ್ವಮೇಧಾಽವಭೃಥಸ್ತಸ್ಯ ಸ್ಯಾತ್ತತ್ತಥಾ ಧ್ರುವಂ ॥ ೧೪೮ ॥
ಜಲೇ ವಾಽಪಿ ಸ್ಥಲೇ ವಾಽಪಿ ಯಃ ಕುರ್ಯಾದಘಮರ್ಷಣಂ ।
ತಸ್ಯಾಽಘೌಘೋ ವಿನಶ್ಯೇತ ಯಥಾ ಸೂರ್ಯೋದಯೇ ತಮಃ ॥ ೧೪೯ ॥
ಇಮಂ ಮಂತ್ರಂ ತತಶ್ಚೋಕ್ತ್ವಾ ಕುರ್ಯಾದಾಚಮನಂ ದ್ವಿಜಃ ।
ಆಚಾರ್ಯಾಃ ಕೇಚಿದಿಚ್ಛಂತಿ ಶಾಖಾಭೇದೇನ ಚಾಽಪರೇ ॥ ೧೫೦ ॥
ಅಂತಶ್ಚರಸಿ ಭೂತೇಷು ಗುಹಾಯಾಂ ವಿಶ್ವತೋಮುಖಃ ।
ತ್ವಂ ಯಜ್ಞಸ್ತ್ವಂ ವಷಟ್ಕಾರ ಆಪೋಜ್ಯೋತೀ ರಸೋಽಮೃತಂ ॥ ೧೫೧ ॥
ಗಾಯತ್ರೀಂ ಶಿರಸಾ ಹೀನಾಂ ಮಹಾವ್ಯಾಹೃತಿಪೂರ್ವಿಕಾಂ ।
ಪ್ರಣವಾದ್ಯಾಂ ಜಪಂಸ್ತಿಷ್ಠನ್ಕ್ಷಿಪೇದಂಭೋಂಜಲಿತ್ರಯಂ ॥ ೧೫೨ ॥
ತೇನ ವಜ್ರೋದಕೇನಾಽಽಶು ಮಂದೇಹಾ ನಾಮ ರಾಕ್ಷಸಾಃ ।
ಸೂರ್ಯಾಽರಯಃ ಪ್ರಲೀಯಂತೇ ಶೈಲಾ ವಜ್ರಹತಾ ಇವ ॥ ೧೫೩ ॥
ವಿವಸ್ವತಃ ಸಹಾಯಾರ್ಥಂ ಯೋ ದ್ವಿಜೋ ನಾಂಜಲಿತ್ರಯಂ ।
ಕ್ಷಿಪೇನ್ಮಂದೇಹನಾಶಾಯ ಸೋಽಪಿ ಮಂದೇಹತಾಂ ವ್ರಜೇತ್ ॥ ೧೫೪ ॥

---

೧೪೮. ಪ್ರಾಜ್ಞನು ನೀರಿನಲ್ಲಿ ಮಿಂದು ಮೂರಾವೃತ್ತಿ ಅಘಮರ್ಷಣ ಮಂತ್ರವನ್ನು ಜಪಿಸಿದರೆ ಅಶ್ವಮೇಧಯಾಗ ಮಾಡಿ ಅವಭೃಥಸ್ನಾನಮಾಡಿದ ವನಿಗೆ ಸಮನಾಗುವನು.

೧೪೯. ನೀರಿನಲ್ಲಿಯಾಗಲಿ, ನೆಲದಲ್ಲಾಗಲಿ ಅಘಮರ್ಷಣವನ್ನು ಮಾಡಿದವನ ಪಾಪರಾಶಿಯು ಸೂರ್ಯೋದಯ ಕಾಲದಲ್ಲಿ ಕತ್ತಲೆಯು ಕಳೆದುಹೋಗುವಂತೆ ಕಳೆದುಹೋಗುವುದು.

೧೫೦–೧೫೧. ಕೆಲವರು ಆಚಾರ್ಯರು, 'ಇಮಂ ಮೇ ವರುಣ' ಇತ್ಯಾದಿ ಮಂತ್ರಗಳನ್ನುಚ್ಚರಿಸಿ ಆಚಮನ ಮಾಡಬೇಕೆಂದು ಹೇಳುವರು. ಇತರರು ಶಾಖಾಭೇದದಿಂದ, 'ಅಂತಶ್ಚರಸಿ' ಇತ್ಯಾದಿ ಮಂತ್ರದಿಂದ ಆಚಮನಮಾಡ ಬೇಕೆನ್ನುವರು.

೧೫೨. ಶಿರಸ್ಸಿಲ್ಲದ ಮಹಾವ್ಯಾಹೃತಿ ಪ್ರಣವಗಳಿಂದ ಕೂಡಿದ ಗಾಯತ್ರಿ ಯನ್ನು ನಿಂತು ಜಪಿಸಿ ಮೂರು ಬೊಗಸೆ ನೀರನ್ನು ಚೆಲ್ಲಬೇಕು.

೧೫೩. ಆ ವಜ್ರೋದಕದಿಂದ ಮಂದೇಹರೆಂಬ ಸೂರ್ಯನ ಶತ್ರುಗಳಾದ ರಾಕ್ಷಸರು ವಜ್ರದಿಂದ ಹೊಡೆಯಲ್ಪಟ್ಟ ಪರ್ವತಗಳಂತೆ ಅಡಗಿಹೋಗುವರು.

೧೫೪. ಸೂರ್ಯನ ಸಹಾಯಕ್ಕಾಗಿ ಮಂದೇಹರೆಂಬ ರಾಕ್ಷಸರನ್ನು ಕೊಲ್ಲ ಲೋಸುಗ ಮೂರು ಬೊಗಸೆ ನೀರನ್ನು ಕೊಡದ ದ್ವಿಜನು ಮಂದೇಹರಾಕ್ಷಸ ನಾಗುವನು.

ಪ್ರಾತಸ್ತಾವಜ್ಜಪಂಸ್ತಿಷ್ಠೇದ್ಯಾವತ್ಸೂರ್ಯಸ್ಯ ದರ್ಶನಂ ।
ಉಪವಿಷ್ಟೋ ಜಪೇತ್ಸಾಯಮೃಕ್ಷಾಣಾಮಾವಿಲೋಕನಾತ್ ॥ ೧೫೫ ॥
ಕಾಲಲೋಪೋ ನ ಕರ್ತವ್ಯೋ ದ್ವಿಜೇನ ಸ್ವಹಿತೇಪ್ಸುನಾ ।
ಅರ್ಧೋದಯಾಸ್ತಸಮಯೇ ತಸ್ಮಾದ್ವಜ್ರೋದಕಂ ಕ್ಷಿಪೇತ್ ॥ ೧೫೬ ॥
ವಿಧಿನಾಽಪಿ ಕೃತಾ ಸಂಧ್ಯಾ ಕಾಲಾತೀತಾಽಫಲಾ ಭವೇತ್ ।
ಅಯಮೇವ ಹಿ ದೃಷ್ಟಾಂತೋ ವಂಧ್ಯಾಸ್ತ್ರೀಮೈಥುನಂ ಯಥಾ ॥ ೧೫೭ ॥
ಜಲಂ ವಾಮಕರೇ ಕೃತ್ವಾ ಯಾ ಸಂಧ್ಯಾಽಽಚರಿತಾ ದ್ವಿಜೈಃ ।
ವೃಷಲೀ ಸಾ ಪರಿಜ್ಞೇಯಾ ರಕ್ಷೋಗಣಮುದಾವಹಾ ॥ ೧೫೮ ॥
ಉದ್ವಯಂತಮುದುತ್ಯಂ ಚ ಚಿತ್ರಂ ದೇವೇತಿ ತತ್ಪರಂ ।
ತಚ್ಚಕ್ಷುರಿತ್ಯುಪಸ್ಥಾನಮಂತ್ರಾ ಬ್ರಧ್ನಸ್ಯ ಸಿದ್ಧಿದಾಃ ॥ ೧೫೯ ॥
ಸಹಸ್ರಕೃತ್ವೋ ಗಾಯತ್ರ್ಯಾಃ ಶತಕೃತ್ವೋಽಥವಾ ಪುನಃ ।
ದಶಕೃತ್ವೋಽಥ ದೇವ್ಯೈವ ಕುರ್ಯಾತ್ಸೌರಿಮುಪಸ್ಥಿತಿಂ ॥ ೧೬೦ ॥
ಸಹಸ್ರಪರಮಾಂ ದೇವೀಂ ಶತಮಧ್ಯಾಂ ದಶಾವರಾಂ ।
ಗಾಯತ್ರೀಂ ಯೋ ಜಪೇದ್ವಿಪ್ರೋ ನ ಸ ಪಾಪೈಃ ಪ್ರಲಿಪ್ಯತೇ ॥ ೧೬೧ ॥

---

೧೫೫–೧೫೬. ಬೆಳಗ್ಗೆ ನಿಂತುಕೊಂಡು ಸೂರ್ಯನು ಕಾಣುವವರೆಗೂ, ಸಾಯಂಕಾಲ ಕುಳಿತು ನಕ್ಷತ್ರಗಳು ಕಾಣುವವರೆಗೂ ಗಾಯತ್ರಿಯನ್ನು ಜಪಿಸಬೇಕು. ತನಗೆ ಹಿತವನ್ನು ಬಯಸುವ ಬ್ರಾಹ್ಮಣನು ಕಾಲಲೋಪವನ್ನು ಮಾಡಕೂಡದು. ಆದುದರಿಂದ ಅರ್ಧೋದಯಾಸ್ತಸಮಯದಲ್ಲಿ ವಜ್ರೋದಕವನ್ನು ಕೊಡಬೇಕು.

೧೫೭. ಕಾಲಮೀರಿ ಮಾಡಿದ ಸಂಧ್ಯಾವಂದನೆಯು ಬಂಜೆಯ ಮೈಥುನದಂತೆ ನಿಷ್ಫಲವಾಗುವುದು.

೧೫೮. ಬ್ರಾಹ್ಮಣರು ಎಡಗೈಯಲ್ಲಿ ನೀರನ್ನು ಹಿಡಿದುಕೊಂಡು ಮಾಡಿದ ಸಂಧ್ಯಾವಂದನೆಯು ರಾಕ್ಷಸರಿಗೆ ಸಂತೋಷವನ್ನುಂಟುಮಾಡುವ ವೃಷಲೀ ಎನ್ನಿಸಿಕೊಳ್ಳುವುದು.

೧೫೯. 'ಉದ್ವಯಂ', 'ಉದುತ್ಯಂ', 'ಚಿತ್ರಂದೇವಾನಾಂ', 'ತಚ್ಚಕ್ಷುಃ' ಇತ್ಯಾದಿ ಸೂರ್ಯೋಪಸ್ಥಾನ ಮಂತ್ರಗಳು ಸಿದ್ಧಿಯನ್ನು ಕೊಡುವುವು.

೧೬೦. ಸಾವಿರಸಲವಾಗಲಿ, ನೂರುಸಾರಿಯಾಗಲಿ, ಹತ್ತುಸಾರಿಯಾಗಲಿ ಗಾಯತ್ರಿಯನ್ನುಚ್ಚರಿಸಿ ಸೂರ್ಯೋಪಸ್ಥಾನವನ್ನು ಮಾಡಬೇಕು.

೧೬೧. ಗಾಯತ್ರಿಯನ್ನು ಸಾವಿರಸಾರಿ ಜಪಿಸುವುದರಿಂದ ಉತ್ತಮವೂ, ನೂರುಸಾರಿ ಜಪಿಸುವುದರಿಂದ ಮಧ್ಯಮವೂ, ಹತ್ತುಸಾರಿ ಜಪಿಸುವುದರಿಂದ ಅಧಮವೂ ಆಗುತ್ತದೆ. ಗಾಯತ್ರಿಯನ್ನು ಜಪಿಸಿದ ಬ್ರಾಹ್ಮಣನು ಪಾಪಲಿಪ್ತನಾಗುವುದಿಲ್ಲ.

ವಿಭ್ರಾಡಿತ್ಯನುವಾಕಂ ವಾ ಸೂಕ್ತಂ ವಾ ಪೌರುಷಂ ಜಪೇತ್ ।
ಶಿವಸಂಕಲ್ಪಮಥವಾ ಬ್ರಾಹ್ಮಣಂ ಮಂಡಲಂ ತು ವಾ ॥ ೧೬೨ ॥
ಏತಾನಿ ಚೋಪಸ್ಥಾನಾನಿ ರವಿಪ್ರೀತಿಕರಾಣಿ ಚ ।
ರಕ್ತಚಂದನಮಿಶ್ರಾಭಿರಕ್ಷತೈಃ ಕುಸುಮೈಃ ಕುಶೈಃ ॥ ೧೬೩ ॥
ವೇದೋಕ್ತೈರಾಗಮೋಕ್ತೈರ್ವಾ ಮಂತ್ರೈರರ್ಘ್ಯಂ ಪ್ರದಾಪಯೇತ್ ।
ಅರ್ಚಿತಃ ಸವಿತಾ ಯೇನ ತೇನ ತ್ರೈಲೋಕ್ಯಮರ್ಚಿತಂ ॥ ೧೬೪ ॥
ಅರ್ಚಿತಃ ಸವಿತಾ ಸೂತೇ ಸುತಾನ್ಪಶುವಸೂನಿ ಚ ।
ವ್ಯಾಧೀನ್ಹರೇದ್ದದಾತ್ಯಾಯುಃ ಪೂರಯೇದ್ವಾಂಛಿತಾನ್ಯಪಿ ॥ ೧೬೫ ॥
ಅಯಂ ಹಿ ರುದ್ರ ಆದಿತ್ಯೋ ಹರಿರೇಷ ದಿವಾಕರಃ ।
ರವಿರ್ಹಿರಣ್ಯಗರ್ಭೋಽಸೌ ತ್ರಯೀರೂಪೋಽಯಮರ್ಯಮಾ ॥ ೧೬೬ ॥
ರವೇಸ್ತು ತೋಷಣಾತ್ತುಷ್ಟಾ ಬ್ರಹ್ಮವಿಷ್ಣುಮಹೇಶ್ವರಾಃ ।
ಇಂದ್ರಾದಯೋಽಖಿಲಾ ದೇವಾ ಮರೀಚ್ಯಾದ್ಯಾ ಮಹರ್ಷಯಃ ॥ ೧೬೭ ॥
ಮಾನವಾ ಮನುಮುಖ್ಯಾಶ್ಚ ಸೋಮಪಾದ್ಯಾಃ ಪಿತಾಮಹಾಃ ।
ರವೇರರ್ಚಾಂ ವಿಧಾಯೇತ್ಥಂ ತತಸ್ತರ್ಪಣಮಾರಭೇತ್ ॥ ೧೬೮ ॥

---

೧೬೨. 'ವಿಭ್ರಾಡ್' ಇತ್ಯಾದ್ಯನುವಾಕವನ್ನಾಗಲಿ, ಪುರುಷಸೂಕ್ತವನ್ನಾಗಲಿ, 'ಜಾಗ್ರತ' ಇತ್ಯಾದಿ ಆರು ಋಕ್ಕುಗಳನ್ನಾಗಲಿ, 'ಯದೇತನ್ಮಂಡಲಂ' ಇತ್ಯಾದಿ ಮಂತ್ರಗಳನ್ನಾಗಲಿ ಜಪಿಸಬೇಕು.

೧೬೩–೧೬೪. ಈ ಮಂತ್ರಗಳಿಂದ ಮಾಡಿದ ಉಪಸ್ಥಾನದಿಂದ ಸೂರ್ಯನಿಗೆ ಸಂತೋಷವಾಗುವುದು. ರಕ್ತಚಂದನ, ಅಕ್ಷತ, ಕುಸುಮ, ದರ್ಭೆಗಳಿಂದ ಕೂಡಿದ ನೀರಿನಿಂದ ವೇದೋಕ್ತ ಅಥವಾ ಆಗಮೋಕ್ತ ಮಂತ್ರಗಳನ್ನುಚ್ಚರಿಸಿ ಅರ್ಘ್ಯವನ್ನು ಕೊಡಬೇಕು. ಸೂರ್ಯನನ್ನು ಪೂಜಿಸಿದರೆ ಮೂರುಲೋಕಗಳನ್ನೂ ಪೂಜಿಸಿದಂತಾಗುವುದು.

೧೬೫–೧೬೬. ಹೀಗೆ ಪೂಜಿಸಲ್ಪಟ್ಟ ಸೂರ್ಯನು ಪುತ್ರ, ಪಶು, ದ್ರವ್ಯಗಳನ್ನು ಕೊಡುವನು. ವ್ಯಾಧಿಯನ್ನು ಹೋಗಲಾಡಿಸುವನು. ಆಯುಸ್ಸನ್ನು ಕೊಡುವನು. ಇಷ್ಟಾರ್ಥಗಳನ್ನು ಪೂರ್ತಿಗೊಳಿಸುವನು. ಈ ಸೂರ್ಯನು ರುದ್ರ, ವಿಷ್ಣು, ಬ್ರಹ್ಮರೆಂಬ ತ್ರಿಮೂರ್ತಿರೂಪನು.

೧೬೭–೧೬೮. ಸೂರ್ಯನನ್ನು ಸಂತೋಷಗೊಳಿಸುವುದರಿಂದ ಬ್ರಹ್ಮವಿಷ್ಣುಮಹೇಶ್ವರರೂ, ಇಂದ್ರಾದಿ ದೇವತೆಗಳೂ, ಮರೀಚ್ಯಾದಿ ಮಹರ್ಷಿಗಳೂ, ಮನು ಮೊದಲಾದ ಮಾನವರೂ, ಸೋಮಪಾದಿ ಪಿತಾಮಹರೂ ಸಂತುಷ್ಟರಾಗುವರು. ಹೀಗೆ ಸೂರ್ಯನನ್ನು ಪೂಜಿಸಿದ ನಂತರ ತರ್ಪಣವನ್ನಾರಂಭಿಸಬೇಕು.

ದರ್ಭಾನಗರ್ಭಾನಾದಾಯ ನವ ಸಪ್ತ ಚ ಪಂಚವಾ ।
ಸಾಗ್ರಾನ್ಸಮೂಲಾನಚ್ಛಿನ್ನಾನ್ದ್ವಿಜೋ ದಕ್ಷಿಣಪಾಣಿನಾ ॥ ೧೬೯ ॥
ಅನ್ವಾರಬ್ಧೇನ ಸವ್ಯೇನ ತರ್ಪಯೇತ್ಕ್ರಾಢ್ವಿನಾಯಕಾನ್ ।
ಬ್ರಹ್ಮಾದೀನಖಿಲಾನ್ದೇವಾನ್ಮರೀಚ್ಯಾದೀಂಸ್ತಥಾ ಮುನೀನ್ ॥ ೧೭೦ ॥
ಚಂದನಾಗುರುಕಸ್ತೂರೀಗಂಧವತ್ಕುಸುಮೈರಪಿ ।
ತರ್ಪಯೇಚ್ಛುಚಿಭಿಸ್ತೋಯೈಸ್ತೃಪ್ಯಂತ್ವಿತಿ ಸಮುಚ್ಚರನ್ ॥ ೧೭೧ ॥
ಸನಕಾದೀನ್ಮನುಷ್ಯಾಂಶ್ಚ ನಿವೀತೀ ತರ್ಪಯೇದ್ಯವೈಃ ।
ಅಂಗುಷ್ಠದ್ವಯಮಧ್ಯೇ ತು ಕೃತ್ವಾ ದರ್ಭಾನೃಜೂನ್ದ್ವಿಜಃ ॥ ೧೭೨ ॥
ಕವ್ಯವಾಡನಲಾದೀಂಶ್ಚ ಪಿತೄನ್ದಿವ್ಯಾನ್ಸ್ತತರ್ಪಯೇತ್ ।
ಪ್ರಾಚೀನಾವೀತಿಕೋ ದರ್ಭೈರ್ದ್ವಿಗುಣೈಸ್ತಿಲಮಿಶ್ರಿತೈಃ ॥ ೧೭೩ ॥
ರವೌ ಶುಕ್ರೇ ತ್ರಯೋದಶ್ಯಾಂ ಸಪ್ತಮ್ಯಾಂ ನಿಶಿ ಸಂಧ್ಯಯೋಃ ।
ಶ್ರೇಯೋಽರ್ಥೀ ಬ್ರಾಹ್ಮಣೋ ಜಾತು ನ ಕುರ್ಯಾತ್ತಿಲತರ್ಪಣಂ ॥೧೭೪॥
ಯದಿ ಕುರ್ಯಾತ್ತತಃ ಕುರ್ಯಾಚ್ಛುಕ್ಲೈರೇವ ತಿಲೈಃ ಕೃತೀ ।
ಚತುರ್ದಶ ಯಮಾನ್ಪಶ್ಚಾತ್ತರ್ಪಯೇನ್ನಾಮ ಉಚ್ಚರನ್ ॥ ೧೭೫ ॥

---

೧೬೯–೧೭೧. ಬ್ರಾಹ್ಮಣನು ಬಲಗೈಯಿಂದ ಒಂಬತ್ತು, ಏಳು, ಅಥವಾ ಐದು ಅಗ್ರಗಳುಳ್ಳದೂ, ಬುಡವುಳ್ಳದೂ, ಕತ್ತರಿಸದಿರುವುದೂ, ಗರ್ಭವಿಲ್ಲದಿರುವುದೂ ಆದ ದರ್ಭೆಗಳನ್ನು ಹಿಡಿದುಕೊಂಡು ಗಂಧ, ಅಗುರು, ಕಸ್ತೂರಿ, ಪರಿಮಳವುಳ್ಳ ಹೂವು ಇವುಗಳಿಂದ ಕೂಡಿದ ಶುಚಿಯಾದ ನೀರಿನಿಂದ 'ತೃಪ್ಯಂತು' ಎಂದು ಉಚ್ಚರಿಸುತ್ತ ಬಲಗೈಯಿಂದ ಕೂಡಿದ ಎಡಗೈಯಿಂದ ಆರುಮಂದಿ ಗಣಪತಿಗಳಿಗೂ, ಬ್ರಹ್ಮಾದಿ ಸಮಸ್ತದೇವತೆಗಳಿಗೂ, ಮರೀಚ್ಯಾದಿ ಮುನಿಗಳಿಗೂ ತರ್ಪಣ ಕೊಡಬೇಕು.

೧೭೨. ಯಜ್ಞೋಪವೀತವನ್ನು ಮಾಲಾಕಾರವಾಗಿ ಹಾಕಿಕೊಂಡು ನೆಟ್ಟಗಿರುವ ದರ್ಭೆಗಳನ್ನು ಅಂಗುಷ್ಠಮಧ್ಯದಲ್ಲಿರಿಸಿಕೊಂಡು ಯವಗಳಿಂದ ಸನಕಾದಿ ಮಹರ್ಷಿಗಳಿಗೆ ತರ್ಪಣಮಾಡಬೇಕು.

೧೭೩. ಅಪಸವ್ಯವಾಗಿ ಇಮ್ಮಡಿ ದರ್ಭೆಗಳಿಂದ ಎಳ್ಳಿನೊಡನೆ ಕವ್ಯವಾಟ್, ಅನಲ ಮುಂತಾದ ದಿವ್ಯಪಿತೃಗಳಿಗೆ ತರ್ಪಣಮಾಡಬೇಕು.

೧೭೪. ಶ್ರೇಯಸ್ಸನ್ನು ಬಯಸುವ ಬ್ರಾಹ್ಮಣನು ಭಾನು, ಶುಕ್ರವಾರಗಳಲ್ಲಿಯೂ, ಸಪ್ತಮೀ, ತ್ರಯೋದಶೀ ತಿಥಿಗಳಲ್ಲಿಯೂ, ಸಂಧ್ಯಾಕಾಲ ರಾತ್ರಿಕಾಲಗಳಲ್ಲಿಯೂ, ಒಂದುಸಾರಿಯೂ ತಿಲತರ್ಪಣಮಾಡಬಾರದು.

೧೭೫. ಹಾಗೆ ತಿಲತರ್ಪಣಮಾಡುವುದಾದರೆ ಶುಕ್ಲಪಲಗಳಿಂದ ತರ್ಪಣ

ತತಃ ಸ್ವಗೋತ್ರಮುಚ್ಚಾರ್ಯ ತರ್ಪಯೇತ್ಸ್ವಪಿತೄನ್ಮುದಾ ।
ಸವ್ಯಜಾನುನಿಪಾತೇನ ಪಿತೃತೀರ್ಥೇನ ವಾಗ್ಯತಃ ॥ ೧೭೬ ॥
ಏಕೈಕಮಂಜಲಿಂ ದೇವಾ ದ್ವೌ ದ್ವೌ ತು ಸನಕಾದಿಕಾಃ ।
ಪಿತರಸ್ತ್ರೀನ್ಪ್ರವಾಂಛಂತಿ ಸ್ತ್ರಿಯ ಏಕೈಕಮಂಜಲಿಂ ॥ ೧೭೭ ॥
ಅಂಗುಲ್ಯಗ್ರೇ ಭವೇದ್ದೈವಮಾರ್ಷಮಂಗುಲಿಮೂಲಗಂ ।
ಬ್ರಾಹ್ಮಮಂಗುಷ್ಠಮೂಲೇತು ಪಾಣಿಮಧ್ಯೇ ಪ್ರಜಾಪತೇಃ ॥ ೧೭೮ ॥
ಮಧ್ಯೇಂಗುಷ್ಠಪ್ರದೇಶಿನ್ಯೋಃ ಪಿತ್ರ್ಯಂ ತೀರ್ಥಂ ಪ್ರಚಕ್ಷತೇ ।
ನವರ್ಚಮುಚ್ಚರನ್ನಿದ್ವಾನ್ನಿದಧ್ಯಾತ್ಪಿತೃತರ್ಪಣಂ ॥ ೧೭೯ ॥
ಉದೀರತಾಮಂಗಿರಸ ಆಯಂತು ನ ಇತೀಷ್ಯತೇ ।
ಊರ್ಜಂ ವಹಂತೀ ಪಿತೃಭ್ಯಃ ಸ್ವಧಾಯಿಭ್ಯಸ್ತತಃ ಪಠೇತ್ ॥ ೧೮೦ ॥
ಯೇ ಚೇಹ ಪಿತರಸ್ತದ್ವನ್ಮಧುವಾತಾ ಇತಿತ್ರಚಂ ।
ನಮೋ ವಃ ಪಿತರಶ್ಚೋಕ್ತ್ವಾ ಪಠನ್ಸಿಂಚೇಜ್ಜಲಂ ಭುವಿ ॥ ೧೮೧ ॥
ಆಬ್ರಹ್ಮಸ್ತಂಬಪರ್ಯಂತಂ ದೇವರ್ಷಿಪಿತೃಮಾನವಾಃ ।
ತೃಪ್ಯಂತು ಪಿತರಃ ಸರ್ವೇ ಮಾತೃಮಾತಾಮಹಾದಯಃ ॥ ೧೮೨ ॥

---

ಮಾಡಬೇಕು. ಬಳಿಕ ಆಯಾ ಹೆಸರನ್ನುಚ್ಚರಿಸಿ ಹದಿನಾಲ್ಕುಮಂದಿಯ ಪಿತೃಗಳಿಗೆ ತರ್ಪಣಮಾಡಬೇಕು.

೧೭೬. ಬಳಿಕ ಎಡಮೊಣಕಾಲನ್ನೂರಿ ಪಿತೃತೀರ್ಥದಿಂದ ತನ್ನ ಗೋತ್ರವನ್ನು ಉಚ್ಚರಿಸಿ ಸಂತೋಷದಿಂದ ಮೌನವಾಗಿ ಪಿತೃಗಳಿಗೆ ತರ್ಪಣಮಾಡಬೇಕು.

೧೭೭. ದೇವತೆಗಳು ಒಂದೊಂದು ಬೊಗಸೆಯನ್ನೂ, ಸನಕಾದಿಗಳು ಎರಡೆರಡು ಬೊಗಸೆಗಳನ್ನೂ, ಪಿತೃಗಳು ಮೂರು ಬೊಗಸೆಗಳನ್ನೂ, ಸ್ತ್ರೀಯರು ಒಂದೊಂದು ಬೊಗಸೆಯನ್ನೂ ಇಚ್ಛಿಸುವರು.

೧೭೮. ಬೆರಳಿನ ಕೊನೆಯು ದೇವತೀರ್ಥವೆಂದೂ, ಬೆರಳಿನ ಬುಡವು ಋಷಿತೀರ್ಥವೆಂದೂ, ಅಂಗುಷ್ಠದ ಬುಡವು ಬ್ರಾಹ್ಮತೀರ್ಥವೆಂದೂ, ಕೈಯ ಮಧ್ಯವು ಪ್ರಜಾಪತಿತೀರ್ಥವೆಂದೂ ಉಕ್ತವಾಗಿರುವುದು.

೧೭೯–೧೮೧. ಅಂಗುಷ್ಠಪ್ರದೇಶಿನಿ ಬೆರಳುಗಳ ಮಧ್ಯವು ತೀರ್ಥವೆನಿಸಿಕೊಳ್ಳುವುದು. 'ಉದೀರತಾಂ', 'ಅಂಗಿರಸ', 'ಆಯಂತು ನ', 'ಊರ್ಜಂ ವಹಂತಿ', 'ಪಿತೃಭ್ಯಸ್ಸ್ವಧಾಯಿಭ್ಯ', 'ಯೇಚೇಹ ಪಿತರ', 'ಮಧುವಾತಾ', 'ನಮೋವಃ', 'ಪಿತರಃ' ಎಂಬ ಒಂಬತ್ತು ಋಕ್ಕುಗಳನ್ನು ಪಠಿಸಿ ಪಿತೃಗಳಿಗೆ ತರ್ಪಣಮಾಡಿ ಈ ಮಂತ್ರದಿಂದ ನೀರನ್ನು ಭೂಮಿಯಲ್ಲಿ ಚೆಲ್ಲಬೇಕು.

೧೮೨. ಬ್ರಹ್ಮ ಮೊದಲ್ಗೊಂಡು ಹುಲ್ಲಿನವರೆಗಣ ದೇವ, ಋಷಿ, ಪಿತೃ, ಮನುಷ್ಯ, ತಾಯಿ, ಮಾತಾಮಹಾದಿ ಪಿತೃಗಳೆಲ್ಲರೂ ತೃಪ್ತರಾಗಲಿ.

ಅತೀತಕುಲಕೋಟೀನಾಂ ಸಪ್ತದ್ವೀಪನಿವಾಸಿನಾಂ ।
ಆಬ್ರಹ್ಮಭುವನಾಲ್ಲೋಕಾದಿದಮಸ್ತು ತಿಲೋದಕಂ ॥ ೧೮೩ ॥
ಯೇ ಚಾಽಸ್ಮಾಕಂ ಕುಲೇ ಜಾತಾ ಅಪುತ್ರಾ ಗೋತ್ರಿಣೋ ಮೃತಾಃ ।
ಸರ್ವೇ ತೇ ತೃಪ್ತಿಮಾಯಾಂತು ವಸ್ತ್ರನಿಷ್ಪೀಡನೋದಕೈಃ ॥ ೧೮೪ ॥
ಅಗ್ನಿಕಾರ್ಯಂ ತತಃ ಕೃತ್ವಾ ವೇದಾಭ್ಯಾಸಂ ತತಶ್ಚರೇತ್ ।
ಶ್ರುತ್ಯಭ್ಯಾಸಃ ಪಂಚಧಾ ಸ್ಯಾತ್ಸ್ವೀಕಾರೋಽರ್ಥವಿಚಾರಣಂ ॥ ೧೮೫ ॥
ಅಭ್ಯಾಸಶ್ಚ ಜಪಶ್ಚಾಽಪಿ ಶಿಷ್ಯೇಭ್ಯಃ ಪ್ರತಿಪಾದನಂ ।
ಲಬ್ಧಸ್ಯ ಪ್ರತಿಪಾಲಾರ್ಥಮಲಬ್ಧಸ್ಯ ಚ ಲಬ್ಧಯೇ ॥ ೧೮೬ ॥
ದಾತಾರಂ ಸಮುಪೇಯಾದ್ವೈ ಸ್ವಗುರುತ್ವಂ ಚ ವರ್ಧಯೇತ್ ।
ಪ್ರಾತಃ ಕೃತ್ಯಮಿದಂ ಪ್ರೋಕ್ತಂ ದ್ವಿಜಾತೀನಾಂ ದ್ವಿಜೋತ್ತಮ ॥ ೧೮೭ ॥
ಅಥವಾ ಪ್ರಾತರುತ್ಥಾಯ ಕೃತ್ವಾಽಽವಶ್ಯಕಮೇವ ಚ ।
ಶೌಚಾಚಮನಮಾದಾಯ ಭಕ್ಷಯೇದ್ದಂತಧಾವನಂ ॥ ೧೮೮ ॥
ವಿಶೋಧ್ಯ ಸರ್ವಗಾತ್ರಾಣಿ ಪ್ರಾತಃಸಂಧ್ಯಾಂ ಸಮಾಚರೇತ್ ।
ವೇದಾಽರ್ಥಾನಧಿಗಚ್ಛೇಚ್ಚ ಶಾಸ್ತ್ರಾಣಿ ವಿವಿಧಾನ್ಯಪಿ ॥ ೧೮೯ ॥
ಅಧ್ಯಾಪಯೇಚ್ಛುಚೀಂಛಿಷ್ಯಾನ್ ಹಿತಾನ್ಮೇಧಾಸಮನ್ವಿತಾನ್ ।
ಉಪೇಯಾದೀಶ್ವರಂ ಚೈವ ಯೋಗಕ್ಷೇಮಾದಿಸಿದ್ಧಯೇ ॥ ೧೯೦ ॥

---

೧೮೩. ಬ್ರಹ್ಮಲೋಕದಿಂದ ಆರಂಭಿಸಿ ಅನೇಕ ಕುಲಗಳನ್ನತಿಕ್ರಮಿಸಿ ಸಪ್ತ ದ್ವೀಪಗಳಲ್ಲಿ ವಾಸಿಸುವ ಜನರಿಗೆ ಈ ತಿಲೋದಕವು ಸಲ್ಲಲಿ.

೧೮೪. ಬಟ್ಟೆಯನ್ನು ಹಿಂಡಿದ ಈ ನೀರಿನಿಂದ ನಮ್ಮ ವಂಶದಲ್ಲಿ ಜನಿಸಿ ಮೃತರಾದ ಮಕ್ಕಳಿಲ್ಲದವರೆಲ್ಲರೂ ತೃಪ್ತರಾಗಲಿ.

೧೮೫–೧೮೭. ಬಳಿಕ ಅಗ್ನಿಕಾರ್ಯ, ವೇದಾಭ್ಯಾಸಗಳನ್ನು ಮಾಡಬೇಕು. ವೇದಾಭ್ಯಾಸವು ಸ್ವೀಕಾರ, ಅರ್ಥವಿಚಾರ, ಅಭ್ಯಾಸ, ಜಪ, ಶಿಷ್ಯರಿಗೆ ಹೇಳಿಕೊಡುವುದು ಎಂದು ಪಂಚವಿಧವಾಗಿರುವುದು. ತಾನು ಪಡೆದ ವೇದವನ್ನು ಕಾಪಾಡಿಕೊಳ್ಳುವುದಕ್ಕೂ, ಹೊಂದದಿರುವುದನ್ನು ಪಡೆಯುವುದಕ್ಕೂ, ಉಪದೇಶ ಮಾಡುವ ಗುರುಗಳ ಬಳಿಗೆ ಹೋಗಬೇಕು. ತಾನೂ ಉಪದೇಶಮಾಡಿ ತನ್ನ ಗುರುತ್ವವನ್ನು ಹೆಚ್ಚಿಸಿಕೊಳ್ಳಬೇಕು. ಬ್ರಾಹ್ಮಣೋತ್ತಮ! ಇದು ಬ್ರಾಹ್ಮಣರು ಬೆಳಗ್ಗೆ ಮಾಡುವ ಕೆಲಸವಾಗಿದೆ.

೧೮೮. ಅಥವಾ, ಬೆಳಗ್ಗೆ ಎದ್ದು ಆವಶ್ಯಕ ಕಾರ್ಯವನ್ನು ಪೂರೈಸಿ ಶೌಚಾಚಮನಗಳನ್ನು ಮಾಡಿ ಹಲ್ಲುಗಳನ್ನು ಉಜ್ಜಿಕೊಳ್ಳಬೇಕು.

೧೮೯–೧೯೦. ಸಮಸ್ತಾವಯವಗಳನ್ನೂ ಶುದ್ಧಿಮಾಡಿಕೊಂಡು ಪ್ರಾತಃಕಾಲ ಸಂಧ್ಯಾವಂದನೆಯನ್ನು ಮಾಡಬೇಕು. ಅನಂತರ ವೇದಾರ್ಥಗಳನ್ನೂ, ವಿವಿಧ ಶಾಸ್ತ್ರಗಳನ್ನೂ ಅಭ್ಯಾಸಮಾಡಿ ಶುದ್ಧರೂ, ಪ್ರಿಯರೂ, ಬುದ್ಧಿವಂತರೂ ಆದ

**ತತೋ ಮಧ್ಯಾಹ್ನಸಿದ್ಧ್ಯರ್ಥಂ ಪೂರ್ವೋಕ್ತಂ ಸ್ನಾನಮಾಚರೇತ್ ।**
**ಸ್ನಾತ್ವಾ ಮಾಧ್ಯಾಹ್ನಿಕಾಂ ಸಂಧ್ಯಾಮುಪಾಸೀತ ವಿಚಕ್ಷಣಃ ॥ ೧೯೧ ॥**
**ನವಯೌವನಭಿನ್ನಾಂಗೀಂ ಶುದ್ಧಸ್ಫಟಿಕನಿರ್ಮಲಾಂ ।**
**ತ್ರಿಷ್ಟುಪ್ಛಂದಃ ಸಮಾಯುಕ್ತಾಂ ಸಾವಿತ್ರೀಂ ರುದ್ರದೈವತಾಂ ॥ ೧೯೨ ॥**
**ಕಶ್ಯಪರ್ಷಿಸಮಾಯುಕ್ತಾಂ ಯಜುರ್ವೇದಸ್ವರೂಪಿಣೀಂ ।**
**ತ್ರ್ಯಕ್ಷರಾಂ ವೃಷಭಾರೂಢಾಂ ಭಕ್ತಾಭಯಕರಾಂ ಪರಾಂ ॥ ೧೯೩ ॥**
**ದೇವತಾಂ ಪರಿಪೂಜ್ಯಾಥ ನೈತ್ಯಕಂ ವಿಧಿಮಾಚರೇತ್ ।**
**ಪಚನಾಗ್ನಿಂ ಸಮುಜ್ಜ್ವಾಲ್ಯ ವೈಶ್ವದೇವಂ ಸಮಾಚರೇತ್ ॥ ೧೯೪ ॥**
**ನಿಷ್ಪಾವಾನ್ಕೋದ್ರವಾನ್ಮಾಷಾನ್ಕಲಾಯಾಂಶ್ಚಣಕಾಂಸ್ತ್ಯಜೇತ್ ।**
**ತೈಲಪಕ್ವಂ ಚ ಪಕ್ವಾನ್ನಂ ಸರ್ವಂ ಲವಣಯುಕ್ತ್ಯಜೇತ್ ॥ ೧೯೫ ॥**
**ಆಢಕೀಶ್ಚ ಮಸೂರಾಂಶ್ಚ ವರ್ತುಲಾನ್ವರಟಾಂಸ್ತಥಾ ।**
**ಭುಕ್ತಶೇಷಂ ಪರ್ಯುಷಿತಂ ವೈಶ್ವದೇವೇ ವಿವರ್ಜಯೇತ್ ॥ ೧೯೬ ॥**
**ದರ್ಭಪಾಣಿಃ ಸಮಾಚಮ್ಯ ಪ್ರಾಣಾಯಾಮಂ ವಿಧಾಯ ಚ ।**
**ಪೃಷ್ಠೋದಿವೀತಿ ಮಂತ್ರೇಣ ಪರ್ಯುಕ್ಷಣಮಥಾಚರೇತ್ ॥ ೧೯೭ ॥**

---

ಶಿಷ್ಯರನ್ನು ಅಧ್ಯಯನಮಾಡಿಸಿ ಯೋಗಕ್ಷೇಮಾದಿಗಳ ಸಿದ್ಧಿಗಾಗಿ ಪ್ರಭುವಿನ ಬಳಿಗೆ ಹೋಗಬೇಕು.

೧೯೧. ಬಳಿಕ ಮಧ್ಯಾಹ್ನಕಾಲದಲ್ಲಿ ಹಿಂದಿನಂತೆ ಮಿಂದು ಮಧ್ಯಾಹ್ನ ಸಂಧ್ಯಾವಂದನೆಯನ್ನು ಮಾಡಬೇಕು.

೧೯೨–೧೯೪. ನವಯೌವನದಿಂದ ಕೂಡಿರುವವಳೂ, ಶುದ್ಧವಾದ ಸ್ಫಟಿಕದಂತೆ ಶುದ್ಧಳೂ, ತ್ರಿಷ್ಟುಭ್ ಛಂದಸ್ಸಿನಿಂದ ಕೂಡಿದವಳೂ, ರುದ್ರದೈವತಳೂ, ಕಶ್ಯಪರ್ಷಿಯಿಂದ ಕೂಡಿದವಳೂ, ಯಜುರ್ವೇದರೂಪಳೂ, ಮೂರು ಅಕ್ಷರವುಳ್ಳವಳೂ, ಎತ್ತಿನಮೇಲೆ ಕುಳಿತವಳೂ, ಭಕ್ತರಿಗೆ ಅಭಯವನ್ನು ಕೊಡುವವಳೂ ಆದ ಸಾವಿತ್ರೀದೇವಿಯನ್ನು ಪೂಜಿಸಿ ನಿತ್ಯವಿಧಿಯನ್ನಾಚರಿಸಿ ಪಚನಾಗ್ನಿಯನ್ನು ಉಜ್ವಲಗೊಳಿಸಿ ವೈಶ್ವದೇವವನ್ನು ಮಾಡಬೇಕು.

೧೯೫–೧೯೬. ಅವರೆ, ಹಾರಕ, ಉದ್ದು, ನೆಲಗಡಲೆ, ಕಡಲೆಗಳನ್ನೂ, ಉಪ್ಪಿನಿಂದಾದ ಎಲ್ಲತರದ ಪಕ್ವಾನ್ನವನ್ನೂ, ತೊಗರಿ, ಕಾಡುಕಡಲೆ, ವರ್ತುಲವಾದ ನೆಲಗಡಲೆ, ವರಟಗಳನ್ನೂ, ತಿಂದುಳಿದುದನ್ನೂ, ತಂಗಳನ್ನೂ ವೈಶ್ವದೇವಕ್ಕೆ ಉಪಯೋಗಿಸಕೂಡದು.

೧೯೭. ದರ್ಭೆಯನ್ನು ಹಿಡಿದುಕೊಂಡು ಆಚಮನ, ಪ್ರಾಣಾಯಾಮಗಳನ್ನು ಮಾಡಿ 'ಪೃಷ್ಠೋದಿವೀ' ಇತ್ಯಾದಿ ಮಂತ್ರದಿಂದ ಅಭ್ಯುಕ್ಷಣಮಾಡಬೇಕು.

ಪ್ರದಕ್ಷಿಣಂ ಚ ಪರ್ಯುಕ್ಷ್ಯ ತ್ರಿಃ ಪರಿಸ್ತೀರ್ಯ ವೈ ಕುಶಾನ್ ।
ಏಷೋಽಹದೇವಮಂತ್ರೇಣ ಕುರ್ಯಾದಗ್ನಿಂ ಸುಸಂಮುಖಂ ॥ ೧೯೮ ॥
ವೈಶ್ವಾನರಂ ಸಮಭ್ಯರ್ಚ್ಯ ಸಾಜ್ಯಪುಷ್ಪಾಽಕ್ಷತೈರಥ ।
ಭೂರಾದ್ಯಾಶ್ಚಾಹುತೀಸ್ತಿಸ್ರಃ ಸ್ವಾಹಾಂತಾಃ ಪ್ರಣವಾದಿಕಾಃ ॥ ೧೯೯ ॥
ಓಂ ಭೂರ್ಭುವಸ್ಸ್ವಃ ಸ್ವಾಹೇತಿ ವಿಪ್ರೋ ದದ್ಯಾತ್ತಥಾಹುತಿಂ ।
ತಥಾ ದೇವಕೃತಸ್ಯಾದ್ಯಾ ಜುಹುಯಾಚ್ಚ ಷಡಾಹುತೀಃ ॥ ೨೦೦ ॥
ಯಮಾಯ ತೂಷ್ಣೀಮೇಕಾಂ ಚ ತಥಾಸ್ವಿಷ್ಟಕೃತೇ ದ್ವಯಂ ।
ವಿಶ್ವೇಭ್ಯಶ್ಚಾಽಪಿ ದೇವೇಭ್ಯೋ ಭೂಮೌ ದದ್ಯಾತ್ತತೋ ಬಲಿಂ ॥ ೨೦೧ ॥
ಸರ್ವೇಭ್ಯಶ್ಚಾಽಪಿ ಭೂತೇಭ್ಯೋ ನಮೋ ದದ್ಯಾತ್ತದುತ್ತರೇ ।
ತದ್ದಕ್ಷಿಣೇ ಪಿತೃಭ್ಯಶ್ಚ ಪ್ರಾಚೀನಾವೀತಿಕೋ ದದೇತ್ ॥ ೨೦೨ ॥
ನಿರ್ಣೇಜನೋದಕಾನ್ನಂ ಚೈಶಾನ್ಯಾಂ ವೈ ಯಕ್ಷ್ಮಣೇಽರ್ಪಯೇತ್ ।
ತತೋ ಬ್ರಹ್ಮಾದಿದೇವೇಭ್ಯೋ ನಮೋ ದದ್ಯಾತ್ತದುತ್ತರೇ ॥ ೨೦೩ ॥
ನಿವೀತೀ ಸನಕಾದಿಭ್ಯಃ ಪಿತೃಭ್ಯಸ್ತ್ವಪಸವ್ಯವಾನ್ ।
ಹಂತಃ ಷೋಡಶಭಿರ್ಗ್ರಾಸೈಶ್ಚತುರ್ಭಿಃ ಪುಷ್ಕಲಂ ಸ್ಮೃತಂ ॥ ೨೦೪ ॥

---

೧೯೮. ಮೂರುಸಾರಿ ಪ್ರದಕ್ಷಿಣಾಕಾರವಾಗಿ ಪರಿಷೇಚನಮಾಡಿ ದರ್ಭೆಗಳನ್ನು ಸುತ್ತಲೂ ಹಾಸಿ 'ಏಷೋಽಹದೇವ' ಇತ್ಯಾದಿ ಮಂತ್ರದಿಂದ ಅಗ್ನಿಯನ್ನು ಅಭಿಮುಖಗೊಳಿಸಬೇಕು.

೧೯೯–೨೦೦. ಅನಂತರ ತುಪ್ಪ, ಹೂವು, ಅಕ್ಷತೆಗಳಿಂದ ಅಗ್ನಿಯನ್ನು ಪೂಜಿಸಿ, ಭೂರಾದಿ ಸ್ವಾಹಾಂತವಾಗಿ ಮೂರು ಆಹುತಿಗಳನ್ನೂ, ಪ್ರಣವಾದಿಗಳಿಂದ ಆಹುತಿಗಳನ್ನೂ, ಭೂರ್ಭುವಸ್ಸ್ವಾಹಾ ಎಂಬುದರಿಂದ ಆಹುತಿಗಳನ್ನೂ ಕೊಟ್ಟು ಹಾಗೆಯೇ 'ದೇವಕೃತಸ್ಯೇ'ತ್ಯಾದಿಯಿಂದ ಆರು ಆಹುತಿಗಳನ್ನು ಕೊಡಬೇಕು.

೨೦೧–೨೦೨. ಮಂತ್ರವಿಲ್ಲದೆ ಯಮನಿಗೊಂದು ಆಹುತಿಯನ್ನೂ, ಎರಡು ಸ್ವಿಷ್ಟಕೃದಾಹುತಿಗಳನ್ನೂ ಕೊಟ್ಟು ವಿಶ್ವೇದೇವತೆಗಳಿಗೆ ಭೂಮಿಯಮೇಲೆ ಬಲಿಯನ್ನು ಕೊಡಬೇಕು. ಅದರ ಉತ್ತರಭಾಗದಲ್ಲಿ ಸಕಲ ಭೂತಗಳನ್ನೂ ನಮಸ್ಕರಿಸಬೇಕು. ಅದರ ದಕ್ಷಿಣದಲ್ಲಿ ಪಿತೃಗಳಿಗೆ ಪ್ರಾಚೀನಾವೀತಿಯಿಂದ ಆಹುತಿಯನ್ನು ಕೊಡಬೇಕು.

೨೦೩. ಈಶಾನ್ಯದಿಕ್ಕಿನಲ್ಲಿ ಯಕ್ಷ್ಮನಿಗೆ ನಿರ್ಣೇಜನೋದಕಾನ್ನವನ್ನು ಕೊಟ್ಟು ಅದರ ಉತ್ತರಭಾಗದಲ್ಲಿ ಬ್ರಹ್ಮಾದಿ ದೇವತೆಗಳನ್ನು ನಮಸ್ಕರಿಸಬೇಕು.

೨೦೪–೨೦೭. ನಿವೀತಿಯಿಂದ ಸನಕಾದಿಗಳಿಗೂ, ಅಪಸವ್ಯದಿಂದ ಪಿತೃಗಳಿಗೂ ಆಹುತಿಗಳನ್ನು ಕೊಡಬೇಕು. ಹದಿನಾರುಗ್ರಾಸಗಳಿಂದ ಹಂತವೆಂದೂ,

ಗ್ರಾಸಮಾತ್ರಾ ಭವೇದ್ಭಿಕ್ಷಾ ಗೃಹಸ್ಥಸುಕೃತಪ್ರದಾ ।
ಅಧ್ವಗಃ ಕ್ಷೀಣವೃತ್ತಿಶ್ಚ ವಿದ್ಯಾರ್ಥೀ ಗುರುಪೋಷಕಃ ॥ ೨೦೫ ॥
ಯತಿಶ್ಚ ಬ್ರಹ್ಮಚಾರೀ ಚ ಷಡೇತೇ ಧರ್ಮಭಿಕ್ಷುಕಾಃ ।
ಅತಿಥಿಃ ಪಥಿಕೋ ಜ್ಞೇಯೋಽನೂಚಾನಃ ಶ್ರುತಿಪಾರಗಃ ॥ ೨೦೬ ॥
ಮಾನ್ಯಾವೇತೌ ಗೃಹಸ್ಥಾನಾಂ ಬ್ರಹ್ಮಲೋಕಮಭೀಪ್ಸತಾಂ ।
ಅಪಿ ಶ್ವಪಾಕೇ ಶುನಿ ವಾ ನೈವಾಽನ್ನಂ ನಿಷ್ಫಲಂ ಭವೇತ್ ॥ ೨೦೭ ॥
ಅನ್ನಾಽರ್ಥಿನಿ ಸಮಾಯಾತೇ ಪಾತ್ರಾಽಪಾತ್ರಂ ನ ಚಿಂತಯೇತ್ ।
ಶುನಾಂ ಚ ಪತಿತಾನಾಂ ಚ ಶ್ವಪಚಾಂ ಪಾಪರೋಗಿಣಾಂ ॥ ೨೦೮ ॥
ಕಾಕಾನಾಂ ಚ ಕೃಮೀಣಾಂ ಚ ಬಹಿರನ್ನಂ ಕಿರೇದ್ಭುವಿ ।
ಐಂದ್ರವಾರುಣವಾಯವ್ಯಾಃ ಸೌಮ್ಯಾ ನೈರ್ಋತಾಶ್ಚ ಯೇ ॥ ೨೦೯ ॥
ಪ್ರತಿಗೃಹ್ಣಂತ್ವಿಮಂ ಪಿಂಡಂ ಕಾಕಾ ಭೂಮೌ ಮಯಾರ್ಪಿತಂ ।
ದ್ವೌ ಶ್ವಾನೌ ಶ್ಯಾಮಶಬಲೌ ವೈವಸ್ವತಕುಲೋದ್ಭವೌ ॥ ೨೧೦ ॥
ತಾಭ್ಯಾಂ ಪಿಂಡಂ ಪ್ರದಾಸ್ಯಾಮಿ ಸ್ಯಾತಾಮೇತಾವಹಿಂಸಕೌ ।
ದೇವಾ ಮನುಷ್ಯಾಃ ಪಶವೋ ರಕ್ಷೋ ಯಕ್ಷೋರಗಾಃ ಖಗಾಃ ॥ ೨೧೧ ॥
ದೈತ್ಯಾಃ ಸಿದ್ಧಾಃ ಪಿಶಾಚಾಶ್ಚ ಪ್ರೇತಾ ಭೂತಾಶ್ಚ ದಾನವಾಃ ।
ತೃಣಾನಿ ತರವಶ್ಚಾಽಪಿ ಮದ್ದತ್ತಾಽನ್ನಾಭಿಲಾಷುಕಾಃ ॥ ೨೧೨ ॥

---

ನಾಲ್ಕುಗ್ರಾಸಗಳಿಂದ ಪುಷ್ಕಲವೆಂದೂ, ಒಂದುಗ್ರಾಸದಿಂದ ಭಿಕ್ಷೆಯೆಂದೂ ಉಕ್ತವಾಗಿರುವುದು. ಈ ಭಿಕ್ಷೆಯು ಗೃಹಸ್ಥನಿಗೆ ಪುಣ್ಯವನ್ನು ಕೊಡುವುದು. ಮಾರ್ಗಸ್ಥನು, ಜೀವನಕ್ಕಿಲ್ಲದವನು, ವಿದ್ಯಾರ್ಥಿ, ಗುರುವನ್ನು ಪೋಷಿಸುವವನು, ಯತಿ, ಬಹ್ಮಚಾರಿಗಳು ಈ ಆರುಮಂದಿಯೂ ಧರ್ಮಭಿಕ್ಷುಗಳು. ಪಥಿಕನಾದ ಅತಿಥಿ, ವಂಶಾನುಕ್ರಮದಿಂದ ಅಧ್ಯಯನಮಾಡಿದ ಶ್ರೋತ್ರಿಯನೂ ಬ್ರಹ್ಮಲೋಕವನ್ನು ಅಪೇಕ್ಷಿಸುವ ಗೃಹಸ್ಥರಿಗೆ ಪರಮಪೂಜ್ಯರು. ಚಂಡಾಲ, ನಾಯಿಗಳಿಗೆ ಕೊಟ್ಟ ಅನ್ನವೂ ನಿಷ್ಫಲವಾಗುವುದಿಲ್ಲ.

೨೦೮–೨೧೨. ಅನ್ನವನ್ನು ಅಪೇಕ್ಷಿಸುವವನು ಬಂದಾಗ ಪಾತ್ರಾಪಾತ್ರಗಳನ್ನು ವಿಮರ್ಶಿಸಬಾರದು. ನಾಯಿ, ಪತಿತ, ಚಂಡಾಲ, ದುಷ್ಟರೋಗಿ, ಕಾಗೆ, ಕ್ರಿಮಿ ಇವುಗಳಿಗಾಗಿ ಹೊರಗೆ ಅನ್ನವನ್ನು ಎರೆಚಬೇಕು. ಪೂರ್ವ, ಪಶ್ಚಿಮ, ವಾಯುವ್ಯ, ಉತ್ತರ, ನೈರ್ಋತ್ಯದಿಕ್ಕುಗಳಲ್ಲಿರುವ ಕಾಗೆಗಳು ಭೂಮಿಯಲ್ಲಿ ನಾನಿತ್ತ ಈ ಪಿಂಡವನ್ನು ಸ್ವೀಕರಿಸಲಿ. ಯಮನ ವಂಶದಲ್ಲಿ ಜನಿಸಿದ ಶಾವಶಬಲಗಳೆಂಬ ಎರಡು ನಾಯಿಗಳಿಗೆ ಈ ಪಿಂಡವನ್ನು ಕೊಡುವೆನು. ಅವೆರಡೂ ಹಿಂಸೆಮಾಡದಿರಲಿ. ನಾನಿತ್ತ ಅನ್ನವನ್ನು ಅಪೇಕ್ಷಿಸುವವರೂ, ಕರ್ಮಬದ್ಧರಾಗಿ ಹಸಿವುಗೊಂಡವರೂ ಆದ ದೇವತೆಗಳು, ಮನುಷ್ಯರು, ಪಶುಗಳು, ರಾಕ್ಷಸರು,

ಕೃಮಿಕೀಟಪತಂಗಾದ್ಯಾಃ ಕರ್ಮಬದ್ಧಾ ಬುಭುಕ್ಷಿತಾಃ ।
ತೃಪ್ತ್ಯರ್ಥಮನ್ನಂ ಹಿ ಮಯಾ ದತ್ತಂ ತೇಷಾಂ ಮುದೇಽಸ್ತು ವೈ॥ ೨೧೩ ॥
ಇತ್ಥಂ ಭೂತಬಲಿಂ ದತ್ವಾ ಕಾಲಂ ಗೋದೋಹಮಾತ್ರಕಂ ।
ಪ್ರತೀಕ್ಷ್ಯಾಽತಿಥಿಮಾಯಾಂತಂ ವಿಶೇದ್ಭೋಜ್ಯಗೃಹಂ ತತಃ ॥ ೨೧೪ ॥
ಅದತ್ವಾ ವಾಯಸಬಲಿಂ ನಿತ್ಯಶ್ರಾದ್ಧಂ ಸಮಾಚರೇತ್ ।
ನಿತ್ಯಶ್ರಾದ್ಧೇ ಸ್ವಸಾಮರ್ಥ್ಯಾತ್ತ್ರೀನ್ದ್ವಾವೇಕಮಥಾಽಪಿ ವಾ ॥ ೨೧೫ ॥
ಭೋಜಯೇತ್ಪಿತೃಯಜ್ಞಾರ್ಥಂ ದದ್ಯಾದುದ್ಧೃತ್ಯ ದುರ್ಬಲಃ ।
ನಿತ್ಯಶ್ರಾದ್ಧಂ ದೈವಹೀನಂ ನಿಯಮಾದಿವಿವರ್ಜಿತಂ ॥ ೨೧೬ ॥
ದಕ್ಷಿಣಾರಹಿತಂ ಚೈತದ್ದಾತೃಭೋಕ್ತೃವ್ರತೋಜ್ಝಿತಂ ।
ಪಿತೃಯಜ್ಞಂ ವಿಧಾಯೇತ್ಥಂ ಸ್ವಸ್ಥಬುದ್ಧಿರನಾತುರಃ ॥ ೨೧೭ ॥
ಅದುಷ್ಟಾಸನಮಧ್ಯಾಸ್ಯ ಭುಂಜೀತ ಶಿಶುಭಿಃಸಹ ।
ಸುಗಂಧಿಃ ಸುಮನಾಃ ಸ್ರಗ್ವೀ ಶುಚಿವಾಸೋದ್ವಯಾನ್ವಿತಃ ॥ ೨೧೮ ॥
ಪ್ರಾಗಾಸ್ಯ ಉದಗಾಸ್ಯೋ ವಾ ಭುಂಜೀತ ಪಿತೃಸೇವಿತಂ ॥ ೨೧೯ ॥

---

ಯಕ್ಷರು, ಉರಗರು, ಪಕ್ಷಿಗಳು, ದೈತ್ಯರು, ಸಿದ್ಧರು, ಪಿಶಾಚಗಳು, ಭೂತಪ್ರೇತಗಳು, ದಾನವರು, ಹುಲ್ಲುಗಳು, ಕೃಮಿಗಳು, ಕೀಟಗಳು, ಪತಂಗಗಳು, ಇವೇ ಮೊದಲಾದವರ ತೃಪ್ತಿಗಾಗಿ ನಾನು ಕೊಟ್ಟ ಅನ್ನದಿಂದ ಸಂತೋಷವಾಗಲಿ.

೨೧೪. ಹೀಗೆ ಭೂತಗಳಿಗೆ ಬಲಿಯನ್ನಿತ್ತು, ಹಸುವಿನ ಹಾಲನ್ನು ಕರೆಯುವಷ್ಟುಕಾಲ ಅತಿಥಿಯ ಆಗಮನವನ್ನು ನಿರೀಕ್ಷಿಸಿ ಊಟದಮನೆಯನ್ನು ಪ್ರವೇಶಿಸಬೇಕು.

೨೧೫. ವಾಯಸಬಲಿಯನ್ನೂ ಕೊಡದೆ ನಿತ್ಯಶ್ರಾದ್ಧವನ್ನು ಮಾಡಬೇಕು. ನಿತ್ಯಶ್ರಾದ್ಧದಲ್ಲಿ ತನ್ನ ಸಾಮರ್ಥ್ಯವನ್ನನುಸರಿಸಿ ಮೂವರು, ಇಬ್ಬರು, ಅಥವಾ ಒಬ್ಬ ಬ್ರಾಹ್ಮಣನನ್ನು ಭೋಜನಮಾಡಿಸಬೇಕು.

೨೧೬–೨೧೯. ಅಸಮರ್ಥನಾದವನು ಪಿತೃಯಜ್ಞಕ್ಕಾಗಿ ತನ್ನ ಆಹಾರವಸ್ತುಗಳಿಂದ ಸ್ವಲ್ಪವನ್ನು ತೆಗೆದುಕೊಂಡು ದಾನಮಾಡಬೇಕು. ದೇವತೆಗಳಿಲ್ಲದಿರುವುದೂ, ನಿಯಮ, ದಕ್ಷಿಣೆ, ದಾನಮಾಡುವವ, ಊಟಮಾಡುವವ, ವ್ರತಗಳೂ ಇಲ್ಲದಿರುವುದೂ ಆದ ಶ್ರಾದ್ಧವನ್ನು ಮಾಡಿ ಸುಖಚಿತ್ತನೂ, ಅನಾತುರನೂ ಆಗಿ ಆಸನದಲ್ಲಿ ಕುಳಿತು ಶಿಶುಗಳೊಡನೆ ಭುಂಜಿಸಬೇಕು. ಸುವಾಸನೆಗೊಂಡವನೂ, ಪ್ರಸನ್ನನೂ, ಮಾಲೆಯನ್ನು ಧರಿಸಿದವನೂ, ಶುದ್ಧವಾದ ಎರಡು ವಸ್ತ್ರವನ್ನು ಧರಿಸಿದವನೂ ಆಗಿ ಪೂರ್ವ ಅಥವಾ ಉತ್ತರಾಭಿಮುಖವಾಗಿ ಕುಳಿತು ಪಿತ್ರೂಚ್ಛಿಷ್ಟವನ್ನು ಸೇವಿಸಬೇಕು.

ವಿಧಾಯಾಽಗ್ನಿಮನಗ್ನಂ ತದುಪರಿಷ್ಟಾದಧಸ್ತಥಾ ।
ಆಪೋಶನವಿಧಾನೇನ ಕೃತ್ವಾಽಶ್ನೀಯಾತ್ಸುಧೀರ್ದ್ವಿಜಃ ॥ ೨೨೦ ॥
ಪ್ರದದ್ಯಾದ್ಭುವಃ ಪತಯೇ ಭುವನ ಪತಯೇ ತಥಾ ।
ಭೂತಾನಾಂ ಪತಯೇ ಸ್ವಾಹೇತ್ಯುಕ್ತ್ವಾ ಭೂಮೌ ಬಲಿತ್ರಯಂ ॥ ೨೨೧ ॥
ಸಕೃಚ್ಚಾಽಪ ಉಪಸ್ಪೃಶ್ಯ ಪ್ರಾಣಾದ್ಯಾಹುತಿಪಂಚಕಂ ।
ದದ್ಯಾಜ್ಜಠರಕುಂಡಾಽಗ್ನೌ ದರ್ಭಪಾಣಿಃ ಪ್ರಸನ್ನಧೀಃ ॥ ೨೨೨ ॥
ದರ್ಭಪಾಣಿಸ್ತು ಯೋ ಭುಂಕ್ತೇ ತಸ್ಯ ದೋಷೋ ನ ವಿದ್ಯತೇ ।
ಕೇಶಕೀಟಾದಿ ಸಂಭೂತಸ್ತದಶ್ನೀಯಾತ್ಸದರ್ಭಕಃ ॥ ೨೨೩ ॥
ಯಾವದ್ರುಚ್ಯಸ್ನಮಶ್ನೀಯಾನ್ನಬ್ರೂಯಾತ್ತದ್ಗುಣಾಽಗುಣಾನ್ ।
ಭುಂಜತೇ ಪಿತರಸ್ತಾವದ್ಯಾವನ್ನೋಽಕ್ತಾ ಗುಣಾಽಗುಣಾಃ ॥ ೨೨೪ ॥
ಅತೋ ಮೌನೇನ ಯೋ ಭುಂಕ್ತೇ ಸ ಭುಂಕ್ತೇ ಕೇವಲಾಽಮೃತಂ ।
ಅನುಪೀಯ ತತಃ ಕ್ಷೀರಂ ತಕ್ರಂ ಪಾನೀಯಮೇವ ವಾ ॥ ೨೨೫ ॥
ಅಮೃತಾಪಿಧಾನಮಸೀತ್ಯೇವಂ ಪ್ರಾಶ್ಯೋದಕಂ ಸಕೃತ್ ।
ಪೀತಶೇಷಂ ಕ್ಷಿಪೇದ್ಭೂಮೌ ತೋಯಂ ಮಂತ್ರಮಿಮಂ ಪಠನ್॥ ೨೨೬ ॥

---

೨೨೦. ಆ ಅನ್ನವನ್ನು ಆಪೋಶನದ ವಿಧಿಯಿಂದ ಮೇಲೆ ಕೆಳಗೆ ಆವರಣ ಸಹಿತವಾಗಿ ಮಾಡಿ ಭುಂಜಿಸಬೇಕು.

೨೨೧. ಭುವಃ ಪತಯೆ, ಭುವನ ಪತಯೆ, ಭೂತಾನಾಂಪತಯೇ ಸ್ವಾಹಾ ಎಂದು ಭೂಮಿಯಲ್ಲಿ ಮೂರುಸಾರಿ ಬಲಿಯನ್ನು ಕೊಡಬೇಕು.

೨೨೨. ಕೈಯಲ್ಲಿ ದರ್ಭೆಯನ್ನು ಹಿಡಿದುಕೊಂಡು ಒಂದು ಸಾರಿ ಆಚಮನ ಮಾಡಿ ಹೊಟ್ಟೆಯೆಂಬ ಕುಂಡದಲ್ಲಿರುವ ಅಗ್ನಿಯಲ್ಲಿ ಪ್ರಾಣಾದಿ ಐದು ಆಹುತಿಗಳನ್ನು ಕೊಡಬೇಕು.

೨೨೩. ದರ್ಭಪಾಣಿಯಾಗಿ ಊಟಮಾಡುವವನಿಗೆ ಕೂದಲು, ಕೀಟಾದಿಗಳಿಂದ ಉಂಟಾದ ದೋಷವು ಸಂಭವಿಸುವುದಿಲ್ಲ. ಆದ್ದರಿಂದ ದರ್ಭೆಸಹಿತನಾಗಿ ಭುಂಜಿಸಬೇಕು.

೨೨೪. ರುಚಿಯಾದ ಅನ್ನವನ್ನು ತಿನ್ನುವವರೆಗೆ ಅದರ ಗುಣಾವಗುಣಗಳನ್ನು ಹೇಳಕೂಡದು. ಗುಣಾವಗುಣಗಳನ್ನು ಹೇಳದಿರುವವರೆಗೆ ಪಿತೃಗಳು ಭುಂಜಿಸುವರು.

೨೨೫–೨೨೮. ಆದುದರಿಂದ ಮೌನದಿಂದ ಭುಂಜಿಸುವವನು ಅಮೃತವನ್ನೇ ಭುಜಿಸುವನು. ಬಳಿಕ ಹಾಲು, ಮಜ್ಜಿಗೆ ಅಥವಾ ನೀರನ್ನು ಕುಡಿದು "ಅಮೃತಾಪಿಧಾನಮಸಿ" ಎಂದು ಒಂದುಸಾರಿ ನೀರನ್ನು ಪ್ರಾಶನೆಮಾಡಿ ಕೈಯನ್ನು ತೊಳೆಯದೆ ಬಲಗೈಯ ಹೆಬ್ಬೆರಳಿನ ಬುಡದಿಂದ "ರೌರವೇಽಪುಣ್ಯನಿಲಯೇ ।

ಅಪ್ರಕ್ಷಾಲಿತಹಸ್ತಸ್ಯ ದಕ್ಷಿಣಾಂಗುಷ್ಠಮೂಲತಃ ।
ರೌರವೇಽಪುಣ್ಯನಿಲಯೇ ಪದ್ಮಾರ್ಬುದನಿವಾಸಿನಾಂ ॥ ೨೨೭ ॥
ಉಚ್ಛಿಷ್ಟೋದಕಮಿಚ್ಛೂನಾಮಕ್ಷಯ್ಯಮುಪತಿಷ್ಠತುಂ ॥ ೨೨೮ ॥
ಪುನರಾಚಮ್ಯ ಮೇಧಾವೀ ಶುಚಿರ್ಭೂತ್ವಾ ಪ್ರಯತ್ನತಃ ।
ಹಸ್ತೇನೋದಕಮಾದಾಯ ಮಂತ್ರಮೇತಮುದೀರಯೇತ್ ॥ ೨೨೯ ॥
ಅಂಗುಷ್ಠಮಾತ್ರಃ ಪುರುಷಸ್ತ್ವಂಗುಷ್ಠಂ ಚ ಸಮಾಶ್ರಿತಃ ।
ಈಶಃ ಸರ್ವಸ್ಯ ಜಗತಃ ಪ್ರಭುಃ ಪ್ರೀಣಾತಿ ವಿಶ್ವಭುಕ್ ॥ ೨೩೦ ॥
ಇತ್ಯನ್ನಂ ಪರಿಸಂಕಲ್ಪ್ಯ ಪ್ರಕ್ಷಾಲ್ಯ ಚರಣೌ ಕರೌ ।
ತತೋಽನ್ನಪರಿಣಾಮಾರ್ಥಂ ಮಂತ್ರಾನೇತಾನುದೀರಯೇತ್ ॥ ೨೩೧ ॥
ಅಗ್ನಿರಾಪ್ಯಾಯಯನ್ಧಾತೂನ್ಪಾರ್ಥಿವಾನ್ಪವನೇರಿತಃ ।
ದತ್ತಾವಕಾಶೋ ನಭಸಾ ಜರಯತ್ವಸ್ತು ಮೇ ಸುಖಂ ॥ ೨೩೨ ॥
ಪ್ರಾಣಾಪಾನಸಮಾನಾನಾಮುದಾನವ್ಯಾನಯೋಸ್ತಥಾ ।
ಅನ್ನಂ ಪುಷ್ಟಿಕರಂ ಚಾಸ್ತು ಮಮಾಸ್ತ್ವವ್ಯಾಹತಂ ಸುಖಂ ॥ ೨೩೩ ॥
ಸಮುದ್ರೋ ವಡವಾಗ್ನಿಶ್ಚ ಬ್ರಧ್ನೋ ಬ್ರಧ್ನಸ್ಯ ನಂದನಃ ।
ಮಯಾಭ್ಯವಹೃತಂ ಯತ್ತದಶೇಷಂ ಜರಯಂತ್ವಿಮೇ ॥ ೨೩೪ ॥

---

ಪದ್ಮಾರ್ಬುದ ನಿವಾಸಿನಾಮ್ । ಉಚ್ಛಿಷ್ಟೋದಕಮಿಚ್ಛೂನಾಮಕ್ಷಯ್ಯಮುಪತಿಷ್ಠತುಂ" ಎಂಬ ಮಂತ್ರವನ್ನು ಪಠಿಸುತ್ತ ಕುಡಿದುಳಿದ ನೀರನ್ನು ಭೂಮಿಯಲ್ಲಿ ಚೆಲ್ಲಬೇಕು.

೨೨೯–೨೩೦. ಮೇಧಾವಿಯಾದವನು ಮರಳಿ ಆಚಮನಮಾಡಿ ಶುದ್ಧನಾಗಿ ಕೈಯಿಂದ ನೀರನ್ನು ತೆಗೆದುಕೊಂಡು "ಅಂಗುಷ್ಠಮಾತ್ರದಿಂದಿರುವ ಪರಮ ಪುರುಷನು ಈ ನನ್ನ ಹೆಬ್ಬೆರಳನ್ನು ಆಶ್ರಯಿಸಿರುವನು. ಸಮಸ್ತ ಜಗತ್ತಿಗೂ ಪ್ರಭುವಾದ ಆ ಪರಮೇಶ್ವರನು ಸಂತೋಷಗೊಳ್ಳಲಿ" ಎಂಬ ಮಂತ್ರವನ್ನುಚ್ಚರಿಸಬೇಕು.

೨೩೧. ಹೀಗೆ ಅನ್ನವನ್ನು ಸಂಕಲ್ಪಿಸಿ ಕೈಕಾಲುಗಳನ್ನು ತೊಳೆದುಕೊಂಡು ಆ ಅನ್ನವು ಜೀರ್ಣವಾಗುವುದಕ್ಕಾಗಿ ಈ ಅರ್ಥವುಳ್ಳ ಮಂತ್ರವನ್ನು ಹೇಳಬೇಕು.

೨೩೨. ಬೆಂಕಿಯು ಗಾಳಿಯಿಂದ ಉಜ್ಜ್ವಲಗೊಳಿಸಲ್ಪಟ್ಟು ಪಾರ್ಥಿವಧಾತುಗಳನ್ನು ಪರಿಣಾಮಗೊಳಿಸುತ್ತ ಆಕಾಶದಿಂದ ಅವಕಾಶವನ್ನು ಪಡೆದು ಜೀರ್ಣಗೊಳಿಸಲಿ. ನನಗೆ ಸುಖಾವಹವಾಗಲಿ.

೨೩೩. ಈ ಅನ್ನವು ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನಗಳನ್ನು ಪುಷ್ಟಿಗೊಳಿಸಲಿ. ನನಗೆ ನಿರ್ವಿಘ್ನವಾಗಿ ಸುಖವುಂಟಾಗಲಿ.

೨೩೪. ಸಮುದ್ರ, ವಡವಾಗ್ನಿ, ಸೂರ್ಯ, ಯಮ ಇವರು ನಾನು ಭುಂಜಿಸಿದ ಅನ್ನವನ್ನು ಜೀರ್ಣಗೊಳಿಸಲಿ.

**ಮುಖಶುದ್ಧಿಂ ತತಃ ಕೃತ್ವಾ ಪುರಾಣಶ್ರವಣಾದಿಭಿಃ ।**
**ಅತಿವಾಹ್ಯ ದಿವಾಶೇಷಂ ತತಃ ಸಂಧ್ಯಾಂ ಸಮಾರಭೇತ್ ॥ ೨೩೫ ॥**
**ಗೃಹೇ ಗೋಷ್ಠೇ ನದೀತೀರೇ ಸಂಧ್ಯಾ ದಶಗುಣಾ ಕ್ರಮಾತ್ ।**
**ಸಂಭೇದೇ ಸ್ಯಾಚ್ಛತಗುಣಾ ಹ್ಯನಂತಾ ಶಿವಸನ್ನಿಧೌ ॥ ೨೩೬ ॥**
**ಉಪಾಸಿತಾ ಬಹಿಃ ಸಂಧ್ಯಾ ದಿವಾಮೈಥುನಪಾತಕಂ ।**
**ಶಮಯೇದನೃತೋಕ್ತ್ಯಾಽಘಂ ಮದ್ಯಗಂಧಜಮೇವ ಚ ॥ ೨೩೭ ॥**
**ಸಾಮವೇದಸ್ವರೂಪಾಂ ಚ ವಸಿಷ್ಠರ್ಷಿಸಮಾಯುತಾಂ ।**
**ಕೃಷ್ಣಾಂಗೀಂ ಕೃಷ್ಣವಸನಾಂ ಮನಾಕ್‌ಸ್ಖಲಿತಯೌವನಾಂ ॥ ೨೩೮ ॥**
**ಸರಸ್ವತೀಂ ತಾರ್ಕ್ಷ್ಯಯಾನಾಂ ವಿಘ್ನಘ್ನೀಂ ವಿಷ್ಣುದೈವತಾಂ ।**
**ಜಗತೀಛಂದಸಾಯುಕ್ತಾಂ ಧ್ಯಾಯೇದೇಕಾಕ್ಷರಾಂ ಪರಾಂ ॥ ೨೩೯ ॥**
**ಅಗ್ನಿಶ್ಚೇತಿ ಚ ಮಂತ್ರೇಣ ವಿಧಾಯಾಚಮನಂ ಸುಧೀಃ ।**
**ಪಶ್ಚಿಮಾಸ್ಯೋ ಜಪೇತ್ತಾವದ್ಯಾವನ್ನಕ್ಷತ್ರದರ್ಶನಂ ॥ ೨೪೦ ॥**
**ಅತಿಥಿಂ ಸಾಯಮಾಯಾಂತಮಪಿ ವಾಗ್ಭೂತೃಣೋದಕೈಃ ।**
**ಸಂಭಾವ್ಯ ಪರಿಕಲ್ಪ್ಯೇತ್ಥಂ ನಿಶಃ ಪ್ರಾಕ್ಪ್ರಹರಂ ಸುಧೀಃ ॥ ೨೪೧ ॥**
**ಇತ್ಥಂ ದಿವಾ ಕರ್ಮ ಕೃತ್ವಾ ಶ್ರುತೇಃ ಪಠನಪಾಠನೈಃ ।**
**ಏಕಕಾಷ್ಠಮಯೀಂ ಶಯ್ಯಾಂ ನಾಽತಿತೃಪ್ತೋಽಥ ಸಂವಿಶೇತ್ ॥ ೨೪೨ ॥**

---

೨೩೫. ಬಳಿಕ ಬಾಯಿಯನ್ನು ತೊಳೆದುಕೊಂಡು ಪುರಾಣಶ್ರವಣಾದಿಗಳಿಂದ ಉಳಿದ ಹಗಲನ್ನು ಕಳೆದು ಸಂಧ್ಯಾವಂದನೆಯನ್ನು ಆರಂಭಿಸಬೇಕು.

೨೩೬. ಮನೆ, ಹಸುವಿನ ಕೊಟ್ಟಿಗೆ, ನದೀದಡಗಳಲ್ಲಿ ಮಾಡಿದ ಸಂಧ್ಯಾವಂದನೆಯು ಕ್ರಮವಾಗಿ ಹತ್ತರಷ್ಟು ಹೆಚ್ಚು ಫಲವನ್ನು ಕೊಡುವುದು. ನದಿಯ ಸಂಗಮಸ್ಥಳದಲ್ಲಿ ನೂರರಷ್ಟೂ, ಶಿವಸನ್ನಿಧಿಯಲ್ಲಿ ಅನಂತವೂ ಆಗುವುದು.

೨೩೭. ಹೊರಗೆ ಮಾಡಿದ ಸಂಧ್ಯಾವಂದನೆಯು ದಿವಾಮೈಥುನ, ಅನೃತೋಕ್ತಿ, ಮದ್ಯಗಂಧ ಇವುಗಳಿಂದುಂಟಾದ ಪಾಪವನ್ನು ನಿವಾರಿಸುವುದು.

೨೩೮–೨೩೯. ಸಾಮವೇದಸ್ವರೂಪಳೂ, ವಸಿಷ್ಠರ್ಷಿಸಹಿತಳೂ, ಕೃಷ್ಣಾಂಗಳೂ, ಕೃಷ್ಣವಸ್ತ್ರವುಳ್ಳವಳೂ, ಸ್ವಲ್ಪ ಜಾರಿದ ಯೌವನವುಳ್ಳವಳೂ, ಗರುಡವಾಹನಳೂ, ವಿಘ್ನನಿವಾರಕಳೂ, ವಿಷ್ಣುದೈವತಳೂ, ಜಗತೀಛಂದಸ್ಸುಳ್ಳವಳೂ, ಏಕಾಕ್ಷರವುಳ್ಳವಳೂ, ಉತ್ತಮಳೂ ಆದ ಸರಸ್ವತಿಯನ್ನು ಧ್ಯಾನಿಸಬೇಕು.

೨೪೦. ಜ್ಞಾನಿಯು 'ಅಗ್ನಿಶ್ಚ' ಇತ್ಯಾದಿ ಮಂತ್ರದಿಂದ ಆಚಮನಮಾಡಿ ಪಶ್ಚಿಮಾಭಿಮುಖನಾಗಿ ನಕ್ಷತ್ರವು ಕಾಣುವವರೆಗೆ ಜಪಿಸಬೇಕು.

೨೪೧–೨೪೨. ಸಾಯಂಕಾಲ ಬಂದ ಅತಿಥಿಯನ್ನೂ, ಮಾತು, ಭೂಮಿ, ಹುಲ್ಲು(ಚಾಪೆ) ನೀರುಗಳಿಂದ ಸನ್ಮಾನಿಸಿ, ಹೀಗೆ ರಾತ್ರಿಯ ಮೊದಲಿನ ಯಾಮದಲ್ಲಿ

ಉದ್ದೇಶತಃ ಸಮಾಖ್ಯಾತೋ ಹ್ಯೇಷ ನಿತ್ಯತನೋ ವಿಧಿಃ ।
ಇತ್ಥಂ ಸಮಾಚರನ್ವಿಪ್ರೋ ನಾಽವಸೀದತಿ ಕರ್ಹಿಚಿತ್ ॥ ೨೪೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಸದಾಚಾರವರ್ಣನಂ"
ನಾಮ ಪಂಚತ್ರಿಂಶೋಽಧ್ಯಾಯಃ

---

ಮಾಡಿ ವೇದಪಠನ, ಪಾಠನಗಳಿಂದ ಹಗಲಿನ ಕಾರ್ಯವನ್ನು ಪೂರಯಿಸಿ ಒಂದೇ ಜಾತಿಯ ಮರದಿಂದಾದ ಮಂಚದಲ್ಲಿ ಅತ್ಯಂತ ತೃಪ್ತನಾಗದೆ ನಿದ್ರಿಸಬೇಕು.

೨೪೩. ಹೀಗೆ ಸಂಕ್ಷೇಪವಾಗಿ ನಿತ್ಯವಾದ ಆವಶ್ಯಕ ವಿಧಿಯನ್ನು ಹೇಳಿರುವೆನು. ಹೀಗೆ ಮಾಡುವ ಬ್ರಾಹ್ಮಣನು ಎಲ್ಲಿಯೂ ಕೆಡುವುದಿಲ್ಲ.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಸದಾಚಾರವರ್ಣನ"ವೆಂಬ
ಮೂವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಟ್ತ್ರಿಂಶೋಽಧ್ಯಾಯಃ

## ಬ್ರಹ್ಮಚಾರಿಸದಾಚಾರವರ್ಣನಂ

**ಸ್ಕಂದ ಉವಾಚ :—**

**ಪುನರ್ವಿಶೇಷಂ ವಕ್ಷ್ಯಾಮಿ ಸದಾಚಾರಸ್ಯ ಕುಂಭಜ ।**
**ಯಂ ಶ್ರುತ್ವಾಽಪಿ ನರೋ ಧೀಮಾನ್ನಾಜ್ಞಾನತಿಮಿರಂ ವಿಶೇತ್ ॥ ೧ ॥**
**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಸ್ತ್ರಯೋ ವರ್ಣಾ ದ್ವಿಜಾಃ ಸ್ಮೃತಾಃ ।**
**ಪ್ರಥಮಂ ಮಾತೃತೋ ಜಾತಾ ದ್ವಿತೀಯಂ ಚೋಪನಾಯನಾತ್ ॥ ೨ ॥**
**ಏಷಾಂ ಕ್ರಿಯಾ ನಿಷೇಕಾದಿ ಶ್ಮಶಾನಾಂತಾಚ ವೈದಿಕೀ ।**
**ಆದಧೀತ ಸುಧೀರ್ಗರ್ಭಮೃತೌ ಮೂಲಂ ಮಘಾಂ ತ್ಯಜೇತ್ ॥ ೩ ॥**
**ಸ್ಪಂದನಾತ್ಪ್ರಾಕ್ ಪುಂಸವನಂ ಸೀಮಂತೋನ್ನಯನಂ ತತಃ ।**
**ಮಾಸಿ ಷಷ್ಠೇಽಷ್ಟಮೇ ವಾಽಪಿ ಜಾತೇಽಥೋ ಜಾತಕರ್ಮ ಚ ॥ ೪ ॥**
**ನಾಮಾಽಹ್ನ್ಯೇಕಾದಶೇ ಗೇಹಾಚ್ಚತುರ್ಥೇ ಮಾಸಿ ನಿಷ್ಕ್ರಮಃ ।**
**ಮಾಸೇಽನ್ನಪ್ರಾಶನಂ ಷಷ್ಠೇ ಚೂಡಾಽಬ್ದೇ ವಾ ಯಥಾಕುಲಂ ॥ ೫ ॥**

---

## ಕನ್ನಡದ ಅನುವಾದ

### ಬ್ರಹ್ಮಚಾರಿಸದಾಚಾರವರ್ಣನ

೧. ಸ್ಕಂದನು ಹೇಳುತ್ತಾನೆ:— ಎಲೈ ಅಗಸ್ತ್ಯನೆ! ಮತ್ತೆ ಸದಾಚಾರದ ವಿಶೇಷವನ್ನು ಹೇಳುವೆನು. ಇದನ್ನು ಕೇಳಿದ ಬುದ್ಧಿಶಾಲಿಯಾದ ಮಾನವನು ಅಜ್ಞಾನಾಂಧಕಾರವನ್ನು ಪ್ರವೇಶಿಸುವುದಿಲ್ಲ.

೨. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಮೂರು ಜಾತಿಯವರು ದ್ವಿಜರೆನಿಸಿಕೊಳ್ಳುವರು. ಇವರಿಗೆ ಮೊದಲನೆಯ ಜಾತಿಯು ತಾಯಿಯಿಂದಲೂ, ಎರಡನೆಯ ಜಾತಿಯು ಉಪನಯನದಿಂದಲೂ ಉಂಟಾಗುವುದು.

೩. ಇವರಿಗೆ ನಿಷೇಕ ಮೊದಲ್ಗೊಂಡು ಅಂತ್ಯೇಷ್ಟಿಯವರೆಗಿನ ಕರ್ಮವು ವೇದೋಕ್ತವಾಗಿರುವುದು. ಪ್ರಾಜ್ಞನು ಮೂಲ, ಮಘಾನಕ್ಷತ್ರಗಳನ್ನು ಬಿಟ್ಟು ಉಳಿದ ನಕ್ಷತ್ರಗಳಲ್ಲಿ ಗರ್ಭಾಧಾನ ಮಾಡಬೇಕು.

೪–೫. ಗರ್ಭಪಿಂಡವು ಚಲಿಸುವುದಕ್ಕಿಂದ ಮುಂಚೆ ಪುಂಸವನವನ್ನೂ, ಬಳಿಕ ಆರು ಅಥವಾ ಎಂಟನೆಯ ತಿಂಗಳಲ್ಲಿ ಸೀಮಂತೋನ್ನಯನವನ್ನೂ, ಶಿಶುವು ಜನಿಸಿದ ಕೂಡಲೆ ಜಾತಕರ್ಮವನ್ನೂ, ಹುಟ್ಟಿದ ಹನ್ನೊಂದನೆಯ ದಿನ ನಾಮಕರಣವನ್ನೂ, ನಾಲ್ಕನೆಯ ತಿಂಗಳಲ್ಲಿ ಉಪನಿಷ್ಕ್ರಮಣವನ್ನೂ, ಆರನೆಯ ತಿಂಗಳಲ್ಲಿ ಅನ್ನಪ್ರಾಶನವನ್ನೂ, ಮೊದಲ ವರ್ಷ ಅಥವಾ ಕುಲಾಚಾರದಂತೆ ಚೌಲವನ್ನೂ ಮಾಡಬೇಕು.

ಶಮಮೇನೋ ವ್ರಜೇದೇವಂ ಬೈಜಂ ಗರ್ಭಜಮೇವ ಚ ।
ಸ್ತ್ರೀಣಾಮೇತಾಃ ಕ್ರಿಯಾಸ್ತೂಷ್ಣೀಂ ಪಾಣಿಗ್ರಾಹಸ್ತು ಮಂತ್ರವಾನ್ ॥ ೬ ॥
ಸಪ್ತಮೇಽಥಾಽಷ್ಟಮೇ ವಾಽಬ್ದೇ ಸಾವಿತ್ರೀಂ ಬ್ರಾಹ್ಮಣೋಽರ್ಹತಿ ।
ನೃಪಸ್ತ್ವೇಕಾದಶೇ ವೈಶ್ಯೋ ದ್ವಾದಶೇ ವಾ ಯಥಾಕುಲಂ ॥ ೭ ॥
ಬ್ರಹ್ಮತೇಜೋಽಭಿವೃದ್ಧ್ಯರ್ಥಂ ವಿಪ್ರೋಽಬ್ದೇ ಪಂಚಮೇಽರ್ಹತಿ ।
ಷಷ್ಠೇ ಬಲಾರ್ಥೀ ನೃಪತಿರ್ಮೌಂಜೀಂ ವೈಶ್ಯೋಽಷ್ಟಮೇ ಧ್ರಿಯೇತ್ ॥
ಮಹಾವ್ಯಾಹೃತಿಪೂರ್ವಂ ಚ ವೇದಮಧ್ಯಾಪಯೇದ್ಗುರುಃ ।
ಉಪನೀಯ ಚ ತಂ ಶಿಷ್ಯಂ ಶೌಚಾಚಾರೇ ಚ ಯೋಜಯೇತ್ ॥ ೯ ॥
ಪೂರ್ವೋಕ್ತವಿಧಿನಾ ಶೌಚಂ ಕುರ್ಯಾದಾಚಮನಂ ತಥಾ ।
ದಂತಾನ್ಜಿಹ್ವಾಂ ವಿಶೋಧ್ಯಾಽಥ ಕೃತ್ವಾ ಮಲವಿಶೋಧನಂ ॥ ೧೦ ॥
ಸ್ನಾತ್ವಾಂಬುದೈವತೈರ್ಮಂತ್ರೈಃ ಪ್ರಾಣಾನಾಯಮ್ಯ ಯತ್ನತಃ ।
ಉಪಸ್ಥಾನಂ ರವೇಃ ಕೃತ್ವಾ ಸಂಧ್ಯಯೋರುಭಯೋರಪಿ ॥ ೧೧ ॥
ಅಗ್ನಿಕಾರ್ಯಂ ತತಃ ಕೃತ್ವಾ ಬ್ರಾಹ್ಮಣಾನಭಿವಾದಯೇತ್ ।
ಬ್ರುವನ್ನಮುಕಗೋತ್ರೋಽಹಮಭಿವಾದಯ ಇತ್ಯಪಿ ॥ ೧೨ ॥

---

೬. ಹೀಗೆ ಮಾಡಿದರೆ ಬೀಜ ಮತ್ತು ಗರ್ಭಗಳ ಸಂಬಂಧವಾದ ಪಾಪವು ಪರಿಹಾರವಾಗುವುದು. ಹೆಂಗಸರಿಗೆ ಈ ಕರ್ಮಗಳನ್ನು ಮಂತ್ರವಿಲ್ಲದೆ ಮಾಡಬೇಕು. ವಿವಾಹವನ್ನು ಮಾತ್ರ ಮಂತ್ರಪೂರ್ವಕವಾಗಿ ಆಚರಿಸಬೇಕು.

೭. ಬ್ರಾಹ್ಮಣನು ಏಳು ಅಥವಾ ಎಂಟನೆಯ ವಯಸ್ಸಿನಲ್ಲಿಯೂ, ಕ್ಷತ್ರಿಯನು ಹನ್ನೊಂದನೆಯ ವಯಸ್ಸಿನಲ್ಲಿಯೂ, ವೈಶ್ಯನು ಕುಲಾಚಾರದಂತೆ ಹನ್ನೆರಡನೆಯ ವಯಸ್ಸಿನಲ್ಲಿಯೂ ಗಾಯತ್ರ್ಯುಪದೇಶಕ್ಕೆ ಅರ್ಹನಾಗುವನು.

೮. ಬ್ರಾಹ್ಮಣನು ಬ್ರಹ್ಮತೇಜಸ್ಸಿನ ಅಭಿವೃದ್ಧಿಗಾಗಿ ಐದನೆಯ ವಯಸ್ಸಿನಲ್ಲಿಯೂ, ಬಲವನ್ನಪೇಕ್ಷಿಸುವ ರಾಜನು ಆರನೆಯ ವಯಸ್ಸಿನಲ್ಲಿಯೂ, ವೈಶ್ಯನು ಎಂಟನೆಯ ವಯಸ್ಸಿನಲ್ಲಿಯೂ ಮೌಂಜಿಯನ್ನು ಧರಿಸಬೇಕು.

೯. ಗುರುವು ವಟುವಿಗೆ ಉಪನಯನ ಮಾಡಿ ಮಹಾವ್ಯಾಹೃತಿಪೂರ್ವಕವಾಗಿ ವೇದಾಧ್ಯಯನವನ್ನು ಮಾಡಿಸಿ ಶೌಚಾಚಾರದಲ್ಲಿ ಅವನನ್ನು ನೇಮಿಸಬೇಕು.

೧೦–೧೨. ಹಿಂದೆ ಹೇಳಿದ ಕ್ರಮದಿಂದ ಶೌಚಾಚಮನಗಳನ್ನು ಮಾಡಿ, ಹಲ್ಲುನಾಲಿಗೆಗಳನ್ನು ಉಜ್ಜಿಕೊಂಡು ಮಲವನ್ನು ವಿಸರ್ಜಿಸಿ ಜಲದೇವತಾಕವಾದ ಮಂತ್ರಗಳಿಂದ ಮಿಂದು ಪ್ರಾಣಾಯಾಮಮಾಡಿ ಉಭಯಸಂಧ್ಯಾಕಾಲಗಳಲ್ಲಿಯೂ ಸೂರ್ಯೋಪಸ್ಥಾನವನ್ನು ಮಾಡಿ ಅಗ್ನಿಕಾರ್ಯವನ್ನೆಸಗಿ ಇಂತಹ ಗೋತ್ರದವನಾದ ನಾನು ಅಭಿವಾದಿಸುವೆನೆಂದು ಬ್ರಾಹ್ಮಣರಿಗೆ ವಂದಿಸಬೇಕು.

ಅಭಿವಾದನಶೀಲಸ್ಯ ವೃದ್ಧಸೇವಾರತಸ್ಯ ಚ ।
ಆಯುರ್ಯಶೋ ಬಲಂ ಬುದ್ಧಿರ್ವರ್ಧತೇಽಹರಹೋಽಧಿಕಂ ॥ ೧೩ ॥
ಅಧೀತೇ ಗುರುಣಾಽಽಹೂತಃ ಪ್ರಾಪ್ತಂ ತಸ್ಮೈ ನಿವೇದಯೇತ್ ।
ಕರ್ಮಣಾ ಮನಸಾ ವಾಚಾ ಹಿತಂ ತಸ್ಯಾಚರೇತ್ಸದಾ ॥ ೧೪ ॥
ಅಧ್ಯಾಪ್ಯಾಧರ್ಮತೋ ನಾಽರ್ಥಾತ್ಸಾಧ್ವಾಪ್ತಜ್ಞಾನವಿತ್ತದಾಃ ।
ಶಕ್ತಾಃ ಕೃತಜ್ಞಾಃ ಶುಚಯೋಽದ್ರೋಹಕಾಶ್ಚಾಽನಸೂಯಕಾಃ ॥ ೧೫ ॥
ಧಾರಯೇನ್ಮೇಖಲಾದಂಡೋಪವೀತಾಽಜಿನಮೇವ ಚ ।
ಅನಿಂದ್ಯೇಷು ಚರೇದ್ಭೈಕ್ಷ್ಯಂ ಬ್ರಾಹ್ಮಣೇಷ್ವಾತ್ಮವೃತ್ತಯೇ ॥ ೧೬ ॥
ಬ್ರಾಹ್ಮಣಕ್ಷತ್ರಿಯವಿಶಾಮಾದಿಮಧ್ಯಾಽವಸಾನತಃ ।
ಭೈಕ್ಷ್ಯಚರ್ಯಾ ಕ್ರಮೇಣ ಸ್ಯಾದ್ಭವಚ್ಛಬ್ದೋಪಲಕ್ಷಿತಾ ॥ ೧೭ ॥
ವಾಗ್ಯತೋ ಗುರ್ವನುಜ್ಞಾತೋ ಭುಂಜೀತಾಽನ್ನಮಕುತ್ಸಯನ್ ।
ಏಕಾಽನ್ನಂ ನ ಸಮಶ್ನೀಯಾಚ್ಛ್ರಾದ್ಧೇಽಶ್ನೀಯಾತ್ತಥಾಪದಿ ॥ ೧೮ ॥
ಅನಾರೋಗ್ಯಮನಾಯುಷ್ಯಮಸ್ವರ್ಗ್ಯಂ ಚಾಽತಿಭೋಜನಂ ।
ಅಪುಣ್ಯಂ ಲೋಕವಿದ್ವಿಷ್ಟಂ ತಸ್ಮಾತ್ತತ್ಪರಿವರ್ಜಯೇತ್ ॥ ೧೯ ॥

---

೧೩. ಹೀಗೆ ಅಭಿವಾದನಮಾಡುತ್ತ ವೃದ್ಧರ ಸೇವೆಯಲ್ಲಿ ನಿರತನಾದ ವಟುವಿಗೆ ಆಯುಸ್ಸು, ಕೀರ್ತಿ, ಬಲ, ಬುದ್ಧಿ ಇವುಗಳು ಪ್ರತಿದಿನವೂ ಅಭಿವೃದ್ಧಿಗೊಳ್ಳುವುವು.

೧೪. ವಟುವು ಗುರುವು ಕರೆದಾಗ ಹೋಗಿ ಅಧ್ಯಯನಮಾಡಿ ತಾನು ಕಲಿತುದನ್ನು ಅವನಿಗೆ ಒಪ್ಪಿಸಬೇಕು. ಯಾವಾಗಲೂ ವಾಙ್ಮನಃಕರ್ಮಗಳಿಂದ ಅವನಿಗೆ ಹಿತವನ್ನು ಬಯಸಬೇಕು.

೧೫. ಬ್ರಹ್ಮಚಾರಿಗಳು ಅಧರ್ಮದಿಂದಲೂ, ಹಣದಿಂದಲೂ ವೇದೋಪದೇಶವನ್ನು ಪಡೆಯದೆ ಸನ್ಮಾರ್ಗದಿಂದ ಜ್ಞಾನವನ್ನು ಗಳಿಸಿ ಗುರುದಕ್ಷಿಣೆಯನ್ನಿತ್ತವರೂ, ಸಮರ್ಥರೂ, ಕೃತಜ್ಞರೂ, ಶುದ್ಧರೂ, ದ್ರೋಹಮಾಡದವರೂ, ಅಸೂಯೆಯಿಲ್ಲದವರೂ ಆಗಬೇಕು.

೧೬. ಮೌಂಜೀ, ದಂಡ, ಉಪವೀತ, ಕೃಷ್ಣಾಜಿನಗಳನ್ನು ಧರಿಸಬೇಕು. ಶ್ಲಾಘ್ಯರಾದ ಬ್ರಾಹ್ಮಣರಲ್ಲಿ ಪ್ರಾಣಧಾರಣೆಗಾಗಿ ಭಿಕ್ಷಾಟನೆಮಾಡಬೇಕು.

೧೭. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಕ್ರಮವಾಗಿ ಆದಿ, ಮಧ್ಯ, ಅಂತ್ಯದಲ್ಲಿ ಭವಚ್ಛಬ್ದವನ್ನು ಸೇರಿಸಿ ಭಿಕ್ಷಾಟನೆಮಾಡಬೇಕು.

೧೮. ಗುರುವಿನ ಅನುಜ್ಞೆಯಿಂದ ಮೌನದಿಂದ ಅನ್ನವನ್ನು ನಿಂದಿಸದೆ ಊಟಮಾಡಬೇಕು. ಒಬ್ಬನ ಅನ್ನವನ್ನೇ ತಿನ್ನುತ್ತಿರಬಾರದು. ಶ್ರಾದ್ಧದಲ್ಲಿಯೂ, ಆಪತ್ತಿನಲ್ಲಿಯೂ ಮಾತ್ರ ಹಾಗೆ ತಿನ್ನಬಹುದು.

೧೯. ಅತಿಭೋಜನವು ಅನಾರೋಗ್ಯಕರವೂ, ಆಯುಷ್ಯವನ್ನು ಕ್ಷೀಣ

ನ ದ್ವಿರ್ಭುಂಜೀತ ಚೈಕಸ್ಮಿನ್ದಿವಾ ಕ್ವಾಽಪಿ ದ್ವಿಜೋತ್ತಮಃ ।
ಸಾಯಂ ಪ್ರಾತರ್ದ್ವಿಜೋಽಶ್ನೀಯಾದಗ್ನಿಹೋತ್ರವಿಧಾನವಿತ್ ॥ ೨೦ ॥
ಮಧುಮಾಂಸಂ ಪ್ರಾಣಿಹಿಂಸಾಂ ಭಾಸ್ಕರಾಲೋಕನಾಂಜನೇ ।
ಸ್ತ್ರಿಯಂ ಪರ್ಯುಷಿತೋಚ್ಛಿಷ್ಟಂ ಪರಿವಾದಂ ವಿವರ್ಜಯೇತ್ ॥ ೨೧ ॥
ಔಪನಾಯನಿಕಃ ಕಾಲೋ ಬ್ರಹ್ಮಕ್ಷತ್ರವಿಶಾಂ ಪರಃ ।
ಆಷೋಡಶಾದಾದ್ವಾವಿಂಶಾದಾಚತುರ್ವಿಂಶದಬ್ದತಃ ॥ ೨೨ ॥
ಇತೋಽಪ್ಯೂರ್ಧ್ವಂ ನ ಸಂಸ್ಕಾರ್ಯಾಃ ಪತಿತಾ ಧರ್ಮವರ್ಜಿತಾಃ ।
ವ್ರಾತ್ಯಸ್ತೋಮೇನ ಯಜ್ಞೇನ ತತ್ಪಾತಿತ್ಯಂ ಪರಿವ್ರಜೇತ್ ॥ ೨೩ ॥
ಸಾವಿತ್ರೀಪತಿತೈಃ ಸಾರ್ಧಂ ಸಂಬಂಧಂ ನ ಸಮಾಚರೇತ್ ।
ಐಣಂ ಚ ರೌರವಂ ಬಾಸ್ತಂ ಕ್ರಮಾಚ್ಚರ್ಮದ್ವಿಜನ್ಮನಾಂ ॥ ೨೪ ॥
ವಸೀರನ್ನಾನುಪೂರ್ವ್ಯೇಣ ಶಾಣಕ್ಷೌಮಾವಿಕಾನಿ ಚ ।
ದ್ವಿಜಸ್ಯ ಮೇಖಲಾಮೌಂಜೀ ಮೌರ್ವೀ ಚ ಭುಜಜನ್ಮನಃ ।
ಭವೇತ್ತ್ರಿವೃತ್ಸಮಾ ಶ್ಲಕ್ಷ್ಣಾ ವಿಶಸ್ತು ಶಣತಾಂತವೀ ॥ ೨೫ ॥

---

ಗೊಳಿಸುವುದೂ, ಪಾಪವನ್ನುಂಟುಮಾಡುವುದೂ, ಲೋಕದೂಷ್ಯವೂ ಆಗಿರುವುದರಿಂದ ಅವನ್ನು ತ್ಯಜಿಸಬೇಕು.

೨೦. ಅಗ್ನಿಹೋತ್ರವಿಧಿಯನ್ನರಿತ ಬ್ರಾಹ್ಮಣನು ಒಂದು ಹಗಲಿನಲ್ಲಿ ಯಾವಾಗಲೂ ಎರಡುಸಾರಿ ಭೋಜನಮಾಡಕೂಡದು. ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ಮಾತ್ರ ಭುಂಜಿಸಬೇಕು.

೨೧. ಬ್ರಹ್ಮಚಾರಿಯು ಮಧು, ಮಾಂಸ, ಪ್ರಾಣಿಹಿಂಸೆ, ಸೂರ್ಯದರ್ಶನ, ಕಾಡಿಗೆ, ಸ್ತ್ರೀ, ತಂಗಳು, ಎಂಜಲು, ಅಪವಾದ ಇವುಗಳನ್ನು ದೂರಮಾಡಬೇಕು.

೨೨. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಹದಿನಾರು, ಇಪ್ಪತ್ತೆರಡು, ಇಪ್ಪತ್ತನಾಲ್ಕು ವರ್ಷಗಳು ಉಪನಯನದ ಕೊನೆಯ ಕಾಲವಾಗಿದೆ.

೨೩. ಇದಕ್ಕೂ ಮೀರಿದರೆ ಪತಿತರೂ, ಧರ್ಮಬಾಹ್ಯರೂ ಆಗುವುದರಿಂದ ಸಂಸ್ಕಾರಕ್ಕೆ ಅರ್ಹರಲ್ಲ. ಆ ಪಾತಿತ್ಯವು ವ್ರಾತ್ಯಸ್ತೋಮಯಜ್ಞದಿಂದ ಪರಿಹಾರವಾಗುವುದು.

೨೪–೨೫. ಹೀಗೆ ಗಾಯತ್ರಿಯಿಂದ ಪತಿತರಾದವರ ಸಂಬಂಧವನ್ನು ಮಾಡಕೂಡದು. ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೆ ಕ್ರಮವಾಗಿ ಜಿಂಕೆ, ರುರು, ಆಡುಗಳ ಚರ್ಮವು ಹೊದ್ದಿಕೆಯಾಗುವುದು. ಇವರು ಕ್ರಮವಾಗಿ ಸಣಬು, ರೇಷ್ಮೆ, ಉಣ್ಣೆಯ ಬಟ್ಟೆಗಳನ್ನು ಉಟ್ಟುಕೊಳ್ಳಬೇಕು. ಬ್ರಾಹ್ಮಣರಿಗೆ ನೊಸೆಹುಲ್ಲಿನಿಂದಾದುದೂ, ಕ್ಷತ್ರಿಯರಿಗೆ ಬಿಲ್ಲಿನ ನಾಣೂ, ವೈಶ್ಯನಿಗೆ ಮೂರು ಮಡಿಯಾಗಿ ಹೊಸೆದ ಸಣಬಿನ ನೂಲೂ ಮೌಂಜಿಯಾಗುವುದು.

ಮುಂಜಾಽಭಾವೇ ವಿಧಾತವ್ಯಾ ಕುಶಾಶ್ಮಾಂತಕಬಲ್ವಜೈಃ ।
ಗ್ರಂಥಿನೈಕೇನ ಸಂಯುಕ್ತಾ ತ್ರಿಭಿಃ ಪಂಚಭಿರೇವ ವಾ ॥ ೨೬ ॥
ಉಪವೀತಂ ಕ್ರಮೇಣಸ್ಯಾತ್ಕಾರ್ಪಾಸಂ ಶಾಣಮಾವಿಕಂ ।
ತ್ರಿವೃದೂರ್ಧ್ವವೃತಂ ತಚ್ಚ ಭವೇದಾಯುರ್ವಿವೃದ್ಧಯೇ ॥ ೨೭ ॥
ಬಿಲ್ವಪಾಲಾಶಯೋರ್ದಂಡೋ ಬ್ರಾಹ್ಮಣಸ್ಯ ನೃಪಸ್ಯ ತು ।
ನ್ಯಗ್ರೋಧಬಾಲದಲಯೋಃ ಪೀಲೂದುಂಬರಯೋರ್ವಿಶಃ ॥ ೨೮ ॥
ಆಮೌಲಿಂ ವಾಽಽಲಲಾಟಂ ವಾಽಽನಾಸಮೂರ್ಧ್ವಪ್ರಮಾಣತಃ ।
ಬ್ರಹ್ಮಕ್ಷತ್ರವಿಶಾಂ ದಂಡಸ್ತ್ವಗಾಢ್ಯೋ ನಾಽಗ್ನಿದೂಷಿತಃ ॥ ೨೯ ॥
ಪ್ರದಕ್ಷಿಣಂ ಪರೀತ್ಯಾಽಗ್ನಿಮುಪಸ್ಥಾಯ ದಿವಾಕರಂ ।
ದಂಡಾಽಜಿನೋಪವೀತಾಢ್ಯಶ್ಚರೇದ್ಭೈಕ್ಷ್ಯಂ ಯಥೋದಿತಂ ॥ ೩೦ ॥
ಮಾತೃಮಾತೃಷ್ವಸೃಸ್ವಸೃ ಪಿತೃಷ್ವಸೃಪುರಃಸರಾಃ ।
ಪ್ರಥಮಂ ಭಿಕ್ಷಣೀಯಾಃ ಸ್ಯುರೇತಾ ಯಾ ಚ ನ ನೋ ವದೇತ್ ॥ ೩೧ ॥
ಯಾವದ್ವೇದಮಧೀತೇ ಚ ಚರನ್ವೇದವ್ರತಾನಿ ಚ ।
ಬ್ರಹ್ಮಚಾರೀ ಭವೇತ್ತಾವದೂರ್ಧ್ವಂ ಸ್ನಾತೋ ಗೃಹೀ ಭವೇತ್ ॥ ೩೨ ॥

---

೨೬. ನೊಸೆಹುಲ್ಲು ಸಿಕ್ಕದಿದ್ದಲ್ಲಿ ದರ್ಭೆ, ಆರೇಗಿಡ, ಜೊಂಡುಹುಲ್ಲು ಇವುಗಳಿಂದ ಒಂದು, ಮೂರು, ಅಥವಾ ಐದು ಗಂಟುಗಳನ್ನು ಹಾಕಿ ಮೌಂಜಿಯನ್ನು ಮಾಡಬೇಕು.

೨೭. ಹತ್ತಿ, ಸಣಬು, ಉಣ್ಣೆ ನೂಲುಗಳನ್ನು ಮೂರು ಮೂರು ಸಾರಿ ಪ್ರದಕ್ಷಿಣಾಕಾರವಾಗಿ ಹೊಸೆದರೆ ಉಪವೀತವಾಗುವುದು. ಇದು ಆಯುಸ್ಸನ್ನು ಅಭಿವೃದ್ಧಿಗೊಳಿಸುವುದು.

೨೮. ಬ್ರಾಹ್ಮಣನಿಗೆ ಬಿಲ್ವಪಾಲಾಶದಂಡಗಳೂ, ಕ್ಷತ್ರಿಯನಿಗೆ ಆಲ, ಬಾಲದಳ ದಂಡಗಳೂ, ವೈಶ್ಯನಿಗೆ ಪೀಲು, ಅತ್ತಿಯದಂಡಗಳೂ ಅರ್ಹವಾದುವು.

೨೯. ತಲೆ, ಹಣೆ, ಮೂಗುಗಳಷ್ಟು ಉದ್ದವುಳ್ಳ ತೊಗಟೆಯಿಂದ ಕೂಡಿ ಸುಡದಿರುವ ದಂಡವು ಬ್ರಾಹ್ಮಣಾದಿ ಜಾತಿಯವರಿಗೆ ವಿಹಿತವಾಗಿರುವುದು.

೩೦. ಅಗ್ನಿಗೆ ಪ್ರದಕ್ಷಿಣೆಮಾಡಿ ಸೂರ್ಯೋಪಸ್ಥಾನಮಾಡಿ ದಂಡ, ಅಜಿನ, ಉಪವೀತಗಳಿಂದ ಸಹಿತನಾಗಿ ವಿಧಿಯಂತೆ ಭಿಕ್ಷಾಟನೆಮಾಡಬೇಕು.

೩೧. ಮೊದಲು ತಾಯಿ, ತಾಯಿಯ ಸಹೋದರಿಯರು, ತನ್ನ ಸಹೋದರಿಯರು, ಸೋದರತ್ತೆ ಮೊದಲಾದವರಲ್ಲಿ ಭಿಕ್ಷೆಯನ್ನು ಕೇಳಬೇಕು. ಇವರೂ ಇಲ್ಲವೆಂದು ಹೇಳಬಾರದು.

೩೨. ವೇದವ್ರತಗಳನ್ನಾಚರಿಸುತ್ತ ವೇದಾಧ್ಯಯನಮಾಡುವವರೆಗೆ ಮಾತ್ರ ವಟುವು ಬ್ರಹ್ಮಚಾರಿಯಾಗಿರುವನು. ಆಮೇಲೆ ಸ್ನಾತನೂ, ಗೃಹಸ್ಥನೂ ಆಗುವನು.

ಪ್ರೋಕ್ತೋಽಸಾವುಪಕುರ್ವಾಣೋ ದ್ವಿತೀಯಸ್ತತ್ರ ನೈಷ್ಠಿಕಃ ।
ತಿಷ್ಠೇತ್ತಾವದ್ಗುರುಕುಲೇ ಯಾವತ್ಸ್ಯಾದಾಯುಷಃ ಕ್ಷಯಃ ॥ ೩೩ ॥
ಗೃಹಾಶ್ರಮಂ ಸಮಾಶ್ರಿತ್ಯ ಯಃ ಪುನರ್ಬ್ರಹ್ಮಚರ್ಯಭಾಕ್ ।
ನಾಽಸೌ ಯತಿರ್ವನಸ್ಥೋ ವಾ ಸ್ಯಾತ್ಸರ್ವಾಶ್ರಮವರ್ಜಿತಃ ॥ ೩೪ ॥
ಅನಾಶ್ರಮೀ ನ ತಿಷ್ಠೇತ ದಿನಮೇಕಮಪಿ ದ್ವಿಜಃ ।
ಆಶ್ರಮಂ ತು ವಿನಾ ತಿಷ್ಠನ್ಪ್ರಾಯಶ್ಚಿತ್ತೀ ಯತೋ ಹಿ ಸಃ ॥ ೩೫ ॥
ಜಪಂ ಹೋಮಂ ವ್ರತಂ ದಾನಂ ಸ್ವಾಧ್ಯಾಯಂ ಪಿತೃತರ್ಪಣಂ ।
ಕುರ್ವಾಣೋಽಥಾಶ್ರಮಭ್ರಷ್ಟೋ ನಾಽಸೌ ತತ್ಫಲಮಾಪ್ನುಯಾತ್ ॥ ೩೬ ॥
ಮೇಖಲಾಽಜಿನದಂಡಾಶ್ಚ ಲಿಂಗಂ ಸ್ಯಾದ್ಬ್ರಹ್ಮಚಾರಿಣಃ ।
ಗೃಹಿಣೋ ವೇದಯಜ್ಞಾದಿ ನಖಲೋಮಾ ವನಸ್ಥಿತೇಃ ॥ ೩೭ ॥
ತ್ರಿದಂಡಾದಿ ಯತೇರುಕ್ತಮುಪಲಕ್ಷಣಮತ್ರ ವೈ ।
ಏತಲ್ಲಕ್ಷಣಹೀನಸ್ತು ಪ್ರಾಯಶ್ಚಿತ್ತೀ ದಿನೇ ದಿನೇ ॥ ೩೮ ॥
ಜೀರ್ಣಂ ಕಮಂಡಲುಂ ದಂಡಮುಪವೀತಾಽಜಿನೇ ಅಪಿ ।
ಅಪ್ಸ್ವೇವ ತಾನಿ ನಿಕ್ಷಿಪ್ಯ ಗೃಹ್ಣೀತಾನ್ಯಚ್ಚ ಮಂತ್ರವತ್ ॥ ೩೯ ॥

---

೩೩. ಇವನು ಗುರೂಪಸರ್ಪಣವನ್ನು ಮಾಡುವ ಬ್ರಹ್ಮಚಾರಿಯು. ಗುರುವಿನ ಮನೆಯಲ್ಲಿ ಆಯುಸ್ಸಿನ ಅವಸಾನದವರೆಗೆ ಇರುವವನು ನೈಷ್ಠಿಕ ಬ್ರಹ್ಮಚಾರಿಯು.

೩೪. ಗೃಹಸ್ಥಾಶ್ರಮವನ್ನಾಶ್ರಯಿಸಿ ಮರಳಿ ಬ್ರಹ್ಮಚರ್ಯವನ್ನು ಹೊಂದುವವನು ಯತಿಯೂ, ವಾನಪ್ರಸ್ಥನೂ ಆಗದೆ ಯಾವ ಆಶ್ರಮವೂ ಇಲ್ಲದವನಾಗುವನು.

೩೫. ಬ್ರಾಹ್ಮಣನು ಒಂದು ದಿನವೂ ಯಾವ ಆಶ್ರಮವೂ ಇಲ್ಲದಿರಬಾರದು. ಆಶ್ರಮವಿಲ್ಲದಿರುವವನು ಪ್ರಾಯಶ್ಚಿತ್ತಕ್ಕೆ ಯೋಗ್ಯನಾಗುವನು.

೩೬. ಆಶ್ರಮಭ್ರಷ್ಟನಾದವನು ಜಪ, ಹೋಮ, ವ್ರತ, ದಾನ, ವೇದಾಧ್ಯಯನ, ಪಿತೃತರ್ಪಣ ಇವುಗಳನ್ನು ಮಾಡಿದರೂ ಅವುಗಳ ಫಲವನ್ನು ಪಡೆಯುವುದಿಲ್ಲ.

೩೭–೩೮. ಬ್ರಹ್ಮಚಾರಿಗೆ ಮೌಂಜೀ, ಅಜಿನ, ದಂಡಗಳೂ, ಗೃಹಸ್ಥನಿಗೆ ವೇದಯಜ್ಞಾದಿಗಳೂ, ವಾನಪ್ರಸ್ಥನಿಗೆ ಉಗುರು ರೋಮಗಳೂ, ಯತಿಗೆ ತ್ರಿದಂಡಾದಿಗಳೂ ಚಿಹ್ನೆಯಾಗಿವೆ. ಈ ಲಕ್ಷಣಗಳಿಲ್ಲದವನು ಪ್ರತಿದಿನವೂ ಪ್ರಾಯಶ್ಚಿತ್ತಾರ್ಹನು.

೩೯. ಹಳೆದಾದ ಕಮಂಡಲು, ದಂಡ, ಉಪವೀತ, ಅಜಿನ ಇವುಗಳನ್ನು ನೀರಿನಲ್ಲಿ ವಿಸರ್ಜಿಸಿ ಹೊಸ ಕಮಂಡಲು ಮೊದಲಾದವುಗಳನ್ನು ಮಂತ್ರವತ್ತಾಗಿ ತೆಗೆದುಕೊಳ್ಳಬೇಕು.

ವಿದಧ್ಯಾತ್ ಷೋಡಶೇ ವರ್ಷೇ ಕೇಶಾಂತಂ ಕರ್ಮ ಚ ಕ್ರಮಾತ್ ।
ದ್ವಾವಿಂಶೇ ಚ ಚತುರ್ವಿಂಶೇ ಗಾರ್ಹಸ್ಥ್ಯಪ್ರತಿಪತ್ತಯೇ ॥ ೪೦ ॥
ತಪೋಯಜ್ಞವ್ರತೇಭ್ಯಶ್ಚ ಸರ್ವಸ್ಮಾಚ್ಛುಭಕರ್ಮಣಃ ।
ದ್ವಿಜಾತೀನಾಂ ಶ್ರುತಿರ್ಹ್ಯೇಕಾ ಹೇತುರ್ನಿಃಶ್ರೇಯಸಶ್ರಿಯಃ ॥ ೪೧ ॥
ವೇದಾರಂಭೇ ವಿಸರ್ಗೇ ಚ ವಿದಧ್ಯಾತ್ಪ್ರಣವಂ ಸದಾ ।
ಅಫಲೋಽನೋಂಕೃತೋ ಯಸ್ಮಾತ್ಪಠಿತೋಽಪಿ ನ ಸಿದ್ಧಯೇ ॥ ೪೨ ॥
ವೇದಸ್ಯ ವದನಂ ಪ್ರೋಕ್ತಂ ಗಾಯತ್ರೀ ತ್ರಿಪದಾ ಪರಾ ।
ತಿಸೃಭಿಃ ಪ್ರಣವಾದ್ಯಾಭಿರ್ಮಹಾವ್ಯಾಹೃತಿಭಿಃ ಸಹ ॥ ೪೩ ॥
ಸಹಸ್ರಂ ಸಾಧಿಕಂ ಕಿಂಚಿತ್ತ್ರಿಕಮೇತಜ್ಜಪನ್ಬಹಿಃ ।
ಮಾಸಂ ಬಹಿಃ ಪ್ರತಿದಿನಂ ಮಹಾಽಘಾದಪಿ ಮುಚ್ಯತೇ ॥ ೪೪ ॥
ಅತ್ಯಬ್ದಮಿತಿ ಯೋಽಭ್ಯಸ್ಯೇತ್ತ್ರತಿಷು ಸ್ರಮನನ್ಯಧೀಃ ।
ಸವ್ಯೋಮಮೂರ್ತಿಃ ಶುದ್ಧಾತ್ಮಾ ಪರಂ ಬ್ರಹ್ಮಾಽಧಿಗಚ್ಛತಿ ॥ ೪೫ ॥
ತ್ರಿವರ್ಣಮಯಮೋಂಕಾರಂ ಭೂರ್ಭುವಃಸ್ವರಿತಿತ್ರಯಂ ।
ಪಾದತ್ರಯಂ ಚ ಸಾವಿತ್ರ್ಯಾಸ್ತ್ರಯೋ ವೇದಾ ಅದೂದುಹನ್ ॥ ೪೬ ॥

---

೪೦. ಗೃಹಸ್ಥಾಶ್ರಮದ ಸ್ವೀಕಾರಕ್ಕಾಗಿ ಕ್ರಮವಾಗಿ ಹದಿನಾರು, ಇಪ್ಪತ್ತೆರಡು, ಇಪ್ಪತ್ತನಾಲ್ಕು ವರ್ಷಗಳಲ್ಲಿ ಗೋದಾನಿಕ ಕರ್ಮವನ್ನಾಚರಿಸಬೇಕು.

೪೧. ಬ್ರಾಹ್ಮಣರಿಗೆ ಮೋಕ್ಷಲಕ್ಷ್ಮಿಯನ್ನು ಪಡೆಯಲು ತಪಸ್ಸು, ಯಜ್ಞ, ವ್ರತ, ಇವೇ ಮೊದಲಾದ ಸಮಸ್ತ ಶುಭಕರ್ಮಗಳಿಗಿಂತಲೂ ವೇದವೊಂದೇ ಮುಖ್ಯವಾಗಿರುವುದು.

೪೨. ಯಾವಾಗಲೂ ವೇದಾರಂಭ, ವೇದೋತ್ಸರ್ಜನಗಳಲ್ಲಿ ಓಂಕಾರವನ್ನುಚ್ಚರಿಸಬೇಕು. ಓಂಕಾರವಿಲ್ಲದೆ ಪಠಿಸಿದರೆ ನಿಷ್ಫಲವಾಗುವುದು. ಸಿದ್ಧಿಯನ್ನುಂಟುಮಾಡುವುದಿಲ್ಲ.

೪೩–೪೪. ಮೂರುಪಾದಗಳುಳ್ಳ ಉತ್ತಮವಾದ ಗಾಯತ್ರಿಯು ವೇದದ ಮುಖವಾಗಿರುವುದು. ಪ್ರಣವಸಹಿತವಾದ ಮಹಾವ್ಯಾಹೃತಿಯೊಡನೆ ಈ ಗಾಯತ್ರಿಯನ್ನು ಮನೆಯಿಂದ ಹೊರಗೆ ಪ್ರತಿದಿನವೂ ಮೂರುಸಾವಿರಕ್ಕಿಂತಲೂ ಸ್ವಲ್ಪ ಹೆಚ್ಚಾಗಿ ಜಪಿಸುವವನು ಮಹಾಪಾಪದಿಂದ ಮುಕ್ತನಾಗುವನು.

೪೫. ಹೀಗೆ ಒಂದು ವರ್ಷಕ್ಕಿಂತ ಹೆಚ್ಚಾಗಿ ಪ್ರತಿದಿನವೂ ಒಮ್ಮನಸ್ಸಿನಿಂದ ಅಭ್ಯಾಸಮಾಡುವವನು ಶುದ್ಧಶರೀರನಾಗಿ ಪರಬ್ರಹ್ಮನನ್ನು ಹೊಂದುವನು.

೪೬. ಮೂರು ವೇದಗಳೂ ಮೂರಕ್ಷರಗಳಾಗುಳ್ಳ ಓಂಕಾರವನ್ನೂ, 'ಭೂರ್ಭುವಸ್ಸ್ವಃ' ಎಂಬುದನ್ನೂ, ಗಾಯತ್ರಿಯ ಮೂರು ಪಾದಗಳನ್ನೂ ಉಂಟುಮಾಡಿದುವು.

ಏತದಕ್ಷರಮೇನಾಂ ಚ ಜಪೇದ್ವ್ಯಾಹೃತಿಪೂರ್ವಿಕಾಂ ।
ಸಂಧ್ಯಯೋರ್ವೇದವಿದ್ವಿಪ್ರೋ ವೇದಪುಣ್ಯೇನ ಯುಜ್ಯತೇ ॥ ೪೭ ॥
ವಿಧಿಕ್ರತೋರ್ದಶಗುಣಂ ಜಪಸ್ಯ ಫಲಮುಶ್ನುತೇ ।
ವಿಧಿಕ್ರತೋರ್ದಶಗುಣೋ ಜಪಕ್ರತುರುದೀರಿತಃ ॥ ೪೮ ॥
ಉಪಾಂಶುಸ್ತ್ವಚ್ಛತಗುಣಃ ಸಹಸ್ರೋ ಮಾನಸಸ್ತತಃ ॥ ೪೯ ॥
ಅಧೀತ್ಯ ವೇದಾನ್ವೇದೌ ವಾ ವೇದಂ ವಾ ಶಕ್ತಿತೋ ದ್ವಿಜಃ ।
ಸುವರ್ಣಪೂರ್ಣಧರಣೀದಾನಸ್ಯ ಫಲಮುಶ್ನುತೇ ॥ ೫೦ ॥
ಶ್ರುತಿಮೇವ ಸದಾಽಭ್ಯಸ್ಯೇತ್ತಪಸ್ತಪ್ತುಂ ದ್ವಿಜೋತ್ತಮಃ ।
ಶ್ರುತ್ಯಭ್ಯಾಸೋ ಹಿ ವಿಪ್ರಸ್ಯ ಪರಮಂ ತಪ ಉಚ್ಯತೇ ॥ ೫೧ ॥
ಹಿತ್ವಾ ಶ್ರುತೇರಧ್ಯಯನಂ ಯೋಽನ್ಯತ್ಪಠಿತುಮಿಚ್ಛತಿ ।
ಸ ದೋಗ್ಧ್ರೀಂ ಧೇನುಮುತ್ಸೃಜ್ಯ ಗ್ರಾಮಕೋಡೀಂ ದುದುಕ್ಷತಿ॥ ೫೨ ॥
ಉಪನೀಯ ಚ ಯೈ ಶಿಷ್ಯಂ ವೇದಮಧ್ಯಾಪಯೇದ್ದ್ವಿಜಃ ।
ಸಕಲ್ಪಂ ಸರಹಸ್ಯಂ ಚ ತಮಾಚಾರ್ಯಂ ವಿದುರ್ಬುಧಾಃ ॥ ೫೩ ॥

---

೪೭. ವೇದಜ್ಞನಾದ ಬ್ರಾಹ್ಮಣನು ಎರಡು ಸಂಧ್ಯಾಕಾಲಗಳಲ್ಲಿ ಈ ಪ್ರಣವಾಕ್ಷರವನ್ನೂ, ವ್ಯಾಹೃತಿಪೂರ್ವಕವಾಗಿ ಗಾಯತ್ರಿಯನ್ನೂ ಜಪಿಸಿದರೆ ವೇದಾಧ್ಯಯನಮಾಡಿದ ಪುಣ್ಯವನ್ನು ಹೊಂದುವನು.

೪೮. ವಿಧಿಯಿಂದ ಅನುಷ್ಠಾನಮಾಡಿದ ಯಜ್ಞಕ್ಕಿಂತಲೂ ಜಪಯಜ್ಞವು ಅಧಿಕವಾಗಿರುವುದರಿಂದ ಪ್ರಣವಾದಿಗಳನ್ನು ಜಪಿಸುವುದರಿಂದ ಮನುಷ್ಯನು ಯಜ್ಞದ ಹತ್ತರಷ್ಟು ಫಲವನ್ನು ಪಡೆಯುವನು.

೪೯. ರಹಸ್ಯವಾಗಿ ಇವುಗಳನ್ನು ಜಪಿಸಿದರೆ ನೂರರಷ್ಟೂ, ಮನಸ್ಸಿನಲ್ಲಿ ಜಪಿಸಿದರೆ ಸಾವಿರದಷ್ಟೂ ಹೆಚ್ಚು ಫಲವನ್ನು ಹೊಂದುವನು.

೫೦. ದ್ವಿಜನು ಶಕ್ತ್ಯನುಸಾರ ಮೂರುವೇದಗಳನ್ನೊ, ಎರಡು ವೇದಗಳನ್ನೊ ಅಥವಾ ಒಂದೇ ವೇದವನ್ನೋ ಅಧ್ಯಯನಮಾಡಿದರೆ ಸುವರ್ಣದಿಂದ ತುಂಬಿದ ಭೂಮಿಯನ್ನು ದಾನಮಾಡಿದ ಫಲವನ್ನು ಪಡೆಯುವನು.

೫೧. ದ್ವಿಜೋತ್ತಮನು ತಪಸ್ಸನ್ನಾಚರಿಸಲು ವೇದವನ್ನೇ ಯಾವಾಗಲೂ ಅಭ್ಯಾಸಮಾಡಬೇಕು. ಬ್ರಾಹ್ಮಣನಿಗೆ ವೇದಾಭ್ಯಾಸವೇ ಉತ್ತಮತಪಸ್ಸೆಂದು ಉಕ್ತವಾಗಿರುವುದು.

೫೨. ವೇದಾಧ್ಯಯನವನ್ನು ಬಿಟ್ಟು ಇತರ ಗ್ರಂಥವನ್ನು ಓದಲಿಚ್ಛಿಸುವವನು ಹಾಲನ್ನು ಕರೆಯುತ್ತಿರುವ ಆಕಳನ್ನು ಬಿಟ್ಟು ಹಂದಿಯನ್ನು ಕರೆಯಲಿಚ್ಛಿಸುವನು.

೫೩. ವಿದ್ವಾಂಸರು ಶಿಷ್ಯನಿಗೆ ಉಪನಯನಮಾಡಿ ಕಲ್ಪ, ರಹಸ್ಯಗಳಿಂದ

ಯೋಽಧ್ಯಾಪಯೇದೇಕದೇಶಂ ಶ್ರುತೇರಂಗಾನ್ಯಥಾಽಪಿ ವಾ ।
ವೃತ್ತ್ಯರ್ಥಂ ಸ ಉಪಾಧ್ಯಾಯೋ ವಿದ್ವದ್ಭಿಃ ಪರಿಗೀಯತೇ ॥ ೫೪ ॥
ಯಥಾವಿಧಿ ನಿಷೇಕಾದಿ ಯಃ ಕರ್ಮ ಕುರುತೇ ದ್ವಿಜಃ ।
ಸಂಭಾವಯೇತ್ತಥಾಽನ್ನೇನ ಗುರುಃ ಸ ಇಹ ಕೀರ್ತ್ಯತೇ ॥ ೫೫ ॥
ಅಗ್ನ್ಯಾಧೇಯಂ ಪಾಕಯಜ್ಞಾನಗ್ನಿಷ್ಟೋಮಾದಿಕಾನ್ಮಖಾನ್ ।
ಯಃ ಕರೋತಿ ವೃತೋ ಯಸ್ಯ ಸ ತಸ್ಯರ್ತ್ವಿಗಿಹೋಚ್ಯತೇ ॥ ೫೬ ॥
ಉಪಾಧ್ಯಾಯಾದ್ದಶಾಚಾರ್ಯ ಆಚಾರ್ಯಾತ್ತು ಶತಂ ಪಿತಾ ।
ಸಹಸ್ರಂ ತು ಪಿತುರ್ಮಾತಾ ಗೌರವೇಣಾಽತಿರಿಚ್ಯತೇ ॥ ೫೭ ॥
ವಿಪ್ರಾಣಾಂ ಜ್ಞಾನತೋ ಜ್ಯೈಷ್ಠ್ಯಂ ಬಾಹುಜಾನಾಂ ತು ವೀರ್ಯತಃ ।
ವೈಶ್ಯಾನಾಂ ಧಾನ್ಯಧನತಃ ಪಜ್ಜಾತಾನಾಂ ತು ಜನ್ಮತಃ ॥ ೫೮ ॥
ಯಥಾ ದಾರುಮಯೋ ಹಸ್ತೀ ಯಥಾ ಕೃತ್ತಿಮಯೋ ಮೃಗಃ ।
ತಥಾ ವಿಪ್ರೋಽನಧೀಯಾನಸ್ತ್ರಯೋಽಪ್ಯೇತೇ ನಾಮಧಾರಿಣಃ ॥ ೫೯ ॥

---

ಸಹಿತವಾದ ವೇದವನ್ನು ಅಧ್ಯಯನಮಾಡಿಸುವ ದ್ವಿಜನನ್ನು ಆಚಾರ್ಯನೆಂದು ತಿಳಿಯುವರು.

೫೪. ಪಂಡಿತರು ವೇದದ ಒಂದು ಭಾಗವನ್ನಾಗಲಿ, ಅಂಗಗಳನ್ನಾಗಲಿ ಜೀವನಕ್ಕಾಗಿ ಅಧ್ಯಯನಮಾಡಿಸುವ ಬ್ರಾಹ್ಮಣನನ್ನು ಉಪಾಧ್ಯಾಯನೆನ್ನುವರು.

೫೫. ನಿಷೇಕಾದಿ ಕರ್ಮಗಳನ್ನು ವಿಧಿಯಂತೆಮಾಡಿ ಅನ್ನವನ್ನು ನೀಡುವ ದ್ವಿಜನು ಗುರುವೆನಿಸಿಕೊಳ್ಳುವನು.

೫೬. ಅಗ್ನ್ಯಾಧಾನ, ಪಾಕಯಜ್ಞ, ಅಗ್ನಿಷ್ಟೋಮ ಮೊದಲಾದ ಯಾಗಗಳು ಇವುಗಳನ್ನು ಮಾಡಿಸುವವನು ಋತ್ವಿಜನೆನಿಸಿಕೊಳ್ಳುವನು.

೫೭. ಉಪಾಧ್ಯಾಯನಿಗಿಂತಲೂ ಆಚಾರ್ಯನು ಹತ್ತರಷ್ಟು, ಆಚಾರ್ಯನಿಗಿಂತ ನೂರರಷ್ಟು ತಂದೆಯೂ, ತಂದೆಗಿಂತ ಸಾವಿರದಷ್ಟು ತಾಯಿಯೂ ಗೌರವಾರ್ಹಳು.

೫೮. ಬ್ರಾಹ್ಮಣರಿಗೆ ಜ್ಞಾನದಿಂದಲೂ, ಕ್ಷತ್ರಿಯರಿಗೆ ಶಕ್ತಿಯಿಂದಲೂ, ವೈಶ್ಯರಿಗೆ ಧಾನ್ಯ ಮತ್ತು ಧನದಿಂದಲೂ, ಶೂದ್ರರಿಗೆ ಹುಟ್ಟಿನಿಂದಲೂ ಜ್ಯೇಷ್ಠತೆಯು ನಿರ್ಣಯವಾಗಿರುವುದು.

೫೯. ಓದದ ಬ್ರಾಹ್ಮಣನು ಮರದ ಆನೆಯಂತೆಯೂ, ಚರ್ಮದ ಮೃಗದಂತೆಯೂ ಆಗುವನು. ಈ ಮೂವರೂ ಆಯಾ ಹೆಸರನ್ನು ಮಾತ್ರ ಹೊಂದಿರುವರು.

ಸ್ವಪ್ನೇ ಸಿಕ್ತ್ವಾ ಬ್ರಹ್ಮಚಾರೀ ದ್ವಿಜಃ ಶುಕ್ರಮಕಾಮತಃ ।
ಸ್ನಾತ್ವಾಽರ್ಕಮರ್ಚಯಿತ್ವಾತ್ರಿಃ ಪುನರ್ಮಾಮಿತ್ಯೃಚಂ ಜಪೇತ್ ॥ ೬೦ ॥
ಸ್ವಧರ್ಮನಿರತಾನಾಂ ಚ ವೇದಯಜ್ಞಕ್ರಿಯಾವತಾಂ ।
ಬ್ರಹ್ಮಚಾರೀ ಚರೇದ್ಭೈಕ್ಷ್ಯಂ ವೇಶ್ಮಸುಪ್ರಯತೋಽನ್ವಹಂ ॥ ೬೧ ॥
ಅಕೃತ್ವಾ ಭೈಕ್ಷ್ಯಚರಣಮಸಮಿಧ್ಯ ಹುತಾಶನಂ ।
ಅನಾತುರಃ ಸಪ್ತರಾತ್ರಮವಕೀರ್ಣಿವ್ರತಂ ಚರೇತ್ ॥ ೬೨ ॥
ಯಥೇಷ್ಟಚೇಷ್ಟೋ ನಭವೇದ್ಗುರೋರ್ನಯನಗೋಚರೇ ।
ನ ನಾಮ ಪರಿಗೃಹ್ಣೀಯಾತ್ಪರೋಕ್ಷೇಽಪ್ಯವಿಶೇಷಣಂ ॥ ೬೩ ॥
ಗುರುನಿಂದಾ ಭವೇದ್ಯತ್ರ ಪರಿವಾದಸ್ತು ಯತ್ರ ಚ ।
ಶ್ರುತೀ ಪಿಧಾಯ ವಾ ಸ್ಥೇಯಂ ಯಾತವ್ಯಂ ವಾ ತತೋಽನ್ಯತಃ ॥ ೬೪ ॥
ಖರೋ ಗುರೋಃ ಪರೀವಾದಾಚ್ಛ್ವಾ ಭವೇದ್ಗುರುನಿಂದಕಃ ।
ಮತ್ಸರೀ ಕ್ಷುದ್ರಕೀಟಃ ಸ್ಯಾತ್ಪರಿಭೋಕ್ತಾ ಭವೇತ್ಕೃಮಿಃ ॥ ೬೫ ॥
ನಾಽಭಿವಾದ್ಯಾ ಗುರೋಃ ಪತ್ನೀ ಸ್ಪೃಷ್ಟ್ವಾಂಘ್ರೀ ಯುವತೀ ಸತೀ ।
ಶ್ವಾಽಪಿ ವಿಂಶತಿವರ್ಷೇಣ ಜ್ಞಾತೃಣಾ ಗುಣದೋಷಯೋಃ ॥ ೬೬ ॥

---

೬೦. ಅರಿಯದೆ ಸ್ವಪ್ನದಲ್ಲಿ ಇಂದ್ರಿಯಸ್ಖಾಲಿತ್ಯವನ್ನು ಹೊಂದಿದ ಬ್ರಹ್ಮಚಾರಿ ದ್ವಿಜನು ಮಿಂದು ಸೂರ್ಯನನ್ನಾರಾಧಿಸಿ 'ಪುನರ್ಮಾಮಿ' ಇತ್ಯಾದಿ ಋಕ್ಕನ್ನು ಮೂರುಸಾರಿ ಜಪಿಸಬೇಕು.

೬೧. ಬ್ರಹ್ಮಚಾರಿಯು ಶುದ್ಧನಾಗಿ ಪ್ರತಿದಿನವೂ ಸ್ವಧರ್ಮನಿರತರೂ, ವೇದಯಜ್ಞಕ್ರಿಯೆಯುಳ್ಳವರೂ ಆದವರ ಮನೆಗಳಲ್ಲಿ ಭಿಕ್ಷಾಟನೆಮಾಡಬೇಕು.

೬೨. ರೋಗವಿಲ್ಲದವನು ಏಳುದಿನ ಭಿಕ್ಷಾಟನ, ಸಮಿಧಾದಾನಗಳನ್ನು ಮಾಡದಿದ್ದರೆ ಪ್ರಾಯಶ್ಚಿತ್ತಾರ್ಹನಾಗುವನು.

೬೩. ಗುರುವಿನ ಮುಂದೆ ಸ್ವೇಚ್ಛೆಬಂದಂತೆ ಚೇಷ್ಟೆಮಾಡಕೂಡದು. ಪರೋಕ್ಷದಲ್ಲಿಯೂ ವಿಶೇಷಣವಿಲ್ಲದೆ ಅವನ ಹೆಸರನ್ನು ಹೇಳಬಾರದು.

೬೪. ಎಲ್ಲಿ ಗುರುವಿನ ನಿಂದೆ, ಅಪವಾದಗಳು ಕೇಳಿಸುವವೊ, ಅಲ್ಲಿ ಕಿವಿಗಳನ್ನು ಮುಚ್ಚಿಕೊಳ್ಳಬೇಕು. ಅಥವಾ ಅಲ್ಲಿಂದ ಬೇರೆ ಕಡೆಗೆ ಹೋಗಬೇಕು.

೬೫. ಗುರುವಿನ ಮೇಲೆ ಅಪವಾದವಾಡುವುದರಿಂದ ಕತ್ತೆಯೂ, ನಿಂದಿಸುವುದರಿಂದ ನಾಯಿಯೂ, ಅಸೂಯೆಗೊಳ್ಳುವುದರಿಂದ ಅಲ್ಪಕೀಟವೂ, ಮುಂದೆಯೆ ಕುಳಿತು ಭುಂಜಿಸುವುದರಿಂದ ಕೃಮಿಯೂ ಆಗುವನು.

೬೬. ಗುಣದೋಷಗಳನ್ನರಿತ ಇಪ್ಪತ್ತುವರ್ಷದ ಯುವಕನಾದ ಶಿಷ್ಯನು ಯುವತಿಯಾದ ಗುರುಪತ್ನಿಗೆ ಪಾದಗಳನ್ನು ಮುಟ್ಟಿ ನಮಸ್ಕರಿಸಬಾರದು.

ಸ್ವಭಾವಶ್ಚಂಚಲಃ ಸ್ತ್ರೀಣಾಂ ದೋಷಃ ಪುಂಸಾಮತಃ ಸ್ಮೃತಃ ।
ಪ್ರಮದಾಸು ಪ್ರಮಾದ್ಯಂತಿ ಕ್ವಚಿನ್ನೈವ ವಿಪಶ್ಚಿತಃ ॥ ೬೭ ॥
ವಿದ್ವಾಂಸಮಪ್ಯವಿದ್ವಾಂಸಂ ಯತಸ್ತಾ ಧರ್ಷಯಂತ್ಯಲಂ ।
ಸ್ವವಶಂ ನಾಽಪಿ ಕುರ್ವಂತಿ ಸೂತ್ರಬದ್ಧ ಶಕುಂತವತ್ ॥ ೬೮ ॥
ನ ಮಾತ್ರಾ ನ ದುಹಿತ್ರಾ ವಾ ನಸ್ವಸ್ರೈಕಾಂತಶೀಲತಾ ।
ಬಲವಂತೀಂದ್ರಿಯಾಣ್ಯತ್ರ ಮೋಹಯಂತ್ಯಪಿ ಕೋವಿದಾನ್ ॥ ೬೯ ॥
ಪ್ರಯತ್ನೇನ ಖನನ್ಯದ್ವದ್ಭೂಮೇರ್ವಾರ್ಯಧಿಗಚ್ಛತಿ ।
ಶುಶ್ರೂಷಯಾ ಗುರೋಸ್ತದ್ವದ್ವಿದ್ಯಾಂ ಶಿಷ್ಯೋಽಧಿಗಚ್ಛತಿ ॥ ೭೦ ॥
ಶಯಾನಮಭ್ಯುದಯತೇ ಬ್ರಧ್ನಶ್ಚೇದ್ಬ್ರಹ್ಮಚಾರಿಣಾಂ ।
ಪ್ರಮಾದಾದಥ ನಿಮ್ಲೋಚೇಜ್ಜಪನ್ನುಪವಸೇದ್ದಿನಂ ॥ ೭೧ ॥
ಸುತಸ್ಯ ಸಂಭವೇ ಕ್ಲೇಶಂ ಸಹೇತೇಪಿತರೌ ಚ ಯತ್ ।
ಶಕ್ಯಾ ವರ್ಷಶತೇನಾಽಪಿ ನೋ ಕರ್ತುಂ ತಸ್ಯ ನಿಷ್ಕೃತಿಃ ॥ ೭೨ ॥
ಅತಸ್ತಯೋಃ ಪ್ರಿಯಂ ಕುರ್ಯಾದ್ಗುರೋರಪಿ ಚ ಸರ್ವದಾ ।
ತ್ರಿಷು ತೇಷು ಸುತುಷ್ಟೇಷು ತಪಃ ಸರ್ವಂ ಸಮಾಪ್ಯತೇ ॥ ೭೩ ॥

---

೬೭. ಹೆಂಗಸರ ಸ್ವಭಾವವು ತೀರ ಚಂಚಲವಾದುದರಿಂದ ಪುರುಷರಲ್ಲಿ ದೋಷವುಂಟಾಗುವುದು. ಜ್ಞಾನಿಗಳು ಸ್ತ್ರೀಯರಲ್ಲಿ ಪ್ರಮಾದಗೊಳ್ಳುವುದಿಲ್ಲ.

೬೮. ಆ ಸ್ತ್ರೀಯರು ವಿದ್ವಾಂಸರನ್ನೂ, ಮೂಢರನ್ನೂ ಸಮಸಮವಾಗಿ ಕ್ಷೋಭೆಗೊಳಿಸುವರು. ಅಥವಾ ದಾರದಿಂದ ಕಟ್ಟಿದ ಪಕ್ಷಿಯಂತೆ ತಮ್ಮ ಅಧೀನರನ್ನಾಗಿ ಮಾಡಿಕೊಳ್ಳುವರು.

೬೯–೭೦. ಬಲಿಷ್ಠವಾದ ಇಂದ್ರಿಯಗಳು ಪಂಡಿತರನ್ನೂ ಮೋಹಗೊಳಿಸುವುದರಿಂದ ಪುರುಷನು ತಾಯಿ, ಮಗಳು, ಸಹೋದರಿಯರೊಡನೆ ರಹಸ್ಯದಲ್ಲಿರಬಾರದು. ಭೂಮಿಯನ್ನು ಪ್ರಯತ್ನದಿಂದ ಅಗೆದರೆ ನೀರು ಸಿಕ್ಕುವಂತೆ ಶಿಷ್ಯನು ಗುರುಸೇವೆಯಿಂದ ವಿದ್ಯೆಯನ್ನು ಪಡೆಯುವನು.

೭೧. ಬ್ರಹ್ಮಚಾರಿಯು ಮಲಗಿರುವಾಗ ಸೂರ್ಯನು ಉದಯಿಸಿದರೂ, ಅಸ್ತಂಗತನಾದರೂ ಜಪಿಸುತ್ತ ಹಗಲು ಉಪವಾಸಮಾಡಬೇಕು.

೭೨. ಪುತ್ರನು ತನ್ನ ಉತ್ಪತ್ತಿಯ ವಿಷಯದಲ್ಲಿ ತಂದೆ ತಾಯಿಗಳು ಅನುಭವಿಸಿದ ಕಷ್ಟಕ್ಕೆ ಪ್ರತಿಕ್ರಿಯೆಯನ್ನು ನೂರುವರ್ಷಗಳಿಂದಲೂ ಮಾಡಲು ಸಮರ್ಥನಲ್ಲ.

೭೩. ಆದುದರಿಂದ ಯಾವಾಗಲೂ ತಂದೆತಾಯಿಗಳಿಗೂ, ಗುರುವಿಗೂ ಹಿತವನ್ನಾಚರಿಸಬೇಕು. ಅವರು ಮೂವರೂ ಸಂತುಷ್ಟರಾಗಲು ಸಮಸ್ತ ತಪಸ್ಸೂ ಪೂರ್ತಿಯಾಗುವುದು.

ತೇಷಾಂ ತ್ರಯಾಣಾಂ ಶುಶ್ರೂಷಾ ಪರಮಂ ತಪ ಉಚ್ಯತೇ ।
ತಾನತಿಕ್ರಮ್ಯ ಯಃ ಕುರ್ಯಾತ್ತನ್ನಸಿದ್ಧ್ಯೇತ್ಕದಾಚನ ॥ ೭೪ ॥
ತ್ರೀನೇವಾಽಮೂನ್ಸಮಾರಾಧ್ಯ ತ್ರೀಂಲ್ಲೋಕಾನ್ಸಜಯೇತ್ಸುಧೀಃ ।
ದೇವವದ್ದಿವಿ ದೀವ್ಯೇತ ತೇಷಾಂ ತೋಷಂ ವಿವರ್ಧಯನ್ ॥ ೭೫ ॥
ಭೂಲೋಕಂ ಜನನೀಭಕ್ತ್ಯಾ ಭುವರ್ಲೋಕಂ ತಥಾ ಪಿತುಃ ।
ಗುರೋಃ ಶುಶ್ರೂಷಣಾತ್ತದ್ವತ್ಸ್ವರ್ಲೋಕಂ ಚ ಜಯೇತ್ಕೃತೀ ॥ ೭೬ ॥
ಏತದೇವ ನೃಣಾಂ ಪ್ರೋಕ್ತಂ ಪುರುಷಾರ್ಥಚತುಷ್ಟಯಂ ।
ಯದೇತೇಷಾಂ ಹಿ ಸಂತೋಷ ಉಪಧರ್ಮೋಽನ್ಯ ಉಚ್ಯತೇ ॥ ೭೭ ॥
ಅಧೀತ್ಯ ವೇದಾನ್ವೇದೌ ವಾ ವೇದಂ ವಾಽಪಿ ಕ್ರಮಾದ್ದ್ವಿಜಃ ।
ಅಪ್ರಸ್ಖಲದ್ಬ್ರಹ್ಮಚರ್ಯೋ ಗೃಹಾಶ್ರಮಮಥಾಶ್ರಯೇತ್ ॥ ೭೮ ॥
ಅವಿಪ್ಲುತಬ್ರಹ್ಮಚರ್ಯೋ ವಿಶ್ವೇಶಾಽನುಗ್ರಹಾದ್ಭವೇತ್ ।
ಅನುಗ್ರಹಶ್ಚ ವೈಶ್ವೇಶಃ ಕಾಶೀಪ್ರಾಪ್ತಿಕರಃ ಪರಃ ॥ ೭೯ ॥
ಕಾಶೀಪ್ರಾಪ್ತ್ಯಾ ಭಜೇಜ್ಜ್ಞಾನಂ ಜ್ಞಾನಾನ್ನಿರ್ವಾಣಮೃಚ್ಛತಿ ।
ನಿರ್ವಾಣಾರ್ಥಂ ಪ್ರಯತ್ನೋಹಿ ಸದಾಚಾರಸ್ಯ ಧೀಮತಾಂ ॥ ೮೦ ॥

---

೭೪. ಆದುದರಿಂದ ಆ ಮೂವರ ಸೇವೆಯು ಉತ್ತಮತಪಸ್ಸೆನ್ನಿಸಿಕೊಳ್ಳುವುದು. ಅವರನ್ನು ಮೀರಿ ಮಾಡಿದ ಕಾರ್ಯವು ಯಾವಾಗಲೂ ಸಿದ್ಧಿಸುವುದಿಲ್ಲ.

೭೫. ಬ್ರಹ್ಮಚಾರಿಯು ಆ ಮೂವರನ್ನೂ ಪೂಜಿಸಿ ಉತ್ತಮಲೋಕಗಳನ್ನು ಪಡೆಯುವನು. ಅವರಿಗೆ ಸಂತೋಷವನ್ನು ಹೆಚ್ಚಿಸುತ್ತ ದೇವಲೋಕದಲ್ಲಿ ದೇವತೆಗಳಂತೆ ವಿನೋದಪಡುವನು.

೭೬. ಪುಣ್ಯವಂತನು ತಾಯಿಯಲ್ಲಿಯ ಭಕ್ತಿಯಿಂದ ಭೂಲೋಕವನ್ನೂ, ತಂದೆಯಲ್ಲಿಯ ಭಕ್ತಿಯಿಂದ ಭುವರ್ಲೋಕವನ್ನೂ, ಗುರುಶುಶ್ರೂಷೆಯಿಂದ ಸ್ವರ್ಗಲೋಕವನ್ನೂ ಪಡೆಯುವನು.

೭೭. ಈ ತಂದೆ ಮೊದಲಾದವರಿಗೆ ಹಿಂಸೆಮಾಡದಿರುವುದೇ ಮನುಷ್ಯರಿಗೆ ಪುರುಷಾರ್ಥಚತುಷ್ಟಯವು. ಇತರ ಉಪಧರ್ಮವನ್ನೂ ಹೇಳುವೆನು.

೭೮. ದ್ವಿಜನು ಎಲ್ಲ ವೇದಗಳನ್ನಾಗಲಿ, ಎರಡು ವೇದಗಳನ್ನಾಗಲಿ, ಒಂದು ವೇದವನ್ನಾಗಲಿ ಅಧ್ಯಯನಮಾಡಿ ಬ್ರಹ್ಮಚರ್ಯಸ್ಖಾಲಿತ್ಯವಿಲ್ಲದೆ ಗೃಹಸ್ಥಾಶ್ರಮವನ್ನು ಆಶ್ರಯಿಸಬೇಕು.

೭೯. ಮನುಷ್ಯನು ವಿಶ್ವೇಶ್ವರನ ಅನುಗ್ರಹದಿಂದ ಅಸ್ಖಲಿತಬ್ರಹ್ಮಚಾರಿಯಾಗುವನು. ಆ ವಿಶ್ವೇಶ್ವರನ ಅನುಗ್ರಹವು ಕಾಶಿಯ ಪ್ರಾಪ್ತಿಯನ್ನುಂಟುಮಾಡುವುದು.

೮೦. ಕಾಶೀಪ್ರಾಪ್ತಿಯಿಂದ ಜ್ಞಾನವುಂಟಾಗುವುದು. ಜ್ಞಾನದಿಂದ ಮೋಕ್ಷ

ಸದಾಚಾರೋ ಗೃಹೇ ಯದ್ವನ್ನ ತಥಾಽಸ್ಯಾಶ್ರಮಾಂತರೇ ।
ವಿದ್ಯಾಜಾತಂ ಪಠಿತ್ವಾಂತೇ ಗೃಹಸ್ಥಾಶ್ರಮಮಾಶ್ರಯೇತ್ ॥ ೮೧ ॥
ಗೃಹಾಶ್ರಮಾತ್ಪರಂ ನಾಽಸ್ತಿ ಯದಿ ಪತ್ನೀ ವಶಂವದಾ ।
ಆನುಕೂಲ್ಯಂ ಹಿ ದಂಪತ್ಯೋಸ್ತ್ರಿವರ್ಗೋದಯಹೇತವೇ ॥ ೮೨ ॥
ಆನುಕೂಲ್ಯಂ ಕಲತ್ರಂ ಚೇತ್ತ್ರಿದಿವೇನಾಽಪಿ ಕಿಂ ತತಃ ।
ಪ್ರಾತಿಕೂಲ್ಯಂ ಕಲತ್ರಂ ಚೇನ್ನರಕೇಣಾಽಪಿ ಕಿಂ ತತಃ ॥ ೮೩ ॥
ಗೃಹಾಽಽಶ್ರಮಃ ಸುಖಾರ್ಥಾಯ ಭಾರ್ಯಾಮೂಲಂ ಚ ತತ್ಸುಖಂ ।
ಸಾ ಚ ಭಾರ್ಯಾ ವಿನೀತಾಯಾ ತ್ರಿವರ್ಗೋ ವಿನಯೋ ಧ್ರುವಂ ॥ ೮೪ ॥
ಜಲೌಕಯೋಪಮಾಯಂತೇ ಪ್ರಮದಾ ಮಂದಬುದ್ಧಿಭಿಃ ।
ವ್ಯಗೀದೃಶಾಂ ಜಲೌಕಾನಾಂ ವಿಚಾರಾನ್ಮಹದಂತರಂ ॥ ೮೫ ॥
ಜಲೌಕಾ ಕೇವಲಂ ರಕ್ತಮಾದದಾನಾ ತಪಸ್ವಿನೀ ।
ಪ್ರಮದಾ ಸರ್ವದಾದತ್ತೇ ಚಿತ್ತಂ ವಿತ್ತಂ ಬಲಂ ಸುಖಂ ॥ ೮೬ ॥
ದಕ್ಷಾ ಪ್ರಜಾವತೀ ಸಾಧ್ವೀ ಪ್ರಿಯವಾಕ್ಚ ವಶಂವದಾ ।
ಗುಣೈರಮೀಭಿಃ ಸಂಯುಕ್ತಾ ಸಾ ಶ್ರೀಃ ಸ್ತ್ರೀರೂಪಧಾರಿಣೀ ॥ ೮೭ ॥

---

ವನ್ನು ಪಡೆಯುವನು. ಜ್ಞಾನಿಗಳು ಆ ಮೋಕ್ಷಕ್ಕಾಗಿಯೇ ಸದಾಚಾರನಿರತರಾಗಲು ಪ್ರಯತ್ನಿಸುವರು.

೮೧. ಗೃಹಸ್ಥಾಶ್ರಮದಲ್ಲಿ ಸದಾಚಾರವನ್ನು ನಡೆಯಿಸಿದಂತೆ ಇತರ ಆಶ್ರಮಗಳಲ್ಲಿ ಸಾಧ್ಯವಿಲ್ಲ. ಸಕಲ ವಿದ್ಯೆಗಳನ್ನೂ ಕಲಿತ ತರವಾಯ ಗೃಹಸ್ಥಾಶ್ರಮವನ್ನು ಆಶ್ರಯಿಸಬೇಕು.

೮೨–೮೩. ಪತ್ನಿಯು ಸ್ವಾಧೀನಳಾಗಿದ್ದರೆ ಗೃಹಸ್ಥಾಶ್ರಮಕ್ಕಿಂತ ಉತ್ತಮವಾದುದಿಲ್ಲ. ದಂಪತಿಗಳ ಅನುಕೂಲ್ಯವು ಧರ್ಮಾರ್ಥಾದಿ ತ್ರಿವರ್ಗಗಳಿಗೆ ಕಾರಣವಾದುದು. ಪತ್ನಿಯು ಅನುಕೂಲಳಾಗಿದ್ದರೆ ಸ್ವರ್ಗದಿಂದೇನುಪ್ರಯೋಜನ? ಅವಳು ಪ್ರತಿಕೂಲಳಾದರೆ ಬೇರೆ ನರಕದಿಂದ ತಾನೇ ಏನು ಪ್ರಯೋಜನ?

೮೪. ಗೃಹಸ್ಥಾಶ್ರಮವು ಸುಖಕ್ಕೆ ಮೂಲವು. ಆ ಸುಖವು ಭಾರ್ಯೆಯಿಂದ ಉಂಟಾಗುವುದು. ಪತ್ನಿಯು ವಿನೀತಳಾಗಿದ್ದರೆ ತ್ರಿವರ್ಗವೂ, ವಿನಯವೂ ಲಭಿಸುವುವು.

೮೫. ಮೂಢರು, ಹೆಂಗಸರು ಜಿಗಣಿಗೆ ಸಮಾನರೆನ್ನುವರು. ವಿಚಾರಮಾಡಿದರೆ ಹೆಂಗಸರಿಗೂ, ಜಿಗಣಿಗಳಿಗೂ ಬಹಳ ವ್ಯತ್ಯಾಸವಿರುವುದು.

೮೬. ಜಿಗಣಿಯು ಕೇವಲ ರಕ್ತವನ್ನು ಹೀರುವುದು. ಈ ಸ್ತ್ರೀಯು ಮನಸ್ಸು, ದ್ರವ್ಯ, ಬಲ, ಸುಖ ಸಮಸ್ತವನ್ನೂ ಹೀರುವಳು.

೮೭. ಕುಶಲಳೂ, ಮಕ್ಕಳುಳ್ಳವಳೂ, ಪತಿವ್ರತೆಯೂ, ಸವಿನುಡಿಯುಳ್ಳ

ಗುರೋರನುಜ್ಞಯಾ ಸ್ನಾತ್ವಾ ವ್ರತಂ ವೇದಂ ಸಮಾಪ್ಯ ಚ ।
ಉದ್ವಹೇತ ತತೋ ಭಾರ್ಯಾಂ ಸವರ್ಣಾಂ ಸಾಧುಲಕ್ಷಣಾಂ ॥ ೮೮ ॥
ಜನೇತುರಸಗೋತ್ರಾ ಯಾ ಮಾತುರ್ಯಾಽಪ್ಯಸಪಿಂಡಕಾ ।
ದಾರಕರ್ಮಣಿ ಯೋಗ್ಯಾ ಸಾ ದ್ವಿಜಾನಾಂ ಧರ್ಮವೃದ್ಧಯೇ ॥ ೮೯ ॥
ಸ್ತ್ರೀಸಂಬಂಧೇಽಪ್ಯಪಸ್ಮಾರಿಕ್ಷಯಿಶ್ವಿತ್ರಿಕುಲಂ ತ್ಯಜೇತ್ ।
ಅಭಿಶಸ್ತಿ ಸಮಾಯುಕ್ತಂ ತಥಾ ಕನ್ಯಾಪ್ರಸೂಂ ತ್ಯಜೇತ್ ॥ ೯೦ ॥
ರೋಗಹೀನಾಂ ಭ್ರಾತೃಮತೀಂ ಸ್ವಸ್ಮಾತ್ಕಿಂಚಿಲ್ಲಘೀಯಸೀಂ ।
ಉದ್ವಹೇತ ದ್ವಿಜೋ ಭಾರ್ಯಾಂ ಸೌಮ್ಯಾಸ್ಯಾಂ ಮೃದುಭಾಷಿಣೀಂ॥೯೧॥
ನ ಪರ್ವತರ್ಕ್ಷವೃಕ್ಷಾಹ್ವಾಂ ನ ನದೀಸರ್ಪನಾಮಿಕಾಂ ।
ನ ಪಕ್ಷ್ಯಹಿಪ್ರೇಷ್ಯನಾಮ್ನೀಂ ಸೌಮ್ಯಾಖ್ಯಾಮುದ್ವಹೇತ್ಸುಧೀಃ ॥ ೯೨ ॥
ನ ಚಾಽತಿರಿಕ್ತಹೀನಾಂಗೀಂ ನಾಽತಿದೀರ್ಘಾಂ ನ ವಾ ಕೃಶಾಂ ।
ನಾಽಲೋಮಿಕಾಂ ನಾಽತಿಲೋಮಾಂ ನಾಽಸ್ನಿಗ್ಧಸ್ಥೂಲಮೌಲಿಜಾಂ ॥೯೩॥

---

ಡುವವಳೂ, ಸ್ವಾಧೀನಳೂ ಆದ ಸ್ತ್ರೀಯು ಹೆಂಗಸಿನ ರೂಪವನ್ನು ತಾಳಿದ ಲಕ್ಷ್ಮಿಯೇ ಎನ್ನಬೇಕು.

೮೮. ಬ್ರಹ್ಮಚಾರಿಯು ಗುರುವಿನ ಅನುಮತಿಯಿಂದ ವಿದ್ಯಾವ್ರತಸ್ನಾತನಾಗಿ ವೇದವ್ರತಗಳನ್ನು ಮುಗಿಸಿ ಒಳ್ಳೆಯ ಲಕ್ಷಣಗಳುಳ್ಳ ಸಜಾತಿಯ ಕನ್ಯೆಯನ್ನು ವರಿಸಬೇಕು.

೮೯. ಬ್ರಾಹ್ಮಣ ಕುಮಾರನಿಗೆ ತನ್ನ ತಂದೆಯ ಗೋತ್ರಳಲ್ಲದವಳೂ, ತಾಯಿಯ ಅಸಪಿಂಡಳೂ ಆದ ಕನ್ಯೆಯು ಧರ್ಮವೃದ್ಧಿಗಾಗಿ ವಿವಾಹಮಾಡಿ ಕೊಳ್ಳಲರ್ಹಳು.

೯೦. ಕನ್ಯೆಯನ್ನು ವಿವಾಹಮಾಡಿಕೊಳ್ಳುವಾಗ ಅಪಸ್ಮಾರ, ಕ್ಷಯ, ಕುಷ್ಠರೋಗಗಳುಳ್ಳದ್ದೂ, ಅಪವಾದದಿಂದ ಕೂಡಿರುವುದೂ, ಕನ್ಯೆಯನ್ನೆ ಪ್ರಸವಿಸುವುದೂ ಆದ ವಂಶವನ್ನು ತ್ಯಜಿಸಬೇಕು.

೯೧. ದ್ವಿಜನು ರೋಗವಿಲ್ಲದವಳೂ, ಸಹೋದರನುಳ್ಳವಳೂ, ತನಗಿಂತ ಸ್ವಲ್ಪ ಕಡಮೆವಯಸ್ಸಿನವಳೂ, ಸೌಮ್ಯಮುಖವುಳ್ಳವಳೂ, ಮೃದುವಾಗಿ ಮಾತ ನಾಡುವವಳೂ ಆದ ಕನ್ಯೆಯನ್ನು ವಿವಾಹಮಾಡಿಕೊಳ್ಳಬೇಕು.

೯೨. ಪರ್ವತ, ನಕ್ಷತ್ರ, ವೃಕ್ಷ, ನದಿ, ಸರ್ಪ, ಪಕ್ಷಿ, ದಾಸಿ, ಈ ಹೆಸರುಗಳಿಲ್ಲದೆ ಸೌಮ್ಯವಾದ ಹೆಸರುಳ್ಳ ಕನ್ಯೆಯನ್ನು ವಿವಾಹಮಾಡಿಕೊಳ್ಳಬೇಕು.

೯೩. ಹೆಚ್ಚುಕಡಮೆ ಅವಯವವುಳ್ಳವಳೂ, ಅತ್ಯಂತ ಉದ್ದವಾದವಳೂ, ಕೃಶಳೂ, ರೋಮವಿಲ್ಲದವಳೂ, ಅತ್ಯಂತ ರೋಮವುಳ್ಳವಳೂ, ನುಣುಪಾಗಿರದ ದಪ್ಪವಾದ ಕೂದಲುಳ್ಳವಳೂ ಆದ ಕನ್ಯೆಯನ್ನು ವಿವಾಹಮಾಡಿಕೊಳ್ಳಬಾರದು.

ಮೋಹಾತ್ಸಮುಪಯಚ್ಛೇತ ಕುಲಹೀನಾಂ ನ ಕನ್ಯಕಾಂ ।
ಹೀನೋಪಯಮನಾದ್ಯಾತಿ ಸಂತಾನಮಪಿ ಹೀನತಾಂ ॥ ೯೪ ॥
ಲಕ್ಷಣಾನಿ ಪರೀಕ್ಷ್ಯಾದೌ ತತಃ ಕನ್ಯಾಂ ಸಮುದ್ವಹೇತ್ ।
ಸುಲಕ್ಷಣಾ ಸದಾಚಾರಾ ಪತ್ಯುರಾಯುರ್ವಿವರ್ಧಯೇತ್ ॥ ೯೫ ॥
ಬ್ರಹ್ಮಚಾರೀ ಸಮಾಚಾರ ಇತಿ ತೇ ಸಮುದೀರಿತಃ ।
ಘಟೋದ್ಭವ ಪ್ರಸಂಗೇನ ಸ್ತ್ರೀಲಕ್ಷಣಮಥ ಬ್ರುವೇ ॥ ೯೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಬ್ರಹ್ಮಚಾರೀಸಮಾಚಾರವರ್ಣನಂ"
ನಾಮ ಷಟ್ತ್ರಿಂಶೋಽಧ್ಯಾಯಃ

---

೯೪. ಅಜ್ಞಾನದಿಂದ ಹೀನಕುಲದ ಕನ್ಯೆಯನ್ನು ಮದುವೆಮಾಡಿಕೊಳ್ಳ ಕೂಡದು. ಹಾಗೆ ಮಾಡಿಕೊಂಡರೆ ಸಂತತಿಯೂ ಹೀನವಾಗುವುದು.

೯೫. ಮೊದಲು ಲಕ್ಷಣಗಳನ್ನು ಪರೀಕ್ಷಿಸಿ ಕನ್ಯೆಯನ್ನು ಮದುವೆಮಾಡಿಕೊಳ್ಳಬೇಕು. ಒಳ್ಳೆಯ ಲಕ್ಷಣ ಮತ್ತು ಸದಾಚಾರಗಳುಳ್ಳ ಕನ್ಯೆಯು ಪತಿಯ ಆಯುಸ್ಸನ್ನು ಹೆಚ್ಚಿಸುವಳು.

೯೬. ಅಯ್ಯಾ ಅಗಸ್ತ್ಯನೆ! ಹೀಗೆ ನಿನಗೆ ಬ್ರಹ್ಮಚಾರಿಯ ಆಚಾರವನ್ನು ಹೇಳಿದ್ದೇನೆ. ಬಳಿಕ ಈ ಸಂದರ್ಭವನ್ನನುಸರಿಸಿಯೆ ಸ್ತ್ರೀಲಕ್ಷಣವನ್ನು ಹೇಳುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಬ್ರಹ್ಮಚಾರೀಸಮಾಚಾರವರ್ಣನ"ವೆಂಬ
ಮೂವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತತ್ರಿಂಶೋಽಧ್ಯಾಯಃ

## ಸ್ತ್ರೀಲಕ್ಷಣವರ್ಣನಂ

ಸ್ಕಂದ ಉವಾಚ :—

**ಸದಾ ಗೃಹೀ ಸುಖಂ ಭುಂಕ್ತೇ ಸ್ತ್ರೀ ಲಕ್ಷಣವತೀ ಯದಿ ।**
**ಅತಃ ಸುಖಸಮೃದ್ಧ್ಯರ್ಥಮಾದೌ ಲಕ್ಷಣಮೀಕ್ಷಯೇತ್ ॥ ೧ ॥**
**ವಪುರಾವರ್ತಗಂಧಾಶ್ಚ ಛಾಯಾ ಸತ್ವಂ ಸ್ವರೋ ಗತಿಃ ।**
**ವರ್ಣಶ್ಚೇದಷ್ಟಧಾ ಪ್ರೋಕ್ತಾ ಬುಧೈರ್ಲಕ್ಷಣಭೂಮಿಕಾ ॥ ೨ ॥**
**ಆಪಾದತಲಮಾರಭ್ಯ ಯಾವನ್ಮೌಲಿರುಹಂ ಕ್ರಮಾತ್ ।**
**ಶುಭಾಽಶುಭಾನಿ ವಕ್ಷ್ಯಾಮಿ ಲಕ್ಷಣಾನಿ ಮುನೇ ಶೃಣು ॥ ೩ ॥**
**ಆದೌ ಪಾದತಲಂ ರೇಖಾಸ್ತತೋಽಂಗುಷ್ಠಾಂಽಗುಲೀ ನಖಾಃ ।**
**ಪೃಷ್ಠಗುಲ್ಫದ್ವಯಂ ಪಾರ್ಷ್ಣೀ ಜಂಘೇ ರೋಮಾಣಿ ಜಾನುನೀ ॥ ೪ ॥**
**ಊರೂ ಕಟೀ ನಿತಂಬಸ್ಫಿಗ್ಭಗೋ ಜಘನಬಸ್ತಿಕೇ ।**
**ನಾಭಿಃ ಕುಕ್ಷಿದ್ವಯಂ ಪಾರ್ಶ್ವೋದರಮಧ್ಯವಲಿತ್ರಯಂ ॥ ೫ ॥**
**ರೋಮಾಲೀ ಹೃದಯಂ ವಕ್ಷೋ ವಕ್ಷೋಜದ್ವಯಚೂಚುಕಂ ।**
**ಜತ್ರುಸ್ಕಂಧಾಂಸಕಕ್ಷಾದೋರ್ಮಣಿಬಂಧಕರದ್ವಯಂ ॥ ೬ ॥**

---

## ಕನ್ನಡದ ಅನುವಾದ

### ಸ್ತ್ರೀಲಕ್ಷಣವರ್ಣನ

೧. ಸ್ಕಂದನು ಹೇಳುತ್ತಾನೆ :—ಪತ್ನಿಯು ಲಕ್ಷಣವತಿಯಾಗಿದ್ದರೆ ಗೃಹಸ್ಥನು ಯಾವಾಗಲೂ ಸುಖಿಯಾಗಿರುವನು. ಆದುದರಿಂದ ಸುಖಸಮೃದ್ಧಿಗಾಗಿ ಮೊದಲು ಸ್ತ್ರೀಯ ಲಕ್ಷಣವನ್ನು ನೋಡಬೇಕು.

೨. ಶರೀರ, ಸುಳಿ, ಸುವಾಸನೆ, ಕಾಂತಿ, ಮನಸ್ಸು, ಸ್ವರ, ಗಮನ, ಬಣ್ಣ ಇವೆಂಟೂ ಲಕ್ಷಣಸ್ಥಾನಗಳೆಂದು ಜ್ಞಾನಿಗಳು ಹೇಳಿರುವರು.

೩. ಮುನಿಯೆ ! ಅಂಗಾಲಿನಿಂದ ಆರಂಭಿಸಿ ತಲೆಗೂದಲಿನವರೆಗೆ ಕ್ರಮವಾಗಿ ಶುಭಾಶುಭಲಕ್ಷಣಗಳನ್ನು ಹೇಳುವೆನು.

೪–೯. ದೋಷವಿಲ್ಲದ ಹಲ್ಲುಗಳ ಸಾಲು, ಹೆಬ್ಬೆರಳು, ಇತರ ಬೆರಳುಗಳು, ಉಗುರು, ಹಿಂಭಾಗ, ಕಾಲಿನ ಗಂಟು, ಹಿಮ್ಮಡಿ, ಮೊಣಕಾಲುಗಳ ಕೆಳಭಾಗ, ರೋಮಗಳು, ಮೊಣಕಾಲು, ತೊಡೆ, ಸೊಂಟ, ನಿತಂಬ, ನಿತಂಬದ ಮೇಲ್ಭಾಗ, ಯೋನಿ, ಸೊಂಟದ ಮುಂಭಾಗ, ಹೊಕ್ಕಳಿನ ಕೆಳಭಾಗ, ಹೊಕ್ಕಳು, ಹೊಟ್ಟೆ, ಕಿಬ್ಬೊಟ್ಟೆ, ನಡು, ತ್ರಿವಳಿ, ರೋಮಗಳ ಸಾಲು, ಹೃದಯ, ವಕ್ಷಸ್ಥಳ,

ಪಾಣಿಪೃಷ್ಠಂ ಪಾಣಿತಲಂ ರೇಖಾಂಗುಷ್ಠಾಂಗುಲೀನಖಾಃ ।
ಪೃಷ್ಠಃ ಕೃಕಾಟಿಕಾ ಕಂಠೇ ಚಿಬುಕಂ ಚ ಹನುದ್ವಯಂ ॥ ೭ ॥
ಕಪೋಲೌ ವಕ್ತ್ರಮಧರೋತ್ತರೋಷ್ಠೌ ದ್ವಿಜಜಿಹ್ವಿಕಾಃ ।
ಘಂಟಿಕಾ ತಾಲುಹಸಿತಂ ನಾಸಿಕಾಕ್ಷುತಮಕ್ಷಿಣೀ ॥ ೮ ॥
ಪಕ್ಷ್ಮಭ್ರೂಕರ್ಣಭಾಲಾನಿ ಮೌಲಿಸೀಮಂತಮೌಲಿಜಾಃ ।
ಷಷ್ಟಿಃ ಷಡುತ್ತರಾ ಯೋಷಿದಂಗಲಕ್ಷಣಸತ್ಪನಿಃ ॥ ೯ ॥
ಸ್ತ್ರೀಣಾಂ ಪಾದತಲಂ ಸ್ನಿಗ್ಧಂ ಮಾಂಸಲಂ ಮೃದುಲಂ ಸಮಂ ।
ಅಸ್ವೇದಮುಷ್ಣಮರುಣಂ ಬಹುಭೋಗೋಚಿತಂ ಸ್ಮೃತಂ ॥ ೧೦ ॥
ರೂಕ್ಷಂ ವಿವರ್ಣಂ ಪರುಷಂ ಖಂಡಿತಪ್ರತಿಬಿಂಬಕಂ ।
ಶೂರ್ಪಾಕಾರಂ ವಿಶುಷ್ಕಂ ಚ ದುಃಖದೌರ್ಭಾಗ್ಯಸೂಚಕಂ ॥ ೧೧ ॥
ಚಕ್ರಸ್ವಸ್ತಿಕಶಂಖಾಬ್ಜಧ್ವಜಮೀನಾತಪತ್ರವತ್ ।
ಯಸ್ಯಾಃ ಪಾದತಲೇ ರೇಖಾ ಸಾ ಭವೇತ್ಕ್ಷಿತಿಪಾಂಗನಾ ॥ ೧೨ ॥
ಭವೇದಖಂಡಭೋಗಾಯೋರ್ಧ್ವಾ ಮಧ್ಯಾಂಗುಲಿಸಂಗತಾ ।
ರೇಖಾಖುಸರ್ಪಕಾಕಾಭಾ ದುಃಖದಾರಿದ್ರ್ಯಸೂಚಿಕಾ ॥ ೧೩ ॥

---

ಕುಚ, ಕುಚಾಗ್ರ, ಹೆಗಲಿನ ಸಂದು, ಹೆಗಲು, ಹೆಗಲಿನ ಮೇಲ್ಭಾಗ, ಕಂಕುಳು, ಭುಜ, ಕೈಗಂಟು, ಹಸ್ತ, ಕೈಹಿಂಭಾಗ, ಅಂಗೈ, ರೇಖೆ, ಕೈಯಹೆಬ್ಬೆರಳು, ಇತರ ಬೆರಳುಗಳು, ಉಗುರು, ಬೆನ್ನುಮೂಳೆಯ ಮೇಲ್ಭಾಗ, ಕುತ್ತಿಗೆ, ಗಡ್ಡ, ಕಪೋಲಗಳ ಮುಂದಿನಭಾಗ, ಕಪೋಲ, ಮುಖ, ತುಟಿ, ಮೇಲ್ತುಟಿ, ಹಲ್ಲು, ನಾಲಿಗೆ, ನಾಲಿಗೆಯ ಕೆಳಭಾಗ, ನಾಲಿಗೆಯ ಮೇಲ್ಭಾಗ, ನಗು, ಮೂಗು, ಹಸಿವು, ಕಣ್ಣು, ರೆಪ್ಪೆ, ಹುಬ್ಬು, ಕಿವಿ, ಹಣೆ, ತಲೆ, ಬೈತಲೆ, ತಲೆಗೂದಲು ಈ ಅರುವತ್ತಾರೂ ಹೆಂಗಸಿನ ಲಕ್ಷಣಸ್ಥಾನಗಳು.

೧೦. ಹೆಂಗಸರ ಅಂಗಾಲು ನುಣುಪೂ, ಪುಷ್ಟವೂ, ಮೃದುವೂ, ಸಮವೂ ಆಗಿದ್ದು, ಬೆವರಿಲ್ಲದೆ ಬಿಸಿಯೊಡಗೂಡಿ ಕೆಂಪಗಿದ್ದರೆ ಬಹು ಸುಖಭೋಗಗಳಿಗೆ ಉಚಿತವಾಗುವುದು.

೧೧. ಕಠಿನವೂ, ಕಳೆಗುಂದಿರುವುದೂ, ಒರಟೂ, ಹೆಜ್ಜೆಯೂರದಿರುವುದೂ, ಮೊರದಂತಿರುವುದೂ, ಒಣಗಿರುವುದೂ ಆದ ಅಂಗಾಲು ದುಃಖದೌರ್ಭಾಗ್ಯಗಳನ್ನು ಸೂಚಿಸುವುದು.

೧೨. ಯಾವ ಸ್ತ್ರೀಯ ಅಂಗಾಲಿನಲ್ಲಿ ಚಕ್ರ, ಸ್ವಸ್ತಿಕ, ಶಂಖ, ಕಮಲ, ಧ್ವಜ, ಮೀನು, ಛತ್ರ ಇವುಗಳ ರೇಖೆಗಳಿರುವುವೋ, ಆ ಸ್ತ್ರೀಯು ರಾಜಪತ್ನಿಯಾಗುವಳು.

೧೩. ಕಾಲಿನಲ್ಲಿ ಮೇಲ್ಮುಖವಾದ ಮಧ್ಯದ ಬೆರಳಿನೊಡನೆ ಸೇರಿದ ರೇಖೆಯು ಅಖಂಡಭೋಗಸೂಚಕವಾಗುವುದು. ಇಲಿ, ಸರ್ಪ, ಕಾಗೆಯಂತಿರುವ ರೇಖೆಗಳು ದುಃಖ ಮತ್ತು ಬಡತನಗಳನ್ನು ಸೂಚಿಸುವುವು.

ಉನ್ನತೋ ಮಾಂಸಲೋಽಂಗುಷ್ಠೋ ವರ್ತುಲೋಽತುಲಭೋಗದಃ ।
ವಕ್ರೋ ಹ್ರಸ್ವಶ್ಚ ಚಿಪಿಟಃ ಸುಖಸೌಭಾಗ್ಯಭಂಜಕಃ ॥ ೧೪ ॥
ವಿಧವಾ ವಿಪುಲೇನ ಸ್ಯಾದ್ದೀರ್ಘಾಂಗುಷ್ಠೇನ ದುರ್ಭಗಾ ।
ಮೃದವೋಽಂಗುಲಯಃ ಶಸ್ತಾ ಘನಾವೃತ್ತಾಃ ಸಮುನ್ನತಾಃ ॥ ೧೫ ॥
ದೀರ್ಘಾಂಗುಲೀಭಿಃ ಕುಲಟಾ ಕೃಶಾಭಿರತಿನಿರ್ಧನಾ ।
ಹ್ರಸ್ವಾಯುಷ್ಯಾ ಚ ಹ್ರಸ್ವಾಭಿರ್ಭುಗ್ನಾಭಿರ್ಭುಗ್ನವರ್ತಿನೀ ॥ ೧೬ ॥
ಚಿಪಿಟಾಭಿರ್ಭವೇದ್ದಾಸೀ ವಿರಲಾಭಿರ್ದರಿದ್ರಿಣೀ ।
ಪರಸ್ಪರಂ ಸಮಾರೂಢಾಃ ಪಾದಾಂಗುಲ್ಯೋ ಭವಂತಿ ಹಿ ॥ ೧೭ ॥
ಹತ್ವಾ ಬಹೂನಪಿ ಪತೀನ್ಪರಪ್ರೇಷ್ಯಾ ತದಾ ಭವೇತ್ ।
ಯಸ್ಯಾಃ ಪಥಿ ಸಮಾಯಾಂತ್ಯಾ ರಜೋ ಭೂಮೇಃ ಸಮುಚ್ಛಲೇತ್ ॥
ಸಾ ಪಾಂಸುಲಾ ಪ್ರಜಾಯೇತ ಕುಲತ್ರಯವಿನಾಶಿನೀ ।
ಯಸ್ಯಾಃ ಕನಿಷ್ಠಿಕಾ ಭೂಮಿಂ ನ ಗಚ್ಛಂತ್ಯಾಃ ಪರಿಸ್ಪೃಶೇತ್ ॥ ೧೯ ॥
ಸಾ ನಿಹತ್ಯ ಪತಿಂ ಯೋಷಿದ್ದ್ವಿತೀಯಂ ಕುರುತೇ ಪತಿಂ ।
ಅನಾಮಿಕಾ ಚ ಮಧ್ಯಾ ಚ ಯಸ್ಯಾ ಭೂಮಿಂ ನ ಸಂಸ್ಪೃಶೇತ್ ॥ ೨೦ ॥

---

೧೪. ಎತ್ತರವೂ, ಪುಷ್ಟವೂ, ಗುಂಡಗೂ ಇರುವ ಬೆರಳು ಅತಿಶಯಭೋಗವನ್ನೀಯುವುದು. ಸೊಟ್ಟಗೂ, ಕುಳ್ಳಗೂ, ಚಪ್ಪಟೆಯೂ ಆದ ಬೆರಳು ಸುಖಸೌಭಾಗ್ಯಗಳನ್ನು ಹಾಳುಮಾಡುವುದು.

೧೫. ವಿಶಾಲವಾದ ಬೆರಳಿದ್ದರೆ ವಿಧವೆಯೂ, ಉದ್ದವಾದ ಬೆರಳಿದ್ದರೆ ದುರ್ಭಗಳೂ ಆಗುವಳು. ಮೃದುವೂ, ಗಟ್ಟಿಯೂ, ವರ್ತುಳವೂ, ಎತ್ತರವೂ ಆದ ಬೆರಳುಗಳು ಶ್ರೇಷ್ಠವಾದುವು.

೧೬. ಉದ್ದವಾದ ಬೆರಳುಗಳಿದ್ದರೆ ವ್ಯಭಿಚಾರಿಣಿಯೂ, ಕೃಶವಾದ ಬೆರಳಿದ್ದರೆ ಬಡವಳೂ, ಕುಳ್ಳಗಿರುವ ಬೆರಳಿದ್ದರೆ ಸ್ವಲ್ಪಾಯುಷ್ಯವುಳ್ಳವಳೂ, ಸೊಟ್ಟಗಿರುವ ಬೆರಳಿದ್ದರೆ ವಕ್ರಸ್ವಭಾವದವಳೂ ಆಗುವಳು.

೧೭–೨೧. ಚಪ್ಪಟೆಯಾದ ಬೆರಳುಗಳಿದ್ದರೆ ದಾಸಿಯೂ, ವಿರಳವಾದ ಬೆರಳುಗಳಿದ್ದರೆ ದರಿದ್ರಳೂ ಆಗುವಳು. ಯಾವಳ ಪಾದದ ಬೆರಳುಗಳು ಅನ್ಯೋನ್ಯವಾಗಿ ಸೇರಿಕೊಂಡಿರುವವೊ, ಅವಳು ಅನೇಕ ಪತಿಗಳನ್ನು ಕೊಂದು ಪರರ ದಾಸಿಯಾಗುವಳು. ಯಾವಳು ದಾರಿಯಲ್ಲಿ ನಡೆಯುತ್ತಿರುವಾಗ ಭೂಮಿಯಿಂದ ದೂಳು ಮೇಲಕ್ಕೇಳುವುದೊ, ಅವಳು ಮೂರು ಕುಲಗಳನ್ನು ಹಾಳುಮಾಡುವ ವ್ಯಭಿಚಾರಿಣಿಯಾಗುವಳು. ಯಾವಳ ಕಿರುಬೆರಳು ನಡೆಯುವಾಗ ನೆಲವನ್ನು ಮುಟ್ಟುವುದಿಲ್ಲವೊ, ಅವಳು ಗಂಡನನ್ನು ಕೊಂದು ಎರಡನೆಯವನನ್ನು ಪತಿಯನ್ನಾಗಿ ಮಾಡಿಕೊಳ್ಳುವಳು. ಮುಂಚಿನ ಬೆರಳು ಭೂಮಿಯನ್ನು ಮುಟ್ಟದವಳು

**ಪತಿದ್ವಯಂ ನಿಹಂತ್ಯಾದ್ಯಾ ದ್ವಿತೀಯಾ ಚ ಪತಿತ್ರಯಂ ।**
**ಪತಿಹೀನತ್ವಕಾರಿಣ್ಯೌ ಹೀನೇ ತೇ ದ್ವೇ ಇಮೇ ಯದಿ ॥ ೨೧ ॥**
**ಪ್ರದೇಶಿನೀ ಭವೇದ್ಯಸ್ಯಾ ಅಂಗುಷ್ಠಾವ್ಯತಿರೇಕಿಣೀ ।**
**ಕನ್ಯೈವ ಕುಲಟಾ ಸಾ ಸ್ಯಾದೇಷ ಏವ ವಿನಿಶ್ಚಯಃ ॥ ೨೨ ॥**
**ಸ್ನಿಗ್ಧಾಃ ಸಮುನ್ನತಾಸ್ತಾಮ್ರಾ ವೃತ್ತಾಃ ಪಾದನಖಾಃ ಶುಭಾಃ ॥ ೨೩ ॥**
**ರಾಜ್ಞೀತ್ವಸೂಚಕಂ ಸ್ತ್ರೀಣಾಂ ಪಾದಪೃಷ್ಠಂ ಸಮುನ್ನತಂ ।**
**ಅಸ್ವೇದಮಶಿರಾಢ್ಯಂ ಚ ಮಸೃಣಂ ಮೃದುಮಾಂಸಲಂ ॥ ೨೪ ॥**
**ದರಿದ್ರಾ ಮಧ್ಯನಮ್ರೇಣ ಶಿರಾಲೇನ ಸದಾಽಧ್ವಗಾ ।**
**ರೋಮಾಢ್ಯೇನ ಭವೇದ್ದಾಸೀ ನಿರ್ಮಾಂಸೇನ ಚ ದುರ್ಭಗಾ ॥ ೨೫ ॥**
**ಗೂಢೌ ಗುಲ್ಫೌ ಶಿವಾಯೋಕ್ತಾವಶಿರಾಲೌ ಸುವರ್ತುಲೌ ।**
**ಸ್ಥಪುಟೌ ಶಿಥಿಲೌ ದೃಶ್ಯೌ ಸ್ಯಾತಾಂ ದೌರ್ಭಾಗ್ಯಸೂಚಕೌ ॥ ೨೬ ॥**
**ಸಮಪಾರ್ಷ್ಣಿಃ ಶುಭಾ ನಾರೀ ಪೃಥುಪಾರ್ಷ್ಣಿಶ್ಚ ದುರ್ಭಗಾ ।**
**ಕುಲಟೋನ್ನತಪಾರ್ಷ್ಣಿಃಸ್ಯಾದ್ದೀರ್ಘಪಾರ್ಷ್ಣಿಶ್ಚ ದುಃಖಭಾಕ್ ॥ ೨೭ ॥**

---

ಇಬ್ಬರು ಗಂಡಂದಿರನ್ನೂ, ಮಧ್ಯದ ಬೆರಳು ಮುಟ್ಟದವಳು ಮೂರುಮಂದಿ ಗಂಡಂದಿರನ್ನೂ ಕೊಲ್ಲುವಳು. ಈ ಎರಡೂ ಬೆರಳುಗಳು ನೆಲವನ್ನು ಸೋಕದಿದ್ದರೆ ಸ್ತ್ರೀಯರಿಗೆ ಗಂಡಂದಿರಿರುವುದಿಲ್ಲ.

೨೨–೨೩. ಯಾವಳ ಎರಡನೆಯ ಬೆರಳು ಹೆಬ್ಬೆರಳಿನ ಸಂಬಂಧವನ್ನು ಬಿಟ್ಟಿರುವುದೊ, ಅವಳು ಕನ್ಯೆಯಾಗಿರುವಾಗಲೇ ವ್ಯಭಿಚಾರಿಣಿಯಾಗುವಳು. ಇದು ನಿಶ್ಚಯವು. ನುಣುಪೂ, ಎತ್ತರವೂ, ಕೆಂಪೂ, ಗುಂಡಗೂ ಇರುವ ಕಾಲಿನ ಬೆರಳುಗುರುಗಳು ಶುಭವನ್ನುಂಟುಮಾಡುವುವು.

೨೪. ಎತ್ತರವೂ, ಬೆವರಿಲ್ಲದಿರುವುದೂ, ನರಗಳಿಲ್ಲದಿರುವುದೂ, ನುಣುಪೂ, ಪುಷ್ಟವೂ ಆದ ಅಂಗಾಲುಗಳುಳ್ಳ ಸ್ತ್ರೀಯು ರಾಣಿಯಾಗುವಳೆಂಬುದನ್ನು ಸೂಚಿಸುವುದು.

೨೫. ಅಂಗಾಲು ನಡುವೆ ಬಗ್ಗಿದ್ದರೆ ಬಡವಳೂ, ನರಗಳಿಂದ ತುಂಬಿದ್ದರೆ ಯಾವಾಗಲೂ ನಡೆಯುವವಳೂ, ಕೂದಲುಗಳಿದ್ದರೆ ಸೇವಕಳೂ, ಮಾಂಸವಿಲ್ಲದಿದ್ದರೆ ದುರ್ಭಗಳೂ ಆಗುವಳು.

೨೬. ಗೂಢವೂ, ನರಗಳುಳ್ಳವೂ, ವರ್ತುಳವೂ ಆದ ಕಾಲುಗಂಟುಗಳು ಮಂಗಳವನ್ನುಂಟುಮಾಡುವುವು. ನಿಮ್ನೋನ್ನತವೂ, ಸಡಿಲವೂ, ಕಾಣುತ್ತಿರುವುದೂ ಆದ ಕಾಲುಗಂಟುಗಳು ದಾರಿದ್ರ್ಯವನ್ನು ಸೂಚಿಸುವುವು.

೨೭. ಸರಿಯಾದ ಹಿಮ್ಮಡಿಯುಳ್ಳವಳು ಶುಭಕರಳೂ, ವಿಶಾಲವಾದ ಹಿಮ್ಮಡಿಯುಳ್ಳವಳು ದುರ್ಭಗಳೂ, ಎತ್ತರವಾದ ಹಿಮ್ಮಡಿಯುಳ್ಳವಳು ವ್ಯಭಿಚಾರಿಣಿಯೂ, ಉದ್ದವಾದ ಹಿಮ್ಮಡಿಯುಳ್ಳವಳು ದುಃಖಿನಿಯೂ ಆಗುವಳು.

ರೋಮಹೀನೇ ಸಮೇ ಸ್ನಿಗ್ಧೇ ಯಜ್ಜಂಘೇ ಕ್ರಮವರ್ತುಲೇ ।
ಸಾ ರಾಜಪತ್ನೀ ಭವತಿ ವಿಶಿರೇ ಸುಮನೋಹರೇ ॥ ೨೮ ॥
ಏಕರೋಮಾ ರಾಜಪತ್ನೀ ದ್ವಿರೋಮಾ ಚ ಸುಖಾವಹಾ ।
ತ್ರಿರೋಮಾ ರೋಮಕೂಪೇಷು ಭವೇದ್ವೈಧವ್ಯದುಃಖಭಾಕ್ ॥ ೨೯ ॥
ವೃತ್ತಂ ಪಿಶಿತಸಂಲಗ್ನಂ ಜಾನುಯುಗ್ಮಂ ಪ್ರಶಸ್ಯತೇ ।
ನಿರ್ಮಾಂಸಂ ಸ್ವೈರಚಾರಿಣ್ಯಾ ದರಿದ್ರಾಯಾಶ್ಚ ವಿಶ್ಲಥಂ ॥ ೩೦ ॥
ವಿಶಿರೈಃ ಕರಭಾಕಾರೈರೂರುಭಿರ್ಮಸೃಣೈರ್ಘನೈಃ ।
ಸುವೃತ್ತೈ ರೋಮರಹಿತೈರ್ಭವೇಯುರ್ಭೂಪವಲ್ಲಭಾಃ ॥ ೩೧ ॥
ವೈಧವ್ಯಂ ರೋಮಶೈರುಕ್ತಂ ದೌರ್ಭಾಗ್ಯಂ ಚಿಪಿಟೈರಪಿ ।
ಮಧ್ಯಚ್ಛಿದ್ರೈರ್ಮಹಾದುಃಖಂ ದಾರಿದ್ರ್ಯಂ ಕಠಿನತ್ವಚೈಃ ॥ ೩೨ ॥
ಚತುರ್ಭಿರಂಗುಲೈ ಶಸ್ತಾ ಕಟಿರ್ವಿಂಶತಿಸಂಯುತೈಃ ।
ಸಮುನ್ನತನಿತಂಬಾಢ್ಯಾ ಚತುರಸ್ರಾ ಮೃಗೀದೃಶಾಂ ॥ ೩೩ ॥

---

೨೮. ಜಂಘೆಯು ರೋಮವಿಲ್ಲದಿರುವುದೂ, ಸಮವಾದುದೂ, ಮನೋಹರವಾದುದೂ, ಗುಂಡಗಿರುವುದೂ, ಶಿರಸ್ಸಿಲ್ಲದಿರುವುದೂ ಆಗಿದ್ದರೆ ಆ ಸ್ತ್ರೀಯು ರಾಜಪತ್ನಿಯಾಗುವಳು.

೨೯. ರೋಮಕೂಪಗಳಲ್ಲಿ ಒಂದು ರೋಮವುಳ್ಳವಳು ರಾಣಿಯೂ, ಎರಡು ರೋಮಗಳುಳ್ಳವಳು ಸುಖವನ್ನುಂಟುಮಾಡುವವಳೂ, ಮೂರು ರೋಮಗಳುಳ್ಳವಳು ವಿಧವೆಯೂ ಆಗುವಳು.

೩೦. ವರ್ತುಳವೂ, ಪುಷ್ಟವೂ ಆಗಿರುವ ಮೊಣಕಾಲುಗಳು ಉತ್ತಮವಾದುವು. ವ್ಯಭಿಚಾರಿಣಿಯ ಮೊಣಕಾಲು ಮಾಂಸವಿಲ್ಲದಿರುವುದೂ, ದರಿದ್ರಳ ಮೊಣಕಾಲು ಸಡಿಲವಾದುದೂ ಆಗಿರುವುದು.

೩೧. ತುದಿಯಿಲ್ಲದಿರುವುದೂ, ನುಣುಪಾಗಿರುವುದೂ, ಗಟ್ಟಿಯಾಗಿರುವುದೂ, ವರ್ತುಳವಾಗಿರುವುದೂ, ರೋಮವಿಲ್ಲದಿರುವುದೂ ಆದ ತೊಡೆಗಳುಳ್ಳವಳು ರಾಜಪತ್ನಿಯಾಗುವಳು.

೩೨. ತೊಡೆಗಳು ಕೂದಲುಳ್ಳವುಗಳಾಗಿದ್ದರೆ ವೈಧವ್ಯವೂ, ಚಪ್ಪಟೆಯಾಗಿದ್ದರೆ ದೌರ್ಭಾಗ್ಯವೂ, ಮಧ್ಯದಲ್ಲಿ ಛಿದ್ರಗಳಾಗಿದ್ದರೆ ಅತ್ಯಂತ ದಾರಿದ್ರ್ಯವೂ ಉಂಟಾಗುವುದು.

೩೩. ಇಪ್ಪತ್ತನಾಲ್ಕು ಅಂಗುಲಗಳುಳ್ಳುದೂ, ಎತ್ತರವಾದ ನಿತಂಬವುಳ್ಳುದೂ, ಚೌಕವೂ ಆದ ಸ್ತ್ರೀಯರ ಸೊಂಟವು ಉತ್ತಮವಾದುದು.

ವಿನತಾ ಚಿಪಿಟಾ ದೀರ್ಘಾ ನಿರ್ಮಾಂಸಾ ಸಂಕಟಾ ಕಟಿಃ ।
ಹ್ರಸ್ವಾ ರೋಮಯುತಾ ನಾರ್ಯಾ ದುಃಖವೈಧವ್ಯಸೂಚಿಕಾ ॥ ೩೪ ॥
ನಿತಂಬಬಿಂಬೋ ನಾರೀಣಾಮುನ್ನತೋ ಮಾಂಸಲಃ ಪೃಥುಃ ।
ಮಹಾಭೋಗಾಯ ಸಂಪ್ರೋಕ್ತಸ್ತದನ್ಯೋಽಶರ್ಮಣೇ ಮತಃ ॥ ೩೫ ॥
ಕಪಿತ್ಥಫಲವದ್ವೃತ್ತೌ ಮೃದುಲೌ ಮಾಂಸಲೌ ಘನೌ ।
ಸ್ಫಿಚೌ ವಲಿವಿನಿರ್ಮುಕ್ತೌ ರತಿಸೌಖ್ಯವಿವರ್ಧನೌ ॥ ೩೬ ॥
ಶುಭಃ ಕಮಠಪೃಷ್ಠಾಭೋ ಗಜಸ್ಕಂಧೋಪಮೋ ಭಗಃ ।
ವಾಮೋನ್ನತಸ್ತು ಕನ್ಯಾಜಃ ಪುತ್ರಜೋ ದಕ್ಷಿಣೋನ್ನತಃ ॥ ೩೭ ॥
ಆಖುರೋಮಾ ಗೂಢಮಣಿಃ ಸುಶ್ಲಿಷ್ಟಃ ಸಂಹತಃ ಪೃಥುಃ ।
ತುಂಗಃ ಕಮಲಪರ್ಣಾಭಃ ಶುಭೋಽಶ್ವತ್ಥದಲಾಕೃತಿಃ ॥ ೩೮ ॥
ಕುರಂಗಖುರರೂಪೋ ಯಶ್ಚುಲ್ಲಿಕೋದರಸನ್ನಿಭಃ ।
ರೋಮಶೋ ವಿವೃತಾಸ್ಯಶ್ಚ ದೃಶ್ಯನಾಸೋಽತಿದುರ್ಭಗಃ ॥ ೩೯ ॥

---

೩೪. ಬಗ್ಗಿರುವುದೂ, ಚಪ್ಪಟೆಯೂ, ಉದ್ದವೂ, ಮಾಂಸವಿಲ್ಲದುದೂ, ಸಣ್ಣಗೂ, ಸಣ್ಣಕೂದಲುಳ್ಳುದೂ ಆಗಿರುವ ಸ್ತ್ರೀಯ ತೊಡೆಯು ದುಃಖವೈಧವ್ಯಗಳನ್ನು ಸೂಚಿಸುವುದು.

೩೫. ಎತ್ತರವೂ, ಪುಷ್ಟವೂ, ವಿಶಾಲವೂ ಆದ ಸ್ತ್ರೀಯರ ನಿತಂಬವು ಅತಿಶಯ ಭೋಗಗಳನ್ನೀಯುವುದು. ಇದಕ್ಕಿಂತ ಬೇರೆ ವಿಧವಾಗಿರುವುದು ದುಃಖಕ್ಕೆ ಕಾರಣವಾಗುವುದು.

೩೬. ಬೇಲದ ಹಣ್ಣಿನಂತೆ ವರ್ತುಳವೂ, ಮೃದುವೂ, ಪುಷ್ಟವೂ, ಘಟ್ಟಿಯೂ, ವಳಿಗಳಿಲ್ಲದಿರುವುದೂ ಆಗಿರುವ ಸ್ಫಿಗ್ಭಾಗಗಳು ರತಿಸೌಖ್ಯವನ್ನು ಹೆಚ್ಚಿಸುವುವು.

೩೭. ಆಮೆಯ ಬೆನ್ನಿನಂತಿರುವುದೂ, ಆನೆಯ ಹೆಗಲಿನಂತಿರುವುದೂ ಆದ ಭಗವು ಮಂಗಳಕರವಾದುದು. ಅದು ಎಡಭಾಗದಲ್ಲಿ ಎತ್ತರವಾಗಿದ್ದರೆ ಕನ್ಯೆಯೂ, ಬಲಭಾಗದಲ್ಲಿ ಎತ್ತರವಾಗಿದ್ದರೆ ಪುತ್ರನೂ ಜನಿಸುವನು.

೩೮. ಇಲಿಯ ಕೂದಲಿನಂತೆ ಕೂದಲುಳ್ಳುದೂ, ಗೂಢವಾದ ಮಣಿಯುಳ್ಳುದೂ, ಅಂಟಿಕೊಂಡಿರುವುದೂ, ಗಟ್ಟಿಯಾಗಿರುವುದೂ, ವಿಶಾಲವೂ, ಎತ್ತರವೂ, ತಾವರೆಯೆಲೆಯಂತೆ ಕಾಂತಿಯುಳ್ಳುದೂ, ಅಶ್ವತ್ಥದ ಎಲೆಯಂತೆ ಆಕೃತಿಯುಳ್ಳುದೂ ಆಗಿರುವ ಭಗವು ಶುಭಕರವು.

೩೯. ಜಿಂಕೆಯ ಗೊರಸಿನಂತಿರುವುದೂ, ಒಲೆಯ ಮಧ್ಯದಂತಿರುವುದೂ, ಹೆಚ್ಚು ಕೂದಲುಳ್ಳುದೂ, ಬಾಯ್ದೆರೆದಿರುವುದೂ, ಕಾಣುತ್ತಿರುವ ಮಣಿಯುಳ್ಳುದೂ ಆದ ಭಗವು ದೌರ್ಭಾಗ್ಯವನ್ನು ಸೂಚಿಸುವುದು.

ಶಂಖಾವರ್ತೋ ಭಗೋ ಯಸ್ಯಾಃ ಸಾ ಗರ್ಭಮಿಹ ನೇಚ್ಛತಿ ।<br>
ಚಿಪಿಟಃ ಖರ್ಪರಾಕಾರಃ ಕಿಂಕರೀಪದದೋ ಭಗಃ ॥ ೪೦ ॥<br>
ವಂಶವೇತಸಪತ್ರಾಭೋ ಗಜರೋಮೋಚ್ಚನಾಸಿಕಃ ।<br>
ವಿಕಟಃ ಕುಟಿಲಾಕಾರೋ ಲಂಬಗಲ್ಲಸ್ತಥಾಽಶುಭಃ ॥ ೪೧ ॥<br>
ಭಗಸ್ಯ ಭಾಲಂ ಜಘನಂ ವಿಸ್ತೀರ್ಣಂ ತುಂಗಮಾಂಸಲಂ ।<br>
ಮೃದುಲಂ ಮೃದುಲೋಮಾಢ್ಯಂ ದಕ್ಷಿಣಾವರ್ತಮಾಡಿತಂ ॥ ೪೨ ॥<br>
ವಾಮಾವರ್ತಂ ಚ ನಿರ್ಮಾಂಸಂ ಭುಗ್ನಂ ವೈಧವ್ಯಸೂಚಕಂ ।<br>
ಸಂಕಟಸ್ಥಪುಟಂ ರೂಕ್ಷಂ ಜಘನಂ ದುಃಖದಂ ಸದಾ ॥ ೪೩ ॥<br>
ಬಸ್ತಿಃ ಪ್ರಶಸ್ತಾ ವಿಪುಲಾ ಮೃದ್ವೀ ಸ್ತೋಕಸಮುನ್ನತಾ ।<br>
ರೋಮಶಾ ಚ ಶಿರಾಲಾ ಚ ರೇಖಾಂಕಾ ನೈವ ಶೋಭನಾ ॥ ೪೪ ॥<br>
ಗಂಭೀರಾ ದಕ್ಷಿಣಾವರ್ತಾ ನಾಭಿಸ್ಸ್ಯಾತ್ಸುಖಸಂಪದೇ ।<br>
ವಾಮಾವರ್ತಾ ಸಮುತ್ತಾನಾ ವ್ಯಕ್ತಗ್ರಂಥಿರ್ನ ಶೋಭನಾ ॥ ೪೫ ॥<br>
ಸೂತೇ ಸುತಾನ್ಬಹೂನ್ನಾರೀ ಪೃಥುಕುಕ್ಷಿಃ ಸುಖಾಸ್ಪದಂ ।<br>
ಕ್ಷಿತೀಶಂ ಜನಯೇತ್ಪುತ್ರಂ ಮಂಡೂಕಾಭೇನ ಕುಕ್ಷಿಣಾ ॥ ೪೬ ॥

---

೪೦. ಶಂಖದಂತಿರುವ ಭಗವುಳ್ಳವಳು ಬಂಜೆಯಾಗುವಳು. ಚಪ್ಪಟೆಯೂ, ಒಡೆದ ಮಡಿಕೆಯಂತಿರುವುದೂ ಆದ ಭಗವು ದಾಸ್ಯವನ್ನೀಯುವುದು.

೪೧. ಬಿದಿರು, ಜೊಂಡು ಇವುಗಳ ಎಲೆಯಂತಿರುವುದೂ, ಆನೆಯ ಕೂದಲಿನಂತೆ ಕೂದಲುಳ್ಳುದೂ, ಎತ್ತರವಾದ ಮೂಗುಳ್ಳುದೂ, ವಿಶಾಲವೂ, ವಕ್ರಾಕಾರವೂ, ಜೋಲಾಡುವ ಕಪೋಲವುಳ್ಳುದೂ ಆದ ಭಗವು ಅಶುಭಕರವು.

೪೨. ಭಗದ ಹಣೆ ಮತ್ತು ಜಘನಗಳು ವಿಸ್ತೀರ್ಣವೂ, ಎತ್ತರವೂ, ಪುಷ್ಟವೂ, ಮೃದುವೂ, ಮೃದುವಾದ ರೋಮಗಳುಳ್ಳುದೂ, ಬಲಮುಖವಾಗಿ ಸುಳಿಯುಳ್ಳುದೂ ಆಗಿದ್ದರೆ ಉತ್ತಮವು.

೪೩. ಎಡಸುಳಿಯುಳ್ಳುದೂ, ಮಾಂಸವಿಲ್ಲದುದೂ, ಬಗ್ಗಿರುವುದೂ ಆದ ಭಗವು ವೈಧವ್ಯವನ್ನು ಸೂಚಿಸುವುದು. ಇಕ್ಕಟ್ಟೂ, ಎತ್ತರ, ತಗ್ಗೂ, ಒರಟೂ ಆದ ಜಘನವು ಯಾವಾಗಲೂ ದುಃಖವನ್ನು ಕೊಡುವುದು.

೪೪. ವಿಶಾಲವೂ, ಮೃದುವೂ, ಸ್ವಲ್ಪ ಎತ್ತರವೂ ಆದ ಹೊಕ್ಕಳಿನ ಕೆಳಭಾಗವು ಶ್ರೇಷ್ಠವಾದುದು. ಹೆಚ್ಚು ಕೂದಲುಳ್ಳುದೂ, ನಾಡಿಗಳುಳ್ಳುದೂ, ರೇಖೆಗಳುಳ್ಳುದೂ ಆದ ಬಸ್ತಿಯು ಮಂಗಳಕರವಲ್ಲ.

೪೫. ಆಳವೂ, ಬಲಮುಖವಾದ ಸುಳಿಯುಳ್ಳುದೂ ಆದ ಹೊಕ್ಕಳು ಸುಖಸಂಪತ್ತುಗಳನ್ನು ಕೊಡುವುದು. ಎಡಮುಖವಾದ ಸುಳಿಯುಳ್ಳುದೂ, ಎತ್ತರವಾದುದೂ, ಸ್ಪಷ್ಟವಾದ ಗಂಟುಳ್ಳುದೂ ಆದ ನಾಭಿಯು ಮಂಗಳಕರವಾದುದು.

೪೬. ವಿಶಾಲವಾದ ಹೊಟ್ಟೆಯುಳ್ಳ ಹೆಂಗಸು ಅನೇಕ ಪುತ್ರರನ್ನು ಹಡೆಯು

**ಉನ್ನತೇನ ವಲೀಭಾಜಾ ಸಾವರ್ತೇನಾಽಪಿ ಕುಕ್ಷಿಣಾ ।**
**ವಂಧ್ಯಾ ಪ್ರವ್ರಜಿತಾ ದಾಸೀ ಕ್ರಮಾದ್ಯೋಷಾ ಭವೇದಿಹ ॥ ೪೭ ॥**
**ಸಮೈಃ ಸಮಾಂಸೈರ್ಮೃದುಭಿರ್ಯೋಷಿನ್ಮಗ್ನಾಸ್ಥಿಭಿಃ ಶುಭೈಃ ।**
**ಪಾರ್ಶ್ವೈಃ ಸೌಭಾಗ್ಯಸುಖಯೋರ್ನಿಧಾನಂ ಸ್ಯಾದಸಂಶಯಂ ॥ ೪೮ ॥**
**ಯಸ್ಯಾ ದೃಶ್ಯಶಿರೇ ಪಾರ್ಶ್ವೇ ಉನ್ನತೇ ರೋಮಸಂಯುತೇ ।**
**ನಿರಪತ್ಯಾ ಚ ದುಃಶೀಲಾ ಸಾ ಭವೇದ್ದುಃಖಶೇವಧಿಃ ॥ ೪೯ ॥**
**ಉದರೇಣಾಽತಿತುಚ್ಛೇನ ವಿಶಿರೇಣ ಮೃದುತ್ವಚಾ ।**
**ಯೋಷಿದ್ಭವತಿ ಭೋಗಾಢ್ಯಾ ನಿತ್ಯಂ ಮಿಷ್ಟಾನ್ನಸೇವಿನೀ ॥ ೫೦ ॥**
**ಕುಂಭಾಕಾರಂ ದರಿದ್ರಾಯಾ ಜಠರಂ ಚ ಮೃದಂಗವತ್ ।**
**ಕೂಷ್ಮಾಂಡಾಭಂ ಯವಾಭಂ ಚ ದುಷ್ಪೂರಂ ಜಾಯತೇ ಸ್ತ್ರಿಯಃ ॥ ೫೧ ॥**
**ಸುವಿಶಾಲೋದರೀ ನಾರೀ ನಿರಪತ್ಯಾ ಚ ದುರ್ಭಗಾ ।**
**ಪ್ರಲಂಬಜಠರಾ ಹಂತಿ ಶ್ವಶುರಂ ಚಾಽಪಿ ದೇವರಂ ॥ ೫೨ ॥**

---

ವಳು. ಕಪ್ಪೆಯಂತಿರುವ ಹೊಟ್ಟೆಯುಳ್ಳವಳು ಸುಖಿಯಾದ ರಾಜನಾಗುವ ಪುತ್ರನನ್ನು ಪಡೆಯುವಳು.

೪೭. ಎತ್ತರವೂ, ಸುಕ್ಕುಳ್ಳದೂ, ಸುಳಿಯುಳ್ಳದೂ ಆದ ಹೊಟ್ಟೆಯುಳ್ಳ ಹೆಂಗಸರು ಕ್ರಮವಾಗಿ ಬಂಜೆಯರೂ, ಸನ್ಯಾಸಿನಿಯರೂ, ಸೇವಕರೂ ಆಗುವರು.

೪೮. ಸಮವೂ, ಮಾಂಸವುಳ್ಳದೂ, ಮೃದುವೂ, ಅಡಗಿರುವ ಮೂಳೆಯುಳ್ಳದೂ, ಮಂಗಳಕರವೂ ಆದ ಪಾರ್ಶ್ವಗಳುಳ್ಳ ಹೆಂಗಸು ಸುಖಸೌಭಾಗ್ಯಗಳಿಗೆ ಕಾರಣಗಳಾಗುವಳು.

೪೯. ಕಾಣುತ್ತಿರುವ ನಾಡಿಗಳುಳ್ಳದೂ, ಎತ್ತರವೂ, ರೋಮಗಳುಳ್ಳದೂ ಆದ ಪಾರ್ಶ್ವಗಳುಳ್ಳ ಸ್ತ್ರೀಯು ಮಕ್ಕಳಿಲ್ಲದವಳೂ, ಕೆಟ್ಟಸ್ವಭಾವವುಳ್ಳವಳೂ, ದುಃಖಕ್ಕೆ ಆಶ್ರಯಳೂ ಆಗುವಳು.

೫೦. ಬಹಳ ಸಣ್ಣದೂ, ನರಗಳಿಲ್ಲದಿರುವುದೂ, ಮೃದುವಾದ ತೊಗಲುಳ್ಳದೂ ಆದ ಹೊಟ್ಟೆಯಿಂದ ಹೆಂಗಸು ಯಾವಾಗಲೂ ಭೋಗಯುಕ್ತಳೂ, ಮೃಷ್ಟಾನ್ನವನ್ನು ಭುಂಜಿಸುವವಳೂ ಆಗುವಳು.

೫೧. ಬಡವಳಾದ ಹೆಂಗಸಿನ ಹೊಟ್ಟೆಯು ಮಡಕೆ ಮದ್ದಳೆ ಕುಂಬಳಕಾಯಿಗಳ ಆಕಾರವುಳ್ಳದಾಗಿ, ಎಷ್ಟು ಆಹಾರವನ್ನು ಹಾಕಿದರೂ ತುಂಬಲಾಗದುದಾಗಿರುವುದು.

೫೨. ವಿಶಾಲವಾದ ಹೊಟ್ಟೆಯುಳ್ಳ ಹೆಂಗಸು ಬಂಜೆಯೂ, ದುರ್ಭಗಳೂ ಆಗುವಳು. ಜೋಲಾಡುವ ಹೊಟ್ಟೆಯುಳ್ಳವಳು ಮಾವನನ್ನೂ, ಭಾವನನ್ನೂ ಕೊಲ್ಲುವಳು.

ಮಧ್ಯಕ್ಷಾಮಾ ಚ ಸುಭಗಾ ಭೋಗಾಢ್ಯಾ ಸವಲಿತ್ರಯಾ ।
ಋಜ್ವೀ ತನ್ವೀ ಚ ರೋಮಾಲೀ ಯಸ್ಯಾಃ ಸಾ ಶರ್ಮನರ್ಮಭೂಃ ॥
ಕಪಿಲಾ ಕುಟಿಲಾ ಸ್ಥೂಲಾ ವಿಚ್ಛಿನ್ನಾ ರೋಮರಾಜಿಕಾ ।
ಚೌರವೈಧವ್ಯದೌರ್ಭಾಗ್ಯಂ ವಿದಧ್ಯಾದಿಹ ಯೋಷಿತಾಂ ॥ ೫೪ ॥
ನಿರ್ಲೋಮಹೃದಯಂ ಯಸ್ಯಾಃ ಸಮಂ ನಿಮ್ನತ್ವವರ್ಜಿತಂ ।
ಐಶ್ವರ್ಯಂ ಚಾಽಪ್ಯವೈಧವ್ಯಂ ಪ್ರಿಯಂ ಪ್ರೇಮ ಚ ಸಾ ಲಭೇತ್ ॥ ೫೫ ॥
ವಿಸ್ತೀರ್ಣಹೃದಯಾ ಯೋಷಾ ಪುಂಶ್ಚಲೀ ನಿರ್ದಯಾ ತಥಾ ।
ಉದ್ಭಿನ್ನರೋಮಹೃದಯಾ ಪತಿಂ ಹಂತಿ ವಿನಿಶ್ಚಿತಂ ॥ ೫೬ ॥
ಅಷ್ಟಾದಶಾಂಗುಲತತಮುರಃ ಪೀವರಮುನ್ನತಂ ।
ಸುಖಾಯ ದುಃಖಾಯ ಭವೇದ್ರೋಮಶಂ ವಿಷಮಂ ಪೃಥು ॥ ೫೭ ॥
ಘನೌ ವೃತ್ತೌ ದೃಢೌ ಪೀನೌ ಸಮೌ ಶಸ್ತೌ ಪಯೋಧರೌ ।
ಸ್ಥೂಲಾಗ್ರೌ ವಿರಲೌ ಶುಷ್ಕೌ ವಾಮೋರೂಣಾಂ ನ ಶರ್ಮದೌ ॥ ೫೮ ॥

---

೫೩. ಕೃಶಮಧ್ಯಳು ಸುಭಗಳೂ, ತ್ರಿವಳಿಗಳುಳ್ಳವಳು ಭೋಗಯುಕ್ತಳೂ ಆಗುವಳು. ನೆಟ್ಟಗೂ ಸ್ವಲ್ಪವೂ ಆದ ರೋಮವುಳ್ಳವಳು ಸುಖನರ್ಮಗಳಿಗೆ ಆಶ್ರಯಳಾಗುವಳು.

೫೪. ಹಳದಿಯ ವಕ್ರವೂ, ದಪ್ಪವೂ, ವಿಚ್ಛಿನ್ನವೂ ಆಗಿರುವ ರೋಮದ ಸಾಲು ಸ್ತ್ರೀಯರಿಗೆ ಚೌರ್ಯ, ವೈಧವ್ಯ, ದೌರ್ಭಾಗ್ಯಗಳನ್ನುಂಟುಮಾಡುವುವು.

೫೫. ಸಮವೂ, ಹಳ್ಳವಾಗಿರುವುದೂ, ರೋಮವಿಲ್ಲದಿರುವುದೂ ಆದ ಹೃದಯವುಳ್ಳ ಸ್ತ್ರೀಯು ಐಶ್ವರ್ಯ, ಸೌಮಂಗಲ್ಯ, ಪ್ರಿಯನ ಪ್ರೇಮಗಳನ್ನು ಹೊಂದುವಳು.

೫೬. ವಿಶಾಲವಾದ ಎದೆಯುಳ್ಳ ಹೆಂಗಸು ವ್ಯಭಿಚಾರಿಣಿಯೂ, ದಯೆಯಿಲ್ಲದವಳೂ ಆಗುವಳು. ರೋಮಾಂಚಗೊಂಡ ಎದೆಯುಳ್ಳವಳು, ನಿಶ್ಚಯವಾಗಿಯೂ ಪತಿಯನ್ನು ಕೊಲ್ಲುವಳು.

೫೭. ಹದಿನೆಂಟು ಅಂಗುಲಗಳ ವಿಸ್ತಾರವೂ, ಪುಷ್ಟವೂ, ಎತ್ತರವೂ ಆದ ಎದೆಯುಳ್ಳವಳು ಸುಖಿಗೊಳ್ಳುವಳು. ರೋಮವುಳ್ಳುದೂ, ಸಮವಾಗಿಲ್ಲದಿರುವುದೂ ಆದ ಎದೆಯು ದುಃಖವನ್ನೀಯುವುದು.

೫೮. ಗಟ್ಟಿಯೂ, ಗುಂಡಗೂ, ಪುಷ್ಟವೂ, ಸಮವೂ ಆಗಿರುವ ಕುಚಗಳು ಉತ್ತಮವಾದುವು. ಕೊನೆಯಲ್ಲಿ ದಪ್ಪಗೂ, ವಿರಳವೂ, ಒಣಗಿರುವುದೂ, ಆಗಿರುವ ಕುಚಗಳು ಸ್ತ್ರೀಯರಿಗೆ ಸುಖಕರವಲ್ಲ.

ದಕ್ಷಿಣೋನ್ನತವಕ್ಷೋಜಾ ಪುತ್ರಿಣೀತ್ವಗ್ರಣೀರ್ಮತಾ ।
ವಾಮೋನ್ನತಕುಚಾ ಸೂತೇ ಕನ್ಯಾಂ ಸೌಭಾಗ್ಯಸುಂದರೀಂ ॥ ೫೯ ॥
ಅರಘಟ್ಟಿಘಟೀ ತುಲ್ಯೌ ಕುಚೌ ದೌಃಶೀಲ್ಯಸೂಚಕೌ ।
ಪೀವರಾಂಸೌ ಸಾಂತರಾಲೌ ಪೃಥೂಪಾಂತೌ ನ ಶೋಭನೌ ॥ ೬೦ ॥
ಮೂಲೇ ಸ್ಥೂಲೌ ಕ್ರಮಕೃಶಾವಗ್ರೇ ತೀಕ್ಷ್ಣೌ ಪಯೋಧರೌ ।
ಸುಖದೌ ಪೂರ್ವಕಾಲೇ ತು ಪಶ್ಚಾದತ್ಯಂತದುಃಖದೌ ॥ ೬೧ ॥
ಸುದೃಢಂ ಚೂಚುಕಯುಗಂ ಶಸ್ತಂ ಶ್ಯಾಮಂ ಸುವರ್ತುಲಂ ।
ಅಂತರ್ಮಗ್ನಂ ಚ ದೀರ್ಘಂ ಚ ಕೃಶಂ ಕ್ಲೇಶಾಯ ಜಾಯತೇ ॥ ೬೨ ॥
ಪೀವರಾಭ್ಯಾಂ ಚ ಜತ್ರುಭ್ಯಾಂ ಧನಧಾನ್ಯನಿಧಿರ್ವಧೂಃ ।
ಶ್ಲಥಾಽಸ್ಥಿಭ್ಯಾಂ ಚ ನಿಮ್ನಾಭ್ಯಾಂ ವಿಷಮಾಭ್ಯಾಂ ದರಿದ್ರಿಣೀ ॥ ೬೩ ॥
ಅಬದ್ಧಾವನತೌ ಸ್ಕಂಧಾವದೀರ್ಘಾವಕೃಶೌ ಶುಭೌ ।
ವಕ್ರೌ ಸ್ಥೂಲೌ ಚ ರೋಮಾಢ್ಯೌ ಪ್ರೇಷ್ಯವೈಧವ್ಯಸೂಚಕೌ ॥ ೬೪ ॥

---

೫೯. ದೊಡ್ಡದಾಗಿರುವ ಬಲಕುಚವುಳ್ಳವಳು ಪುತ್ರರನ್ನು ಪ್ರಸವಿಸುವವಳೂ ಶ್ರೇಷ್ಠಳೂ ಆಗುವಳು. ಎಡಕುಚವು ಎತ್ತರವಾಗುಳ್ಳವಳು ಸುಂದರಿಯಾದ ಕನ್ಯೆಯನ್ನು ಪ್ರಸವಿಸುವಳು.

೬೦. ಘಟೀಯಂತ್ರದ ಗಂಗಳದಂತಿರುವ ಸ್ತನಗಳು ದುಸ್ಸ್ವಭಾವವನ್ನು ಸೂಚಿಸುವುವು. ಪುಷ್ಟವಾದ ಮುಖವುಳ್ಳವೂ, ವಿರಳವೂ, ವಿಶಾಲವಾದ ಉಪಾಂತಪ್ರದೇಶವುಳ್ಳವೂ ಆದ ಕುಚಗಳು ಮಂಗಳಕರಗಳಲ್ಲ.

೬೧. ಬುಡದಲ್ಲಿ ದಪ್ಪಗೂ, ಕ್ರಮವಾಗಿ ಸಣ್ಣಗೂ, ಕೊನೆಯಲ್ಲಿ ತೀಕ್ಷ್ಣವೂ ಆದ ಕುಚಗಳು ಮೊದಲು ಸುಖವನ್ನು ಕೊಡುವುವೂ, ಅನಂತರ ಅತ್ಯಂತ ದುಃಖವನ್ನುಂಟುಮಾಡುವುವೂ ಆಗುವುವು.

೬೨. ದೃಢವೂ, ಕಪ್ಪಗೂ, ವರ್ತುಳವೂ ಆಗಿರುವ ಕುಚಾಗ್ರಗಳು ಉತ್ತಮವಾದುವು. ಒಳಗೆ ಇಳಿದಿರುವುದೂ, ಉದ್ದವಾಗಿರುವುದೂ, ಕೃಶವೂ ಆಗಿರುವ ಕುಚಾಗ್ರಗಳು ದುಃಖವನ್ನುಂಟುಮಾಡುವುವು.

೬೩. ಸ್ತ್ರೀಯು ಪುಷ್ಟವಾಗಿರುವ ಭುಜಶಿರಸ್ಸುಗಳ ಸಂಧಿಗಳಿಂದ ಧನಧಾನ್ಯಗಳಿಗೆ ಆಶ್ರಯಳಾಗುವಳು. ಸಡಿಲವಾದ ಮೂಳೆಗಳುಳ್ಳವೂ, ಹಳ್ಳವಾಗಿರುವುವೂ, ವಿಷಮವೂ ಆಗಿರುವ ಆ ಭುಜಶಿರಸ್ಸುಗಳಿಂದ ಬಡವಳಾಗುವಳು.

೬೪. ಸಡಿಲವೂ, ಬಗ್ಗಿರುವುದೂ, ಕುಳ್ಳಗೂ, ಪುಷ್ಟವೂ ಆಗಿರುವ ಹೆಗಲುಗಳು ಶುಭಕರಗಳು. ವಕ್ರವೂ, ದಪ್ಪಗೂ, ರೋಮವುಳ್ಳವೂ ಆದ ಹೆಗಲುಗಳು ದಾಸ್ಯವೈಧವ್ಯಗಳನ್ನು ಸೂಚಿಸುವುವು.

ನಿಗೂಢಸಂಧೀ ಸ್ರಸ್ತಾಗ್ರೌ ಶುಭಾವಂಸೌ ಸುಸಂಹತೌ ।
ವೈಧವ್ಯದೌ ಸಮುಚ್ಚಾಗ್ರೌ ನಿರ್ಮಾಂಸಾವತಿದುಃಖದೌ ॥ ೧೫ ॥
ಕಕ್ಷೇ ಸುಸೂಕ್ಷ್ಮರೋಮೇ ತು ತುಂಗೇ ಸ್ನಿಗ್ಧೇ ಚ ಮಾಂಸಲೇ ।
ಶಸ್ತೇ ನ ಶಸ್ತೇ ಗಂಭೀರೇ ಶಿರಾಲೇ ಸ್ವೇದಮೇದುರೇ ॥ ೧೬ ॥
ಸ್ಯಾತಾಂ ದೋಷೌ ಸುನಿರ್ದೋಷೌ ಗೂಢಾಸ್ಥಿಗ್ರಂಥಿಕೋಮಲೌ ।
ವಿಶಿರೌ ಚ ವಿರೋಮಾಣೌ ಸರಲೌ ಹರಿಣೀದೃಶಾಂ ॥ ೧೭ ॥
ವೈಧವ್ಯಂ ಸ್ಥೂಲರೋಮಾಣೌ ಹ್ರಸ್ವೌ ದೌರ್ಭಾಗ್ಯಸೂಚಕೌ ।
ಪರಿಕ್ಲೇಶಾಯ ನಾರೀಣಾಂ ಪರಿದೃಶ್ಯಶಿರೌ ಭುಜೌ ॥ ೧೮ ॥
ಅಂಭೋಜಮುಕುಲಾಕಾರಮಂಗುಷ್ಠಾಂಗುಲಿಸಂಮುಖಂ ।
ಹಸ್ತದ್ವಯಂ ಮೃಗಾಕ್ಷೀಣಾಂ ಬಹುಭೋಗಾಯ ಜಾಯತೇ ॥ ೧೯ ॥
ಮೃದುಮಧ್ಯೋನ್ನತಂ ರಕ್ತಂ ತಲಂ ಪಾಣ್ಯೋರರಂಧ್ರಕಂ ।
ಪ್ರಶಸ್ತಂ ಶಸ್ತರೇಖಾಢ್ಯಮಲ್ಪರೇಖಂ ಶುಭಶ್ರಿಯಂ ॥ ೨೦ ॥

---

೧೫. ಕಾಣದಿರುವ ಸಂಧಿಗಳುಳ್ಳವೂ, ಜಾರಿದ ಕೊನೆಯುಳ್ಳವೂ, ಸೇರಿರುವುವೂ ಆಗಿರುವ ಹೆಗಲುಗಳು ಶುಭವನ್ನುಂಟುಮಾಡುವುವು. ಎತ್ತರವಾದ ಹೆಗಲುಗಳ ಕೊನೆಯು ವೈಧವ್ಯವನ್ನು ಸೂಚಿಸುತ್ತದೆ. ಮಾಂಸವಿಲ್ಲದುವು ಅತ್ಯಂತ ದುಃಖದಾಯಕಗಳು.

೧೬. ಸಣ್ಣಕೂದಲುಳ್ಳವೂ, ಎತ್ತರವೂ, ನುಣುಪೂ, ಪುಷ್ಟವೂ ಆದ ಕೊಂಕಳುಗಳು ಉತ್ತಮವಾದುವು. ಗಂಭೀರವೂ, ನರಗಳುಳ್ಳದೂ, ಬೆವರುಳ್ಳದೂ ಆದ ಕೊಂಕಳು ಶ್ರೇಷ್ಠವಲ್ಲ.

೧೭. ಗಂಟುಗಳು ಕಾಣಿಸದೆ ಕೋಮಲಗಳೂ, ನರ ಮತ್ತು ರೋಮಗಳಿಲ್ಲದುವೂ, ನೆಟ್ಟಗೂ ಇರುವ ಸ್ತ್ರೀಯರ ತೋಳುಗಳು ನಿರ್ದುಷ್ಟವಾದುವು.

೧೮. ಸ್ಥೂಲರೋಮಗಳುಳ್ಳ ಭುಜಗಳು ವೈಧವ್ಯವನ್ನೂ, ಕುಳ್ಳಗಿರುವುವು ದೌರ್ಭಾಗ್ಯವನ್ನೂ ಸೂಚಿಸುವುವು. ಹೊರಕಾಣುತ್ತಿರುವ ನರಗಳುಳ್ಳ ಸ್ತ್ರೀಯರ ತೋಳುಗಳು ಕ್ಲೇಶವನ್ನುಂಟುಮಾಡುವುವು.

೧೯. ಸರಿಯಾದ ಬೆರಳುಗಳುಳ್ಳವೂ, ಕಮಲದ ಮೊಗ್ಗಿನಂತಿರುವುವೂ ಆದ ಸ್ತ್ರೀಯರ ಹಸ್ತಗಳು ಅತಿಶಯಭೋಗಗಳನ್ನೀಯುವುವು.

೨೦. ಮೃದುವಾದ ಮಧ್ಯವುಳ್ಳದೂ, ಎತ್ತರವಾದುದೂ, ಕೆಂಪಗಿರುವುದೂ, ರಂಧ್ರವಿಲ್ಲದಿರುವುದೂ, ಉತ್ತಮ ರೇಖೆಗಳುಳ್ಳದೂ, ಸ್ವಲ್ಪರೇಖೆಗಳುಳ್ಳದೂ, ಮಂಗಳಕರಕಾಂತಿಯುಳ್ಳದೂ ಆದ ಅಂಗೈಗಳು ಉತ್ತಮವಾದುವು.

ವಿಧವಾ ಬಹುರೇಖೇಣ ವಿರೇಖೇಣ ದರಿದ್ರಿಣೀ ।
ಭಿಕ್ಷುಕೀ ಸುಶಿರಾಢ್ಯೇನ ನಾರೀ ಕರತಲೇನ ವೈ ॥ ೭೧ ॥
ವಿರೋಮಮವಿಶಿರಂ ಶಸ್ತಂ ಪಾಣಿಪೃಷ್ಠಂ ಸಮುನ್ನತಂ ।
ವೈಧವ್ಯಹೇತುರೋಮಾಢ್ಯಂ ನಿರ್ಮಾಂಸಂ ಸ್ನಾಯುಮುತ್ಸೃಜೇತ್ ॥ ೭೨ ॥
ರಕ್ತಾ ವ್ಯಕ್ತಾ ಗಭೀರಾಚ ಸ್ನಿಗ್ಧಾ ಪೂರ್ಣಾಚ ವರ್ತುಲಾ ।
ಕರರೇಖಾಂಗನಾಯಾಃ ಸ್ಯಾಚ್ಛುಭಾ ಭಾಗ್ಯಾನುಸಾರತಃ ॥ ೭೩ ॥
ಮತ್ಸ್ಯೇನ ಸುಭಗಾ ನಾರೀ ಸ್ವಸ್ತಿಕೇನ ವಸುಪ್ರದಾ ।
ಪದ್ಮೇನ ಭೂಪತೇಃ ಪತ್ನೀ ಜನಯೇದ್ಭೂಪತಿಂ ಸುತಂ ॥ ೭೪ ॥
ಚಕ್ರವರ್ತಿಸ್ತ್ರಿಯಾಃ ಪಾಣೌ ನಂದ್ಯಾವರ್ತಃ ಪ್ರದಕ್ಷಿಣಃ ।
ಶಂಖಾತಪತ್ರಕಮಠಾ ನೃಪಮಾತೃತ್ವಸೂಚಕಾಃ ॥ ೭೫ ॥
ತುಲಾಮಾನಾಕೃತೀ ರೇಖೇ ವಣಿಕ್ಪತ್ನೀತ್ವಹೇತುಕೇ ।
ಗಜವಾಜಿವೃಷಾಕಾರಾಃ ಕರೇ ವಾಮೇ ಮೃಗೀದೃಶಾಂ ॥ ೭೬ ॥
ರೇಖಾ ಪ್ರಾಸಾದ ವಜ್ರಾಭಾ ಬ್ರೂಯುಸ್ತೀರ್ಥಕರಂ ಸುತಂ ।
ಕೃಷೀವಲಸ್ಯ ಪತ್ನೀ ಸ್ಯಾಚ್ಛಕಟೇನ ಯುಗೇನ ವಾ ॥ ೭೭ ॥

---

೭೧. ಹೆಂಗಸು ಅಂಗೈಯಲ್ಲಿ ಹೆಚ್ಚುಗೆರೆಗಳಿದ್ದರೆ ವಿಧವೆಯೂ, ರೇಖೆಗಳಿಲ್ಲದಿದ್ದರೆ ಬಡವಳೂ, ನರಗಳಿದ್ದರೆ ಭಿಕ್ಷುಕಿಯೂ ಆಗುವಳು.

೭೨. ರೋಮ, ನರಗಳಿಲ್ಲದ ಎತ್ತರವಾಗಿರುವ ಕೈಯ ಹಿಂಭಾಗವು ಉತ್ತಮವಾದುದು. ಅದು ರೋಮವುಳ್ಳುದಾಗಿದ್ದರೆ ವೈಧವ್ಯಕ್ಕೆ ಕಾರಣವಾಗುವುದು. ಮಾಂಸವಿಲ್ಲದೆ ನರಗಳಿಂದ ಮಾತ್ರ ತುಂಬಿದ್ದರೆ ತ್ಯಾಜ್ಯವು.

೭೩. ಕೆಂಪಗಿರುವುದೂ, ಸ್ಪಷ್ಟವಾಗಿ ಕಾಣಿಸುವುದೂ, ಆಳವಾಗಿರುವುದೂ, ನುಣುಪಾಗಿರುವುದೂ, ಪೂರ್ಣವೂ, ವರ್ತುಲವೂ ಆದ ಹೆಂಗಸಿನ ಹಸ್ತರೇಖೆಯು ಭಾಗ್ಯಾನುಸಾರದಿಂದ ಶುಭಕರವಾಗುವುದು.

೭೪. ಹೆಂಗಸು ಮತ್ಸ್ಯರೇಖೆಯಿಂದ ಸೌಭಾಗ್ಯವುಳ್ಳವಳೂ, ಸ್ವಸ್ತಿಕರೇಖೆಯಿಂದ ಧನವನ್ನು ಕೊಡುವವಳೂ, ಪದ್ಮರೇಖೆಯಿಂದ ದೊರೆಯ ಹೆಂಡತಿಯೂ, ದೊರೆಯಾಗುವ ಮಗನನ್ನು ಪ್ರಸವಿಸುವವಳೂ ಆಗುವಳು.

೭೫. ಚಕ್ರವರ್ತಿಯ ಪತ್ನಿಯ ಹಸ್ತದಲ್ಲಿ ಪ್ರದಕ್ಷಿಣಾಕಾರವಾದ ನಂದ್ಯಾವರ್ತರೇಖೆಯೂ, ರಾಜಮಾತೆಯ ಕೈಯಲ್ಲಿ ಶಂಖ, ಛತ್ರ, ಆಮೆಗಳ ರೇಖೆಗಳೂ ಇರುವುವು.

೭೬–೭೭. ತಕ್ಕಡಿಯ ರೇಖೆಯು, ವೈಶ್ಯಪತ್ನಿಯಾಗಲು ಕಾರಣವಾಗುವುದು. ಯಾವ ಸ್ತ್ರೀಯ ಎಡಗೈಯಲ್ಲಿ ಆನೆ, ಕುದುರೆ, ಎತ್ತು, ಪ್ರಾಸಾದ, ವಜ್ರಗಳ ಆಕೃತಿಯ ರೇಖೆಯಿರುವುದೊ, ಅವಳು ಶಾಸ್ತ್ರವನ್ನು ನಿರ್ಮಿಸುವ

ಚಾಮರಾಂಕುಶಕೋದಂಡೈ ರಾಜಪತ್ನೀ ಭವೇದ್ಧ್ರುವಂ ।
ಅಂಗುಷ್ಠಮೂಲಾನ್ನಿರ್ಗತ್ಯ ರೇಖಾ ಯಾತಿ ಕನಿಷ್ಠಿಕಾಂ ॥ ೭೮ ॥
ಯದಿ ಸಾ ಪತಿಹಂತ್ರೀ ಸ್ಯಾದ್ದೂರತಸ್ತಾಂ ತ್ಯಜೇತ್ಸುಧೀಃ ।
ತ್ರಿಶೂಲಾಽಸಿಗದಾಶಕ್ತಿದುಂದುಭ್ಯಾಕೃತಿರೇಖಯಾ ।
ನಿತಂಬಿನೀ ಕೀರ್ತಿಮತೀ ತ್ಯಾಗೇನ ಪೃಥಿವೀತಲೇ ॥ ೭೯ ॥
ಕಂಕಜಂಬೂಕಮಂಡೂಕವೃಕವೃಶ್ಚಿಕಭೋಗಿನಃ ।
ರಾಸಭೋಷ್ಟ್ರಬಿಡಾಲಾಃ ಸ್ಯುಃ ಕರಸ್ಥಾ ದುಃಖದಾಃ ಸ್ತ್ರಿಯಃ ॥ ೮೦ ॥
ಶುಭದಃ ಸರಲೋಽಂಗುಷ್ಠೋ ವೃತ್ತೋ ವೃತ್ತನಖೋ ಮೃದುಃ ॥ ೮೧ ॥
ಅಂಗುಲ್ಯಶ್ಚ ಸುಪರ್ವಾಣೋ ದೀರ್ಘಾ ವೃತ್ತಾಃ ಕ್ರಮಾತ್ಕೃಶಾಃ ।
ಚಿಪಿಟಾಃ ಸ್ಥಪುಟಾ ರೂಕ್ಷಾಃ ಪೃಷ್ಠರೋಮಯುಜೋಽಶುಭಾಃ ॥ ೮೨ ॥
ಅತಿಹ್ರಸ್ವಾಃ ಕೃಶಾ ವಕ್ರಾ ವಿರಲಾ ರೋಗಹೇತುಕಾಃ ।
ದುಃಖಾಯಾಽಂಗುಲಯಃ ಸ್ತ್ರೀಣಾಂ ಬಹುಪರ್ವಸಮನ್ವಿತಾಃ ॥ ೮೩ ॥

---

ಪುತ್ರನನ್ನು ಪ್ರಸವಿಸುವಳು. ಬಂಡಿ, ನೊಗಗಳ ರೇಖೆಗಳಿಂದ ಶೂದ್ರನ ಪತ್ನಿಯಾಗುವಳು.

೭೮–೭೯. ಚಾಮರ, ಅಂಕುಶ, ಬಿಲ್ಲು ಇವುಗಳ ರೇಖೆಗಳಿಂದ ರಾಜಪತ್ನಿಯಾಗುವಳು. ಯಾವ ಹೆಂಗಸಿನ ಕೈಯಲ್ಲಿ ಹೆಬ್ಬೆರಳಿನ ಬುಡದಿಂದ ಹೊರಟ ರೇಖೆಯು ಕಿರುಬೆರಳನ್ನು ಮುಟ್ಟುವುದೊ ಅವಳು ಪತಿಯನ್ನು ಕೊಲ್ಲುವಳು. ಅವಳನ್ನು ದೂರದಿಂದಲೇ ತ್ಯಜಿಸಬೇಕು. ಹೆಂಗಸು ತ್ರಿಶೂಲ, ಖಡ್ಗ, ಗದೆ, ಶಕ್ತಿ, ದುಂದುಭಿಗಳ ರೇಖೆಗಳಿಂದ ಭೂಮಿಯಲ್ಲಿ ದಾನಶೀಲಳಾಗಿ ಕೀರ್ತಿಯನ್ನು ಪಡೆಯುವಳು.

೮೦. ಹದ್ದು, ನರಿ, ಕಪ್ಪೆ, ತೋಳ, ಚೇಳು, ಹಾವು, ಕತ್ತೆ, ಒಂಟೆ, ಬೆಕ್ಕು ಇವುಗಳ ರೇಖೆಗಳು ಸ್ತ್ರೀಗೆ ದುಃಖವನ್ನೀಯುವುವು.

೮೧. ನೆಟ್ಟಗೂ, ವರ್ತುಳವೂ, ಗುಂಡುಗಿರುವ ಉಗುರುಳ್ಳುದೂ ಆದ ಅಂಗುಷ್ಠವು ಶುಭದಾಯಕವು.

೮೨. ಒಳ್ಳೆಯ ಗಂಟುಳ್ಳುದೂ, ಉದ್ದವೂ, ವರ್ತುಲವೂ, ಕ್ರಮವಾಗಿ ಕೃಶವೂ, ಚಪ್ಪಟೆಯೂ, ಏರುತಗ್ಗೂ, ಒರಟೂ, ಹಿಂಭಾಗದಲ್ಲಿ ರೋಮಗಳುಳ್ಳುದೂ ಆದ ಬೆರಳುಗಳು ಅಶುಭಪ್ರದಗಳು.

೮೩. ಅತ್ಯಂತ ಕುಳ್ಳಗೂ, ಕೃಶವೂ, ವಕ್ರವೂ, ವಿರಳವೂ ಆದ ಬೆರಳುಗಳು ರೋಗಕ್ಕೆ ಕಾರಣವಾಗುವುವು. ಅನೇಕ ಗಂಟುಗಳುಳ್ಳ ಬೆರಳುಗಳು ದುಃಖವನ್ನುಂಟುಮಾಡುವುವು.

ಅರುಣಾಃ ಸಶಿಖಾಸ್ತುಂಗಾಃ ಕರಜಾಃ ಸುದೃಶಾಂ ಶುಭಾಃ ।
ನಿಮ್ನಾ ವಿವರ್ಣಾಃ ಶುಕ್ತ್ಯಾಭಾಃ ಪೀತಾ ದಾರಿದ್ರ್ಯದಾಯಕಾಃ ॥ ೮೪ ॥
ನಖೇಷು ಬಿಂದವಃ ಶ್ವೇತಾಃ ಪ್ರಾಯಃ ಸ್ಯುಃ ಸ್ವೈರಿಣೀಸ್ತ್ರಿಯಃ ।
ಪುರುಷಾ ಅಪಿ ಜಾಯಂತೇ ದುಃಖಿನಃ ಪುಷ್ಪಿತೈರ್ನಖೈಃ ॥ ೮೫ ॥
ಅಂತರ್ನಿಮಗ್ನವಂಶಾಸ್ಥಿಃ ಪೃಷ್ಠಿಃ ಸ್ಯಾನ್ಮಾಂಸಲಾ ಶುಭಾ ।
ಪೃಷ್ಠೇ ನ ರೋಮಯುಕ್ತೇನ ವೈಧವ್ಯಂ ಲಭತೇ ಧ್ರುವಂ ॥ ೮೬ ॥
ಭಗ್ನೇನ ವಿನತೇನಾಽಪಿ ಸಶಿರೇಣಾಽಪಿ ದುಃಖಿತಾ ।
ಋಜ್ವೀ ಕೃಕಾಟಿಕಾ ಶ್ರೇಷ್ಠಾ ಸಮಾಂಸಾಚ ಸಮುನ್ನತಾ ॥ ೮೭ ॥
ಶುಷ್ಕಾ ಶಿರಾಲಾ ರೋಮಾಢ್ಯಾ ವಿಶಾಲಾ ಕುಟಿಲಾ ಶುಭಾ ।
ಮಾಂಸಲೋ ವರ್ತುಲಃ ಕಂಠಃ ಪ್ರಶಸ್ತಶ್ಚತುರಂಗುಲಃ ॥ ೮೮ ॥
ಶಸ್ತಾ ಗ್ರೀವಾ ತ್ರಿರೇಖಾಂಕಾ ತ್ವವ್ಯಕ್ತಾಽಸ್ಥಿಃ ಸುಸಂಹತಾ ।
ನಿರ್ಮಾಂಸಾ ಚಿಪಿಟಾ ದೀರ್ಘಾ ಸ್ಥಪುಟಾ ನ ಶುಭಪ್ರದಾ ॥ ೮೯ ॥
ಸ್ಥೂಲಗ್ರೀವಾ ಚ ವಿಧವಾ ವಕ್ರಗ್ರೀವಾ ಚ ಕಿಂಕರೀ ।
ವಂಧ್ಯಾ ಹಿ ಚಿಪಿಟಗ್ರೀವಾ ಹ್ರಸ್ವಗ್ರೀವಾ ಚ ನಿಃಸುತಾ ॥ ೯೦ ॥

---

೮೪. ಕೆಂಪಗೂ, ಶಿಖಾಸಹಿತವೂ, ಉನ್ನತವೂ ಆಗಿರುವ ಉಗುರುಗಳು ಸ್ತ್ರೀಯರಿಗೆ ಶುಭವನ್ನುಂಟುಮಾಡುವುವು. ನಿಮ್ನವೂ, ಬಣ್ಣವಿಲ್ಲದಿರುವುದೂ, ಮುತ್ತಿನ ಚಿಪ್ಪಿನಂತಿರುವುವೂ, ಹಳದಿಯ ಬಣ್ಣವೂ ಆಗಿರುವ ಉಗುರು ದಾರಿದ್ರ್ಯವನ್ನು ಕೊಡುವುದು.

೮೫. ವ್ಯಭಿಚಾರಿಣಿಯಾದ ಹೆಂಗಸಿನ ಉಗುರುಗಳಲ್ಲಿ ಶ್ವೇತಬಿಂದುಗಳಿರುವುವು. ಪುರುಷರೂ ಶ್ವೇತಪುಷ್ಪವರ್ಣದ ಉಗುರುಗಳಿಂದ ದುಃಖಿಗಳಾಗುವರು.

೮೬. ಒಳಗೆ ಅಡಗಿರುವ ಮೂಳೆಯಿರುವ ಪುಷ್ಟವಾದ ಬೆನ್ನು ಶುಭಕರವು. ಸ್ತ್ರೀಯು ರೋಮಗಳಿರುವ ಬೆನ್ನುಳ್ಳವಳಾದರೆ ನಿಶ್ಚಯವಾಗಿಯೂ ವೈಧವ್ಯವನ್ನು ಹೊಂದುವಳು.

೮೭. ನಾಡಿಗಳಿಂದ ಕೂಡಿ ಬಗ್ಗಿರುವ ಬೆನ್ನಿನಿಂದ ದುಃಖಗೊಳ್ಳುವಳು. ನೆಟ್ಟಗೂ, ಮಾಂಸಸಹಿತವೂ, ಉನ್ನತವೂ ಆದ ಹೆಗ್ಗತ್ತು ಉತ್ತಮವು.

೮೮. ಒಣಗಿರುವುದೂ, ನಾಡಿಗಳುಳ್ಳದೂ, ರೋಮವುಳ್ಳದೂ, ವಿಶಾಲವೂ, ವಕ್ರವೂ ಆಗಿರುವ ಹೆಗ್ಗತ್ತು ಅಶುಭಕರವು. ಪುಷ್ಟವೂ, ವರ್ತುಲವೂ, ನಾಲ್ಕು ಅಂಗುಲವುಳ್ಳದೂ ಆದ ಕಂಠವು ಉತ್ತಮವು.

೮೯. ಮೂರುರೇಖೆಗಳುಳ್ಳದೂ, ಅಸ್ಪಷ್ಟವಾದ ಮೂಳೆಯುಳ್ಳದೂ ಆದ ಕುತ್ತಿಗೆಯು ಶ್ರೇಷ್ಠವು. ಮಾಂಸವಿಲ್ಲದಿರುವುದೂ, ಚಪ್ಪಟೆಯೂ, ಉದ್ದವೂ, ಏರುತಗ್ಗು ಆದ ಕುತ್ತಿಗೆಯು ಶುಭಪ್ರದವಲ್ಲ.

೯೦. ದಪ್ಪವಾದ ಕುತ್ತಿಗೆಯುಳ್ಳವಳು ವಿಧವೆಯೂ, ವಕ್ರಗ್ರೀವಳು

ಚಿಬುಕಂ ದ್ವ್ಯಂಗುಲಂ ಶಸ್ತಂ ವೃತ್ತಂ ಪೀನಂ ಸಕೋಮಲಂ ।
ಸ್ಥೂಲಂ ದ್ವಿಧಾ ಸಂವಿಭಕ್ತಮಾಯತಂ ರೋಮಶಂ ತ್ಯಜೇತ್ ॥ ೯೧ ॥
ಹನುಶ್ಚಿಬುಕಸಂಲಗ್ನಾ ನಿರ್ಲೋಮಾ ಸುಘನಾ ಶುಭಾ ।
ವಕ್ರಾ ಸ್ಥೂಲಾ ಕೃಶಾ ಹ್ರಸ್ವಾ ರೋಮಶಾ ನ ಶುಭಪ್ರದಾ ॥ ೯೨ ॥
ಶಸ್ತೌ ಕಪೋಲೌ ವಾಮಾಕ್ಷ್ಯಾಃ ಪೀನೌ ವೃತ್ತೌ ಸಮುನ್ನತೌ ।
ರೋಮಶೌ ಪರುಷೌ ನಿಮ್ನೌ ನಿರ್ಮಾಂಸೌ ಪರಿವರ್ಜಯೇತ್ ॥ ೯೩ ॥
ಸಮಂ ಸಮಾಂಸಂ ಸುಸ್ನಿಗ್ಧಂ ಸ್ವಾಮೋದಂ ವರ್ತುಲಂ ಮುಖಂ ।
ಜನೇತೃವದನಚ್ಛಾಯಂ ಧನ್ಯಾನಾಮಿಹ ಜಾಯತೇ ॥ ೯೪ ॥
ಪಾಟಲೋ ವರ್ತುಲಃ ಸ್ನಿಗ್ಧೋ ಲೇಖಾಭೂಷಿತಮಧ್ಯಭೂಃ ।
ಸೀಮಂತಿನೀನಾಮಧರೋ ಧರಾಜಾನಿಪ್ರಿಯೋ ಭವೇತ್ ॥ ೯೫ ॥
ಕೃಶಃ ಪ್ರಲಂಬಃ ಸ್ಫುಟಿತೋ ರೂಕ್ಷೋ ದೌರ್ಭಾಗ್ಯಸೂಚಕಃ ।
ಶ್ಯಾಮಃ ಸ್ಥೂಲೋಽಧರೋಷ್ಠಃ ಸ್ಯಾದ್ವೈಧವ್ಯಕಲಹಪ್ರದಃ ॥ ೯೬ ॥

---

ಸೇವಕಳೂ, ಚಪ್ಪಟೆಯಾದ ಕುತ್ತಿಗೆಯುಳ್ಳವಳು ಬಂಜೆಯೂ, ಕುಳ್ಳಾದ ಕುತ್ತಿಗೆಯುಳ್ಳವಳು ಪುತ್ರರಿಲ್ಲದವಳೂ ಆಗುವಳು.

೯೧. ಎರಡು ಅಂಗುಲಗಳ ವಿಸ್ತೀರ್ಣವೂ, ವರ್ತುಳವೂ, ಪುಷ್ಟವೂ, ಮೃದುವೂ ಆದ ಗಡ್ಡವು ಶ್ರೇಷ್ಠವಾದುದು. ದಪ್ಪವೂ, ಎರಡಾಗಿ ವಿಭಾಗಗೊಂಡುದೂ, ವಿಶಾಲವೂ, ರೋಮಗಳುಳ್ಳುದೂ ಆದ ಗಡ್ಡವುಳ್ಳ ಸ್ತ್ರೀಯನ್ನು ವಿವಾಹಮಾಡಿಕೊಳ್ಳಬಾರದು.

೯೨. ಗಡ್ಡದೊಡನೆ ಸೇರಿರುವುದೂ, ರೋಮವಿಲ್ಲದಿರುವುವೂ, ಗಟ್ಟಿಯಾಗಿರುವುದೂ ಆದ ಕಪೋಲದ ಮುಂದಿನ ಭಾಗವು ಉತ್ತಮವು. ವಕ್ರವೂ, ಸ್ಥೂಲವೂ, ಕೃಶವೂ, ಹ್ರಸ್ವವೂ, ರೋಮವುಳ್ಳುದೂ ಆದ ಹನುವು ಶುಭಕರವಲ್ಲ.

೯೩. ಹೆಂಗಸಿಗೆ ಪುಷ್ಟವೂ, ವರ್ತುಳವೂ, ಎತ್ತರವೂ ಆದ ಕಪೋಲಗಳು ಶ್ರೇಷ್ಠವಾದುವು. ಕೂದಲುಳ್ಳುವೂ, ಗಟ್ಟಿಯೂ, ನಿಮ್ನವೂ, ನಿರ್ಮಾಂಸವೂ ಆದ ಕಪೋಲಗಳು ತ್ಯಾಜ್ಯವು.

೯೪. ಈ ಪ್ರಪಂಚದಲ್ಲಿ ಸಮವೂ, ಮಾಂಸಸಹಿತವೂ, ನುಣುಪೂ, ಸುವಾಸನೆಯೂ, ಗುಂಡಗೂ, ತಂದೆಯ ಮುಖದ ಕಾಂತಿಯುಳ್ಳುದೂ ಆದ ಸ್ತ್ರೀಮುಖವು ಪುಣ್ಯವಂತರಿಗೆ ಲಭಿಸುವುದು.

೯೫. ಹೆಂಗಸಿನ ತುಟಿಯು ಪಾಟಲವರ್ಣವೂ, ವರ್ತುಲವೂ, ಸ್ನಿಗ್ಧವೂ, ರೇಖೆಯಿಂದಲಂಕಾರಗೊಂಡ ಮಧ್ಯಪ್ರದೇಶವುಳ್ಳುದೂ ಆಗಿದ್ದರೆ ಅವಳು ರಾಜಪತ್ನಿಯಾಗುವಳು.

೯೬. ಕೃಶವೂ, ಜೋಲಾಡುವುದೂ, ಒಡೆದಿರುವುದೂ, ಒರಟೂ ಆದ

ಮಸೃಣೋ ಮತ್ತಕಾಶಿನ್ಯಾಶ್ಚೋತ್ತರೋಷ್ಠಃ ಸುಭೋಗದಃ ।
ಕಿಂಚಿನ್ಮಧ್ಯೋನ್ನತೋಽರೋಮಾ ವಿಪರೀತೋ ವಿರುದ್ಧಕೃತ್ ॥ ೯೭ ॥
ಗೋಕ್ಷೀರಸನ್ನಿಭಾಃ ಸ್ನಿಗ್ಧಾ ದ್ವಾತ್ರಿಂಶದ್ದಶನಾಃ ಶುಭಾಃ ।
ಅಧಸ್ತಾದುಪರಿಷ್ಟಾಚ್ಚ ಸಮಾಃ ಸ್ತೋಕಸಮುನ್ನತಾಃ ॥ ೯೮ ॥
ಪೀತಾಃ ಶ್ಯಾವಾಶ್ಚ ದಶನಾಃ ಸ್ಥೂಲಾ ದೀರ್ಘಾ ದ್ವಿಪಂಕ್ತಯಃ ।
ಶುಕ್ತ್ಯಾಕಾರಾಶ್ಚ ವಿರಲಾ ದುಃಖದೌರ್ಭಾಗ್ಯಕಾರಣಂ ॥ ೯೯ ॥
ಅಧಸ್ತಾದಧಿಕೈರ್ದಂತೈರ್ಮಾತರಂ ಭಕ್ಷಯೇತ್ ಸ್ಫುಟಂ ।
ಪತಿಹೀನಾ ಚ ವಿಕಟೈಃ ಕುಲಟಾ ವಿರಲೈರ್ಭವೇತ್ ॥ ೧೦೦ ॥
ಜಿಹ್ವೇಷ್ಟಮಿಷ್ಟಭೋಕ್ತ್ರೀ ಸ್ಯಾಚ್ಛೋಣಾ ಮೃದ್ವೀ ತಥಾ ಸಿತಾ ।
ದುಃಖಾಯ ಮಧ್ಯಸಂಕೀರ್ಣಾ ಪುರೋಭಾಗಸವಿಸ್ತರಾ ॥ ೧೦೧ ॥
ಸಿತಯಾತೋ ಮರಣಂ ಶ್ಯಾಮಯಾ ಕಲಹಪ್ರಿಯಾ ।
ದರಿದ್ರಿಣೀ ಮಾಂಸಲಯಾ ಲಂಬಯಾಽಭಕ್ಷ್ಯಭಕ್ಷಿಣೀ ॥ ೧೦೨ ॥

---

ತುಟಿಯು ದೌರ್ಭಾಗ್ಯವನ್ನು ಸೂಚಿಸುವುದು. ಹಳದಿಯ ಬಣ್ಣವೂ, ದಪ್ಪವೂ ಆದ ಕೆಳದುಟಿಯು ವೈಧವ್ಯಕಲಹಗಳನ್ನೀಯುವುದು.

೯೭. ಮೃದುವಾದ ಮೇಲ್ದುಟಿಯು ಭೋಗದಾಯಕವು. ಮಧ್ಯದಲ್ಲಿ ಸ್ವಲ್ಪ ಎತ್ತರವಾದುದೂ, ರೋಮವಿಲ್ಲದಿರುವುದೂ ಆದ ಮೇಲ್ದುಟಿಯು ಭೋಗದಾಯಕವಲ್ಲ.

೯೮. ಹಸುವಿನ ಹಾಲಿನಂತಿರುವುವೂ, ನುಣ್ಣಗೂ, ಮೇಲೆ ಕೆಳಗೆ ಸಮವಾಗಿರುವುವೂ, ಸ್ವಲ್ಪ ಎತ್ತರವೂ ಆದ ಮೂವತ್ತೆರಡು ಹಲ್ಲುಗಳು ಶುಭಕರಗಳು.

೯೯. ಹಳದಿಯ ಬಣ್ಣವೂ, ಸ್ಥೂಲವೂ, ಉದ್ದವೂ, ಎರಡು ಸಾಲುಳ್ಳುವೂ, ಮುತ್ತಿನಚಿಪ್ಪಿನಂತಿರುವುವೂ, ವಿರಳವೂ ಆದ ಹಲ್ಲುಗಳು ದುಃಖದೌರ್ಭಾಗ್ಯಗಳನ್ನು ಕೊಡುವುವು.

೧೦೦. ಹೆಂಗಸು ಕೆಳಗೆ ಹೆಚ್ಚು ಹಲ್ಲುಗಳುಳ್ಳವಳಾಗಿದ್ದರೆ ತಾಯಿಯನ್ನು ಕೊಲ್ಲುವಳು. ವಿಕಟವಾದ ಹಲ್ಲುಗಳುಳ್ಳವಳು ಪತಿಯಿಲ್ಲದವಳೂ, ವಿರಳವಾದ ಹಲ್ಲುಗಳುಳ್ಳವಳು ವ್ಯಭಿಚಾರಿಣಿಯೂ ಆಗುವಳು.

೧೦೧. ಕೆಂಪಗೂ, ಮೃದುವೂ, ಕಪ್ಪಗೂ ಇರುವ ನಾಲಿಗೆಯುಳ್ಳವಳು ಇಷ್ಟವಾದ ಪದಾರ್ಥವನ್ನು ತಿನ್ನುವವಳಾಗುವಳು. ಮಧ್ಯಸಂಕೀರ್ಣವೂ, ಮುಂಭಾಗದಲ್ಲಿ ವಿಸ್ತಾರವೂ ಆದ ನಾಲಿಗೆಯು ದುಃಖವನ್ನುಂಟುಮಾಡುವುದು.

೧೦೨. ಬಿಳಿಯ ಬಣ್ಣವುಳ್ಳ ನಾಲಿಗೆಯುಳ್ಳವಳಾದರೆ ನೀರಿನಲ್ಲಿ ಬಿದ್ದು ಸಾಯುವಳು. ಕಪ್ಪು ನಾಲಿಗೆಯವಳು ಕಲಹಪ್ರಿಯಳಾಗುವಳು. ದಪ್ಪನಾಲಿಗೆಯವಳು ದರಿದ್ರಳೂ, ಜೋಲುನಾಲಿಗೆಯುವಳು ಅಭಕ್ಷ್ಯವನ್ನು ಭಕ್ಷಿಸುವವಳೂ ಆಗುವಳು.

ವಿಶಾಲಯಾ ರಸನಯಾ ಪ್ರಮದಾಽತಿಪ್ರಮಾದಭಾಕ್ ।
ಸ್ನಿಗ್ಧಂ ಕೋಕನದಾಭಾಸಂ ಪ್ರಶಸ್ತಂ ತಾಲುಕೋಮಲಂ ॥ ೧೦೩ ॥
ಸಿತೇ ತಾಲುನಿ ವೈಧವ್ಯಂ ಪೀತೇ ಪ್ರವ್ರಜಿತಾ ಭವೇತ್ ।
ಕೃಷ್ಣೇಽಪತ್ಯವಿಯೋಗಾರ್ತಾ ರೂಕ್ಷೇ ಭೂರಿಕುಟುಂಬಿನೀ ॥ ೧೦೪ ॥
ಕಂಠೇ ಸ್ಥೂಲಾ ಸುವೃತ್ತಾ ಚ ಕ್ರಮತೀಕ್ಷ್ಣಾ ಸುಲೋಹಿತಾ ।
ಅಪ್ರಲಂಬಾ ಶುಭಾಘಂಟೀ ಸ್ಥೂಲಾ ಕೃಷ್ಣಾ ಚ ದುಃಖದಾ ॥ ೧೦೫ ॥
ಅಲಕ್ಷಿತದ್ವಿಜಂ ಕಿಂಚಿತ್ಕಿಂಚಿತ್ಫುಲ್ಲಕಪೋಲಕಂ ।
ಸ್ಮಿತಂ ಪ್ರಶಸ್ತಂ ಸುದೃಶಾಮನಿಮೀಲಿತಲೋಚನಂ ॥ ೧೦೬ ॥
ಸಮವೃತ್ತಪುಟಾ ನಾಸಾ ಲಘುಚ್ಛಿದ್ರಾ ಶುಭಾವಹಾ ।
ಸ್ಥೂಲಾಽಗ್ರಾ ಮಧ್ಯನಮ್ರಾ ಚ ನ ಪ್ರಶಸ್ತಾ ಸಮುನ್ನತಾ ॥ ೧೦೭ ॥
ಆಕುಂಚಿತಾಽರುಣಾಗ್ರಾ ಚ ವೈಧವ್ಯಕ್ಲೇಶದಾಯಿನೀ ।
ಪರಪ್ರೇಷ್ಯಾ ಚ ಚಿಪಿಟಾ ಹ್ರಸ್ವಾ ದೀರ್ಘಾ ಕಲಿಪ್ರಿಯಾ ॥ ೧೦೮ ॥

---

೧೦೩. ವಿಶಾಲವಾದ ನಾಲಿಗೆಯುಳ್ಳವಳು ಅತ್ಯಂತ ಪ್ರಮಾದವುಳ್ಳವಳಾಗುವಳು. ಸ್ನಿಗ್ಧವೂ, ಕೆಂಪುಬಣ್ಣದ್ದೂ, ಕೋಮಲವೂ ಆದ ತಾಲುವು ಪ್ರಶಸ್ತವಾದುದು.

೧೦೪. ತಾಲುವು ಬೆಳ್ಳಗಿದ್ದರೆ ವೈಧವ್ಯವುಂಟಾಗುವುದು. ಹಳದಿಯ ಬಣ್ಣವಾಗಿದ್ದರೆ ಸನ್ಯಾಸಿನಿಯಾಗುವಳು. ಕಪ್ಪಾಗಿದ್ದರೆ ಮಕ್ಕಳಿಂದ ಅಗಲುವಳು. ಒರಟಾಗಿದ್ದರೆ ಹೆಚ್ಚು ಸಂತತಿಯುಳ್ಳವಳಾಗುವಳು.

೧೦೫. ಕಂಠದಲ್ಲಿರುವ ಘಂಟೆಯು ಸ್ಥೂಲವೂ, ವರ್ತುಳವೂ, ಕ್ರಮವಾಗಿ ತೀಕ್ಷ್ಣವೂ, ಕೆಂಪಗೂ, ಜೋಲಾಡದಿರುವುದೂ ಆಗಿದ್ದರೆ ಮಂಗಳಕರವು. ಸ್ಥೂಲವೂ, ಕೃಷ್ಣವರ್ಣವೂ ಆಗಿದ್ದರೆ ದುಃಖವುಂಟಾಗುವುದು.

೧೦೬. ಹಲ್ಲುಗಳು ಕಾಣದಿರುವುದೂ, ಸ್ವಲ್ಪ ಅರಳಿದ ಕಪೋಲವುಳ್ಳದೂ ಕಣ್ಣು ಮುಚ್ಚದಿರುವುದೂ ಆದ ಸ್ತ್ರೀಯರ ಮಂದಹಾಸವು ಶ್ರೇಷ್ಠವಾದುದು.

೧೦೭. ಸಮವೂ, ವರ್ತುಳವೂ, ಸಣ್ಣ ರಂಧ್ರವುಳ್ಳದೂ ಆದ ಮೂಗು ಶ್ರೇಷ್ಠವಾದುದು. ಸ್ಥೂಲವಾದ ಕೊನೆಯುಳ್ಳದೂ, ಮಧ್ಯದಲ್ಲಿ ಬಗ್ಗಿರುವುದೂ, ಎತ್ತರವೂ ಆದ ಮೂಗು ಶ್ರೇಷ್ಠವಲ್ಲ.

೧೦೮. ಮೂಗು ಸ್ವಲ್ಪಬಗ್ಗಿ ಕೊನೆಯಲ್ಲಿ ಕೆಂಪಾಗಿದ್ದರೆ ವೈಧವ್ಯ ದುಃಖವನ್ನು ಕೊಡುವುದು. ಚಪ್ಪಟೆ ಮೂಗುಳ್ಳವಳು ಮತ್ತೊಬ್ಬರ ದಾಸಿಯೂ, ಕುಳ್ಳಗೂ ಉದ್ದವಾಗಿಯೂ ಇರುವ ಮೂಗುಳ್ಳವಳು ಜಗಳದಲ್ಲಿ ಪ್ರೀತಿಯುಳ್ಳವಳು ಆಗುವಳು.

ದೀರ್ಘಾಯುಃ ಕೃತ್ಕ್ಷತಂ ದೀರ್ಘಂ ಯುಗಪದ್ವಿತ್ರಿಪಿಂಡಿತಂ ।
ಲಲನಾಲೋಚನೇ ಶಸ್ತೇ ರಕ್ತಾಂತೇ ಕೃಷ್ಣತಾರಕೇ ॥ ೧೦೯ ॥
ಗೋಕ್ಷೀರವರ್ಣವಿಶದೇ ಸುಸ್ನಿಗ್ಧೇ ಕೃಷ್ಣಪಕ್ಷ್ಮಣೀ ।
ಉನ್ನತಾಕ್ಷೀ ನ ದೀರ್ಘಾಯುರ್ವೃತ್ತಾಕ್ಷೀ ಕುಲಟಾ ಭವೇತ್ ॥ ೧೧೦ ॥
ಮೇಷಾಕ್ಷೀ ಮಹಿಷಾಕ್ಷೀ ಚ ಕೇಕರಾಕ್ಷೀ ನ ಶೋಭನಾ ।
ಕಾಮಗೃಹೀಲಾ ನಿತರಾಂ ಗೋಪಿಂಗಾಕ್ಷೀ ಸುದುರ್ವೃತಾ ॥ ೧೧೧ ॥
ಪಾರಾವತಾಕ್ಷೀ ದುಃಶೀಲಾ ರಕ್ತಾಕ್ಷೀ ಭರ್ತೃಘಾತಿನೀ ।
ಕೋಟರಾನಯನಾದುಷ್ಟಾ ಗಜನೇತ್ರಾ ನ ಶೋಭನಾ ॥ ೧೧೨ ॥
ಪುಂಶ್ಚಲೀ ವಾಮಕಾಣಾಕ್ಷೀ ವಂಧ್ಯಾ ದಕ್ಷಿಣಕಾಣಿಕಾ ।
ಮಧುಪಿಂಗಾಕ್ಷೀ ರಮಣೀ ಧನಧಾನ್ಯಸಮೃದ್ಧಿಭಾಕ್ ॥ ೧೧೩ ॥
ಪಕ್ಷ್ಮಭಿಃ ಸುಘನೈಃ ಸ್ನಿಗ್ಧೈಃ ಕೃಷ್ಣೈಃ ಸೂಕ್ಷ್ಮೈಃ ಸುಭಾಗ್ಯಭಾಕ್ ।
ಕಪಿಲೈರ್ವಿರಲೈಃ ಸ್ಥೂಲೈರ್ನಿಂದ್ಯಾ ಭವತಿ ಭಾಮಿನೀ ॥ ೧೧೪ ॥

---

೧೦೯–೧೧೦. ಎರಡು ಮೂರು ಸಾರಿ ಆವೃತ್ತಿಗೊಳ್ಳುವ ಉದ್ದವಾದ ನೇತ್ರಗಳು ದೀರ್ಘಾಯುಷ್ಯವನ್ನು ಕೊಡುವುದು. ಪ್ರಾಂತದಲ್ಲಿ ಕೆಂಪಗಿದ್ದು, ಕರಿತಾರೆಗೆಯುಳ್ಳುದೂ ಗೋಕ್ಷೀರವರ್ಣವುಳ್ಳುದೂ, ಮನೋಹರವೂ, ಕರಿರೆಪ್ಪೆಯುಳ್ಳುದೂ ಆದ ಹೆಂಗಸಿನ ಕಣ್ಣುಗಳು ಶ್ರೇಷ್ಠವಾದುವು. ಎತ್ತರವಾದ ಕಣ್ಣುಗಳುಳ್ಳವಳು ಅಲ್ಪಾಯುಷ್ಯವುಳ್ಳವಳೂ, ವರ್ತುಳವಾದ ಕಣ್ಣುಗಳುಳ್ಳವಳು ವ್ಯಭಿಚಾರಿಣಿಯೂ ಆಗುವಳು.

೧೧೧. ಕುರಿಯ ಕಣ್ಣುಳ್ಳವಳೂ, ಎಮ್ಮೆಯ ಕಣ್ಣುಳ್ಳವಳೂ, ವಕ್ರವಾದ ಕಣ್ಣುಳ್ಳವಳೂ ಮಂಗಕರಳಲ್ಲ. ಗೋವಿನಂತೆ ಹಳದಿಯ ಕಣ್ಣುಳ್ಳವಳು ಅತ್ಯಂತ ಕಾಮಾಸಕ್ತಳೂ, ದುಷ್ಟವಾದ ನಡತೆಯುಳ್ಳವಳೂ ಆಗುವಳು.

೧೧೨. ಪಾರಿವಾಳದಂತೆ ಕಣ್ಣುಗಳುಳ್ಳವಳು ದುಶ್ಶೀಲಳೂ, ಕೆಂಗಣ್ಣುಳ್ಳವಳು ಪತಿಯನ್ನು ಕೊಲ್ಲುವವಳೂ, ಪೊಟರೆಯಂತೆ ಕಣ್ಣುಳ್ಳವಳು ದುಷ್ಟಳೂ, ಆನೆಯಂತೆ ಕಣ್ಣುಳ್ಳವಳು ಅಮಂಗಳಕರಳೂ ಆಗುವಳು.

೧೧೩. ಎಡಗಣ್ಣು ಕುರುಡಾಗಿರುವವಳು ವ್ಯಭಿಚಾರಿಣಿಯೂ, ಬಲಗಣ್ಣು ಕುರುಡಾಗಿರುವವಳು ಬಂಜೆಯೂ ಆಗುವಳು. ಜೇನುತುಪ್ಪದಂತೆ ಹಳದಿಯ ಕಣ್ಣುಳ್ಳವಳು ಧನಧಾನ್ಯಗಳಿಂದ ಸಮೃದ್ಧಳಾಗುವಳು.

೧೧೪. ಸಾಂದ್ರವೂ, ಸ್ನಿಗ್ಧವೂ, ಕೃಷ್ಣವರ್ಣವೂ, ಸೂಕ್ಷ್ಮವೂ ಆಗಿರುವ ರೆಪ್ಪೆಗಳುಳ್ಳವಳು ಭಾಗ್ಯಶಾಲಿನಿಯಾಗುವಳು. ಹಳದಿಯ ಬಣ್ಣದ್ದಾಗಿ, ವಿರಳವೂ, ಸ್ಥೂಲವೂ ಆದ ರೆಪ್ಪೆಗಳಿಂದ ಕೂಡಿದ ಕಣ್ಣಿನವಳು ನಿಂದ್ಯಳಾಗುವಳು.

ಭ್ರುವೌ ಸುವರ್ತುಲೇ ತನ್ವ್ಯೌ ಸ್ನಿಗ್ಧೇ ಕೃಷ್ಣೇ ಅಸಂಹತೇ ।
ಪ್ರಶಸ್ತೇ ಮೃದುರೋಮಾಣೌ ಸುಭ್ರುವಃ ಕಾರ್ಮುಕಾಕೃತೀ ॥ ೧೧೫ ॥
ಖರರೋಮಾಚ ಪೃಥುಲಾ ವಿಕೀರ್ಣಾ ಸರಲಾ ಸ್ತ್ರಿಯಃ ।
ನ ಭ್ರೂಃ ಪ್ರಶಸ್ತಾ ಮಿಲಿತಾ ದೀರ್ಘರೋಮಾ ಚ ಪಿಂಗಲಾ ॥ ೧೧೬ ॥
ಲಂಬೌ ಕರ್ಣೌ ಶುಭಾವರ್ತೌ ಸುಖದೌ ಚ ಶುಭಪ್ರದೌ ।
ಶಷ್ಕುಲೀರಹಿತೌ ನಿಂದ್ಯೌ ಶಿರಾಲೌ ಕುಟಿಲೌ ಕೃಶೌ ॥ ೧೧೭ ॥
ಭಾಲಃ ಶಿರಾವಿರಹಿತೋ ನಿರ್ಲೋಮಾರ್ಧೇಂದುಸನ್ನಿಭಃ ।
ಅನಿಮ್ನಸ್ತ್ರ್ಯಂಗುಲೋ ನಾರ್ಯಾಃ ಸೌಭಾಗ್ಯಾರೋಗ್ಯಕಾರಣಂ ॥ ೧೧೮ ॥
ವ್ಯಕ್ತಸ್ವಸ್ತಿಕರೇಖಂ ಚ ಲಲಾಟಂ ರಾಜ್ಯಸಂಪದೇ ।
ಪ್ರಲಂಬಂ ಮಸ್ತಕಂ ಯಸ್ಯಾ ದೇವರಂ ಹಂತಿ ಸಾ ಧ್ರುವಂ ॥ ೧೧೯ ॥
ರೋಮಶೇನ ಶಿರಾಲೇನ ಪ್ರಾಂಶುನಾ ರೋಗಿಣೀ ಮತಾ ॥ ೧೨೦ ॥
ಸೀಮಂತಃ ಸರಲಃ ಶಸ್ತೋ ಮೌಲಿಃ ಶಸ್ತಃ ಸಮುನ್ನತಃ ।
ಗಜಕುಂಭನಿಭಾವೃತ್ತೈಃ ಸೌಭಾಗ್ಯೈಶ್ವರ್ಯಸೂಚಕೈಃ ॥ ೧೨೧ ॥

---

೧೧೫. ಹೆಂಗಸಿಗೆ ವರ್ತುಳವೂ, ಸ್ನಿಗ್ಧವೂ, ಕೃಷ್ಣವರ್ಣವೂ, ವಿರಳವೂ, ಮೃದುರೋಮಗಳುಳ್ಳವೂ, ಬಿಲ್ಲಿನ ಆಕೃತಿಯುಳ್ಳವೂ ಆಗಿರುವ ಹುಬ್ಬುಗಳು ಶ್ರೇಷ್ಠವಾದುವು.

೧೧೬. ಒರಟುಕೂದಲುಳ್ಳದೂ, ವಿಶಾಲವೂ, ಚದರಿರುವುದೂ, ಸರಳವೂ, ಒಟ್ಟುಗೂಡಿರುವುದೂ, ಉದ್ದವಾದ ಕೂದಲುಳ್ಳದೂ, ಹಳದಿ ಬಣ್ಣದ್ದೂ ಆಗಿರುವ ಹುಬ್ಬು ಶ್ರೇಷ್ಠವಲ್ಲ.

೧೧೭. ಜೋಲಾಡುವುವೂ, ಒಳ್ಳೆಯ ಸುಳಿಯುಳ್ಳವೂ ಆದ ಕಿವಿಗಳು ಶುಭ ಸುಖಗಳನ್ನೀಯುವುವು. ಶಷ್ಕುಲಿಯಿಲ್ಲದುವೂ, ನರಗಳುಳ್ಳವೂ, ವಕ್ರವೂ, ಕೃಶವೂ ಆದ ಕಿವಿಗಳು ನಿಂದ್ಯಗಳು.

೧೧೮. ನಾಡಿ ಮತ್ತು ರೋಮಗಳಿಲ್ಲದಿರುವುದೂ, ಅರ್ಧಚಂದ್ರನಂತಿರುವುದೂ, ಆಳವಾಗಿರದಿರುವುದೂ, ಮೂರುಅಂಗುಲಗಳ ವಿಸ್ತೀರ್ಣವೂ ಆಗಿರುವ ಸ್ತ್ರೀಯ ಹಣೆಯು ಸೌಭಾಗ್ಯ ಮತ್ತು ಆರೋಗ್ಯವನ್ನುಂಟುಮಾಡುವುದು.

೧೧೯. ಸ್ಪಷ್ಟವಾದ ಸ್ವಸ್ತಿಕರೇಖೆಯುಳ್ಳ ಹಣೆಯು ರಾಜ್ಯಸಂಪತ್ತನ್ನು ಕೊಡುವುದು. ಯಾವಳ ತಲೆಯು ಲಂಬಾಯಮಾನವಾಗಿರುವುದೋ ಅವಳು ನಿಶ್ಚಯವಾಗಿಯೂ ಮೈದುನನನ್ನು ಕೊಲ್ಲುವಳು.

೧೨೦. ರೋಮವುಳ್ಳದೂ, ನಾಡಿಯುಳ್ಳದೂ, ಉದ್ದವೂ ಆಗಿರುವ ಹಣೆಯಿಂದ ರೋಗಿಯಾಗುವಳು.

೧೨೧. ನೆಟ್ಟಗಿರುವ ಬೈತಲೆಯು ಉತ್ತಮವಾದುದು. ಸೌಭಾಗ್ಯೈಶ್ವರ್ಯ

ಸ್ಥೂಲಮೂರ್ಧಾ ಚ ವಿಧವಾ ದೀರ್ಘಶೀರ್ಷಾ ಚ ಬಂಧಕೀ ।
ವಿಶಾಲೇನಾಽಪಿ ಶಿರಸಾ ಭವೇದ್ದೌರ್ಭಾಗ್ಯಭಾಜನಂ ॥ ೧೨೨ ॥
ಕೇಶಾ ಅಲಿಕುಲಚ್ಛಾಯಾಃ ಸೂಕ್ಷ್ಮಾಃ ಸ್ನಿಗ್ಧಾಃ ಸುಕೋಮಲಾಃ ।
ಕಿಂಚಿದಾಕುಂಚಿತಾಗ್ರಾಶ್ಚ ಕುಟಿಲಾಶ್ಚಾಽತಿಶೋಭನಾಃ ॥ ೧೨೩ ॥
ಪರುಷಾಃ ಸ್ಫುಟಿತಾಗ್ರಾಶ್ಚ ವಿರಲಾಶ್ಚ ಶಿರೋರುಹಾಃ ।
ಪಿಂಗಲಾ ಲಘವೋ ರೂಕ್ಷಾ ದುಃಖದಾರಿದ್ರ್ಯಬಂಧದಾಃ ॥ ೧೨೪ ॥
ಭ್ರುವೋರಂತರ್ಲಲಾಟೇ ವಾ ಮಶಕೋ ರಾಜ್ಯಸೂಚಕಃ ।
ವಾಮೇ ಕಪೋಲೇ ಮಶಕಃ ಶೋಣೋ ಮಿಷ್ಟಾನ್ನದಃ ಸ್ತ್ರಿಯಾಃ ॥೧೨೫॥
ತಿಲಕಂ ಲಾಂಛನಂ ವಾಽಪಿ ಹೃದಿ ಸೌಭಾಗ್ಯಕಾರಣಂ ।
ಯಸ್ಯಾ ದಕ್ಷಿಣವಕ್ಷೋಜೇ ಶೋಣೇ ತಿಲಕಲಾಂಛನೇ ॥ ೧೨೬ ॥
ಕನ್ಯಾಚತುಷ್ಟಯಂ ಸೂತೇ ಸೂತೇ ಸಾ ಚ ಸುತತ್ರಯಂ ।
ತಿಲಕಂ ಲಾಂಛನಂ ಶೋಣಂ ಯಸ್ಯಾ ವಾಮೇ ಕುಚೇ ಭವೇತ್ ॥೧೨೭॥

---

ಗಳನ್ನು ಸೂಚಿಸುವ ಆನೆಯ ಕುಂಭಸ್ಥಳದಂತಿರುವ ಸುಳಿಗಳಿಂದ ಕೂಡಿದ ಉನ್ನತ ಮಸ್ತಕವು ಉತ್ತಮವಾದುದು.

೧೨೨. ದಪ್ಪಗಿರುವ ತಲೆಯುಳ್ಳವಳು ವಿಧವೆಯೂ, ಉದ್ದವಾದ ತಲೆಯುಳ್ಳವಳು ವ್ಯಭಿಚಾರಿಣಿಯೂ ಆಗುವಳು. ವಿಶಾಲವಾದ ತಲೆಯುಳ್ಳವಳು ದುರ್ಭಗಳಾಗುವಳು.

೧೨೩. ದುಂಬಿಯ ಬಳಗದಂತೆ ಕಾಂತಿಯುಳ್ಳವೂ, ಸೂಕ್ಷ್ಮವೂ, ನುಣುಪೂ, ಮೃದುವೂ, ಸ್ವಲ್ಪ ಬಗ್ಗಿದ ಕೊನೆಯುಳ್ಳವೂ, ವಕ್ರವೂ ಆದ ಕೂದಲುಗಳು ಅತಿ ಮಂಗಳಕರಗಳು.

೧೨೪. ಒರಟೂ, ಒಡೆದಕೊನೆಯುಳ್ಳವೂ, ಪಿಂಗಳಗಳೂ, ಹಳದಿಬಣ್ಣವೂ, ಸಣ್ಣಗಿರುವುವೂ ಆದ ಕೂದಲುಗಳು ದುಃಖ, ದಾರಿದ್ರ್ಯ, ಬಂಧಗಳನ್ನುಂಟು ಮಾಡುವುವು.

೧೨೫. ಹುಬ್ಬುಗಳ ಮಧ್ಯದಲ್ಲಾಗಲಿ, ಹಣೆಯಲ್ಲಾಗಲಿ ಇರುವ ಮಚ್ಚೆಯು ರಾಜ್ಯವನ್ನು ಸೂಚಿಸುವುದು. ಎಡಕೆನ್ನೆಯಲ್ಲಿರುವ ಕೆಂಪುಮಚ್ಚೆಯು ಸ್ತ್ರೀಗೆ ಮೃಷ್ಟಾನ್ನವನ್ನೀಯುವುದು.

೧೨೬. ಹೃದಯದಲ್ಲಿರುವ ತಿಲಕವಾಗಲಿ, ಮಚ್ಚೆಯಾಗಲಿ ಸೌಭಾಗ್ಯವನ್ನುಂಟುಮಾಡುವುವು. ಯಾವಳ ಬಲಕುಚದಲ್ಲಿ ಕೆಂಪುತಿಲಕ ಮತ್ತು ಲಾಂಛನಗಳಿರುವುವೊ, ಅವಳು ನಾಲ್ಕುಮಂದಿ ಕನ್ಯೆಯರನ್ನೂ, ಮೂರುಮಂದಿ ಸುತರನ್ನೂ ಹಡೆಯುವವಳು.

೧೨೭–೧೨೮. ಎಡಕುಚದಲ್ಲಿ ಕೆಂಪುಮಚ್ಚೆಯುಳ್ಳವಳು ಮೊದಲು ಒಬ್ಬ

ಏಕಂ ಪುತ್ರಂ ಪ್ರಸೂಯಾದೌ ತತಃ ಸಾ ವಿಧವಾ ಭವೇತ್ ।
ಗುಹ್ಯಸ್ಯ ದಕ್ಷಿಣೇ ಭಾಗೇ ತಿಲಕಂ ಯದಿ ಯೋಷಿತಃ ॥ ೧೨೮ ॥
ತದಾ ಕ್ಷಿತಿಪತೇಃ ಪತ್ನೀ ಸೂತೇ ವಾ ಕ್ಷಿತಿಪಂ ಸುತಂ ।
ನಾಸಾಗ್ರೇ ಮಶಕಃ ಶೋಣೋ ಮಹಿಷ್ಯಾ ಏವ ಜಾಯತೇ ॥ ೧೨೯ ॥
ಕೃಷ್ಣಃ ಸ ಏವ ಭರ್ತೃಘ್ನ್ಯಾಃ ಪುಂಶ್ಚಲ್ಯಾಶ್ಚ ಪ್ರಕೀರ್ತಿತಃ ।
ನಾಭೇರಧಸ್ತಾತ್ತಿಲಕಂ ಮಶಕೋ ಲಾಂಛನಂ ಶುಭಂ ॥ ೧೩೦ ॥
ಮಶಕಸ್ತಿಲಕಂ ಚಿಹ್ನಂ ಗುಲ್ಫದೇಶೇ ದರಿದ್ರಕೃತ್ ।
ಕರೇ ಕರ್ಣೇ ಕಪೋಲೇ ವಾ ಕಂಠೇ ವಾಮೇ ಭವೇದ್ಯದಿ ॥ ೧೩೧ ॥
ಏಷಾಂ ತ್ರಯಾಣಾಮೇಕಂ ತು ಪ್ರಾಗ್ಗರ್ಭೇ ಪುತ್ರದಂ ಭವೇತ್ ।
ಭಾಲಗೇನ ತ್ರಿಶೂಲೇನ ನಿರ್ಮಿತೇನ ಸ್ವಯಂಭುವಾ ॥ ೧೩೨ ॥
ನಿತಂಬಿನೀ ಸಹಸ್ರಾಣಾಂ ಸ್ವಾಮಿತ್ವಂ ಯೋಷಿದಾಪ್ನುಯಾತ್ ।
ಸುಪ್ತಾ ಪರಸ್ಪರಂ ಯಾತು ದಂತಾನ್ಕಿಟಕಿಟಾಯತೇ ॥ ೧೩೩ ॥
ಸುಲಕ್ಷ್ಮ್ಯಾಽಪಿ ನ ಸಾ ಶಸ್ತಾ ಯಾ ಕಿಂಚಿತ್ಪ್ರಲಪೇತ್ತಥಾ ।
ಪಾಣೌ ಪ್ರದಕ್ಷಿಣಾವರ್ತೋ ಧರ್ಮ್ಯೋ ವಾಮೋ ನ ಶೋಭನಃ॥ ೧೩೪ ॥

---

ಪುತ್ರನನ್ನು ಹಡೆದ ಬಳಿಕ ವಿಧವೆಯಾಗುವಳು. ಹೆಂಗಸಿನ ಗುಹ್ಯಪ್ರದೇಶದ ಬಲಭಾಗದಲ್ಲಿ ತಿಲಕವಿದ್ದರೆ ಅವಳು ದೊರೆಯ ಮಡದಿಯಾಗುವಳು. ಅಥವಾ ರಾಜನಾಗುವ ಮಗನನ್ನು ಹಡೆಯುವಳು. ರಾಣಿಯ ಮೂಗಿನ ಕೊನೆಯಲ್ಲಿ ಕೆಂಪುಮಚ್ಚೆಯಿರುತ್ತದೆ.

೧೩೦. ನಾಸಾಗ್ರದಲ್ಲಿರುವ ಮಚ್ಚೆಯು ಕೃಷ್ಣವರ್ಣವಾಗಿದ್ದರೆ ಸ್ತ್ರೀಯು ಪತಿಯನ್ನು ಕೊಲ್ಲುವವಳೂ, ವ್ಯಭಿಚಾರಿಣಿಯೂ ಆಗುವಳು. ನಾಭಿಯಕೆಳಗೆ ಇರುವ ತಿಲಕ, ಮಚ್ಚೆ, ಲಾಂಛನಗಳೂ ಶುಭಕರವಾಗುವುವು.

೧೩೧–೧೩೪. ಕಾಲಿನ ಗಂಟಿನಲ್ಲಿ ಮಶಕ, ತಿಲಕ, ಚಿಹ್ನೆಗಳಿದ್ದರೆ ದಾರಿದ್ರ್ಯ ವುಂಟಾಗುವುದು. ಇವುಗಳು ಮೂರರಲ್ಲಿ ಒಂದು ಕೈ, ಕಿವಿ, ಕಪೋಲ, ಅಥವಾ ಕಂಠದಲ್ಲಿದ್ದರೆ ಮೊದಲಿನ ಗರ್ಭದಲ್ಲಿ ಪುತ್ರನು ಜನಿಸುವನು. ಹೆಂಗಸು ಹಣೆಯಲ್ಲಿ ಬ್ರಹ್ಮನಿರ್ಮಿತವಾದ ತ್ರಿಶೂಲವುಳ್ಳವಳಾದರೆ ಸಾವಿರಮಂದಿ ಸ್ತ್ರೀಯರಿಗೆ ಒಡೆಯಳಾಗುವಳು. ಮಲಗಿರುವಾಗ ಹಲ್ಲುಗಳನ್ನು ಕಡಿಯುವವಳೂ, ಪ್ರಲಾಪಿಸುವವಳೂ ಒಳ್ಳೆಯ ಲಕ್ಷಣವುಳ್ಳವಳಾಗಿದ್ದರೂ ಉತ್ತಮಳಲ್ಲ. ಕೈಯಲ್ಲಿ ಪ್ರದಕ್ಷಿಣಾಕಾರವಾದ ಸುಳಿಯಿದ್ದರೆ ಧರ್ಮಿಷ್ಠಳಾಗುವಳು. ಅಪ್ರದಕ್ಷಿಣವಾದ ಸುಳಿಯಿದ್ದರೆ ಮಂಗಳಕರವಲ್ಲ.

ನಾಭೌ ಶ್ರುತಾವುರಸಿ ವಾ ದಕ್ಷಿಣಾವರ್ತ ಈಡಿತಃ ।
ಸುಖಾಯ ದಕ್ಷಿಣಾವರ್ತಃ ಪೃಷ್ಠವಂಶಸ್ಯ ದಕ್ಷಿಣೇ ॥ ೧೩೫ ॥
ಅಂತಃಪೃಷ್ಠಂ ನಾಭಿಸಮೋ ಬಹ್ವಾಯುಃ ಪುತ್ರವರ್ಧನಃ ।
ರಾಜಪತ್ನ್ಯಾಃ ಪ್ರದೃಶ್ಯೇತ ಭಗಮೌಲೌ ಪ್ರದಕ್ಷಿಣಃ ॥ ೧೩೬ ॥
ಸಚೇಚ್ಛ್ವಕಟಿಭಂಗಃ ಸ್ಯಾದ್ಬಹ್ವಪತ್ಯಸುಖಪ್ರದಃ ।
ಕಟಿಗೋ ಗುಹ್ಯವೇಧೇನ ಪತ್ಯಪತ್ಯನಿಪಾತನಃ ॥ ೧೩೭ ॥
ಸ್ಯಾತಾಮುದರವೇಧೇನ ಪೃಷ್ಠಾವರ್ತೌ ನ ಶೋಭನೌ ।
ಏಕೇನ ಹಂತಿ ಭರ್ತಾರಂ ಭವೇದನ್ಯೇನ ಪುಂಶ್ಚಲೀ ॥ ೧೩೮ ॥
ಕಂಠಗೋ ದಕ್ಷಿಣಾವರ್ತೋ ದುಃಖವೈಧವ್ಯಹೇತುಕಃ ।
ಸೀಮಂತೇಽಥ ಲಲಾಟೇ ವಾ ತ್ಯಾಜ್ಯೋ ದೂರಾತ್ಪ್ರಯತ್ನತಃ ॥ ೧೩೯ ॥
ಸಾ ಪತಿಂ ಹಂತಿ ವರ್ಷೇಣ ಯಸ್ಯಾ ಮಧ್ಯೇ ಕೃಕಾಟಿಕಂ ।
ಪ್ರದಕ್ಷಿಣೋ ವಾ ವಾಮೋ ವಾ ರೋಮ್ಣಾಮಾವರ್ತಕಃ ಸ್ತ್ರಿಯಾಃ ॥

---

೧೩೫. ಹೊಕ್ಕುಳು, ಕಿವಿ, ಅಥವಾ ಎದೆಯಲ್ಲಿರುವ ಬಲಮುಖವಾದ ಸುಳಿಯು ಪ್ರಶಸ್ತವು. ಬೆನ್ನುಮೂಳೆಯ ಬಲಭಾಗದಲ್ಲಿರುವ ಪ್ರದಕ್ಷಿಣಾಕಾರವಾದ ಸುಳಿಯು ಸುಖವನ್ನುಂಟುಮಾಡುವುದು.

೧೩೬. ಬೆನ್ನಿನನಡುವೆ ಹೊಕ್ಕಳಿನಂತಿರುವ ಸುಳಿಯು ಅಧಿಕವಾದ ಆಯುಸ್ಸು ಮತ್ತು ಪುತ್ರರನ್ನು ಹೆಚ್ಚಿಸುವುದು. ರಾಣಿಯ ಭಗದ ಮೇಲ್ಭಾಗದಲ್ಲಿ ಪ್ರದಕ್ಷಿಣಾಕಾರವಾದ ಸುಳಿಯು ಕಾಣಿಸುವುದು.

೧೩೭. ಆ ಸುಳಿಯು ಬಂಡಿಯಂತಿದ್ದರೆ ಅನೇಕ ಮಕ್ಕಳು ಸುಖಗಳನ್ನು ಕೊಡುವುದು. ಸೊಂಟದಲ್ಲಿರುವ ಸುಳಿಯು ಗುಹ್ಯಸ್ಥಾನದವರೆಗೆ ಇದ್ದರೆ ಗಂಡನೂ, ಮಕ್ಕಳೂ ನಾಶವಾಗುವರು.

೧೩೮. ಬೆನ್ನಿನ ಸುಳಿಗಳು ಹೊಟ್ಟೆಯವರೆಗೆ ವ್ಯಾಪಿಸಿದ್ದರೆ ಮಂಗಳಕರಗಳಲ್ಲ. ಒಂದು ಸುಳಿಯಿಂದ ಪತಿಯನ್ನು ವಧಿಸುವಳು. ಇನ್ನೊಂದು ಸುಳಿಯಿಂದ ವ್ಯಭಿಚಾರಿಣಿಯಾಗುವಳು.

೧೩೯. ಕಂಠದಲ್ಲಿರುವ ಸುಳಿಯು ಬಲಮುಖವಾಗಿದ್ದರೆ ದುಃಖವೈಧವ್ಯಗಳನ್ನುಂಟುಮಾಡುವುವು. ಬೈತಲೆ, ಹಣೆಗಳಲ್ಲಿ ಸುಳಿಯುಳ್ಳವಳನ್ನು ದೂರದಿಂದಲೇ ತ್ಯಜಿಸಬೇಕು.

೧೪೦. ಯಾವ ಸ್ತ್ರೀಯ ಹೆಗ್ಗತ್ತಿನ ಮಧ್ಯದಲ್ಲಿ ಪ್ರದಕ್ಷಿಣ ಅಥವಾ ಅಪ್ರದಕ್ಷಿಣವಾದ ಸುಳಿಯಿರುವುದೊ, ಅವಳು ಒಂದು ವರ್ಷದಲ್ಲಿ ಪತಿಯನ್ನು ಕೊಲ್ಲುವಳು.

ಏಕೋ ವಾ ಮೂರ್ಧನಿ ದ್ವೌ ವಾ ವಾಮೇ ವಾಮಗತೀ ಯದಿ ।
ಆದಶಾಹಂ ಪತಿಘ್ನ್ಯೌ ತೌ ತ್ಯಾಜ್ಯೌ ದೂರಾತ್ಸುಬುದ್ಧಿನಾ ॥ ೧೪೧ ॥
ಕಟ್ಯಾವರ್ತಾ ಚ ಕುಲಟಾ ನಾಭ್ಯಾವರ್ತಾ ಪತಿವ್ರತಾ ।
ಪೃಷ್ಠಾವರ್ತಾ ಚ ಭರ್ತೃಘ್ನೀ ಕುಲಟಾ ವಾಽಥ ಜಾಯತೇ ॥ ೧೪೨ ॥

ಸ್ಕಂದ ಉವಾಚ :—

ಸುಲಕ್ಷಣಾಽಪಿ ದುಃಶೀಲಾ ಕುಲಕ್ಷಣಶಿರೋಮಣಿಃ ।
ಅಲಕ್ಷಣಾಽಪಿ ಸಾ ಸಾಧ್ವೀ ಸರ್ವಲಕ್ಷಣಭೂಸ್ತು ಸಾ ॥ ೧೪೩ ॥
ಸುಲಕ್ಷಣಾ ಸುಚಾರಿತ್ರಾ ಸ್ವಾಧೀನಾ ಪತಿದೇವತಾ ।
ವಿಶ್ವೇಶಾನುಗ್ರಹಾದೇವ ಗೃಹೇ ಯೋಷಿದವಾಪ್ಯತೇ ॥ ೧೪೪ ॥
ಅಲಂಕೃತಾಃ ಸ್ವವಾಸಿನ್ಯೋ ಯಾಭಿಃ ಪ್ರಾಕ್ತನಜನ್ಮನಿ ।
ನಾನಾವಿಧೈರಲಂಕಾರೈಸ್ತಾಃ ಸುರೂಪಾ ಭವಂತಿ ಹಿ ॥ ೧೪೫ ॥
ಸುತೀರ್ಥೇಷು ವಪುರ್ಯಾಭಿಃ ಕ್ಷಯಿತಂ ವಾ ವಿಹಾಯಿತಂ ।
ತಾ ಲಾವಣ್ಯತರಂಗಿಣ್ಯೋ ಭವಂತೀಹ ಸುಲಕ್ಷಣಾಃ ॥ ೧೪೬ ॥
ಅರ್ಚಿತಾ ಜಗತಾಂ ಮಾತಾ ಯಾಭಿರ್ಮೃಡವಧೂರಿವ ।
ತಾ ಭವಂತಿ ಸುಚಾರಿತ್ರಾ ಯೋಷಾಃ ಸ್ವಾಽಧೀನಭರ್ತೃಕಾಃ ॥ ೧೪೭ ॥

---

೧೪೧. ತಲೆಯ ಎಡಭಾಗದಲ್ಲಿ ಒಂದಾಗಲಿ, ಎರಡಾಗಲಿ ಸುಳಿಗಳು ಅಪ್ರದಕ್ಷಿಣಗಳಾಗಿದ್ದರೆ ಆ ಸ್ತ್ರೀಯು ಹತ್ತುದಿನಗಳಲ್ಲಿ ಪತಿಯನ್ನು ಕೊಲ್ಲುವಳು. ಆದ್ದರಿಂದ ಅವಳನ್ನು ಬುದ್ಧಿವಂತನು ದೂರದಲ್ಲಿಯೇ ಬಿಡಬೇಕು.

೧೪೨. ಸೊಂಟದಲ್ಲಿ ಸುಳಿಯುಳ್ಳವಳು ವ್ಯಭಿಚಾರಿಣಿಯೂ, ನಾಭಿಯಲ್ಲಿ ಸುಳಿಯುಳ್ಳವಳು ಪತಿವ್ರತೆಯೂ, ಬೆನ್ನಿನಲ್ಲಿ ಸುಳಿಯುಳ್ಳವಳು ಪತಿಯನ್ನು ಕೊಲ್ಲುವವಳೂ ಅಥವಾ ವ್ಯಭಿಚಾರಿಣಿಯೂ ಆಗುವಳು.

೧೪೩. ಸ್ಕಂದನು ಹೇಳುತ್ತಾನೆ:—ಒಳ್ಳೆಯ ಲಕ್ಷಣವುಳ್ಳವಳಾಗಿದ್ದರೂ ದುಸ್ಸ್ವಭಾವಳಾದರೆ ಸ್ತ್ರೀಯು ಕುಲಕ್ಷಣಶಿರೋಮಣಿಯಾಗುವಳು. ಲಕ್ಷಣ ವಿಲ್ಲದವಳು ಪತಿವ್ರತೆಯಾಗಿದ್ದರೆ ಸಮಸ್ತಲಕ್ಷಣವುಳ್ಳವಳಾಗುವಳು.

೧೪೪. ಒಳ್ಳೆಯ ಲಕ್ಷಣವುಳ್ಳವಳೂ, ಒಳ್ಳೆಯ ನಡತೆಯುಳ್ಳವಳೂ, ಸ್ವಾಧೀನಪತಿಕಳೂ ಆದ ಸ್ತ್ರೀಯು ವಿಶ್ವೇಶ್ವರನ ಅನುಗ್ರಹದಿಂದಲೆ ಲಭಿಸುವಳು.

೧೪೫. ಹಿಂದಿನ ಜನ್ಮದಲ್ಲಿ ಸುವಾಸಿನಿಯರನ್ನು ಬಗೆಬಗೆಯ ಭೂಷಣಗಳಿಂದ ಅಲಂಕಾರಮಾಡಿದ ಸ್ತ್ರೀಯರು ಸುಂದರಿಯರಾಗುವರು.

೧೪೬. ಒಳ್ಳೆಯ ತೀರ್ಥಗಳಲ್ಲಿ ತಮ್ಮ ಶರೀರವನ್ನು ತೊರೆದ ಹೆಂಗಸರು ಸುಂದರಿಯರೂ, ಸುಲಕ್ಷಣೆಯರೂ ಆಗುವರು.

೧೪೭. ಜಗನ್ಮಾತೆಯಾದ ಪಾರ್ವತಿಯನ್ನು ಪೂಜಿಸಿದ ಸ್ತ್ರೀಯು ಸುಚರಿತ್ರಳೂ, ಸ್ವಾಧೀನಪತಿಕಳೂ ಆಗುವಳು.

ಸ್ವಾಧೀನಪತಿಕಾನಾಂ ಚ ಸುಶೀಲಾನಾಂ ಮೃಗೀದೃಶಾಂ ।
ಸ್ವರ್ಗಾಽಪವರ್ಗಾವತ್ರೈವ ಸುಲಕ್ಷಣಫಲಂ ಹಿ ತತ್ ॥ ೧೪೮ ॥
ಸುಲಕ್ಷಣೈಃ ಸುಚರಿತ್ರೈರಪಿ ಮಂದಾಯುಷಂ ಪತಿಂ ।
ದೀರ್ಘಾಯುಷಂ ಪ್ರಕುರ್ವಂತಿ ಪ್ರಮದಾಃ ಪ್ರಮದಾಸ್ಪದಂ ॥ ೧೪೯ ॥
ಅತಃ ಸುಲಕ್ಷಣಾ ಯೋಷಾ ಪರಿಣೇಯಾ ವಿಚಕ್ಷಣೈಃ ।
ಲಕ್ಷಣಾನಿ ಪರೀಕ್ಷ್ಯಾದೌ ಹಿತ್ವಾ ದುರ್ಲಕ್ಷಣಾನ್ಯಪಿ ॥ ೧೫೦ ॥
ಲಕ್ಷಣಾನಿ ಮಯೋಕ್ತಾನಿ ಸುಖಾಯ ಗೃಹಮೇಧಿನಾಂ ।
ವಿವಾಹಾನಪಿ ವಕ್ಷ್ಯಾಮಿ ತನ್ನಿಬೋಧ ಘಟೋದ್ಭವ ॥ ೧೫೧ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಸ್ತ್ರೀಲಕ್ಷಣವರ್ಣನಂ"
ನಾಮ ಸಪ್ತತ್ರಿಂಶೋಽಧ್ಯಾಯಃ

---

೧೪೮. ಸ್ವಾಧೀನಪತಿಕರೂ, ಒಳ್ಳೆಯ ನಡತೆಯುಳ್ಳವರೂ ಆದ ಹೆಂಗಸರಿಗೆ ಸುಲಕ್ಷಣದಫಲವಾದ ಸ್ವರ್ಗಾಪವರ್ಗಗಳು ಇಲ್ಲಿಯೇ ಉಂಟಾಗುವುವು.

೧೪೯. ಸ್ತ್ರೀಯರು ಒಳ್ಳೆಯ ಲಕ್ಷಣ ಮತ್ತು ನಡತೆಗಳಿಂದ ಅಲ್ಪಾಯುಷ್ಯವಂತನಾದ ಪತಿಯನ್ನೂ ಸಂತೋಷಕ್ಕೆ ಆಶ್ರಯನಾದ ದೀರ್ಘಾಯುಷ್ಮಂತನನ್ನಾಗಿ ಮಾಡುವರು.

೧೫೦. ಆದ್ದರಿಂದ ಬುದ್ಧಿಶಾಲಿಗಳು ಮೊದಲು ಲಕ್ಷಣಗಳನ್ನು ಪರೀಕ್ಷಿಸಿ ದುರ್ಲಕ್ಷಣಗಳನ್ನು ತ್ಯಜಿಸಿ ಸುಲಕ್ಷಣೆಯಾದ ಕನ್ಯೆಯನ್ನು ವಿವಾಹಮಾಡಿಕೊಳ್ಳಬೇಕು.

೧೫೧. ಎಲೈ ಅಗಸ್ತ್ಯನೆ! ಗೃಹಸ್ಥರ ಸುಖಕ್ಕಾಗಿ ಈ ಲಕ್ಷಣಗಳನ್ನು ಹೇಳಿರುವೆನು. ಇನ್ನು ವಿವಾಹಗಳನ್ನೂ ಹೇಳುವೆನು. ಅದನ್ನು ತಿಳಿದುಕೊ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಸ್ತ್ರೀಲಕ್ಷಣವರ್ಣನ"ವೆಂಬ
ಮೂವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟತ್ರಿಂಶೋಽಧ್ಯಾಯಃ

### ವಿವಾಹವರ್ಣನಂ

ಸ್ಕಂದ ಉವಾಚ :—

ವಿವಾಹಾ ಬ್ರಾಹ್ಮ ದೈವಾರ್ಷಾಃ ಪ್ರಾಜಾಪತ್ಯಾಸುರೌ ತಥಾ ।
ಗಾಂಧರ್ವೋ ರಾಕ್ಷಸಶ್ಚಾಽಪಿ ಪೈಶಾಚೋಽಷ್ಟಮ ಉಚ್ಯತೇ ॥ ೧ ॥
ಸ ಬ್ರಾಹ್ಮೋ ವರಮಾಹೂಯ ಯತ್ರ ಕನ್ಯಾ ಸ್ವಲಂಕೃತಾ ।
ದೀಯತೇ ತತ್ಸುತಃ ಪೂಯಾತ್ಪುರುಷಾನೇಕವಿಂಶತಿಂ ॥ ೨ ॥
ಯಜ್ಞಸ್ಥಾಯರ್ತ್ವಿಜೇ ದೈವಸ್ತಜ್ಜಃ ಪಾತಿ ಚತುರ್ದಶ ।
ವರಾದಾದಾಯ ಗೋದ್ವಂದ್ವಮಾರ್ಷಸ್ತಜ್ಜಃ ಪುನಾತಿ ಷಟ್ ॥ ೩ ॥
ಸಹೋಭೌ ಚರತಾಂ ಧರ್ಮಮಿತ್ಯುಕ್ತ್ವಾ ದೀಯತೇಽರ್ಥಿನೇ ।
ಯತ್ರ ಕನ್ಯಾ ಪ್ರಾಜಾಪತ್ಯಸ್ತಜ್ಜೋ ವಂಶಾನ್ಪುನಾತಿ ಷಟ್ ॥ ೪ ॥
ಚತ್ವಾರ ಏತೇ ವಿಪ್ರಾಣಾಂ ಧರ್ಮ್ಯಾಃ ಪಾಣಿಗ್ರಹಾಃ ಸ್ಮೃತಾಃ ।
ಆಸುರಃ ಕ್ರಯಣಾದ್ದ್ರವ್ಯೈರ್ಗಾಂಧರ್ವೋಽನ್ಯೋನ್ಯಮೈತ್ರತಃ ॥ ೫ ॥

---

### ಕನ್ನಡದ ಅನುವಾದ

#### ವಿವಾಹವರ್ಣನ

೧. ಸ್ಕಂದನು ಹೇಳುತ್ತಾನೆ:—ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ, ಪೈಶಾಚ ಎಂದು ವಿವಾಹವು ಎಂಟು ವಿಧವಾಗಿರುವುದು.

೨. ವರನನ್ನು ಕರೆಯಿಸಿ ಅಲಂಕೃತಳಾದ ಕನ್ಯೆಯನ್ನು ದಾನಮಾಡಿದರೆ ಅದು ಬ್ರಾಹ್ಮವಿವಾಹವೆನಿಸಿಕೊಳ್ಳುವುದು. ಅವಳಲ್ಲಿ ಜನಿಸಿದ ಸುತನು ಇಪ್ಪತ್ತೊಂದು ಪುರುಷರನ್ನು ಪವಿತ್ರಗೊಳಿಸುವನು.

೩. ಯಜ್ಞದಲ್ಲಿರುವ ಋತ್ವಿಜನಿಗೆ ಕನ್ಯೆಯನ್ನು ದಾನಮಾಡುವುದು ದೈವ ವಿವಾಹವು. ಅವಳಲ್ಲಿ ಜನಿಸಿದ ಪುತ್ರನು ಹದಿನಾಲ್ಕು ಪುರುಷರನ್ನು ಪವಿತ್ರಗೊಳಿಸುವನು. ವರನಿಂದ ಎರಡು ಗೋವುಗಳನ್ನು ತೆಗೆದುಕೊಂಡು ಕನ್ಯೆಯನ್ನು ದಾನಮಾಡುವುದು ಆರ್ಷವಿವಾಹವು. ಅವಳಲ್ಲಿ ಜನಿಸಿದ ಸುತನು ಆರು ಮಂದಿ ಪುರುಷರನ್ನು ಉದ್ಧರಿಸುವನು.

೪. ಇಬ್ಬರೂ ಒಟ್ಟಿಗೆ ಧರ್ಮವನ್ನು ಆಚರಿಸಿರಿ ಎಂದು ಹೇಳಿ ಕನ್ಯಾರ್ಥಿಗೆ ಕನ್ಯೆಯನ್ನು ಕೊಡುವುದು ಪ್ರಾಜಾಪತ್ಯವಿವಾಹವು, ಅವಳಲ್ಲಿ ಹುಟ್ಟಿದ ಪುತ್ರನು ಆರು ವಂಶಗಳನ್ನು ಪವಿತ್ರಗೊಳಿಸುವನು.

೫. ಈ ನಾಲ್ಕು ವಿವಾಹಗಳು ಬ್ರಾಹ್ಮಣರಿಗೆ ಉಚಿತವಾದುವು. ದ್ರವ್ಯ

ಪ್ರಸಹ್ಯ ಕನ್ಯಾಹರಣಾದ್ರಾಕ್ಷಸೋ ನಿಂದಿತಃ ಸತಾಂ ।
ಛಲೇನ ಕನ್ಯಾಹರಣಾತ್ಪೈಶಾಚೋ ಗರ್ಹಿತೋಽಷ್ಟಮಃ ॥ ೬ ॥
ಪ್ರಾಯಃ ಕ್ಷತ್ರವಿಶೋರುಕ್ತಾ ಗಾಂಧರ್ವಾಽಽಸುರರಾಕ್ಷಸಾಃ ।
ಅಷ್ಟಮಸ್ತ್ವೇಷ ಪಾಪಿಷ್ಠಃ ಪಾಪಿಷ್ಠಾನಾಂ ಚ ಸಂಭವೇತ್ ॥ ೭ ॥
ಸವರ್ಣಯಾ ಕರೋ ಗ್ರಾಹ್ಯೋ ಧಾರ್ಯಃ ಕ್ಷತ್ರಿಯಯಾ ಶರಃ ।
ಪ್ರತೋದೋ ವೈಶ್ಯಯಾ ಧಾರ್ಯೋ ವಾಸೋಽಂತಃ ಶೂದ್ರಯಾ ತಥಾ॥
ಅಸವರ್ಣಸ್ತ್ವೇಷವಿಧಿಃ ಸ್ಮೃತೋ ದೃಷ್ಟಶ್ಚ ವೇದನೇ ।
ಸವರ್ಣಾಭಿಸ್ತು ಸರ್ವಾಭಿಃ ಪಾಣಿಗ್ರಾಹ್ಯಸ್ತ್ವಯಂ ವಿಧಿಃ ॥ ೯ ॥
ಧರ್ಮ್ಯೈರ್ವಿವಾಹೈರ್ಜಾಯಂತೇ ಧರ್ಮ್ಯಾ ಏವ ಶತಾಯುಷಃ ।
ಅಧರ್ಮ್ಯೈರ್ಧರ್ಮರಹಿತಾ ಮಂದಭಾಗ್ಯಧನಾಯುಷಃ ॥ ೧೦ ॥
ಋತುಕಾಲಾಽಭಿಗಮನಂ ಧರ್ಮೋಽಯಂ ಗೃಹಿಣಃ ಪರಃ ।
ಸ್ತ್ರೀಣಾಂ ವರಮನುಸ್ಮೃತ್ಯ ಯಥಾ ಕಾಮ್ಯಥವಾ ಭವೇತ್ ॥ ೧೧ ॥

---

ಗಳಿಂದ ಕನ್ಯೆಯನ್ನು ಕೊಂಡುಕೊಳ್ಳುವುದು ಆಸುರವಿವಾಹವೂ, ವಧೂವರರು ಪರಸ್ಪರಸ್ನೇಹದಿಂದ ವರಿಸುವುದು ಗಾಂಧರ್ವವಿವಾಹವೂ ಆಗಿರುವುದು.

೬. ಬಲಾತ್ಕಾರದಿಂದ ಕನ್ಯೆಯನ್ನು ಅಪಹರಿಸುವುದು ರಾಕ್ಷಸ ವಿವಾಹವು. ಇದು ಸಜ್ಜನರಿಗೆ ಉಚಿತವಲ್ಲ. ಮೋಸದಿಂದ ಕನ್ಯೆಯನ್ನು ಅಪಹರಿಸುವುದು ಪೈಶಾಚವಿವಾಹವು. ಈ ಎಂಟನೆಯ ವಿವಾಹವು ಅತ್ಯಂತ ನಿಂದ್ಯವಾದುದು.

೭. ಕ್ಷತ್ರಿಯವೈಶ್ಯರಿಗೆ ಗಾಂಧರ್ವ, ಆಸುರ, ರಾಕ್ಷಸ ವಿವಾಹಗಳು ವಿಹಿತವಾಗಿರುವುವು. ಪಾಪಿಷ್ಠವಾದ ಈ ಎಂಟನೆಯ ಪೈಶಾಚ ವಿವಾಹವು ಪಾಪಿಷ್ಠರಿಗೆ ಉಚಿತವಾಗಿರುವುದು.

೮. ಸವರ್ಣವಿವಾಹದಲ್ಲಿ ಕನ್ಯೆಯು ಪತಿಯಹಸ್ತವನ್ನು ಹಿಡಿದುಕೊಳ್ಳಬೇಕು. ಕ್ಷತ್ರಿಯ ಸ್ತ್ರೀಯು ವರನುಹಿಡಿದಿರುವ ಬಾಣವನ್ನೂ, ವೈಶ್ಯಳು ಚಾವಟಿಯನ್ನೂ, ಶೂದ್ರಳು ಬಟ್ಟೆಯಕೊನೆಯನ್ನೂ ಹಿಡಿದುಕೊಳ್ಳಬೇಕು.

೯. ಈ ವಿಧಿಯು ಅಸವರ್ಣವಿವಾಹದಲ್ಲಿ ವಿಹಿತವಾಗಿರುವುದು. ಸವರ್ಣ ವಿವಾಹದಲ್ಲಿ ಎಲ್ಲರೂ ಹಸ್ತವನ್ನೇ ಹಿಡಿದುಕೊಳ್ಳಬೇಕು.

೧೦. ಧರ್ಮವಿವಾಹಗಳಿಂದ ಧರ್ಮಿಷ್ಠರೂ ನೂರುವರ್ಷ ಆಯುಸ್ಸುಳ್ಳವರೂ ಆದ ಮಕ್ಕಳು ಜನಿಸುವರು. ಅಧರ್ಮವಿವಾಹಗಳಿಂದ ಧರ್ಮಹೀನರೂ, ಅಲ್ಪಭಾಗ್ಯ, ಧನ, ಆಯುಸ್ಸುಳ್ಳವರೂ ಆದ ಮಕ್ಕಳು ಹುಟ್ಟುವರು.

೧೧. ಸ್ತ್ರೀಯರನ್ನು ಋತುಕಾಲದಲ್ಲಿ ಸೇರುವುದು ಗೃಹಸ್ಥರಿಗೆ ಉತ್ತಮ ಧರ್ಮವಾಗಿರುವುದು. ಅಥವಾ ಸ್ತ್ರೀಯರ ಅಪೇಕ್ಷೆಯನ್ನನುಸರಿಸಿ ಕಾಮಿಯಾಗಬೇಕು.

ದಿವಾಽಭಿಗಮನಂ ಪುಂಸಾಮನಾಯುಷ್ಯಕರಂ ಮತಂ ।
ಶ್ರಾದ್ಧಾಹಃ ಸರ್ವಪರ್ವಾಣಿ ಯತ್ನಾತ್ತ್ಯಾಜ್ಯಾನಿ ಧೀಮತಾ ॥ ೧೨ ॥
ತತ್ರ ಗಚ್ಛನ್ಸ್ತ್ರಿಯಂ ಮೋಹಾದ್ಧರ್ಮಾತ್ಪ್ರಚ್ಯವತೇ ಪರಾತ್ ॥ ೧೩ ॥
ಋತುಕಾಲಾಽಭಿಗಾಮೀ ಯಃ ಸ್ವದಾರನಿರತಶ್ಚ ಯಃ ।
ಸ ಸದಾ ಬ್ರಹ್ಮಚಾರೀ ಚ ವಿಜ್ಞೇಯಃ ಸದ್ಗೃಹಾಶ್ರಮೀ ॥ ೧೪ ॥
ಋತುಃ ಷೋಡಶಯಾಮಿನ್ಯಶ್ಚತಸ್ರಸ್ತಾಸು ಗರ್ಹಿತಾಃ ।
ಪುತ್ರಾಸ್ತಾಸ್ವಪಿ ಯಾ ಯುಗ್ಮಾ ಅಯುಗ್ಮಾಃ ಕನ್ಯಕಾ ಪ್ರಜಾಃ ॥ ೧೫ ॥
ತ್ಯಕ್ತ್ವಾ ಚಂದ್ರಮಸಂ ದುಸ್ಥಂ ಮಘಾಂ ಪೌಷ್ಣಂ ವಿಹಾಯ ಚ ।
ಶುಚಿಃ ಸನ್ನಿರ್ವಿಶೇತ್ಪತ್ನೀಂ ಪುನ್ನಾಮರ್ಕ್ಷೇ ವಿಶೇಷತಃ ।
ಶುಚಿಂ ಪುತ್ರಂ ಪ್ರಸೂಯೇತ ಪುರುಷಾರ್ಥಪ್ರಸಾಧಕಂ ॥ ೧೬ ॥
ಆರ್ಷೇ ವಿವಾಹೇ ಗೋದ್ವಂದ್ವಂ ಯದುಕ್ತಂ ತನ್ನ ಶಸ್ಯತೇ ।
ಶುಲ್ಕಮಣ್ವಪಿ ಕನ್ಯಾಯಾಃ ಕನ್ಯಾವಿಕ್ರಯಪಾಪಕೃತ್ ॥ ೧೭ ॥

---

೧೨. ಹಗಲು ಸ್ತ್ರೀಸಂಭೋಗವು ಪುರುಷರ ಆಯುಷ್ಯವನ್ನು ನಾಶಗೊಳಿಸುವುದು. ಬುದ್ಧಿವಂತನು ಪ್ರಯತ್ನದಿಂದ ಶ್ರಾದ್ಧದ ದಿನ, ಸಮಸ್ತಪರ್ವದ ದಿನಗಳು ಇವುಗಳಲ್ಲಿ ಸ್ತ್ರೀಯನ್ನು ಸೇರಬಾರದು.

೧೩. ಆ ದಿನ ಮೋಹದಿಂದ ಸ್ತ್ರೀಗಮನ ಮಾಡಿದವನು ಉತ್ತಮಧರ್ಮದಿಂದ ಭ್ರಷ್ಟನಾಗುವನು.

೧೪. ಋತುಕಾಲದಲ್ಲಿ ಸ್ತ್ರೀಯನ್ನು ಸೇರುವವನೂ, ಸ್ವಪತ್ನಿಯಲ್ಲಿ ಆಸಕ್ತನಾದವನೂ ಯಾವಾಗಲೂ ಬ್ರಹ್ಮಚಾರಿಯಾದ ಸದ್ಗೃಹಸ್ಥನೆಂದು ತಿಳಿಯಬೇಕು.

೧೫. ಹದಿನಾರು ರಾತ್ರಿಗಳು ಋತುಕಾಲವು. ಅವುಗಳಲ್ಲಿ ನಾಲ್ಕು ದಿನಗಳು ನಿಂದ್ಯವಾದುವು. ಆ ದಿನಗಳಲ್ಲಿಯೂ ಯುಗ್ಮದಿನಗಳಲ್ಲಿ ಪುತ್ರರೂ, ವಿಷಮ ದಿನಗಳಲ್ಲಿ ಕನ್ಯೆಯರೂ ಜನಿಸುವರು.

೧೬. ರಾಹುಗ್ರಸ್ತನಾದ ಚಂದ್ರನನ್ನು, ಮಘಾ ಮತ್ತು ಸೂರ್ಯದೇವತಾಕ ನಕ್ಷತ್ರಗಳನ್ನು ಬಿಟ್ಟು ಶ್ರವಣಾ, ಹಸ್ತ, ಪುನರ್ವಸು, ಮೂಲಾ, ಪುಷ್ಯ, ಮೃಗಶೀರ್ಷ ನಕ್ಷತ್ರಗಳಲ್ಲಿ ಪರಿಶುದ್ಧನಾಗಿ ಸ್ತ್ರೀಯನ್ನು ಸೇರಿದರೆ ಶುದ್ಧನೂ, ಪುರುಷಾರ್ಥಗಳನ್ನು ಸಾಧಿಸುವವನೂ ಆದ ಪುತ್ರನು ಜನಿಸುವನು.

೧೭. ಆರ್ಷವಿವಾಹದಲ್ಲಿ ಗೋದ್ವಯವನ್ನು ತೆಗೆದುಕೊಳ್ಳುವುದು ಪ್ರಶಸ್ತವಲ್ಲ. ಸ್ವಲ್ಪವಾದರೂ ಕನ್ಯಾಶುಲ್ಕವು ಕನ್ಯಾವಿಕ್ರಯದ ಪಾಪವನ್ನುಂಟುಮಾಡುವುದು.

ಅಪತ್ಯವಿಕ್ರಯೀ ಕಲ್ಪಂ ವಸೇದ್ವಿಟ್ಕೃಮಿಭೋಜನೇ ।
ಅತೋ ನಾಽಣ್ವಪಿ ಕನ್ಯಾಯಾ ಉಪಜೀವೇತ್ಪಿತಾ ಧನಂ ॥ ೧೮ ॥
ಸ್ತ್ರೀಧನಾನ್ಯುಪಜೀವಂತಿ ಯೇ ಮೋಹಾದಿಹ ಬಾಂಧವಾಃ ।
ನ ಕೇವಲಂ ನಿರಯಗಾಸ್ತೇಷಾಮಪಿ ಹಿ ಪೂರ್ವಜಾಃ ॥ ೧೯ ॥
ಪತ್ಯಾ ತುಷ್ಯತಿ ಯತ್ರ ಸ್ತ್ರೀ ತುಷ್ಯೇದ್ಯತ್ರ ಸ್ತ್ರಿಯಾ ಪತಿಃ ।
ತತ್ರ ತುಷ್ಟಾ ಮಹಾಲಕ್ಷ್ಮೀರ್ನಿವಸೇದ್ದಾನವಾರಿಣಾ ॥ ೨೦ ॥
ವಾಣಿಜ್ಯಂ ನೃಪತೇಃ ಸೇವಾ ವೇದಾನಧ್ಯಾಪನಂ ತಥಾ ।
ಕುವಿವಾಹಃ ಕ್ರಿಯಾಲೋಪಃ ಕುಲೇ ಪತನಹೇತವಃ ॥ ೨೧ ॥
ಕುರ್ಯಾದ್ವೈವಾಹಿಕೇ ವಹ್ನೌ ಗೃಹ್ಯಂ ಕರ್ಮಾಽನ್ವಯಂ ಗೃಹೀ ।
ಪಂಚಯಜ್ಞಕ್ರಿಯಾಂ ಚಾಽಪಿ ಪಕ್ತಿಂ ದೈನಂದಿನೀಮಪಿ ॥ ೨೨ ॥
ಗೃಹಸ್ಥಾಶ್ರಮಿಣಃ ಪಂಚಸೂನಾಕರ್ಮ ದಿನೇ ದಿನೇ ।
ಕಂಡನೀ ಪೇಷಣೀ ಚುಲ್ಲೀ ಹ್ಯುದಕುಂಭಸ್ತು ಮಾರ್ಜನೀ ॥ ೨೩ ॥
ತಾಸಾಂ ಚ ಪಂಚಸೂನಾನಾಂ ನಿರಾಕರಣಹೇತವಃ ।
ಕ್ರತವಃ ಪಂಚನಿರ್ದಿಷ್ಟಾ ಗೃಹಿಶ್ರೇಯೋಽಭಿವರ್ಧನಾಃ ॥ ೨೪ ॥

---

೧೮. ಹೆಣ್ಣುಮಕ್ಕಳನ್ನು ವಿಕ್ರಯಮಾಡುವ ತಂದೆಯು ಒಂದು ಕಲ್ಪದವರೆಗೆ ವಿಟ್ಕೃಮಿಭೋಜನನರಕದಲ್ಲಿ ವಾಸಿಸುವನು. ಆದುದರಿಂದ ತಂದೆಯು ಕನ್ಯೆಗೆ ಸ್ವಲ್ಪ ಧನವನ್ನೂ ತೆಗೆದುಕೊಂಡು ಜೀವಿಸಬಾರದು.

೧೯–೨೦. ಅಜ್ಞಾನದಿಂದ ಬಂಧುಗಳು ಸ್ತ್ರೀಧನದಿಂದ ಜೀವಿಸಿದರೆ ಅವರು ಮಾತ್ರವಲ್ಲದೆ, ಅವರ ಪೂರ್ವಿಕರೂ ನರಕಭಾಗಿಗಳಾಗುವರು. ಎಲ್ಲಿ ಹೆಂಗಸು ಗಂಡನಿಂದಲೂ, ಗಂಡನು ಹೆಂಡತಿಯಿಂದಲೂ ಸಂತುಷ್ಟರಾಗುವರೊ, ಅಲ್ಲಿ ಮಹಾಲಕ್ಷ್ಮಿಯು ಮಹಾವಿಷ್ಣುವಿನೊಡನೆ ಸಂತುಷ್ಟಳಾಗಿ ವಾಸಿಸುವಳು.

೨೧–೨೨. ವಂಶದಲ್ಲಿ ವ್ಯಾಪಾರ, ರಾಜಸೇವೆ, ವೇದಗಳನ್ನು ಅಧ್ಯಯನ ಮಾಡದಿರುವುದು, ದುಷ್ಟವಿವಾಹ, ಕ್ರಿಯಾಲೋಪ ಇವುಗಳು ಪತನಕ್ಕೆ ಕಾರಣವಾದುವು. ಗೃಹಸ್ಥನು ಪ್ರತಿದಿನವೂ ಗೃಹ್ಯಕರ್ಮಗಳನ್ನೂ, ಪಂಚಯಜ್ಞಗಳನ್ನೂ, ಪ್ರತಿದಿನದ ಪಾಕವನ್ನೂ ವಿವಾಹಾಗ್ನಿಯಲ್ಲಿ ಮಾಡಬೇಕು.

೨೩. ಗೃಹಸ್ಥಾಶ್ರಮಿಗಳು ಪ್ರತಿದಿನವೂ ಕಂಡನೀ (ಧಾನ್ಯಗಳನ್ನು ಕುಟ್ಟುವುದು), ಪೇಷಣೀ (ಧಾನ್ಯಾದಿಗಳನ್ನು ಹಿಟ್ಟುಮಾಡುವುದು), ಚುಲ್ಲೀ (ಉರಿಹಾಕುವುದು), ಉದಕುಂಭ, ಮಾರ್ಜನೀ (ಕಸ ಗುಡಿಸುವುದು ಅಥವಾ ಸಾರಣೆ ಕಾರಣೆ ಮಾಡುವುದು) ಎಂಬ ಪಂಚಸೂನಾಕರ್ಮಗಳನ್ನು ಮಾಡುವರು.

೨೪. ಆ ಪಂಚಸೂನಾಕರ್ಮಗಳ ಪ್ರಾಯಶ್ಚಿತ್ತಕ್ಕಾಗಿ ಗೃಹಸ್ಥಾಶ್ರಮಿಗಳಿಗೆ ಶ್ರೇಯಸ್ಸನ್ನುಂಟುಮಾಡುವ ಪಂಚಕ್ರತುಗಳು ವಿಹಿತವಾಗಿರುವುವು.

ಪಾಠನಂ ಬ್ರಹ್ಮಯಜ್ಞಃ ಸ್ಯಾತ್ತರ್ಪಣಂ ಚ ಪಿತೃಕ್ರತುಃ ।
ಹೋಮೋ ದೈವೋ ಬಲಿರ್ಭೌತೋಽತಿಥ್ಯರ್ಚಾ ನೃಕ್ರತುಃ ಕ್ರಮಾತ್ ॥
ಪಿತೃಪ್ರೀತಿಂ ಪ್ರಕುರ್ವಾಣಃ ಕುರ್ವೀತ ಶ್ರಾದ್ಧಮನ್ವಹಂ ।
ಅನ್ನೋದಕಪಯೋಮೂಲೈಃ ಫಲೈರ್ವಾಽಪಿ ಗೃಹಾಶ್ರಮೀ ॥ ೨೬ ॥
ಗೋದಾನೇನ ಚ ಯತ್ಪುಣ್ಯಂ ಪಾತ್ರಾಯ ವಿಧಿಪೂರ್ವಕಂ ।
ಸತ್ಕೃತ್ಯ ಭಿಕ್ಷವೇ ಭಿಕ್ಷಾಂ ದತ್ವಾ ತತ್ಫಲಮಾಪ್ನುಯಾತ್ ॥ ೨೭ ॥
ತಪೋ ವಿದ್ಯಾ ಸಮಿದ್ಧೇಪ್ತೇ ಹುತಂ ವಿಪ್ರಾಽಸ್ಯ ಪಾವಕೇ ।
ತಾರಯೇದ್ವಿಘ್ನಸಂಘೇಭ್ಯಃ ಪಾಪಾಽಬ್ಧೇರಪಿ ದುಸ್ತರಾತ್ ॥ ೨೮ ॥
ಅನರ್ಚಿತೋಽತಿಥಿರ್ಗೇಹಾದ್ಭಗ್ನಾಶೋ ಯಸ್ಯ ಗಚ್ಛತಿ ।
ಆಜನ್ಮಸಂಚಿತಾತ್ಪುಣ್ಯಾತ್ಕ್ಷಣಾತ್ಸಹಿ ಬಹಿರ್ಭವೇತ್ ॥ ೨೯ ॥
ಸಾಂತ್ವಪೂರ್ವಾಣಿ ವಾಕ್ಯಾನಿ ಶಯ್ಯಾರ್ಥೇ ಭೂಸ್ತೃಣೋದಕೇ ।
ಏತಾನ್ಯಪಿ ಪ್ರದೇಯಾನಿ ಸದಾಽಭ್ಯಾಗತತುಷ್ಟಯೇ ॥ ೩೦ ॥
ಗೃಹಸ್ಥಃ ಪರಪಾಕಾದೀನ್ ಪ್ರೇತ್ಯ ತತ್ಪಶುತಾಂ ವ್ರಜೇತ್ ।
ಶ್ರೇಯಃ ಪರಾನ್ನಪುಷ್ಟಸ್ಯ ಗೃಹ್ಣೀಯಾದನ್ನದೋ ಯತಃ ॥ ೩೧ ॥

---

೨೫. ಅಧ್ಯಯನವೇ ಬ್ರಹ್ಮಯಜ್ಞವು. ತರ್ಪಣವೇ ಪಿತೃಯಜ್ಞವು. ಹೋಮವೇ ದೈವಯಜ್ಞವು. ಬಲಿಯೇ ಭೂತಯಜ್ಞವು. ಅತಿಥಿಪೂಜೆಯೇ ಮನುಷ್ಯಯಜ್ಞವು.

೨೬. ಗೃಹಸ್ಥನು ಪ್ರತಿದಿನವೂ ಅನ್ನ, ನೀರು, ಹಾಲು, ಗೆಡ್ಡೆಗೆಣಸು, ಫಲ ಮೊದಲಾದವುಗಳಿಂದ ಪಿತೃಗಳ ಪ್ರೀತಿಗಾಗಿ ಶ್ರಾದ್ಧಮಾಡಬೇಕು.

೨೭. ಸನ್ಯಾಸಿಗೆ ಸನ್ಮಾನಮಾಡಿ ಭಿಕ್ಷೆಯನ್ನಿತ್ತರೆ ಸತ್ಪಾತ್ರನಿಗೆ ವಿಧಿಯಂತೆ ಗೋವನ್ನು ದಾನಮಾಡಿದ ಪುಣ್ಯವು ಲಭಿಸುವುದು.

೨೮. ತಪಸ್ಸು ಮತ್ತು ವಿದ್ಯೆಗಳಿಂದ ಪ್ರಜ್ವಲಿಸುತ್ತಿರುವ ಬ್ರಾಹ್ಮಣನ ಮುಖವೆಂಬ ಅಗ್ನಿಯಲ್ಲಿ ಹೋಮಮಾಡಿದುದು ವಿಘ್ನಗಳ ಸಮೂಹಗಳಿಂದಲೂ, ದುಸ್ತರ ಪಾಪಸಮೂಹದಿಂದಲೂ ಉದ್ಧರಿಸುವುದು.

೨೯. ಯಾವನ ಮನೆಯಿಂದ ಅತಿಥಿಯು ಪೂಜೆಯನ್ನು ಕೈಗೊಳ್ಳದೆಯೂ ಇಷ್ಟಾರ್ಥವನ್ನು ಪಡೆಯದೆಯೂ ಹೊರಟುಹೋಗುವನೊ, ಆ ಮನೆಯವನು ಹುಟ್ಟಿದ ಮೊದಲ್ಗೊಂಡು ಆರ್ಜಿಸಿದ ಪುಣ್ಯವು ಕೂಡಲೆ ನಾಶವಾಗುವುದು.

೩೦. ಯಾವಾಗಲೂ ಅತಿಥಿಯ ಸಂತೋಷಕ್ಕಾಗಿ ಸಮಾಧಾನದ ಮಾತುಗಳನ್ನೂ, ಹಾಸಿಗೆಗಾಗಿ ಭೂಮಿಯನ್ನೂ, ಹುಲ್ಲು ನೀರುಗಳನ್ನೂ ಕೊಡಬೇಕು.

೩೧. ಪರಪಾಕವನ್ನು ಭುಂಜಿಸುವ ಗೃಹಸ್ಥನು ಮೃತನಾದ ಬಳಿಕ ಅವನ ಪಶುವಾಗಿ ಹುಟ್ಟುವನು. ಅನ್ನ ನೀರನ್ನಿತ್ತವನು ಅವನ ಶ್ರೇಯಸ್ಸನ್ನು ತೆಗೆದುಕೊಳ್ಳುವನು.

ಆದಿತ್ಯೋಢೋಽತಿಥಿಃ ಸಾಯಂ ಸತ್ಕರ್ತವ್ಯಃ ಪ್ರಯತ್ನತಃ ।
ಅಸತ್ಕೃತೋಽನ್ಯತೋ ಗಚ್ಛನ್ದುಷ್ಕೃತಂ ಭೂರಿ ಯಚ್ಛತಿ ॥ ೩೨ ॥
ಭುಂಜಾನೋಽತಿಥಿಶೇಷಾನ್ನಮಿಹಾಯುರ್ಧನಭಾಗ್ಭವೇತ್ ।
ಪ್ರಣೋದ್ಯಾಽತಿಥಿಮಶ್ನಾತಿ ಕಿಲ್ಬಿಷೀ ಚ ಗೃಹಾಶ್ರಮೀ ॥ ೩೩ ॥
ವೈಶ್ವದೇವಾಂತಸಂಪ್ರಾಪ್ತಃ ಸೂರ್ಯೋಢೋವಾಽತಿಥಿಃ ಸ್ಮೃತಃ ।
ನ ಪೂರ್ವಕಾಲ ಆಯಾತೋ ನ ಚ ದೃಷ್ಟಚರಃ ಕ್ವಚಿತ್ ॥ ೩೪ ॥
ಬಲಿಪಾತ್ರಕರೇ ವಿಪ್ರೇ ಯದ್ಯನ್ಯೋಽತಿಥಿರಾಗತಃ ।
ಅದತ್ವಾ ತಂ ಬಲಿಂ ತಸ್ಮೈ ಯಥಾಶಕ್ತ್ಯಾಽನ್ನಮರ್ಪಯೇತ್ ॥ ೩೫ ॥
ಕುಮಾರಾಶ್ಚ ಸ್ವವಾಸಿನ್ಯೋ ಗರ್ಭಿಣ್ಯೋಽತಿರುಜಾನ್ವಿತಾಃ ।
ಅತಿಥೇರಾದಿತೋಽಪ್ಯೇತೇ ಭೋಜ್ಯಾ ನಾಽತ್ರ ವಿಚಾರಣಾ ॥ ೩೬ ॥
ಪಿತೃದೇವಮನುಷ್ಯೇಭ್ಯೋ ದತ್ವಾಽಶ್ನಾತ್ಯಮೃತಂ ಗೃಹೀ ।
ಸ್ವಾರ್ಥಂ ಪಚನ್ನಘಂ ಭುಂಕ್ತೇ ಕೇವಲಂ ಸ್ವೋದರಂಭರಿಃ ॥ ೩೭ ॥

---

೩೨. ಸೂರ್ಯಾಸ್ತಮಯಕಾಲದಲ್ಲಿ ಮನೆಗೆ ಬಂದ ಅತಿಥಿಯನ್ನು ಸನ್ಮಾನಿಸಬೇಕು. ಸನ್ಮಾನಗೊಳ್ಳದೆ ಬೇರೆಕಡೆಗೆ ಹೋಗುವ ಅತಿಥಿಯು ತನ್ನ ಪಾಪವನ್ನು ಆ ಗೃಹಸ್ಥನಿಗೆ ಕೊಟ್ಟು ಹೋಗುವನು.

೩೩. ಅತಿಥಿಯು ಉಂಡುಳಿದ ಅನ್ನವನ್ನು ಭುಂಜಿಸುವ ಗೃಹಸ್ಥನು ಆಯುಸ್ಸು ಮತ್ತು ಧನಗಳನ್ನು ಹೊಂದುವನು. ಅತಿಥಿಯನ್ನು ದೂರಮಾಡಿ ಅನ್ನವನ್ನು ತಿನ್ನುವವನು ಪಾಪಿಯಾಗುವನು.

೩೪. ವೈಶ್ವದೇವದ ಕೊನೆಯಲ್ಲಿಯೂ, ಸೂರ್ಯಾಸ್ತಮಯಕಾಲದಲ್ಲಿಯೂ ಬಂದವನು ಅತಿಥಿಯೆನ್ನಿಸಿಕೊಳ್ಳುವನು. ಇದಕ್ಕಿಂತ ಮುಂಚೆ ಬಂದವನೂ, ಹಿಂದೆ ನೋಡಲ್ಪಟ್ಟವನೂ ಅತಿಥಿಯಾಗುವುದಿಲ್ಲ.

೩೫. ಬ್ರಾಹ್ಮಣನು ಕೈಯಲ್ಲಿ ಬಲಿಪಾತ್ರೆಯನ್ನು ಹಿಡಿದುಕೊಂಡಿರುವಾಗ ಇತರ ಅತಿಥಿಯು ಬಂದರೆ ಆ ಬಲಿಯನ್ನು ಕೊಡದೆ ಅವನಿಗೆ ಶಕ್ತ್ಯನುಸಾರ ಅನ್ನವನ್ನು ನೀಡಬೇಕು.

೩೬. ಹುಡುಗರು, ಸುವಾಸಿನಿಯರು, ಗರ್ಭಿಣಿಯರು, ವ್ಯಾಧಿಗ್ರಸ್ತರು ಇವರನ್ನು ಅತಿಥಿಗಿಂತಲೂ ಮೊದಲು ಭೋಜನಮಾಡಿಸಬೇಕು. ಇದರಲ್ಲಿ ಯಾವ ಸಂದೇಹವೂ ಇರುವುದಿಲ್ಲ.

೩೭. ಪಿತೃ, ದೇವ, ಮನುಷ್ಯರಿಗೆ ಅನ್ನವನ್ನು ನೀಡಿದ ಗೃಹಸ್ಥನು ಅಮೃತಪಾನಮಾಡುವನು. ಕೇವಲ ತನಗಾಗಿ ಪಾಕಮಾಡುವ ಸ್ವೋದರಪೂರಕನು ಪಾಪವನ್ನು ಭುಂಜಿಸುವನು.

ಮಾಧ್ಯಾಹ್ನಿಕಂ ವೈಶ್ವದೇವಂ ಗೃಹಸ್ಥಃ ಸ್ವಯಮಾಚರೇತ್ ।
ಪತ್ನೀ ಸಾಯಂ ಬಲಿಂ ದದ್ಯಾತ್ಸಿದ್ಧಾನ್ನೈರ್ಮಂತ್ರವರ್ಜಿತಂ ॥ ೩೮ ॥
ಏತತ್ಸಾಯಂತನಂ ನಾಮ ವೈಶ್ವದೇವಂ ಗೃಹಾಶ್ರಮೇ ।
ಸಾಯಂ ಪ್ರಾತರ್ಭವೇದೇವಂ ವೈಶ್ವದೇವಂ ಪ್ರಯತ್ನತಃ ॥ ೩೯ ॥
ವೈಶ್ವದೇವೇನ ಯೇ ಹೀನಾ ಆತಿಥ್ಯೇನ ವಿವರ್ಜಿತಾಃ ।
ಸರ್ವೇ ತೇ ವೃಷಲಾ ಜ್ಞೇಯಾಃ ಪ್ರಾಪ್ತವೇದಾ ಅಪಿ ದ್ವಿಜಾಃ ॥ ೪೦ ॥
ಅಕೃತ್ವಾ ವೈಶ್ವದೇವಂ ತು ಭುಂಜತೇ ಯೇ ದ್ವಿಜಾಽಧಮಾಃ ।
ಇಹಲೋಕೇಽನ್ನಹೀನಾಃ ಸ್ಯುಃ ಕಾಕಯೋನಿಂ ವ್ರಜಂತ್ಯಥ ॥ ೪೧ ॥
ವೇದೋದಿತಂ ಸ್ವಕಂ ಕರ್ಮ ನಿತ್ಯಂ ಕುರ್ಯಾದತಂದ್ರಿತಃ ।
ತದ್ಧಿ ಕುರ್ವನ್ಯಥಾಶಕ್ತಿ ಪ್ರಾಪ್ನುಯಾತ್ಸದ್ಗತಿಂ ಪರಾಂ ॥ ೪೨ ॥
ಷಷ್ಟ್ಯಷ್ಟಮ್ಯೋರ್ವಸೇತ್ಪಾಪಂ ತೈಲೇ ಮಾಂಸೇ ಸದೈವ ಹಿ ।
ಪಂಚದಶ್ಯಾಂ ಚತುರ್ದಶ್ಯಾಂ ತಥೈವ ಚ ಭಗೇ ಕ್ಷುರೇ ॥ ೪೩ ॥
ಉದಯಂತಂ ನಚೇಕ್ಷೇತ ನಾಽಸ್ತಂ ಯಂತಂ ನ ಮಧ್ಯಗಂ ।
ನ ರಾಹುಣೋಪಸೃಷ್ಟಂ ಚ ನಾಽಂಬುಸಂಸ್ಥಂ ದಿವಾಕರಂ ॥ ೪೪ ॥

---

೩೮–೩೯. ಮಧ್ಯಾಹ್ನದ ವೈಶ್ವದೇವವನ್ನು ಗೃಹಸ್ಥನು ತಾನೇ ಮಾಡಬೇಕು. ಸಾಯಂಕಾಲ ಪತ್ನಿಯು ತಾನೇ ಸಿದ್ಧಾನ್ನಗಳಿಂದ ಮಂತ್ರವಿಲ್ಲದೆ ಬಲಿಯನ್ನು ಕೊಡಬೇಕು. ಇದು ಗೃಹಸ್ಥಾಶ್ರಮಿಯ ಸಾಯಂಕಾಲದ ವೈಶ್ವದೇವವಾಗಿರುವುದು. ಹೀಗೆಯೇ ಸಾಯಂಕಾಲ ಮತ್ತು ಪ್ರಾತಃಕಾಲದ ವೈಶ್ವದೇವವನ್ನು ನೆರವೇರಿಸಬೇಕು.

೪೦. ವೈಶ್ವದೇವ ಮತ್ತು ಆತಿಥ್ಯಗಳಿಲ್ಲದ ಬ್ರಾಹ್ಮಣರು ವೇದಾಧ್ಯಯನ ಮಾಡಿದ್ದರೂ ಶೂದ್ರರೆನಿಸುವರು.

೪೧. ವೈಶ್ವದೇವವನ್ನು ಮಾಡದೆ ಭುಂಜಿಸುವ ನೀಚ ಬ್ರಾಹ್ಮಣರು ಈ ಲೋಕದಲ್ಲಿ ಅನ್ನಹೀನರಾಗಿ ಆಮೇಲೆ ಕಾಗೆಯ ಜನ್ಮವನ್ನು ಹೊಂದುವರು.

೪೨–೪೩. ವೇದೋಕ್ತವಾದ ಸ್ವಕರ್ಮವನ್ನು ನಿತ್ಯವೂ ಆಲಸ್ಯವಿಲ್ಲದೆ ಮಾಡಬೇಕು. ಅದನ್ನು ಶಕ್ತ್ಯನುಸಾರ ಮಾಡುವವನು ಉತ್ತಮಗತಿಯನ್ನು ಪಡೆಯುವನು. ಷಷ್ಠೀ, ಅಷ್ಟಮೀ ದಿನಗಳಲ್ಲಿ ಎಣ್ಣೆ ಮಾಂಸಗಳಲ್ಲಿಯೂ, ಹುಣ್ಣಿಮೆ, ಚತುರ್ದಶಿಗಳಲ್ಲಿ ಯೋನಿ, ಕ್ಷೌರದ ಕತ್ತಿಗಳಲ್ಲಿಯೂ ಪಾಪವಿರುವುದು. ಆದುದರಿಂದ ಅವುಗಳನ್ನು ಸೇವಿಸಬಾರದು.

೪೪. ಉದಯಿಸುತ್ತಿರುವವನೂ, ಮುಳುಗುತ್ತಿರುವವನೂ, ಆಕಾಶದ ಮಧ್ಯದಲ್ಲಿರುವವನೂ, ರಾಹುಗ್ರಸ್ತನೂ, ನೀರಿನಲ್ಲಿರುವವನೂ ಆದ ಸೂರ್ಯನನ್ನು ನೋಡಕೂಡದು.

ನ ವೀಕ್ಷೇತಾತ್ಮನೋ ರೂಪಮಾಶು ಧಾವೇನ್ನ ವರ್ಷತಿ ।
ನೋಲ್ಲಂಘಯೇದ್ವತ್ಸತಂತ್ರೀಂ ನ ನಗ್ನೋ ಜಲಮಾವಿಶೇತ್ ॥ ೪೫ ॥
ದೇವತಾಯತನಂ ವಿಪ್ರಂ ಧೇನುಂ ಮಧು ಮೃದಂ ಘೃತಂ ।
ಜಾತಿವೃದ್ಧಂ ವಯೋವೃದ್ಧಂ ವಿದ್ಯಾವೃದ್ಧಂ ತಪಸ್ವಿನಂ ॥ ೪೬ ॥
ಅಶ್ವತ್ಥಂ ಚೈತ್ಯವೃಕ್ಷಂ ಚ ಗುರುಂ ಜಲಭೃತಂ ಘಟಂ ।
ಸಿದ್ಧಾಽನ್ನಂ ದಧಿ ಸಿದ್ಧಾರ್ಥಂ ಗಚ್ಛನ್ಕುರ್ಯಾತ್ಪ್ರದಕ್ಷಿಣಂ ॥ ೪೭ ॥
ರಜಸ್ವಲಾಂ ನ ಸೇವೇತ ನಾಽಶ್ನೀಯಾತ್ಸಹ ಭಾರ್ಯಯಾ ।
ಏಕವಾಸಾ ನ ಭುಂಜೀತ ನ ಭುಂಜೀತೋತ್ಕಟಾಸನೇ ॥ ೪೮ ॥
ನಾಽಶ್ನಂತೀಂ ಸ್ತ್ರೀಂ ಸಮೀಕ್ಷೇತ ತೇಜಸ್ಕಾಮೋ ದ್ವಿಜೋತ್ತಮಃ ।
ಅಸಂತರ್ಪ್ಯ ಪಿತ್ರೂನ್ದೇವಾನ್ನಾಽದ್ಯಾದನ್ನಂ ನವಂ ಕ್ವಚಿತ್ ॥ ೪೯ ॥
ಪಕ್ವಾಽನ್ನಂ ಚಾಽಪಿ ನೋ ಮಾಂಸಂ ದೀರ್ಘಕಾಲಂ ಜಿಜೀವಿಷುಃ ।
ನ ಮೂತ್ರಂ ಗೋವ್ರಜೇ ಕುರ್ಯಾನ್ನ ವಲ್ಮೀಕೇ ನ ಭಸ್ಮನಿ ॥ ೫೦ ॥
ನ ಗರ್ತೇಷು ಸಸತ್ವೇಷು ನ ತಿಷ್ಠನ್ನ ವ್ರಜನ್ನಪಿ ।
ಗೋ ವಿಪ್ರ ಸೂರ್ಯ ವಾಯ್ವಗ್ನಿ ಚಂದ್ರರ್ಕ್ಷಾಂಬು ಗುರೂನಪಿ ॥ ೫೧ ॥

---

೪೫. ತನ್ನ ರೂಪವನ್ನು ನೋಡಿಕೊಳ್ಳಕೂಡದು. ಮಳೆ ಸುರಿಯುತ್ತಿರುವಾಗ ಶೀಘ್ರವಾಗಿ ಓಡಕೂಡದು. ಕರುವಿನ ಹಗ್ಗವನ್ನು ದಾಟಬಾರದು. ಬೆತ್ತಲೆಯಾಗಿ ನೀರನ್ನು ಪ್ರವೇಶಿಸಬಾರದು.

೪೬–೪೭. ದೇವಾಲಯ, ಬ್ರಾಹ್ಮಣ, ಹಸು, ಜೇನು, ಮಣ್ಣು, ತುಪ್ಪ, ಇವುಗಳನ್ನೂ, ಜಾತಿ, ವಯಸ್ಸು, ವಿದ್ಯೆಗಳಲ್ಲಿ ವೃದ್ಧರಾದವರನ್ನೂ, ತಪಸ್ವಿ, ಅಶ್ವತ್ಥ, ಛಾಯಾವೃಕ್ಷ, ಗುರು, ನೀರುತುಂಬಿದ ಮಡಿಕೆ, ಸಿದ್ಧಾನ್ನ, ಮೊಸರು, ಸಾಸಿವೆ ಇವುಗಳನ್ನು ದಾರಿಯಲ್ಲಿ ಕಂಡರೆ ಪ್ರದಕ್ಷಿಣೆಮಾಡಿ ಮುಂದಕ್ಕೆ ಹೋಗಬೇಕು.

೪೮. ರಜಸ್ವಲೆಯನ್ನು ಸೇರಬಾರದು. ಭಾರ್ಯೆಯೊಡನೆ ಕುಳಿತು ಭೋಜನ ಮಾಡಕೂಡದು. ಒಂದೇ ಬಟ್ಟೆಯಿಂದ ಊಟಮಾಡಕೂಡದು. ಎತ್ತರವಾದ ಆಸನದಲ್ಲಿ ಕುಳಿತು ಭೋಜನಮಾಡಬಾರದು.

೪೯. ತೇಜಸ್ಸನ್ನು ಬಯಸುವ ಬ್ರಾಹ್ಮಣೋತ್ತಮನು ಭುಂಜಿಸುತ್ತಿರುವ ಹೆಂಗಸನ್ನು ನೋಡಕೂಡದು. ಪಿತೃಗಳನ್ನೂ, ದೇವತೆಗಳನ್ನೂ ತೃಪ್ತಿಗೊಳಿಸದೆ ನವಾನ್ನವನ್ನು ಭುಂಜಿಸಕೂಡದು.

೫೦–೫೪. ದೀರ್ಘಕಾಲ ಜೀವಿಸಲಿಚ್ಛಿಸುವವರು ಪಕ್ವಾನ್ನ ಮತ್ತು ಮಾಂಸಗಳನ್ನು ತಿನ್ನಬಾರದು. ಗೋವಿನ ಕೊಟ್ಟಿಗೆ, ಹುತ್ತ, ಬೂದಿ, ಕುಣಿ, ಪ್ರಾಣಿಗಳಿಂದ ವ್ಯಾಪ್ತವಾದ ಸ್ಥಳ ಇವುಗಳಲ್ಲಿ ಮೂತ್ರವಿಸರ್ಜನೆ ಮಾಡಕೂಡದು.

ಅಭಿಪಶ್ಯನ್ನ ಕುರ್ವೀತ ಮಲಮೂತ್ರವಿಸರ್ಜನಂ ।
ತಿರಸ್ಕೃತ್ಯಾಽವನಿಂ ಲೋಷ್ಟಕಾಷ್ಠಪರ್ಣತೃಣಾದಿಭಿಃ ॥ ೫೨ ॥
ಪ್ರಾವೃತ್ಯ ವಾಸಸಾ ಮೌಲಿಂ ಮೌನೀ ವಿಣ್ಮೂತ್ರಮುತ್ಸೃಜೇತ್ ।
ಯಥಾ ಸುಖಮುಖೋ ರಾತ್ರೌ ದಿನೇ ಚ್ಛಾಯಾಽಂಧಕಾರಯೋಃ ॥ ೫೩ ॥
ಭೀತಿಷು ಪ್ರಾಣಬಾಧಾಯಾಂ ಕುರ್ಯಾನ್ಮಲವಿಸರ್ಜನಂ ।
ಮುಖೇನೋಪಧಮೇನ್ನಾಽಗ್ನಿಂ ನಗ್ನಾಂ ನೇಕ್ಷೇತ ಯೋಷಿತಂ ॥ ೫೪ ॥
ನಾಽಂಘ್ರೀ ಪ್ರತಾಪಯೇದಗ್ನೌ ನವಸ್ತ್ವಶುಚಿ ನಿಕ್ಷಿಪೇತ್ ।
ಪ್ರಾಣಿಹಿಂಸಾಂ ನ ಕುರ್ವೀತ ನಾಽಶ್ನೀಯಾತ್ಸಂಧ್ಯಯೋರ್ದ್ವಯೋಃ ॥ ೫೫ ॥
ನ ಸಂವಿಶೇತ ಸಂಧ್ಯಾಯಾಂ ಪ್ರತ್ಯಕ್ಸೌಮ್ಯಶಿರಾ ಅಪಿ ।
ವಿಣ್ಮೂತ್ರಷ್ಠೀವನಂ ನಾಽಪ್ಸು ಕುರ್ಯಾದ್ದೀರ್ಘಂ ಜಿಜೀವಿಷುಃ ॥ ೫೬ ॥
ನಾಽಽಚಕ್ಷೀತ ಧಯಂತೀಂ ಗಾಂ ನೇಂದ್ರಚಾಪಂ ಪ್ರದರ್ಶಯೇತ್ ।
ನೈಕಃ ಸುಪ್ಯಾತ್ಕ್ವಚಿಚ್ಛೂನ್ಯೇ ನ ಶಯಾನಂ ಪ್ರಬೋಧಯೇತ್ ॥ ೫೭ ॥

---

ಮತ್ತು ನಿಂತುಕೊಂಡೂ, ನಡೆಯುತ್ತಲೂ ಮೂತ್ರವಿಸರ್ಜನೆ ಮಾಡಬಾರದು. ಗೋವು, ಬ್ರಾಹ್ಮಣ, ಸೂರ್ಯ, ವಾಯು, ಅಗ್ನಿ, ಚಂದ್ರ, ನಕ್ಷತ್ರ, ನೀರು, ಗುರು ಇವರನ್ನು ನೋಡುತ್ತ ಮಲಮೂತ್ರವಿಸರ್ಜನೆ ಮಾಡಕೂಡದು. ನೆಲಕ್ಕೆ ಮಣ್ಣಿನ ಹೆಂಟೆ, ಕಟ್ಟಿಗೆ, ಎಲೆ, ಹುಲ್ಲು ಮೊದಲಾದುವನ್ನು ಮುಚ್ಚಿ ತಲೆಗೆ ಬಟ್ಟೆಯನ್ನು ಸುತ್ತಿಕೊಂಡು ಮೌನದಿಂದ ಮಲಮೂತ್ರಗಳನ್ನು ವಿಸರ್ಜನೆ ಮಾಡಬೇಕು. ರಾತ್ರಿಯವೇಳೆ, ಹಗಲು, ನೆರಳು, ಕತ್ತಲೆ, ಭಯ, ಪ್ರಾಣಬಾಧೆ ಇವುಗಳಲ್ಲಿ ತನಗೆ ಹಿತವಾದ ದಿಕ್ಕಿಗೆ ಮುಖವುಳ್ಳವನಾಗಿ ಮಲವಿಸರ್ಜನೆ ಮಾಡಬೇಕು. ಬೆಂಕಿಯನ್ನು ಬಾಯಿಯಿಂದ ಊದಬಾರದು. ಬೆತ್ತಲೆಯಾದ ಹೆಂಗಸನ್ನು ನೋಡಕೂಡದು.

೫೫. ಬೆಂಕಿಯಲ್ಲಿ ಪಾದಗಳನ್ನು ಕಾಯಿಸಬಾರದು; ಅಶುಚಿಯಾದ ವಸ್ತುಗಳನ್ನು ಹಾಕಕೂಡದು; ಪ್ರಾಣಿಹಿಂಸೆಯನ್ನು ಮಾಡಬಾರದು. ಎರಡು ಸಂಧ್ಯಾಕಾಲಗಳಲ್ಲಿಯೂ ಭುಂಜಿಸಕೂಡದು.

೫೬. ಸಂಧ್ಯಾಕಾಲದಲ್ಲಿ ನಿದ್ರಿಸಬಾರದು. ಪಶ್ಚಿಮೋತ್ತರದಿಕ್ಕಿಗೆ ತಲೆಹಾಕಿ ಮಲಗಬಾರದು. ಹೆಚ್ಚುಕಾಲ ಬದುಕಲಿಚ್ಛಿಸುವವರು ನೀರಿನಲ್ಲಿ ಮಲಮೂತ್ರ ವಿಸರ್ಜನೆಯನ್ನೂ, ಉಗುಳುವಿಕೆಯನ್ನೂ ಮಾಡಕೂಡದು.

೫೭. ಗೋವು ಕುಡಿಯುತ್ತಿರುವುದನ್ನು ಹೇಳಕೂಡದು. ಕಾಮನಬಿಲ್ಲನ್ನು ತೋರಿಸಬಾರದು. ಯಾರೂ ಇಲ್ಲದ ಸ್ಥಳದಲ್ಲಿ ಒಬ್ಬನೇ ನಿದ್ರಿಸಬಾರದು. ಮಲಗಿರುವ ಜ್ಯೇಷ್ಠನನ್ನು ಎಚ್ಚರಿಸಕೂಡದು.

ಪಂಥಾನಂ ನೈಕಲೋ ಯಾಯಾನ್ನ ವಾರ್ಯಂಜಲಿನಾ ಪಿಬೇತ್ ।
ನ ದಿವೋದ್ಧೃತಸಾರಂ ಚ ಭಕ್ಷಯೇದ್ದಧಿ ನೋ ನಿಶಿ ॥ ೫೮ ॥
ಸ್ತ್ರೀಧರ್ಮಿಣ್ಯಾ ನಾಽಭಿವದೇನ್ನಾಽದ್ಯಾದಾತೃಪ್ತಿ ರಾತ್ರಿಷು ।
ತೌರ್ಯತ್ರಿಕಪ್ರಿಯೋ ನಸ್ಯಾತ್ಕಾಂಸ್ಯೇ ಪಾದೌ ನ ಧಾವಯೇತ್ ॥ ೫೯ ॥
ಶ್ರಾದ್ಧಂ ಕೃತ್ವಾ ಪರಶ್ರಾದ್ಧೇ ಯೋಽಶ್ನೀಯಾಜ್ಜ್ಞಾನವರ್ಜಿತಃ ।
ದಾತುಃ ಶ್ರಾದ್ಧಫಲಂ ನಾಽಸ್ತಿ ಭೋಕ್ತಾ ಕಿಲ್ಬಿಷಭುಗ್ಭವೇತ್ ॥ ೬೦ ॥
ನ ಧಾರಯೇದನ್ಯಭುಕ್ತಂ ವಾಸಶ್ಚೋಪಾನಹಾವಪಿ ।
ನ ಭಿನ್ನಭಾಜನೇಽಶ್ನೀಯಾನ್ನಾಽಸೀತಾಗ್ನ್ಯಾದಿದೂಷಿತೇ ॥ ೬೧ ॥
ಆರೋಹಣಂ ಗವಾಂ ಪೃಷ್ಠೇ ಪ್ರೇತಧೂಮಂ ಸರಿತ್ತರಂ ।
ಬಾಲಾಽತಪಂ ದಿವಾಸ್ವಾಪಂ ತ್ಯಜೇದ್ದೀರ್ಘಂ ಜಿಜೀವಿಷುಃ ॥ ೬೨ ॥
ಸ್ನಾತ್ವಾ ನ ಮಾರ್ಜಯೇದ್ಗಾತ್ರಂ ವಿಸೃಜೇನ್ನ ಶಿಖಾಂ ಪಥಿ ।
ಹಸ್ತೌ ಶಿರೋ ನ ಧುನುಯಾನ್ನಾಽಕರ್ಷೇದಾಸನಂ ಪದಾ ॥ ೬೩ ॥

---

೫೮. ಒಬ್ಬನೇ ಪ್ರಯಾಣಮಾಡಬಾರದು. ನೀರನ್ನು ಬೊಗಸೆಯಿಂದ ಕುಡಿಯಕೂಡದು. ಹಗಲು ಬೆಣ್ಣೆತೆಗೆದ ಮೊಸರನ್ನೂ, ರಾತ್ರಿ ಮೊಸರನ್ನೂ ಭಕ್ಷಿಸಬಾರದು.

೫೯. ರಜಸ್ವಲೆಯೊಡನೆ ಮಾತನಾಡಬಾರದು. ರಾತ್ರಿಯಲ್ಲಿ ತೃಪ್ತಿಯಾಗುವ ವರೆಗೆ ಊಟಮಾಡಕೂಡದು. ಗೀತ, ನೃತ್ಯ, ವಾದ್ಯಗಳಲ್ಲಿ ಪ್ರೀತಿಯುಳ್ಳವನಾಗ ಬಾರದು. ಕಂಚಿನಲ್ಲಿ ಕಾಲುಗಳನ್ನು ತೊಳೆದುಕೊಳ್ಳಬಾರದು.

೬೦. ಶ್ರಾದ್ಧಮಾಡಿ ಮತ್ತೊಬ್ಬರ ಶ್ರಾದ್ಧದಲ್ಲಿ ಅರಿಯದೆ ಭುಂಜಿಸಿದರೆ ಶ್ರಾದ್ಧಮಾಡಿದವನಿಗೆ ಫಲವು ಲಭಿಸುವುದಿಲ್ಲ. ಹಾಗೆ ಭೋಜನಮಾಡಿದವನೂ ಪಾಪಿಯಾಗುವನು.

೬೧. ಮತ್ತೊಬ್ಬರ ಬಟ್ಟೆಯನ್ನೂ, ಪಾದರಕ್ಷೆಯನ್ನೂ ಧರಿಸಕೂಡದು. ಒಡೆದ ಪಾತ್ರೆಯಲ್ಲಿಯೂ, ಬೆಂಕಿ ಮೊದಲಾದುವುಗಳಿಂದ ಕೆಡಿಸಲ್ಪಟ್ಟ ಸ್ಥಳ ದಲ್ಲಿಯೂ ಊಟಮಾಡಬಾರದು.

೬೨. ಎತ್ತುಗಳಮೇಲೆ ಕುಳಿತುಕೊಳ್ಳುವುದನ್ನೂ, ಚಿತೆಯ ಹೊಗೆಯನ್ನೂ, ನದಿಯನ್ನು ದಾಟುವುದನ್ನೂ, ಎಳೆಬಿಸಿಲನ್ನೂ, ಹಗಲುನಿದ್ರೆಯನ್ನೂ ದೀರ್ಘ ಕಾಲ ಬದುಕಲಿಚ್ಛಿಸುವವನು ತ್ಯಜಿಸಬೇಕು.

೬೩. ಮಿಂದ ತರುವಾಯ ಶರೀರವನ್ನು ಉಜ್ಜಿಕೊಳ್ಳಕೂಡದು. ದಾರಿ ಯಲ್ಲಿ ಜುಟ್ಟನ್ನು ಬಿಡಿಸಬಾರದು. ಕೈತಲೆಗಳನ್ನು ಅಲ್ಲಾಡಿಸಬಾರದು. ಕಾಲಿ ನಿಂದ ಆಸನವನ್ನು ಎಳೆಯಕೂಡದು.

ನೋತ್ಪಾಟಯೇಲ್ಲೋಮನಖಂ ದಶನೇನ ಕದಾಚನ ।
ಕರಜೈಃ ಕರಜಚ್ಛೇದಂ ತೃಣಚ್ಛೇದಂ ವಿವರ್ಜಯೇತ್ ॥ ೧೪ ॥
ಶುಭಾಯ ನ ಯದಾಯತ್ಯಾಂ ತ್ಯಜೇತ್ತತ್ಕರ್ಮ ಯತ್ನತಃ ।
ಅದ್ವಾರೇಣ ನ ಗಂತವ್ಯಂ ಸ್ವವೇಶ್ಮ ಪರವೇಶ್ಮನೋಃ ॥ ೧೫ ॥
ಕ್ರೀಡೇನ್ನಾಕ್ಷೈಃ ಸಹಾಸೀತ ನ ಧರ್ಮಘ್ನೈರ್ನರೋಗಿಭಿಃ ।
ನ ಶಯೀತ ಕ್ವಚಿನ್ನಗ್ನಃ ಪಾಣೌ ಭುಂಜೀತ ನೈವ ಚ ॥ ೧೬ ॥
ಆರ್ದ್ರಪಾದಕರಾಸ್ಯೋಽಶ್ನನ್ದೀರ್ಘಕಾಲಂ ಚ ಜೀವತಿ ।
ಸಂವಿಶೇನ್ನಾಽಽರ್ದ್ರಚರಣೋ ನೋಚ್ಛಿಷ್ಟಃ ಕ್ವಚಿದಾವ್ರಜೇತ್ ॥ ೧೭ ॥
ಶಯನಸ್ಥೋ ನಚಾಽಶ್ನೀಯಾನ್ನ ಪಿಬೇನ್ನ ಜಪೇದ್ದ್ವಿಜಃ ।
ಸೋಪಾನತ್ಕಶ್ಚ ನಾಽಽಚಾಮೇನ್ನ ತಿಷ್ಠನ್ಧಾರಯಾ ಪಿಬೇತ್ ॥ ೧೮ ॥
ಸರ್ವಂ ತಿಲಮಯಂ ನಾಽದ್ಯಾತ್ಸಾಯಂ ಶರ್ಮಾಽಭಿಲಾಷುಕಃ ।
ನ ನಿರೀಕ್ಷೇತ ವಿಣ್ಮೂತ್ರೇ ನೋಚ್ಛಿಷ್ಟಃ ಸಂಸ್ಪೃಶೇಚ್ಛಿರಃ ॥ ೧೯ ॥
ನಾಽಧಿತಿಷ್ಠೇತ್ತುಷಾಂಗಾರ ಭಸ್ಮಕೇಶಕಪಾಲಿಕಾಃ ।
ಪತಿತೈಃ ಸಹ ಸಂವಾಸಃ ಪತನಾಯೈವ ಜಾಯತೇ ॥ ೨೦ ॥

---

೧೪–೧೫. ಒಂದುಸಲವೂ ಕೂದಲು, ಉಗುರುಗಳನ್ನು ಹಲ್ಲಿನಿಂದ ಕೀಳಕೂಡದು. ಉಗುರಿನಿಂದ ಉಗುರನ್ನೂ, ಹುಲ್ಲನ್ನೂ ಕತ್ತರಿಸಬಾರದು. ಮುಂದೆ ಶುಭವನ್ನುಂಟುಮಾಡುವ ಕರ್ಮವನ್ನು ಬಿಡದೆ ಪ್ರಯತ್ನದಿಂದ ಮಾಡಬೇಕು. ತನ್ನ ಮತ್ತು ಇತರರ ಮನೆಗಳಿಗೆ ಹಿಂದಿನ ಬಾಗಿಲಿನಿಂದ ಹೋಗಕೂಡದು.

೧೬. ಪಗಡೆಯಾಟವಾಡಬಾರದು. ಧರ್ಮನಾಶಕರೂ, ರೋಗಿಗಳೂ ಆದವರ ಬಳಿ ಕುಳಿತುಕೊಳ್ಳಬಾರದು. ಒಂದುಸಾರಿಯೂ ಬೆತ್ತಲೆಯಾಗಿ ಮಲಗಕೂಡದು. ಕೈಯಲ್ಲಿ ಅನ್ನವನ್ನು ಹಾಕಿಕೊಂಡು ಭೋಜನಮಾಡಬಾರದು.

೧೭. ಕೈ, ಕಾಲು, ಬಾಯಿಗಳನ್ನು ತೊಳೆದುಕೊಂಡು ಭೋಜನಮಾಡುವವನು ಬಹುಕಾಲ ಜೀವಿಸುವನು. ಒದ್ದೆಕಾಲಿನಿಂದ ನಿದ್ರಿಸಬಾರದು. ಎಂಜಲಿನಿಂದ ಎಲ್ಲಿಗೂ ಹೋಗಬಾರದು.

೧೮. ಬ್ರಾಹ್ಮಣನು ಹಾಸಿಗೆಯಲ್ಲಿ ತಿನ್ನಬಾರದು, ಕುಡಿಯಬಾರದು, ಜಪಿಸಕೂಡದು, ಪಾದರಕ್ಷೆಗಳನ್ನು ಹಾಕಿಕೊಂಡು ಆಚಮನ ಮಾಡಬಾರದು, ನಿಂತುಕೊಂಡು ಧಾರಾಕಾರವಾಗಿ ನೀರನ್ನು ಕುಡಿಯಕೂಡದು.

೧೯. ಸುಖಾಪೇಕ್ಷಿಯು ಸಾಯಂಕಾಲ ಪೂರ್ತಿಯಾಗಿ ಎಳ್ಳಿನಿಂದಾದ ಪದಾರ್ಥವನ್ನು ತಿನ್ನಕೂಡದು. ಮಲಮೂತ್ರಗಳನ್ನು ನೋಡಬಾರದು. ಎಂಜಲಿನಿಂದ ತಲೆಯನ್ನು ಮುಟ್ಟಬಾರದು.

೨೦–೨೧. ಹೊಟ್ಟು, ಇದ್ದಲು, ಬೂದಿ, ಕೂದಲು, ಮಡಿಕೆಯ ಹೋಳು

ಶ್ರಾವಯೇದ್ವೈದಿಕಂ ಮಂತ್ರಂ ನ ಶೂದ್ರಾಯ ಕದಾಚನ ।
ಬ್ರಾಹ್ಮಣ್ಯಾದ್ಧೀಯತೇ ವಿಪ್ರಃ ಶೂದ್ರೋ ಧರ್ಮಾಚ್ಚ ಹೀಯತೇ ॥ ೭೧ ॥
ಧರ್ಮೋಪದೇಶಃ ಶೂದ್ರಾಣಾಂ ಸ್ವಶ್ರೇಯಃ ಪ್ರತಿಘಾತಯೇತ್ ।
ದ್ವಿಜಶುಶ್ರೂಷಣಂ ಧರ್ಮಃ ಶೂದ್ರಾಣಾಂ ಹಿ ಪರೋ ಮತಃ ॥ ೭೨ ॥
ಕಂಡೂಯನಂ ಹಿ ಶಿರಸಃ ಪಾಣಿಭ್ಯಾಂ ನ ಶುಭಂ ಮತಂ ।
ಆತಾಡನಂ ಕರಾಭ್ಯಾಂ ಚ ಕ್ರೋಶನಂ ಕೇಶಲುಂಚನಂ ॥ ೭೩ ॥
ಅಶಾಸ್ತ್ರವರ್ತಿನೋ ಭೂಪಾಲ್ಲುಬ್ಧಾತ್ಕೃತ್ವಾ ಪ್ರತಿಗ್ರಹಂ ।
ಬ್ರಾಹ್ಮಣಃ ಸಾನ್ವಯೋ ಯಾತಿ ನರಕಾನೇಕವಿಂಶತಿಂ ॥ ೭೪ ॥
ಅಕಾಲವಿದ್ಯುತ್ಸ್ತನಿತೇ ವರ್ಷರ್ತೌ ಪಾಂಸುವರ್ಷಣೇ ।
ಮಹಾವಾತಧ್ವನೌ ರಾತ್ರಾವನಧ್ಯಾಯಾಃ ಪ್ರಕೀರ್ತಿತಾಃ ॥ ೭೫ ॥
ಉಲ್ಕಾಪಾತೇ ಚ ಭೂಕಂಪೇ ದಿಗ್ದಾಹೇ ಮಧ್ಯರಾತ್ರಿಷು ।
ಸಂಧ್ಯಯೋರ್ವೃಷಲೋಪಾಂತೇ ರಾಜ್ಞೋ ರಾಹೋಶ್ಚ ಸೂತಕೇ ॥೭೬॥
ದರ್ಶಾಷ್ಟಕಾಸು ಭೂತಾಯಾಂ ಶ್ರಾದ್ಧಿಕಂ ಪ್ರತಿಗೃಹ್ಯ ಚ ।
ಪ್ರತಿಪದ್ಯಪಿ ಪೂರ್ಣಾಯಾಂ ಗಜೋಷ್ಟ್ರಾಭ್ಯಾಂ ಕೃತಾಂತರೇ ॥ ೭೭ ॥
ಜರೋಷ್ಟ್ರಕ್ರೋಷ್ಟುವಿರುತೇ ಸಮವಾಯೇ ರುದತ್ಯಪಿ ।
ಉಪಾಕರ್ಮಣಿ ಚೋತ್ಸರ್ಗೇ ನಾವಿಮಾರ್ಗೇ ತರೌ ಜಲೇ ॥ ೭೮ ॥

---

ಇವುಗಳ ಬಳಿ ನಿಲ್ಲಬಾರದು. ಪತಿತರೊಡನೆ ವಾಸಮಾಡುವವನು ಪತಿತನೇ ಆಗುವನು. ವೈದಿಕಮಂತ್ರವನ್ನು ಶೂದ್ರನಿಗೆ ಕೇಳಿಸಬಾರದು. ಹಾಗೆ ಮಾಡಿದರೆ ಬ್ರಾಹ್ಮಣನ ಬ್ರಾಹ್ಮಣ್ಯವೂ, ಶೂದ್ರನ ಧರ್ಮವೂ ಹಾಳಾಗುವುವು.

೭೨. ಶೂದ್ರರಿಗೆ ಧರ್ಮವನ್ನುಪದೇಶಮಾಡಿದರೆ ಬ್ರಾಹ್ಮಣನ ಶ್ರೇಯಸ್ಸು ಹಾಳಾಗುವುದು. ಶೂದ್ರರಿಗೆ ಬ್ರಾಹ್ಮಣರ ಸೇವೆಯೆ ಉತ್ತಮ ಧರ್ಮವು.

೭೩. ಎರಡು ಕೈಗಳಿಂದಲೂ ತಲೆಯನ್ನು ತುರಿಸಿಕೊಳ್ಳುವುದೂ, ಹೊರಳುವುದೂ, ಕಿರಿಚಿಕೊಳ್ಳುವುದೂ, ಕೂದಲುಗಳನ್ನು ಕೀಳುವುದೂ ಶುಭಕರಗಳಲ್ಲ.

೭೪–೭೫. ಬ್ರಾಹ್ಮಣನು ಶಾಸ್ತ್ರಗಳನ್ನುಲ್ಲಂಘಿಸಿ ನಡೆಯುವ ಲೋಭಿಯಾದ ರಾಜನಿಂದ ಪ್ರತಿಗ್ರಹಮಾಡಿದರೆ ವಂಶೀಕರೊಡನೆ ಇಪ್ಪತ್ತೊಂದು ನರಕಗಳಿಗೆ ಹೋಗುವನು. ಅಕಾಲದಲ್ಲಿ ಮಿಂಚು ಗುಡುಗುಗಳು, ವರ್ಷರ್ತು, ಧೂಳು ಸುರಿಯುವುದು, ಬಿರುಗಾಳಿಯ ಧ್ವನಿಯುಳ್ಳ ರಾತ್ರಿ ಇವುಗಳು ಅನಧ್ಯಾಯಗಳು.

೭೬–೭೯. ಉಲ್ಕಾಪಾತ, ಭೂಕಂಪ, ದಿಗ್ದಾಹ, ಮಧ್ಯರಾತ್ರಿ, ಎರಡು ಸಂಧ್ಯಾಕಾಲಗಳು, ಶೂದ್ರಸಾನ್ನಿಧ್ಯ, ರಾಜಸೂತಕ, ರಾಹುಗ್ರಹಣ, ದರ್ಶ, ಅಷ್ಟಕಶ್ರಾದ್ಧ, ಚತುರ್ದಶೀ, ಶ್ರಾದ್ಧಭೋಜನಮಾಡಿದದಿನ, ಪಾಡ್ಯ, ಹುಣ್ಣಿಮೆ, ಆನೆ, ಒಂಟೆಗಳ ನಡುವೆ, ಕತ್ತೆ, ಒಂಟೆಮರಿ, ಒಂಟೆ ಇವುಗಳ ಕೂಗು, ಸಮೂಹ

ಆರಣ್ಯಕಮಧೀತ್ಯಾಽಪಿ ಬಾಣಸಾಮ್ನೋರಪಿ ಧ್ವನೌ ।
ಅನಧ್ಯಾಯೇಷು ಚೈತೇಷು ನಾಽಧೀಯೀತ ದ್ವಿಜಃ ಕ್ವಚಿತ್ ॥ ೭೯ ॥
ಕೃತಾಽಂತರಾಯೋ ನ ಪಠೇದ್ಭೇಕಾಖುಶ್ವಾಽಹಿ ಬಭ್ರುಭಿಃ ।
ಭೂತಾಷ್ಟಮ್ಯೋಃ ಪಂಚದಶ್ಯೋರ್ಬ್ರಹ್ಮಚಾರೀ ಸದಾ ಭವೇತ್ ॥ ೮೦ ॥
ಅನಾಯುಷ್ಯಕರಂ ಚೈವ ಪರದಾರೋಪಸರ್ಪಣಂ ।
ತಸ್ಮಾತ್ತದ್ದೂರತಸ್ತ್ಯಾಜ್ಯಂ ವೈರಿಣಾಂ ಚೋಪಸೇವನಂ ॥ ೮೧ ॥
ಪೂರ್ವರ್ದ್ಧಿಭಿಃ ಪರಿತ್ಯಕ್ತಮಾತ್ಮಾನಂ ನಾಽವಮಾನಯೇತ್ ।
ಸದೋದ್ಯಮವತಾಂ ಯಸ್ಮಾಚ್ಛ್ರಿಯೋ ವಿದ್ಯಾ ನ ದುರ್ಲಭಾಃ ॥ ೮೨ ॥
ಸತ್ಯಂ ಬ್ರೂಯಾತ್ಪ್ರಿಯಂ ಬ್ರೂಯಾನ್ನ ಬ್ರೂಯಾತ್ಸತ್ಯಮಪ್ರಿಯಂ ।
ಪ್ರಿಯಂ ಚ ನಾಽನೃತಂ ಬ್ರೂಯಾದೇಷ ಧರ್ಮೋ ಘಟೋದ್ಭವ ॥ ೮೩ ॥
ಭದ್ರಮೇವ ವದೇನ್ನಿತ್ಯಂ ಭದ್ರಮೇವ ವಿಚಿಂತಯೇತ್ ।
ಭದ್ರೈರೇವೇಹ ಸಂಸರ್ಗೋ ನಾಽಭದ್ರೈಶ್ಚ ಕದಾಚನ ॥ ೮೪ ॥
ರೂಪವಿತ್ತಕುಲೈರ್ಹೀನಾನ್ಸುಧೀರ್ನಾಧಿಕ್ಷಿಪೇನ್ನರಾನ್ ।
ಪುಷ್ಪವಂತೌ ನಚೇಕ್ಷೇತ ತ್ವಶುಚಿರ್ಜ್ಯೋತಿಷಾಂ ಗಣಂ ॥ ೮೫ ॥

---

ರೋದನ, ಉಪಾಕರ್ಮ, ಉತ್ಸರ್ಜನ, ದೋಣಿಯ ಪ್ರಯಾಣ, ಮರದ ಮೇಲೆ, ನೀರು, ಆರಣ್ಯಕಾಧ್ಯಯನಾನಂತರ, ಬಾಣ, ಸಾಮವೇದಗಳ ಶಬ್ದ, ಈ ಅನಧ್ಯಾಯ ನಿಮಿತ್ತಗಳಲ್ಲಿ ಬ್ರಾಹ್ಮಣನು ಅಧ್ಯಯನ ಮಾಡಕೂಡದು.

೮೦. ಕಪ್ಪೆ, ಇಲಿ, ನಾಯಿ, ಸರ್ಪ, ಮುಂಗಸಿ ಇವುಗಳಿಂದ ವಿಘ್ನವುಂಟಾದರೆ ಅಧ್ಯಯನ ಮಾಡಬಾರದು. ಚತುರ್ದಶೀ, ಅಷ್ಟಮೀ, ಹುಣ್ಣಿಮೆ, ಅಮಾವಾಸ್ಯೆಗಳಲ್ಲಿ ಯಾವಾಗಲೂ ಬ್ರಹ್ಮಚಾರಿಯಾಗಿರಬೇಕು.

೮೧. ಆಯುಷ್ಯವನ್ನು ಕಡಮೆಮಾಡುವ ಪರಪತ್ನೀಗಮನ, ಶತ್ರುಸೇವೆ ಇವುಗಳನ್ನು ದೂರದಿಂದಲೇ ತ್ಯಜಿಸಬೇಕು.

೮೨. ಹಿಂದಿನ ಸಂಪತ್ಸಮೃದ್ಧಿಯನ್ನು ಕಳೆದುಕೊಂಡ ತನ್ನನ್ನು ಅವಮಾನಗೊಳಿಸಿಕೊಳ್ಳಕೂಡದು. ಯಾವಾಗಲೂ ಉದ್ಯಮವುಳ್ಳವರಿಗೆ ಸಂಪತ್ತು, ವಿದ್ಯೆಗಳು ದುರ್ಲಭಗಳಲ್ಲ.

೮೩–೮೪. ಎಲೈ ಅಗಸ್ತ್ಯನೆ! ಸತ್ಯವನ್ನು ಹೇಳಬೇಕು. ಹಿತವನ್ನು ನುಡಿಯಬೇಕು. ಅಹಿತವಾದ ಸತ್ಯವನ್ನು ಹೇಳಬಾರದು. ಸುಳ್ಳು ಪ್ರಿಯವಾಗಿದ್ದರೂ ಹೇಳಕೂಡದು. ಇದು ಧರ್ಮವು. ಯಾವಾಗಲೂ ಒಳ್ಳೆಯದನ್ನೆ ಮಾತನಾಡಬೇಕು. ಒಳ್ಳೆಯದನ್ನೆ ಆಲೋಚಿಸಬೇಕು. ಒಳ್ಳೆಯವರ ಸಹವಾಸವನ್ನೇ ಮಾಡಬೇಕು. ಕೆಟ್ಟವರ ಸಹವಾಸವನ್ನು ಮಾಡಕೂಡದು.

೮೫–೮೬. ವಿದ್ವಾಂಸನು ರೂಪ, ದ್ರವ್ಯ, ವಂಶ ಇವುಗಳಿಂದ ಹೀನರಾದ

**ವಾಚೋವೇಗಂ ಮನೋವೇಗಂ ಜಿಹ್ವಾವೇಗಂ ಚ ವರ್ಜಯೇತ್ ।**
**ಉತ್ಕೋಚದ್ಯೂತದೌತ್ಯಾರ್ತದ್ರವ್ಯಂ ದೂರಾತ್ಪರಿತ್ಯಜೇತ್ ॥ ೮೬ ॥**
**ಗೋಬ್ರಾಹ್ಮಣಾಽಗ್ನೀನುಚ್ಛಿಷ್ಟಪಾಣಿನಾ ನೈವ ಸಂಸ್ಪೃಶೇತ್ ।**
**ನ ಸ್ಪೃಶೇದನಿಮಿತ್ತೇನ ಖಾನಿ ಸ್ವಾನಿ ತ್ವನಾತುರಃ ॥ ೮೭ ॥**
**ಗುಹ್ಯಜಾನ್ಯಪಿ ಲೋಮಾನಿ ತತ್ಸ್ಪರ್ಶಾದಶುಚಿರ್ಭವೇತ್ ।**
**ಪಾದಧೌತೋದಕಂ ಮೂತ್ರಮುಚ್ಛಿಷ್ಟಾನ್ಯುದಕಾನಿ ಚ ॥ ೮೮ ॥**
**ನಿಷ್ಠೀವನಂ ಚ ಶ್ಲೇಷ್ಮಾಣಂ ಗೃಹಾದ್ದೂರಂ ವಿನಿಕ್ಷಿಪೇತ್ ।**
**ಅಹರ್ನಿಶಂ ಶ್ರುತೇರ್ಜಾಪ್ಯಾಚ್ಛೌಚಾಚಾರನಿಷೇವಣಾತ್ ।**
**ಅದ್ರೋಹವತ್ಯಾ ಬುದ್ಧ್ಯಾ ಚ ಪೂರ್ವಂ ಜನ್ಮ ಸ್ಮರೇದ್ದ್ವಿಜಃ ॥ ೮೯ ॥**
**ವೃದ್ಧಾನ್ಪ್ರಯತ್ನಾದ್ವಂದೇತ ದದ್ಯಾತ್ತೇಷಾಂ ಸ್ವಮಾಸನಂ ।**
**ವಿನಮ್ರಧಮನಿಸ್ತಸ್ಮಾದನುಯಾಯಾತ್ತತಶ್ಚ ತಾನ್ ॥ ೯೦ ॥**
**ಶ್ರುತಿಭೂದೇವದೇವಾನಾಂ ನೃಪ ಸಾಧು ತಪಸ್ವಿನಾಂ ।**
**ಪತಿವ್ರತಾನಾಂ ನಾರೀಣಾಂ ನಿಂದಾಂ ಕುರ್ಯಾನ್ನ ಕರ್ಹಿಚಿತ್ ॥ ೯೧ ॥**
**ನ ಮನುಷ್ಯಸ್ತುತಿಂ ಕುರ್ಯಾನ್ನಾಽಽತ್ಮಾನಮುಪಮಾನಯೇತ್ ।**
**ಅಭ್ಯುದ್ಯತಂ ನ ಪ್ರಣುದೇತ್ಪರಮರ್ಮಾಣಿ ನೋಚ್ಚರೇತ್ ॥ ೯೨ ॥**

---

ಮಾನವರನ್ನು ನಿಂದಿಸಬಾರದು. ಅಶುದ್ಧನಾಗಿ ಸೂರ್ಯಚಂದ್ರರನ್ನೂ, ನಕ್ಷತ್ರಗಳ ಸಮೂಹವನ್ನೂ ನೋಡಕೂಡದು. ವಾಗ್ವೇಗ, ಮನೋವೇಗ, ಜಿಹ್ವಾವೇಗ ಗಳನ್ನು ಬಿಡಬೇಕು. ಲಂಚಕೋರ, ಜೂಜುಗಾರ, ಸೇವಕ, ದುಃಖಿ ಇವರ ದ್ರವ್ಯವನ್ನೂ ದೂರದಿಂದಲೆ ಬಿಡಬೇಕು.

೮೭–೮೯. ಎಂಜಲುಕೈಯಿಂದ ಗೋವು, ಬ್ರಾಹ್ಮಣ, ಅಗ್ನಿಗಳನ್ನು ಮುಟ್ಟ ಕೂಡದು. ರೋಗವಿಲ್ಲದವನು ಕಾರಣವಿಲ್ಲದೆ ತನ್ನ ಇಂದ್ರಿಯಗಳನ್ನೂ ಗುಹ್ಯೇಂದ್ರಿಯರೋಮಗಳನ್ನೂ ಮುಟ್ಟಬಾರದು. ಅದನ್ನು ಮುಟ್ಟಿದರೆ ಅಶುದ್ಧನಾಗುವನು. ಕಾಲನ್ನು ತೊಳೆದ ನೀರು, ಮೂತ್ರ, ಎಂಜಲನ್ನ, ಎಂಜಲು ನೀರು, ಉಗುಳು, ಕಫ, ಇವುಗಳನ್ನು ಮನೆಯಿಂದ ದೂರದಲ್ಲಿ ಬಿಸಾಡಬೇಕು. ಬ್ರಾಹ್ಮಣನು ಹಗಲು ರಾತ್ರಿ ವೇದಾಧ್ಯಯನ, ಶೌಚಾಚಾರಗಳಿಂದಲೂ, ದ್ರೋಹವಿಲ್ಲದ ಬುದ್ಧಿಯಿಂದಲೂ ಹಿಂದಿನ ಜನ್ಮವನ್ನು ಸ್ಮರಿಸಬೇಕು.

೯೦. ವೃದ್ಧರನ್ನು ಪ್ರಯತ್ನದಿಂದ ವಂದಿಸಬೇಕು. ಅವರಿಗೆ ತನ್ನ ಆಸನವನ್ನೀಯಬೇಕು. ಬಳಿಕ ಅವರನ್ನು ನಮ್ರತೆಯಿಂದ ಹಿಂಬಾಲಿಸಬೇಕು.

೯೧. ವೇದ, ಬ್ರಾಹ್ಮಣ, ದೇವತೆ, ರಾಜ, ಸಜ್ಜನ, ಮುನಿ, ಪತಿವ್ರತಾ ಸ್ತ್ರೀ ಇವರ ನಿಂದೆಯನ್ನು ಯಾವಾಗಲೂ ಮಾಡಕೂಡದು.

೯೨. ಮನುಷ್ಯಸ್ತುತಿಯನ್ನು ಮಾಡಬಾರದು. ತನ್ನನ್ನು ತಾನೆ ಅವಮಾನ

ಅಧರ್ಮಾದೇಧತೇ ಪೂರ್ವಂ ವಿದ್ವೇಷ್ಟ್ರೂನಪಿ ಸಂಜಯೇತ್ ।
ಸರ್ವತೋ ಭದ್ರಮಾಪ್ಯಾಽಪಿ ತತೋ ನಶ್ಯೇಚ್ಚ ಸಾಽನ್ವಯಃ ॥ ೯೩ ॥
ಉದ್ಧೃತ್ಯ ಪಂಚ ಮೃತ್ಪಿಂಡಾನ್ ಸ್ನಾಯಾತ್ಪರಜಲಾಶಯೇ ।
ಅನುದ್ಧೃತ್ಯ ಚ ತತ್ಕರ್ತುರೇನಸಃ ಸ್ಯಾತ್ತುರೀಯಭಾಕ್ ॥ ೯೪ ॥
ಶ್ರದ್ಧಯಾ ಪಾತ್ರಮಾಸಾದ್ಯ ಯತ್ಕಿಂಚಿದ್ದೀಯತೇ ವಸು ।
ದೇಶೇ ಕಾಲೇ ಚ ವಿಧಿನಾ ತದಾನಂತ್ಯಾಯ ಕಲ್ಪತೇ ॥ ೯೫ ॥
ಭೂಪ್ರದೋ ಮಂಡಲಾಧೀಶಃ ಸರ್ವತ್ರ ಸುಖಿನೋಽನ್ನದಾಃ ।
ತೋಯದಾತಾ ಸದಾತೃಪ್ತೋ ರೂಪವಾನ್ರೂಪ್ಯದೋ ಭವೇತ್ ॥ ೯೬ ॥
ಪ್ರದೀಪದೋ ನಿರ್ಮಲಾಕ್ಷೋ ಗೋದಾತಾಽರ್ಯಮಲೋಕಭಾಕ್ ।
ಸ್ವರ್ಣದಾತಾಚ ದೀರ್ಘಾಯುಸ್ತಿಲದಃ ಸ್ಯಾತ್ತು ಸುಪ್ರಜಾಃ ॥ ೯೭ ॥
ವೇಶ್ಮದೋಽತ್ಯುಚ್ಚ ಸೌಧೇಶೋ ವಸ್ತ್ರದಶ್ಚಂದ್ರಲೋಕಭಾಕ್ ।
ಹಯಪ್ರದೋ ದಿವ್ಯಯಾನೋ ಲಕ್ಷ್ಮೀವಾನ್ವೃಷಭಪ್ರದಃ ॥ ೯೮ ॥

---

ಮಾಡಿಕೊಳ್ಳಬಾರದು. ಉದ್ಯೋಗಮಾಡುತ್ತಿರುವವನನ್ನು ತಡೆಯಕೂಡದು. ಇತರರ ಮರ್ಮಗಳನ್ನು ಹೇಳಬಾರದು.

೯೩. ಅಧರ್ಮದಿಂದ ಮೊದಮೊದಲು ಅಭಿವೃದ್ಧಿಯುಂಟಾಗುವುದು. ಶತ್ರುಗಳನ್ನೂ ಜಯಿಸಬಹುದು. ಹೀಗೆ ಎಲ್ಲ ವಿಷಯದಲ್ಲಿಯೂ ಶುಭವನ್ನು ಹೊಂದಿದರೂ ಆದರಿಂದ ತನ್ನ ವಂಶದವರೊಡನೆ ನಾಶವಾದಾನು.

೯೪. ಇತರ ಜಲಾಶಯಗಳಲ್ಲಿ ಐದು ಮಣ್ಣಿನ ಉಂಡೆಗಳನ್ನು ತೆಗೆದು ಸ್ನಾನ ಮಾಡಬೇಕು. ಹಾಗೆ ಮಾಡದೆ ಮಿಂದರೆ ಆ ಕೆರೆಯನ್ನು ನಿರ್ಮಿಸಿದವನ ಪಾಪದ ನಾಲ್ಕನೆಯ ಒಂದಂಶವನ್ನು ಹೊಂದುವನು.

೯೫. ಸತ್ಪಾತ್ರನಲ್ಲಿ ದೇಶಕಾಲವನ್ನರಿತು ಶ್ರದ್ಧೆಯಿಂದ ಅಲ್ಪವನ್ನೇ ದಾನ ಮಾಡಿದರೂ ಅದು ಅನಂತವಾಗುವುದು.

೯೬. ಭೂಮಿಯನ್ನು ದಾನಮಾಡಿದವನು ರಾಷ್ಟ್ರಾಧೀಶನೂ, ಅನ್ನನೀಡಿದವನು ಸುಖಿಯೂ, ನೀರನ್ನು ಕೊಟ್ಟವನು ಯಾವಾಗಲೂ ತೃಪ್ತನೂ, ಬೆಳ್ಳಿಯನ್ನು ದಾನಮಾಡಿದವನು ಸುಂದರನೂ ಆಗುವನು.

೯೭–೯೮. ದೀಪವನ್ನು ದಾನಮಾಡಿದವನು ನಿರ್ಮಲವಾದ ಕಣ್ಣುಳ್ಳವನೂ, ಗೋವನ್ನು ದಾನಮಾಡಿದವನು ಸೂರ್ಯಲೋಕವನ್ನು ಸೇರುವನು. ಸುವರ್ಣವನ್ನಿತ್ತವನು ದೀರ್ಘಾಯುಷ್ಮಂತನೂ, ತಿಲದಾನಮಾಡಿದವನು ಸತ್ಪ್ರಜೆಯುಳ್ಳವನೂ ಆಗುವರು. ಗೃಹವನ್ನಿತ್ತವನು ಉನ್ನತವಾದ ಮಹಡಿಯ ಮನೆಯುಳ್ಳವನೂ, ವಸ್ತ್ರದಾನಮಾಡಿದವನು ಚಂದ್ರಲೋಕವನ್ನು ಸೇರುವವನೂ, ಕುದುರೆಯನ್ನು ದಾನಮಾಡಿದವನು ದಿವ್ಯವಾಹನವುಳ್ಳವನೂ, ಎತ್ತನ್ನು ಕೊಟ್ಟವನು ಸಂಪತ್ತುಳ್ಳವನೂ ಆಗುವನು.

**ಸುಭಾರ್ಯಃ ಶಿಬಿಕಾದಾತಾ ಸುಪರ್ಯಂಕಪ್ರದೋಽಪಿ ಚ ।**
**ಧಾನ್ಯೈಃ ಸಮೃದ್ಧಿಮಾನ್ನಿತ್ಯಮಭಯಪ್ರದ ಈಶಿತಾ ॥ ೯೯ ॥**
**ಬ್ರಹ್ಮದೋ ಬ್ರಹ್ಮಲೋಕೇಜ್ಯೋ ಬ್ರಹ್ಮದಃ ಸರ್ವದೋ ಮತಃ ।**
**ಉಪಾಯೇನಾಽಪಿ ಯೋ ಬ್ರಹ್ಮ ದಾಪಯೇತ್ಸೋಽಪಿ ತತ್ಸಮಃ ॥ ೧೦೦ ॥**
**ಶ್ರದ್ಧಯಾ ಪ್ರತಿಗೃಹ್ಣಾತಿ ಶ್ರದ್ಧಯಾ ಯಃ ಪ್ರಯಚ್ಛತಿ ।**
**ಸ್ವರ್ಗಿಣೌ ತಾವುಭೌ ಸ್ಯಾತಾಂ ಪತತೋಽಶ್ರದ್ಧಯಾ ತ್ವಧಃ ॥ ೧೦೧ ॥**
**ಅನೃತೇನ ಕ್ಷರೇದ್ಯಜ್ಞಸ್ತಪೋ ವಿಸ್ಮಯತಃ ಕ್ಷರೇತ್ ।**
**ಕ್ಷರೇತ್ಕೀರ್ತನತೋ ದಾನಮಾಯುರ್ವಿಪ್ರಾಽಪವಾದತಃ ॥ ೧೦೨ ॥**
**ಗಂಧಪುಷ್ಪಕುಶಾಂಛಯ್ಯಾಂ ಶಾಕಂ ಮಾಂಸಂ ಪಯೋ ದಧಿ ।**
**ಮಣಿಮತ್ಸ್ಯ ಗೃಹಂ ಧಾನ್ಯಂ ಗ್ರಾಹ್ಯಮೇತದುಪಸ್ಥಿತಂ ॥ ೧೦೩ ॥**
**ಮಧೂದಕಂ ಫಲಂ ಮೂಲಮೇಧಾಂಸ್ಯಭಯದಕ್ಷಿಣಾ ।**
**ಅಭ್ಯುದ್ಯತಾನಿ ಗ್ರಾಹ್ಯಾಣಿ ತ್ವೇತಾನ್ಯಪಿ ನಿಕೃಷ್ಟತಃ ॥ ೧೦೪ ॥**
**ದಾಸ ನಾಪಿತ ಗೋಪಾಲ ಕುಲ ಮಿತ್ರಾರ್ಧಸೀರಿಣಃ ।**
**ಭೋಜ್ಯಾನ್ನಾಃ ಶೂದ್ರವರ್ಗೇಽಮೀ ತಥಾತ್ಮನಿವೇದಕಃ ॥ ೧೦೫ ॥**

---

೯೯–೧೦೦. ಪಲ್ಲಕ್ಕಿಯನ್ನಿತ್ತವನು ಒಳ್ಳೆಯ ಪತ್ನಿಯುಳ್ಳವನೂ, ಒಳ್ಳೆಯ ಮಂಚವನ್ನಿತ್ತವನು ಧಾನ್ಯಸಮೃದ್ಧಿಯುಳ್ಳವನೂ, ಅಭಯದಾನಮಾಡಿದವನು ರಾಜನೂ, ವೇದವನ್ನು ದಾನಮಾಡಿದವನು ಬ್ರಹ್ಮಲೋಕಪೂಜ್ಯನೂ ಆಗುವನು. ವೇದವನ್ನಿತ್ತವನು ಸರ್ವದಾನಮಾಡಿದವನಂತಾಗುವನು. ಸಂಬಳವನ್ನು ಪಡೆದು ವೇದವನ್ನು ದಾನಮಾಡುವವನೂ ಧರ್ಮಾರ್ಥವಾಗಿ ವೇದವನ್ನು ದಾನಮಾಡಿದವನಂತೆಯೇ ಪುಣ್ಯಶಾಲಿಯಾಗುವನು.

೧೦೧. ಶ್ರದ್ಧೆಯಿಂದ ದಾನಮಾಡುವವನೂ, ದಾನ ತೆಗೆದುಕೊಳ್ಳುವವನೂ, ಇಬ್ಬರೂ ಸ್ವರ್ಗಭಾಗಿಗಳು. ಅಶ್ರದ್ಧೆಯಿಂದ ದಾನಮಾಡುವವರೂ ತೆಗೆದುಕೊಳ್ಳುವವರೂ ಪತಿತರಾಗುವರು.

೧೦೨. ಯಜ್ಞವು ಸುಳ್ಳಿನಿಂದಲೂ, ತಪಸ್ಸು ಗರ್ವದಿಂದಲೂ, ದಾನವು ಹೇಳಿಕೊಳ್ಳುವುದರಿಂದಲೂ, ಆಯುಸ್ಸು ಬ್ರಾಹ್ಮಣನಿಂದೆಯಿಂದಲೂ ಹಾಳಾಗುವುವು.

೧೦೩–೧೦೪. ತಾನಾಗಿ ಒದಗಿಬಂದಿರುವ ಗಂಧ, ಪುಷ್ಪ, ದರ್ಭೆ, ಹಾಸಿಗೆ, ತರಕಾರಿ, ಮಾಂಸ, ಹಾಲು, ಮೊಸರು, ರತ್ನ, ಮೀನು, ಮನೆ, ಧಾನ್ಯ, ಜೇನು, ನೀರು, ಫಲ, ಗೆಣಸು, ಕಟ್ಟಿಗೆ, ಅಭಯ, ದಕ್ಷಿಣೆ ಇವುಗಳನ್ನು ನೀಚನಿಂದಲೂ ತೆಗೆದುಕೊಳ್ಳಬಹುದು.

೧೦೫. ಶೂದ್ರರಲ್ಲಿ ಸೇವಕ, ಕ್ಷೌರಿಕ, ಗೊಲ್ಲ, ವಂಶಮಿತ್ರ, ಒಕ್ಕಲಿಗ, ಭಕ್ತ ಇವರು ಭೋಜ್ಯಾನ್ನರು.

ಇತ್ಥಮಾನೃಣ್ಯಮಾಸಾದ್ಯ ದೇವರ್ಷಿಪಿತೃಜಾದೃಣಾತ್ ।
ಮಾಧ್ಯಸ್ಥ್ಯಮಾಶ್ರಯೇದ್ಗೇಹೇ ಸುತೇ ವಿಷ್ಯಗ್ವಿಸೃಜ್ಯಚ ॥ ೧೦೬ ॥
ಗೇಹೇಽಪಿ ಜ್ಞಾನಮಭ್ಯಸ್ಯೇತ್ಕಾಶೀಂ ವಾಥ ಸಮಾಶ್ರಯೇತ್ ।
ಸಮ್ಯಕ್ಜ್ಞಾನೇನ ವಾ ಮುಕ್ತಿಃ ಕಿಂವಾ ವಿಶ್ವೇಶವೇಶ್ಮನಿ ॥ ೧೦೭ ॥
ಸಮ್ಯಕ್ಜ್ಞಾನಂ ಭವೇತ್ಪುಂಸಾಂ ಕುತ ಏಕೇನ ಜನ್ಮನಾ ।
ವಾರಾಣಸ್ಯಾಂ ಧ್ರುವಾ ಮುಕ್ತಿಃ ಶರೀರತ್ಯಾಗಮಾತ್ರತಃ ॥ ೧೦೮ ॥
ಅದ್ಯ ಶ್ವೋ ವಾ ಪರಶ್ವೋ ವಾ ಕಾಲಾದ್ವಾಽಥ ಪರಃಶತಾತ್ ।
ಸತ್ವರೋ ಗತ್ವರೋ ದೇಹಃ ಕಾಶ್ಯಾಂ ಚೇದಮೃತೀ ಭವೇತ್ ॥ ೧೦೯ ॥
ಸಾಚ ವಾರಾಣಸೀ ಲಭ್ಯಾ ಸದಾಚಾರವತಾ ಸದಾ ।
ಮನಸಾಽಪಿ ಸದಾಚಾರಮತೋ ವಿದ್ವಾನ್ನ ಲಂಘಯೇತ್ ॥ ೧೧೦ ॥
ಆಕರ್ಣ್ಯೇತಿ ತತೋಽಗಸ್ತ್ಯಃ ಪುನಃ ಪ್ರಾಹ ಷಡಾನನಂ ।
ಪುನಃ ಕಾಶೀಂ ಸಮಾಚಕ್ಷ್ವ ಸದಾಚಾರೇಣ ಯಾಽಽಪ್ಯತೇ ॥ ೧೧೧ ॥
ಕಾನಿ ಕಾನಿಚ ಲಿಂಗಾನಿ ಸ್ಕಂದ ಜ್ಞಾನಪ್ರದಾನಿಚ ।
ವಾರಾಣಸ್ಯಾಂ ಪರಿಬ್ರೂಹಿ ತಾನಿ ಮೇ ಪರಿಪೃಚ್ಛತಃ ॥ ೧೧೨ ॥

---

೧೦೬. ಹೀಗೆ ಗೃಹಸ್ಥನು ದೇವರ್ಷಿ, ಪಿತೃಋಣಗಳಿಂದ ಆನೃಣ್ಯವನ್ನು ಹೊಂದಿ ಪುತ್ರನಲ್ಲಿ ಎಲ್ಲವನ್ನೂ ಇಟ್ಟು ಉದಾಸೀನನಾಗಬೇಕು.

೧೦೭. ಮನೆಯಲ್ಲಿ ಜ್ಞಾನವನ್ನು ಅಭ್ಯಾಸಮಾಡಬೇಕು. ಅಥವಾ ಕಾಶಿಯನ್ನು ಆಶ್ರಯಿಸಬೇಕು. ಸಮ್ಯಕ್ ಜ್ಞಾನದಿಂದಾಗಲಿ, ಕಾಶೀವಾಸದಿಂದಾಗಲಿ ಮೋಕ್ಷವಾಗುವುದು.

೧೦೮. ಸಮ್ಯಕ್ ಜ್ಞಾನವು ಮನುಷ್ಯನಿಗೆ ಒಂದು ಜನ್ಮದಿಂದ ಹೇಗುಂಟಾಗುವುದು? ಕಾಶಿಯಲ್ಲಿ ದೇಹವನ್ನು ತ್ಯಾಗಮಾಡುವುದರಿಂದಲೇ ನಿಶ್ಚಯವಾಗಿಯೂ ಮೋಕ್ಷವುಂಟಾಗುವುದು.

೧೦೯. ಈ ಶರೀರವು ಈ ದಿನವಾಗಲಿ, ನಾಳೆಯಾಗಲಿ, ನಾಳಿದ್ದಾಗಲಿ, ನೂರುವರ್ಷಗಳಮೇಲಾಗಲಿ ಶೀಘ್ರವಾಗಿ ನಾಶವಾಗುವಂಥದು. ಇದು ಕಾಶಿಯಲ್ಲಿ ಮೃತವಾದರೆ ಮೋಕ್ಷವನ್ನು ಹೊಂದುವುದು.

೧೧೦. ಆ ಕಾಶಿಯು ಸದಾಚಾರವುಳ್ಳವನಿಗೆ ಲಭಿಸುವುದು. ಆದುದರಿಂದ ವಿದ್ವಾಂಸನು ಮನಸ್ಸಿನಿಂದಲೂ ಸದಾಚಾರವನ್ನು ಮೀರಬಾರದು."

೧೧೧–೧೧೨. ಅಗಸ್ತ್ಯನು ಈ ಮಾತನ್ನು ಕೇಳಿ ಮರಳಿ ಸ್ಕಂದನನ್ನು ಕುರಿತು ಇಂತೆಂದನು. "ಸದಾಚಾರದಿಂದ ಲಭಿಸುವ ಕಾಶಿಯ ವಿಷಯವನ್ನು ಪುನಃ ನನಗೆ ಹೇಳು. ಸ್ಕಂದ! ವಾರಾಣಸಿಯಲ್ಲಿ ಜ್ಞಾನವನ್ನು ನೀಡುವ ಲಿಂಗಗಳು ಯಾವುವು? ಅದನ್ನು ಕೇಳುತ್ತಿರುವ ನನಗೆ ಹೇಳು.

ವಿನಾ ಕಾಶೀಂ ನಮೇ ಪ್ರೀತಿರ್ವಿನಾ ಕಾಶೀಂ ನ ಮೇ ರತಿಃ ।
ಚಿತ್ರಪುತ್ರಕವಚ್ಚಾಽಸ್ಮಿ ವಿನಾ ಕಾಶೀಂ ಷಡಾನನ ॥ ೧೧೩ ॥
ನ ನಿದ್ರಾಮಿ ನಜಾಗರ್ಮಿ ನಾಽಶ್ನಾಮಿ ನಪಿಬಾಮ್ಯಪಃ ।
ಕಾಶೀಂ ದ್ವ್ಯಕ್ಷರಪೀಯೂಷಂ ಪಿಬಾಮಿಹಿ ಚ ಕೇವಲಂ ॥ ೧೧೪ ॥
ಇತಿ ಶ್ರುತ್ವಾ ವಚಃ ಸ್ಕಂದೋ ಮೈತ್ರಾವರುಣಿಭಾಷಿತಂ ।
ಅವಿಮುಕ್ತಸ್ಯ ಮಾಹಾತ್ಮ್ಯಂ ವಕ್ತುಂ ಸಮುಪಚಕ್ರಮೇ ॥ ೧೧೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ವಿವಾಹವರ್ಣನಂ"
ನಾಮ ಅಷ್ಟತ್ರಿಂಶೋಽಧ್ಯಾಯಃ

---

೧೧೩. ಕಾಶಿಯನ್ನು ಬಿಟ್ಟು ನನಗೆ ಪ್ರೀತಿಯಾಗಲಿ, ಸುಖವಾಗಲಿ ಇಲ್ಲ. ಚಿತ್ರದಲ್ಲಿ ಬರೆದ ಬೊಂಬೆಯಂತಾಗಿರುವೆನು.

೧೧೪. ನಾನು ನಿದ್ರಿಸುವುದಿಲ್ಲ. ಜಾಗರಗೊಳ್ಳುವುದಿಲ್ಲ. ಭುಜಿಸುವುದಿಲ್ಲ. ನೀರನ್ನು ಕುಡಿಯುವುದಿಲ್ಲ. ಕೇವಲ ಕಾಶಿಯೆಂಬ ಎರಡಕ್ಷರದ ಅಮೃತವನ್ನು ಮಾತ್ರ ಕುಡಿಯುತ್ತಿರುತ್ತೇನೆ."

೧೧೫. ಸ್ಕಂದನು ಹೀಗೆ ಅಗಸ್ತ್ಯನ ಮಾತನ್ನು ಕೇಳಿ ಕಾಶಿಯ ಮಾಹಾತ್ಮ್ಯವನ್ನು ಮತ್ತೂ ಹೇಳಲಾರಂಭಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ವಿವಾಹವರ್ಣನ"ವೆಂಬ
ಮೂವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಚತ್ವಾರಿಂಶೋಽಧ್ಯಾಯಃ

### ಅವಿಮುಕ್ತೇಶಾವಿರ್ಭಾವವರ್ಣನಂ

ಸ್ಕಂದ ಉವಾಚ :—

ಶೃಣ್ವಗಸ್ತ್ಯ ಮಹಾಭಾಗ ಕಥಾಂ ಪಾಪಪ್ರಣಾಶಿನೀಂ ।
ನೈಃಶ್ರೇಯಸ್ಯಾಃ ಶ್ರಿಯೋಹೇತುಮವಿಮುಕ್ತಸಮಾಶ್ರಯಾಂ ॥ ೧ ॥
ಪರಂ ಬ್ರಹ್ಮ ಯದಾಮ್ನಾತಂ ನಿಷ್ಪ್ರಪಂಚಂ ನಿರಾತ್ಮಕಂ ।
ನಿರ್ವಿಕಲ್ಪಂ ನಿರಾಕಾರಮವ್ಯಕ್ತಂ ಸ್ಥೂಲಸೂಕ್ಷ್ಮವತ್ ॥ ೨ ॥
ತದೇತತ್ಕ್ಷೇತ್ರಮಾಪೂರ್ಯ ಸ್ಥಿತಂ ಸರ್ವಗಮಪ್ಯಹೋ ।
ಕಿಮನ್ಯತ್ರ ನಶಕ್ನೋಽಸೌ ಜಂತೂನ್ಮೋಚಯಿತುಂ ಭವಾತ್ ॥ ೩ ॥
ಭವೋ ಧ್ರುವಂ ಯದತ್ರೈವ ಮೋಚಯೇತ್ತಂ ನಿಶಾಮಯ ।
ಮಹತ್ಯಾ ಯೋಗಯುಕ್ತ್ಯಾವಾ ಮಹಾದಾನೈರಕಾಮಿಕೈಃ ॥ ೪ ॥
ಸುಮಹದ್ಭಿಸ್ತಪೋಭಿರ್ವಾ ಶಿವೋಽನ್ಯತ್ರ ವಿಮೋಚಯೇತ್ ।
ಯೋಗಯುಕ್ತಿಂ ನ ಮಹತೀಂ ನ ದಾನಾನಿ ಮಹಾಂತಿಚ ॥ ೫ ॥
ನ ತಪಾಂಸ್ಯತಿದೀರ್ಘಾಣಿ ಕಾಶ್ಯಾಂ ಮುಕ್ತ್ಯೈ ಶಿವೋಽರ್ಥಯೇತ್ ।
ವಿಯುನಕ್ತಿ ನಯತ್ಕಾಶ್ಯಾ ಉಪಸರ್ಗೇ ಮಹತ್ಯಪಿ ॥ ೬ ॥

---

### ಕನ್ನಡದ ಅನುವಾದ

#### ಅವಿಮುಕ್ತೇಶಾವಿರ್ಭಾವವರ್ಣನ

೧. ಸ್ಕಂದನು ಹೇಳುತ್ತಾನೆ:—ಅಗಸ್ತ್ಯ! ಪಾಪವನ್ನು ಪರಿಹರಿಸುವುದೂ, ಮೋಕ್ಷಸಂಪತ್ತಿಗೆ ಕಾರಣವೂ ಆದ ಅವಿಮುಕ್ತದ ಕಥೆಯನ್ನು ಕೇಳು.

೨–೩. ಪ್ರಪಂಚಬಾಹ್ಯವೂ, ಸ್ವರೂಪರಹಿತವೂ, ನಿರ್ವಿಕಲ್ಪವೂ, ಆಕಾರವಿಲ್ಲದುದೂ, ಅವ್ಯಕ್ತವೂ, ಸ್ಥೂಲಸೂಕ್ಷ್ಮವೂ ಆದ ಪರಬ್ರಹ್ಮವು ಸರ್ವವ್ಯಾಪಿಯಾಗಿದ್ದರೂ ಈ ಕ್ಷೇತ್ರವನ್ನು ಪ್ರವೇಶಿಸಿ ವಾಸಿಸುತ್ತಿರುವುದು. ಇದು ಪ್ರಾಣಿಗಳನ್ನು ಇತರ ಕಡೆಯಲ್ಲಿ ಸಂಸಾರಮುಕ್ತರನ್ನಾಗಿಮಾಡಲು ಸಮರ್ಥವಾಗಿಲ್ಲವೆ?

೪–೯. ಶಿವನು ಇಲ್ಲಿಯೇ ನಿಶ್ಚಯವಾಗಿ ಜಂತುಗಳನ್ನು ಮೋಕ್ಷಕ್ಕೊಯ್ಯುವನು ಎಂಬುದನ್ನು ಕೇಳು. ಇತರ ಕಡೆಗಳಲ್ಲಿಯಾದರೊ ಶಿವನು ಜಂತುಗಳನ್ನು ಮಹಾಯೋಗದಿಂದಲೂ, ನಿಷ್ಕಾಮ ಮಹಾದಾನದಿಂದಲೂ, ಮಹಾತಪಸ್ಸಿನಿಂದಲೂ ಮುಕ್ತಗಳನ್ನಾಗಿಸುವನು. ಅವನು ಕಾಶಿಯಲ್ಲಿ ಮಹಾಯೋಗವನ್ನೂ, ಮಹಾದಾನಗಳನ್ನೂ, ದೀರ್ಘತಪಸ್ಸುಗಳನ್ನೂ ಮುಕ್ತಿಗಾಗಿ ಅಪೇಕ್ಷಿಸುವುದಿಲ್ಲ. ಅವನು ಮಹಾಪೀಡೆಯಲ್ಲಿಯೂ ಕಾಶಿಯನ್ನು ಬಿಡುವುದಿಲ್ಲ. ಇದೇ ಇಹಪರಗಳಿಗೆ ಉಪಯುಕ್ತವಾದ ಮಹಾಯೋಗವು. ಇಲ್ಲಿ ವಿಶ್ವೇಶ್ವರನಿಗೆ ವಿಧಿಯಿಂದ

**ಅಯಮೇವ ಮಹಾಯೋಗ ಉಪಯೋಗಸ್ತ್ವಿಹಾಽಪರಃ ।**
**ನಿಯಮೇನ ತು ವಿಶ್ವೇಶೇ ಪುಷ್ಪಂ ಪತ್ರಂ ಫಲಂ ಜಲಂ ॥ ೭ ॥**
**ಯದ್ದತ್ತಂ ಸುಮನೋವೃತ್ತ್ಯಾ ಮಹಾದಾನಂ ತದತ್ರವೈ ।**
**ಮುಕ್ತಿಮಂಡಪಿಕಾಯಾಂ ಚ ಕ್ಷಣಂ ಯತ್ಸ್ಥಿರಮಾಸ್ಯತೇ ॥ ೮ ॥**
**ಸ್ನಾತ್ವಾ ಗಂಗಾಽಮೃತೇ ಶುದ್ಧೇ ತಪ ಏತದಿಹೋತ್ತಮಂ ।**
**ಸತ್ಕೃತ್ಯ ಭಿಕ್ಷವೇ ಭಿಕ್ಷಾ ಯತ್ಕಾಶ್ಯಾಂ ಪರಿದೀಯತೇ ।**
**ತುಲಾಪುರುಷ ಏತಸ್ಯಾಃ ಕಲಾಂ ನಾಽರ್ಹತಿ ಷೋಡಶೀಂ ॥ ೯ ॥**
**ಹೃದಿ ಸಂಚಿಂತ್ಯ ವಿಶ್ವೇಶಂ ಕ್ಷಣಂ ಯದ್ವಿನಿಮೀಲ್ಯತೇ ।**
**ದೇವಸ್ಯ ದಕ್ಷಿಣೇಭಾಗೇ ಮಹಾಯೋಗೋಽಯಮುತ್ತಮಃ ॥ ೧೦ ॥**
**ಇದಮೇವ ತಪೋಽತ್ಯುಗ್ರಂ ಯದಿಂದ್ರಿಯವಿಲೋಲತಾಂ ।**
**ನಿಷಿಧ್ಯ ಸ್ಥೀಯತೇ ಕಾಶ್ಯಾಂ ಕ್ಷುತ್ತ್ವಾಪಾದ್ಯವಮನ್ಯಚ ॥ ೧೧ ॥**
**ಮಾಸಿ ಮಾಸಿ ಯದಾಪ್ಯೇತ ವ್ರತಾಚ್ಚಾಂದ್ರಾಯಣಾತ್ಫಲಂ ।**
**ಅನ್ಯತ್ರ ತದಿಹಾಪ್ಯೇತ ಭೂತಾಯಾಂ ನಕ್ತಭೋಜನಾತ್ ॥ ೧೨ ॥**
**ಮಾಸೋಪವಾಸಾದನ್ಯತ್ರ ಯತ್ಫಲಂ ಸಮುಪಾರ್ಜ್ಯತೇ ।**
**ಶ್ರದ್ಧಯೈಕೋಪವಾಸೇನ ತತ್ಕಾಶ್ಯಾಂ ಸ್ಯಾದಸಂಶಯಂ ॥ ೧೩ ॥**

---

ನಿಷ್ಕಾಮಬುದ್ಧಿಯಿಂದ ಪತ್ರ, ಪುಷ್ಪ, ಫಲ, ಜಲಗಳನ್ನು ಸಮರ್ಪಿಸಿದರೆ ಅದೇ ಮಹಾದಾನವಾಗುವುದು. ಗಂಗೆಯಲ್ಲಿ ಮಿಂದು ಮುಕ್ತಿಮಂಡಪದಲ್ಲಿ ಒಂದು ಕ್ಷಣಕಾಲ ಸ್ಥಿರವಾಗಿದ್ದರೆ ಅದೇ ಉತ್ತಮ ತಪಸ್ಸು. ಈ ಕಾಶಿಯಲ್ಲಿ ಸನ್ಯಾಸಿಗೆ ಸನ್ಮಾನಮಾಡಿ ಭಿಕ್ಷೆಯನ್ನಿತ್ತರೆ ತುಲಾಪುರುಷದಾನವೂ ಇದರ ಷೋಡಶಕಲೆಗೆ ಸರಿಯಾಗುವುದಿಲ್ಲ.

೧೦. ವಿಶ್ವೇಶ್ವರನಿಗೆ ದಕ್ಷಿಣದಿಕ್ಕಿನಲ್ಲಿ ನಿಂತು ಮನಸ್ಸಿನಿಂದ ಒಂದು ಕ್ಷಣ ಕಾಲ ಅವನನ್ನು ಧ್ಯಾನಿಸಿ ಕಣ್ಣನ್ನು ಮುಚ್ಚಿಕೊಂಡರೆ ಉತ್ತಮವಾದ ಮಹಾ ಯೋಗವಾಗುವುದು.

೧೧. ಕಾಶಿಯಲ್ಲಿ ಇಂದ್ರಿಯ ಚಪಲತೆಯನ್ನೂ, ಹಸಿವಿನ ತೊಂದರೆ ಮೊದಲಾದುವುಗಳನ್ನೂ ತಡೆದಿರುವುದೇ ಉಗ್ರತಪಸ್ಸಾಗಿರುವುದು.

೧೨. ಇತರ ಕಡೆಗಳಲ್ಲಿ ಪ್ರತಿ ತಿಂಗಳಲ್ಲಿಯೂ ಚಾಂದ್ರಾಯಣ ವ್ರತದಿಂದ ಲಭಿಸುವ ಫಲವು, ಈ ಕಾಶಿಯಲ್ಲಿ ಚತುರ್ದಶೀ ದಿನದಂದು ನಕ್ತಭೋಜನದಿಂದ ದೊರೆಯುವುದು.

೧೩. ಇತರ ಕಡೆಗಳಲ್ಲಿ ಒಂದು ತಿಂಗಳು ಉಪವಾಸ ಮಾಡುವದರಿಂದ ಸಿಕ್ಕುವ ಫಲವು ಕಾಶಿಯಲ್ಲಿ ಶ್ರದ್ಧೆಯಿಂದ ಒಂದು ಉಪವಾಸ ಮಾಡುವುದರಿಂದಲೇ ಲಭಿಸುವುದು.

ಚಾತುರ್ಮಾಸ್ಯ ವ್ರತಾತ್ಪ್ರೋಕ್ತಂ ಯದನ್ಯತ್ರ ಮಹಾಫಲಂ ।
ಏಕಾದಶ್ಯುಪವಾಸೇನ ತತ್ಕಾಶ್ಯಾಂ ಸ್ಯಾದಸಂಶಯಂ ॥ ೧೪ ॥
ಷಣ್ಮಾಸಾಽನ್ನಪರಿತ್ಯಾಗಾದ್ಯದನ್ಯತ್ರ ಫಲಂ ಲಭೇತ್ ।
ಶಿವರಾತ್ರ್ಯುಪವಾಸೇನ ತತ್ಕಾಶ್ಯಾಂ ಜಾಯತೇ ಧ್ರುವಂ ॥ ೧೫ ॥
ವರ್ಷಂ ಕೃತ್ವೋಪವಾಸಾನಿ ಲಭೇದನ್ಯತ್ರ ಯದ್ವ್ರತೀ ।
ತತ್ಫಲಂ ಸ್ಯಾತ್ತ್ರಿರಾತ್ರೇಣ ಕಾಶ್ಯಾಮವಿಕಲಂ ಮುನೇ ॥ ೧೬ ॥
ಮಾಸಿ ಮಾಸಿ ಕುಶಾಗ್ರಾಂಬುಪಾನಾದನ್ಯತ್ರ ಯತ್ಫಲಂ ।
ಕಾಶ್ಯಾಮುತ್ತರವಾಹಿನ್ಯಾಮೇಕೇನ ಚುಲುಕೇನ ತತ್ ॥ ೧೭ ॥
ಅನಂತೋ ಮಹಿಮಾ ಕಾಶ್ಯಾಃ ಕಸ್ತಂ ವರ್ಣಯಿತುಂ ಪ್ರಭುಃ ।
ವಿಪತ್ತಿಮಿಚ್ಛತೋ ಜಂತೋರ್ಯತ್ರ ಕರ್ಣೇ ಜಪಃ ಶಿವಃ ॥ ೧೮ ॥
ಶಂಭುಸ್ತತ್ಕಿಂಚಿದಾಚಷ್ಟೇ ಮ್ರಿಯಮಾಣಸ್ಯ ಜನ್ಮಿನಃ ।
ಕರ್ಣೇಽಕ್ಷರಂ ಯದಾಕರ್ಣ್ಯ ಮೃತೋಽಪ್ಯಮೃತತಾಂ ವ್ರಜೇತ್ ॥ ೧೯ ॥
ಸ್ಮಾರಂ ಸ್ಮಾರಂ ಸ್ಮರರಿಪೋಃ ಪುರೀಂ ತ್ವಮಿವ ಶಂಕರಃ ।
ಅದುನೋನ್ಮಂದರಂ ಯಾತೋ ಬಹುಶಸ್ತದವಾಪ್ತಯೇ ॥ ೨೦ ॥

---

೧೪–೧೫. ಬೇರೆ ಕಡೆಯಲ್ಲಿ ಚಾತುರ್ಮಾಸ್ಯವ್ರತವನ್ನಾಚರಿಸುವುದರಿಂದ ದೊರೆಯುವ ಮಹಾಫಲವು ಕಾಶಿಯಲ್ಲಿ ಏಕಾದಶೀ ದಿನ ಉಪವಾಸ ಮಾಡುವುದರಿಂದ ಲಭಿಸುವುದು. ಇತರ ಕಡೆಗಳಲ್ಲಿ ಆರುತಿಂಗಳು ಅನ್ನವನ್ನು ತ್ಯಜಿಸುವುದರಿಂದ ಸಿಕ್ಕುವ ಫಲವು ಕಾಶಿಯಲ್ಲಿ ಶಿವರಾತ್ರಿಯ ದಿನ ಉಪವಾಸ ಮಾಡುವುದರಿಂದ ದೊರೆಯುವುದು.

೧೬. ವ್ರತಿಯು ಇತರ ಕಡೆಯಲ್ಲಿ ಒಂದುವರ್ಷ ಉಪವಾಸವನ್ನು ಮಾಡಿ ಪಡೆಯುವ ಫಲವು ಇಲ್ಲಿ ಮೂರು ರಾತ್ರಿಗಳು ಉಪವಾಸ ಮಾಡುವುದರಿಂದ ಸಂಪೂರ್ಣವಾಗಿ ದೊರೆಯುವುದು.

೧೭–೧೮. ಪ್ರತಿ ತಿಂಗಳು ದರ್ಭೆಯ ಕೊನೆಯಿಂದ ನೀರನ್ನು ಕುಡಿಯುವುದರಿಂದ ಲಭಿಸುವ ಫಲವು ಈ ಕಾಶಿಯಲ್ಲಿರುವ ಉತ್ತರವಾಹಿನಿಯಲ್ಲಿ ಒಂದು ಬೊಗಸೆ ನೀರನ್ನು ಕುಡಿಯುವುದರಿಂದ ದೊರೆಯುವುದು. ಕಾಶಿಯ ಮಹಿಮೆಯು ಅನಂತವಾದುದು. ಅದನ್ನು ವರ್ಣಿಸಲು ಶಕ್ತನಾರು? ಇಲ್ಲಿ ಮರಣವನ್ನಿಚ್ಛಿಸುವ ಪ್ರಾಣಿಯ ಕಿವಿಯಲ್ಲಿ ಶಿವನು ಮಂತ್ರವನ್ನುಪದೇಶಮಾಡುವನು.

೧೯. ಇಲ್ಲಿಯೆ ಶಂಕರನು ಸಾಯುತ್ತಿರುವ ಪ್ರಾಣಿಯ ಕಿವಿಯಲ್ಲಿ ಒಂದು ಮಂತ್ರವನ್ನು ಹೇಳುವನು. ಮೃತವಾಗುವ ಪ್ರಾಣಿಯು ಅದನ್ನು ಕೇಳಿ ಮೋಕ್ಷವನ್ನು ಹೊಂದುವುದು.

೨೦. ಶಂಕರನು ನಿನ್ನಂತೆಯೇ ಕಾಶೀಪಟ್ಟಣವನ್ನು ಸ್ಮರಿಸಿ ಸ್ಮರಿಸಿ ಅದನ್ನು ಹೊಂದುವುದಕ್ಕಾಗಿ ಮಂದರಪರ್ವತಕ್ಕೆ ಹೋಗಿ ವ್ಯಥೆಗೊಂಡನು.

ಅಗಸ್ತ್ಯ ಉವಾಚ:—
ಸ್ವಕಾರ್ಯನಿಪುಣೈಃ ಸ್ವಾಮಿನ್ ಗೀರ್ವಾಣೈರತಿದಾರುಣೈಃ ।
ತ್ಯಾಜಿತೋಽಹಂ ಪುರೀಂ ಕಾಶೀಂ ಹರೋಽತ್ಯಾಕ್ಷೀತ್ಕುತಃ ಪ್ರಭುಃ ॥ ೨೧ ॥
ಪರಾಧೀನೋಽಹಮಿವ ಕಿಂ ದೇವದೇವಃ ಪಿನಾಕವಾನ್ ।
ಕಾಶಿಕಾಂ ಸೋಽತ್ಯಜತ್ಕಸ್ಮಾನ್ನಿರ್ವಾಣಮಣಿರಾಶಿಕಾಂ ॥ ೨೨ ॥
ಸ್ಕಂದ ಉವಾಚ:—
ಮಿತ್ರಾವರುಣಸಂಭೂತ ಕಥಯಾಮಿ ಕಥಾಮಿಮಾಂ ।
ತತ್ಯಾಜ ಚ ಯಥಾ ಸ್ಥಾಣುಃ ಕಾಶೀಂ ವಿಧ್ಯುಪರೋಧತಃ ॥ ೨೩ ॥
ಪ್ರಾರ್ಥಿತಸ್ತ್ವಂ ಯಥಾಲೇಖೈಃ ಪರೋಪಕೃತಯೇ ಮುನೇ ।
ದ್ರುಹಿಣೇನ ತಥಾ ರುದ್ರಃ ಸ್ವರಕ್ಷಣವಿಚಕ್ಷಣಃ ॥ ೨೪ ॥
ಅಗಸ್ತ್ಯ ಉವಾಚ:—
ಕಥಂ ಸ ಭಗವಾನ್ರುದ್ರೋ ದ್ರುಹಿಣೇನ ಕೃಪಾಂಬುಧಿಃ ।
ಪ್ರಾರ್ಥಿತೋಽಭೂತ್ಕಿಮರ್ಥಂಚ ತನ್ಮೇ ಬ್ರೂಹಿ ಷಡಾನನ ॥ ೨೫ ॥
ಸ್ಕಂದ ಉವಾಚ:—
ಪಾದ್ಮೇ ಕಲ್ಪೇ ಪುರಾವೃತ್ತೇ ಮನೋಃ ಸ್ವಾಯಂಭುವೇಽಂತರೇ ।
ಅನಾವೃಷ್ಟಿರಭೂದ್ವಿಪ್ರ ಸರ್ವಭೂತಪ್ರಕಂಪಿನೀ ॥ ೨೬ ॥

---

೨೧. ಅಗಸ್ತ್ಯನು ಹೇಳುತ್ತಾನೆ:— ಸ್ವಕಾರ್ಯದಲ್ಲಿ ಕುಶಲರೂ ಅತ್ಯಂತ ಕಠಿನರೂ ಆದ ದೇವತೆಗಳು ನನ್ನನ್ನು ಕಾಶೀಪಟ್ಟಣವನ್ನು ಬಿಡುವಂತೆ ಮಾಡಿದರು. ಸ್ವಾಮಿಯಾದ ಶಂಕರನು ಅದನ್ನು ಏಕೆ ತ್ಯಜಿಸಿದನು ?

೨೨. ಪಿನಾಕಧಾರಿಯಾದ ಪರಮೇಶ್ವರನು ನನ್ನಂತೆ ಪರಾಧೀನನೇ? ಮೋಕ್ಷವೆಂಬ ಮಣಿಗಳ ರಾಶಿಯುಳ್ಳ ಕಾಶಿಯನ್ನು ಅವನೇಕೆ ತ್ಯಜಿಸಿದನು ?

೨೩. ಸ್ಕಂದನು ಹೇಳುತ್ತಾನೆ:—ಅಯ್ಯಾ ಅಗಸ್ತ್ಯನೆ! ಬ್ರಹ್ಮನ ನಿರ್ಬಂಧದಿಂದ ಶಿವನು ಕಾಶಿಯನ್ನು ಹೇಗೆ ತ್ಯಜಿಸಿದನೆಂಬ ಕಥೆಯನ್ನು ನಿನಗೆ ಹೇಳುವೆನು.

೨೪. ಮುನಿಯೆ! ದೇವತೆಗಳು ಪರೋಪಕಾರಕ್ಕಾಗಿ ನಿನ್ನನ್ನು ಹೇಗೆ ಪ್ರಾರ್ಥಿಸಿದರೊ, ಹಾಗೆಯೇ ತನ್ನನ್ನು ರಕ್ಷಿಸಿಕೊಳ್ಳುವುದರಲ್ಲಿ ನಿಪುಣನಾದ ಬ್ರಹ್ಮನು, ಕಾಶಿಯನ್ನು ತೊರೆಯುವಂತೆ ರುದ್ರನನ್ನು ಪ್ರಾರ್ಥಿಸಿದನು.

೨೫. ಅಗಸ್ತ್ಯನು ಹೇಳುತ್ತಾನೆ:—ಸ್ಕಂದ! ಬ್ರಹ್ಮನು ದಯಾನಿಧಿಯಾದ ರುದ್ರನನ್ನು ಹಾಗೇಕೆ ಪ್ರಾರ್ಥಿಸಿದನು? ಅದನ್ನು ನನಗೆ ಹೇಳು.

೨೬. ಸ್ಕಂದನು ಹೇಳುತ್ತಾನೆ:—ಹಿಂದೆ ಕಳೆದ ಪಾದ್ಮಕಲ್ಪದಲ್ಲಿ ಸ್ವಾಯಂಭುವಮನ್ವಂತರದಲ್ಲಿ ಸಕಲ ಪ್ರಾಣಿಗಳನ್ನೂ ನಡುಗಿಸುವ ಅನಾವೃಷ್ಟಿಯುಂಟಾಯಿತು.

ತಯಾ ತು ಷಷ್ಟಿಹಾಯಿನ್ಯಾ ಪೀಡಿತಾಃ ಪ್ರಾಣಿನೋऽಖಿಲಾಃ ।
ಕೇಚಿದಂಬುಧಿತೀರೇಷು ಗಿರಿದ್ರೋಣೀಷು ಕೇಚನ ॥ ೨೭ ॥
ಮಹಾನಿಮ್ನೇಷು ಕಚ್ಛೇಷು ಮುನಿವೃತ್ತ್ಯಾ ಜನಾಃ ಸ್ಥಿತಾಃ ।
ಅರಣ್ಯಾನ್ಯವನಿರ್ಜಾತಾ ಗ್ರಾಮಖರ್ವಟವರ್ಜಿತಾ ॥ ೨೮ ॥
ಕ್ರವ್ಯಾದಾ ಏವ ಸರ್ವೇಷು ನಗರೇಷು ಪುರೇಷು ಚ ।
ಆಸನ್ನಭ್ರಂಲಿಹೋ ವೃಕ್ಷಾಃ ಸರ್ವತ್ರ ಕ್ಷೋಣಿಮಂಡಲೇ ॥ ೨೯ ॥
ಚೌರಾ ಏವ ಮಹಾಚೌರ್ಯೈರುಲ್ಲುಂಠ್ಯಂತ ಇತಸ್ತತಃ ।
ಮಾಂಸವೃತ್ತ್ಯೋಪಜೀವಂತಿ ಪ್ರಾಣಿನಃ ಪ್ರಾಣರಕ್ಷಿಣಃ ॥ ೩೦ ॥
ಅರಾಜಕೇ ಸಮುತ್ಪನ್ನೇ ಲೋಕೇऽತ್ಯಾಹಿತಶಂಸಿನಿ ।
ಪ್ರಯತ್ನೋ ವಿಫಲಸ್ತ್ವಾಸೀತ್ಸೃಷ್ಟೇಃ ಸೃಷ್ಟಿಕೃತಸ್ತದಾ ॥ ೩೧ ॥
ಚಿಂತಾಮವಾಪ ಮಹತೀಂ ಜಗದ್ಯೋನಿಃ ಪ್ರಜಾಕ್ಷಯಾತ್ ।
ಪ್ರಜಾಸು ಕ್ಷೀಯಮಾಣಾಸು ಕ್ಷೀಣಾ ಯಜ್ಞಾದಿಕಾಃ ಕ್ರಿಯಾಃ ॥ ೩೨ ॥
ತಾಸು ಕ್ಷೀಣಾಸು ಸಂಕ್ಷೀಣಾಃ ಸರ್ವೇ ಯಜ್ಞಭುಜೋऽಭವನ್ ।
ತತಶ್ಚಿಂತಯತಾ ಸ್ರಷ್ಟ್ರಾ ದೃಷ್ಟೋ ರಾಜರ್ಷಿಸತ್ತಮಃ ॥ ೩೩ ॥

---

೨೭–೨೮. ಆ ಅರುವತ್ತು ವರ್ಷದ ಅನಾವೃಷ್ಟಿಯಿಂದ ಸಕಲ ಪ್ರಾಣಿಗಳೂ ವ್ಯಥೆಗೊಂಡುವು. ಕೆಲವು ಜನರು ಸಮುದ್ರದ ದಡಗಳಲ್ಲಿಯೂ, ಕೆಲವರು ಪರ್ವತಗಳ ಸಂದುಗಳಲ್ಲಿಯೂ, ಕೆಲವರು ಅತ್ಯಂತ ಆಳವಾದ ಜವಗಿನ ಸ್ಥಳಗಳಲ್ಲಿಯೂ ಮುನಿಗಳಂತೆ ಗೆಡ್ಡೆಗೆಣಸುಗಳನ್ನು ತಿಂದು ಜೀವಿಸುತ್ತಿದ್ದರು. ಸಾಮಾನ್ಯಭೂಮಿಗಳೆಲ್ಲ ಗ್ರಾಮನಗರಗಳಿಲ್ಲದ ಕಾಡುಗಳಾದುವು.

೨೯. ಸಮಸ್ತನಗರಗಳಲ್ಲಿಯೂ ಮಾಂಸಭಕ್ಷಕರೇ ತುಂಬಿದ್ದರು. ಭೂಮಿಯಲ್ಲಿ ಎಲ್ಲಿನೋಡಿದರೂ, ಅತ್ಯಂತೋನ್ನತ ವೃಕ್ಷಗಳೇ ಕಾಣಿಸುತ್ತಿದ್ದುವು.

೩೦. ದೊಡ್ಡ ಕಳ್ಳರೇ ಸಾಮಾನ್ಯ ಕಳ್ಳರನ್ನು ಎಲ್ಲೆಡೆಯಲ್ಲಿಯೂ ಸುಲಿಗೆ ಮಾಡಿದರು. ಪ್ರಾಣಗಳನ್ನು ರಕ್ಷಿಸಿಕೊಳ್ಳಲು ಪ್ರಾಣಿಗಳೆಲ್ಲಾ ಮಾಂಸವನ್ನೇ ತಿನ್ನುತ್ತಿದ್ದುವು.

೩೧. ಆಗ ಭಯವನ್ನು ಸೂಚಿಸುವ ಪ್ರಪಂಚವು ಅರಾಜಕವಾಗಲು ಬ್ರಹ್ಮನ ಸೃಷ್ಟಿಪ್ರಯತ್ನವೆಲ್ಲ ನಿಷ್ಫಲವಾಯಿತು.

೩೨. ಆತನು ಪ್ರಜೆಗಳ ನಾಶದಿಂದ ಅತ್ಯಂತ ಚಿಂತಾಕ್ರಾಂತನಾದನು. ಪ್ರಜೆಗಳು ಕ್ಷಯಿಸುತ್ತಿರಲು ಯಜ್ಞಾದಿ ಕ್ರಿಯೆಗಳು ನಷ್ಟವಾದುವು.

೩೩–೩೬. ಯಜ್ಞಕ್ರಿಯೆಗಳು ಕ್ಷೀಣವಾಗಲು ಸಮಸ್ತ ದೇವತೆಗಳೂ ಕ್ಷೀಣರಾದರು. ಬಳಿಕ ಬ್ರಹ್ಮನು ಚಿಂತಿಸುತ್ತ ಅವಿಮುಕ್ತಮಹಾಕ್ಷೇತ್ರದಲ್ಲಿ ತಪಸ್ಸನ್ನು ಮಾಡುತ್ತಿರುವವನೂ, ಸ್ಥಿರೇಂದ್ರಿಯನೂ, ಮನುವಿನ ವಂಶದಲ್ಲಿ

ಅವಿಮುಕ್ತೇ ಮಹಾಕ್ಷೇತ್ರೇ ತಪಸ್ಯನ್ನಿಶ್ಚಲೇಂದ್ರಿಯಃ ।
ಮನೋರನ್ವಯಜೋ ವೀರಃ ಕ್ಷಾತ್ರೋ ಧರ್ಮ ಇವೋದಿತಃ ॥ ೩೪ ॥
ರಿಪುಂಜಯ ಇತಿಖ್ಯಾತೋ ರಾಜಾಪರಪುರಂಜಯಃ ।
ಅಥ ಬ್ರಹ್ಮಾ ತಮಾಸಾದ್ಯ ಬಹುಗೌರವಪೂರ್ವಕಂ ॥ ೩೫ ॥
ಉವಾಚ ವಚನಂ ರಾಜನ್ರಿಪುಂಜಯ ಮಹಾಮತೇ ।
ಇಲಾಂ ಪಾಲಯ ಭೂಪಾಲ ಸ ಸಮುದ್ರಾಽದ್ರಿಕಾನನಾಂ ॥ ೩೬ ॥
ನಾಗಕನ್ಯಾಂ ನಾಗರಾಜಃ ಪತ್ನ್ಯರ್ಥಂ ತೇ ಪ್ರದಾಸ್ಯತಿ ।
ಅನಂಗಮೋಹಿನೀಂ ನಾಮ್ನಾ ವಾಸುಕಿಃ ಶೀಲಭೂಷಣಾಂ ॥ ೩೭ ॥
ದಿವೋಽಪಿ ದೇವಾ ದಾಸ್ಯಂತಿ ರತ್ನಾನಿ ಕುಸುಮಾನಿಚ ।
ಪ್ರಜಾಪಾಲನಸಂತುಷ್ಟಾ ಮಹಾರಾಜ ಪ್ರತಿಕ್ಷಣಂ ॥ ೩೮ ॥
ದಿವೋದಾಸ ಇತಿಖ್ಯಾತಿಮತೋ ನಾಮ ತ್ವಮಾಪ್ಸ್ಯಸಿ ।
ಮತ್ಪ್ರಭಾವಾಚ್ಚ ನೃಪತೇ ದಿವ್ಯಂ ಸಾಮರ್ಥ್ಯಮಸ್ತು ತೇ ॥ ೩೯ ॥
ಪರಮೇಷ್ಠಿವಚಃ ಶ್ರುತ್ವಾ ತತೋಽಸೌ ರಾಜಸತ್ತಮಃ ।
ವೇಧಸಂ ಬಹುಶಃ ಸ್ತುತ್ವಾ ವಾಕ್ಯಂ ಚೇದಮುವಾಚ ಹ ॥ ೪೦ ॥

ರಾಜೋವಾಚ :—

ಪಿತಾಮಹ ಮಹಾಪ್ರಾಜ್ಞ ಜನಾಕೀರ್ಣೇ ಮಹೀತಲೇ ।
ಕಥಂ ನಾಽನ್ಯೇ ಚ ರಾಜಾನೋ ಮಾಂ ಕಥಂ ಕಥ್ಯತೇ ತ್ವಯಾ ॥ ೪೧ ॥

---

ಜನಿಸಿದವನೂ, ಮೂರ್ತಿವೆತ್ತ ಕ್ಷಾತ್ರಧರ್ಮದಂತಿರುವವನೂ, ಶತ್ರುನಾಶಕನೂ ಆದ ರಿಪುಂಜಯನೆಂಬ ದೊರೆಯನ್ನು ಕಂಡನು. ಬಳಿಕ ಬ್ರಹ್ಮನು ಅವನನ್ನು ಹೊಂದಿ ಅತ್ಯಂತ ಗೌರವದಿಂದ ಇಂತೆಂದನು. "ಪ್ರಾಜ್ಞನಾದ ರಿಪುಂಜಯನೆ! ಸಮುದ್ರ, ಪರ್ವತ, ಅರಣ್ಯಗಳಿಂದ ಕೂಡಿದ ಈ ಭೂಮಿಯನ್ನು ಕಾಪಾಡು.

೩೭. ನಾಗರಾಜನಾದ ವಾಸುಕಿಯು ಸುಶೀಲಳಾದ ಅನಂಗಮೋಹಿನಿಯೆಂಬ ನಾಗಕನ್ಯೆಯನ್ನು ನಿನಗೆ ಪತ್ನ್ಯರ್ಥವಾಗಿ ದಾನಮಾಡುವನು.

೩೮. ಮಹಾರಾಜ! ಪ್ರಜಾಪಾಲನೆಯಿಂದ ಸಂತುಷ್ಟರಾದ ದೇವತೆಗಳೂ ದೇವಲೋಕದ ರತ್ನಕುಸುಮಗಳನ್ನು ನಿನಗೆ ಕೊಡುವರು.

೩೯. ಅದರಿಂದ ನೀನು ದಿವೋದಾಸ ಎಂಬ ಹೆಸರನ್ನು ಹೊಂದುವೆ. ದೊರೆಯೆ! ನಿನಗೆ ನನ್ನ ಪ್ರಭಾವದಿಂದ ದಿವ್ಯಸಾಮರ್ಥ್ಯವುಂಟಾಗಲಿ."

೪೦. ರಿಪುಂಜಯನು ಬ್ರಹ್ಮನ ಮಾತನ್ನು ಕೇಳಿ ಅವನನ್ನು ಬಹಳವಾಗಿ ಸ್ತುತಿಸಿ ಇಂತೆಂದನು.

೪೧. ರಾಜನು ಹೇಳುತ್ತಾನೆ:—"ಪ್ರಾಜ್ಞನಾದ ಎಲೈ ಬ್ರಹ್ಮನೆ! ಜನರಿಂದ ತುಂಬಿರುವ ಭೂಮಿಯಲ್ಲಿ ಬೇರೆ ರಾಜರಿಲ್ಲವೆ? ನನ್ನನ್ನೇ ಕುರಿತು ಹೀಗೇಕೆ ಹೇಳುವೆ?"

ಬ್ರಹ್ಮೋವಾಚ :—

ತ್ವಯಿ ರಾಜ್ಯಂ ಪ್ರಕುರ್ವಾಣೇ ದೇವೋ ವೃಷ್ಟಿಂ ವಿಧಾಸ್ಯತಿ ।
ಪಾಪನಿಷ್ಠೇ ಚ ವೈ ರಾಜ್ಞಿ ನ ದೇವೋ ವರ್ಷತೇ ಪುನಃ ॥ ೪೨ ॥

ರಾಜೋವಾಚ :—

ಪಿತಾಮಹ ಮಹಾಮಾನ್ಯ ತ್ರಿಲೋಕೀಕರಣಕ್ಷಮ ।
ಮಹಾಪ್ರಸಾದ ಇತ್ಯಾಜ್ಞಾಂ ತ್ವದೀಯಾಂ ಮೂರ್ಧ್ನ್ಯಪಾದದೇ ॥ ೪೩ ॥
ಕಿಂಚಿದ್ವಿಜ್ಞಪ್ತುಕಾಮೋಽಹಂ ತನ್ಮದರ್ಥಂ ಕರೋಷಿ ಚೇತ್ ।
ತತಃ ಕರೋಮ್ಯಹಂ ರಾಜ್ಯಂ ಪೃಥಿವ್ಯಾಮಸಪತ್ನವತ್ ॥ ೪೪ ॥

ಬ್ರಹ್ಮೋವಾಚ :—

ಅವಿಲಂಬೇನ ತದ್ಬ್ರೂಹಿ ಕೃತಂ ಮನ್ಯಸ್ವ ಪಾರ್ಥಿವ ।
ಯತ್ತೇ ಹೃದಿ ಮಹಾಬಾಹೋ ತವಾಽದೇಯಂ ನ ಕಿಂಚನ ॥ ೪೫ ॥

ರಾಜೋವಾಚ :—

ಯದ್ಯಹಂ ಪೃಥಿವೀನಾಥಃ ಸರ್ವಲೋಕಪಿತಾಮಹ ।
ತದಾ ದಿವಿಷದೋ ದೇವಾ ದಿವಿ ತಿಷ್ಠಂತು ಮಾ ಭುವಿ ॥ ೪೬ ॥
ದೇವೇಷು ದಿವಿ ತಿಷ್ಠತ್ಸು ಮಹೀ ತಿಷ್ಠತಿ ಭೂತಲೇ ।
ಅಸಪತ್ನೇನ ರಾಜ್ಯೇನ ಪ್ರಜಾ ಸೌಖ್ಯಮವಾಪ್ಸ್ಯತಿ ॥ ೪೭ ॥

---

೪೨. ಬ್ರಹ್ಮನು ಹೇಳುತ್ತಾನೆ:—ನೀನು ರಾಜ್ಯವನ್ನಾಳುತ್ತಿದ್ದರೆ ದೇವತೆಗಳು ಮಳೆಯನ್ನು ಸುರಿಸುವರು. ದೊರೆಯು ಪಾಪನಿರತನಾದರೆ ದೇವತೆಗಳು ಮಳೆಗರೆಯುವುದಿಲ್ಲ.

೪೩–೪೪. ರಾಜನು ಹೇಳುತ್ತಾನೆ:— ಅತಿ ಪೂಜ್ಯನೂ, ಮೂರು ಲೋಕಗಳನ್ನೂ ಸೃಜಿಸಲು ಸಮರ್ಥನೂ ಆದ ಎಲೈ ಬ್ರಹ್ಮನೆ! ನಾನು ನಿನ್ನ ಆಜ್ಞೆಯನ್ನು ಮಹಾಪ್ರಸಾದವೆಂದು ಶಿರಸಾವಹಿಸುವೆನು. ಆದರೆ, ನಾನೊಂದು ವಿಷಯವನ್ನು ವಿಜ್ಞಾಪಿಸಬಯಸುವೆನು. ಅದನ್ನು ನೀನು ಮಾಡಿಕೊಟ್ಟರೆ ನಾನು ಭೂಮಿಯಲ್ಲಿ ಶತ್ರುಗಳಿಲ್ಲದ ರಾಜ್ಯವನ್ನು ನಿರ್ಮಿಸುವೆನು.

೪೫. ಬ್ರಹ್ಮನು ಹೇಳುತ್ತಾನೆ:—ದೊರೆಯೆ! ನಿನ್ನ ಮನಸ್ಸಿನಲ್ಲಿರುವುದನ್ನು ಶೀಘ್ರವಾಗಿ ತಿಳಿಸು. ಅದನ್ನು ನಾನು ಮಾಡಿದೆನೆಂದೇ ತಿಳಿ. ನಿನಗೆ ಕೊಡಬಾರದುದು ಯಾವುದೂ ಇಲ್ಲ.

೪೬. ರಾಜನು ಹೇಳುತ್ತಾನೆ:— ಸಮಸ್ತ ಲೋಕಗಳ ಪಿತಾಮಹನೆ! ನಾನು ದೊರೆಯಾಗಿದ್ದರೆ ದೇವತೆಗಳು ಸ್ವರ್ಗದಲ್ಲಿರಲಿ. ಭೂಮಿಯಲ್ಲಿ ಇರಬಾರದು.

೪೭. ದೇವತೆಗಳು ದೇವಲೋಕದಲ್ಲಿಯೂ, ನಾನು ಭೂಮಿಯಲ್ಲಿಯೂ ಇರಲು ಶತ್ರುಗಳಿಲ್ಲದ ರಾಜ್ಯದಿಂದ ಪ್ರಜೆಗಳು ಸುಖಿಗಳಾಗುವರು.

**ತಥೇತಿ ವಿಶ್ವಸೃಕ್ಪ್ರೋಕ್ತೋ ದಿವೋದಾಸೋ ನರೇಶ್ವರಃ ।**
**ಪಟಹಂ ಘೋಷಯಾಂಚಕ್ರೇ ದಿವಂ ದೇವಾ ವ್ರಜಂತ್ವಿತಿ ॥ ೪೮ ॥**
**ಮಾಽಽಗಚ್ಛಂತ್ವಿಹ ವೈ ನಾಗಾ ನರಾಃ ಸ್ವಸ್ಥಾ ಭವಂತ್ವಿತಃ ।**
**ಮಯಿ ಪ್ರಶಾಸತಿ ಕ್ಷೋಣೀಂ ಸುರಾಃ ಸ್ವಸ್ಥಾ ಭವಂತ್ವಿತಿ ॥ ೪೯ ॥**
**ಏತಸ್ಮಿನ್ನಂತರೇ ಬ್ರಹ್ಮಾ ವಿಶ್ವೇಶಂ ಪ್ರಣಿಪತ್ಯ ಹ ।**
**ಯಾವದ್ವಿಜ್ಞಪ್ತುಕಾಮೋಽಭೂತ್ತಾವದೀಶೋಽಬ್ರವೀದ್ವಿಧಿಂ ॥ ೫೦ ॥**
**ಲೋಕೇಶ್ವರ ಸಮಾಯಾಹಿ ಮಂದರೋ ನಾಮ ಭೂಧರಃ ।**
**ಕುಶದ್ವೀಪಾದಿಹಾಗತ್ಯ ತಪಸ್ತಪ್ಯೇತ ದುಷ್ಕರಂ ॥ ೫೧ ॥**
**ಯಾವತ್ತಸ್ಮೈ ವರಂ ದಾತುಂ ಬಹುಕಾಲಂ ತಪಸ್ಯತೇ ।**
**ಇತ್ಯುಕ್ತ್ವಾ ಪಾರ್ವತೀನಾಥೋ ನಂದಿಭೃಂಗಿಪುರೋಗಮಃ ॥ ೫೨ ॥**
**ಜಗಾಮ ವೃಷಮಾರುಹ್ಯ ಮಂದರೋ ಯತ್ರ ತಿಷ್ಠತಿ ।**
**ಉವಾಚ ಚ ಪ್ರಸನ್ನಾತ್ಮಾ ದೇವದೇವೋ ವೃಷಧ್ವಜಃ ॥ ೫೩ ॥**
**ಉತ್ತಿಷ್ಠೋತ್ತಿಷ್ಠ ಭದ್ರಂತೇ ವರಂ ಬ್ರೂಹಿ ಧರೋತ್ತಮ ।**
**ಸೋಽಥ ಶ್ರುತ್ವಾ ಮಹೇಶಾನಂ ದೇವದೇವಂ ತ್ರಿಲೋಚನಂ ॥ ೫೪ ॥**
**ಪ್ರಣಮ್ಯ ಬಹುಶೋ ಭೂಮಾವದ್ರಿರೇತದ್ವ್ಯಜಿಜ್ಞಪತ್ ।**
**ಲೀಲಾವಿಗ್ರಹಭೃಚ್ಛಂಭೋ ಪ್ರಣತೈಕಕೃಪಾನಿಧೇ ॥ ೫೫ ॥**

---

೪೮. ಬ್ರಹ್ಮನು ಹಾಗೆಯೇ ಆಗಲೆನ್ನಲು ದಿವೋದಾಸರಾಜನು ದೇವತೆಗಳು ಸ್ವರ್ಗಕ್ಕೆ ತೆರಳಲೆಂದು ತಮಟೆಯನ್ನು ಬಾರಿಸಿದನು.

೪೯. "ನಾನು ಭೂಮಿಯನ್ನು ಕಾಪಾಡುತ್ತಿರಲು ನಾಗಗಳು ಇಲ್ಲಿಗೆ ಬಾರದಿರಲಿ. ಇದರಿಂದ ಮನುಷ್ಯರು ಸುಖಗೊಳ್ಳಲಿ. ದೇವತೆಗಳು ಸ್ವರ್ಗದಲ್ಲಿ ಸ್ವಸ್ಥವಾಗಿರಲಿ."

೫೦. ಈ ಸಮಯದಲ್ಲಿ ಬ್ರಹ್ಮನು ಶಿವನನ್ನು ವಂದಿಸಿ ವಿಜ್ಞಾಪಿಸಲಿಚ್ಛಿಸಲು ಶಿವನು ಬ್ರಹ್ಮನನ್ನು ಕುರಿತು ಇಂತೆಂದನು.

೫೧. "ಅಯ್ಯಾ ಬ್ರಹ್ಮನೆ! ಇಲ್ಲಿ ಬಾ. ಮಂದರವೆಂಬ ಪರ್ವತವು ಕುಶದ್ವೀಪ ದಿಂದ ಇಲ್ಲಿಗೆ ಬಂದು ದುಷ್ಕರವಾದ ತಪಸ್ಸನ್ನಾಚರಿಸುತ್ತಿರುವುದು.

೫೨–೫೩. ಬಹುಕಾಲದಿಂದ ತಪಸ್ಸನ್ನು ಮಾಡುತ್ತಿರುವ ಅವನಿಗೆ ವರವನ್ನು ಕೊಡಲು ಹೋಗೋಣ." ಮಹೇಶ್ವರನು ಹೀಗೆ ಹೇಳಿ ನಂದಿಭೃಂಗಿ ಗಳೊಡನೆ ವೃಷಭವನ್ನೇರಿ ಮಂದರನೆಡೆಗೆ ಹೋಗಿ ಪ್ರಸನ್ನಮನಸ್ಸುಳ್ಳವನಾಗಿ ಇಂತೆಂದನು.

೫೪–೫೮. "ಪರ್ವತರಾಜ! ಮೇಲಕ್ಕೇಳು. ನಿನಗೆ ಮಂಗಳವಾಗಲಿ. ವರವನ್ನು ಕೇಳಿಕೊ." ಆಗ ಮಂದರನು ಆ ಮಾತನ್ನು ಕೇಳಿ ಮಹೇಶ್ವರನಿಗೆ ಬಹುವಾಗಿ ವಂದಿಸಿ ಹೀಗೆ ವಿಜ್ಞಾಪಿಸಿಕೊಂಡನು. "ಲೀಲಾವಿಗ್ರಹಧಾರಿಯೂ,

ಸರ್ವಜ್ಞೋಽಪಿ ಕಥಂ ನಾಮ ನ ವೇತ್ಥ ಮಮ ವಾಂಛಿತಂ ।
ಶರಣಾಗತಸಂತ್ರಾಣಂ ಸರ್ವವೃತ್ತಾಂತಕೋವಿದ ॥ ೫೬ ॥
ಸರ್ವೇಷಾಂ ಹೃದಯಾನಂದ ಶರ್ವ ಸರ್ವಗ ಸರ್ವಕೃತ್ ।
ಯದಿ ದೇಯೋ ವರೋ ಮಹ್ಯಂ ಸ್ವಭಾವಾದ್ದೃಷದಾತ್ಮನೇ ॥ ೫೭ ॥
ಯಾಚಕಾಯಾತಿಶೋಚ್ಯಾಯ ಪ್ರಣತಾರ್ತಿಪ್ರಭಂಜಕ ।
ತತೋಽವಿಮುಕ್ತಕ್ಷೇತ್ರಸ್ಯ ಸಾಮ್ಯಂ ಹ್ಯಭಿಲಷಾಮ್ಯಹಂ ॥ ೫೮ ॥
ಕುಶದ್ವೀಪ ಉಮಾಸಾರ್ಧಂ ನಾಥಾದ್ಯ ಸಪರಿಚ್ಛದಃ ।
ಮನ್ಮೌಲೌ ವಿಹಿತಾವಾಸಃ ಪ್ರಯಾತ್ವೇಷ ವರೋ ಮಮ ॥ ೫೯ ॥
ಸರ್ವೇಷಾಂ ಸರ್ವದಃ ಶಂಭುಃ ಕ್ಷಣಂ ಯಾವದ್ವಿಚಿಂತಯೇತ್ ।
ವಿಜ್ಞಾತಾಽವಸರೋ ಬ್ರಹ್ಮಾ ತಾವಚ್ಛಂಭುಂ ವ್ಯಜಿಜ್ಞಪತ್ ।
ಪ್ರಣಮ್ಯಾಽಗ್ರೇಸರೋ ಭೂತ್ವಾ ಮೌಲೌ ಬದ್ಧಕರದ್ವಯಃ ॥ ೬೦ ॥

ಬ್ರಹ್ಮೋವಾಚ :—

ವಿಶ್ವೇಶ ಜಗತಾಂ ನಾಥ ಪತ್ಯಾ ವ್ಯಾಪಾರಿತೋಽಸ್ಮ್ಯಹಂ ।
ಕೃತಪ್ರಸಾದೇನ ವಿಭೋ ಸೃಷ್ಟಿಂ ಕರ್ತುಂ ಚತುರ್ವಿಧಾಂ ॥ ೬೧ ॥
ಪ್ರಯತ್ನೇನ ಮಯಾ ಸೃಷ್ಟಾ ಸಾ ಸೃಷ್ಟಿಸ್ತ್ವದನುಜ್ಞಯಾ ।
ಅವೃಷ್ಟ್ಯಾ ಷಷ್ಟಿಹಾಯಿನ್ಯಾ ತತ್ರ ನಷ್ಟಾಃ ಪ್ರಜಾ ಭುವಿ ॥ ೬೨ ॥

---

ನಮಸ್ಕರಿಸಿದವರಿಗೆ ದಯೆಗೈಯ್ಯುವವನೂ ಆದ ಶಿವನೆ! ನೀನು ಸರ್ವಜ್ಞನಾದರೂ ನನ್ನ ಅಭೀಪ್ಸಿತವನ್ನು ತಿಳಿಯಲಿಲ್ಲವೇಕೆ? ಶರಣಾಗತರನ್ನು ಕಾಪಾಡುವವನೂ, ಸಮಸ್ತವೃತ್ತಾಂತಜ್ಞನೂ, ಸಕಲರ ಹೃದಯಾನಂದದಾಯಕನೂ, ಸರ್ವಾಂತರ್ಯಾಮಿಯೂ, ಸರ್ವಕರ್ತನೂ, ನಮಸ್ಕರಿಸುವವರ ದುಃಖವನ್ನು ನಿವಾರಿಸುವವನೂ ಆದ ಶಂಭುವೆ! ನೀನು ಸ್ವಭಾವದಿಂದ ಪಾಷಾಣರೂಪನೂ, ಯಾಚಕನೂ, ಅತ್ಯಂತ ದೀನನೂ ಆದ ನನಗೆ ವರವನ್ನೀಯುವುದಾದರೆ ನಾನು ಅವಿಮುಕ್ತಕ್ಷೇತ್ರದ ಸಾಮ್ಯವನ್ನು ಬಯಸುವೆನು.

೫೯. ನಾಥ! ನೀನೀಗ ಪರಿವಾರ ಮತ್ತು ಈ ಪಾರ್ವತಿಯೊಡನೆ ಕುಶದ್ವೀಪದಲ್ಲಿರುವ ನನ್ನ ಶಿಖರದಲ್ಲಿ ವಾಸಿಸು. ಹೊರಡು.''

೬೦. ಸಮಸ್ತರಿಗೂ ಸಮಸ್ತವನ್ನೀಯುವ ಶಿವನು ಎರಡು ಕ್ಷಣ ಆಲೋಚಿಸುವಷ್ಟರಲ್ಲಿ ಅವಕಾಶವನ್ನರಿತ ಬ್ರಹ್ಮನು ನಮಸ್ಕರಿಸಿ ಮುಂದೆ ನಿಂತು ತಲೆಯಲ್ಲಿ ಕೈಗಳನ್ನು ಜೋಡಿಸಿ ಹೀಗೆ ವಿಜ್ಞಾಪಿಸಿಕೊಂಡನು.

೬೧–೬೨. ಬ್ರಹ್ಮನು ಹೇಳುತ್ತಾನೆ:—ಜಗದೊಡೆಯನಾದ ವಿಶ್ವೇಶ್ವರನೆ! ಸ್ವಾಮಿಯಾದ ನಿನ್ನ ಅನುಗ್ರಹದಿಂದ ನಾನು ನಾಲ್ಕು ವಿಧವಾದ ಸೃಷ್ಟಿಯನ್ನು ಮಾಡುತ್ತಿರುವೆನು. ಭೂಮಿಯಲ್ಲಿ ನಿನ್ನ ಅನುಗ್ರಹದಿಂದ ನಾನು ಸೃಷ್ಟಿಮಾಡಿದ ಪ್ರಜೆಗಳು ಅರುವತ್ತುವರ್ಷದ ಈ ಅನಾವೃಷ್ಟಿಯಿಂದ ನಷ್ಟವಾಗಿದ್ದಾರೆ.

ಅರಾಜಕಂ ಮಹಚ್ಚಾಸೀದ್ದುರವಸ್ಥಮಭೂಜ್ಜಗತ್ ।
ತತೋ ರಿಪುಂಜಯೋ ನಾಮ ರಾಜರ್ಷಿರ್ಮನುವಂಶಜಃ ॥ ೬೩ ॥
ಮಯಾಽಭಿಷಿಕ್ತೋ ರಾಜರ್ಷಿಃ ಪ್ರಜಾಃ ಪಾತುಂ ನರೇಶ್ವರಃ ।
ಚಕಾರ ಸಮಯಂ ಸೋಽಪಿ ಮಹಾವೀರ್ಯೋ ಮಹಾತಪಾಃ ॥ ೬೪ ॥
ತವಾಜ್ಞಯಾ ಚೇತ್ ಸ್ಥಾಸ್ಯಂತಿ ಸರ್ವೇ ದಿವಿಷದೋ ದಿವಿ ।
ನಾಗಲೋಕೇ ತಥಾ ನಾಗಾಸ್ತತೋ ರಾಜ್ಯಂ ಕರೋಮ್ಯಹಂ ॥ ೬೫ ॥
ತಥೇತಿ ಚ ಮಯಾ ಪ್ರೋಕ್ತಂ ಪ್ರಮಾಣೀಕ್ರಿಯತಾಂ ತು ತತ್ ।
ಮಂದರಾಯ ವರೋ ದತ್ತೋ ಭವೇದೇವಂ ಕೃಪಾನಿಧೇ ॥ ೬೬ ॥
ತಸ್ಯ ರಾಜ್ಞಪ್ರಜಾಸ್ತ್ರಾತುಂ ಭೂಯಾಚ್ಚೈಷ ಮನೋರಥಃ ।
ಮಮ ನಾಡೀದ್ವಯಂ ರಾಜ್ಯಂ ತಸ್ಯಾಽಪಿ ಚ ಶತಕ್ರತೋಃ ॥ ೬೭ ॥
ಮರ್ತ್ಯಾನಾಂ ಗಣನಾ ಕ್ವೇಹ ನಿಮೇಷಾರ್ಧನಿಮೇಷಿಣಾಂ ।
ದೇವೋಽಪಿ ನಿರ್ಮಲಂ ಮತ್ವಾ ಮಂದರಂ ಚಾರುಕಂದರಂ ॥ ೬೮ ॥
ವಿಧೇಶ್ಚ ಗೌರವಂ ರಕ್ಷಂಸ್ತಥೋರೀಕೃತವಾನ್ಹರ ।
ಜಂಬೂದ್ವೀಪೇ ಯಥಾಕಾಶೀ ನಿರ್ವಾಣಪದದಾ ಸದಾ ॥ ೬೯ ॥
ತಥಾ ಬಹುತಿಥಂ ಕಾಲಂ ದ್ವೀಪೋಽಭೂತ್ಸೋಽಪಿ ಮಂದರಃ ।
ಯಿಯಾಸುನಾ ಚ ದೇವೇನ ಮಂದರಂ ಚಿತ್ರಕಂದರಂ ॥ ೭೦ ॥

---

೬೩–೬೫. ಪ್ರಪಂಚವು ರಾಜನಿಲ್ಲದೆ ದುರವಸ್ಥೆಯನ್ನು ಹೊಂದಲು ನಾನು ಪ್ರಜಾಪಾಲನೆಗಾಗಿ ಮನುವಂಶದ ರಿಪುಂಜಯನೆಂಬ ರಾಜರ್ಷಿಯನ್ನು ರಾಜ್ಯದಲ್ಲಿ ಅಭಿಷೇಕಮಾಡಿದೆನು. ಅತ್ಯಂತ ಪರಾಕ್ರಮಶಾಲಿಯೂ, ಮಹಾತಪಸ್ವಿಯೂ ಆದ ಅವನು ನಿನ್ನ ಅಪ್ಪಣೆಯಿಂದ ಸಮಸ್ತದೇವತೆಗಳು ದೇವಲೋಕದಲ್ಲಿಯೂ, ನಾಗಗಳು ನಾಗಲೋಕದಲ್ಲಿಯೂ ವಾಸಿಸುವುದಾದರೆ ನಾನು ರಾಜ್ಯಭಾರಮಾಡುವೆನು ಎಂದು ನನ್ನೊಡನೆ ಕಟ್ಟುಮಾಡಿಕೊಂಡನು.

೬೬–೭೦. ದಯಾಳುವೆ! ನಾನು ಹಾಗೆಯೇ ಆಗಲೆಂದು ಮಂದರ ಪರ್ವತಕ್ಕೆ ವರವನ್ನಿತ್ತಿರುವೆನು. ನೀನು ಅದನ್ನು ಸತ್ಯಗೊಳಿಸು. ಹೀಗೆಯೇ ಆಗಲಿ. ಆ ದೇವೇಂದ್ರನಿಗೂ, ನನಗೂ ರಾಜ್ಯವೆಂಬುದು ಎರಡುಘಳಿಗೆ ಮಾತ್ರವೇ ಇರುವುದಷ್ಟೆ? ಇನ್ನು ರೆಪ್ಪೆಯನ್ನುಹಾಕುವ ಕಾಲದಲ್ಲಿ ಅರ್ಧಕಾಲ ಮಾತ್ರವೇ ಜೀವಿಸಬಲ್ಲವರಾದ ಮನುಷ್ಯರ ಗಣನೆಯೇನು?" ಬ್ರಹ್ಮನು ಹೀಗೆನ್ನಲು ಮಹೇಶ್ವರನೂ ಮನೋಹರವಾದ ಗುಹೆಗಳುಳ್ಳ ಮಂದರಪರ್ವತವು ನಿರ್ಮಲವಾಗಿರುವುದೆಂದರಿತು ಬ್ರಹ್ಮನ ಗೌರವವನ್ನು ರಕ್ಷಿಸುವ ಸಲುವಾಗಿ ಹಾಗೆಯೇ ಆಗಲೆಂದು ಒಪ್ಪಿಕೊಂಡನು. ಜಂಬೂದ್ವೀಪದಲ್ಲಿ ಕಾಶಿಯು ಹೇಗೆ ಯಾವಾಗಲೂ ಮೋಕ್ಷವನ್ನೀಯುವುದೊ, ಹಾಗೆಯೇ ಮಂದರಪರ್ವತವೂ ಅನೇಕ ವರ್ಷಕಾಲ

ನಿಜಮೂರ್ತಿಮಯಂ ಲಿಂಗಮವಿಜ್ಞಾತಂ ವಿಧೇರಪಿ ।
ಸ್ಥಾಪಿತಂ ಸರ್ವಸಿದ್ಧೀನಾಂ ಸ್ಥಾಪಕೇಭ್ಯಃ ಸಮರ್ಪಿತುಂ ॥ ೬೧ ॥
ವಿಪನ್ನಾನಾಂ ಚ ಜಂತೂನಾಂ ದಾತುಂ ನೈಃಶ್ರೇಯಸೀಂ ಶ್ರಿಯಂ ।
ಸರ್ವೇಷಾಮಿಹ ಸಂಸ್ಥಾನಾಂ ಕ್ಷೇತ್ರಂ ಚೈವಾಽಭಿರಕ್ಷಿತುಂ ॥ ೬೨ ॥
ಮಂದರಾದ್ರಿಂ ಗತೇನಾಽಪಿ ಕ್ಷೇತ್ರಂ ನೈತತ್ಪಿನಾಕಿನಾ ।
ವಿಮುಕ್ತಂ ಲಿಂಗರೂಪೇಣ ಅವಿಮುಕ್ತಮತಃ ಸ್ಮೃತಂ ॥ ೬೩ ॥
ಪುರಾ ನಂದವನಂ ನಾಮ ಕ್ಷೇತ್ರಮೇತತ್ಪ್ರಕೀರ್ತಿತಂ ।
ಅವಿಮುಕ್ತಂ ತದಾರಭ್ಯ ನಾಮಾಽಸ್ಯ ಪ್ರಥಿತಂ ಭುವಿ ॥ ೬೪ ॥
ನಾಮಾಽವಿಮುಕ್ತಮಭವದುಭಯೋಃ ಕ್ಷೇತ್ರಲಿಂಗಯೋಃ ।
ಏತದ್ದ್ವಯಂ ಸಮಾಸಾದ್ಯ ನ ಭೂಯೋ ಗರ್ಭಭಾಗ್ಭವೇತ್ ॥ ೬೫ ॥
ಅವಿಮುಕ್ತೇಶ್ವರಂ ಲಿಂಗಂ ದೃಷ್ಟ್ವಾ ಕ್ಷೇತ್ರೇಽವಿಮುಕ್ತಕೇ ।
ವಿಮುಕ್ತ ಏವ ಭವತಿ ಸರ್ವಸ್ಮಾತ್ಕರ್ಮಬಂಧನಾತ್ ॥ ೬೬ ॥
ಅರ್ಚಂತಿ ವಿಶ್ವೇ ವಿಶ್ವೇಶಂ ವಿಶ್ವೇಶೋಽರ್ಚತಿ ವಿಶ್ವಕೃತ್ ।
ಅವಿಮುಕ್ತೇಶ್ವರಂ ಲಿಂಗಂ ಭುವಿ ಮುಕ್ತಿಪ್ರದಾಯಕಂ ॥ ೬೭ ॥

---

ದ್ವೀಪವಾಗಿದ್ದಿತು. ವಿಚಿತ್ರವಾದ ಗುಹೆಗಳುಳ್ಳ ಮಂದರಪರ್ವತಕ್ಕೆ ತೆರಳಲಿಚ್ಛಿಸಿದ ಮಹೇಶ್ವರನು, ಪ್ರತಿಷ್ಠೆಮಾಡಿದವರಿಗೆ ಸಕಲಸಿದ್ಧಿಯನ್ನು ಕೊಡುವುದಕ್ಕಾಗಿಯೂ, ಇಲ್ಲಿರುವ ಸಮಸ್ತ ಮೃತಜಂತುಗಳಿಗೆ ಮೋಕ್ಷವನ್ನು ನೀಡುವುದಕ್ಕಾಗಿಯೂ, ಕ್ಷೇತ್ರವನ್ನು ಕಾಪಾಡುವುದಕ್ಕಾಗಿಯೂ, ಬ್ರಹ್ಮನಿಗೂ ತಿಳಿಯದೆ ತನ್ನ ಶರೀರ ರೂಪವಾದ ಲಿಂಗವನ್ನು ಸ್ಥಾಪಿಸಿದನು.

೬೩. ಮಹೇಶ್ವರನು ತಾನು ಮಂದರಪರ್ವತಕ್ಕೆ ಹೋದರೂ ಲಿಂಗರೂಪ ದಿಂದ ಆ ಕ್ಷೇತ್ರವನ್ನು ಬಿಡದಿರುವಕಾರಣ ಅದು ಅವಿಮುಕ್ತಕ್ಷೇತ್ರವೆನಿಸಿ ಕೊಂಡಿತು.

೬೪. ಈ ಕ್ಷೇತ್ರವು ಹಿಂದೆ ನಂದವನವೆಂದು ಪ್ರಸಿದ್ಧವಾಗಿದ್ದಿತು. ಅದು ಮೊದಲ್ಗೊಂಡು ಅವಿಮುಕ್ತವೆಂದು ಭೂಮಿಯಲ್ಲಿ ವಿಖ್ಯಾತವಾಯಿತು.

೬೫. ಈ ಅವಿಮುಕ್ತವೆಂಬ ಹೆಸರನ್ನು ಪಡೆದ ಕ್ಷೇತ್ರ ಮತ್ತು ಲಿಂಗಗಳನ್ನು ಹೊಂದಿದವನು ಮರಳಿ ಜನಿಸುವುದಿಲ್ಲ.

೬೬. ಅವಿಮುಕ್ತಕ್ಷೇತ್ರದಲ್ಲಿರುವ ಅವಿಮುಕ್ತೇಶ್ವರಲಿಂಗವನ್ನು ನೋಡಿ ದವನು ಸಕಲಕರ್ಮಬಂಧನದಿಂದಲೂ ಮುಕ್ತನಾಗುವನು.

೬೭. ಸಮಸ್ತರೂ, ವಿಶ್ವೇಶ್ವರನು ಮುಕ್ತಿಯನ್ನೀಯುವ ಅವಿಮುಕ್ತೇಶ್ವರ ಲಿಂಗವನ್ನು ಪೂಜಿಸುವರು.

ಪುರಾ ನ ಸ್ಥಾಪಿತಂ ಲಿಂಗಂ ಕಸ್ಯಚಿತ್ಕೇನಚಿತ್ಕ್ವಚಿತ್ ।
ಕಿಮಾಕೃತಿರ್ಭವೇಲ್ಲಿಂಗಂ ನೈತದ್ವೇತ್ತ್ಯಪಿ ಕಶ್ಚನ ॥ ೭೮ ॥
ಆಕಾರಮವಿಮುಕ್ತಸ್ಯ ದೃಷ್ಟ್ವಾ ಬ್ರಹ್ಮಾಽಚ್ಯುತಾದಯಃ ।
ಲಿಂಗಂ ಸಂಸ್ಥಾಪಯಾಮಾಸುರ್ವಸಿಷ್ಠಾದ್ಯಾಸ್ತಥರ್ಷಯಃ ॥ ೭೯ ॥
ಆದಿಲಿಂಗಮಿದಂ ಪ್ರೋಕ್ತಮವಿಮುಕ್ತೇಶ್ವರಂ ಮಹತ್ ।
ತತೋ ಲಿಂಗಾಂತರಾಣ್ಯತ್ರ ಜಾತಾನಿ ಕ್ಷಿತಿಮಂಡಲೇ ॥ ೮೦ ॥
ಅವಿಮುಕ್ತೇಶನಾಮಾಽಪಿ ಶ್ರುತ್ವಾ ಜನ್ಮಾರ್ಜಿತಾದಘಾತ್ ।
ಕ್ಷಣಾನ್ಮುಕ್ತೋ ಭವೇನ್ಮರ್ತ್ಯೋ ನಾಽತ್ರ ಕಾರ್ಯಾ ವಿಚಾರಣಾ ॥ ೮೧ ॥
ಅವಿಮುಕ್ತೇಶ್ವರಂ ಲಿಂಗಂ ಸ್ಮೃತ್ವಾ ದೂರಗತೋಽಪಿಚ ।
ಜನ್ಮದ್ವಯಕೃತಾತ್ಪಾಪಾತ್ಕ್ಷಣಾದೇವ ವಿಮುಚ್ಯತೇ ॥ ೮೨ ॥
ಅವಿಮುಕ್ತೇ ಮಹಾಕ್ಷೇತ್ರೇಽವಿಮುಕ್ತಮವಲೋಕ್ಯ ಚ ।
ತ್ರಿಜನ್ಮಜನಿತಂ ಪಾಪಂ ಹಿತ್ವಾ ಪುಣ್ಯಮಯೋ ಭವೇತ್ ॥ ೮೩ ॥
ಯತ್ಕೃತಂ ಜ್ಞಾನವಿಭ್ರಂಶಾದೇನಃ ಪಂಚಸು ಜನ್ಮಸು ।
ಅವಿಮುಕ್ತೇಶಸಂಸ್ಪರ್ಶಾತ್ತತ್ಕ್ಷಯೇದೇವ ನಾಽನ್ಯಥಾ ॥ ೮೪ ॥
ಅರ್ಚಯಿತ್ವಾ ಮಹಾಲಿಂಗಮವಿಮುಕ್ತೇಶ್ವರಂ ನರಃ ।
ಕೃತಕೃತ್ಯೋ ಭವೇದತ್ರ ನ ಚ ಸ್ಯಾಜ್ಜನ್ಮಭಾಕ್ಕ್ವತಃ ॥ ೮೫ ॥

---

೭೮. ಹಿಂದೆ ಯಾವ ಲಿಂಗವನ್ನೂ ಯಾವನೂ ಎಲ್ಲಿಯೂ ಸ್ಥಾಪಿಸಲಿಲ್ಲವಾದ್ದರಿಂದ ಆ ಲಿಂಗದ ಆಕಾರವು ಹೇಗಿರುವುದೆಂದು ಯಾರೂ ತಿಳಿಯರು.

೭೯. ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳೂ, ವಸಿಷ್ಠಾದಿ ಮುನಿಗಳೂ ಅವಿಮುಕ್ತಲಿಂಗದ ಆಕಾರವನ್ನು ಕಂಡು ಲಿಂಗವನ್ನು ಸ್ಥಾಪಿಸಿದರು.

೮೦. ಈ ಅವಿಮುಕ್ತೇಶ್ವರಲಿಂಗವು ಮೊದಲನೆಯದಾಗಿರುವುದು. ಬಳಿಕ ಈ ಭೂಮಂಡಲದಲ್ಲಿ ಇತರ ಲಿಂಗಗಳುಂಟಾದುವು.

೮೧–೮೨. ಅವಿಮುಕ್ತೇಶನ ನಾಮವನ್ನು ಕೇಳಿದ ಮಾನವನು ಅನೇಕ ಜನ್ಮಗಳಲ್ಲಿ ಸಂಪಾದಿಸಿದ ಪಾಪದಿಂದ ಕೂಡಲೆ ಮುಕ್ತನಾಗುವನು. ಈ ವಿಷಯದಲ್ಲಿ ವಿಚಾರವಿರುವುದಿಲ್ಲ. ದೂರದಿಂದಲೇ ಅವಿಮುಕ್ತೇಶ್ವರಲಿಂಗವನ್ನು ಸ್ಮರಿಸಿದವನು ಎರಡು ಜನ್ಮಗಳಲ್ಲಿ ಮಾಡಿದ ಪಾಪದಿಂದ ಕೂಡಲೆ ಮುಕ್ತನಾಗುವನು.

೮೩. ಅವಿಮುಕ್ತಕ್ಷೇತ್ರದಲ್ಲಿರುವ ಅವಿಮುಕ್ತಲಿಂಗವನ್ನು ನೋಡಿದವನು ಮೂರು ಜನ್ಮಗಳಲ್ಲೆಸಗಿದ ಪಾಪವನ್ನು ತ್ಯಜಿಸಿ ಪುಣ್ಯಮಯನಾಗುವನು.

೮೪. ಐದು ಜನ್ಮಗಳಲ್ಲಿ ಅರಿಯದೆ ಮಾಡಿದ ಪಾಪವು ಅವಿಮುಕ್ತೇಶ್ವರನ ಸ್ಪರ್ಶದಿಂದ ಕ್ಷಯಿಸುವುದು. ಅದಕ್ಕೆ ಬೇರೆ ದಾರಿಯಿಲ್ಲ.

೮೫. ಅವಿಮುಕ್ತೇಶ್ವರಮಹಾಲಿಂಗವನ್ನು ಅರ್ಚಿಸಿದ ಮಾನವನು ಧನ್ಯನಾಗುತ್ತಾನೆಯಲ್ಲದೆ ಮರಳಿ ಜನಿಸುವುದಿಲ್ಲ.

ಸ್ತುತ್ವಾ ನತ್ವಾಽರ್ಚಯಿತ್ವಾಚ ಯಥಾಶಕ್ತಿ ಯಥಾಮತಿ ।
ಅವಿಮುಕ್ತೇಽವಿಮುಕ್ತೇಶಂ ಸ್ತೂಯತೇ ನಮ್ಯತೇಽರ್ಚ್ಯತೇ ॥ ೮೬ ॥
ಅನಾದಿಮದಿದಂ ಲಿಂಗಂ ಸ್ವಯಂ ವಿಶ್ವೇಶ್ವರಾರ್ಚಿತಂ ।
ಕಾಶ್ಯಾಂ ಪ್ರಯತ್ನತಃ ಸೇವ್ಯಮವಿಮುಕ್ತಂ ವಿಮುಕ್ತಯೇ ॥ ೮೭ ॥
ಸಂತಿ ಲಿಂಗಾನ್ಯನೇಕಾನಿ ಪುಣ್ಯೇಷ್ವಾಯತನೇಷು ಚ ।
ಆಯಾಂತಿ ತಾನಿ ಲಿಂಗಾನಿ ಮಾಘೀಂ ಪ್ರಾಪ್ಯ ಚತುರ್ದಶೀಂ ॥ ೮೮ ॥
ಕೃಷ್ಣಾಯಾಂ ಮಾಘಭೂತಾಯಾಮವಿಮುಕ್ತೇಶ ಜಾಗರಾತ್ ।
ಸದಾ ವಿಗತನಿದ್ರಸ್ಯ ಯೋಗಿನೋ ಗತಿಭಾಗ್ಭವೇತ್ ॥ ೮೯ ॥
ನಾನಾಯತನಲಿಂಗಾನಿ ಚತುರ್ವರ್ಗಪ್ರದಾನ್ಯಪಿ ।
ಮಾಘಕೃಷ್ಣಚತುರ್ದಶ್ಯಾಮವಿಮುಕ್ತಮುಪಾಸತೇ ॥ ೯೦ ॥
ಕಿಂ ಬಿಭೇತಿ ನರೋ ಧೀರಃ ಕೃತಾದಘಶಿಲೋಚ್ಚಯಾತ್ ।
ಅವಿಮುಕ್ತೇಶಲಿಂಗಸ್ಯ ಭಕ್ತಿವಜ್ರಧರೋ ಯದಿ ॥ ೯೧ ॥
ಕ್ವಾಽವಿಮುಕ್ತಂ ಮಹಾಲಿಂಗಂ ಚತುರ್ವರ್ಗಫಲೋದಯಂ ।
ಕ್ವ ಪಾಪಿ ಪಾಪಶೈಲೋಽಲ್ಪೋ ಯಃ ಕ್ಷಯೇಸ್ನಾಮಸಂಭೃತಃ ॥ ೯೨ ॥
ಅವಿಮುಕ್ತೇ ಮಹಾಕ್ಷೇತ್ರೇ ವಿಶ್ವೇಶಸಮಧಿಷ್ಠಿತೇ ।
ಯೈರ್ನ ದೃಷ್ಟಂ ವಿಮೂಢಾಸ್ತೇಽವಿಮುಕ್ತಂ ಲಿಂಗಮುತ್ತಮಂ ॥ ೯೩ ॥

---

೮೬. ಅವಿಮುಕ್ತೇಶ್ವರನನ್ನು ಶಕ್ತ್ಯನುಸಾರ ಸ್ತುತಿಸಿ, ವಂದಿಸಿ, ಪೂಜಿಸಿದವನು ಸ್ತುತ್ಯನೂ, ವಂದ್ಯನೂ, ಪೂಜ್ಯನೂ ಆಗುವನು.

೮೭. ಕಾಶಿಯಲ್ಲಿರುವ ಅನಾದಿಯೂ, ವಿಶ್ವೇಶ್ವರನಿಂದ ಪೂಜಿಸಲ್ಪಟ್ಟುದೂ ಆದ ಅವಿಮುಕ್ತೇಶ್ವರನನ್ನು ಮುಕ್ತಿಗಾಗಿ ಸೇವಿಸಬೇಕು.

೮೮. ಪುಣ್ಯದೇವಾಲಯಗಳಲ್ಲಿರುವ ಅನೇಕ ಲಿಂಗಗಳು ಮಾಘ ಬಹುಳ ಚತುರ್ದಶೀದಿನ ಅವಿಮುಕ್ತಕ್ಷೇತ್ರಕ್ಕೆ ಬರುವುವು.

೮೯. ಮಾಘ ಕೃಷ್ಣ ಚತುರ್ದಶಿಯ ದಿನ ಅವಿಮುಕ್ತೇಶಲಿಂಗದೆಡೆಯಲ್ಲಿ ಜಾಗರಣೆ ಮಾಡಿದವನು ಯೋಗಿಪದವಿಯನ್ನು ಪಡೆಯುವನು.

೯೦. ಧರ್ಮಾರ್ಥ ಮೋಕ್ಷಗಳನ್ನೀಯುವ ಅನೇಕ ದೇವಾಲಯಗಳಲ್ಲಿರುವ ಲಿಂಗಗಳು ಶಿವರಾತ್ರಿಯ ದಿನ ಅವಿಮುಕ್ತಕ್ಷೇತ್ರವನ್ನು ಸೇವಿಸುವುವು.

೯೧. ಧೀರನಾದ ಮಾನವನು ಅವಿಮುಕ್ತಲಿಂಗದ ಭಕ್ತಿಯೆಂಬ ವಜ್ರವನ್ನು ಧರಿಸಿದವನಾದರೆ ತಾನು ಮಾಡಿದ ಪಾಪವೆಂಬ ಪರ್ವತದಿಂದ ಏಕೆ ಹೆದರಬೇಕು ?

೯೨. ಚತುರ್ವರ್ಗಗಳ ಫಲವನ್ನೀಯುವ ಅವಿಮುಕ್ತಮಹಾಲಿಂಗವೆಲ್ಲಿ? ನಶ್ವರವೂ ಅಲ್ಪವೂ ಆದ ಪಾಪಿಯ ಪಾಪಶೈಲವೆಲ್ಲಿ?

೯೩. ವಿಶ್ವೇಶ್ವರನಿರುವ ಅವಿಮುಕ್ತಮಹಾಕ್ಷೇತ್ರದಲ್ಲಿ ಉತ್ತಮವಾದ ಅವಿಮುಕ್ತಲಿಂಗವನ್ನು ಕಾಣದವರು ಮೂಢರು.

ದ್ರಷ್ಟಾರಮವಿಮುಕ್ತಸ್ಯ ದೃಷ್ಟ್ವಾ ದಂಡಧರೋ ಯಮಃ ।
ದೂರಾದೇವ ಪ್ರಣಮತಿ ಪ್ರಬದ್ಧಕರಸಂಪುಟಃ ॥ ೯೪ ॥
ಧನ್ಯಂ ತನ್ನೇತ್ರನಿರ್ಮಾಣಂ ಕೃತಕೃತ್ಯೌ ತು ತೌ ಕರೌ ।
ಅವಿಮುಕ್ತೇಶ್ವರಂ ಯೇನ ಯಾಭ್ಯಾಮ್ಯೈಕ್ಷಿಷ್ಟ ಯಃ ಸ್ಪೃಶೇತ್ ॥ ೯೫ ॥
ತ್ರಿಸಂಧ್ಯಮವಿಮುಕ್ತೇಶಂ ಯೋ ಜಪೇನ್ನಿಯತಃ ಶುಚಿಃ ।
ದೂರದೇಶವಿಪನ್ನೋಽಪಿ ಕಾಶೀಮೃತಫಲಂ ಲಭೇತ್ ॥ ೯೬ ॥
ಅವಿಮುಕ್ತಂ ಮಹಾಲಿಂಗಂ ದೃಷ್ಟ್ವಾ ಗ್ರಾಮಾಂತರಂ ವ್ರಜೇತ್ ।
ಲಬ್ಧಾ ಶುಕಾರ್ಯಸಂಸಿದ್ಧಿಂ ಕ್ಷೇಮೇಣ ಪ್ರವಿಶೇದ್ಗೃಹಂ ॥ ೯೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶಿಖಂಡೇ ಪೂರ್ವಾರ್ಧೇ "ಅವಿಮುಕ್ತೇಶಾವಿರ್ಭಾವ ವರ್ಣನಂ"
ನಾಮೈಕೋನಚತ್ವಾರಿಂಶೋಽಧ್ಯಾಯಃ

---

೯೪. ಅವಿಮುಕ್ತಲಿಂಗವನ್ನು ನೋಡಿದ ಮಾನವನನ್ನು ನೋಡಿ ದಂಡಧಾರಿಯಾದ ಯಮನು ದೂರದಿಂದಲೆ ಕೈಯನ್ನು ಮುಗಿದುಕೊಂಡು ನಮಸ್ಕರಿಸುವನು.

೯೫. ಅವಿಮುಕ್ತೇಶ್ವರನನ್ನು ನೋಡಿದ ಕಣ್ಣುಗಳೂ, ಮುಟ್ಟಿದ ಕೈಗಳೂ ಧನ್ಯವಾದುವು.

೯೬. ಮೂರು ಸಂಧ್ಯಾಕಾಲಗಳಲ್ಲಿ ಶುದ್ಧನಾಗಿ ಅವಿಮುಕ್ತೇಶ್ವರನನ್ನು ಜಪಿಸುವವನು ದೂರದೇಶದಲ್ಲಿ ಮೃತನಾದರೂ ಕಾಶಿಯಲ್ಲಿ ಮಡಿದ ಫಲವನ್ನು ಪಡೆಯುವನು.

೯೭. ಅವಿಮುಕ್ತಮಹಾಲಿಂಗವನ್ನು ನೋಡಿ ಗ್ರಾಮಾಂತರಕ್ಕೆ ಪ್ರಯಾಣ ಮಾಡಿದ ಮಾನವನು ಶೀಘ್ರವಾಗಿ ಕಾರ್ಯಸಿದ್ಧಿಯನ್ನು ಹೊಂದಿ ಸುಖವಾಗಿ ಮನೆಯನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಅವಿಮುಕ್ತೇಶಾವಿರ್ಭಾವ ವರ್ಣನ"ವೆಂಬ
ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತ್ವಾರಿಂಶೋಽಧ್ಯಾಯಃ

## ಗೃಹಸ್ಥಧರ್ಮನಿರೂಪಣಂ

ಸ್ಕಂದ ಉವಾಚ :—

ಅವಿಮುಕ್ತೇಶಮಾಹಾತ್ಮ್ಯಂ ವರ್ಣಿತಂ ತೇಽಗ್ರತೋ ಮಯಾ ।
ಅಥೋ ಕಿಮಸಿ ಶುಶ್ರೂಷುಃ ಕಥಯಿಷ್ಯಾಮಿ ತತ್ಪುನಃ ॥ ೧ ॥

ಅಗಸ್ತ್ಯ ಉವಾಚ :—

ಅವಿಮುಕ್ತೇಶಮಾಹಾತ್ಮ್ಯಂ ಶ್ರಾವಂ ಶ್ರಾವಂ ಶ್ರುತೀ ಮಮ ।
ಅತೀವ ಸುಶ್ರುತೇ ಜಾತೇ ತಥಾಽಪಿ ನ ಧಿನೋಮ್ಯಹಂ ॥ ೨ ॥
ಅವಿಮುಕ್ತೇಶ್ವರಂ ಲಿಂಗಂ ಕ್ಷೇತ್ರಂಚಾಽಪ್ಯವಿಮುಕ್ತಕಂ ।
ಏತಯೋಸ್ತು ಕಥಂ ಪ್ರಾಪ್ತಿರ್ಭವೇತ್ ಷಣ್ಮುಖ ತದ್ವದ ॥ ೩ ॥

ಸ್ಕಂದ ಉವಾಚ :—

ಶೃಣು ಕುಂಭಜ ವಕ್ಷ್ಯಾಮಿ ಯಥಾ ಪ್ರಾಪ್ತಿರ್ಭವೇದಿಹ ।
ಸ್ವಶ್ರೇಯೋ ದಾತುರೇತಸ್ಯಾಽಮಿಮುಕ್ತಸ್ಯ ಮಹಾಮತೇ ॥ ೪ ॥
ಸಮಿಾಹಿತಾರ್ಥಸಂಸಿದ್ಧಿರ್ಲಭ್ಯತೇ ಪುಣ್ಯಭಾರತಃ ।
ತಚ್ಚ ಪುಣ್ಯಂ ಭವೇದ್ವಿಪ್ರ ಶ್ರುತಿವರ್ತ್ಮ ಸಭಾಜನಾತ್ ॥ ೫ ॥

---

## ಕನ್ನಡದ ಅನುವಾದ

### ಗೃಹಸ್ಥಧರ್ಮನಿರೂಪಣ

೧. ಸ್ಕಂದನು ಹೇಳುತ್ತಾನೆ:—ಅಗಸ್ತ್ಯ ! ನಾನು ನಿನಗೆ ಅವಿಮುಕ್ತೇಶ್ವರನ ಮಾಹಾತ್ಮ್ಯವನ್ನು ಹೇಳಿರುತ್ತೇನೆ. ಬಳಿಕ ಏನನ್ನು ಕೇಳಬಯಸುವೆ? ಅದನ್ನು ಮರಳಿ ನಿನಗೆ ಹೇಳುವೆನು.

೨. ಅಗಸ್ತ್ಯನು ಹೇಳುತ್ತಾನೆ:—ನನ್ನ ಕಿವಿಯು ಅವಿಮುಕ್ತೇಶಮಾಹಾತ್ಮ್ಯವನ್ನು ಕೇಳಿ ಕೇಳಿ ಸುಶ್ರುತವೆನಿಸಿತು. ಆದರೂ ನಾನು ತೃಪ್ತಿಗೊಳ್ಳಲಿಲ್ಲ.

೩. ಸ್ಕಂದ! ನೀನು ಅವಿಮುಕ್ತೇಶ್ವರಲಿಂಗ ಮತ್ತು ಅವಿಮುಕ್ತಕ್ಷೇತ್ರಗಳು ಹೇಗುಂಟಾದುವುವೆಂಬುದನ್ನು ನನಗೆ ಹೇಳು.

೪. ಸ್ಕಂದನು ಹೇಳುತ್ತಾನೆ:—ಅಗಸ್ತ್ಯ! ಮೋಕ್ಷವನ್ನು ಕೊಡುವ ಈ ಅವಿಮುಕ್ತಕ್ಷೇತ್ರವೂ, ಲಿಂಗವೂ ಉಂಟಾಗಲು ಕಾರಣವನ್ನು ಹೇಳುವೆನು.

೫. ಪುಣ್ಯಾತಿಶಯದಿಂದ ಇಷ್ಟಾರ್ಥಗಳು ಸಿದ್ಧಿಸುವುವು. ಆ ಪುಣ್ಯವು ವೇದಾಧ್ಯಯನದಿಂದುಟಾಗುವುದು.

ಶ್ರುತಿವರ್ತ್ಮಜುಷಃ ಪುಂಸಃ ಸಂಸ್ಪರ್ಶಾನ್ನಶ್ಯತೋ ಮುನೇ ।
ಕಲಿಕಾಲಾವಪಿ ಸದಾ ಛಿದ್ರಂ ಪ್ರಾಪ್ಯ ಜಿಘಾಂಸತಃ ॥ ೬ ॥
ವರ್ಜಿತಸ್ಯ ವಿಧಾನೇನ ಪ್ರೋಕ್ತಸ್ಯಾಕರಣೇನ ವೈ ।
ಕಲಿಕಾಲಾವಪಿ ಹತೋ ಬ್ರಾಹ್ಮಣಂ ರಂಧ್ರದರ್ಶನಾತ್ ॥ ೭ ॥
ನಿಷಿದ್ಧಾಚರಣಂ ತಸ್ಮಾತ್ಕಥಯಿಷ್ಯೇ ತವಾಗ್ರತಃ ।
ತದ್ದೂರತಃ ಪರಿತ್ಯಜ್ಯ ನರೋ ನ ನಿರಯೀ ಭವೇತ್ ॥ ೮ ॥
ಪಲಾಂಡುಂ ವಿಡ್ವರಾಹಂ ಚ ಶೇಲುಂ ಲಶುನ ಗೃಂಜನೇ ।
ಗೋಪೀಯೂಷಂ ತಂಡುಲೀಯಂ ವರ್ಜ್ಯಂ ಚ ಕವಕಂ ಸದಾ ॥ ೯ ॥
ವೃಶ್ಚನಾನ್ವೃಕ್ಷನಿರ್ಯಾಸಾನ್ಪಾಯಸಾಪೂಪಶಷ್ಕುಲೀಃ ।
ಅದೇವಪಿತ್ರ್ಯಂ ಪಲಲಮವತ್ಸಾಗೋಪಯಸ್ತ್ಯಜೇತ್ ॥ ೧೦ ॥
ಪಯ ಐಕಶಫಂ ಹೇಯಂ ತಥಾಕ್ರಾಮೇಲಕಾವಿಕಂ ।
ರಾತ್ರೌ ನ ದಧಿ ಭೋಕ್ತವ್ಯಂ ದಿವಾ ನ ನವನೀತಕಂ ॥ ೧೧ ॥
ಟಿಟ್ಟಿಭಂ ಕಲವಿಂಕಂಚ ಹಂಸಂ ಚಕ್ರಂ ಪ್ಲವಂಬಕಂ ।
ತ್ಯಜೇನ್ಮಾಂಸಾಶಿನಃ ಸರ್ವಾನ್ಸಾರಸಂ ಕುಕ್ಕುಟಂ ಶುಕಂ ॥ ೧೨ ॥

---

೬. ಅವಕಾಶವನ್ನು ಹೊಂದಿ ಕೊಲ್ಲುವ ಕಲಿ ಮತ್ತು ಕಾಲಗಳು ವೇದೋಕ್ತಮಾರ್ಗವನ್ನು ಸೇವಿಸುವ ಮನುಷ್ಯನ ಸ್ಪರ್ಶದಿಂದ ನಾಶವಾಗುವುವು.

೭. ವಿಹಿತವಾದುದನ್ನು ಬಿಡುವುದರಿಂದಲೂ, ಅವಿಹಿತವಾಗಿರುವುದನ್ನು ಮಾಡುವುದರಿಂದಲೂ ಕಲಿಕಾಲಗಳು ಅವಕಾಶವನ್ನು ಹೊಂದಿ ಬ್ರಾಹ್ಮಣನನ್ನು ಕೊಲ್ಲುವುವು.

೮. ಆದುದರಿಂದ ನಿನಗೆ ಮೊದಲು ನಿಷಿದ್ಧಾಚಾರವನ್ನು ಹೇಳುವೆನು. ಅದನ್ನು ದೂರದಲ್ಲಿ ತ್ಯಜಿಸಿದ ಮಾನವನು ನರಕವನ್ನು ಹೊಂದುವುದಿಲ್ಲ.

೯–೧೧. ಈರುಳ್ಳಿ, ಹಳ್ಳಿಯ ಹಂದಿ, ಚಳ್ಳೆಹಣ್ಣು, ಬೆಳ್ಳುಳ್ಳಿ, ಕೆಂಪು ಮೂಲಂಗಿ, ಹಸುವಿನ ಹಾಲು, ಕೀರೆಸೊಪ್ಪು, ಶಿಲೀಂಧ್ರ, ಕತ್ತರಿಸುವುದರಿಂದುಂಟಾದ ಮರದ ಹಾಲು, ದೇವಪಿತೃಗಳಿಗೆ ಸಮರ್ಪಿಸದ ಪಾಯಸ, ದೋಸೆ, ಚಕ್ಕುಲಿ, ಮಾಂಸ, ಕರುವಿಲ್ಲದ ಗೋವಿನ ಹಾಲು, ಕುದುರೆ ಮುಂತಾದ ಒಂದು ಗೊರಸುಳ್ಳ ಪ್ರಾಣಿಗಳ ಹಾಲು, ಒಂಟೆ, ಕುರಿಗಳ ಹಾಲು ಇವುಗಳನ್ನು ತ್ಯಜಿಸಬೇಕು. ರಾತ್ರಿ ಮೊಸರು, ಹಗಲು ಬೆಣ್ಣೆ ಇವುಗಳನ್ನು ತಿನ್ನಕೂಡದು.

೧೨–೧೩. ಟಿಟ್ಟಿಭ, ಗುಬ್ಬಚ್ಚಿ, ಹಂಸ, ಚಕ್ರವಾಕ, ಬಕ, ಮಾಂಸವನ್ನು ತಿನ್ನುವ ಪ್ರಾಣಿಗಳು, ಸಾರಸ, ಕೋಳಿ, ಗಿಣಿ, ಜಾಲಪಾದ ಪ್ರಾಣಿಗಳು,

ಜಾಲಪಾದಾನ್ಖಂಜರೀಟಾನ್ಬುಡಿತ್ಥಾನ್ ಮತ್ಸ್ಯಭಕ್ಷಕಾನ್ ।
ಮತ್ಸ್ಯಾಶೀ ಸರ್ವಮಾಂಸಾಶೀ ತಸ್ಮಾತ್ಮತ್ಸ್ಯಾನ್ಸರ್ವಥಾ ತ್ಯಜೇತ್ ॥ ೧೩ ॥
ಹವ್ಯಕವ್ಯನಿಯುಕ್ತೌ ತು ಭಕ್ಷ್ಯೌ ಪಾಠೀನರೋಹಿತೌ ।
ಮಾಂಸಾಶಿಭಿಸ್ತ್ವಮೀ ಭಕ್ಷ್ಯಾಃ ಶಶಶಲ್ಲಕಕಚ್ಛಪಾಃ ॥ ೧೪ ॥
ಶ್ವಾವಿದ್ಗೋಧೇ ಪ್ರಶಸ್ತೇಚ ಜ್ಞಾತಾಶ್ಚ ಮೃಗಪಕ್ಷಿಣಃ ।
ಆಯುಷ್ಕಾಮೈಃ ಸ್ವರ್ಗಕಾಮೈಸ್ತ್ಯಾಜ್ಯಂ ಮಾಂಸಂ ಪ್ರಯತ್ನತಃ ॥ ೧೫ ॥
ಯಜ್ಞಾರ್ಥಂ ಪಶುಹಿಂಸಾಯಾ ಸಾ ಸ್ವರ್ಗ್ಯಾ ನೇತರಾ ಕ್ವಚಿತ್ ।
ತ್ಯಜೇತ್ಪರ್ಯುಷಿತಂ ಸರ್ವಮಖಂಡಂ ಸ್ನೇಹವರ್ಜಿತಂ ॥ ೧೬ ॥
ಪ್ರಾಣಾತ್ಯಯೇ ಕ್ರತೌ ಶ್ರಾದ್ಧೇ ಭೇಷಜೇ ವಿಪ್ರಕಾಮ್ಯಯಾ ।
ಅಲೌಲ್ಯಮಿತ್ಥಂ ಪಲಲಂ ಭಕ್ಷಯನ್ನೈವ ದೋಷಭಾಕ್ ॥ ೧೭ ॥
ನ ತಾದೃಶಂ ಭವೇತ್ಪಾಪಂ ಮೃಗಯಾವೃತ್ತಿಕಾಂಕ್ಷಿಣಃ ।
ಯಾದೃಶಂ ಭವತಿ ಪ್ರೇತ್ಯ ಲೌಲ್ಯಾನ್ಮಾಂಸೋಪಸೇವಿನಃ ॥ ೧೮ ॥
ಮಖಾರ್ಥಂ ಬ್ರಹ್ಮಣಾ ಸೃಷ್ಟಾಃ ಪಶುದ್ರುಮಮೃಗೌಷಧೀಃ ।
ನಿಘ್ನನ್ನಹಿಂಸಕೋ ವಿಪ್ರಸ್ತಾಸಾಮಪಿ ಶುಭಾಗತಿಃ ॥ ೧೯ ॥

---

ಖಂಜರೀಟ, ನೀರಿನಲ್ಲಿ ಮುಳುಗಿ ಮೀನನ್ನು ತಿನ್ನುವ ಹಕ್ಕಿ ಇವುಗಳನ್ನು ತಿನ್ನಕೂಡದು. ಮೀನನ್ನು ತಿನ್ನುವವನು ಎಲ್ಲ ಮೀನುಗಳನ್ನೂ ತಿನ್ನುವವನಂತಾಗುವುದರಿಂದ ಮೀನನ್ನು ತಿನ್ನಲೇಬಾರದು.

೧೪–೧೫. ದೇವಪಿತೃಗಳಿಗೆ ಅರ್ಪಿಸಿದ ಪಾಠೀನ, ರೋಹಿತಗಳೆಂಬ ಮೀನುಗಳನ್ನು ತಿನ್ನಬಹುದು. ಮಾಂಸವನ್ನು ತಿನ್ನುವವರು ಮೊಲ, ಮುಳ್ಳುಹಂದಿ, ಆಮೆ, ಶ್ವಾವಿತ್, ಉಡ ಇವುಗಳನ್ನೂ, ಕುಲಕ್ರಮದಿಂದ ಉಪಯೋಗಿಸುತ್ತಿದ್ದ ಮೃಗಪಕ್ಷಿಗಳನ್ನೂ ತಿನ್ನಬಹುದು. ಆಯುಸ್ಸು ಮತ್ತು ಸ್ವರ್ಗವನ್ನು ಅಪೇಕ್ಷಿಸುವವರು ಮಾಂಸವನ್ನು ಪ್ರಯತ್ನದಿಂದ ತ್ಯಜಿಸಬೇಕು.

೧೬. ಯಜ್ಞಕ್ಕಾಗಿ ಮಾಡುವ ಪಶುಹಿಂಸೆಯು ಸ್ವರ್ಗಸಾಧಕವು. ಎಣ್ಣೆಯಿಂದ ಕರಿಯದ ತಂಗಳನ್ನು ತಿನ್ನಬಾರದು.

೧೭. ಪ್ರಾಣಾಪಾಯ, ಯಜ್ಞ, ಶ್ರಾದ್ಧ, ಔಷಧಗಳಲ್ಲಿಯೂ, ಬ್ರಾಹ್ಮಣರಿಗಾಗಿಯೂ ಆಶೆಯಿಲ್ಲದೆ ಮಾಂಸವನ್ನು ತಿಂದರೆ ದೋಷವಿಲ್ಲ.

೧೮. ಅತ್ಯಾಶೆಯಿಂದ ಮಾಂಸವನ್ನು ಭಕ್ಷಿಸುವವನಿಗೆ ಮರಣಾನಂತರ ಸಂಭವಿಸುವ ಪಾಪವು ಬೇಟೆಯಿಂದ ಜೀವಿಸುವವನಿಗೂ ಉಂಟಾಗುವುದಿಲ್ಲ.

೧೯. ಬ್ರಹ್ಮನು ಯಜ್ಞಕ್ಕಾಗಿ ಪಶು, ಮರ, ಮೃಗ, ಔಷಧಿಗಳನ್ನು ಸೃಜಿಸಿರುವನು. ಅದಕ್ಕಾಗಿ ಅವುಗಳನ್ನು ಹಿಂಸಿಸುವವನು ದೋಷವುಳ್ಳವನಾಗುವುದಿಲ್ಲ. ಅದರಿಂದ ಅವುಗಳಿಗೂ ಸದ್ಗತಿಯಾಗುವುದು.

ಪಿತೃದೇವಕ್ರತುಕೃತೇ ಮಧುಪರ್ಕಾರ್ಘಮೇವ ಚ ।
ತತ್ರ ಹಿಂಸಾಽಪ್ಯಹಿಂಸಾ ಸ್ಯಾದ್ಧಿಂಸಾಽನ್ಯತ್ರ ಸುದುಸ್ತರಾ ॥ ೨೦ ॥
ಯೋ ಜಂತೂನಾತ್ಮಪುಷ್ಟ್ಯರ್ಥಂ ಹಿನಸ್ತಿ ಜ್ಞಾನದುರ್ಬಲಃ ।
ದುರಾಚಾರಸ್ಯ ತಸ್ಯೇಹ ನಾಽಮುತ್ರಾಽಪಿ ಸುಖಂ ಕ್ವಚಿತ್ ॥ ೨೧ ॥
ಭೋಕ್ತಾಽನುಮಂತಾ ಸಂಸ್ಕರ್ತಾ ಕ್ರಯಿವಿಕ್ರಯಿಹಿಂಸಕಾಃ ।
ಉಪಹರ್ತಾ ಘಾತಯಿತಾ ಹಿಂಸಕಾಶ್ಚಾಽಷ್ಟಧಾ ಸ್ಮೃತಾಃ ॥ ೨೨ ॥
ಪ್ರತ್ಯಬ್ದಮಶ್ವಮೇಧೇನ ಶತಂ ವರ್ಷಾಣಿ ಯೋ ಯಜೇತ್ ।
ಅಮಾಂಸಭಕ್ಷಕೋ ಯಶ್ಚ ತಯೋರಂತ್ಯೋ ವಿಶಿಷ್ಯತೇ ॥ ೨೩ ॥
ಯಥೈವಾತ್ಮಾ ಪರಸ್ತದ್ವದ್ದ್ರಷ್ಟವ್ಯಃ ಸುಖಮಿಚ್ಛತಾ ।
ಸುಖದುಃಖಾನಿ ತುಲ್ಯಾನಿ ಯಥಾತ್ಮನಿ ತಥಾಽಪರೇ ॥ ೨೪ ॥
ಸುಖಂ ವಾ ಯದಿ ವಾ ಚಾಽನ್ಯದ್ಯತ್ಕಿಂಚಿತ್ಕ್ರಿಯತೇಽಪರೇ ।
ತತ್ಕೃತಂ ಹಿ ಪುನಃ ಪಶ್ಚಾತ್ಸರ್ವಮಾತ್ಮನಿ ಸಂಭವೇತ್ ॥ ೨೫ ॥
ನ ಕ್ಲೇಶೇನ ವಿನಾ ದ್ರವ್ಯಮರ್ಥಹೀನೇ ಕುತಃ ಕ್ರಿಯಾಃ ।
ಕ್ರಿಯಾಹೀನೇ ಕುತೋ ಧರ್ಮೋ ಧರ್ಮಹೀನೇ ಕುತಃ ಸುಖಂ ॥ ೨೬ ॥

---

೨೦. ಪಿತೃ, ದೇವ, ಯಜ್ಞ ಮತ್ತು ಮಧುಪರ್ಕಗಳಿಗಾಗಿ ಮಾಡಿದ ಹಿಂಸೆಯು ಹಿಂಸೆಯಾಗುವುದಿಲ್ಲ. ಇತರ ಹಿಂಸೆಯು ದುಸ್ತರವಾದುದು.

೨೧. ತನ್ನ ಪುಷ್ಟಿಗಾಗಿ ಜಂತುಗಳನ್ನು ಹಿಂಸೆಮಾಡುವ ದುರಾಚಾರಿಯಾದ ಮೂಢನಿಗೆ ಇಹಪರಲೋಕಗಳಲ್ಲಿ ಸುಖವಿರುವುದಿಲ್ಲ.

೨೨. ತಿನ್ನುವವನು, ಅನುಮೋದಿಸುವವನು, ಬೇಯಿಸುವವನು, ಕೊಂಡು ಕೊಳ್ಳುವವನು, ಮಾರುವವನು, ಕೊಲ್ಲುವವನು, ತರುವವನು, ಕೊಲ್ಲಿಸುವವನು ಎಂಬ ಈ ಎಂಟುಮಂದಿಯೂ ಹಿಂಸಕರೆ!

೨೩. ನೂರುವರ್ಷಗಳಕಾಲ ಪ್ರತಿವರ್ಷವೂ ಅಶ್ವಮೇಧಯಾಗ ಮಾಡುವವನು, ಮಾಂಸಭಕ್ಷಣಮಾಡದವನು ಇವರಲ್ಲಿ ಎರಡನೆಯವನೇ ಉತ್ತಮನು.

೨೪. ಸುಖವನ್ನು ಬಯಸುವವನು ತನ್ನಂತೆಯೇ ಮತ್ತೊಬ್ಬನನ್ನು ನೋಡಬೇಕು. ತನ್ನಂತೆಯೇ ಇತರರಿಗೂ ಸುಖದುಃಖಗಳುಂಟೆಂಬುದನ್ನು ತಿಳಿಯಬೇಕು.

೨೫. ಇತರರಿಗೆ ಸುಖವನ್ನಾಗಲಿ, ದುಃಖವನ್ನಾಗಲಿ, ಉಂಟುಮಾಡಿದರೆ ಅದು ಮರಳಿ ತನಗುಂಟಾಗುವುದು.

೨೬. ಕಷ್ಟವಿಲ್ಲದೆ ದ್ರವ್ಯವು ಲಭಿಸುವುದಿಲ್ಲ. ದ್ರವ್ಯವಿಲ್ಲದವನಿಗೆ ಕ್ರಿಯೆಗಳು ಸಿದ್ಧಿಸುವುದಿಲ್ಲ. ಕ್ರಿಯೆಯಿಲ್ಲದವನಿಗೆ ಧರ್ಮವು ಹೇಗುಂಟಾಗುವುದು? ಧರ್ಮವಿಲ್ಲದವನಿಗೆ ಸುಖವೆಲ್ಲಿಯದು!

ಸುಖಂ ಹಿ ಸರ್ವೈರಾಕಾಂಕ್ಷ್ಯಂ ತಚ್ಚ ಧರ್ಮಸಮುದ್ಭವಂ ।
ತಸ್ಮಾದ್ಧರ್ಮೋಽತ್ರ ಕರ್ತವ್ಯಶ್ಚಾತುರ್ವರ್ಣ್ಯೈರ್ನ ಯತ್ನತಃ ॥ ೨೭ ॥
ನ್ಯಾಯಾಗತೇನ ದ್ರವ್ಯೇಣ ಕರ್ತವ್ಯಂ ಪಾರಲೌಕಿಕಂ ।
ದಾನಂ ಚ ವಿಧಿನಾ ದೇಯಂ ಕಾಲೇ ಪಾತ್ರೇ ಚ ಭಾವತಃ ॥ ೨೮ ॥
ವಿಧಿಹೀನಂ ತಥಾಽಪಾತ್ರೇ ಯೋ ದದಾತಿ ಪ್ರತಿಗ್ರಹಂ ।
ನ ಕೇವಲಂ ಹಿ ತದ್ಯಾತಿ ಶೇಷಂ ತಸ್ಯ ಚ ನಶ್ಯತಿ ॥ ೨೯ ॥
ವ್ಯಸನಾರ್ಥೇ ಕುಟುಂಬಾರ್ಥೇ ಋಣಾರ್ಥೇ ಚ ದೀಯತೇ ।
ತದಕ್ಷಯಂ ಭವೇದತ್ರ ಪರತ್ರ ಚ ನ ಸಂಶಯಃ ॥ ೩೦ ॥
ಮಾತಾಪಿತೃವಿಹೀನಂ ಯೋ ಮೌಂಜೀ ಪಾಣಿಗ್ರಹಾದಿಭಿಃ ।
ಸಂಸ್ಕಾರಯೇನ್ನಿಜೈರರ್ಥೈಸ್ತಸ್ಯ ಶ್ರೇಯಸ್ತ್ವನಂತಕಂ ॥ ೩೧ ॥
ಅಗ್ನಿಹೋತ್ರೈರ್ನ ತಚ್ಛ್ರೇಯೋ ನಾಽಗ್ನಿಷ್ಟೋಮಾದಿಭಿರ್ಮಖೈಃ ।
ಯಚ್ಛ್ರೇಯಃ ಪ್ರಾಪ್ಯತೇ ಮರ್ತ್ಯೈರ್ದ್ವಿಜೇ ಚೈಕೇ ಪ್ರತಿಷ್ಠಿತೇ ॥ ೩೨ ॥
ಯೋಽಹ್ಯನಾಥಸ್ಯ ವಿಪ್ರಸ್ಯ ಪಾಣಿಂ ಗ್ರಾಹಯತೇ ಕೃತೀ ।
ಇಹ ಸೌಖ್ಯಮವಾಪ್ನೋತಿ ಸೋಽಕ್ಷಯಂ ಸ್ವರ್ಗಮಾಪ್ನುಯಾತ್ ॥

---

೨೭. ಸುಖವನ್ನು ಎಲ್ಲರೂ ಬಯಸುವರು. ಆ ಸುಖವು ಧರ್ಮದಿಂದ ಉಂಟಾಗುವುದು. ಆದುದರಿಂದ ನಾಲ್ಕುಜಾತಿಯವರೂ ಈ ಲೋಕದಲ್ಲಿ ಧರ್ಮವನ್ನಾಚರಿಸಬೇಕು.

೨೮. ನ್ಯಾಯದಿಂದ ಸಂಪಾದಿಸಿದ ದ್ರವ್ಯದಿಂದ ಪರಲೋಕಕ್ಕೆ ಹಿತವಾದ ಕರ್ಮಗಳನ್ನಾಚರಿಸಬೇಕು. ದಾನವನ್ನು ಭಕ್ತಿಯಿಂದ ವಿಧಿಪೂರ್ವಕವಾಗಿ ಕಾಲ ಮತ್ತು ಪಾತ್ರಗಳನ್ನರಿತು ಕೊಡಬೇಕು.

೨೯. ವಿಧಿಯನ್ನುಲ್ಲಂಘಿಸಿ ಅಪಾತ್ರನಲ್ಲಿ ದಾನಮಾಡಿದರೆ ಆ ವಸ್ತುವು ಮಾತ್ರ ಹಾಳಾಗುವುದಲ್ಲದೆ ಅವನ ಉಳಿದ ವಸ್ತುಗಳೂ ನಾಶವಾಗುವುವು.

೩೦. ದುಃಖ, ಕುಟುಂಬ, ಸಾಲ ಇವುಗಳಿಗಾಗಿ ಕೊಟ್ಟಿರುವುದು ಇಹಪರಗಳಲ್ಲಿ ಅಕ್ಷಯವಾಗುವುವು.

೩೧. ತಂದೆತಾಯಿಗಳಿಲ್ಲದವನಿಗೆ ಉಪನಯನ, ವಿವಾಹ ಮೊದಲಾದುವುಗಳನ್ನು ತನ್ನ ದ್ರವ್ಯಗಳಿಂದ ಮಾಡಿದವನಿಗೆ ಅನಂತ ಶ್ರೇಯಸ್ಸುಂಟಾಗುವುದು.

೩೨. ಒಬ್ಬ ಬ್ರಾಹ್ಮಣನಿಗೆ ಜೀವನವನ್ನು ಕಲ್ಪಿಸಿಕೊಟ್ಟರೆ ಉಂಟಾಗುವ ಶ್ರೇಯಸ್ಸು ಅಗ್ನಿಹೋತ್ರ, ಅಗ್ನಿಷ್ಟೋಮ ಮೊದಲಾದ ಯಜ್ಞಗಳಿಂದಲೂ ಉಂಟಾಗುವುದಿಲ್ಲ.

೩೩. ಅನಾಥಬ್ರಾಹ್ಮಣನಿಗೆ ವಿವಾಹಮಾಡಿಸಿದ ಪುಣ್ಯವಂತನು ಈ ಲೋಕದಲ್ಲಿ ಸುಖಗೊಂಡು ತರುವಾಯ ಶಾಶ್ವತಸ್ವರ್ಗವನ್ನು ಪಡೆಯುವನು.

ಪಿತೃಗೇಹೇ ತು ಯಾ ಕನ್ಯಾ ರಜಃಪಶ್ಯೇದಸಂಸ್ಕೃತಾ ।
ಭ್ರೂಣಹಾ ತತ್ಪಿತಾ ಜ್ಞೇಯೋ ವೃಷಲೀ ಸಾಽಪಿ ಕನ್ಯಕಾ ॥ ೩೪ ॥
ಯಸ್ತಾಂ ಪರಿಣಯೇನ್ಮೋಹಾತ್ಸಭವೇದ್ವೃಷಲೀಪತಿಃ ।
ತೇನ ಸಂಭಾಷಣಂ ತ್ಯಾಜ್ಯಮಪಾಂಕ್ತೇಯೇನ ಸರ್ವದಾ ॥ ೩೫ ॥
ವಿಜ್ಞಾಯ ದೋಷಮುಭಯೋಃ ಕನ್ಯಾಯಾಶ್ಚ ವರಸ್ಯಚ ।
ಸಂಬಂಧಂ ರಚಯೇತ್ಪಶ್ಚಾದನ್ಯಥಾ ದೋಷಭಾಕ್ಪಿತಾ ॥ ೩೬ ॥
ಸ್ತ್ರಿಯಃ ಪವಿತ್ರಾಃ ಸತತಂ ನೈತಾ ದುಷ್ಯಂತಿ ಕೇನಚಿತ್ ।
ಮಾಸಿ ಮಾಸಿ ರಜಸ್ತಾಸಾಂ ದುಷ್ಕೃತಾನ್ಯಪಕರ್ಷತಿ ॥ ೩೭ ॥
ಪೂರ್ವಂ ಸ್ತ್ರಿಯಃ ಸುರೈರ್ಭುಕ್ತಾಃ ಸೋಮಗಂಧರ್ವವಹ್ನಿಭಿಃ ।
ಭುಂಜತೇ ಮಾನುಷಾಃ ಪಶ್ಚಾನ್ನೈತಾ ದುಷ್ಯಂತಿ ಕೇನಚಿತ್ ॥ ೩೮ ॥
ಸ್ತ್ರೀಣಾಂ ಶೌಚಂ ದದೌ ಸೋಮಃ ಪಾವಕಃ ಸರ್ವಮೇಧ್ಯತಾಂ ।
ಕಲ್ಯಾಣವಾಣೀಂ ಗಂಧರ್ವಾಸ್ತೇನ ಮೇಧ್ಯಾಃ ಸದಾ ಸ್ತ್ರಿಯಃ ॥ ೩೯ ॥
ಕನ್ಯಾಂ ಭುಂಕ್ತೇ ರಜಃಕಾಲೇಽಗ್ನಿಃ ಶಶೀ ಲೋಮ ದರ್ಶನೇ ।
ಸ್ತನೋದ್ಭೇದೇಷು ಗಂಧರ್ವಾಸ್ತತ್ಪ್ರಾಗೇವ ಪ್ರದೀಯತೇ ॥ ೪೦ ॥

---

೩೪. ವಿವಾಹವಾಗದ ಕನ್ಯೆಯು ತಂದೆಯ ಮನೆಯಲ್ಲಿ ರಜಸ್ವಲೆಯಾದರೆ ಅವಳ ತಂದೆಯು ಭ್ರೂಣಹತ್ಯೆಮಾಡಿದವನಾಗುವನು. ಆ ಕನ್ಯೆಯು ಶೂದ್ರಳಾಗುವಳು.

೩೫. ಆಕೆಯನ್ನು ಮೋಹದಿಂದ ವಿವಾಹಮಾಡಿಕೊಂಡವನು ವೃಷಲೀಪತಿಯಾಗುವನು. ಪಂಕ್ತಿಬಾಹ್ಯನಾದ ಅವನೊಡನೆ ಮಾತನಾಡಬಾರದು.

೩೬. ತಂದೆಯು ಕನ್ಯಾವರರಿಬ್ಬರ ದೋಷಗಳನ್ನರಿತು ಸಂಬಂಧಮಾಡಬೇಕು. ಹಾಗೆ ಮಾಡದಿದ್ದರೆ ದುಷ್ಟನಾಗುವನು.

೩೭. ಹೆಂಗಸರು ಯಾವಾಗಲೂ ಪವಿತ್ರರು. ಅವರು ಯಾವುದರಿಂದಲೂ ಕೆಡುವುದಿಲ್ಲ. ಪ್ರತಿ ತಿಂಗಳೂ ಅವರು ರಜಸ್ವಲೆಯರಾಗುವುದರಿಂದ ಅವರ ಪಾಪವು ಪರಿಹಾರವಾಗುವುದು.

೩೮. ಸ್ತ್ರೀಯರನ್ನು ಮೊದಲು ಚಂದ್ರ, ಗಂಧರ್ವ, ಅಗ್ನಿ ಇವರು ಭೋಗಿಸುವರು. ಅನಂತರ ಮನುಷ್ಯರು ಭೋಗಿಸುವರು. ಅವರು ಯಾರಿಂದಲೂ ಕೆಡುವುದಿಲ್ಲ.

೩೯. ಹೆಂಗಸರಿಗೆ ಸೋಮನು ಶುದ್ಧಿಯನ್ನೂ, ಅಗ್ನಿಯು ಸಕಲ ಪಾವಿತ್ರ್ಯವನ್ನೂ, ಗಂಧರ್ವರು ಶುಭವಾಣಿಯನ್ನೂ ಕೊಡುವರು. ಆದುದರಿಂದ ಅವರು ಯಾವಾಗಲೂ ಶುದ್ಧರು.

೪೦. ಕನ್ಯೆಯನ್ನು ಅಗ್ನಿಯು ರಜೋದರ್ಶನವಾಗುವಾಗಲೂ, ಚಂದ್ರನು

ದೃಶ್ಯರೋಮಾತ್ಪಪತ್ಯಘ್ನೀ ಕುಲಘ್ನ್ಯುದ್ಗತಯೌವನಾ ।
ಪಿತೃಘ್ನ್ಯೃವಿಷ್ಪತರಜಾಸ್ತತಸ್ತಾಃ ಪರಿವರ್ಜಯೇತ್ ॥ ೪೧ ॥
ಕನ್ಯಾದಾನ ಫಲಪ್ರೇಪ್ಸುಸ್ತಸ್ಮಾದ್ದದ್ಯಾದನಗ್ನಿಕಾಂ ।
ಅನ್ಯಥಾ ನ ಫಲಂ ದಾತುಃ ಪ್ರತಿಗ್ರಾಹೇ ಪತೇದಧಃ ॥ ೪೨ ॥
ಕನ್ಯಾಮಭುಕ್ತಾಂ ಸೋಮಾದ್ಯೈರ್ದದದ್ದಾನಫಲಂ ಲಭೇತ್ ।
ದೇವಭುಕ್ತಾಂ ದದದ್ದಾತಾ ನ ಸ್ವರ್ಗಮಧಿಗಚ್ಛತಿ ॥ ೪೩ ॥
ಶಯನಾಽಽಸನಯಾನಾನಿ ಕುಣಪಂ ಸ್ತ್ರೀಮುಖಂ ಕುಶಾಃ ।
ಯಜ್ಞಪಾತ್ರಾಣಿ ಸರ್ವಾಣಿ ನ ದುಷ್ಯಂತಿ ಬುಧಾಃ ಕ್ವಚಿತ್ ॥ ೪೪ ॥
ವತ್ಸಃ ಪ್ರಸ್ರವಣೇ ಮೇಧ್ಯಃ ಶಕುನಿಃ ಫಲಪಾತನೇ ।
ನಾರ್ಯೋ ರತಿಪ್ರಯೋಗೇಷು ಶ್ವಾ ಮೃಗಗ್ರಹಣೇ ಶುಚಿಃ ॥ ೪೫ ॥
ಅಜಾಽಶ್ವಯೋರ್ಮುಖಂ ಮೇಧ್ಯಂ ಗಾವೋ ಮೇಧ್ಯಾಸ್ತು ಪೃಷ್ಠತಃ ।
ಪಾದತೋ ಬ್ರಾಹ್ಮಣಾ ಮೇಧ್ಯಾಃ ಸ್ತ್ರಿಯೋ ಮೇಧ್ಯಾಸ್ತು ಸರ್ವತಃ ॥

---

ರೋಮದರ್ಶನದಲ್ಲಿಯೂ, ಗಂಧರ್ವರು ಸ್ತನವು ಮೂಡುವಾಗಲೂ ಭೋಗಿಸುವರು. ಆದುದರಿಂದ ಅವಳನ್ನು ಮೊದಲೇ ವಿವಾಹಮಾಡಿಕೊಡಬೇಕು.

೪೧. ಕಾಣುತ್ತಿರುವ ಕೂದಲುಳ್ಳವಳು ಮಕ್ಕಳನ್ನೂ, ಯುವತಿಯು ಕುಲವನ್ನೂ, ರಜಸ್ವಲೆಯಾದವಳು ತಂದೆಯನ್ನೂ ಕೊಲ್ಲುವಳು. ಆದುದರಿಂದ ಅಂತಹ ಸ್ತ್ರೀಯರನ್ನು ತ್ಯಜಿಸಬೇಕು.

೪೨. ಕನ್ಯಾದಾನದ ಫಲವನ್ನು ಬಯಸುವವನು ಅಗ್ನ್ಯಾದಿಗಳಿಂದ ಭೋಗಿಸಲ್ಪಡದ ಕನ್ಯೆಯನ್ನು ದಾನಮಾಡಬೇಕು. ಹಾಗೆ ಮಾಡದಿದ್ದಲ್ಲಿ ದಾನ ಮಾಡುವವನಿಗೆ ಫಲವಿಲ್ಲ. ಮದುವೆ ಮಾಡಿಕೊಂಡವನೂ ಪತಿತನಾಗುವನು.

೪೩. ಸೋಮಾದಿಗಳಿಂದ ಅಭುಕ್ತಳಾದ ಕನ್ಯೆಯನ್ನು ದಾನಮಾಡಿದವನು ದಾನದ ಫಲವನ್ನು ಪಡೆಯುವನು. ದೇವತೆಗಳಿಂದ ಅನುಭುಕ್ತಳಾದವಳನ್ನು ದಾನಮಾಡುವವನು ಸ್ವರ್ಗವನ್ನು ಹೊಂದುವುದಿಲ್ಲ.

೪೪. ಪ್ರಾಜ್ಞರು ಹಾಸಿಗೆ, ಪೀಠ, ವಾಹನ, ಕಂಬಳಿ, ಸ್ತ್ರೀಮುಖ, ದರ್ಭೆ, ಸಮಸ್ತ ಯಜ್ಞಪಾತ್ರೆಗಳು ಇವುಗಳಲ್ಲಿ ದೋಷವನ್ನೆಣಿಸುವುದಿಲ್ಲ.

೪೫. ಕರುವು ಹಾಲನ್ನು ಕರೆಯುವಾಗಲೂ, ಪಕ್ಷಿಯು ಹಣ್ಣನ್ನು ಬೀಳಿಸುವಾಗಲೂ, ಸ್ತ್ರೀಯರು ಸಂಭೋಗಕಾಲದಲ್ಲಿಯೂ, ನಾಯಿಯು ಮೃಗವನ್ನು ಹಿಡಿಯುವಾಗಲೂ ಶುದ್ಧವಾದುದು.

೪೬. ಆಡು ಮತ್ತು ಕುದುರೆಗಳು ಬಾಯಿಯಿಂದಲೂ, ಗೋವುಗಳು ಹಿಂಭಾಗದಲ್ಲಿಯೂ, ಬ್ರಾಹ್ಮಣರು ಪಾದದಲ್ಲಿಯೂ, ಸ್ತ್ರೀಯರು ಎಲ್ಲೆಡೆಯಲ್ಲಿಯೂ ಶುದ್ಧರು.

**ಬಲಾತ್ಕಾರೋಪಭುಕ್ತಾ ವಾ ಚೋರಹಸ್ತಗತಾಽಪಿ ವಾ ।**
**ನ ತ್ಯಾಜ್ಯಾ ದಯಿತಾ ನಾರೀ ನಾಽಸ್ಯಾಸ್ತ್ಯಾಗೋ ವಿಧೀಯತೇ ॥ ೪೭ ॥**
**ಆಮ್ಲೇನ ತಾಮ್ರಶುದ್ಧಿಃ ಸ್ಯಾಚ್ಛುದ್ಧಿಃ ಕಾಂಸ್ಯಸ್ಯ ಭಸ್ಮನಾ ।**
**ಸಂಶುದ್ಧೀ ರಜಸಾ ನಾರ್ಯಾಸ್ತಟಿನ್ಯಾ ವೇಗತಃ ಶುಚಿಃ ॥ ೪೮ ॥**
**ಮನಸಾಽಪಿ ಹಿ ಯಾ ನೇಹ ಚಿಂತಯೇತ್ಪುರುಷಾಂತರಂ ।**
**ಸೋಮಯಾ ಸಹ ಸೌಖ್ಯಾನಿ ಭುಂಕ್ತೇ ಚಾಽತ್ರಾಪಿ ಕೀರ್ತಿಭಾಕ್ ॥ ೪೯ ॥**
**ಪಿತಾ ಪಿತಾಮಹೋ ಭ್ರಾತಾ ಸಕುಲ್ಯೋ ಜನನೀ ತಥಾ ।**
**ಕನ್ಯಾಪ್ರದಃ ಪೂರ್ವನಾಶೇ ಪ್ರಕೃತಿಸ್ಥಃ ಪರಃಪರಃ ॥ ೫೦ ॥**
**ಅಪ್ರಯಚ್ಛನ್ಸಮಾಪ್ನೋತಿ ಭ್ರೂಣಹತ್ಯಾ ಮೃತಾವೃತೌ ।**
**ಸ್ವಯಂ ತ್ವಭಾವೇ ದಾತೄಣಾಂ ಕನ್ಯಾ ಕುರ್ಯಾತ್ಸ್ವಯಂವರಂ ॥ ೫೧ ॥**
**ಹೃತಾಽಧಿಕಾರಾಂ ಮಲಿನಾಂ ಪಿಂಡಮಾತ್ರೋಪಜೀವಿನೀಂ ।**
**ಪರಿಭೂತಾಮಧಃಶಯ್ಯಾಂ ವಾಸಯೇದ್ವ್ಯಭಿಚಾರಿಣೀಂ ॥ ೫೨ ॥**
**ವ್ಯಭಿಚಾರಾದೃತೌ ಶುದ್ಧಿರ್ಗರ್ಭೇ ತ್ಯಾಗೋ ವಿಧೀಯತೇ ।**
**ಗರ್ಭಭರ್ತೃವಧಾದೌತು ಮಹತ್ಸ್ವಪಿ ಚ ಕಲ್ಮಷೇ ॥ ೫೩ ॥**

---

೪೭. ಬಲಾತ್ಕಾರದಿಂದ ಪರಪುರುಷನಿಂದ ಉಪಭುಕ್ತಳು ಅಥವಾ ಕಳ್ಳನ ಕೈಯನ್ನು ಸೇರಿದವಳು ಆದ ಪತ್ನಿಯನ್ನು ತ್ಯಜಿಸಬಾರದು.

೪೮. ತಾಮ್ರವು ಹುಳಿಯಿಂದಲೂ, ಕಂಚು ಬೂದಿಯಿಂದಲೂ, ಹೆಂಗಸು ರಜಸ್ಸಿನಿಂದಲೂ, ನದಿಯು ವೇಗದಿಂದಲೂ ಶುದ್ಧವಾಗುವುದು.

೪೯. ಮನಸ್ಸಿನಿಂದಲೂ ಪರಪುರುಷನನ್ನು ಚಿಂತಿಸದ ನಾರಿಯು, ಶಿವನೊಡನೆ ಪಾರ್ವತಿಯೆಂತೊ ಅಂತು ಸೌಖ್ಯವನ್ನನುಭವಿಸುವಳು; ಈ ಲೋಕದಲ್ಲಿಯೂ ಕೀರ್ತಿಮತಿಯಾಗುವಳು.

೫೦. ತಂದೆ, ಅಜ್ಜ, ಸಹೋದರ, ಸಮಾನವಂಶದವ, ತಾಯಿ ಇವರು ಕನ್ಯೆಯನ್ನು ದಾನಮಾಡಲು ಅಧಿಕಾರಿಗಳು. ಹಿಂದಿನವರಿಲ್ಲದಿದ್ದರೆ ಮುಂದಿನವರು ಅಧಿಕಾರಿಗಳಾಗುವರು.

೫೧–೫೨. ಕನ್ಯೆಯನ್ನು ಸರಿಯಾದ ವಯಸ್ಸಿನಲ್ಲಿ ದಾನಮಾಡದವನು ಪ್ರತಿಯೊಂದು ಋತುಕಾಲದಲ್ಲಿಯೂ ಭ್ರೂಣಹತ್ಯಾದೋಷವನ್ನು ಹೊಂದುವನು. ದಾನಮಾಡುವವರಿಲ್ಲದಿದ್ದರೆ ಕನ್ಯೆಯು ತಾನೇ ಸ್ವಯಂವರವನ್ನು ಮಾಡಿಕೊಳ್ಳಬೇಕು. ಅಧಿಕಾರವಿಲ್ಲದವಳೂ, ಮಲಿನಳೂ, ಪಿಂಡಮಾತ್ರದಿಂದ ಜೀವಿಸುವವಳೂ, ತಿರಸ್ಕೃತಳೂ, ವ್ಯಭಿಚಾರಿಣಿಯೂ ಆದವಳನ್ನು ನೆಲದಲ್ಲಿ ಮಲಗಿಸಬೇಕು.

೫೩. ಹೆಂಗಸು ವ್ಯಭಿಚಾರಮಾಡುವುದರಿಂದುಂಟಾದ ಪಾಪವು ರಜಸ್ವಲೆ

ಶೂದ್ರಸ್ಯಭಾರ್ಯಾ ಶೂದ್ರೈವ ಸಾ ಚ ಸ್ವಾ ಚ ವಿಶಃ ಸ್ಮೃತೇ ।
ತೇಚ ಸ್ವಾಚೈವ ರಾಜ್ಞಸ್ತು ತಾಶ್ಚ ಸ್ವಾಚಾಗ್ರಜನ್ಮನಃ ॥ ೫೪ ॥
ಆರೋಪ್ಯ ಶೂದ್ರಾಂ ಶಯನೇ ವಿಪ್ರೋ ಗಚ್ಛೇದಧೋಗತಿಂ ।
ಉತ್ಪಾದ್ಯ ಪುತ್ರಂ ಶೂದ್ರಾಯಾಂ ಬ್ರಾಹ್ಮಣ್ಯಾದೇವ ಹೀಯತೇ ॥ ೫೫ ॥
ದೈವಪಿತ್ರ್ಯಾತಿಥೇಯಾನಿ ತತ್ಪ್ರಧಾನಾನಿ ಯಸ್ಯ ತು ।
ದೇವಾದ್ಯಾಸ್ತನ್ನಚಾಽಶ್ನಂತಿ ಸ ಚ ಸ್ವರ್ಗಂ ನ ಗಚ್ಛತಿ ॥ ೫೬ ॥
ಜಾಮಯೋ ಯಾನಿ ಗೇಹಾನಿ ಶಪಂತ್ಯಪ್ರತಿಪೂಜಿತಾಃ ।
ಕೃತ್ಯಾಭಿರ್ನಿಹತಾನೀವ ನಶ್ಯೇಯುಸ್ತಾನ್ಯಸಂಶಯಂ ॥ ೫೭ ॥
ತದಭ್ಯರ್ಚ್ಯಾಃ ಸುವಾಸಿನ್ಯೋ ಭೂಷಣಾಚ್ಛಾದನಾಽಶನೈಃ ।
ಭೂತಿಕಾಮೈರ್ನರೈರ್ನಿತ್ಯಂ ಸತ್ಕಾರೇಷೂತ್ಸವೇಷು ಚ ॥ ೫೮ ॥
ಯತ್ರ ನಾರ್ಯಃ ಪ್ರಮುದಿತಾ ಭೂಷಣಾಚ್ಛಾದನಾಽಶನೈಃ ।
ರಮಂತೇ ದೇವತಾಸ್ತತ್ರ ಸ್ಯುಸ್ತತ್ರ ಸಫಲಾಃ ಕ್ರಿಯಾಃ ॥ ೫೯ ॥

---

ಯಾಗುವುದರಿಂದ ಪರಿಹಾರವಾಗುವುದು. ಪರಪುರುಷನಿಂದ ಗರ್ಭಿಣಿಯಾದಾಗಲೂ, ಗರ್ಭ, ಪತಿಗಳ ವಧೆ ಮಾಡಿದಾಗಲೂ, ಮಹಾಪಾಪದಲ್ಲಿಯೂ ಸ್ತ್ರೀಯನ್ನು ತ್ಯಜಿಸಬೇಕು.

೫೪. ಶೂದ್ರನಿಗೆ ತನ್ನ ಜಾತಿಯವಳೂ, ವೈಶ್ಯನಿಗೆ ಶೂದ್ರ ಮತ್ತು ತನ್ನ ಜಾತಿಯ ಕನ್ಯೆಯೂ, ಕ್ಷತ್ರಿಯನಿಗೆ ವೈಶ್ಯ, ಶೂದ್ರ ಮತ್ತು ತನ್ನ ಜಾತಿಯ ಕನ್ಯೆಯೂ, ಬ್ರಾಹ್ಮಣನಿಗೆ ಕ್ಷತ್ರಿಯ, ವೈಶ್ಯ, ಶೂದ್ರ ಮತ್ತು ತನ್ನ ಜಾತಿಯ ಕನ್ಯೆಯೂ ವಿವಾಹಾರ್ಹಳು.

೫೫–೫೬. ಬ್ರಾಹ್ಮಣನು ಶೂದ್ರಸ್ತ್ರೀಯ ಸಂಗದಿಂದ ಅಧೋಗತಿಯನ್ನು ಹೊಂದುವನು. ಅವಳಲ್ಲಿ ಪುತ್ರೋತ್ಪಾದನೆಯಿಂದ ಬ್ರಾಹ್ಮಣ್ಯವನ್ನು ಕಳೆದು ಕೊಳ್ಳುವನು. ಆ ಶೂದ್ರಸ್ತ್ರೀಯೊಡನೆ ಮಾಡಿದ ದೇವ, ಪಿತೃಗಳ ಆತಿಥ್ಯವನ್ನು ಅವರು ಸ್ವೀಕರಿಸುವುದಿಲ್ಲ. ಆ ಬ್ರಾಹ್ಮಣನು ಸ್ವರ್ಗವನ್ನು ಸೇರುವುದಿಲ್ಲ.

೫೭. ಪೂಜಿತರಾಗದ ಜ್ಞಾತಿಗಳು ಶಪಿಸುವ ಮನೆಗಳು ಮಾಟದಿಂದ ಹಾಳಾಗುವಂತೆ ನಿಶ್ಚಯವಾಗಿಯೂ ನಾಶವಾಗುವುವು.

೫೮. ಆದ್ದರಿಂದ ಅಭಿವೃದ್ಧಿಯನ್ನು ಬಯಸುವ ಮಾನವರು ಯಾವಾಗಲೂ ಸತ್ಕಾರ, ಉತ್ಸವಗಳಲ್ಲಿ ಸುಮಂಗಲಿಯರನ್ನು ಒಡವೆ, ವಸ್ತ್ರ, ಭೋಜನಗಳಿಂದ ಪೂಜಿಸಬೇಕು.

೫೯. ಯಾವ ಮನೆಯಲ್ಲಿ ಹೆಂಗಸರು ಒಡವೆ, ವಸ್ತ್ರ, ಭೋಜನಗಳಿಂದ ಸಂತುಷ್ಟರಾಗುವರೊ, ಅಲ್ಲಿ ದೇವತೆಗಳು ವಿನೋದಪಡುವರು. ಕ್ರಿಯೆಗಳು ಸಫಲವಾಗುವುವು.

ಯತ್ರ ತುಷ್ಯತಿ ಭರ್ತ್ರಾ ಸ್ತ್ರೀ ಸ್ತ್ರಿಯಾ ಭರ್ತಾ ಚ ತುಷ್ಯತಿ ।
ತತ್ರ ವೇಶ್ಮನಿ ಕಲ್ಯಾಣಂ ಸಂಪದ್ಯೇತ ಪದೇ ಪದೇ ॥ ೬೦ ॥
ಅಹುತಂ ಚ ಹುತಂ ಚೈವ ಪ್ರಹುತಂ ಪ್ರಾಶಿತಂ ತಥಾ ।
ಬ್ರಾಹ್ಮಂ ಹುತಂ ಪಂಚಮಂ ಚ ಪಂಚಯಜ್ಞಾ ಇಮೇ ಶುಭಾಃ ॥ ೬೧ ॥
ಜಪೋಽಹುತೋ ಹುತೋ ಹೋಮಃ ಪ್ರಹುತೋ ಭೌತಿಕೋ ಬಲಿಃ ।
ಪ್ರಾಶಿತಂ ಪಿತೃಸಂತೃಪ್ತಿರ್ಹುತಂ ಬ್ರಾಹ್ಮಂ ದ್ವಿಜಾರ್ಚನಂ ॥ ೬೨ ॥
ಪಂಚಯಜ್ಞಾನಿಮಾನ್ಕುರ್ವನ್ಬ್ರಾಹ್ಮಣೋ ನಾಽವಸೀದತಿ ।
ಏತೇಷಾಮನನುಷ್ಠಾನಾತ್ಪಂಚಸೂನಾ ಅವಾಪ್ನುಯಾತ್ ॥ ೬೩ ॥
ಬ್ರಾಹ್ಮಣಂ ಕುಶಲಂ ಪೃಚ್ಛೇದ್ಬಾಹುಜಾತಮನಾಮಯಂ ।
ವೈಶ್ಯಂ ಸುಖಂ ಸಮಾಗಮ್ಯ ಶೂದ್ರಂ ಸಂತೋಷಮೇವ ಚ ॥ ೬೪ ॥
ಜಾತಮಾತ್ರಃ ಶಿಶುಸ್ತಾವದ್ಯಾವದಷ್ಟೌ ಸಮಾಃ ಸ್ಮೃತಾಃ ।
ಭಕ್ಷ್ಯಾಭಕ್ಷ್ಯೇಷು ನೋ ದುಷ್ಯೇದ್ಯಾವನ್ನೈವೋಪನೀಯತೇ ॥ ೬೫ ॥
ಭರಣಂ ಪೋಷ್ಯವರ್ಗಸ್ಯ ದೃಷ್ಟಾಽದೃಷ್ಟಫಲೋದಯಂ ।
ಪ್ರತ್ಯವಾಯೋ ಹ್ಯಭರಣೇ ಭರ್ತವ್ಯಸ್ತತ್ಪ್ರಯತ್ನತಃ ॥ ೬೬ ॥

---

೬೦. ಯಾವ ಮನೆಯಲ್ಲಿ ಪತಿಯಿಂದ ಪತ್ನಿಯೂ, ಪತ್ನಿಯಿಂದ ಪತಿಯೂ ಸಂತೋಷಗೊಳ್ಳುವರೊ, ಆ ಮನೆಯಲ್ಲಿ ಮಂಗಳವುಂಟಾಗುವುದು.

೬೧–೬೨. ಅಹುತ, ಹುತ, ಪ್ರಹುತ, ಪ್ರಾಶಿತ, ಬ್ರಾಹ್ಮಹುತ ಈ ಐದೂ ಮಂಗಳಕರವಾದ ಪಂಚಯಜ್ಞಗಳು. ಜಪವು ಅಹುತವೆಂದೂ, ಹೋಮವು ಹುತವೆಂದೂ, ಭೂತಬಲಿಯು ಪ್ರಹುತವೆಂದೂ, ಪಿತೃತೃಪ್ತಿಯು ಪ್ರಾಶಿತವೆಂದೂ, ಬ್ರಾಹ್ಮಣಪೂಜೆಯು ಬ್ರಾಹ್ಮಹುತವೆಂದೂ ಹೇಳಿಸಿಕೊಳ್ಳುವುದು.

೬೩. ಈ ಪಂಚಯಜ್ಞಗಳನ್ನೆಸಗುವ ಬ್ರಾಹ್ಮಣನು ಕೆಡುವುದಿಲ್ಲ. ಇವುಗಳನ್ನು ಅನುಷ್ಠಾನ ಮಾಡದವನು ಪಂಚಸೂನಾದೋಷವನ್ನು ಹೊಂದುವನು.

೬೪. ಬ್ರಾಹ್ಮಣನನ್ನು ಕುಶಲವೆ, ಎಂದೂ, ಕ್ಷತ್ರಿಯನನ್ನು ಆರೋಗ್ಯವೆ, ಎಂದೂ, ವೈಶ್ಯನನ್ನು ಸೌಖ್ಯವೆ, ಎಂದೂ, ಶೂದ್ರನನ್ನು ಸಂತೋಷವೆ, ಎಂದೂ ಪ್ರಶ್ನಿಸಬೇಕು.

೬೫. ಹುಟ್ಟಿದ ಶಿಶುವನ್ನು ಎಂಟುವರ್ಷಗಳವರೆಗೆ ಶಿಶುವೆಂದೇ ಭಾವಿಸಬೇಕು. ಅವನು ಉಪನಯನವಾಗುವವರೆಗೆ ಭಕ್ಷ್ಯಾಭಕ್ಷ್ಯಗಳಿಂದ ದುಷ್ಟನಾಗುವುದಿಲ್ಲ.

೬೬. ಪೋಷ್ಯವರ್ಗದವರನ್ನು ಪೋಷಿಸುವುದರಿಂದ ದೃಷ್ಟಾದೃಷ್ಟಫಲವುಂಟಾಗುವುದು. ಅವರನ್ನು ಪೋಷಣೆಮಾಡದಿದ್ದರೆ ಪ್ರತ್ಯವಾಯುವುಂಟಾಗುವುದು. ಆದುದರಿಂದ ಅವರನ್ನು ಪ್ರಯತ್ನದಿಂದ ಪೋಷಿಸಬೇಕು.

ಮಾತಾ ಪಿತಾ ಗುರುಪತ್ನೀಸ್ತ್ವಪತ್ಯಾನಿ ಸಮಾಶ್ರಿತಾಃ ।
ಅಭ್ಯಾಗತೋಽತಿಥಿಶ್ಚಾಽಗ್ನಿಃ ಪೋಷ್ಯವರ್ಗಾ ಅಮೀ ನವ ॥ ೬೭ ॥
ಸ ಜೀವತಿ ಪುಮಾನ್ಯೋಽತ್ರ ಬಹುಭಿಶ್ಚೋಪಜೀವ್ಯತೇ ।
ಜೀವನ್ಮೃತೋಽಥ ವಿಜ್ಞೇಯಃ ಪುರುಷಃ ಸ್ವೋದರಂಭರಿಃ ॥ ೬೮ ॥
ದೀನಾಽನಾಥವಿಶಿಷ್ಟೇಭ್ಯೋ ದಾತವ್ಯಂ ಭೂತಿಕಾಮ್ಯಯಾ ।
ಅದತ್ತದಾನಾ ಜಾಯಂತೇ ಪರಭಾಗ್ಯೋಪಜೀವಿನಃ ॥ ೬೯ ॥
ವಿಭಾಗಶೀಲಸಂಯುಕ್ತೋ ದಯಾವಾಂಶ್ಚ ಕ್ಷಮಾಯುತಃ ।
ದೇವತಾಽತಿಥಿಭಕ್ತಸ್ತು ಗೃಹಸ್ಥೋ ಧಾರ್ಮಿಕಃ ಸ್ಮೃತಃ ॥ ೭೦ ॥
ಶರ್ವರೀ ಮಧ್ಯಯಾಮೌ ಯೌ ಹುತಶೇಷಂ ಚ ಯುದ್ಧವಿಃ ।
ತತ್ರ ಸ್ವಪಂಸ್ತದಶ್ನಂಶ್ಚ ಬ್ರಾಹ್ಮಣೋ ನಾಽವಸೀದತಿ ॥ ೭೧ ॥
ನವೈತಾನಿ ಗೃಹಸ್ಥಸ್ಯ ಕಾರ್ಯಾಣ್ಯಭ್ಯಾಗತೇ ಸದಾ ।
ಸುಧಾಮ್ಯಯಾನಿ ಯತ್ಸೌಮ್ಯಂ ವಾಕ್ಯಂ ಚಕ್ಷುರ್ಮನೋಮುಖಂ ॥ ೭೨ ॥
ಅಭ್ಯುತ್ಥಾನಮಿಹಾಯಾತ ಸಸ್ನೇಹಂ ಪೂರ್ವಭಾಷಣಂ ।
ಉಪಾಸನಮನುವ್ರಜ್ಯಾ ಗೃಹಸ್ಥೋನ್ನತಿಹೇತವೇ ॥ ೭೩ ॥

---

೬೭. ತಾಯಿ, ತಂದೆ, ಗುರು, ಪತ್ನಿ, ಮಕ್ಕಳು, ಆಶ್ರಯಿಸಿದವರು, ಅಭ್ಯಾಗತ, ಅತಿಥಿ, ಅಗ್ನಿ ಈ ಒಂಬತ್ತು ಪೋಷ್ಯವರ್ಗಗಳು.

೬೮. ಅನೇಕ ಜನರನ್ನು ಕಾಪಾಡುವವನು ಒಳ್ಳೆಯ ಜೀವನವುಳ್ಳವನು. ತನ್ನನ್ನು ಮಾತ್ರ ಪೋಷಿಸಿಕೊಳ್ಳುವವನು ಬದುಕಿದ್ದರೂ ಸತ್ತಂತೆಯೇ ಎಂದು ತಿಳಿಯಬೇಕು.

೬೯. ಅಭಿವೃದ್ಧಿಯನ್ನು ಬಯಸುವವನು ದೀನ, ಅನಾಥ, ವಿಶಿಷ್ಟರಿಗೆ ದಾನಮಾಡಬೇಕು. ದಾನ ಕೊಡದವರು ಪರರ ಭಾಗ್ಯದಿಂದ ಜೀವಿಸುವವರಾಗಿ ಹುಟ್ಟುವರು.

೭೦. ವಿಭಾಗಶೀಲನೂ, ದಯೆಯುಳ್ಳವನೂ, ಸಹನೆಯುಳ್ಳವನೂ, ದೇವತೆ, ಅತಿಥಿಗಳಲ್ಲಿ ಭಕ್ತಿಯುಳ್ಳವನೂ ಆದ ಗೃಹಸ್ಥನು ಧಾರ್ಮಿಕನೆನ್ನಿಸಿಕೊಳ್ಳುವನು.

೭೧. ರಾತ್ರಿಯ ಮಧ್ಯದಲ್ಲಿ ಎರಡು ಯಾಮಗಳಲ್ಲಿ ನಿದ್ರಿಸುವವನೂ, ಹೋಮಮಾಡಿ ಉಳಿದ ಹವಿಸ್ಸನ್ನು ತಿನ್ನುವವನೂ ಕೆಡುವುದಿಲ್ಲ.

೭೨–೭೩. ಮನೆಗೆ ಬಂದವರ ವಿಷಯದಲ್ಲಿ ಸೌಮ್ಯವಾದ ವಾಕ್ಯ, ಕಣ್ಣು, ಮನಸ್ಸು, ಮುಖ, ಮೇಲಕ್ಕೇಳುವುದು, ಇಲ್ಲಿ ಬನ್ನಿರಿ, ಎಂದು ಸ್ನೇಹದ ಮಾತನ್ನಾಡುವುದು, ಸೇವೆ, ಅನುಸರಣ ಇವುಗಳು ಗೃಹಸ್ಥನ ಏಳಿಗೆಗೆ ಕಾರಣವಾದ ಅಮೃತದಂತೆ ಶಾಶ್ವತವಾದ ಕರ್ತವ್ಯಗಳು.

ತಥೇಷದ್ವ್ಯಯಯುಕ್ತಾನಿ ಕಾರ್ಯಾಣ್ಯೇತಾನಿ ವೈ ನವ ।
ಆಸನಂ ಪಾದಶೌಚಂ ಚ ಯಥಾಶಕ್ತ್ಯಾಽಶನಂ ಕ್ಷಿತಿಃ ॥ ೨೪ ॥
ಶಯ್ಯಾ ತೃಣ ಜಲಾಽಭ್ಯಂಗದೀಪಾ ಗಾರ್ಹಸ್ಥ್ಯಸಿದ್ಧಿದಾಃ ।
ತಥಾ ನವ ವಿಕರ್ಮಾಣಿ ತ್ಯಾಜ್ಯಾನಿ ಗೃಹಮೇಧಿನಾಮ್ ॥ ೨೫ ॥
ಪೈಶುನ್ಯಂ ಪರದಾರಾಶ್ಚ ದ್ರೋಹಃ ಕ್ರೋಧಾನೃತಾಽಪ್ರಿಯಂ ।
ದ್ವೇಷೋ ದಂಭಶ್ಚ ಮಾಯಾಚ ಸ್ವರ್ಗಮಾರ್ಗಾರ್ಗಲಾನಿ ಹಿ ॥ ೨೬ ॥
ನವಾಽವಶ್ಯಕಕರ್ಮಾಣಿ ಕಾರ್ಯಾಣಿ ಪ್ರತಿವಾಸರಂ ।
ಸ್ನಾನಂ ಸಂಧ್ಯಾಜಪೋ ಹೋಮಃ ಸ್ವಾಧ್ಯಾಯೋ ದೇವತಾರ್ಚನಂ ॥
ವೈಶ್ವದೇವಂ ತಥಾಽಽತಿಥ್ಯಂ ನವಮಂ ಪಿತೃತರ್ಪಣಂ ।
ನವ ಗೋಪ್ಯಾನಿ ಯಾನ್ಯತ್ರ ಮುನೇ ತಾನಿ ನಿಶಾಮಯ ॥ ೨೮ ॥
ಜನ್ಮರ್ಕ್ಷಂ ಮೈಥುನಂ ಮಂತ್ರೋ ಗೃಹಚ್ಛಿದ್ರಂ ಚ ವಂಚನಂ ।
ಆಯುರ್ಧನಾಽಪಮಾನಂ ಸ್ತ್ರೀ ನ ಪ್ರಕಾಶ್ಯಾನಿ ಸರ್ವಥಾ ॥ ೨೯ ॥
ನವೈತಾನಿ ಪ್ರಕಾಶ್ಯಾನಿ ರಹಃ ಪಾಪಮಕುತ್ಸಿತಂ ।
ಪ್ರಾಯೋಗ್ಯಮೃಣಶುದ್ಧಿಶ್ಚ ಸಾಽನ್ವಯಃ ಕ್ರಯವಿಕ್ರಯೌ ।
ಕನ್ಯಾದಾನಂ ಗುಣೋತ್ಕರ್ಷೋ ನಾಽನ್ಯತ್ಕೇನಾಽಪಿ ಕುತ್ರಚಿತ್ ॥ ೩೦ ॥
ಪಾತ್ರಮಿತ್ರವಿನೀತೇಷು ದೀನಾಽನಾಥೋಪಕಾರಿಷು ।
ಮಾತಾ ಪಿತೃಗುರುಷ್ವೇತನ್ನವಕಂ ದತ್ತಮಕ್ಷಯಂ ॥ ೩೧ ॥

---

೨೪–೨೬. ಆಸನ, ಪಾದಪ್ರಕ್ಷಾಳನ, ಯಥಾಶಕ್ತಿಭೋಜನ, ಭೂಮಿ, ಹಾಸಿಗೆ, ಚಾಪೆ, ನೀರು, ಅಭ್ಯಂಗ, ದೀಪ ಈ ಒಂಬತ್ತೂ ಸ್ವಲ್ಪ ವ್ಯಯವುಳ್ಳ ಕಾರ್ಯಗಳು ಗಾರ್ಹಸ್ಥ್ಯಸಿದ್ಧಿಯನ್ನುಂಟುಮಾಡುವುವು. ಹಾಗೆಯೇ ಚಾಡಿ ಹೇಳುವುದು, ಪರಪತ್ನೀಗಮನ, ದ್ರೋಹ, ಕೋಪ, ಸುಳ್ಳು, ಅಹಿತ, ದ್ವೇಷ, ದಂಭ, ಕಪಟ ಈ ಒಂಬತ್ತೂ ಸ್ವರ್ಗಮಾರ್ಗಕ್ಕೆ ಅಗಳಿಯಂತಿರುವುವು. ಇವು ತ್ಯಾಜ್ಯಗಳು.

೨೭–೨೯. ಸ್ನಾನ, ಸಂಧ್ಯಾವಂದನೆ, ಜಪ, ಹೋಮ, ವೇದಾಧ್ಯಯನ, ದೇವಪೂಜೆ, ವೈಶ್ವದೇವ, ಆತಿಥ್ಯ, ಪಿತೃತರ್ಪಣ ಇವು ಒಂಬತ್ತನ್ನೂ ಗೃಹಸ್ಥನು ಪ್ರತಿದಿನವೂ ಅವಶ್ಯವಾಗಿ ಮಾಡಬೇಕು. ಮುನಿಯೇ! ಕೇಳು. ಜನ್ಮನಕ್ಷತ್ರ, ಮೈಥುನ, ಮಂತ್ರ, ಗೃಹಚ್ಛಿದ್ರ, ವಂಚನೆ, ಆಯುಸ್ಸು, ಧನ, ಸ್ತ್ರೀ ಈ ಒಂಬತ್ತನ್ನೂ ಅವಶ್ಯವಾಗಿ ರಹಸ್ಯವಾಗಿಡಬೇಕು.

೩೦. ರಹಸ್ಯವಾದ ಪಾಪ, ಒಳ್ಳೆಯ ಕಾರ್ಯ, ಪ್ರಯೋಗಸಂಬಂಧವಾದುದು, ಸಾಲದ ಪರಿಹಾರ, ವಂಶ, ಕ್ರಯ, ವಿಕ್ರಯ, ಕನ್ಯಾದಾನ, ಗುಣೋತ್ಕರ್ಷ ಈ ಒಂಬತ್ತೂ ಅಕ್ಷಯವಾಗುವುದು.

೩೧. ಸತ್ಪಾತ್ರ, ಸ್ನೇಹಿತ, ವಿಧೇಯ, ದೀನ, ಅನಾಥ, ಉಪಕಾರಿ, ತಾಯಿ, ತಂದೆ, ಗುರು ಈ ಒಂಬತ್ತು ಜನಗಳಲ್ಲಿ ಮಾಡಿದ ದಾನವು ಅಕ್ಷಯವಾಗುವುದು.

ನಿಷ್ಫಲಂ ನವಸೂತ್ಸೃಷ್ಟಂ ಚಾಟ ಚಾರಣ ತಸ್ಕರೇ ।
ಕುವೈದ್ಯೇ ಕಿತವೇ ಧೂರ್ತೇ ಶಠೇ ಮಲ್ಲೇ ಚ ಬಂದಿನಿ ॥ ೮೨ ॥
ಆಪತ್ಸ್ವಪಿ ನ ದೇಯಾನಿ ನವವಸ್ತೂನಿ ಸರ್ವಥಾ ।
ಅನ್ವಯೇ ಸತಿ ಸರ್ವಸ್ವಂ ದಾರಾಂಶ್ಚ ಶರಣಾಗತಾನ್ ॥ ೮೩ ॥
ನ್ಯಾಸಂ ಧೀಕುಲವೃತ್ತಿಂ ಚ ನಿಕ್ಷೇಪಂ ಸ್ತ್ರೀಧನಂ ಸುತಂ ।
ಯೋ ದದಾತಿ ಸ ಮೂಢಾತ್ಮಾ ಪ್ರಾಯಶ್ಚಿತ್ತೈರ್ವಿಶುಧ್ಯತಿ ॥ ೮೪ ॥
ಏತನ್ನವಾನಾಂ ನವಕಂ ಜ್ಞಾತ್ವಾ ಪ್ರಿಯಮವಾಪ್ನುಯಾತ್ ।
ಅನ್ಯಚ್ಚ ನವಕಂ ವಚ್ಮಿ ಸರ್ವೇಷಾಂ ಸ್ವರ್ಗಮಾರ್ಗದಂ ॥ ೮೫ ॥
ಸತ್ಯಂ ಶೌಚಮಹಿಂಸಾ ಚ ಕ್ಷಾಂತಿರ್ದಾನಂ ದಯಾ ದಮಃ ।
ಅಸ್ತೇಯಮಿಂದ್ರಿಯಾಕೋಚಃ ಸರ್ವೇಷಾಂ ಧರ್ಮಸಾಧನಂ ॥ ೮೬ ॥
ಅಭ್ಯಸ್ಯ ನವತಿಂ ಚೈತಾಂ ಸ್ವರ್ಗಮಾರ್ಗಪ್ರದೀಪಿಕಾಂ ।
ಸತಾಮಭಿಮತಾಂ ಪುಣ್ಯಾಂ ಗೃಹಸ್ಥೋ ನಾಽವಸೀದತಿ ॥ ೮೭ ॥
ಜಿಹ್ವಾ ಭಾರ್ಯಾ ಸುತೋ ಭ್ರಾತಾ ಮಿತ್ರದಾಸಸಮಾಶ್ರಿತಾಃ ।
ಯಸ್ಯೈತೇ ವಿನಯಾಢ್ಯಾಶ್ಚ ತಸ್ಯ ಸರ್ವತ್ರ ಗೌರವಂ ॥ ೮೮ ॥
ಪಾನಂ ದುರ್ಜನಸಂಸರ್ಗಃ ಪತ್ಯಾಚ ವಿರಹೋಽಟನಂ ।
ಸ್ವಪ್ನೋಽನ್ಯಗೃಹವಾಸಶ್ಚ ನಾರೀಣಾಂ ದೂಷಣಾನಿ ಷಟ್ ॥ ೮೯ ॥

---

೮೨. ವಾಚಾಲ, ಸ್ತುತಿಪಾಠಕ, ಕಳ್ಳ, ದುಷ್ಟವೈದ್ಯ, ಜೂಜುಗಾರ, ವಂಚಕ, ಶಠ, ಜಟ್ಟಿ, ಸಂದರ್ಭಾನುಸಾರ ಮಾತನಾಡುವವ ಈ ಒಂಬತ್ತು ಜನರಲ್ಲಿ ದಾನಮಾಡಿದುದು ನಿಷ್ಫಲವಾಗುವುದು.

೮೩–೮೫. ಸಂತತಿಯಿರಲು ತನ್ನ ಸರ್ವಸ್ವವನ್ನೂ ದಾನಮಾಡಬಾರದು. ಪತ್ನೀ, ಶರಣಾಗತರು, ನ್ಯಾಸ, ಬುದ್ಧಿ, ಕುಲವೃತ್ತಿ, ನಿಕ್ಷೇಪ, ಸ್ತ್ರೀಧನ, ಸುತ ಈ ಒಂಬತ್ತನ್ನು ಆಪತ್ತಿನಲ್ಲಿಯೂ ಕೊಡಕೂಡದು. ಹಾಗೆ ಕೊಟ್ಟ ಮೂಢನು ಪ್ರಾಯಶ್ಚಿತ್ತಗಳಿಂದ ಮಾತ್ರವೇ ಶುದ್ಧನಾಗುವನು.

೮೬. ಸತ್ಯ, ಶೌಚ, ಅಹಿಂಸೆ, ಸಹನೆ, ದಾನ, ದಯೆ, ಅಸ್ತೇಯ, ಇಂದ್ರಿಯನಿಗ್ರಹ ಇವುಗಳು ಎಲ್ಲರಿಗೂ ಧರ್ಮಸಾಧಕಗಳು.

೮೭. ಸ್ವರ್ಗಮಾರ್ಗಕ್ಕೆ ದೀಪದಂತಿರುವುದೂ, ಸಜ್ಜನರಿಗೆ ಇಷ್ಟವೂ, ಪುಣ್ಯಕರವೂ ಆದ ಈ ಒಂಬತ್ತನ್ನು ಅಭ್ಯಾಸಮಾಡಿದ ಗೃಹಸ್ಥನು ಕೆಡುವುದಿಲ್ಲ.

೮೮. ಯಾವನಿಗೆ ನಾಲಿಗೆ, ಪತ್ನೀ, ಸುತ, ಸಹೋದರ, ಸ್ನೇಹಿತ, ಸೇವಕ, ಆಶ್ರಯಿಸಿದವರು ಇವರೆಲ್ಲರೂ ವಿಧೇಯರೊ, ಅವನಿಗೆ ಎಲ್ಲೆಡೆಯಲ್ಲಿಯೂ ಗೌರವವುಂಟಾಗುವುದು.

೮೯. ಕುಡಿತ, ದುಷ್ಟರ ಸಹವಾಸ, ಪತಿವಿರಹ, ಅಲೆಯುವುದು, ನಿದ್ರೆ, ಅನ್ಯರ ಮನೆಯಲ್ಲಿ ವಾಸಿಸುವುದು ಈ ಆರೂ ಹೆಂಗಸರಿಗೆ ದೋಷವು.

ಸಮರ್ಘಂ ಧಾನ್ಯಮುದ್ಧೃತ್ಯ ಮಹರ್ಘಂ ಯಃ ಪ್ರಯಚ್ಛತಿ ।
ಸಹಿ ವಾರ್ಧುಷಿಕೋ ನಾಮ ತಸ್ಯಾಽನ್ನಂ ನೈವ ಭಕ್ಷಯೇತ್ ॥ ೯೦ ॥
ಅಗ್ರೇ ಮಾಹಿಷಿಕಂ ದೃಷ್ಟ್ವಾ ಮಧ್ಯೇ ಚ ವೃಷಲೀಪತಿಂ ।
ಅಂತೇ ವಾರ್ಧುಷಿಕಂ ಚೈವ ನಿರಾಶಾಃ ಪಿತರೋ ಗತಾಃ ॥ ೯೧ ॥
ಮಹಿಷೀತ್ಯುಚ್ಯತೇ ನಾರೀ ಯಾಚ ಸ್ಯಾದ್ವ್ಯಭಿಚಾರಿಣೀ ।
ತಾಂ ದುಷ್ಟಾಂ ಕಾಮಯೇದ್ಯಸ್ತು ಸ ವೈ ಮಾಹಿಷಿಕಃ ಸ್ಮೃತಃ ॥ ೯೨ ॥
ಸ್ವವೃಷಂ ಯಾ ಪರಿತ್ಯಜ್ಯ ಪರವೃಷೇ ವೃಷಾಯತೇ ।
ವೃಷಲೀ ಸಾ ಹಿ ವಿಜ್ಞೇಯಾ ನ ಶೂದ್ರೀ ವೃಷಲೀಭವೇತ್ ॥ ೯೩ ॥
ಯಾವದುಷ್ಣಂ ಭವತ್ಯನ್ನಂ ಯಾವನ್ಮೌನೇನ ಭುಜ್ಯತೇ ।
ತಾವದಶ್ನಂತಿ ಪಿತರೋ ಯಾವನ್ನೋಕ್ತಾ ಹವಿರ್ಗುಣಾಃ ॥ ೯೪ ॥
ವಿದ್ಯಾವಿನಯಸಂಪನ್ನೇ ಶ್ರೋತ್ರಿಯೇ ಗೃಹಮಾಗತೇ ।
ಕ್ರೀಡಂತ್ಯೌಷಧಯಃ ಸರ್ವಾ ಯಾಸ್ಯಾಮಃ ಪರಮಾಂ ಗತಿಂ ॥ ೯೫ ॥
ಭ್ರಷ್ಟಶೌಚವ್ರತಾಚಾರೇ ವಿಪ್ರೇ ವೇದವಿವರ್ಜಿತೇ ।
ರೋದಿತ್ಯನ್ನಂ ದೀಯಮಾನಂ ಕಿಂ ಮಯಾ ದುಷ್ಕೃತಂ ಕೃತಂ ॥ ೯೬ ॥

---

೯೦. ಅಲ್ಪಬೆಲೆಗೆ ತಂದ ಧಾನ್ಯವನ್ನು ಹೆಚ್ಚುಬೆಲೆಗೆ ಮಾರುವವನು ವಾರ್ಧುಷಿಕನು. ಅವನ ಅನ್ನವನ್ನು ತಿನ್ನಬಾರದು.

೯೧. ಶ್ರಾದ್ಧದಲ್ಲಿ ಮೊದಲು ಮಾಹಿಷಿಕನನ್ನೂ, ನಡುವೆ ವೃಷಲೀಪತಿಯನ್ನೂ, ಕೊನೆಯಲ್ಲಿ ವಾರ್ಧುಷಿಕನನ್ನೂ ನೋಡಿದಲ್ಲಿ ಪಿತೃಗಳು ನಿರಾಶರಾಗಿ ಹೊರಟುಹೋಗುವರು.

೯೨. ವ್ಯಭಿಚಾರಿಣಿಯಾದ ಹೆಂಗಸು ಮಹಿಷಿಯೆನ್ನಿಸಿಕೊಳ್ಳುವಳು. ದುಷ್ಟಳಾದ ಅವಳನ್ನು ಕಾಮಿಸುವವನು ಮಾಹಿಷಿಕನು.

೯೩. ತನ್ನ ಪತಿಯನ್ನು ಬಿಟ್ಟು ಪರಪತಿಯನ್ನು ಕಾಮಿಸುವವಳು ವೃಷಲಿಯು. ಶೂದ್ರಸ್ತ್ರೀಯು ವೃಷಲಿಯಲ್ಲ.

೯೪. ಅನ್ನವು ಬಿಸಿಯಾಗಿರುವವರೆಗೂ, ಮೌನದಿಂದ ಭುಂಜಿಸುವವರೆಗೂ, ಹವಿಸ್ಸಿನ ಗುಣಗಳನ್ನು ಹೇಳದಿರುವವರೆಗೂ ಪಿತೃಗಳು ಭುಂಜಿಸುವರು.

೯೫. ವಿದ್ಯಾವಿನಯಗಳಿಂದ ಕೂಡಿದ ಶ್ರೋತ್ರಿಯನು ಮನೆಗೆ ಬರಲು, ಸಮಸ್ತೌಷಧಿಗಳು ನಾವು ಉತ್ತಮಗತಿಯನ್ನು ಹೊಂದುವೆವು ಎಂದು ಕ್ರೀಡಿಸುವುವು.

೯೬. ಶೌಚ, ಆಚಾರ, ವ್ರತ, ವೇದಗಳು ಇವುಗಳಿಲ್ಲದ ಬ್ರಾಹ್ಮಣನಿಗೆ ಕೊಡುತ್ತಿರುವ ಅನ್ನವು, ನಾನೇನು ಪಾಪಮಾಡಿದೆನೋ ಎಂದು ಅಳುವುದು.

ಯಸ್ಯ ಕೋಷ್ಠಗತಂ ಚಾನ್ನಂ ವೇದಾಽಭ್ಯಾಸೇನ ಜೀರ್ಯತಿ ।
ಸತಾರಯತಿ ದಾತಾರಂ ದಶಪೂರ್ವಾನ್ದಶಾಽಪರಾನ್ ॥ ೯೭ ॥
ನ ಸ್ತ್ರೀಣಾಂ ವಪನಂ ಕಾರ್ಯಂ ನ ಚ ಗಾಃ ಸಮನುವ್ರಜೇತ್ ।
ನಚ ರಾತ್ರೌ ವಸೇದ್ಗೋಷ್ಠೇ ನ ಕುರ್ಯಾದ್ವೈದಿಕೀಂ ಶ್ರುತಿಂ ॥ ೯೮ ॥
ಸರ್ವಾನ್ಕೇಶಾನ್ಸಮುದ್ಧೃತ್ಯ ಛೇದಯೇದಂಗುಲದ್ವಯಂ ।
ಏವಮೇವ ತು ನಾರೀಣಾಂ ಶಿರಸೋ ಮುಂಡನಂ ಭವೇತ್ ॥ ೯೯ ॥
ರಾಜಾ ವಾ ರಾಜಪುತ್ರೋ ವಾ ಬ್ರಾಹ್ಮಣೋ ವಾ ಬಹುಶ್ರುತಃ ।
ಅಕಾರಯಿತ್ವಾ ವಪನಂ ಪ್ರಾಯಶ್ಚಿತ್ತಂ ವಿನಿರ್ದಿಶೇತ್ ॥ ೧೦೦ ॥
ಕೇಶಾನಾಂ ರಕ್ಷಣಾರ್ಥಾಯ ದ್ವಿಗುಣಂ ವ್ರತಮಾದಿಶೇತ್ ।
ದ್ವಿಗುಣಾ ದಕ್ಷಿಣಾ ದೇಯಾ ಬ್ರಾಹ್ಮಣೇ ವೇದಪಾರಗೇ ॥ ೧೦೧ ॥
ಯೋ ಗೃಹೀತ್ವಾ ವಿವಾಹಾಗ್ನಿಂ ಗೃಹಸ್ಥ ಇತಿ ಮನ್ಯತೇ ।
ಅನ್ನಂ ತಸ್ಯ ನ ಭೋಕ್ತವ್ಯಂ ವೃಥಾಪಾಕೋಹಿ ಸ ಸ್ಮೃತಃ ॥ ೧೦೨ ॥
ದಾರಾಗ್ನಿಹೋತ್ರದೀಕ್ಷಾಂಚ ಕುರುತೇ ಯೋಽಗ್ರಜೇ ಸ್ಥಿತೇ ।
ಪರಿವೇತ್ತಾ ಸ ವಿಜ್ಞೇಯಃ ಪರಿವಿತ್ತಿಸ್ತು ಪೂರ್ವಜಃ ॥ ೧೦೩ ॥

---

೯೭. ಯಾವನ ಉದರದಲ್ಲಿರುವ ಅನ್ನವು ವೇದಾಭ್ಯಾಸದಿಂದ ಜೀರ್ಣಿಸುವುದೊ, ಅವನು ದಾನಮಾಡುವವನನ್ನೂ, ಹಿಂದಿನ ಮತ್ತು ಮುಂದಿನ ಹತ್ತು ತಲೆಯವರನ್ನೂ ಪವಿತ್ರಗೊಳಿಸುವನು.

೯೮. ಸ್ತ್ರೀಯರಿಗೆ ವಪನಮಾಡಿಸಕೂಡದು; ಸ್ತ್ರೀಯರು ಗೋರಕ್ಷಣೆಯಿಂದ ಜೀವಿಸಕೂಡದು ; ರಾತ್ರಿಯಲ್ಲಿ ಹಸುವಿನ ಕೊಟ್ಟಿಗೆಯಲ್ಲಿ ವಾಸಿಸಬಾರದು ; ವೇದ ಶ್ರವಣ ಮಾಡಕೂಡದು.

೯೯. ಸ್ತ್ರೀಯರ ತಲೆಕೂದಲುಗಳನ್ನು ಮೇಲಕ್ಕೆತ್ತಿ ಎರಡು ಅಂಗುಲದಷ್ಟು ಬಿಟ್ಟು ಕತ್ತರಿಸಬೇಕು. ಇದೇ ಸ್ತ್ರೀಯರಿಗೆ ವಿಹಿತವಾದ ಮುಂಡನವು.

೧೦೦. ರಾಜನಾಗಲಿ, ರಾಜಪುತ್ರನಾಗಲಿ, ಬಹುವಿದ್ವಾಂಸನಾದ ಬ್ರಾಹ್ಮಣನಾಗಲಿ ವಪನಮಾಡಿಸದಿದ್ದರೆ ಪ್ರಾಯಶ್ಚಿತ್ತವುಳ್ಳವನಾಗುವನು.

೧೦೧. ಕೂದಲುಗಳ ರಕ್ಷಣೆಗಾಗಿ ಇಮ್ಮಡಿಯಾದ ವ್ರತವನ್ನಾಚರಿಸಬೇಕು. ವೇದಪಾರಂಗತನಾದ ಬ್ರಾಹ್ಮಣನಿಗೆ ಇಮ್ಮಡಿ ದಕ್ಷಿಣೆಯನ್ನೀಯಬೇಕು.

೧೦೨. ಯಾವನು ವಿವಾಹಾಗ್ನಿಯನ್ನು ರಕ್ಷಿಸದೆ ಗೃಹಸ್ಥನೆಂದು ತಿಳಿಯುವನೊ, ಅವನ ಅನ್ನವನ್ನು ಭುಂಜಿಸಬಾರದು. ಅವನ ಅಡುಗೆಯು ನಿಷ್ಫಲವು.

೧೦೩. ಅಣ್ಣನಿರುವಾಗ ಮದುವೆಮಾಡಿಕೊಂಡು ಅಗ್ನಿಹೋತ್ರದೀಕ್ಷೆಯನ್ನು ಸ್ವೀಕರಿಸುವವನು ಪರಿವೇತ್ತನೂ, ಅಣ್ಣನು ಪರಿವಿತ್ತಿಯೂ ಆಗುವನು.

**ಪರಿವಿತ್ತಿಃ ಪರಿವೇತ್ತಾ ಯಯಾಚ ಪರಿವಿದ್ಯತೇ ।**
**ಸರ್ವೇ ತೇ ನರಕಂ ಯಾಂತಿ ದಾತೃಯಾಜಕಪಂಚಮಾಃ ॥ ೧೦೪ ॥**
**ಕ್ಲೀಬೇ ದೇಶಾಂತರಸ್ಥೇಚ ಮೂಕೇ ಪ್ರವ್ರಜಿತೇ ಜಡೇ ।**
**ಕುಬ್ಜೇ ಖರ್ವೇ ಚ ಪತಿತೇ ನ ದೋಷಃ ಪರಿವೇದನೇ ॥ ೧೦೫ ॥**
**ವೇದಾಕ್ಷರಾಣಿ ಯಾವಂತಿ ನಿಯುಂಜ್ಯಾದರ್ಥಕಾರಣೇ ।**
**ತಾವತೀರ್ಬ್ರ್ಯ ಭ್ರೂಣಹತ್ಯಾ ವೇದವಿಕ್ರಯಕೃಲ್ಲಭೇತ್ ॥ ೧೦೬ ॥**
**ಯಸ್ತು ಪ್ರವ್ರಜಿತೋ ಭೂತ್ವಾ ಸೇವತೇ ಮೈಥುನಂ ಪುನಃ ।**
**ಷಷ್ಟಿರ್ವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕೃಮಿಃ ॥ ೧೦೭ ॥**
**ಶೂದ್ರಾನ್ನಂ ಶೂದ್ರಸಂಪರ್ಕಃ ಶೂದ್ರೇಣ ಚ ಸಹಾಽಽಸನಂ ।**
**ಶೂದ್ರಾದ್ವಿದ್ಯಾಗಮಃ ಕಶ್ಚಿಜ್ಜ್ವಲಂತಮಪಿ ಪಾತಯೇತ್ ॥ ೧೦೮ ॥**
**ಶೂದ್ರಾದಾಹೃತ್ಯ ನಿರ್ವಾಪಂ ಯೇ ಪಚಂತ್ಯಬುಧಾ ದ್ವಿಜಾಃ ।**
**ತೇ ಯಾಂತಿ ನರಕಂ ಘೋರಂ ಬ್ರಹ್ಮತೇಜೋವಿವರ್ಜಿತಾಃ ॥ ೧೦೯ ॥**
**ಮಾಕ್ಷಿಕಂ ಫಾಣಿತಂ ಶಾಕಂ ಗೋರಸಂ ಲವಣಂ ಘೃತಂ ।**
**ಹಸ್ತದತ್ತಾನಿ ಭುಕ್ತಾನಿ ದಿನಮೇಕಮಭೋಜನಂ ॥ ೧೧೦ ॥**

---

೧೦೪. ಪರಿವಿತ್ತಿ, ಪರಿವೇತ್ತಾ ಇವರನ್ನು ವಿವಾಹಮಾಡಿಕೊಂಡ ಕನ್ಯೆ, ಕನ್ಯಾದಾನ ಮಾಡುವವ, ವಿವಾಹಹೋಮ ಮಾಡಿದವ ಈ ಐದು ಜನರೂ ನರಕವನ್ನು ಹೊಂದುವರು.

೧೦೫. ಅಣ್ಣನು ನಪುಂಸಕ, ದೇಶಾಂತರವಾಸಿಯೂ, ಮೂಕನೂ, ಸನ್ಯಾಸಿಯೂ, ಮೂಢನೂ, ಗೂನುಬೆನ್ನಿನವನೂ, ಕುಳ್ಳನೂ, ಪತಿತನೂ ಆಗಿದ್ದರೆ ತಮ್ಮನು ವಿವಾಹಮಾಡಿಕೊಂಡರೂ ದೋಷವಿಲ್ಲ.

೧೦೬. ವೇದವಿಕ್ರಯ ಮಾಡಿದವನು ದ್ರವ್ಯವನ್ನು ಪಡೆಯುವುದಕ್ಕಾಗಿ ಎಷ್ಟು ವೇದಾಕ್ಷರಗಳನ್ನು ಉಪಯೋಗಿಸುವನೊ, ಅಷ್ಟು ಶಿಶುಹತ್ಯಾದೋಷವನ್ನು ಹೊಂದುವನು.

೧೦೭. ಸನ್ಯಾಸಿಯಾಗಿ ಮರಳಿ ಸ್ತ್ರೀಸಂಗ ಮಾಡುವವನು ಅರುವತ್ತು ಸಾವಿರವರ್ಷಕಾಲ ಅಮೇಧ್ಯದಲ್ಲಿ ಕೃಮಿಯಾಗಿ ಹುಟ್ಟುವನು.

೧೦೮. ಶೂದ್ರಾನ್ನ, ಶೂದ್ರಸಹವಾಸ, ಶೂದ್ರನೊಡನೆ ಕುಳಿತುಕೊಳ್ಳುವುದು, ಅವನಿಂದ ಯಾವುದಾದರೂ ವಿದ್ಯೆಯನ್ನು ಕಲಿಯುವುದು ಇದರಿಂದ ತೇಜಸ್ಸಿನಿಂದ ಜ್ವಲಿಸುತ್ತಿರುವ ಬ್ರಾಹ್ಮಣನೂ ಪತಿತನಾಗುವನು.

೧೦೯. ಶೂದ್ರನಿಂದ ಅನ್ನವನ್ನು ತಂದು ಚರು ಮೊದಲಾದುವುಗಳನ್ನು ಮಾಡುವ ಬ್ರಾಹ್ಮಣರು ಬ್ರಹ್ಮತೇಜಸ್ಸಿಲ್ಲದವರಾಗಿ ಘೋರನರಕಕ್ಕೆ ಹೋಗುವರು.

೧೧೦. ಕೈಯಿಂದ ಕೊಟ್ಟ ಜೇನುತುಪ್ಪ, ಸಿಹಿತಿಂಡಿ, ತರಕಾರಿ, ಹಾಲು

ಹಸ್ತದತ್ತಾಶ್ಚ ಯೇ ಸ್ನೇಹಾ ಲವಣಂ ವ್ಯಂಜನಾನಿಚ ।
ದಾತಾರಂ ನೋಪತಿಷ್ಠಂತೇ ಭೋಕ್ತಾ ಭುಂಕ್ತೇ ತು ಕಿಲ್ಬಿಷಂ ॥ ೧೧೧ ॥
ಆಯಸೇನೈವ ಪಾತ್ರೇಣ ಯದನ್ನಮುಪದೀಯತೇ ।
ಭೋಕ್ತಾ ತದ್ವಿಟ್ಸಮಂ ಭುಂಕ್ತೇ ದಾತಾ ಚ ನರಕಂ ವ್ರಜೇತ್ ॥ ೧೧೨ ॥
ಅಂಗುಲ್ಯಾ ದಂತಕಾಷ್ಠಂಚ ಪ್ರತ್ಯಕ್ಷಂ ಲವಣಂ ಚ ಯತ್ ।
ಮೃತ್ತಿಕಾಭಕ್ಷಣಂ ಯಚ್ಚ ಸಮಂ ಗೋಮಾಂಸಭಕ್ಷಣೈಃ ॥ ೧೧೩ ॥
ಪಾನೀಯಂ ಪಾಯಸಂ ಭೈಕ್ಷಂ ಘೃತಂ ಲವಣಮೇವಚ ।
ಹಸ್ತದತ್ತಂ ನಗೃಹ್ಣೀಯಾತ್ತುಲ್ಯಂ ಗೋಮಾಂಸಭಕ್ಷಣೈಃ ॥ ೧೧೪ ॥
ಅಗ್ರತೋ ನಿವಸೇನ್ಮೂರ್ಖೋ ದೂರತಶ್ಚ ಗುಣಾऽನ್ವಿತಃ ।
ಗುಣಾನ್ವಿತಾಯ ದಾತವ್ಯಂ ನಾऽಸ್ತೇ ಮೂರ್ಖೇ ವ್ಯತಿಕ್ರಮಃ ॥ ೧೧೫ ॥
ಬ್ರಾಹ್ಮಣಾऽತಿಕ್ರಮೋऽನಾಸ್ತೆ ವಿಪ್ರೇ ವೇದವಿವರ್ಜಿತೇ ।
ಜ್ವಲಂತಮಗ್ನಿಮುತ್ಸೃಜ್ಯ ನಹಿ ಭಸ್ಮನಿ ಹೂಯತೇ ॥ ೧೧೬ ॥
ಸನ್ನಿಕೃಷ್ಟಮಧೀಯಾನಂ ಬ್ರಾಹ್ಮಣಂ ಯೋ ವ್ಯತಿಕ್ರಮೇತ್ ।
ಭೋಜನೇ ಚೈವ ದಾನೇ ಚ ದಹೇದಾಸಪ್ತಮಂ ಕುಲಂ ॥ ೧೧೭ ॥

---

ಮೊದಲಾದುದು, ಉಪ್ಪು, ತುಪ್ಪ ಇವುಗಳನ್ನು ಭುಂಜಿಸಿದರೆ ಒಂದು ದಿನ ಉಪವಾಸ ಮಾಡಬೇಕು.

೧೧೧. ಕೈಯಿಂದ ಕೊಟ್ಟ ಎಣ್ಣೆ, ಉಪ್ಪು, ವ್ಯಂಜನಗಳು ದಾನಮಾಡುವವನನ್ನು ಸೇರುವುದಿಲ್ಲ. ಅವುಗಳನ್ನು ಭುಂಜಿಸುವವನು ಪಾಪಿಯಾಗುವನು.

೧೧೨. ಕಬ್ಬಿಣದ ಪಾತ್ರೆಯಲ್ಲಿ ಕೊಟ್ಟ ಅನ್ನವನ್ನು ತಿನ್ನುವವನು ಅಮೇಧ್ಯವನ್ನು ತಿನ್ನುವವನಂತಾಗುವನು. ದಾನಮಾಡುವವನೂ ನರಕಕ್ಕೆ ಹೋಗುವನು.

೧೧೩. ಬೆರಳಿನಿಂದ ಹಲ್ಲನ್ನು ಉಜ್ಜಿಕೊಳ್ಳುವುದು, ಉಪ್ಪು, ಮಣ್ಣು ಇವುಗಳನ್ನು ತಿನ್ನುವುದು, ಇವುಗಳು ಗೋಮಾಂಸಭಕ್ಷಣಕ್ಕೆ ಸಮವಾದುವು.

೧೧೪. ಕೈಯಿಂದ ಕೊಟ್ಟ ನೀರು, ಪಾಯಸ, ಭಿಕ್ಷೆ, ತುಪ್ಪ, ಉಪ್ಪು ಇವುಗಳನ್ನು ತಿಂದರೆ ಗೋಮಾಂಸಭಕ್ಷಣಕ್ಕೆ ಸಮಾನವಾಗುವುದು.

೧೧೫. ಮುಂದೆ ಮೂರ್ಖನೂ, ದೂರದಲ್ಲಿ ಗುಣಶಾಲಿಯೂ ಇರುವಾಗ ಗುಣಶಾಲಿಗೇ ದಾನಮಾಡಬೇಕು. ಆಗ ಮೂರ್ಖನಿಗೆ ಕೊಡದಿರುವುದರಿಂದ ದೋಷವುಂಟಾಗುವುದಿಲ್ಲ.

೧೧೬. ವೇದಾಧ್ಯಯನಮಾಡದ ಬ್ರಾಹ್ಮಣನನ್ನು ಮೀರಿದರೆ ದೋಷವಿಲ್ಲ. ಉರಿಯುವ ಬೆಂಕಿಯನ್ನು ಬಿಟ್ಟು ಬೂದಿಯಲ್ಲಿ ಹೋಮಮಾಡುವುದಿಲ್ಲವಷ್ಟೆ.

೧೧೭. ಭೋಜನ, ದಾನಗಳಲ್ಲಿ ಸಮೀಪದಲ್ಲಿರುವ ಶ್ರೋತ್ರಿಯ ಬ್ರಾಹ್ಮಣನನ್ನು ಮೀರಿದವನ ಏಳು ತಲೆಮೊರೆಯ ಬಂಧುಗಳು ಭಸ್ಮವಾಗುವರು.

ಗೋರಕ್ಷಕಾನ್ವಾಣಿಜಕಾಂಸ್ತಥಾ ಕಾರುಕುಶೀಲವಾನ್ ।
ಪ್ರೇಷ್ಯಾನ್ವಾರ್ಧುಷಿಕಾಂಶ್ಚೈವ ವಿಪ್ರಾಂಛೂದ್ರವದಾಚರೇತ್ ॥ ೧೧೮ ॥
ದೇವದ್ರವ್ಯವಿಭಾಗೇನ ಬ್ರಹ್ಮಸ್ವಹರಣೇನ ಚ ।
ಕುಲಾನ್ಯಾಶು ವಿನಶ್ಯಂತಿ ಬ್ರಾಹ್ಮಣಾತಿಕ್ರಮೇಣಚ ॥ ೧೧೯ ॥
ಮಾ ದೇಹೀತಿ ಚ ಯೋ ಬ್ರೂಯಾದ್ಗವಾಽಗ್ನಿಬ್ರಾಹ್ಮಣೇಷು ಚ ।
ತಿರ್ಯಗ್ಯೋನಿಶತಂ ಗತ್ವಾ ಚಾಂಡಾಲೇಷ್ವಭಿಜಾಯತೇ ॥ ೧೨೦ ॥
ವಾಚಾ ಯಚ್ಚ ಪ್ರತಿಜ್ಞಾತಂ ಕರ್ಮಣಾ ನೋಪಪಾದಿತಂ ।
ಋಣಂ ತದ್ಧರ್ಮಸಂಯುಕ್ತಮಿಹಲೋಕೇ ಪರತ್ರಚ ॥ ೧೨೧ ॥
ವಿಘಸಾಶೀ ಭವೇನ್ನಿತ್ಯಂ ನಿತ್ಯಂ ಚಾಽಮೃತಭೋಜನಃ ।
ಯಜ್ಞಶೇಷೋಽಮೃತಂ ಭುಕ್ತಶೇಷಂ ತು ವಿಘಸಂ ವಿದುಃ ॥ ೧೨೨ ॥
ಸವ್ಯಾದಂಸಾತ್ಪರಿಭ್ರಷ್ಟೇ ಸಾಭಿದೇಶೇ ವ್ಯವಸ್ಥಿತೇ ।
ವಸ್ತ್ರೇ ಸ ಏಕವಾಸಾಸ್ತಂ ದೈವೇ ಪಿತ್ರ್ಯೇ ಚ ವರ್ಜಯೇತ್ ॥ ೧೨೩ ॥
ಯದೇವ ತರ್ಪಯತ್ಯದ್ಭಿಃ ಪಿತೄನ್ಸ್ನಾತ್ವಾ ದ್ವಿಜೋತ್ತಮಃ ।
ತೇನೈವ ಸರ್ವಮಾಪ್ನೋತಿ ಪಿತೃಯಜ್ಞಕ್ರಿಯಾಫಲಂ ॥ ೧೨೪ ॥

---

೧೧೮. ಗೋವುಗಳನ್ನು ಕಾಪಾಡುವವರೂ, ವ್ಯಾಪಾರಗಾರರೂ, ಬಡಗಿ, ಸಂಗೀತಗಾರರೂ, ಸೇವಕರೂ, ವಾರ್ಧುಷಿಕರೂ ಆದ ಬ್ರಾಹ್ಮಣರಲ್ಲಿ ಶೂದ್ರರಂತೆ ನಡೆದುಕೊಳ್ಳಬೇಕು.

೧೧೯. ದೇವತೆಗಳ ದ್ರವ್ಯಗಳನ್ನು ವಿಭಾಗಿಸಿ ತೆಗೆದುಕೊಳ್ಳುವುದರಿಂದಲೂ, ಬ್ರಾಹ್ಮಣರ ಸ್ವತ್ತನ್ನು ಅಪಹರಿಸುವುದರಿಂದಲೂ, ಬ್ರಾಹ್ಮಣೋಲ್ಲಂಘನೆಯಿಂದಲೂ ಕುಲಗಳು ಶೀಘ್ರವಾಗಿ ನಾಶವಾಗುವುವು.

೧೨೦. ಗೋವು, ಅಗ್ನಿ, ಬ್ರಾಹ್ಮಣ ಇವರಿಗೆ ಕೊಡಬೇಡವೆಂದು ಹೇಳುವ ಮನುಷ್ಯನು ನೂರು ತಿರ್ಯಗ್ಯೋನಿಗಳನ್ನು ಹೊಂದಿ ಆಮೇಲೆ ಚಂಡಾಲನಾಗಿ ಹುಟ್ಟುವನು.

೧೨೧. ಧರ್ಮಕಾರ್ಯವನ್ನು ಮಾತಿನಿಂದ ಪ್ರತಿಜ್ಞೆಮಾಡಿ ಕಾರ್ಯತಃ ಅದನ್ನು ನೆರವೇರಿಸದಿದ್ದರೆ ಅದು ಇಹಪರಲೋಕಗಳಲ್ಲಿ ಋಣವಾಗುವುದು.

೧೨೨. ನಿತ್ಯವೂ ಅಮೃತವನ್ನೂ, ವಿಘಸವನ್ನೂ ಭುಂಜಿಸಬೇಕು. ಯಜ್ಞಶೇಷವು ಅಮೃತವೆಂದೂ, ಭುಕ್ತಶೇಷವು ವಿಘಸವೆಂದೂ ಹೇಳಿಸಿಕೊಳ್ಳುವುವು.

೧೨೩. ಬಟ್ಟೆಯು ಎಡಭುಜದಿಂದ ಜಾರಿ ಹೊಕ್ಕಳಲ್ಲಿ ನಿಂತಿದ್ದರೆ ಏಕವಸ್ತ್ರನಾಗುವನು. ಹೀಗೆ ಏಕವಸ್ತ್ರನಾಗಿ ದೇವಪಿತೃಕಾರ್ಯಗಳನ್ನು ಮಾಡಬಾರದು.

೧೨೪. ಬ್ರಾಹ್ಮಣೋತ್ತಮನು ಮಿಂದು ನೀರಿನಿಂದ ಪಿತೃಗಳಿಗೆ ತರ್ಪಣಗೈದರೆ ಸಮಸ್ತಯಜ್ಞಗಳನ್ನೂ ಮಾಡಿದ ಫಲವನ್ನು ಹೊಂದುವನು.

ಹಸ್ತೌ ಪ್ರಕ್ಷಾಲ್ಯ ಗಂಡೂಷಂ ಯಃ ಪಿಬೇದ್ಭೋಜನೋತ್ತರಂ ।
ದೈವಂ ಪಿತ್ರ್ಯಂ ತಥಾತ್ಮಾನಂ ತ್ರಯಂ ಸ ಉಪಘಾತಯೇತ್ ॥ ೧೨೫ ॥
ಗಣಾನ್ನಂ ಗಣಿಕಾನ್ನಂ ಚ ಯದನ್ನಂ ಗ್ರಾಮಯಾಜಕೇ ।
ಸ್ತ್ರೀಣಾಂ ಪ್ರಥಮಗರ್ಭೇಷು ಭುಕ್ತ್ವಾ ಚಾಂದ್ರಾಯಣಂ ಚರೇತ್ ॥೧೨೬॥
ಪಕ್ಷೇ ವಾ ಯದಿ ವಾ ಮಾಸೇ ಯಸ್ಯ ಗೇಹೇಽತ್ತಿ ನ ದ್ವಿಜಃ ।
ಭುಕ್ತ್ವಾ ದುರಾತ್ಮನಸ್ತಸ್ಯ ಚರೇಚ್ಚಾಂದ್ರಾಯಣವ್ರತಂ ॥ ೧೨೭ ॥
ಸತ್ರಿಣಾಂ ದೀಕ್ಷಿತಾನಾಂ ಚ ಯತೀನಾಂ ಬ್ರಹ್ಮಚಾರಿಣಾಂ ।
ಏತೇಷಾಂ ಸೂತಕಂ ನಾಽಸ್ತಿ ಋತ್ವಿಜಾಂ ಕರ್ಮ ಕುರ್ವತಾಂ ॥ ೧೨೮ ॥
ಅಜೀರ್ಣೇಽಭ್ಯುದಿತೇ ವಾಂತೇ ಶ್ಮಶ್ರುಕರ್ಮಣಿ ಮೈಥುನೇ ।
ದುಃಸ್ವಪ್ನೇ ದುರ್ಜನಸ್ಪರ್ಶೇ ಸ್ನಾನಮೇವ ವಿಧೀಯತೇ ॥ ೧೨೯ ॥
ಚೈತ್ಯವೃಕ್ಷಂ ಚಿತಿಂ ಯೂಪಂ ಶಿವನಿರ್ಮಾಲ್ಯಭೋಜಿನಂ ।
ವೇದವಿಕ್ರಯಿಣಂ ಸ್ಪೃಷ್ಟ್ವಾ ಸಚೈಲೋ ಜಲಮಾವಿಶೇತ್ ॥ ೧೩೦ ॥
ಅಗ್ನ್ಯಗಾರೇ ಗವಾಂ ಗೋಷ್ಠೇ ದೇವಬ್ರಾಹ್ಮಣಸನ್ನಿಧೌ ।
ಸ್ವಾಧ್ಯಾಯೇ ಭೋಜನೇ ಪಾನೇ ಪಾದುಕೇ ವೈ ವಿಸರ್ಜಯೇತ್ ॥೧೩೧॥

---

೧೨೫. ಊಟಮಾಡಿ ಕೈಯನ್ನು ತೊಳೆದುಕೊಂಡ ಬಳಿಕ ಗಂಡೂಷವನ್ನು ಮಾಡಿದವನು ದೇವಪಿತೃಕಾರ್ಯಗಳನ್ನೂ, ತನ್ನನ್ನೂ ಹಾಳುಮಾಡಿಕೊಳ್ಳುವನು.

೧೨೬. ಸಮೂಹಾನ್ನ, ವೇಶ್ಯೆ, ಗ್ರಾಮಯಾಜಕರಿತ್ತ ಅನ್ನ, ಸ್ತ್ರೀಯರ ಸೀಮಂತೋನ್ನಯನಾದಿಗಳಲ್ಲಿಯ ಅನ್ನ ಇವುಗಳನ್ನು ಭುಂಜಿಸಿದವನು ಚಾಂದ್ರಾಯಣವ್ರತವನ್ನಾಚರಿಸಬೇಕು.

೧೨೭. ಯಾವನ ಮನೆಯಲ್ಲಿ ಬ್ರಾಹ್ಮಣನು ಪಕ್ಷಕ್ಕೊಂದಾವೃತ್ತಿಯಾಗಲಿ, ತಿಂಗಳಿಗೊಂದಾವೃತ್ತಿಯಾಗಲಿ ಭುಂಜಿಸುವುದಿಲ್ಲವೊ, ದುಷ್ಟನಾದ ಅಂಥವನ ಅನ್ನವನ್ನು ಭುಂಜಿಸಿದವನು ಚಾಂದ್ರಾಯಣವ್ರತವನ್ನಾಚರಿಸಬೇಕು.

೧೨೮. ಯಜ್ಞಮಾಡುವವರು, ದೀಕ್ಷಿತರು, ಸನ್ಯಾಸಿಗಳು, ಬ್ರಹ್ಮಚಾರಿಗಳು, ಕರ್ಮವನ್ನು ಮಾಡುತ್ತಿರುವ ಋತ್ವಿಜರು ಇವರಿಗೆ ಸೂತಕವಿಲ್ಲ.

೧೨೯. ಅಜೀರ್ಣದಲ್ಲಿಯೂ, ವಮನವಾದಾಗಲೂ, ಕ್ಷೌರ, ಮೈಥುನ, ದುಸ್ಸ್ವಪ್ನ, ದುಷ್ಟಸ್ಪರ್ಶ ಇವುಗಳಲ್ಲಿಯೂ ಸ್ನಾನಮಾಡಬೇಕು.

೧೩೦. ಹಳ್ಳಿಯ ಜನರು ಪೂಜಿಸುವ ಮರ, ಚಿತಿ, ಯೂಪಸ್ತಂಭ, ಶಿವನಿರ್ಮಾಲ್ಯವನ್ನು ಭುಂಜಿಸುವವ, ವೇದವನ್ನು ಮಾರುವವ ಇವರನ್ನು ಸ್ಪರ್ಶ ಮಾಡಿದರೆ ಸ್ನಾನಮಾಡಬೇಕು.

೧೩೧. ಯಜ್ಞಶಾಲೆ, ದನದ ಕೊಟ್ಟಿಗೆ, ದೇವತೆ, ಬ್ರಾಹ್ಮಣ ಇವರ ಹತ್ತಿರದಲ್ಲಿಯೂ, ವೇದಾಧ್ಯಯನ, ಭೋಜನ, ಪಾನ ಇವುಗಳಲ್ಲಿಯೂ ಪಾದರಕ್ಷೆಗಳನ್ನು ತೆಗೆದಿಡಬೇಕು.

ಖಲಕ್ಷೇತ್ರಗತಂ ಧಾನ್ಯಂ ಕೂಪವಾಪೀಷು ಯಜ್ಜಲಂ ।
ಅಗ್ರಾಹ್ಯಾದಪಿ ತದ್ಗ್ರಾಹ್ಯಂ ಯಚ್ಚ ಗೋಷ್ಠಗತಂ ಪಯಃ ॥ ೧೩೨ ॥
ಯದ್ವೇಷ್ಟಿತಶಿರಾ ಭುಂಕ್ತೇ ಯೋ ಭುಂಕ್ತೇ ದಕ್ಷಿಣಾಮುಖಃ ।
ಸೋಪಾನತ್ಕಶ್ಚ ಯದ್ಭುಂಕ್ತೇ ತದ್ವೈ ರಕ್ಷಾಂಸಿ ಭುಂಜತೇ ॥ ೧೩೩ ॥
ಯಾತುಧಾನಾಃ ಪಿಶಾಚಾಶ್ಚ ರಾಕ್ಷಸಾಃ ಕ್ರೂರಕರ್ಮಿಣಃ ।
ಹರಂತಿ ರಸಮನ್ನಸ್ಯ ಮಂಡಲೇನ ವಿವರ್ಜಿತಂ ॥ ೧೩೪ ॥
ಬ್ರಹ್ಮಾದ್ಯಾಶ್ಚ ಸುರಾಃ ಸರ್ವೇ ವಸಿಷ್ಠಾದ್ಯಾ ಮಹರ್ಷಯಃ ।
ಮಂಡಲಂ ಚೋಪಜೀವಂತಿ ತತಃ ಕುರ್ವೀತ ಮಂಡಲಂ ॥ ೧೩೫ ॥
ಬ್ರಾಹ್ಮಣೇ ಚತುರಸ್ರಂ ಸ್ಯಾತ್ತ್ರ್ಯಂಸಂ ವೈ ಬಾಹುಜನ್ಮನಃ ।
ವರ್ತುಲಂ ಚ ವಿಶಃ ಪ್ರೋಕ್ತಂ ಶೂದ್ರಸ್ಯಾಽಭ್ಯುಕ್ಷಣಂ ಸ್ಮೃತಂ ॥ ೧೩೬ ॥
ನೋತ್ಸಂಗೇ ಭೋಜನಂ ಕೃತ್ವಾ ನೋ ಪಾಣೌ ನೈವ ಕರ್ಪಟೇ ।
ನಾಽಽಸನೇ ನಚ ಶಯ್ಯಾಯಾಂ ಭುಂಜೀತ ನ ಮಲಾರ್ದಿತಃ ॥ ೧೩೭ ॥
ಧರ್ಮಶಾಸ್ತ್ರರಥಾರೂಢಾ ವೇದಖಡ್ಗಧರಾದ್ವಿಜಾಃ ।
ಕ್ರೀಡಾರ್ಥಮಪಿ ಯದ್ಬ್ರೂಯುಃ ಸಧರ್ಮಃ ಪರಮಃ ಸ್ಮೃತಃ ॥ ೧೩೮ ॥

---

೧೩೨. ಕಣ, ಹೊಲಗಳಲ್ಲಿರುವ ಧಾನ್ಯ, ಕೂಪವಾಪಿಗಳಲ್ಲಿರುವ ನೀರು, ದನದಕೊಟ್ಟಿಗೆಯಲ್ಲಿರುವ ಹಾಲು ಇವುಗಳನ್ನು ಅಗ್ರಾಹ್ಯನಿಂದಲೂ ತೆಗೆದುಕೊಳ್ಳಬಹುದು.

೧೩೩. ತಲೆಗೆ ಬಟ್ಟೆಯನ್ನು ಸುತ್ತಿಕೊಂಡೂ, ದಕ್ಷಿಣಾಭಿಮುಖವಾಗಿಯೂ, ಪಾದರಕ್ಷೆಯನ್ನು ಧರಿಸಿಯೂ ಭುಂಜಿಸಿದುದನ್ನು ರಾಕ್ಷಸರು ತಿನ್ನುವರು.

೧೩೪. ಮಂಡಲವಿಲ್ಲದ ಅನ್ನದ ರಸವನ್ನು ರಾಕ್ಷಸರೂ, ಪಿಶಾಚಗಳೂ, ಯಾತುಧಾನರೂ ಅಪಹರಿಸುವರು.

೧೩೫. ಬ್ರಹ್ಮಾದಿ ದೇವತೆಗಳೂ, ವಸಿಷ್ಠನೇ ಮೊದಲಾದ ಸಕಲಮುನಿಗಳೂ, ಮಂಡಲಮಾಡಿ ಭುಂಜಿಸುವರು. ಆದುದರಿಂದ ಮಂಡಲವನ್ನು ಮಾಡಬೇಕು.

೧೩೬. ಬ್ರಾಹ್ಮಣಭೋಜನದಲ್ಲಿ ಚತುರಸ್ರವೂ, ಕ್ಷತ್ರಿಯನಲ್ಲಿ ತ್ರ್ಯಸ್ರವೂ, ವೈಶ್ಯನಲ್ಲಿ ವರ್ತುಲವೂ ಆದ ಮಂಡಲವನ್ನು ಮಾಡಬೇಕು. ಶೂದ್ರಭೋಜನದಲ್ಲಿ ಪ್ರೋಕ್ಷಣೆ ಮಾತ್ರ ಮಾಡಬೇಕು.

೧೩೭. ತೊಡೆ, ಕೈ, ಬಟ್ಟೆಲುಗಳಲ್ಲಿ ಭುಂಜಿಸಬಾರದು. ಆಸನ, ಹಾಸಿಗೆ, ಕೊಳೆ ಇವುಗಳಲ್ಲಿಯೂ ಭೋಜನ ಮಾಡಕೂಡದು.

೧೩೮. ಧರ್ಮಶಾಸ್ತ್ರವೆಂಬ ರಥವನ್ನೇರಿದವರೂ, ವೇದವೆಂಬ ಖಡ್ಗವನ್ನು ಧರಿಸಿದವರೂ ಆದ ಬ್ರಾಹ್ಮಣರು ಆಟಕ್ಕಾಗಿಯಾದರೂ ಯಾವುದನ್ನು ಹೇಳುವರೊ ಅದೇ ಉತ್ತಮಧರ್ಮವೆನ್ನಿಸಿಕೊಳ್ಳುವುದು.

ರಾತ್ರೌ ಧಾನಾ ದಧಿಯುತಂ ಧರ್ಮಕಾಮೋ ನ ಭಕ್ಷಯೇತ್ ।
ಅಶ್ನತೋ ಧರ್ಮಹಾನಿಃ ಸ್ಯಾದ್ವ್ಯಾಧಿಭಿಶ್ಚೋಪಪೀಡ್ಯತೇ ॥ ೧೩೯ ॥
ಫಾಣಿತಂ ಗೋರಸಂ ತೋಯಂ ಲವಣಂ ಮಧುಕಾಂಜಿಕಂ ।
ಹಸ್ತೇನ ಬ್ರಾಹ್ಮಣೋ ದತ್ವಾ ಕೃಚ್ಛ್ರಂ ಚಾಂದ್ರಾಯಣಂ ಚರೇತ್ ॥
ಗಂಧಾಽಽಭರಣಮಾಲ್ಯಾನಿ ಯಃ ಪ್ರಯಚ್ಛತಿ ಧರ್ಮವಿತ್ ।
ಸ ಸುಗಂಧಿಃ ಸದಾ ಹೃಷ್ಟೋ ಯತ್ರಯತ್ರೋಪಜಾಯತೇ ॥ ೧೪೧ ॥
ನೀಲೀರಕ್ತಂ ತು ಯದ್ವಸ್ತ್ರಂ ದೂರತಃ ಪರಿವರ್ಜಯೇತ್
ಸ್ತ್ರೀಣಾಂ ಕ್ರೀಡಾರ್ಥಸಂಯೋಗೇ ಶಯನೀಯೇ ನ ದುಷ್ಯತಿ ॥ ೧೪೨ ॥
ಪಾಲನಾದ್ವಿಕ್ರಯಾಚ್ಚೈವ ತದ್ವೃತ್ತೇರುಪಜೀವನಾತ್ ।
ಅಪವಿತ್ರೋ ಭವೇದ್ವಿಪ್ರಸ್ತ್ರಿಭಿಃ ಕೃಚ್ಛ್ರೈರ್ವಿಶುದ್ಧ್ಯತಿ ॥ ೧೪೩ ॥
ಸ್ನಾನಂ ದಾನಂ ತಪೋ ಹೋಮಃ ಸ್ವಾಧ್ಯಾಯಃ ಪಿತೃತರ್ಪಣಂ ।
ವೃಥಾ ತಸ್ಯ ಮಹಾಯಜ್ಞಾ ನೀಲೀವಾಸೋ ಬಿಭರ್ತಿ ಯಃ ॥ ೧೪೪ ॥
ನೀಲೀರಕ್ತಂ ಯದಾವಸ್ತ್ರಂ ವಿಪ್ರಃಸ್ವಾಂಗೇಷು ಧಾರಯೇತ್ ।
ತಂತುಸಂತತಿಸಂಖ್ಯಾಕೇ ನರಕೇ ಸ ವಸೇದ್ಧ್ರುವಂ ॥ ೧೪೫ ॥

---

೧೩೯. ಧರ್ಮಾಪೇಕ್ಷಿಯು ರಾತ್ರಿಯಲ್ಲಿ ಅರಳು ಮೊಸರನ್ನು ತಿನ್ನಬಾರದು. ಹಾಗೆ ತಿನ್ನುವವನು ಧರ್ಮಭ್ರಷ್ಟನೂ, ವ್ಯಾಧಿಪೀಡಿತನೂ ಆಗುವನು.

೧೪೦. ಫೇಣಿ, ಹಾಲು, ನೀರು, ಉಪ್ಪು, ಜೇನು, ಗಂಜಿಗಳನ್ನು ಬ್ರಾಹ್ಮಣನು ಕೈಯಿಂದ ಕೊಟ್ಟರೆ ಕೃಚ್ಛ್ರ ಚಾಂದ್ರಾಯಣಗಳನ್ನು ಆಚರಿಸಬೇಕು.

೧೪೧. ಗಂಧ, ಆಭರಣ, ಮಾಲ್ಯಗಳನ್ನು ದಾನಮಾಡುವ ಧರ್ಮಜ್ಞನು ಸುಗಂಧನೂ, ಯಾವಾಗಲೂ ಆನಂದಗೊಂಡವನೂ ಆಗುವನು.

೧೪೨. ನೀಲರಕ್ತ ವಸ್ತ್ರಗಳನ್ನು ದೂರದಿಂದಲೇ ತ್ಯಜಿಸಬೇಕು. ಸ್ತ್ರೀಯರ ಕ್ರೀಡಾ ಸಂಭೋಗಗಳಲ್ಲಿ ಮಾತ್ರ ಅದು ದುಷ್ಟವಾಗುವುದಿಲ್ಲ.

೧೪೩. ನೀಲಿಯನ್ನು ಕಾಪಾಡುವುದರಿಂದಲೂ, ವಿಕ್ರಯಿಸುವುದರಿಂದಲೂ, ಆ ನೀಲಿಯಿಂದ ಜೀವಿಸುವುದರಿಂದಲೂ ಅಶುದ್ಧನಾದ ಬ್ರಾಹ್ಮಣನು ಮೂರು ಕೃಚ್ಛ್ರಗಳಿಂದ ಶುದ್ಧನಾಗುವನು.

೧೪೪. ನೀಲೀವಸ್ತ್ರವನ್ನು ಧರಿಸಿದವನು ಮಾಡಿದ ಸ್ನಾನ, ದಾನ, ತಪಸ್ಸು, ಹೋಮ, ವೇದಾಧ್ಯಯನ, ಪಿತೃತರ್ಪಣ, ಮಹಾಯಜ್ಞ ಇವುಗಳು ನಿಷ್ಫಲವಾಗುವುವು.

೧೪೫. ನೀಲೀವಸ್ತ್ರವನ್ನು ಶರೀರದಲ್ಲಿ ಧರಿಸಿದ ಬ್ರಾಹ್ಮಣನು ಆ ಬಟ್ಟೆಯಲ್ಲಿರುವ ನೂಲಿನ ಸಂಖ್ಯೆಯಷ್ಟುಕಾಲ ನರಕದಲ್ಲಿ ವಾಸಿಸುವನು.

ಅಹೋರಾತ್ರೋಷಿತೋ ಭೂತ್ವಾ ಪಂಚಗವ್ಯೇನ ಶುಧ್ಯತಿ ॥ ೧೪೬ ॥
ನೀಲೀರಕ್ತೇನ ವಸ್ತ್ರೇಣ ಯದನ್ನಮುಪಕಲ್ಪಯೇತ್ ।
ಭೋಕ್ತಾ ವಿಷ್ಠಾಸಮಂ ಭುಂಕ್ತೇ ದಾತಾ ಚ ನರಕಂ ವ್ರಜೇತ್ ॥ ೧೪೭ ॥
ಅಮೃತಂ ಬ್ರಾಹ್ಮಣಸ್ಯಾಽನ್ನಂ ಕ್ಷತ್ರಿಯಾಽನ್ನಂ ಪಯಃ ಸ್ಮೃತಂ ।
ವೈಶ್ಯಸ್ಯಚಾಽನ್ನಮೇವಾಽನ್ನಂ ಶೂದ್ರಸ್ಯ ರುಧಿರಂ ಸ್ಮೃತಂ ॥ ೧೪೮ ॥
ವೈಶ್ವದೇವೇನ ಹೋಮೇನ ದೇವತಾಽಭ್ಯರ್ಚನೈರ್ಜಪೈಃ ।
ಅಮೃತಂ ತೇನ ವಿಪ್ರಾನ್ನಮೃಗ್ಯಜುಃಸಾಮ ಸಂಸ್ಕೃತಂ ॥ ೧೪೯ ॥
ವ್ಯವಹಾರಾಽನುರೂಪೇಣ ನ್ಯಾಯೇನ ತು ಯದರ್ಜನಂ ।
ಕ್ಷತ್ರಿಯಸ್ಯ ಪಯಸ್ತೇನ ಪ್ರಜಾಪಾಲನತೋ ಭವೇತ್ ॥ ೧೫೦ ॥
ಪ್ರಹರಾನಡ್ವಾಹಾದ್ಯದನ್ನಮುತ್ಪಾದ್ಯ ಯಚ್ಛತಿ ।
ಸೀತಾ ಯಜ್ಞವಿಧಾನೇನ ವೈಶ್ಯಾನ್ನಂ ತೇನ ಸಂಸ್ಕೃತಂ ॥ ೧೫೧ ॥
ಅಜ್ಞಾನತಿಮಿರಾಂಧಸ್ಯ ಮದ್ಯಪಾನರತಸ್ಯ ಚ ।
ರುಧಿರಂ ತೇನ ಶೂದ್ರಾನ್ನಂ ವೇದಮಂತ್ರವಿವರ್ಜಿತಂ ॥ ೧೫೨ ॥

---

೧೪೬. ಅವನು ಒಂದು ದಿನ ಉಪವಾಸಮಾಡಿ ಪಂಚಗವ್ಯವನ್ನು ಪ್ರಾಶನ ಮಾಡಿದರೆ ಶುದ್ಧನಾಗುವನು.

೧೪೭. ನೀಲವಸ್ತ್ರದಿಂದ ಅನ್ನವನ್ನು ಸಿದ್ಧಮಾಡಿದರೆ ಆ ಅನ್ನವನ್ನು ಭುಂಜಿಸುವವನು ಅಮೇಧ್ಯವನ್ನು ತಿಂದವನಂತಾಗುವನು. ದಾನಮಾಡುವವನು ನರಕಕ್ಕೆ ಹೋಗುವನು.

೧೪೮. ಬ್ರಾಹ್ಮಣನ ಅನ್ನವು ಅಮೃತವೂ, ಕ್ಷತ್ರಿಯನ ಅನ್ನವು ಹಾಲೂ, ವೈಶ್ಯನ ಅನ್ನವು ಕೇವಲ ಅನ್ನವೂ, ಶೂದ್ರನ ಅನ್ನವು ರಕ್ತವೂ ಎನ್ನಿಸಿಕೊಳ್ಳುವುದು.

೧೪೯. ವೈಶ್ವದೇವಹೋಮ, ದೇವತಾಪೂಜೆ, ಜಪ, ಋಗ್ಯಜುಸ್ಸಾಮ ವೇದಗಳು ಇವುಗಳಿಂದ ಸಂಸ್ಕೃತವಾಗುವುದರಿಂದ ವಿಪ್ರಾನ್ನವು ಅಮೃತವೆನ್ನಿಸಿಕೊಳ್ಳುವುದು.

೧೫೦. ವ್ಯವಹಾರಾನುಗುಣವಾದ ನ್ಯಾಯದಿಂದಲೂ, ಪ್ರಜಾಪಾಲನೆಯಿಂದಲೂ ಸಂಪಾದಿಸಿದ ಕ್ಷತ್ರಿಯಾನ್ನವು ಪಯೋನ್ನವೆನ್ನಿಸಿಕೊಳ್ಳುವುದು.

೧೫೧. ವೈಶ್ಯನು ತಾಡನ, ಬಂಧನ ಮೊದಲಾದುವುಗಳಿಂದ ಎತ್ತುಗಳ ಮೂಲಕ ಕರ್ಷಣಯಜ್ಞದಿಂದ ಸಂಪಾದಿಸಿಕೊಟ್ಟ ಅನ್ನವು ಅನ್ನವೆನ್ನಿಸಿಕೊಳ್ಳುವುದು.

೧೫೨. ಮೂಢನೂ, ಮದ್ಯಪಾನರತನೂ ಆದ ಶೂದ್ರನ ವೇದಮಂತ್ರವಿಲ್ಲದ ಅನ್ನವು ರುಧಿರವೆನ್ನಿಸಿಕೊಳ್ಳುವುದು.

ನ ವೃಥಾ ಶಪಥಂ ಕುರ್ಯಾತ್ಸ್ವಲ್ಪೇಽಪ್ಯರ್ಥೇ ನರೋತ್ತಮಃ ।
ವೃಥಾ ಹಿ ಶಪಥಂ ಕುರ್ವನ್ಪ್ರೇತ್ಯ ಚೇಹ ವಿನಶ್ಯತಿ ॥ ೧೫೩ ॥
ಕಾಮಿನೀಷು ವಿವಾಹೇ ಚ ಗವಾಂ ಭುಕ್ತೇ ಧನಕ್ಷಯೇ ।
ಬ್ರಾಹ್ಮಣಾಭ್ಯುಪಪತ್ತೌ ಚ ಶಪಥೈರ್ನಾಸ್ತಿ ಪಾತಕಂ ॥ ೧೫೪ ॥
ಸತ್ಯೇನ ಶಾಪಯೇದ್ವಿಪ್ರಂ ಕ್ಷತ್ರಿಯಂ ವಾಹನಾಽಽಯುಧೈಃ ।
ಗೋಬೀಜಕಾಂಚನೈರ್ವೈಶ್ಯಂ ಶೂದ್ರಂ ಸರ್ವೈಸ್ತು ಪಾತಕೈಃ ॥ ೧೫೫ ॥
ಅಗ್ನಿಂ ವಾಹಾರಯೇದೇನಮಪ್ಸು ಚೈನಂ ನಿಮಜ್ಜಯೇತ್ ।
ಸ್ಪರ್ಶಯೇತ್ಪುತ್ರದಾರಾಣಾಂ ಶಿರಾಂಸ್ಯೇನಂ ಚ ವಾ ಪೃಥಕ್ ॥ ೧೫೬ ॥
ನ ಯಮಂ ಯಮಮಿತ್ಯಾಹುರಾತ್ಮಾ ವೈ ಯಮ ಉಚ್ಯತೇ ।
ಆತ್ಮಾ ಸಂಯಮಿತೋ ಯೇನ ತಂ ಯಮಃ ಕಿಂ ಕರಿಷ್ಯತಿ ॥ ೧೫೭ ॥
ನ ನಿಸ್ತ್ರಿಂಶಸ್ತಥಾ ತೀಕ್ಷ್ಣಃ ಫಣೀ ವಾ ದುರತಿಕ್ರಮಃ ।
ರಿಪುರ್ವಾ ನಿತ್ಯಸಂಕ್ರುದ್ಧೋ ಯಥಾತ್ಮಾ ದುರಧಿಷ್ಠಿತಃ ॥ ೧೫೮ ॥
ಏಕಃ ಕ್ಷಮಾವತಾಂ ದೋಷೋ ನದ್ವಿತೀಯಃ ಕಥಂಚನ ।
ಯದೇನಂ ಕ್ಷಮಯಾ ಯುಕ್ತಮಶಕ್ತಂ ಮನ್ಯತೇ ಜನಃ ॥ ೧೫೯ ॥

---

೧೫೩. ಅಲ್ಪಕ್ಕಾಗಿ ಮನುಷ್ಯನು ವ್ಯರ್ಥವಾಗಿ ಶಪಥಮಾಡಕೂಡದು. ವ್ಯರ್ಥವಾಗಿ ಶಪಥಮಾಡುವವನು ಇಹಪರಲೋಕಗಳಲ್ಲಿ ಹಾಳಾಗುವನು.

೧೫೪. ಕಾಮಿನಿಯರು, ಸ್ತ್ರೀಯರ ವಿವಾಹ, ಗೋವುಗಳ ಆಹಾರ, ಧನನಾಶ, ಬ್ರಾಹ್ಮಣಾನುಗ್ರಹ ಈ ಸಂದರ್ಭಗಳಲ್ಲಿ ಶಪಥಮಾಡುವುದರಿಂದ ಪಾಪವಿಲ್ಲ.

೧೫೫. ಬ್ರಾಹ್ಮಣನಲ್ಲಿ ಸತ್ಯದಿಂದಲೂ, ಕ್ಷತ್ರಿಯನಲ್ಲಿ ವಾಹನ ಆಯುಧಗಳಿಂದಲೂ, ವೈಶ್ಯನಲ್ಲಿ ಗೋವು, ಬೀಜ, ಚಿನ್ನದಿಂದಲೂ, ಶೂದ್ರನಲ್ಲಿ ಸಮಸ್ತ ಪಾಪಗಳಿಂದಲೂ ಶಪಥಮಾಡಬೇಕು.

೧೫೬. ಅಗ್ನ್ಯಾಹರಣದಿಂದ ಬ್ರಾಹ್ಮಣನಿಂದಲೂ, ನೀರಿನಲ್ಲಿ ಮುಳುಗಿಸುವುದರಿಂದ ಕ್ಷತ್ರಿಯನಿಂದಲೂ, ಪುತ್ರ, ಪತ್ನಿಯರ ಸ್ಪರ್ಶದಿಂದ ವೈಶ್ಯನಿಂದಲೂ, ತಲೆಯನ್ನು ಮುಟ್ಟಿಕೊಳ್ಳುವುದರಿಂದ ಶೂದ್ರನಿಂದಲೂ ಶಪಥಮಾಡಿಸಬೇಕು.

೧೫೭. ಯಮನು ಯಮನಲ್ಲ. ಆತ್ಮವೇ ಯಮನು. ಆತ್ಮಸಂಯಮವುಳ್ಳವನನ್ನು ಯಮನೇನು ತಾನೆ ಮಾಡುವನು?

೧೫೮. ಸ್ವಾಧೀನವಾಗದ ಆತ್ಮದಂತೆ ಖಡ್ಗವೂ ತೀಕ್ಷ್ಣವಲ್ಲ. ಸರ್ಪವೂ ಶತ್ರುವೂ ಕ್ರುದ್ಧರಲ್ಲ.

೧೫೯. ಕ್ಷಮಾಶೀಲನನ್ನು ಜನರು ಅಶಕ್ತನೆಂದು ತಿಳಿಯುವುದೊಂದೇ ದೋಷವು. ಅದಕ್ಕಿಂತಲೂ ದೋಷವಾವುದೂ ಇರುವುದಿಲ್ಲ.

ನ ಶಬ್ದಶಾಸ್ತ್ರಾಭಿರತಸ್ಯ ಮೋಕ್ಷೋ
ನಚೈವ ರಮ್ಯಾವಸಥಪ್ರಿಯಸ್ಯ ।
ನ ಭೋಜನಾಚ್ಛಾದನತತ್ಪರಸ್ಯ
ನ ಲೋಕ ವಿತ್ತಗ್ರಹಣೇ ರತಸ್ಯ ॥ ೧೬೦ ॥
ಏಕಾಂತಶೀಲಸ್ಯ ಸದೈವ ತಸ್ಯ
ಸರ್ವೇಂದ್ರಿಯಪ್ರೀತಿನಿವರ್ತಕಸ್ಯ ।
ಸ್ವಾಧ್ಯಾಯಯೋಗೇ ಗತಮಾನಸಸ್ಯ
ಮೋಕ್ಷೋ ಧ್ರುವಂ ನಿತ್ಯಮಹಿಂಸಕಸ್ಯ ॥ ೧೬೧ ॥
ಕ್ವೈಕಾಂತಶೀಲತ್ವಮಿಹಾಽಸ್ತಿ ಪುಂಸಃ
ಕ್ವಚೇಂದ್ರಿಯಪ್ರೀತಿನಿವೃತ್ತಿರಸ್ತಿ ।
ಕ್ವ ಯೋಗಯುಕ್ತಿಃ ಕ್ವಚ ದೈವತೇಜ್ಯಾ
ಕಾಶ್ಯಾಂ ವಿನೈಭಿಃ ಸಹಜೇನ ಮುಕ್ತಿಃ ॥ ೧೬೨ ॥
ವಿಶ್ವೇಶಸಂಶೀಲನಮೇವ ಯೋಗ
ಸ್ತಪಶ್ಚ ವಿಶ್ವೇಶಪುರೀನಿವಾಸಃ ।
ವ್ರತಾನಿ ದಾನಂ ನಿಯಮಾ ಯಮಾಶ್ಚ
ಸ್ನಾನಂ ದ್ಯುನದ್ಯಾಂ ಯದುದಗ್ವಹಾಯಾಂ ॥ ೧೬೩ ॥

ಸ್ಕಂದ ಉವಾಚ:–

ನ್ಯಾಯಾಗತಧನಸ್ತತ್ತ್ವಜ್ಞಾನನಿಷ್ಠೋಽತಿಥಿಪ್ರಿಯಃ ।
ಶ್ರಾದ್ಧಕೃತ್ಸತ್ಯವಾದೀ ಚ ಗೃಹಸ್ಥೋಽಪೀಹ ಮುಚ್ಯತೇ ॥ ೧೬೪ ॥

---

೧೬೦. ವ್ಯಾಕರಣಶಾಸ್ತ್ರದಲ್ಲಿ ಆಸಕ್ತನಾದವನಿಗೂ, ಸುಂದರವಾದ ಮನೆಯಲ್ಲಿ ಪ್ರೀತಿಯುಳ್ಳವನಿಗೂ, ಭೋಜನಾಚ್ಛಾದನಗಳಲ್ಲಿ ನಿರತನಿಗೂ, ಜನರ ದ್ರವ್ಯಗಳನ್ನು ತೆಗೆದುಕೊಳ್ಳುವವನಿಗೂ ಮೋಕ್ಷವಾಗುವುದಿಲ್ಲ.

೧೬೧. ನಿಯಮಶೀಲನೂ, ದೇವಭಕ್ತನೂ, ಸಕಲೇಂದ್ರಿಯ ಪ್ರೀತಿಯಿಲ್ಲದವನೂ, ವೇದಾಧ್ಯಯನಾಸಕ್ತನೂ, ಹಿಂಸೆಮಾಡದವನೂ ಆದವನಿಗೆ ನಿಶ್ಚಯವಾಗಿಯೂ ಮೋಕ್ಷವು ಲಭಿಸುವುದು.

೧೬೨. ಈ ಲೋಕದಲ್ಲಿ ಮನುಷ್ಯನಿಗೆ ನಿಯಮಶೀಲತೆಯೂ, ಇಂದ್ರಿಯ ನಿಗ್ರಹವೂ, ಯೋಗವೂ, ದೈವತಪೂಜೆಯೂ ಹೇಗುಂಟಾಗುವುದು? ಕಾಶಿಯಲ್ಲಿ ಇವುಗಳೇನೂ ಇಲ್ಲದೆಯೇ ಸ್ವಾಭಾವಿಕವಾಗಿ ಮುಕ್ತಿಯುಂಟಾಗುವುದು.

೧೬೩. ಕಾಶಿಯಲ್ಲಿ ವಿಶ್ವೇಶಧ್ಯಾನವೇ ಯೋಗವು. ಅಲ್ಲಿ ವಾಸಿಸುವುದೇ ತಪಸ್ಸು. ಗಂಗೆಯಲ್ಲಿ ಸ್ನಾನಮಾಡುವುದೇ ವ್ರತ, ದಾನ, ನಿಯಮ ಮತ್ತು ಯಮಗಳು.

೧೬೪. ಸ್ಕಂದನು ಹೇಳುತ್ತಾನೆ:–ಕಾಶೀಕ್ಷೇತ್ರದಲ್ಲಿ ನ್ಯಾಯದಿಂದ ಹಣವನ್ನು

ದೀನಾಂಧಕೃಪಣಾರ್ಥಿಭ್ಯೋ ದತ್ವಾಽನ್ನಾನಿ ವಿಶೇಷತಃ ।
ಕೃತ್ವಾ ಗಾಹ್ಯಾಣಿ ಕರ್ಮಾಣಿ ಗೃಹಸ್ಥಃ ಶ್ರೇಯ ಆಪ್ನುಯಾತ್ ॥೧೬೫॥
ಇತ್ಥಮಾಚರತಾಂ ಪುಂಸಾಂ ಕಾಶೀನಾಥಃ ಪ್ರಸೀದತಿ ।
ಕಾಶೀನಾಥಪ್ರಸಾದೇನ ಕಾಶೀಪ್ರಾಪ್ತಿಸ್ತು ಮೋಕ್ಷಕೃತ್ ॥ ೧೬೬ ॥
ಸ ಸರ್ವತೀರ್ಥಸುಸ್ನಾತಃ ಸ ಸರ್ವಕ್ರತುದೀಕ್ಷಿತಃ ।
ಸ ದತ್ತಸರ್ವದಾನಸ್ತು ಕಾಶೀ ಯೇನ ನಿಷೇವಿತಾ ॥ ೧೬೭ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಗೃಹಸ್ಥಧರ್ಮನಿರೂಪಣಂ"
ನಾಮ ಚತ್ವಾರಿಂಶೋಽಧ್ಯಾಯಃ

---

ಸಂಪಾದಿಸುವವನೂ, ತತ್ತ್ವಜ್ಞಾನನಿರತನೂ, ಅತಿಥಿಪ್ರಿಯನೂ, ಶ್ರಾದ್ಧಮಾಡುವವನೂ, ಸತ್ಯವಾದಿಯೂ ಆದ ಗೃಹಸ್ಥನು ಮುಕ್ತನಾಗುವನು.

೧೬೫. ಗೃಹಸ್ಥನು, ದೀನರು, ಕುರುಡರು, ಕೃಪಣರು, ಅರ್ಥಿಗಳು ಇವರಿಗೆ ವಿಶೇಷವಾಗಿ ಅನ್ನದಾನಮಾಡಿ ಗೃಹ್ಯಕರ್ಮಗಳನ್ನಾಚರಿಸಿದರೆ ಶ್ರೇಯಸ್ಸನ್ನು ಪಡೆಯುವನು.

೧೬೬. ಹೀಗೆ ಮಾಡಿದವರಿಗೆ ಕಾಶೀನಾಥನು ಪ್ರಸನ್ನನಾಗುವನು. ಆ ಕಾಶೀನಾಥನ ಅನುಗ್ರಹದಿಂದ ಕಾಶೀವಾಸವು ಲಭಿಸಿ ಮೋಕ್ಷವುಂಟಾಗುವುದು.

೧೬೭. ಕಾಶಿಯನ್ನು ಸೇವಿಸಿದವನು ಸಮಸ್ತ ತೀರ್ಥಗಳಲ್ಲಿ ಮಿಂದವನೂ, ಸಮಸ್ತಯಜ್ಞಗಳಲ್ಲಿ ದೀಕ್ಷೆಗೊಂಡವನೂ, ಸಕಲ ದಾನಗಳನ್ನಿತ್ತವನೂ ಆಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಗೃಹಸ್ಥಧರ್ಮನಿರೂಪಣ"ವೆಂಬ
ನಲವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀ ॥

# ಅಥೈಕಚತ್ವಾರಿಂಶೋಽಧ್ಯಾಯಃ

## ಯೋಗಾಖ್ಯಾನಂ

ಸ್ಕಂದ ಉವಾಚ:—

**ಉಷಿತ್ವೈವಂ ಗೃಹೇ ವಿಪ್ರೋ ದ್ವಿತೀಯಾದಾಶ್ರಮಾತ್ಪರಂ ।**
**ವಲೀಪಲಿತಸಂಯುಕ್ತಸ್ತೃತೀಯಾಶ್ರಮುಪಾವಿಶೇತ್ ॥ ೧ ॥**
**ಅಪತ್ಯಾಪತ್ಯಮಾಲೋಕ್ಯ ಗ್ರಾಮ್ಯಾಹಾರಾನ್ವಿಸೃಜ್ಯ ಚ ।**
**ಪತ್ನೀಂ ಪುತ್ರೇಷು ಸಂತ್ಯಜ್ಯ ಪತ್ನ್ಯಾ ವಾ ವನಮಾವಿಶೇತ್ ॥ ೨ ॥**
**ವಸಾನಶ್ಚರ್ಮಚೀರಾಣಿ ಸಾಽಗ್ನಿರ್ಮುನ್ಯನ್ನವರ್ತನಃ ।**
**ಜಟೀ ಸಾಯಂ ಪ್ರಗೇಸ್ನಾಯೀ ಸ್ಮಶ್ರುಲೋ ನಖಲೋಮಭೃತ್ ॥ ೩ ॥**
**ಶಾಕಮೂಲಫಲೈರ್ವಾಽಪಿ ಪಂಚಯಜ್ಞಾನ್ನ ಹಾಪಯೇತ್ ।**
**ಅಮ್ಬೂಲಫಲಭಿಕ್ಷಾಭಿರರ್ಚಯೇದ್ಭಿಕ್ಷುಕಾಽತಿಥೀನ್ ॥ ೪ ॥**
**ಅನಾದಾತಾ ಚ ದಾತಾ ಚ ದಾಂತಃ ಸ್ವಾಧ್ಯಾಯತತ್ಪರಃ ।**
**ವೈತಾನಿಕಂ ಚ ಜುಹುಯಾದಗ್ನಿಹೋತ್ರಂ ಯಥಾವಿಧಿ ॥ ೫ ॥**

---

## ಕನ್ನಡದ ಅನುವಾದ

### ಯೋಗಾಖ್ಯಾನ

೧. ಸ್ಕಂದನು ಹೇಳುತ್ತಾನೆ:—ಬ್ರಾಹ್ಮಣನು ಹೀಗೆ ಮನೆಯಲ್ಲಿ ವಾಸಿಸುತ್ತ ಎರಡನೆಯ ಆಶ್ರಮವನ್ನನುಷ್ಠಾನಮಾಡಿದ ತರುವಾಯ ಸುಕ್ಕು, ನೆರೆತ ಕೂದಲುಗಳು ಬಂದಬಳಿಕ ಮೂರನೆಯದಾದ ವಾನಪ್ರಸ್ಥಾಶ್ರಮವನ್ನು ಆಶ್ರಯಿಸಬೇಕು.

೨. ಮೊಮ್ಮಗನನ್ನು ನೋಡಿ ಗ್ರಾಮ್ಯಾಹಾರಗಳನ್ನು ತ್ಯಜಿಸಿ ಪತ್ನಿಯನ್ನು ಪುತ್ರರಲ್ಲಿರಿಸಿ ಅಥವಾ ಅವಳೊಡನೆ ಕಾಡನ್ನು ಪ್ರವೇಶಿಸಬೇಕು.

೩—೪. ಚರ್ಮ, ನಾರುಬಟ್ಟೆಗಳನ್ನುಟ್ಟವನೂ, ಅಗ್ನಿಸಹಿತನೂ, ಮುನಿಗಳ ಅನ್ನವಾದ ಕಂದಮೂಲಗಳಿಂದ ಜೀವಿಸುವವನೂ, ಜಟಾಧಾರಿಯೂ, ಸಾಯಂಪ್ರಾತಃಕಾಲಗಳಲ್ಲಿ ಸ್ನಾನಮಾಡುವವನೂ, ಗಡ್ಡಮೀಸೆಗಳನ್ನೂ, ಉಗುರು, ರೋಮಗಳನ್ನೂ ಧರಿಸಿದವನಾಗಿ, ಶಾಕ, ಮೂಲ, ಫಲಗಳಿಂದಲಾದರೂ ಪಂಚಯಜ್ಞಗಳನ್ನು ಮಾಡುತ್ತ, ನೀರು, ಗೆಣಸು, ಫಲಗಳ ಭಿಕ್ಷೆಗಳಿಂದ ಭಿಕ್ಷುಕರು, ಅತಿಥಿ ಇವರನ್ನು ಪೂಜಿಸಬೇಕು.

೫. ದಾನಗಳನ್ನು ಪ್ರತಿಗ್ರಹಿಸದವನೂ, ಇಂದ್ರಿಯನಿಗ್ರಹವುಳ್ಳವನೂ, **ವೇದಾಧ್ಯಯನನಿರತನೂ ಆಗಿ ವಿಧಿಯಂತೆ ಅಗ್ನಿಹೋತ್ರವನ್ನಾಚರಿಸಬೇಕು.**

ಮುನ್ಯನ್ನೈಃ ಸ್ವಯಮಾನೀತೈಃ ಪುರೋಡಾಶಾಂಶ್ಚ ನಿರ್ವಪೇತ್ ।
ಸ್ವಯಂಕೃತಂ ಚ ಲವಣಂ ಖಾದೇತ್ಸ್ನೇಹಂ ಫಲೋದ್ಭವಂ ॥ ೬ ॥
ವರ್ಜಯೇಚ್ಛೇಲುಶಿಗ್ರೂ ಚ ಕವಕಂ ಪಲಲಂ ಮಧು ।
ಮುನ್ಯನ್ನಮಾಶ್ವಿನೇ ಮಾಸಿ ತ್ಯಜೇದ್ಯತ್ಪೂರ್ವಸಂಚಿತಂ ॥ ೭ ॥
ಗ್ರಾಮ್ಯಾಣಿ ಫಲಮೂಲಾನಿ ಫಾಲಜಾನ್ನಂ ಚ ಸಂತ್ಯಜೇತ್ ।
ದಂತೋಲೂಖಲಕೋ ವಾಸ್ಯಾದಶ್ಮಕುಟ್ಟೋಽಥವಾ ಭವೇತ್ ॥ ೮ ॥
ಸದ್ಯಃ ಪ್ರಕ್ಷಾಲಕೋ ವಾಸ್ಯಾದಥವಾ ಮಾಸಸಂಚಯೀ ।
ತ್ರಿಷಡ್ದ್ವಾದಶಮಾಸಾನ್ನಫಲಮೂಲಾದಿಸಂಗ್ರಹೀ ॥ ೯ ॥
ನಕ್ತಾಶ್ಯೇಕಾಂತರಾಶೀ ವಾ ಷಷ್ಠಕಾಲಾಶನೋಽಪಿ ವಾ ।
ಚಾಂದ್ರಾಯಣವ್ರತೀ ವಾ ಸ್ಯಾತ್ಪಕ್ಷಭುಗ್ವಾಽಥ ಮಾಸಭುಕ್ ॥ ೧೦ ॥
ವೈಖಾನಸಮತಸ್ಥಸ್ತು ಫಲಮೂಲಾಶನೋಽಪಿ ವಾ ।
ತಪಸಾ ಶೋಷಯೇದ್ದೇಹಂ ಪಿತೄನ್ದೇವಾಂಶ್ಚ ತರ್ಪಯೇತ್ ॥ ೧೧ ॥
ಅಗ್ನಿಮಾತ್ಮನಿ ಚಾಧಾಯ ವಿಚರೇದನಿಕೇತನಃ ।
ಭಿಕ್ಷಯೇತ್ಪ್ರಾಣಯಾತ್ರಾರ್ಥಂ ತಾಪಸಾನ್ವನವಾಸಿನಃ ॥ ೧೨ ॥

---

೬. ತಾನೇ ತಂದ ನವಣೆಗಳಿಂದ ಪುರೋಡಾಶವನ್ನು ಮಾಡಬೇಕು. ತಾನೇ ಮಾಡಿದ ಉಪ್ಪನ್ನೂ, ಫಲದಿಂದಾದ ಎಣ್ಣೆಯನ್ನೂ ಉಪಯೋಗಿಸಬೇಕು.

೭. ಚಳ್ಳೆಕಾಯಿ, ನುಗ್ಗೆಕಾಯಿ, ಶಿಲೀಂಧ್ರ, ಮಾಂಸ, ಜೇನು, ಇವುಗಳನ್ನು ತ್ಯಜಿಸಬೇಕು. ಆಶ್ವಯುಜಮಾಸದಲ್ಲಿ ಹಿಂದೆ ಸಂಗ್ರಹಿಸಿಟ್ಟ ನವಣೆಯನ್ನು ಬಿಡಬೇಕು.

೮–೯. ಗ್ರಾಮ್ಯವಾದ ಫಲಮೂಲಗಳನ್ನೂ, ನೇಗಿಲಿನಿಂದ ಉತ್ತು ಬೆಳೆದ ಭತ್ತ ಮೊದಲಾದುವುಗಳನ್ನೂ ತ್ಯಜಿಸಬೇಕು. ಹಲ್ಲೆ ಒರಳಾಗುಳ್ಳವನೂ, ಕಲ್ಲೆ ಒನಕೆಯಾಗುಳ್ಳವನೂ ಆಗಬೇಕು. ಕೂಡಲೆ ಮುಗಿಯುವ ಆಹಾರವುಳ್ಳವನಾಗಲಿ, ಒಂದು, ಮೂರು, ಆರು ಅಥವಾ ಹನ್ನೆರಡುತಿಂಗಳ ಅನ್ನ, ಫಲ, ಕಂದಮೂಲಗಳನ್ನು ಸಂಗ್ರಹಿಸುವವನಾಗಲಿ ಆಗಬೇಕು.

೧೦. ರಾತ್ರಿ ಮಾತ್ರ ಭುಂಜಿಸುವವನಾಗಲಿ, ದಿನ ಬಿಟ್ಟು ದಿನ ಊಟಮಾಡುವವನಾಗಲಿ, ಆರನೆಯ ಯಾಮದಲ್ಲಿ ಭುಂಜಿಸುವವನಾಗಲಿ, ಚಾಂದ್ರಾಯಣವ್ರತವುಳ್ಳವನಾಗಲಿ, ಪಕ್ಷ ಅಥವಾ ಮಾಸಗಳಲ್ಲಿ ಭುಂಜಿಸುವವನಾಗಲಿ ಆಗಬೇಕು.

೧೧. ವೈಖಾನಸನಾಗಿ ಫಲಮೂಲಗಳನ್ನು ತಿನ್ನುತ್ತ ತಪಸ್ಸಿನಿಂದ ಶರೀರವನ್ನು ಒಣಗಿಸುತ್ತ ದೇವಪಿತೃಗಳಿಗೆ ತರ್ಪಣಮಾಡಬೇಕು.

೧೨. ಅಗ್ನಿಯನ್ನು ತನ್ನಲ್ಲಿರಿಸಿಕೊಂಡು ಮನೆಯಿಲ್ಲದವನಾಗಿ ಬದುಕುವುದಕ್ಕೋಸ್ಕರ ವನವಾಸಿಗಳಾದ ಮುನಿಗಳಲ್ಲಿ ಭಿಕ್ಷೆಬೇಡಬೇಕು.

ಗ್ರಾಮಾದಾನೀಯ ವಾಶ್ನೀಯಾದಷ್ಟೌ ಗ್ರಾಸಾನ್ವಸನ್ವನೇ ।
ಇತ್ಥಂ ವನಾಶ್ರಮೀ ವಿಪ್ರೋ ಬ್ರಹ್ಮಲೋಕೇ ಮಹೀಯತೇ ॥ ೧೩ ॥
ಅತಿವಾಹ್ಯಾಯುಷೋ ಭಾಗಂ ತೃತೀಯಮತಿ ಕಾನನೇ ।
ಆಯುಷಸ್ತು ತುರೀಯಾಂಶೇ ತ್ಯಕ್ತ್ವಾ ಸಂಗಾನ್ಪರಿವ್ರಜೇತ್ ॥ ೧೪ ॥
ಋಣತ್ರಯಮಸಂಶೋಧ್ಯ ತ್ವನುತ್ಪಾದ್ಯ ಸುತಾನಪಿ ।
ತಥಾ ಯಜ್ಞಾನನಿಷ್ಟ್ವಾಚ ಮೋಕ್ಷಮಿಚ್ಛನ್ಪ್ರಜತ್ಯಧಃ ॥ ೧೫ ॥
ಮನಾಗಪಿ ನ ಭೂತಾನಾಂ ಯಸ್ಮಾದುತ್ಪದ್ಯತೇ ಭಯಂ ।
ಸರ್ವಭೂತಾನಿ ತಸ್ಯೇಹ ಪ್ರಯಚ್ಛಂತ್ಯಭಯಂ ಸದಾ ॥ ೧೬ ॥
ಏಕ ಏವ ಚರೇನ್ನಿತ್ಯಮನಗ್ನಿರನಿಕೇತನಃ ।
ಸಿದ್ಧ್ಯರ್ಥಮಸಹಾಯಃ ಸ್ಯಾದ್ಗ್ರಾಮಮನ್ನಾರ್ಥಮಾಶ್ರಯೇತ್ ॥ ೧೭ ॥
ಜೀವಿತಂ ಮರಣಂ ವಾಽಥ ನಾಭಿಕಾಂಕ್ಷೇತ್ಕ್ವಚಿದ್ಯತಿಃ ।
ಕಾಲಮೇವ ಪ್ರತೀಕ್ಷೇತ ನಿರ್ದೇಶಂ ಭೃತಕೋ ಯಥಾ ॥ ೧೮ ॥
ಸರ್ವತ್ರ ಮಮತಾಶೂನ್ಯಃ ಸರ್ವತ್ರ ಮಮತಾಯುತಃ ।
ವೃಕ್ಷಮೂಲನಿಕೇತಶ್ಚ ಮುಮುಕ್ಷುರಿಹ ಶಸ್ಯತೇ ॥ ೧೯ ॥

---

೧೩. ವನದಲ್ಲಿ ವಾಸಿಸುತ್ತ ಹಳ್ಳಿಯಿಂದ ಧಾನ್ಯವನ್ನು ತಂದು ಎಂಟು ಕಬಳಗಳನ್ನು ಮಾತ್ರ ತಿನ್ನಬೇಕು. ಹೀಗೆ ವಾನಪ್ರಸ್ಥನಾದ ಬ್ರಾಹ್ಮಣನು ಬ್ರಹ್ಮಲೋಕದಲ್ಲಿ ಪೂಜ್ಯನಾಗುವನು.

೧೪. ಹೀಗೆ ಕಾಡಿನಲ್ಲಿ ಆಯುಸ್ಸಿನ ಮೂರನೆಯ ಭಾಗದ ಆಯುಷ್ಯವನ್ನು ಕಳೆದು ನಾಲ್ಕನೆಯ ಭಾಗದಲ್ಲಿ ಸಂಗವನ್ನು ತ್ಯಜಿಸಿ ಸನ್ನ್ಯಾಸಿಯಾಗಬೇಕು.

೧೫. ಋಣತ್ರಯವನ್ನು ಪರಿಹರಿಸಿಕೊಳ್ಳದೆ, ಪುತ್ರರನ್ನು ಪಡೆಯದೆ, ಯಜ್ಞಗಳನ್ನೂ ಮಾಡದೆ ಮೋಕ್ಷವನ್ನು ಬಯಸುವವನು ಪತಿತನಾಗುವನು.

೧೬. ಯಾವನಿಂದ ಪ್ರಾಣಿಗಳಿಗೆ ಸ್ವಲ್ಪವೂ ಭಯವುಂಟಾಗುವುದಿಲ್ಲವೊ, ಅವನಿಗೆ ಸಕಲ ಪ್ರಾಣಿಗಳೂ ಯಾವಾಗಲೂ ಅಭಯವನ್ನು ಕೊಡುವುವು.

೧೭. ಮೋಕ್ಷಕ್ಕಾಗಿ ಸಹಾಯಕರೂ, ಅಗ್ನಿಯೂ, ಮನೆಯೂ ಇಲ್ಲದವನಾಗಿ ಒಬ್ಬನೇ ಸಂಚರಿಸಬೇಕು. ಅನ್ನಕ್ಕಾಗಿ ಗ್ರಾಮವನ್ನಾಶ್ರಯಿಸಬೇಕು.

೧೮. ಯತಿಯು ಬದುಕನ್ನಾಗಲಿ, ಮರಣವನ್ನಾಗಲಿ ಬಯಸಬಾರದು. ಕೆಲಸಮಾಡುವವನು ಸಂಬಳದ ಸಮಯವನ್ನು ನಿರೀಕ್ಷಿಸುವಂತೆ ಕಾಲವನ್ನು ನಿರೀಕ್ಷಿಸಬೇಕು.

೧೯. ಈ ಲೋಕದಲ್ಲಿ ಎಲ್ಲ ವಸ್ತುಗಳಲ್ಲಿ ಮಮತೆಯಿಲ್ಲದವನೂ, ಸಮಬುದ್ಧಿಯುಳ್ಳವನೂ, ವೃಕ್ಷಮೂಲವಾಸಿಯೂ ಆದ ಮೋಕ್ಷಾರ್ಥಿಯು ಉತ್ತಮನು.

ಧ್ಯಾನಂ ಶೌಚಂ ತಥಾ ಭಿಕ್ಷಾ ನಿತ್ಯಮೇಕಾಂತಶೀಲತಾ ।
ಯತೇಶ್ಚತ್ವಾರಿ ಕರ್ಮಾಣಿ ಪಂಚಮಂ ನೋಪಪದ್ಯತೇ ॥ ೨೦ ॥
ವಾರ್ಷಿಕಾಂಶ್ಚತುರೋ ಮಾಸಾನ್ನಿಹರೇನ್ನ ಯತಿಃ ಕ್ವಚಿತ್ ।
ಬೀಜಾಂಕುರಾಣಾಂ ಜಂತೂನಾಂ ಹಿಂಸಾ ತತ್ರ ಯತೋ ಭವೇತ್ ॥೨೧॥
ಗಚ್ಛೇತ್ಪರಿಹರನ್ಜಂತೂನ್ಪಿಬೇತ್ತಂ ವಸ್ತ್ರಶೋಧಿತಂ ।
ವಾಚಂ ವದೇದನುದ್ವೇಗಾಂ ನ ಕ್ರುಧ್ಯೇತ್ಕೇನಚಿತ್ಕ್ವಚಿತ್ ॥ ೨೨ ॥
ಚರೇದಾತ್ಮಸಹಾಯಶ್ಚ ನಿರಪೇಕ್ಷೋ ನಿರಾಶ್ರಯಃ ।
ನಿತ್ಯಮಧ್ಯಾತ್ಮನಿರತೋ ನೀಚಕೇಶನಖೋ ವಶೀ ॥ ೨೩ ॥
ಕುಸುಂಭಂ ವಾಸದಂಡಾಢ್ಯೋ ಭಿಕ್ಷಾಶೀ ಖ್ಯಾತಿವರ್ಜಿತಃ ।
ಅಲಾಬುದಾರುಮೃದ್ವೇಣು ಪಾತ್ರಂ ಶಸ್ತಂ ನ ಪಂಚಮಂ ॥ ೨೪ ॥
ನ ಗ್ರಾಹ್ಯಂ ತೈಜಸಾಂ ಪಾತ್ರಂ ಭಿಕ್ಷುಕೇಣ ಕದಾಚನ ।
ವರಾಟಕೇ ಸಂಗೃಹೀತೇ ತತ್ರ ತತ್ರ ದಿನೇ ದಿನೇ ॥ ೨೫ ॥
ಗೋಸಹಸ್ರವಧಂ ಪಾಪಂ ಶ್ರುತಿರೇಷಾ ಸನಾತನೀ ।
ಹೃದಿ ಸನ್ನೇಹಭಾವೇನ ಚೇದ್ರಕ್ಷೇತ್ಸ್ತ್ರಿಯಮೇಕದಾ ॥ ೨೬ ॥

---

೨೦. ಯತಿಗೆ ಧ್ಯಾನ, ಶೌಚ, ಭಿಕ್ಷಾಟನ, ಏಕಾಂತವಾಸ ಈ ನಾಲ್ಕೇ ಕರ್ಮಗಳು ವಿಹಿತವಾಗಿರುವುವು. ಐದನೆಯದು ಯಾವುದೂ ಇರುವುದಿಲ್ಲ.

೨೧. ಮಳೆಗಾಲದ ನಾಲ್ಕುತಿಂಗಳುಗಳಲ್ಲಿ ಬೀಜಾಂಕುರಗಳೂ, ಜಂತುಗಳೂ ಹಾಳಾಗುವುದರಿಂದ ಯತಿಯು ಎಲ್ಲಿಯೂ ಸಂಚರಿಸಬಾರದು.

೨೨. ಪ್ರಾಣಿಗಳಿಗೆ ಹಿಂಸೆಯಾಗದಂತೆ ಸಂಚರಿಸಬೇಕು. ವಸ್ತ್ರದಿಂದ ಶೋಧಿಸಿದ ನೀರನ್ನು ಕುಡಿಯಬೇಕು. ವ್ಯಥೆಯನ್ನುಂಟುಮಾಡದ ಮಾತನ್ನಾಡಬೇಕು. ಯಾವ ಕಾರಣದಿಂದಲೂ ಎಲ್ಲಿಯೂ ಕೋಪಿಸಿಕೊಳ್ಳಕೂಡದು.

೨೩. ಆತ್ಮಸಹಾಯಮಾತ್ರವುಳ್ಳವನೂ, ಅಪೇಕ್ಷೆಯಿಲ್ಲದವನೂ, ಆಶ್ರಯರಹಿತನೂ, ಪರಮಾತ್ಮನಿರತನೂ, ಸಂಸ್ಕರಿಸದ ಕೇಶ ನಖಗಳುಳ್ಳವನೂ, ಸ್ವಾಧೀನನೂ ಆಗಿ ಸಂಚರಿಸಬೇಕು.

೨೪. ಅಲ್ಲದೆ, ಯತಿಯಾದವನು ಕುಸುಂಭ (ಕಾವಿ) ವಸ್ತ್ರಧಾರಿಯೂ, ದಂಡವನ್ನು ಹಿಡಿದವನೂ, ಭಿಕ್ಷಾನ್ನವನ್ನು ತಿನ್ನುವವನೂ, ಪ್ರಖ್ಯಾತಿಯನ್ನು ಬಯಸದವನೂ ಆಗಬೇಕು. ಅವನಿಗೆ ಸೋರೆ, ಮರ, ಮಣ್ಣು, ಬಿದಿರಿನ ಪಾತ್ರೆಗಳು ಶ್ರೇಷ್ಠವಾದುವು. ಐದನೆಯದಾವುದೂ ಉಚಿತವಲ್ಲ.

೨೫–೨೬. ಸನ್ಯಾಸಿಯು ಯಾವಾಗಲೂ ಲೋಹಪಾತ್ರೆಯನ್ನು ತೆಗೆದುಕೊಳ್ಳಕೂಡದು. ಕವಡೆಯ ಪಾತ್ರೆಯನ್ನು ತೆಗೆದುಕೊಂಡರೆ ಆಯಾ ದಿನ ಸಾವಿರ ಗೋವುಗಳನ್ನು ಕೊಂದ ಪಾಪವು ಸಂಭವಿಸುವುದು ಎಂದು ಸನಾತನ

ಕೋಟಿದ್ವಯಂ ಬ್ರಹ್ಮಕಲ್ಪಂ ಕುಂಭೀಪಾಕೇ ನ ಸಂಶಯಃ ।
ಏಕಕಾಲಂ ಚರೇದ್ಭೈಕ್ಷ್ಯಂ ನ ಕುರ್ಯಾತ್ತತ್ರ ವಿಸ್ತರಂ ॥ ೨೭ ॥
ವಿಧೂಮೇ ಸನ್ನಮುಸಲೇ ವ್ಯಂಗಾರೇ ಭುಕ್ತವಜ್ಜನೇ ।
ವೃತ್ತೇ ಶರಾವಸಂಪಾತೇ ಭಿಕ್ಷಾಂ ನಿತ್ಯಂ ಚರೇದ್ಯತಿಃ ॥ ೨೮ ॥
ಅಲ್ಪಾಹಾರೋ ರಹಃ ಸ್ಥಾಯೀಷ್ವಿಂದ್ರಿಯಾರ್ಥೇಷ್ವಲೋಲುಪಃ ।
ರಾಗದ್ವೇಷವಿನಿರ್ಮುಕ್ತೋ ಭಿಕ್ಷುರ್ಮೋಕ್ಷಾಯ ಕಲ್ಪತೇ ॥ ೨೯ ॥
ಆಶ್ರಮೇ ತು ಯತಿರ್ಯಸ್ಯ ಮುಹೂರ್ತಮಪಿ ವಿಶ್ರಮೇತ್।
ಕಿಂ ತಸ್ಯಾಽನೇಕತಂತ್ರೇಣ ಕೃತಕೃತ್ಯಃ ಸ ಜಾಯತೇ ॥ ೩೦ ॥
ಸಂಚಿತಂ ಯದ್ಗೃಹಸ್ಥೇನ ಪಾಪಮಾಮರಣಾಂತಿಕಂ ।
ದಿಧಕ್ಷ್ಯತಿ ಹಿ ತತ್ಸರ್ವಮೇಕರಾತ್ರೋಷಿತೋ ಯತಿಃ ॥ ೩೧ ॥
ದೃಷ್ಟ್ವಾ ಜರಾಽಭಿಭವನಮಸಹ್ಯಂ ರೋಗಪೀಡಿತಂ ।
ದೇಹತ್ಯಾಗಂ ಪುನರ್ಗರ್ಭಂ ಗರ್ಭಕ್ಲೇಶಂ ಚ ದಾರುಣಂ ॥ ೩೨ ॥
ನಾನಾಯೋನಿನಿವಾಸಂ ಚ ವಿಯೋಗಂ ಚ ಪ್ರಿಯೈಃ ಸಹಃ ।
ಅಪ್ರಿಯೈಃ ಸಹ ಸಂಯೋಗಮಧರ್ಮಾದ್ದುಃಖಸಂಭವಂ ॥ ೩೩ ॥

---

ಶ್ರುತಿಯು ಸಾರುತ್ತಿರುವುದು. ಮನಸ್ಸಿನಲ್ಲಿ ಕಾಮದಿಂದ ಒಂದುಸಾರಿಯೂ ಸ್ತ್ರೀಯನ್ನು ಕಾಣಬಾರದು.

೨೭. ಹಾಗೆ ಕಂಡರೆ ಎರಡುಕೋಟಿ ಬ್ರಹ್ಮಕಲ್ಪಗಳಕಾಲ ಕುಂಭೀಪಾಕ ನರಕದಲ್ಲಿ ವಾಸಿಸುವನು. ಭಿಕ್ಷೆಯನ್ನು ಒಂದುಹೊತ್ತುಮಾತ್ರ ಆಚರಿಸಬೇಕು. ಅದನ್ನು ವಿಸ್ತರಿಸಬಾರದು.

೨೮. ಗೃಹಸ್ಥನ ಮನೆಯು ಧೂಮರಹಿತವೂ, ಒನಕೆಯ ಕಾರ್ಯವು ಮುಗಿದಿರುವುದೂ, ಕೆಂಡವಿಲ್ಲುದುದೂ, ಜನರು ಭೋಜನಮಾಡಿರುವುದೂ ಆದಮೇಲೆ ಯತಿಯು ನಿತ್ಯವೂ ಭಿಕ್ಷಾಟನೆ ಮಾಡಬೇಕು.

೨೯. ಸ್ವಲ್ಪಾಹಾರವುಳ್ಳವನೂ, ರಹಸ್ಯದಲ್ಲಿರುವವನೂ, ಜಿತೇಂದ್ರಿಯನೂ, ರಾಗದ್ವೇಷವಿಲ್ಲದವನೂ ಆದ ಸನ್ಯಾಸಿಯು ಮೋಕ್ಷಾರ್ಹನಾಗುವನು.

೩೦. ಯಾವನ ಆಶ್ರಮದಲ್ಲಿ ಯತಿಯು ಒಂದು ಮುಹೂರ್ತಕಾಲ ವಿಶ್ರಮಿಸಿಕೊಳ್ಳುವನೊ, ಅವನಿಗೆ ಶಾಸ್ತ್ರೋಕ್ತವಿಧಿಯಿಂದೇನುಪ್ರಯೋಜನ? ಅವನು ಧನ್ಯನೇ ಆಗುವನು.

೩೧. ಗೃಹಸ್ಥನು ಸಾಯುವವರೆಗೆ ಸಂಚಿತವಾದ ಪಾಪವು ಅವನ ಮನೆಯಲ್ಲಿ ಒಂದು ದಿನ ವಾಸಿಸಿದ ಯತಿಯು ನಿವಾರಿಸುವನು.

೩೨–೩೩. ಮಾನವನು ಜರಾಕ್ರಮಣ, ಅಸಹ್ಯರೋಗಪೀಡೆ, ದೇಹತ್ಯಾಗ, ಮರಳಿ ಗರ್ಭ, ದಾರುಣ ಗರ್ಭದುಃಖ, ಅನೇಕ ಯೋನಿಗಳಲ್ಲಿ ವಾಸ, ಪ್ರಿಯಾ

ಪುನರ್ನಿರಯಸಂವಾಸಂ ನಾನಾನರಕಯಾತನಾಃ ।
ಕರ್ಮದೋಷಸಮುದ್ಭೂತಾ ನೃಣಾಂ ಗತಿರನೇಕಧಾ ॥ ೩೪ ॥
ದೇಹೇಷ್ವನಿತ್ಯತಾಂ ದೃಷ್ಟ್ವಾ ನಿತ್ಯತಾಂ ಪರಮಾತ್ಮನಃ ।
ಕುರ್ವೀತ ಮುಕ್ತಯೇ ಯೋಗಂ ಯತ್ರಯತ್ರಾಶ್ರಮೇ ರತಃ ॥ ೩೫ ॥
ಕರಪಾತ್ರೀತಿ ವಿಖ್ಯಾತಾ ಭಿಕ್ಷಾಪಾತ್ರವಿವರ್ಜಿತಾ ।
ತೇಷಾಂ ಶತಗುಣಂ ಪುಣ್ಯಂ ಭವತ್ಯೇವ ದಿನೇದಿನೇ ॥ ೩೬ ॥
ಆಶ್ರಮಾಂಶ್ಚತುರಸ್ತ್ವೇವಂ ಕ್ರಮಾದಾಸೇವ್ಯ ಪಂಡಿತಃ ।
ನಿರ್ದ್ವಂದ್ವಸ್ತ್ಯಕ್ತಸಂಗಶ್ಚ ಬ್ರಹ್ಮಭೂಯಾಯ ಕಲ್ಪತೇ ॥ ೩೭ ॥
ಅಸಂಯತಃ ಕುಬುದ್ಧೀನಾಮಾತ್ಮಾ ಬಂಧಾಯ ಕಲ್ಪತೇ ।
ಧೀಮದ್ಭಿಃ ಸಂಯತಃ ಸೋಽಪಿ ಪದಂ ದದ್ಯಾದನಾಮಯಂ ॥ ೩೮ ॥
ಶ್ರುತಿಸ್ಮೃತಿಪುರಾಣಂಚ ವಿದ್ಯೋಪನಿಷದಸ್ತಥಾ ।
ಶ್ಲೋಕಾಃ ಸೂತ್ರಾಣಿ ಭಾಷ್ಯಾಣಿ ಯಚ್ಚಾಽನ್ಯದ್ವಾಙ್ಮಯಂ ಕ್ವಚಿತ್ ॥ ೩೯ ॥
ವೇದಾಽನುವಚನಂ ಜ್ಞಾತ್ವಾ ಬ್ರಹ್ಮಚರ್ಯಂ ತಪೋ ದಮಃ ।
ಶ್ರದ್ಧೋಪವಾಸಃ ಸ್ವಾತಂತ್ರ್ಯಮಾತ್ಮನೋ ಜ್ಞಾನಹೇತವಃ ॥ ೪೦ ॥
ಸಹಿ ಸರ್ವೈರ್ವಿಜಿಜ್ಞಾಸ್ಯ ಆತ್ಮೈವಾಶ್ರಮವರ್ತಿಭಿಃ ।
ಶ್ರೋತವ್ಯಸ್ತ್ವಥ ಮಂತವ್ಯೋ ದ್ರಷ್ಟವ್ಯಶ್ಚ ಪ್ರಯತ್ನತಃ ॥ ೪೧ ॥

---

ವಿಯೋಗ, ಅಹಿತಸಹವಾಸ, ಅಧರ್ಮದಿಂದುಂಟಾದ ದುಃಖ, ಮರಳಿ ನರಕವಾಸ, ಅನೇಕ ನರಕಯಾತನೆ ಇವೇ ಮೊದಲಾದ ಕರ್ಮದೋಷದಿಂದುಂಟಾದ ಕಷ್ಟಗಳನ್ನೂ, ನಶ್ವರದೇಹವನ್ನೂ, ಪರಮಾತ್ಮನು ನಿತ್ಯನಾಗಿರುವುದನ್ನೂ ನೋಡಿ ಯಾವುದಾದರೂ ಆಶ್ರಮದಲ್ಲಿದ್ದು ಮುಕ್ತಿಗಾಗಿ ಯತ್ನಿಸಬೇಕು.

೩೬. ಭಿಕ್ಷಾಪಾತ್ರವಿಲ್ಲದೆ ಕೈಯನ್ನೆ ಪಾತ್ರೆಯಾಗಿ ಮಾಡಿಕೊಂಡವರಿಗೆ ಪ್ರತಿದಿನವೂ ನೂರರಷ್ಟು ಪುಣ್ಯವುಂಟಾಗುವುದು.

೩೭. ಪಂಡಿತನು ಹೀಗೆ ಕ್ರಮವಾಗಿ ನಾಲ್ಕು ಆಶ್ರಮಗಳನ್ನು ಸೇವಿಸಿ ರಾಗದ್ವೇಷವಿಲ್ಲದವನೂ, ಸಂಗರಹಿತನೂ ಆದರೆ ಬ್ರಹ್ಮತ್ವವನ್ನು ಹೊಂದುವನು.

೩೮. ನಿಗ್ರಹಿಸಲ್ಪಡದ ದುರ್ಬುದ್ಧಿಗಳ ಆತ್ಮಗಳು ಬಂಧನಕ್ಕೆ ಕಾರಣವಾಗುವುದು. ಜಿತೇಂದ್ರಿಯರಾದ ವಿದ್ವಾಂಸರಿಗೆ ಆ ಆತ್ಮವೇ ಮೋಕ್ಷಪದವಿಯನ್ನೀಯುವುದು.

೩೯–೪೧. ಶ್ರುತಿ, ಸ್ಮೃತಿ, ಪುರಾಣ, ವಿದ್ಯಾ, ಉಪನಿಷತ್ತು, ಶ್ಲೋಕ, ಸೂತ್ರ, ಭಾಷ್ಯ, ವೇದವ್ಯಾಖ್ಯಾನ ಇನ್ನೂ ಇತರ ವಾಙ್ಮಯಗಳೂ, ಬ್ರಹ್ಮಚರ್ಯ, ತಪಸ್ಸು, ಇಂದ್ರಿಯನಿಗ್ರಹ, ಶ್ರದ್ಧೆ, ಉಪವಾಸ, ಸ್ವಾತಂತ್ರ್ಯ ಇವುಗಳೂ ಆತ್ಮಜ್ಞಾನಕ್ಕೆ ಕಾರಣಗಳು. ಸಮಸ್ತಾಶ್ರಮಿಗಳೂ ಆತ್ಮನನ್ನು ತಿಳಿಯಬೇಕು, ಕೇಳಬೇಕು, ಮನನಮಾಡಬೇಕು, ನೋಡಬೇಕು.

ಆತ್ಮಜ್ಞಾನೇನ ಮುಕ್ತಿಃ ಸ್ಯಾತ್ತಚ್ಚ ಯೋಗಾದೃತೇ ನ ಹಿ ।
ಸ ಚ ಯೋಗಶ್ಚಿರಂ ಕಾಲಮಭ್ಯಾಸಾದೇವ ಸಿದ್ಧ್ಯತಿ ॥ ೪೨ ॥
ನಾಽರಣ್ಯಸಂಶ್ರಯಾದ್ಯೋಗೋ ನ ನಾನಾಗ್ರಂಥಚಿಂತನಾತ್ ।
ನ ದಾನೈರ್ನ ವ್ರತೈರ್ವಾಽಪಿ ನ ತಪೋಭಿರ್ನವಾ ಮಖೈಃ ॥ ೪೩ ॥
ನ ಚ ಪದ್ಮಾಸನಾದ್ಯೋಗೋ ನವಾ ಘ್ರಾಣಾಗ್ರವೀಕ್ಷಣಾತ್ ।
ನ ಶೌಚೇನ ನ ಮೌನೇನ ನ ಮಂತ್ರಾರಾಧನೈರಪಿ ॥ ೪೪ ॥
ಅಭಿಯೋಗಾತ್ಸದಾಽಭ್ಯಾಸಾತ್ತತ್ರೈವ ಚ ವಿನಿಶ್ಚಯಾತ್ ।
ಪುನಃ ಪುನರನಿರ್ವೇದಾತ್ಸಿದ್ಧ್ಯೇದ್ಯೋಗೋ ನ ಚಾಽನ್ಯಥಾ ॥ ೪೫ ॥
ಆತ್ಮಕ್ರೀಡಸ್ಯ ಸತತಂ ಸದಾತ್ಮಮಿಥುನಸ್ಯ ಚ ।
ಆತ್ಮನ್ಯೇವ ಸುತೃಪ್ತಸ್ಯ ಯೋಗಸಿದ್ಧಿರ್ನ ದೂರತಃ ॥ ೪೬ ॥
ಅತ್ರಾತ್ಮವ್ಯತಿರೇಕೇಣ ದ್ವಿತೀಯಂ ಯೋ ನ ಪಶ್ಯತಿ ।
ಆತ್ಮಾರಾಮಃ ಸ ಯೋಗೀಂದ್ರೋ ಬ್ರಹ್ಮೀಭೂತೋ ಭವೇದಿಹ ॥ ೪೭ ॥
ಸಂಯೋಗಸ್ತ್ವಾತ್ಮಮನಸೋರ್ಯೋಗ ಇತ್ಯುಚ್ಯತೇ ಬುಧೈಃ ।
ಪ್ರಾಣಾಽಪಾನಸಮಾಯೋಗೋ ಯೋಗ ಇತ್ಯಪಿ ಕೈಶ್ಚನ ॥ ೪೮ ॥

---

೪೨. ಆತ್ಮಜ್ಞಾನದಿಂದ ಮುಕ್ತಿಯುಂಟಾಗುವುದು. ಆ ಜ್ಞಾನವು ಯೋಗವಿಲ್ಲದೆ ಉಂಟಾಗುವುದಿಲ್ಲ. ಬಹುಕಾಲದ ಅಭ್ಯಾಸದಿಂದಲೇ ಸಿದ್ಧಿಸುವುದು.

೪೩-೪೪. ಅರಣ್ಯವನ್ನು ಆಶ್ರಯಿಸುವುದರಿಂದಲೂ, ಅನೇಕ ಗ್ರಂಥಗಳನ್ನು ಚಿಂತಿಸುವುದರಿಂದಲೂ, ದಾನ, ವ್ರತ, ತಪಸ್ಸು, ಯಜ್ಞಗಳಿಂದಲೂ ಪದ್ಮಾಸನದಿಂದಲೂ, ಮೂಗಿನ ತುದಿಯನ್ನು ನೋಡುವುದರಿಂದಲೂ, ಶೌಚ, ಮೌನ, ಮಂತ್ರ, ಪೂಜೆಗಳಿಂದಲೂ ಯೋಗವು ಸಿದ್ಧಿಸುವುದಿಲ್ಲ.

೪೫. ಯೋಗವು ಆಸಕ್ತಿ, ಸತತಾಭ್ಯಾಸ, ನಿಶ್ಚಯಜ್ಞಾನ, ಶ್ರದ್ಧೆ ಇವುಗಳಿಂದಲೇ ಸಿದ್ಧಿಸುವುದು. ಬೇರೆ ಕ್ರಮದಿಂದ ಸಿದ್ಧಿಸುವುದಿಲ್ಲ.

೪೬. ಆತ್ಮಾರಾಮನಿಗೂ, ಆತ್ಮೈಕ್ಯಜ್ಞಾನವುಳ್ಳವನಿಗೂ, ಆತ್ಮತೃಪ್ತನಿಗೂ ಬೇಗನೆ ಯೋಗವು ಸಿದ್ಧಿಸುವುದು.

೪೭. ಈ ಲೋಕದಲ್ಲಿ ಬ್ರಹ್ಮನಿಗಿಂತಲೂ ಬೇರೆಯಾದ ಎರಡನೆಯ ವಸ್ತುವನ್ನು ಕಾಣದಿರುವ ಆತ್ಮಾರಾಮನಾದ ಯೋಗೀಂದ್ರನು ಬ್ರಹ್ಮತ್ವವನ್ನು ಹೊಂದುವನು.

೪೮. ಕೆಲವು ಮಂದಿ ವಿದ್ವಾಂಸರು ಆತ್ಮಮನಸ್ಸುಗಳ ಸಂಯೋಗವನ್ನು ಯೋಗವೆನ್ನುವರು. ಇನ್ನು ಕೆಲವರು ಪ್ರಾಣಾಪಾನ ಸಂಬಂಧವನ್ನು ಯೋಗವೆಂದು ಹೇಳುವರು.

ವಿಷಯೇಂದ್ರಿಯಸಂಯೋಗೋ ಯೋಗ ಇತ್ಯಪ್ಯಪಂಡಿತೈಃ ।
ವಿಷಯಾಸಕ್ತಚಿತ್ತಾನಾಂ ಜ್ಞಾನಂ ಮೋಕ್ಷಶ್ಚ ದೂರತಃ ॥ ೪೯ ॥
ದುರ್ನಿವಾರಾಮನೋವೃತ್ತಿರ್ಯಾವತ್ತಾನ್ನ ನಿವರ್ತತೇ ।
ಕಿಂ ವದಂತ್ಯಪಿ ಯೋಗಸ್ಯ ತಾವನ್ನೇದೀಯಸೀ ಕುತಃ ॥ ೫೦ ॥
ವೃತ್ತಿಹೀನಂ ಮನಃ ಕೃತ್ವಾ ಕ್ಷೇತ್ರಜ್ಞೇ ಪರಮಾತ್ಮನಿ ।
ಏಕೀಕೃತ್ಯ ವಿಮುಚ್ಯೇತ ಯೋಗಯುಕ್ತಃ ಸ ಉಚ್ಯತೇ ॥ ೫೧ ॥
ಬಹಿರ್ಮುಖಾನಿ ಸರ್ವಾಣಿ ಕೃತ್ವಾ ಖಾನ್ಯಂತರಾಣಿ ವೈ ।
ಮನಸ್ಯೇವೇಂದ್ರಿಯಗ್ರಾಮಂ ಮನಶ್ಚಾತ್ಮನಿ ಯೋಜಯೇತ್ ॥ ೫೨ ॥
ಸರ್ವಭಾವವಿನಿರ್ಮುಕ್ತಂ ಕ್ಷೇತ್ರಜ್ಞಂ ಬ್ರಹ್ಮಣಿ ನ್ಯಸೇತ್ ।
ಏತದ್ಧ್ಯಾನಂ ಚ ಯೋಗಶ್ಚ ಶೇಷೋಽನ್ಯೋ ಗ್ರಂಥವಿಸ್ತರಃ ॥ ೫೩ ॥
ಯನ್ನಾಸ್ತಿ ಸರ್ವಲೋಕೇಷು ತದಸ್ತೀತಿ ವಿರುಧ್ಯತೇ ।
ಕಥ್ಯಮಾನಂ ತದನ್ಯಸ್ಯ ಹೃದಯೇ ನಾಽವತಿಷ್ಠತೇ ॥ ೫೪ ॥
ಸ್ವ ಸಂವೇದ್ಯಂ ಹಿ ತದ್ಬ್ರಹ್ಮ ಕುಮಾರೀಸ್ತ್ರೀಸುಖಂ ಯಥಾ ।
ಅಯೋಗೀ ನೈವ ತದ್ವೇತ್ತಿ ಜಾತ್ಯಂಧ ಇವ ವರ್ತಿಕಾಂ ॥ ೫೫ ॥

---

೪೯. ಮೂಢರು ವಿಷಯೇಂದ್ರಿಯ ಸಂಯೋಗವನ್ನು ಯೋಗವೆನ್ನುವರು. ವಿಷಯಾಸಕ್ತವಾದ ಮನಸ್ಸುಳ್ಳವರಿಗೆ ಜ್ಞಾನಮೋಕ್ಷಗಳು ದೂರವಾಗುವುವು.

೫೦. ತಡೆಯಲಾರದ ಮನೋವೃತ್ತಿಯು ನಿವೃತ್ತಿಯಾಗುವವರೆಗೆ ಯೋಗದ ಸಮಾಚಾರವು ಹೇಗೆತಾನೆ ಹತ್ತಿರಬರುವುದು.

೫೧. ವೃತ್ತಿಯಿಲ್ಲದ ಮನಸ್ಸನ್ನು ಕ್ಷೇತ್ರಜ್ಞನಾದ ಪರಮಾತ್ಮನಲ್ಲಿ ಏಕೀಕರಿಸಿದವನು ಮುಕ್ತನಾಗುವನು. ಅವನು ಯೋಗಯುಕ್ತನೆನ್ನಿಸಿಕೊಳ್ಳುವನು.

೫೨. ಬಹಿರ್ಮುಖಗಳಾಗಿರುವ ಸಕಲೇಂದ್ರಿಯಗಳನ್ನು ಅಂತರ್ಮುಖಗಳನ್ನಾಗಿಸಿ ಮನಸ್ಸಿನಲ್ಲಿಯೂ, ಮನಸ್ಸನ್ನು ಆತ್ಮನಲ್ಲಿಯೂ ಸೇರಿಸಬೇಕು.

೫೩. ಸಾಕ್ಷಿತ್ವಾದಿ ಸಕಲ ಭಾವಮುಕ್ತನಾದ ಜೀವಾತ್ಮನನ್ನು ಪರಮಾತ್ಮನಲ್ಲಿಡುವುದೇ ಧ್ಯಾನಯೋಗಗಳು. ಉಳಿದುದೆಲ್ಲ ಕೇವಲ ಗ್ರಂಥವಿಸ್ತಾರವೇ ಸರಿ.

೫೪. ಸಮಸ್ತಲೋಕಗಳಲ್ಲಿಲ್ಲದಿರುವುದು ಇದೆಯೆಂದರೆ ವಿರುದ್ಧವಾಗುವುದು. ಅದನ್ನು ಇತರರಿಗೆ ಹೇಳಿದರೂ ಅದು ಅವರ ಮನಸ್ಸಿನಲ್ಲಿ ನಿಲ್ಲುವುದಿಲ್ಲ.

೫೫. ಬ್ರಹ್ಮನು ಯೋಗಗಳಿಂದ ತಾನಾಗಿಯೇ ತಿಳಿಯಲರ್ಹನು. ಯೋಗಿಅಲ್ಲದವನು ಕುಮಾರಿಯು ಸ್ತ್ರೀಸೌಖ್ಯವನ್ನು ತಿಳಿಯದಿರುವಂತೆಯೂ, ಕುರುಡನು ದೀಪಜ್ವಾಲೆಯನ್ನರಿಯದಿರುವಂತೆಯೂ ಧ್ಯಾನಾದಿ ಯೋಗಗಮ್ಯನಾದ ಪರಬ್ರಹ್ಮನನ್ನು ತಿಳಿಯುವುದಿಲ್ಲ.

ನಿತ್ಯಾಽಭ್ಯಸನಶೀಲಸ್ಯ ಸ್ವಸಂವೇದ್ಯಂ ಹಿ ತದ್ಭವೇತ್ ।
ತತ್ಸೂಕ್ಷ್ಮತ್ವಾದನಿರ್ದೇಶ್ಯಂ ಪರಂ ಬ್ರಹ್ಮ ಸನಾತನಂ ॥ ೫೬ ॥
ಕ್ಷಣಮಪ್ಯೇಕಮುದಕಂ ಯಥಾ ನ ಸ್ಥಿರತಾಮಿಯಾತ್ ।
ವಾತಾಹತಂ ಯಥಾ ಚಿತ್ತಂ ತಸ್ಮಾತ್ತಸ್ಯ ನ ವಿಶ್ವಸೇತ್ ॥ ೫೭ ॥
ಅತೋಽನಿಲಂ ನಿರುಂಧೀತ ಚಿತ್ತಸ್ಯ ಸ್ಥೈರ್ಯಹೇತವೇ ।
ಮರುನ್ನಿರೋಧನಾರ್ಥಾಯ ಷಡಂಗಂ ಯೋಗಮಭ್ಯಸೇತ್ ॥ ೫೮ ॥
ಆಸನಂ ಪ್ರಾಣಸಂರೋಧಃ ಪ್ರತ್ಯಾಹಾರಶ್ಚ ಧಾರಣಾ ।
ಧ್ಯಾನಂ ಸಮಾಧಿರೇತಾನಿ ಯೋಗಾಂಗಾನಿ ಭವಂತಿ ಷಟ್ ॥ ೫೯ ॥
ಆಸನಾನೀಹ ತಾವಂತಿ ಯಾವಂತ್ಯೋ ಜೀವಯೋನಯಃ ।
ಸಿದ್ಧಾಸನಮಿದಂ ಪ್ರೋಕ್ತಂ ಯೋಗಿನೋ ಯೋಗಸಿದ್ಧಿದಂ ॥ ೬೦ ॥
ಏತದಭ್ಯಸನಾನ್ನಿತ್ಯಂ ವರ್ಷ್ಮ ದಾರ್ಢ್ಯಮವಾಪ್ನುಯಾತ್ ॥ ೬೧ ॥
ದಕ್ಷಿಣಂ ಚರಣಂ ನ್ಯಸ್ಯ ವಾಮೋರೂಪರಿ ಯೋಗವಿತ್ ।
ಯಾಮ್ಯೋರೂಪರಿ ವಾಮಂ ಚ ಪದ್ಮಾಸನಮಿದಂ ವಿದುಃ ॥ ೬೨ ॥
ಕರಾಭ್ಯಾಂ ಧಾರಯೇತ್ಪಶ್ಚಾದಂಗುಷ್ಠೌ ದೃಢ ಬಂಧವಿತ್ ।
ಭವೇತ್ಪದ್ಮಾಸನಾದಸ್ಮಾದಭ್ಯಾಸಾದ್ದೃಢ ವಿಗ್ರಹಃ ॥ ೬೩ ॥

---

೫೬. ಸೂಕ್ಷ್ಮತ್ವಾದುದರಿಂದ ವ್ಯವಹರಿಸಲಶಕ್ಯವೂ, ಸನಾತನವೂ ಆದ ಆ ಪರಬ್ರಹ್ಮನು ಯಾವಾಗಲೂ ಅಭ್ಯಾಸಮಾಡುವ ಯೋಗಿಗೆ ಸ್ವಸಂವೇದ್ಯನಾಗುವನು.

೫೭. ಗಾಳಿಯಿಂದ ಹೊಡೆಯಲ್ಪಟ್ಟ ನೀರಿನಂತೆಯೂ, ಮನಸ್ಸಿನಂತೆಯೂ ಚಂಚಲವಾದ ಚಿತ್ತವನ್ನು ನಂಬಬಾರದು.

೫೮. ಆದುದರಿಂದ ಮನಸ್ಸಿನ ಸ್ಥೈರ್ಯಕ್ಕಾಗಿ ಗಾಳಿಯನ್ನು ತಡೆಯಬೇಕು. ಆ ಗಾಳಿಯನ್ನು ತಡೆಯುವುದಕ್ಕಾಗಿ ಷಡಂಗಯೋಗಾಭ್ಯಾಸವನ್ನು ಮಾಡಬೇಕು.

೫೯. ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ ಎಂದು ಯೋಗಕ್ಕೆ ಆರು ಅಂಗಗಳು.

೬೦–೬೩. ಜೀವೋತ್ಪತ್ತಿಕಾರಣಗಳಿರುವಷ್ಟೇ ಆಸನಗಳಿರುವುವು. ಯೋಗಿಗಳಿಗೆ ಯೋಗಸಿದ್ಧಿಯನ್ನೀಯುವ ಆಸನಕ್ಕೆ ಸಿದ್ಧಾಸನವೆನ್ನುವರು. ಇದನ್ನು ಯಾವಾಗಲೂ ಅಭ್ಯಾಸ ಮಾಡುವುದರಿಂದ ಮಾನವನು ದೇಹದಾರ್ಢ್ಯವನ್ನು ಹೊಂದುವನು. ಯೋಗಜ್ಞನು ಬಲಗಾಲನ್ನು ಎಡದೊಡೆಯ ಮೇಲೂ, ಎಡಗಾಲನ್ನು ಬಲದೊಡೆಯ ಮೇಲೂ ಇರಿಸಿ ಎರಡು ಹೆಬ್ಬೆರಳುಗಳನ್ನು ಕೈಗಳಿಂದ ಗಟ್ಟಿಯಾಗಿ ಹಿಡಿದುಕೊಂಡರೆ ಪದ್ಮಾಸನವೆನ್ನುವರು. ಈ ಪದ್ಮಾಸನವನ್ನು ಅಭ್ಯಾಸಮಾಡುವುದರಿಂದ ಶರೀರವು ದೃಢವಾಗುವುದು.

ಅಥವಾ ಹ್ಯಾಸನೇ ಯಸ್ಮಿನ್ಸುಖಮಸ್ಯೋಪಜಾಯತೇ ।
ಸ್ವಸ್ತಿಕಾದೌ ತದಧ್ಯಾಸ್ಯ ಯೋಗಂ ಯುಂಜೀತ ಯೋಗವಿತ್ ॥ ೬೪ ॥
ನ ತೋಯವಹ್ನಿಸಾಮೀಪ್ಯೇ ನ ಜೀರ್ಣಾರಣ್ಯಗೋಷ್ಠಯೋಃ ।
ನ ದಂಶಮಶಕಾಕೀರ್ಣೇ ನ ಚೈತ್ಯೇ ನ ಚ ಚತ್ವರೇ ॥ ೬೫ ॥
ಕೇಶಭಸ್ಮತುಷಾಂಗಾರಕೀಕಸಾದಿಪ್ರದೂಷಿತೇ ।
ನಾಽಭ್ಯಸೇತ್ಪೂತಿಗಂಧಾದೌ ನ ಸ್ಥಾನೇ ಜನಸಂಕುಲೇ ॥ ೬೬ ॥
ಸರ್ವಬಾಧಾವಿರಹಿತೇ ಸರ್ವೇಂದ್ರಿಯಸುಖಾವಹೇ ।
ಮನಃಪ್ರಸಾದಜನನೇ ಸ್ರಗ್ಧೂಪಾಽಽಮೋದಮೋದಿತೇ ॥ ೬೭ ॥
ನಾಽತಿತೃಪ್ತಃ ಕ್ಷುಧಾರ್ತೋ ನ ನ ವಿಣ್ಮೂತ್ರಪ್ರಬಾಧಿತಃ ।
ನಾಽಧ್ವಖಿನ್ನೋ ನ ಚಿಂತಾರ್ತೋ ಯೋಗಂ ಯುಂಜೀತ ಯೋಗವಿತ್ ॥
ಊರುಸ್ಥೋತ್ತಾನಚರಣಃ ಸವ್ಯೇ ನ್ಯಸ್ಯೋತ್ತರಂ ಕರಂ ।
ಉತ್ತಾನಂ ಕಿಂಚಿದುನ್ನಮ್ಯ ವಕ್ತ್ರಂ ವಿಷ್ಟಭ್ಯ ಚೋರಸಾ ॥ ೬೯ ॥
ನಿಮೀಲಿತಾಕ್ಷಃ ಸತ್ತ್ವಸ್ಥೋ ದಂತೈರ್ದಂತಾನ್ನ ಸಂಸ್ಪೃಶೇತ್ ।
ತಾಲುಸ್ಥಾ ಚಲಜಿಹ್ವಶ್ಚ ಸಂವೃತಾಸ್ಯಃ ಸುನಿಶ್ಚಲಃ ॥ ೭೦ ॥

---

೬೪. ಯೋಗಜ್ಞನು ಸ್ವಸ್ತಿಕ ಮೊದಲಾದ ಯಾವ ಆಸನದಲ್ಲಿ ಸುಖವನ್ನು ಹೊಂದುವನೊ, ಆದರಿಂದಲೇ ಯೋಗವನ್ನು ಅಭ್ಯಾಸ ಮಾಡಬೇಕು.

೬೫-೬೬. ನೀರು ಬೆಂಕಿಗಳ ಹತ್ತಿರದಲ್ಲಿಯೂ, ಜೀರ್ಣಾರಣ್ಯ, ದನದ ಕೊಟ್ಟಿಗೆಯಲ್ಲಿಯೂ, ಹಾವು ಸೊಳ್ಳೆಗಳಿರುವ ಸ್ಥಳಗಳಲ್ಲಿಯೂ, ಪೂಜ್ಯವಾದ ಮರಗಳಿರುವ ಸ್ಥಳದಲ್ಲಿಯೂ, ಅಂಗಣದಲ್ಲಿಯೂ, ಕೂದಲು, ಬೂದಿ, ಹೊಟ್ಟು, ಇದ್ದಲು, ಮೂಳೆಗಳಿಂದ ದೂಷಿತವಾದ ಸ್ಥಳದಲ್ಲಿಯೂ, ದುರ್ಗಂಧವುಳ್ಳದೂ, ಜನರಿಂದ ತುಂಬಿರುವುದೂ ಆದ ಸ್ಥಳದಲ್ಲಿಯೂ ಯೋಗಾಭ್ಯಾಸ ಮಾಡಕೂಡದು.

೬೭. ಯಾವ ಬಾಧೆಗಳೂ ಇಲ್ಲದೆ, ಸಮಸ್ತೇಂದ್ರಿಯಗಳಿಗೆ ಸುಖಕರವಾಗಿ ಮನಸ್ಸಿಗೆ ಪ್ರಸನ್ನತೆಯನ್ನುಂಟುಮಾಡುವುದೂ, ಹೂವಿನಮಾಲೆ, ಧೂಪ, ಮೊದಲಾದವುಗಳಿಂದ ಸುವಾಸನೆಗೊಂಡುದೂ ಆದ ಸ್ಥಳದಲ್ಲಿ ಯೋಗಾಭ್ಯಾಸ ಮಾಡಬೇಕು.

೬೮. ಯೋಗಜ್ಞನು ಅತ್ಯಂತ ತೃಪ್ತನೂ, ಹಸಿದವನೂ, ಮಲಮೂತ್ರಗಳಿಂದ ಪೀಡಿತನೂ, ದಾರಿ ನಡೆದು ಆಯಾಸಗೊಂಡವನೂ, ಚಿಂತಾಕ್ರಾಂತನೂ ಆಗಿ ಯೋಗಾಭ್ಯಾಸವನ್ನು ಮಾಡಕೂಡದು.

೬೯-೭೧. ಬಲದೊಡೆಯಲ್ಲಿ ಮೇಲ್ಮುಖವಾದ ಪಾದವುಳ್ಳವನಾಗಿ ಎಡದೊಡೆಯಲ್ಲಿ ಮೇಲ್ಮುಖವಾದ ಕೈಯನ್ನಿಟ್ಟು ಮುಖವನ್ನು ಸ್ವಲ್ಪ ಮೇಲಕ್ಕೆತ್ತಿ ಎದೆಯೊಡನೆ ಸೇರಿಸಿ ಕಣ್ಣುಗಳನ್ನು ಮುಚ್ಚಿಕೊಂಡು ಸಾತ್ವಿಕ ಮನಸ್ಸುಳ್ಳವನಾಗಿ

ಸನ್ನಿಯಮ್ಯೇಂದ್ರಿಯಗ್ರಾಮಂ ನಾಽತಿನೀಚೋಚ್ಛ್ರಿತಾಸನಃ ।
ಮಧ್ಯಂ ಚೋತ್ತಮಂ ಚಾಽಥ ಪ್ರಾಣಾಯಾಮಮುಪಕ್ರಮೇತ್ ॥ ೭೧ ॥
ಚಲೇಽನಿಲೇ ಚಲೇ ಸರ್ವಂ ನಿಶ್ಚಲೇ ತತ್ರ ನಿಶ್ಚಲಂ ।
ಸ್ಥಾಣುತ್ವಮಾಪ್ನುಯಾದ್ಯೋಗೀ ತತೋಽನಿಲನಿರುಂಧನಾತ್ ॥ ೭೨ ॥
ಯಾವದ್ದೇಹೇ ಸ್ಥಿತಃ ಪ್ರಾಣೋ ಜೀವಿತಂ ತಾವದುಚ್ಯತೇ ।
ನಿರ್ಗತೇ ತತ್ರ ಮರಣಂ ತತಃ ಪ್ರಾಣಂ ನಿರುಂಧಯೇತ್ ॥ ೭೩ ॥
ಯಾವದ್ಬದ್ಧೋ ಮರುದ್ದೇಹೇ ಯಾವಚ್ಚೇತೋ ನಿರಾಶ್ರಯಂ ।
ಯಾವದ್ದೃಷ್ಟಿರ್ಭ್ರುವೋರ್ಮಧ್ಯೇ ತಾವತ್ಕಾಲಭಯಂ ಕುತಃ ॥ ೭೪ ॥
ಕಾಲಸಾಧ್ವಸತೋ ಬ್ರಹ್ಮಾ ಪ್ರಾಣಾಯಾಮಂ ಸದಾಽಽಚರೇತ್ ।
ಯೋಗಿನಃ ಸಿದ್ಧಿಮಾಪನ್ನಾಃ ಸಮ್ಯಕ್ಪ್ರಾಣನಿಯಂತ್ರಣಾತ್ ॥ ೭೫ ॥
ಮಂದೋ ದ್ವಾದಶಮಾತ್ರಸ್ತು ಮಾತ್ರಾ ಲಘ್ವಕ್ಷರಾ ಮತಾ ।
ಮಧ್ಯಮೋ ದ್ವಿಗುಣಃ ಪೂರ್ವಾದುತ್ತಮಸ್ತ್ರಿಗುಣಸ್ತತಃ ॥ ೭೬ ॥

---

ಹಲ್ಲುಗಳಿಂದ ಹಲ್ಲುಗಳನ್ನು ಮುಟ್ಟದೆ ತಾಲುವಿನಲ್ಲಿ ನಾಲಿಗೆಯನ್ನು ಅಲ್ಲಾಡಿಸದೆ ಇಟ್ಟುಕೊಂಡು ಬಾಯಿಯನ್ನು ಮುಚ್ಚಿಕೊಂಡು ಅಲ್ಲಾಡದಿದ್ದವನಾಗಿ, ಇಂದ್ರಿಯಗಳನ್ನೆಲ್ಲ ತಡೆದುಕೊಂಡು ಅತ್ಯಂತ ತಗ್ಗು, ಎತ್ತರವೂ ಅಲ್ಲದ ಆಸನದಲ್ಲಿ ಕುಳಿತು ಮಧ್ಯಮೋತ್ತಮ ಪ್ರಾಣಾಯಾಮಗಳನ್ನಾರಂಭಿಸಬೇಕು.

೭೨. ಗಾಳಿಯು ಚಂಚಲವಾಗಲು ಎಲ್ಲವೂ ಚಂಚಲವಾಗುವುದು. ಅದು ನಿಶ್ಚಲವಾಗಲು ಎಲ್ಲವೂ ನಿಶ್ಚಲವಾಗುವುದು. ಆದುದರಿಂದ ಯೋಗಿಯು ಗಾಳಿಯನ್ನು ತಡೆಯುವುದರಿಂದ ನಿಶ್ಚಲನಾಗುವನು.

೭೩. ದೇಹದಲ್ಲಿ ಪ್ರಾಣವಿರುವವರೆಗೆ ಬದುಕಿರುವನೆನ್ನುವರು. ಪ್ರಾಣ ವಾಯುವು ಹೊರಟುಹೋದಕೂಡಲೆ ಮರಣವು ಸಂಭವಿಸುವುದು. ಆದುದರಿಂದ ಪ್ರಾಣವಾಯುವನ್ನು ತಡೆಯಬೇಕು.

೭೪. ದೇಹದಲ್ಲಿ ಗಾಳಿಯನ್ನು ತಡೆದಿರುವವರೆಗೂ, ಮನಸ್ಸು ಆಶ್ರಯ ವಿಲ್ಲದಿರುವವರೆಗೂ, ದೃಷ್ಟಿಯನ್ನು ಹುಬ್ಬುಗಳ ನಡುವೆ ಇಟ್ಟಿರುವವರೆಗೂ ಯಮನ ಭಯವೆತ್ತಣದು?

೭೫. ಚತುರ್ಮುಖನು ಯಮನ ಭಯದಿಂದ ಯಾವಾಗಲೂ ಪ್ರಾಣಾ ಯಾಮ ಮಾಡುವನು. ಯೋಗಿಗಳು ಚೆನ್ನಾಗಿ ಪ್ರಾಣಾಯಾಮ ಮಾಡುವುದ ರಿಂದಲೇ ಸಿದ್ಧಿಯನ್ನು ಪಡೆದಿರುವರು.

೭೬. ಮಂದಪ್ರಾಣಯಾಮವು ಹನ್ನೆರಡು ಮಾತ್ರೆಯುಳ್ಳದು. ಲಘ್ವಕ್ಷರವು ಮಾತ್ರೆಯೆನ್ನಿಸಿಕೊಳ್ಳುವುದು. ಹಿಂದಿನದಕ್ಕಿಂತ ಇಮ್ಮಡಿಯಾದುದನ್ನು ಮಧ್ಯಮ ವೆಂದೂ, ಮುಮ್ಮಡಿಯಾದುದನ್ನು ಉತ್ತಮವೆಂದೂ ಹೇಳುವರು.

ಸ್ವೇದಂ ಕಂಪಂ ವಿಷಾದಂ ಚ ಜನಯೇತ್ಕ್ರಮಶಸ್ತ್ವಸೌ ।
ಪ್ರಥಮೇನ ಜಯೇತ್ಸ್ವೇದಂ ದ್ವಿತೀಯೇನತು ವೇಪಥುಂ ॥ ೭೭ ॥
ವಿಷಾದಂ ಹಿ ತೃತೀಯೇನ ಸಿದ್ಧಃ ಪ್ರಾಣೋಽಥ ಯೋಗಿನಃ ।
ಭವೇತ್ಕ್ರಮಾತ್ಸನ್ನಿರುದ್ಧಃ ಸಿದ್ಧಃ ಪ್ರಾಣೋಽಥ ಯೋಗಿನಾ ।
ಕ್ರಮೇಣ ಸೇವ್ಯಮಾನೋಽಸೌ ನಯತೇ ಯತ್ರ ಚೇಚ್ಛತಿ ॥ ೭೮ ॥
ಹಠಾನ್ನಿರುದ್ಧಪ್ರಾಣೋಽಯಂ ರೋಮಕೂಪೇಷು ನಿಃಸರೇತ್ ।
ದೇಹಂ ವಿದಾರಯತ್ಯೇಷ ಕುಷ್ಠಾದಿ ಜನಯತ್ಯಪಿ ॥ ೭೯ ॥
ತತ್ಪ್ರತ್ಯಾಯಯಿತವ್ಯೋಽಸೌ ಕ್ರಮೇಣಾಽರಣ್ಯಹಸ್ತಿವತ್ ।
ವನ್ಯೋ ಗಜೋ ಗಜಾಽರಿರ್ವಾ ಕ್ರಮೇಣ ಮೃದುತಾಮಿಯಾತ್ ॥ ೮೦ ॥
ಕರೋತಿ ಶಾಸ್ತ್ರುನಿರ್ದೇಶಂ ನ ಚ ತಂ ಪರಿಲಂಘಯೇತ್ ।
ತಥಾ ಪ್ರಾಣೋ ಹೃದಿಸ್ಥೋಽಯಂ ಯೋಗಿನಾ ಕ್ರಮಯೋಗತಃ ।
ಗೃಹೀತಃ ಸೇವ್ಯಮಾನಸ್ತು ವಿಶ್ರಂಭಮುಪಗಚ್ಛತಿ ॥ ೮೧ ॥
ಷಟ್ತ್ರಿಂಶದಂಗುಲೋ ಹಂಸಃ ಪ್ರಯಾಣಂ ಕುರುತೇ ಬಹಿಃ ।
ಸವ್ಯಾಽಪಸವ್ಯಮಾರ್ಗೇಣ ಪ್ರಯಾಣಾತ್ಪ್ರಾಣ ಉಚ್ಯತೇ ॥ ೮೨ ॥

---

೭೭–೭೮. ಈ ಪ್ರಾಣಾಯಾಮಗಳು ಕ್ರಮವಾಗಿ ಸ್ವೇದ, ಕಂಪ, ವಿಷಾದಗಳನ್ನುಂಟುಮಾಡುವುವು. ಪ್ರಥಮ ಪ್ರಾಣಾಯಾಮದಿಂದ ಸ್ವೇದವನ್ನೂ, ದ್ವಿತೀಯ ಪ್ರಾಣಾಯಾಮದಿಂದ ಕಂಪವನ್ನೂ, ಮೂರನೆಯ ಪ್ರಾಣಾಯಾಮದಿಂದ ವಿಷಾದವನ್ನೂ ಜಯಿಸಬೇಕು. ತರುವಾಯ ಯೋಗಿಯ ಸಿದ್ಧವಾದ ಪ್ರಾಣವಾಯುವು ಕ್ರಮವಾಗಿ ಸೇವಿಸಲ್ಪಟ್ಟುದಾಗಿ ಎಲ್ಲಿಗೆ ಹೋಗಲಿಚ್ಛಿಸುವನೊ ಅಲ್ಲಿಗೆ ಒಯ್ಯುವುದು.

೭೯. ಬಲಾತ್ಕಾರದಿಂದ ತಡೆಯಲ್ಪಟ್ಟ ಈ ಪ್ರಾಣವಾಯುವು ರೋಮಕೂಪಗಳಲ್ಲಿ ಹೊರಡುವುದು. ಶರೀರವನ್ನು ಸೀಳುವುದು, ಕುಷ್ಠಾದಿ ರೋಗಗಳನ್ನೂ ಉಂಟುಮಾಡುವುದು.

೮೦. ಆದುದರಿಂದ ಆ ಪ್ರಾಣವಾಯುವನ್ನು ಕ್ರಮವಾಗಿ ಕಾಡಾನೆಯಂತೆ ಪಳಗಿಸಬೇಕು. ಕಾಡಾನೆಯಾಗಲಿ, ಸಿಂಹವಾಗಲಿ ಪಳಗಿಸಿದರೆ ಕ್ರಮವಾಗಿ ಮೃದುವಾಗುವುದಷ್ಟೆ.

೮೧–೮೨. ಪಳಗಿಸಿದ ಆನೆಯು ಶಿಕ್ಷಕನ ಅಪ್ಪಣೆಯನ್ನು ನೆರವೇರಿಸುವುದು. ಅವನನ್ನು ಅತಿಕ್ರಮಿಸುವುದಿಲ್ಲ. ಹಾಗೆಯೇ ಈ ಹೃದಯದಲ್ಲಿರುವ ಪ್ರಾಣವನ್ನು ಯೋಗಿಯು ಕ್ರಮವಾಗಿ ವಶಗೊಳಿಸಿಕೊಂಡು ಸೇವಿಸಿದರೆ ವಿಶ್ರಾಂತಿಯನ್ನು ಹೊಂದುವುದು. ಗಾಳಿಯು ಇಡಾ ಪಿಂಗಳಾ ನಾಡಿಗಳಿಂದ ಹೊರಗಡೆ ಮೂವತ್ತಾರು ಅಂಗುಲ ದೂರ ಪ್ರಯಾಣಮಾಡುವುದರಿಂದ ಪ್ರಾಣವೆನ್ನಿಸಿಕೊಳ್ಳುವುದು.

ಶುದ್ಧಿಮೇತಿ ಯದಾ ಸರ್ವಂ ನಾಡೀಚಕ್ರಮನಾಕುಲಂ ।
ತದೈವ ಜಾಯತೇ ಯೋಗೀ ಕ್ಷಮಃ ಪ್ರಾಣನಿರೋಧನೇ ॥ ೮೩ ॥
ದೃಢಾಸನೋ ಯಥಾಶಕ್ತಿ ಪ್ರಾಣಂ ಚಂದ್ರೇಣ ಪೂರಯೇತ್ ।
ರೇಚಯೇದಥ ಸೂರ್ಯೇಣ ಪ್ರಾಣಾಯಾಮೋಽಯಮುಚ್ಯತೇ ॥ ೮೪ ॥
ಸ್ರವತ್ಪೀಯೂಷಧಾರೌಘಂ ಧ್ಯಾಯಂಶ್ಚಂದ್ರಸಮನ್ವಿತಂ ।
ಪ್ರಾಣಾಯಾಮೇನ ಯೋಗೀಂದ್ರಃ ಸುಖಮಾಪ್ನೋತಿ ತತ್ಕ್ಷಣಾತ್ ॥
ರವಿಣಾ ಪ್ರಾಣಮಾಕೃಷ್ಯ ಪೂರಯೇದೌದರೀಂ ದರೀಂ ।
ಕುಂಭಯಿತ್ವಾ ಶನೈಃ ಪಶ್ಚಾದ್ಯೋಗೀ ಚಂದ್ರೇಣ ರೇಚಯೇತ್ ॥ ೮೬ ॥
ಜ್ವಲಜ್ಜ್ವಲನಪುಂಜಾಭಂ ಶೀಲಯನ್ನುಷ್ಣಗುಂ ಹೃದಿ ।
ಅನೇನ ಯಾಮ್ಯಾ ಯಾಮೇನ ಯೋಗೀಂದ್ರಃ ಶರ್ಮಭಾಗ್ಭವೇತ್ ॥೮೭॥
ಇತ್ಥಂ ಮಾಸತ್ರಯಾಽಭ್ಯಾಸಾದುಭಯಾ ಯಾಮಸೇವನಾತ್ ।
ಶುದ್ಧನಾಡೀಗಣೋ ಯೋಗೀ ಸಿದ್ಧಪ್ರಾಣೋಽಭಿಧೀಯತೇ ॥ ೮೮ ॥

---

೮೩. ಸಮಸ್ತ ನಾಡಿಗಳ ಸಮೂಹವು ಯಾವಾಗ ಶುದ್ಧವಾಗಿ ವ್ಯಾಕುಲಗೊಳ್ಳದಿರುವುದೊ, ಆಗಲೇ ಯೋಗಿಯು ಪ್ರಾಣಗಳನ್ನು ತಡೆಯಲು ಸಮರ್ಥನಾಗುವನು.

೮೪. ಯೋಗಿಯು ಶಕ್ತ್ಯನುಸಾರ ದೃಢವಾದ ಆಸನದಲ್ಲಿ ಕುಳಿತು ಇಡಾ ನಾಡಿಯ ಮಾರ್ಗದಿಂದ ಪ್ರಾಣವಾಯುವನ್ನು ಪೂರಣಮಾಡಿ, ಪಿಂಗಳಾ ನಾಡಿಯ ಮಾರ್ಗದಿಂದ ರೇಚನಮಾಡಿದರೆ ಪ್ರಾಣಾಯಾಮವೆನ್ನಿಸಿಕೊಳ್ಳುವುದು.

೮೫. ಚಂದ್ರನಿಂದ ಸಹಿತವಾಗಿ ಸುರಿಯುತ್ತಿರುವ ಅಮೃತಧಾರೆಯನ್ನು ಧ್ಯಾನಿಸುತ್ತ ಪ್ರಾಣಾಯಾಮ ಮಾಡಿದರೆ ಯೋಗೀಂದ್ರನು ಕೂಡಲೆ ಸುಖಗೊಳ್ಳುವನು.

೮೬. ಪಿಂಗಳಾನಾಡಿಯಿಂದ ಪ್ರಾಣವಾಯುವನ್ನು ಒಳಗೆ ತೆಗೆದುಕೊಂಡು ಉದರಗುಹೆಯನ್ನು ಪೂರಣಮಾಡಿ ಅನಂತರ ಮೆಲ್ಲಗೆ ಇಡಾ ನಾಡಿಯ ಮಾರ್ಗದಿಂದ ರೇಚನಮಾಡಬೇಕು.

೮೭. ಯೋಗೀಂದ್ರನು ಹೃದಯದಲ್ಲಿ ಉರಿಯುತ್ತಿರುವ ಅಗ್ನಿಯ ರಾಶಿಗೆ ಸಮಾನನಾದ ಸೂರ್ಯಮಂಡಲಮಧ್ಯವರ್ತಿಯಾದ ವಿಶ್ವೇಶ್ವರನನ್ನಾಗಲಿ, ಶ್ರೀಮನ್ನಾರಾಯಣನನ್ನಾಗಲಿ ಧ್ಯಾನಿಸುತ್ತ ಈ ಪ್ರಾಣಾಯಾಮವನ್ನು ಮಾಡಿದರೆ ಸುಖಿಯಾಗುವನು.

೮೮. ಹೀಗೆ ಮೂರುತಿಂಗಳುಗಳಕಾಲ ಪ್ರಾಣಾಯಾಮ ಮಾಡುವುದರಿಂದ ಶುದ್ಧವಾದ ನಾಡಿಗಳುಳ್ಳ ಯೋಗಿಯು ಸಿದ್ಧಪ್ರಾಣನೆನಿಸುವನು.

ಯಥೇಷ್ಟಂ ಧಾರಣಂ ವಾಯೋರನಲಸ್ಯ ಪ್ರದೀಪನಂ ।
ನಾದಾಭಿವ್ಯಕ್ತಿರಾರೋಗ್ಯಂ ಭವೇನ್ನಾಡೀವಿಶೋಧನಾತ್ ॥ ೮೯ ॥
ಪ್ರಾಣೋ ದೇಹಗತೋ ವಾಯುರಾಯಾಮಸ್ತನ್ನಿಬಂಧನಂ ।
ಏಕಶ್ವಾಸಮಯೀ ಮಾತ್ರಾ ಪ್ರಾಣಾಯಾಮೋ ನಿರುಚ್ಯತೇ ॥ ೯೦ ॥
ಪ್ರಾಣಾಯಾಮೋಽಧಮೋ ಘರ್ಮಃ ಕಂಪೋ ಭವತಿ ಮಧ್ಯಮೇ ।
ಉತ್ತಿಷ್ಠೇದುತ್ತಮೇ ದೇಹೋ ಬದ್ಧಪದ್ಮಾಸನೋ ಮುಹುಃ ॥ ೯೧ ॥
ಪ್ರಾಣಾಯಾಮೈರ್ದಹೇದ್ದೋಷಾನ್ಪ್ರತ್ಯಾಹಾರೇಣ ಪಾತಕಂ ।
ಮನೋಧೈರ್ಯಂ ಧಾರಣಯಾ ಧ್ಯಾನೇನೇಶ್ವರದರ್ಶನಂ ॥ ೯೨ ॥
ಸಮಾಧಿನಾ ಲಭೇನ್ಮೋಕ್ಷಂ ತ್ಯಕ್ತ್ವಾ ಧರ್ಮಂ ಶುಭಾಽಶುಭಂ ।
ಆಸನೇನ ವಪುರ್ದಾರ್ಢ್ಯಂ ಷಡಂಗಮಿತಿ ಕೀರ್ತಿತಂ ॥ ೯೩ ॥
ಪ್ರಾಣಾಯಾಮದ್ವಿಷಟ್ಕೇನ ಪ್ರತ್ಯಾಹಾರ ಉದಾಹೃತಃ ।
ಪ್ರತ್ಯಾಹಾರೈರ್ದ್ವಾದಶಭಿರ್ಧಾರಣಾ ಪರಿಕೀರ್ತಿತಾ ॥ ೯೪ ॥
ಭವೇದೀಶ್ವರಸಂಗತ್ಯೈ ಧ್ಯಾನಂ ದ್ವಾದಶಧಾರಣಂ ।
ಧ್ಯಾನದ್ವಾದಶಕೇನೈವ ಸಮಾಧಿರಭಿಧೀಯತೇ ॥ ೯೫ ॥

---

೮೯. ಈ ನಾಡೀಶುದ್ಧಿಯಿಂದ ಪ್ರಾಣವಾಯುವನ್ನು ಸ್ವೇಚ್ಛೆಯಾಗಿ ಧರಿಸುವಿಕೆ, ಅಗ್ನ್ಯುದ್ದೀಪನ, ನಾದಾಭಿವ್ಯಕ್ತಿ, ಆರೋಗ್ಯ ಇವುಗಳುಂಟಾಗುವುವು.

೯೦. ದೇಹಗತವಾದ ಗಾಳಿಯು ಪ್ರಾಣವೆಂದೂ, ಅದನ್ನು ತಡೆಯುವಿಕೆಯು ಆಯಾಮವೆಂದೂ ಹೇಳಿಸಿಕೊಳ್ಳುವುದು. ಹೀಗೆ ಪ್ರಾಣಾಯಾಮವು ಒಂದು ಹ್ರಸ್ವಾಕ್ಷರವನ್ನು ಉಚ್ಚರಿಸುವಕಾಲವುಳ್ಳುದು.

೯೧. ಯೋಗಿಯು ಪದ್ಮಾಸನದಲ್ಲಿ ಕುಳಿತು ಅಧಮ ಪ್ರಾಣಾಯಾಮ ಮಾಡುವುದರಿಂದ ಸ್ವೇದವೂ, ಮಧ್ಯಮ ಪ್ರಾಣಾಯಾಮ ಮಾಡುವುದರಿಂದ ಕಂಪವೂ, ಉತ್ತಮ ಪ್ರಾಣಾಯಾಮ ಮಾಡುವುದರಿಂದ ದೇಹೋತ್ಥಾನವೂ ಆಗುವುದು.

೯೨–೯೩. ಪ್ರಾಣಾಯಾಮಗಳಿಂದ ದೋಷಗಳನ್ನೂ, ಪ್ರತ್ಯಾಹಾರದಿಂದ ಪಾಪಪರಿಹಾರವೂ, ಧಾರಣೆಯಿಂದ ಮನೋಧೈರ್ಯವೂ, ಧ್ಯಾನದಿಂದ ಈಶ್ವರದರ್ಶನವೂ, ಸಮಾಧಿಯಿಂದ ಶುಭಾಶುಭಕರ್ಮತ್ಯಾಗಪೂರ್ವಕವಾದ ಮೋಕ್ಷವೂ, ಆಸನದಿಂದ ದೇಹದಾರ್ಢ್ಯವೂ ಉಂಟಾಗುವುದು. ಇದೇ ಷಡಂಗಯೋಗವು.

೯೪. ಹನ್ನೆರಡು ಪ್ರಾಣಾಯಾಮಗಳಿಂದ ಪ್ರತ್ಯಾಹಾರವೂ, ಹನ್ನೆರಡು ಪ್ರತ್ಯಾಹಾರಗಳಿಂದ ಧಾರಣೆಯೂ ಆಗುವುದು.

೯೫. ದ್ವಾದಶಧಾರಣೆಗಳಿಂದಾಗುವ ಧ್ಯಾನವು ಬ್ರಹ್ಮಪ್ರಾಪ್ತಿಗೆ ಕಾರಣವಾಗುವುದು. ಈ ಹನ್ನೆರಡು ಧ್ಯಾನಗಳಿಂದ ಸಮಾಧಿಯಾಗುವುದು.

ಸಮಾಧೇಃ ಪರತೋ ಜ್ಯೋತಿರನಂತಂ ಸ್ವಪ್ರಕಾಶಕಂ ।
ತಸ್ಮಿನ್ದೃಷ್ಟೇ ಕ್ರಿಯಾಕಾಂಡಂ ಯಾತಾಯಾತಂ ನಿವರ್ತತೇ ॥ ೯೬ ॥
ಪವನೇ ವ್ಯೋಮ ಸಂಪ್ರಾಪ್ತೇ ಧ್ವನಿರುತ್ಪದ್ಯತೇ ಮಹಾನ್ ।
ಘಂಟಾದೀನಾಂ ಪ್ರವಾದ್ಯಾನಾಂ ತತಃ ಸಿದ್ಧಿರದೂರತಃ ॥ ೯೭ ॥
ಪ್ರಾಣಾಯಾಮೇನ ಯುಕ್ತೇನ ಸರ್ವವ್ಯಾಧಿಕ್ಷಯೋ ಭವೇತ್ ।
ಅಯುಕ್ತಾಽಭ್ಯಾಸಯೋಗೇನ ಸರ್ವವ್ಯಾಧಿಸಮುದ್ಭವಃ ॥ ೯೮ ॥
ಹಿಕ್ಕಾ ಶ್ವಾಸಶ್ಚ ಕಾಸಶ್ಚ ಶಿರಃ ಕರ್ಣಾಽಕ್ಷಿವೇದನಾಃ ।
ಭವಂತಿ ವಿವಿಧಾ ದೋಷಾಃ ಪವನಸ್ಯ ವ್ಯತಿಕ್ರಮಾತ್ ॥ ೯೯ ॥
ಯುಕ್ತಂ ಯುಕ್ತಂ ತ್ಯಜೇದ್ವಾಯುಂ ಯುಕ್ತಂ ಯುಕ್ತಂ ಚ ಪೂರಯೇತ್ ।
ಯುಕ್ತಂ ಯುಕ್ತಂ ಚ ಬಧ್ನೀಯಾದಿತ್ಥಂ ಸಿಧ್ಯತಿ ಯೋಗವಿತ್ ॥ ೧೦೦ ॥
ಇಂದ್ರಿಯಾಣಾಂ ಹಿ ಚರತಾಂ ವಿಷಯೇಷು ಯದೃಚ್ಛಯಾ ।
ಯತ್ಪ್ರತ್ಯಾಹರಣಂ ಯುಕ್ತ್ಯಾ ಪ್ರತ್ಯಾಹಾರಃ ಸ ಉಚ್ಯತೇ ॥ ೧೦೧ ॥
ಪ್ರತ್ಯಾಹರತಿ ಯಃ ಖಾನಿ ಕೂರ್ಮೋಽಂಗಾನೀವ ಸರ್ವತಃ ।
ಪ್ರತ್ಯಾಹೃತಿವಿಧಾನೇನ ಸಸ್ಯಾದ್ವಿಗತಕಲ್ಮಷಃ ॥ ೧೦೨ ॥

---

೯೬-೯೭. ಸಮಾಧಿಯ ಅನಂತರ ಸ್ವಪ್ರಕಾಶವೂ, ಅಪರಿಚ್ಛಿನ್ನವೂ ಆದ ಜ್ಯೋತಿಯು ಆವಿರ್ಭವಿಸುವುದು. ಆ ಬ್ರಹ್ಮನನ್ನು ನೋಡಿದ ಕೂಡಲೆ ಕ್ರಿಯಾಕಾಂಡದಿಂದ ಪ್ರತಿಪಾದ್ಯವಾದ ಸ್ವರ್ಗಾದಿ ಗಮನಾಗಮನವು ಪರಿಹಾರವಾಗುವುದು. ಪ್ರಾಣವಾಯುವು ಬ್ರಹ್ಮರಂಧ್ರವನ್ನು ಹೊಂದಲು ಘಂಟಾದಿ ಮಹಾವಾದ್ಯಗಳ ಧ್ವನಿಯುಂಟಾಗುವುದು. ಅನಂತರ ಶೀಘ್ರವಾಗಿ ಯೋಗಫಲವು ಸಿದ್ಧಿಸುವುದು.

೯೮. ಸರಿಯಾಗಿ ಮಾಡಿದ ಪ್ರಾಣಾಯಾಮದಿಂದ ಸಮಸ್ತವ್ಯಾಧಿನಾಶವೂ, ಹಾಗೆ ಮಾಡದ ಪ್ರಾಣಾಯಾಮದಿಂದ ರೋಗಪ್ರಾಪ್ತಿಯೂ ಆಗುವುದು.

೯೯. ವಿಧಿಯಂತೆ ಮಾಡದ ಪ್ರಾಣಾಯಾಮದಿಂದ ಬಿಕ್ಕಳಿಕೆ, ಉಬ್ಬಸ, ಕೆಮ್ಮು, ತಲೆ, ಕಿವಿ, ಕಣ್ಣುಗಳ ನೋವುಗಳೇ ಮೊದಲಾದ ನಾನಾರೋಗಗಳು ಉಂಟಾಗುವುವು.

೧೦೦. ಮಿತವಾಗಿ ಗಾಳಿಯನ್ನು ಬಿಡಬೇಕು. ಅದನ್ನು ಮತ್ತೆ ಪೂರಣ ಮಾಡಬೇಕು. ತಡೆಯಬೇಕು. ಇದರಿಂದ ಯೋಗಿಯು ಸಿದ್ಧನಾಗುವನು.

೧೦೧. ವಿಷಯಗಳಲ್ಲಿ ಸ್ವೇಚ್ಛೆಯಿಂದ ಸಂಚರಿಸುವ ಇಂದ್ರಿಯಗಳನ್ನು ಯೋಗದಿಂದ ಹಿಂದಿರುಗಿಸುವುದಕ್ಕೆ ಪ್ರತ್ಯಾಹಾರವೆನ್ನುವರು.

೧೦೨. ಯಾವನು ಪ್ರತ್ಯಾಹಾರಕ್ರಮದಿಂದ ಇಂದ್ರಿಯಗಳನ್ನು, ಆಮೆಯು ಎಲ್ಲ ಕಡೆಯಿಂದಲೂ ಅವಯವಗಳನ್ನು ಹಿಂದಕ್ಕೆ ತೆಗೆದುಕೊಳ್ಳುವಂತೆ ಪ್ರತ್ಯಾಹರಣ ಮಾಡುವನೊ, ಅವನು ಪಾಪರಹಿತನಾಗುವನು.

ನಾಽಭಿದೇಶೇ ವಸೇದ್ಭಾನುಸ್ತಾಲುದೇಶೇಚ ಚಂದ್ರಮಾಃ ।
ವರ್ಷತ್ಯಧೋಮುಖಶ್ಚಂದ್ರೋ ಗ್ರಸೇದೂರ್ಧ್ವಮುಖೋ ರವಿಃ ॥ ೧೦೩ ॥
ಕರಣಂ ತಚ್ಚ ಕರ್ತವ್ಯಂ ಯೇನ ಸಾ ಪ್ರಾಪ್ಯತೇ ಸುಧಾ ।
ಊರ್ಧ್ವಂ ನಾಭಿರಧಸ್ತಾಲುರೂರ್ಧ್ವಂ ಭಾನುರಧಃ ಶಶೀ ।
ಕರಣಂ ವಿಪರೀತಾಖ್ಯಮಭ್ಯಾಸಾದೇವ ಜಾಯತೇ ॥ ೧೦೪ ॥
ಕಾಕಚಂಚುವದಾಸ್ಯೇನ ಶೀತಲಂ ಶೀತಲಂ ಪಿಬೇತ್ ।
ಪ್ರಾಣಂ ಪ್ರಾಣವಿಧಾನಜ್ಞೋ ಯೋಗೀ ಭವತಿ ನಿರ್ಜರಃ ॥ ೧೦೫ ॥
ರಸನಾಂ ತಾಲುವಿವರೇ ನಿಧಾಯೋರ್ಧ್ವಮುಖೋಽಮೃತಂ ।
ಧಯನ್ನಿರ್ಜರತಾಂ ಗಚ್ಛೇದಾಷಣ್ಮಾಸಾನ್ನ ಸಂಶಯಃ ॥ ೧೦೬ ॥
ಊರ್ಧ್ವಜಿಹ್ವಃ ಸ್ಥಿರೋಭೂತ್ವಾ ಸೋಮಪಾನಂ ಕರೋತಿ ಯಃ ।
ಮಾಸಾರ್ಧೇನ ನ ಸಂದೇಹೋ ಮೃತ್ಯುಂ ಜಯತಿ ಯೋಗವಿತ್ ॥೧೦೭॥
ಸಂಪೀಡ್ಯ ರಸನಾಗ್ರೇಣ ರಾಜದಂತಬಿಲಂ ಮಹತ್ ।
ಧ್ಯಾತ್ವಾ ಸುಧಾಮಯೀಂ ದೇವೀಂ ಷಣ್ಮಾಸೇನ ಕವಿರ್ಭವೇತ್ ॥ ೧೦೮ ॥

---

೧೦೩. ಸೂರ್ಯನು ನಾಭಿಯಲ್ಲಿಯೂ, ಚಂದ್ರನು ಕಪೋಲದಲ್ಲಿಯೂ ವಾಸಿಸುವರು. ಚಂದ್ರನು ಕೆಳಮುಖನಾಗಿ ಅಮೃತವನ್ನು ಸುರಿಸುವನು. ಸೂರ್ಯನು ಮೇಲ್ಮುಖನಾಗಿ ಅದನ್ನು ಕುಡಿಯುವನು.

೧೦೪. ಆ ಅಮೃತವನ್ನು ಪಡೆಯಲು ವಿಪರೀತವೆಂಬ ಕರಣವನ್ನು ಮಾಡಬೇಕು. ಮೇಲೆ ನಾಭಿಯನ್ನೂ, ಕೆಳಗೆ ಕಪೋಲವನ್ನೂ ಮಾಡಿದರೆ ಸೂರ್ಯನು ಮೇಲೆಯೂ, ಚಂದ್ರನು ಕೆಳಗೂ ಆಗುವರು. ಈ ಕರಣವು ಅಭ್ಯಾಸದಿಂದಲೇ ಉಂಟಾಗುವುದು.

೧೦೫. ಕಾಗೆಯ ಕೊಕ್ಕಿನಂತೆ ಮಾಡಿದ ಬಾಯಿಯಿಂದ ಬಹಳ ತಣ್ಣಗಿರುವ ನೀರನ್ನು ಕುಡಿಯಬೇಕು. ಪ್ರಾಣಾಯಾಮವನ್ನು ಬಲ್ಲ ಯೋಗಿಯು ಮುಪ್ಪಿಲ್ಲದ ದೇವತೆಯಾಗುವನು.

೧೦೬. ಯೋಗಿಯು ಮೇಲ್ಮುಖನಾಗಿ ನಾಲಿಗೆಯನ್ನು ಕಪೋಲರಂಧ್ರದಲ್ಲಿಟ್ಟು ಅಮೃತವನ್ನು ಕುಡಿಯುತ್ತ ಆರುತಿಂಗಳಲ್ಲಿ ನಿಶ್ಚಯವಾಗಿಯೂ ದೇವತೆಯಾಗುವನು.

೧೦೭. ನಾಲಿಗೆಯನ್ನು ಮೇಲೆಮಾಡಿಕೊಂಡು ಸ್ಥಿರನಾಗಿ ಸೋಮಪಾನವನ್ನು ಮಾಡಿದ ಯೋಗಜ್ಞನು ಅರ್ಧತಿಂಗಳಲ್ಲಿ ಮೃತ್ಯುವನ್ನು ಜಯಿಸುವನು.

೧೦೮. ನಾಲಿಗೆಯ ಕೊನೆಯಿಂದ ಪ್ರಕಾಶಿಸುವ ಅದರ ಬುಡವನ್ನು ಒತ್ತಿಕೊಂಡು ಅಮೃತಮಯಳಾದ ದೇವಿಯನ್ನು ಧ್ಯಾನಿಸಿದರೆ ಒಂದು ತಿಂಗಳಲ್ಲಿ ಕವಿಯಾಗುವನು.

ಅಮೃತಾಪೂರ್ಣದೇಹಸ್ಯ ಯೋಗಿನೋ ದ್ವಿತ್ರಿವತ್ಸರಾತ್ ।
ಊರ್ಧ್ವಂ ಪ್ರವರ್ತತೇ ರೇತೋ ಹ್ಯಣಿಮಾದಿಗುಣೋದಯಂ ॥ ೧೦೯ ॥
ನಿತ್ಯಂ ಸೋಮಕಲಾಪೂರ್ಣಂ ಶರೀರಂ ಯಸ್ಯ ಯೋಗಿನಃ ।
ತಕ್ಷಕೇಣಾಽಪಿ ದಷ್ಟಸ್ಯ ವಿಷಂ ತಸ್ಯ ನ ಸರ್ಪತಿ ॥ ೧೧೦ ॥
ಆಸನೇನ ಸಮಾಯುಕ್ತಃ ಪ್ರಾಣಾಯಾಮೇನ ಸಂಯುತಃ ।
ಪ್ರತ್ಯಾಹಾರೇಣ ಸಂಪನ್ನೋ ಧಾರಣಾಮಥ ಚಾಽಭ್ಯಸೇತ್ ॥ ೧೧೧ ॥
ಹೃದಯೇ ಪಂಚಭೂತಾನಾಂ ಧಾರಣಾಂ ಯಃ ಪೃಥಕ್ಪೃಥಕ್ ।
ಮನಸೋ ನಿಶ್ಚಲತ್ವೇನ ಧಾರಣಾ ಸಾಽಭಿಧೀಯತೇ ॥ ೧೧೨ ॥
ಹರಿತಾಲನಿಭಾಂ ಭೂಮಿಂ ಸಲಕಾರಾಂ ಸವೇಧಸಂ ।
ಚತುಷ್ಕೋಣಾಂ ಹೃದಿ ಧ್ಯಾಯೇದೇಷಾ ಸ್ಯಾತ್ಕ್ಷಿತಿಧಾರಣಾ ॥ ೧೧೩ ॥
ಕಂಠೇಽಂಬು ತತ್ತ್ವಮರ್ಧೇಂದುನಿಭಂ ವಿಷ್ಣುಸಮನ್ವಿತಂ ।
ವಕಾರಬೀಜಂ ಕುಂದಾಭಂ ಧ್ಯಾಯನ್ನಂಬುಜಯೇದಿತಿ ॥ ೧೧೪ ॥
ತಾಲುಸ್ಥಮಿಂದ್ರಗೋಪಾಭಂ ತ್ರಿಕೋಣಂ ರೇಫಸಂಯುತಂ ।
ರುದ್ರೇಣಾಧಿಷ್ಠಿತಂ ತೇಜೋ ಧ್ಯಾತ್ವಾ ವಹ್ನಿಂ ಜಯೇದಿತಿ ॥ ೧೧೫ ॥

---

೧೦೯. ಅಮೃತದಿಂದ ತುಂಬಿದ ಶರೀರವುಳ್ಳ ಯೋಗಿಯ ಅಣಿಮಾದಿ ಗುಣಗಳುಳ್ಳ ರೇತಸ್ಸು ಎರಡು ಮೂರು ವರ್ಷಗಳಲ್ಲಿ ಮೇಲಕ್ಕೆ ಹೋಗುವುದು.

೧೧೦. ನಿತ್ಯವೂ ಚಂದ್ರಕಲೆಯಿಂದ ತುಂಬಿರುವ ಯೋಗಿಯ ಶರೀರವನ್ನು ತಕ್ಷಕನು ಕಚ್ಚಿದರೂ ವಿಷವು ವ್ಯಾಪಿಸುವುದಿಲ್ಲ.

೧೧೧. ಆಸನ, ಪ್ರಾಣಾಯಾಮ, ಪ್ರತ್ಯಾಹಾರಗಳಿಂದ ಕೂಡಿದ ಯೋಗಿಯು ಧಾರಣೆಯನ್ನು ಅಭ್ಯಾಸಮಾಡಬೇಕು.

೧೧೨. ಮನಸ್ಸನ್ನು ನಿಶ್ಚಲವನ್ನಾಗಿಸಿ ಅದರಲ್ಲಿ ಬೇರೆಬೇರೆಯಾಗಿ ಪಂಚ ಭೂತಗಳನ್ನು ಧರಿಸುವುದರಿಂದ ಧಾರಣೆಯಾಗುವುದು.

೧೧೩. ಹರಿತಾಳದಂತಿರುವುದೂ, ಪೃಥ್ವೀಬೀಜ, ಲಕಾರ, ಬ್ರಹ್ಮದೇವತೆ ಇವುಗಳಿಂದ ಕೂಡಿರುವುದೂ, ನಾಲ್ಕು ಕೋಣವುಳ್ಳುದೂ ಆದ ಭೂಮಿಯನ್ನು ಹೃದಯದಲ್ಲಿ ಧ್ಯಾನಿಸಿದರೆ ಅದು ಕ್ಷಿತಿಧಾರಣೆಯಾಗುವುದು.

೧೧೪. ಕಂಠದಲ್ಲಿ ಅರ್ಧಚಂದ್ರನಂತಿರುವುದೂ, ಜಲಬೀಜ, ವಕಾರ, ವಿಷ್ಣು ದೇವತೆಯಿಂದ ಕೂಡಿರುವುದೂ, ಕುಂದಪುಷ್ಪದಂತಿರುವುದೂ ಆದ ಜಲತತ್ತ್ವವನ್ನು ಧ್ಯಾನಿಸಿದವನು ಜಲವನ್ನು ಜಯಿಸುವನು.

೧೧೫. ಕಪೋಲದಲ್ಲಿರುವುದೂ, ಇಂದ್ರಗೋಪಕೀಟದಂತಿರುವುದೂ, ತ್ರಿಕೋಣಾಕಾರವೂ, ರೇಫ, ರುದ್ರದೇವತೆಯಿಂದ ಕೂಡಿರುವುದೂ ಆದ ತೇಜಸ್ಸನ್ನು ಧ್ಯಾನಿಸಿದರೆ ವಹ್ನಿತತ್ವವನ್ನು ಜಯಿಸುವನು.

ವಾಯುತತ್ತ್ವಂ ಭ್ರುವೋರ್ಮಧ್ಯೇ ವೃತ್ತಮುಂಜನಸನ್ನಿಭಂ ।
ಯಂ ಬೀಜಮೀಶದೈವತ್ಯಂ ಧ್ಯಾಯನ್ವಾಯುಂ ಜಯೇದಿತಿ ॥ ೧೧೬ ॥
ಆಕಾಶಂ ಚ ಮರೀಚಿವಾರಿಸದೃಶಂ ಯದ್ಬ್ರಹ್ಮರಂಧ್ರಸ್ಥಿತಂ
ಯನ್ನಾಥೇನ ಸದಾಶಿವೇನ ಸಹಿತಂ ಶಾಂತಂ ಹಕಾರಾಕ್ಷರಂ ।
ಪ್ರಾಣಂ ತತ್ರ ವಿನೀಯ ಪಂಚಘಟಿಕಂ ಚಿಂತಾನ್ವಿತಂ ಧಾರಯೇತ್
ಏಷಾ ಮೋಕ್ಷಕಪಾಟಪಾಟನಪಟುಃ ಪ್ರೋಕ್ತಾ ನಭೋಧಾರಣಾ ॥
ಸ್ತಂಭನೀ ಪ್ಲಾವನೀಚೈವ ದಾಹನೀ ಭ್ರಾಮಣೀ ತಥಾ ।
ಶಾಮನೀ ಚ ಭವಂತ್ಯೇತಾ ಭೂತಾನಾಂ ಪಂಚಧಾರಣಾಃ ॥ ೧೧೮ ॥
ಧ್ಯೈಚಿಂತಾಯಾಂ ಸ್ಮೃತೋಧಾತುಶ್ಚಿಂತಾ ತತ್ವೇ ಸುನಿಶ್ಚಲಾ ।
ಏತದ್ಧ್ಯಾನಮಿಹ ಪ್ರೋಕ್ತಂ ಸಗುಣಂ ನಿರ್ಗುಣಂ ದ್ವಿಧಾ ॥ ೧೧೯ ॥
ಸಗುಣಂ ವರ್ಣಭೇಧೇನ ನಿರ್ಗುಣಂ ಕೇವಲಂ ಮತಂ ।
ಸಮಂತ್ರಂ ಸಗುಣಂ ವಿದ್ಧಿ ನಿರ್ಗುಣಂ ಮಂತ್ರವರ್ಜಿತಂ ॥ ೧೨೦ ॥
ಅಂತಶ್ಚೇತೋ ಬಹಿಶ್ಚಕ್ಷುರವಸ್ಥಾಪ್ಯ ಸುಖಾಸನಂ ।
ಸಮತ್ವಂ ಚ ಶರೀರಸ್ಯ ಧ್ಯಾನಮುದ್ರಾಽತಿಸಿದ್ಧಿದಾ ॥ ೧೨೧ ॥

---

೧೧೬. ಹುಬ್ಬುಗಳ ನಡುವೆ ವರ್ತುಳವೂ, ಕಾಡಿಗೆಯಂತಿರುವುದೂ, ಯಕಾರ, ಈಶದೇವತೆಯಿಂದ ಕೂಡಿರುವುದೂ ಆದ ವಾಯುತತ್ವವನ್ನು ಧ್ಯಾನಿಸಿದವನು ವಾಯುವನ್ನು ಜಯಿಸಿದವನಾಗುವನು.

೧೧೭. ಕಿರಣಗಳ ನೀರಿನಂತಿರುವುದೂ, ಬ್ರಹ್ಮರಂಧ್ರದಲ್ಲಿರುವುದೂ, ಶಾಂತವೂ, ಸದಾಶಿವ ಮತ್ತು ಹಕಾರಾಕ್ಷರಗಳಿಂದ ಕೂಡಿರುವುದೂ ಆದ ಆಕಾಶ ತತ್ವದಲ್ಲಿ ಪ್ರಾಣತತ್ತ್ವವನ್ನು ಸೇರಿಸಿ ಐದು ಗಳಿಗೆಗಳವರೆಗೆ ಧ್ಯಾನಿಸಿದರೆ ಮೋಕ್ಷದ ಬಾಗಿಲನ್ನು ತೆರೆಯುವ ಆಕಾಶಧಾರಣವೆನ್ನಿಸಿಕೊಳ್ಳುವುದು.

೧೧೮. ಪಂಚಭೂತಧಾರಣೆಗಳು ಸ್ತಂಭನೀ, ಪ್ಲಾವನೀ, ದಾಹನೀ, ಭ್ರಾಮಣೀ, ಶಾಮನೀ ಎಂದು ಐದು ತೆರನಾಗಿರುವುವು.

೧೧೯. ಧ್ಯೈ ಧಾತುವು ಚಿಂತಾರ್ಥಕವಾದುದರಿಂದ ತತ್ವದಲ್ಲಿ ದೃಢವಾದ ಚಿಂತೆಯು ಧ್ಯಾನವೆನ್ನಿಸಿಕೊಳ್ಳುವುದು. ಈ ಧ್ಯಾನವು ಸಗುಣ, ನಿರ್ಗುಣ ಎಂದು ಎರಡು ಬಗೆಯಾಗಿರುವುದು.

೧೨೦. ರೂಪಭೇದದಿಂದ ಮಾಡುವ ಧ್ಯಾನವು ಸಗುಣವೆಂದೂ, ರೂಪಾದಿಗಳಿಲ್ಲದ ಧ್ಯಾನವು ನಿರ್ಗುಣವೆಂದೂ ಹೇಳುವರು. ಸಗುಣಧ್ಯಾನವು ಮಂತ್ರಗಳಿಂದ ಸಹಿತವೂ, ನಿರ್ಗುಣಧ್ಯಾನವು ಮಂತ್ರರಹಿತವೂ ಆಗಿರುವುದು.

೧೨೧. ಸುಖಕರವಾದ ಆಸನದಲ್ಲಿ ಶರೀರವನ್ನು ಸಮವಾಗಿರಿಸಿ ಮನಸ್ಸನ್ನು ಒಳಗೂ, ಕಣ್ಣನ್ನು ಹೊರಗೂ ಇಟ್ಟುಕೊಂಡಿರುವುದು ಸಿದ್ಧಿಯನ್ನೀಯುವ ಜ್ಞಾನಮುದ್ರೆಯು.

ನಾಽಶ್ವಮೇಧೇನ ತತ್ಪುಣ್ಯಂ ನ ಚ ವೈ ರಾಜಸೂಯತಃ ।
ಯತ್ಪುಣ್ಯಮೇಕಧ್ಯಾನೇನ ಲಭೇದ್ಯೋಗೀ ಸ್ಥಿರಾಸನಃ ॥ ೧೨೨ ॥
ಶಬ್ದಾದೀನಾಂ ಚ ತನ್ಮಾತ್ರಾ ಯಾವತ್ಕರ್ಣಾದಿಷು ಸ್ಥಿತಾ ।
ತಾವದೇವ ಸ್ಮೃತಂ ಧ್ಯಾನಂ ಸ್ಯಾತ್ಸಮಾಧಿರತಃ ಪರಂ ॥ ೧೨೩ ॥
ಧಾರಣಾ ಪಂಚನಾಡೀಕಾ ಧ್ಯಾನಂ ಸ್ಯಾತ್ಷಷ್ಟಿನಾಡಿಕಂ ।
ದಿನದ್ವಾದಶಕೇನ ಸ್ಯಾತ್ಸಮಾಧಿರಿಹ ಭಣ್ಯತೇ ॥ ೧೨೪ ॥
ಜಲಸೈಂಧವಯೋಃ ಸಾಮ್ಯಂ ಯಥಾ ಭವತಿ ಯೋಗತಃ ।
ತಥಾತ್ಮಮನಸೋರೈಕ್ಯಂ ಸಮಾಧಿರಿಹ ಭಣ್ಯತೇ ॥ ೧೨೫ ॥
ಯದಾ ಸಂಕ್ಷೀಯತೇ ಪ್ರಾಣೋ ಮಾನಸಂ ಚ ಪ್ರಲೀಯತೇ ।
ತದಾ ಸಮರಸತ್ವಂ ಯತ್ಸ ಸಮಾಧಿರಿಹೋಚ್ಯತೇ ॥ ೧೨೬ ॥
ಯತ್ಸಮತ್ವಂ ದ್ವಯೋರತ್ರ ಜೀವಾತ್ಮಪರಮಾತ್ಮನೋಃ ।
ಸ ನಷ್ಟಸರ್ವಸಂಕಲ್ಪಃ ಸಮಾಧಿರಭಿಧೀಯತೇ ॥ ೧೨೭ ॥
ನಾತ್ಮಾನಂ ನ ಪರಂ ವೇತ್ತಿ ನ ಶೀತಂ ನೋಷ್ಣಮೇವಚ ।
ಸಮಾಧಿಯುಕ್ತೋ ಯೋಗೀಂದ್ರೋ ನ ಸುಖಂ ನ ಸುಖೇತರತ್ ॥

---

೧೨೨. ಸ್ಥಿರಾಸನವುಳ್ಳ ಯೋಗಿಯು ಒಂದು ಧ್ಯಾನದಿಂದ ಪಡೆಯುವ ಪುಣ್ಯವು ಅಶ್ವಮೇಧಯಾಗದಿಂದಲೂ, ರಾಜಸೂಯಯಾಗದಿಂದಲೂ ಲಭಿಸುವುದಿಲ್ಲ.

೧೨೩. ಶಬ್ದಾದಿಗಳ ತನ್ಮಾತ್ರೆಗಳು ಶ್ರೋತ್ರವೇ ಮೊದಲಾದ ಇಂದ್ರಿಯಗಳಲ್ಲಿರುವವರೆಗೆ ಧ್ಯಾನವೆನ್ನಿಸಿಕೊಳ್ಳುವುದು. ಬಳಿಕ ಸಮಾಧಿಯುಂಟಾಗುವುದು.

೧೨೪. ಧಾರಣೆಯು ಐದುಗಳಿಗೆಗಳವರೆಗೂ, ಧ್ಯಾನವು ಅರುವತ್ತುಗಳಿಗೆಗಳವರೆಗೂ, ಸಮಾಧಿಯು ಹನ್ನೆರಡುದಿನಗಳವರೆಗೂ ಆಗುವುದು.

೧೨೫. ನೀರು ಉಪ್ಪುಗಳು ಸೇರುವುದರಿಂದ ಎರಡೂ ಹೇಗೆ ಐಕ್ಯವಾಗುವುವೊ, ಹಾಗೆಯೇ ಆತ್ಮಮನಸ್ಸುಗಳ ಐಕ್ಯವು ಸಮಾಧಿಯೆನ್ನಿಸಿಕೊಳ್ಳುವುದು.

೧೨೬. ಪ್ರಾಣವು ಕ್ಷೀಣವಾಗಿ ಮನಸ್ಸು ಪ್ರಲೀನವಾಗಲು ಪರಮಾನಂದವುಂಟಾಗುವುದು. ಅದೇ ಸಮಾಧಿಯೆನ್ನಿಸಿಕೊಳ್ಳುವುದು.

೧೨೭. ಜೀವಾತ್ಮಪರಮಾತ್ಮರಿಗೆ ಸಾಮ್ಯವುಳ್ಳುದೂ, ಸಕಲಚಿಂತಾರಹಿತವೂ ಆದುದು ಯಾವುದೊ, ಅದೇ ಸಮಾಧಿಯೆನ್ನಿಸಿಕೊಳ್ಳುವುದು.

೧೨೮. ಸಮಾಧಿಯುಕ್ತನಾದ ಯೋಗೀಂದ್ರನು ತನ್ನನ್ನೂ, ಇತರರನ್ನೂ, ಶೀತೋಷ್ಣಗಳನ್ನೂ, ಸುಖದುಃಖಗಳನ್ನೂ ಅರಿಯುವುದಿಲ್ಲ.

ಕಾಲ್ಯತೇ ನೈವ ಕಾಲೇನ ಲಿಪ್ಯತೇ ನೈವ ಕರ್ಮಣಾ ।
ಭಿದ್ಯತೇ ನ ಚ ಶಸ್ತ್ರಾಽಸ್ತ್ರೈರ್ಯೋಗೀ ಯುಕ್ತಃ ಸಮಾಧಿನಾ ॥ ೧೨೯ ॥
ಯುಕ್ತಾಹಾರವಿಹಾರಶ್ಚ ಯುಕ್ತಚೇಷ್ಟೋಽಪಿ ಕರ್ಮಸು ।
ಯುಕ್ತನಿದ್ರಾಽವಬೋಧಶ್ಚ ಯೋಗೀ ತತ್ತ್ವಂ ಪ್ರಪಶ್ಯತಿ ॥ ೧೩೦ ॥
ತತ್ವಂ ವಿಜ್ಞಾನಮಾನಂದಂ ಬ್ರಹ್ಮ ಬ್ರಹ್ಮವಿದೋ ವಿದುಃ ।
ಹೇತುದೃಷ್ಟಾಂತರಹಿತಂ ವಾಙ್ಮನೋಭ್ಯಾಮಗೋಚರಂ ॥ ೧೩೧ ॥
ತತ್ರ ಯೋಗೀ ನಿರಾಲಂಬೇ ನಿರಾತಂಕೇ ನಿರಾಮಯೇ ।
ಷಡಂಗಯೋಗವಿಧಿನಾ ಪರೇ ಬ್ರಹ್ಮಣಿ ಲೀಯತೇ ॥ ೧೩೨ ॥
ಯಥಾ ಘೃತೇ ಘೃತಂ ಕ್ಷಿಪ್ತಂ ಘೃತಮೇವ ಹಿ ತದ್ಭವೇತ್ ।
ಕ್ಷೀರೇ ಕ್ಷೀರಂ ತಥಾ ಯೋಗೀ ತತ್ರ ತನ್ಮಯತಾಂ ವ್ರಜೇತ್ ॥ ೧೩೩ ॥
ಅನಸಂಜಾತಪಾನೀಯೈರ್ವಿದಧ್ಯಾದಂಗಮರ್ದನಂ ।
ತ್ಯಜೇತ್ಕಟುಷ್ಣಂ ಲವಣಂ ಕ್ಷೀರಭೋಜೀ ಸದಾಭವೇತ್ ॥ ೧೩೪ ॥
ಬ್ರಹ್ಮಚಾರೀ ಜಿತಕ್ರೋಧೋ ಜಿತಲೋಭೋ ವಿಮತ್ಸರಃ ।
ಅಬ್ದಮಿತ್ಥಂ ಸದಾಽಭ್ಯಾಸಾತ್ಸ ಯೋಗೀತಿ ನಿಗದ್ಯತೇ ॥ ೧೩೫ ॥

---

೧೨೯–೧೩೦. ಸಮಾಧಿಯುಕ್ತನಾದ ಯೋಗಿಯನ್ನು ಕಾಲವು ಚಂಚಲಗೊಳಿಸುವುದಿಲ್ಲ; ಕರ್ಮವು ಸಂಬಂಧಿಸುವುದಿಲ್ಲ. ಮಿತವಾದ ಆಹಾರವಿಹಾರವುಳ್ಳವನೂ, ಮಿತಕರ್ಮಿಯೂ, ಮಿತವಾದ ನಿದ್ರೆ ಮತ್ತು ಜಾಗರಣಗಳುಳ್ಳವನೂ ಆದ ಯೋಗಿಯು ಬ್ರಹ್ಮತತ್ತ್ವವನ್ನು ಅರಿಯುವನು.

೧೩೧. ಬ್ರಹ್ಮಜ್ಞಾನಿಗಳಾದ ಯೋಗಿಗಳು ಜ್ಞಾನಾನಂದರೂಪವೂ, ಹೇತು ದೃಷ್ಟಾಂತಗಳಿಲ್ಲದಿರುವುದೂ, ವಾಙ್ಮನಸ್ಸುಗಳಿಗೆ ಗೋಚರವಲ್ಲದಿರುವುದೂ ಆದ ಬ್ರಹ್ಮತತ್ವವನ್ನು ತಿಳಿಯುತ್ತಾರೆ.

೧೩೨. ಯೋಗಿಯು ಷಡಂಗಯೋಗಕ್ರಮದಿಂದ ಆಶ್ರಯ ಮತ್ತು ಭಯ ರೋಗಗಳಿಲ್ಲದ ಪರಬ್ರಹ್ಮನಲ್ಲಿ ಲೀನನಾಗುವನು.

೧೩೩. ತುಪ್ಪದಲ್ಲಿ ಸುರಿದ ತುಪ್ಪವು ತುಪ್ಪವೇ ಆಗುವಂತೆಯೂ, ಹಾಲಿನಲ್ಲಿ ಸುರಿದ ಹಾಲು ಹಾಲೇ ಆಗುವಂತೆಯೂ ಯೋಗಿಯು ಬ್ರಹ್ಮರೂಪನೇ ಆಗುವನು.

೧೩೪. ಯೋಗಿಯು ನೀರಾಗದ ಹಿಟ್ಟುಗಳಿಂದ ಮೈಯನ್ನುಜ್ಜಿಕೊಳ್ಳಬೇಕು. ಸ್ವಲ್ಪ ಬಿಸಿಯಾದ ವಸ್ತುವನ್ನೂ, ಉಪ್ಪನ್ನೂ ಬಿಡಬೇಕು. ಯಾವಾಗಲೂ ಹಾಲನ್ನು ಕುಡಿಯಬೇಕು.

೧೩೫. ಒಂದು ವರ್ಷ ಬ್ರಹ್ಮಚಾರಿಯೂ, ಕೋಪವನ್ನು ಜಯಿಸಿದವನೂ, ಅತ್ಯಾಶಿಯಲ್ಲದವನೂ, ಮಾತ್ಸರ್ಯಗಳಿಲ್ಲದವನೂ ಆಗಿ ಅಭ್ಯಾಸಮಾಡುವವನು ಯೋಗಿಯೆನ್ನಿಸಿಕೊಳ್ಳುವನು.

**ಮಹಾಮುದ್ರಾಂ ನಭೋಮುದ್ರಾಮುಡ್ಡೀಯಾನಂ ಜಲಂಧರಂ ।**
**ಮೂಲಬಂಧಂ ತು ಯೋ ವೇತ್ತಿ ಸ ಯೋಗೀ ಯೋಗಸಿದ್ಧಿಭಾಕ್ ॥೧೩೬॥**
**ಶೋಧನಂ ನಾಡಿಜಾಲಸ್ಯ ಘಟನಂ ಚಂದ್ರಸೂರ್ಯಯೋಃ ।**
**ರಸಾನಾಂ ಶೋಷಣಂ ಸಮ್ಯಙ್ಮಹಾಮುದ್ರಾಽಭಿಧೀಯತೇ ॥ ೧೩೭ ॥**
**ಯೋನಿಂ ವಾಮಾಂಘ್ರಿಣಾಽಽಪೀಡ್ಯ ಕೃತ್ವಾ ವಕ್ಷಸ್ಥಲೇ ಹನುಂ ।**
**ಹಸ್ತಾಭ್ಯಾಂ ಪ್ರಸೃತಂ ಪಾದಂ ಧಾರಯೇದ್ದಕ್ಷಿಣಂ ಚಿರಂ ॥ ೧೩೮ ॥**
**ಪ್ರಾಣೇನ ಕುಕ್ಷಿಮಾಪೂರ್ಯ ಚಿರಂ ಸಂರೇಚಯೇಚ್ಛನೈಃ ।**
**ಏಷಾ ಪ್ರೋಕ್ತಾ ಮಹಾಮುದ್ರಾ ಮಹಾಽಘೌಘವಿನಾಶಿನೀ ॥ ೧೩೯ ॥**
**ಚಂದ್ರಾಂಗೇತು ಸಮಭ್ಯಸ್ಯ ಸೂರ್ಯಾಂಗೇ ಪುನರಭ್ಯಸೇತ್ ।**
**ಯಾವತ್ತುಲ್ಯಾ ಭವೇತ್ಸಂಖ್ಯಾ ತತೋ ಮುದ್ರಾಂ ವಿಸರ್ಜಯೇತ್ ॥**
**ನಹಿ ಪಥ್ಯಮಪಥ್ಯಂ ವಾ ರಸಾಃ ಸರ್ವೇಽಪಿ ನೀರಸಾಃ ।**
**ಅಪಿ ಘೋರಂ ವಿಷಂ ಪೀತಂ ಪೀಯೂಷಮಿವ ಜೀರ್ಯತಿ ॥ ೧೪೧ ॥**
**ಕ್ಷಯಕುಷ್ಠಗುದಾವರ್ತಗುಲ್ಮಾಽಜೀರ್ಣಪುರೋಗಮಾಃ ।**
**ತಸ್ಯ ದೋಷಾಃ ಕ್ಷಯಂ ಯಾಂತಿ ಮಹಾಮುದ್ರಾಂ ಚ ಯೋಽಭ್ಯಸೇತ್ ॥**

---

೧೩೬. ಮಹಾಮುದ್ರಾ, ನಭೋಮುದ್ರಾ, ಉಡ್ಡೀಯಾನ, ಜಲಂಧರ, ಮೂಲಬಂಧ ಇವುಗಳನ್ನರಿತ ಯೋಗಿಯು ಯೋಗಸಿದ್ಧಿಯನ್ನು ಹೊಂದಿದವನಾಗುವನು.

೧೩೭. ಪೂರಕಾದಿಗಳಿಂದ ನಾಡಿಗಳ ಸಮೂಹವನ್ನು ಶೋಧಿಸುವುದೂ, ಇಡಾ ಪಿಂಗಳಾ ನಾಡಿಗಳನ್ನು ಸೇರಿಸುವುದೂ, ಸರಿಯಾಗಿ ವಿಕಾರಕ್ಕೆ ಕಾರಣಗಳಾದ ರಸಗಳನ್ನು ಒಣಗಿಸುವುದೂ ಮಹಾಮುದ್ರೆಯೆನ್ನಿಸಿಕೊಳ್ಳುವುದು.

೧೩೮–೧೪೦. ಎಡಗಾಲಿನಿಂದ ಗುಹ್ಯೇಂದ್ರಿಯವನ್ನು ಒತ್ತಿಕೊಂಡು ಎದೆಯಲ್ಲಿ ಕಪೋಲವನ್ನಿಟ್ಟು, ಎರಡು ಕೈಗಳಿಂದಲೂ ಚಾಚಿದ ಬಲಗಾಲನ್ನು ಹಿಡಿದುಕೊಂಡು ಗಾಳಿಯಿಂದ ಹೊಟ್ಟೆಯನ್ನು ತುಂಬಿ ಬಹಳಹೊತ್ತು ಮೆಲ್ಲನೆ ರೇಚನ ಮಾಡಬೇಕು. ಇದು ಅತಿಶಯವಾದ ಪಾಪವನ್ನು ಪರಿಹರಿಸುವ ಮಹಾಮುದ್ರೆಯಾಗಿರುವುದು. ಈ ಮಹಾಮುದ್ರೆಯನ್ನು ಮೊದಲು ಇಡಾ ನಾಡಿಯಲ್ಲಿ ಅಭ್ಯಾಸ ಮಾಡಿ ಅನಂತರ ಪಿಂಗಲಾ ನಾಡಿಯಲ್ಲಿ ಅಭ್ಯಾಸಮಾಡಬೇಕು. ಎರಡು ನಾಡಿಗಳಲ್ಲಿಯೂ ಅಭ್ಯಾಸವು ಸಮವಾದರೆ ಈ ಮುದ್ರೆಯನ್ನು ವಿಸರ್ಜಿಸಬೇಕು.

೧೪೧. ಈ ಮುದ್ರೆಯನ್ನು ಅಭ್ಯಾಸಮಾಡಿದರೆ ಪಥ್ಯಾಪಥಗಳಿಲ್ಲ. ಎಲ್ಲ ನೀರಸವಸ್ತುಗಳೂ ಸರಸವಾಗುವುವು. ಘೋರ ವಿಷವನ್ನು ಪಾನಮಾಡಿದರೂ ಅದು ಅಮೃತದಂತೆ ಜೀರ್ಣವಾಗುವುದು.

೧೪೨. ಈ ಮಹಾಮುದ್ರೆಯನ್ನು ಅಭ್ಯಾಸಮಾಡಿದವನು ಕ್ಷಯ, ಕುಷ್ಠ,

ಕಪಾಲಕುಹರೇ ಜಿಹ್ವಾ ಪ್ರವಿಷ್ಟಾ ವಿಪರೀತಗಾ ।
ಭ್ರುವೋರಂತರ್ಗತಾ ದೃಷ್ಟಿರ್ಮುದ್ರಾ ಭವತಿ ಖೇಚರೀ ॥ ೧೪೩ ॥
ನ ಪೀಡ್ಯತೇ ಶರೌಘೇಣ ನಚ ಲಿಪ್ಯೇತ ಕರ್ಮಣಾ ।
ಬಾಧ್ಯತೇ ನ ಸ ಕಾಲೇನ ಯೋ ಮುದ್ರಾಂ ವೇತ್ತಿ ಖೇಚರೀಂ ॥ ೧೪೪ ॥
ಚಿತ್ತಂ ಚರತಿ ಖೇ ಯಸ್ಮೈ ಜಿಹ್ವಾ ಚರತಿ ಖೇ ಗತಾ ।
ತೇನೈಷಾ ಖೇಚರೀನಾಮ ಮುದ್ರಾ ಸಿದ್ಧೈರ್ನಿಷೇವಿತಾ ॥ ೧೪೫ ॥
ಯಾವದ್ಬಿಂದುಃ ಸ್ಥಿತೋ ದೇಹೇ ತಾವನ್ಮೃತ್ಯುಭಯಂ ಕುತಃ ।
ಯಾವದ್ಬದ್ಧಾ ನಭೋಮುದ್ರಾ ತಾವದ್ಬಿಂದುರ್ನಗಚ್ಛತಿ ॥ ೧೪೬ ॥
ಉಡ್ಡೀನಂ ಕುರುತೇ ಯಸ್ಮಾದಹೋರಾತ್ರಂ ಮಹಾ ಖಗಃ ।
ಉಡ್ಡೀಯಾನಂ ತತಃ ಪ್ರೋಕ್ತಂ ತತ್ರ ಬಂಧೋ ವಿಧೀಯತೇ ॥ ೧೪೭ ॥
ಜಠರೇ ಪಶ್ಚಿಮಂ ತಾನಂ ನಾಭೇರೂರ್ಧ್ವಂ ಚ ಧಾರಯೇತ್ ।
ಉಡ್ಡೀಯಾನೋ ಹ್ಯಯಂ ಬಂಧೋ ಮೃತ್ಯೋರಪಿ ಭಯಂ ತ್ಯಜೇತ್ ॥
ಬಧ್ನಾತಿ ಹಿ ಶಿರಾಜಾಲಮಧೋಗಾಮಿ ನಭೋಜಲಂ ।
ಏಷ ಜಾಲಂಧರೋ ಬಂಧಃ ಕಂಠೇ ದುಃಖೌಘನಾಶನಃ ॥ ೧೪೯ ॥

---

ಮೂಲವ್ಯಾಧಿ, ಗುಲ್ಮರೋಗ, ಅಜೀರ್ಣ ಮೊದಲಾದ ದೋಷಗಳನ್ನು ನಾಶಗೊಳಿಸುವನು.

೧೪೩. ಕಪಾಲಕುಹರದಲ್ಲಿ ವ್ಯತ್ಯಾಸವಾಗಿ ಪ್ರವೇಶಿಸಿದ ನಾಲಿಗೆಯುಳ್ಳದೂ, ಹುಬ್ಬುಗಳ ನಡುವೆ ಇರುವ ದೃಷ್ಟಿಯುಳ್ಳದೂ ಆದ ಮುದ್ರೆಯು ಖೇಚರೀ ಮುದ್ರೆಯು.

೧೪೪. ಈ ಖೇಚರೀಮುದ್ರೆಯನ್ನರಿತವನನ್ನು ಬಾಣಗಳ ಸಮೂಹಗಳು ಪೀಡಿಸುವುದಿಲ್ಲ. ಕರ್ಮವು ಬಂಧಿಸುವುದಿಲ್ಲ. ಯಮನೂ ಬಾಧಿಸುವುದಿಲ್ಲ.

೧೪೫. ಮನಸ್ಸು ನಾಲಿಗೆಗಳು ಆಕಾಶದಲ್ಲಿ ಸಂಚರಿಸುವುದರಿಂದ ಖೇಚರೀ ಎಂದು ಪ್ರಸಿದ್ಧವಾಗಿರುವ ಈ ಮುದ್ರೆಯನ್ನು ಸಿದ್ಧರು ಸೇವಿಸುತ್ತಾರೆ.

೧೪೬. ಕೊನೆಯ ಧಾತುವು ಶರೀರದಲ್ಲಿರುವವರೆಗೆ ಮರಣಭಯವಿರುವುದಿಲ್ಲ. ಆಕಾಶಮುದ್ರೆಯನ್ನು ಧರಿಸಿರುವವರೆಗೆ ಬಿಂದುವು ಹೋಗುವುದಿಲ್ಲ.

೧೪೭. ಮಹಾಪ್ರಾಣವು ಹಗಲು ರಾತ್ರಿ ಹಾರುತ್ತಿರುವುದರಿಂದ ಈ ಬಂಧವು ಉಡ್ಡೀಯಾನ ಎನ್ನಿಸಿಕೊಳ್ಳುವುದು. ಅದರ ಬಂಧದ ಕ್ರಮವನ್ನು ಹೇಳುವೆನು.

೧೪೮. ಕೈಗಳ ಕೊನೆಯಿಂದ ಕಟಿ ಮಧ್ಯದಲ್ಲಿ ಹಿಡಿದುಕೊಂಡು ಕಾಲುಗಳ ಮಧ್ಯವನ್ನು ಹೊಟ್ಟೆ, ನಾಭಿಗಳ ಮೇಲೆ ಚಾಚಿದರೆ ಮೃತ್ಯುವಿಗೂ ಭಯವನ್ನುಂಟುಮಾಡುವ ಉಡ್ಡೀಯಾನಬಂಧವಾಗುವುದು.

೧೪೯. ಕೆಳಗೆ ಹೋಗುತ್ತಿರುವ ಶರೀರದ ಛಿದ್ರದಲ್ಲಿರುವ ನೀರನ್ನು ನಾಡಿಯ

**ಜಾಲಂಧರೇ ಕೃತೇ ಬಂಧೇ ಕಂಠಸಂಕೋಚಲಕ್ಷಣೇ ।**
**ನ ಪೀಯೂಷಂ ಪತತ್ಯಗ್ನೌ ನಚ ವಾಯುಃ ಪ್ರಧಾವತಿ ॥ ೧೫೦ ॥**
**ಪಾರ್ಷ್ಣಿಭಾಗೇನ ಯೋನಿಮಾಕುಂಚಯೇದ್ಗುದಂ ।**
**ಅಪಾನಮೂರ್ಧ್ವಮಾಕೃಷ್ಯ ಮೂಲಬಂಧೋ ವಿಧೀಯತೇ ॥ ೧೫೧ ॥**
**ಅಪಾನಪ್ರಾಣಯೋರೈಕ್ಯೇ ಕ್ಷಯೋ ಮೂತ್ರಪುರೀಷಯೋಃ ।**
**ಯುವಾ ಭವತಿ ವೃದ್ಧೋಽಪಿ ಸತತಂ ಮೂಲಬಂಧನಾತ್ ॥ ೧೫೨ ॥**
**ಪ್ರಾಣಾಽಪಾನವಶೋ ಜೀವ ಊರ್ಧ್ವಾಽಧಃ ಪರಿಧಾವತಿ ।**
**ವಾಮದಕ್ಷಿಣಮಾರ್ಗೇಣ ಚಂಚಲೋ ನ ಸ್ಥಿತಿಂ ಲಭೇತ್ ॥ ೧೫೩ ॥**
**ಗುಣಬದ್ಧೋ ಯಥಾ ಪಕ್ಷೀ ಗತೋಽಪ್ಯಾಕೃಷ್ಯತೇ ಪುನಃ ।**
**ಗುಣೈರ್ಬದ್ಧಸ್ತಥಾ ಜೀವಃ ಪ್ರಾಣಾಯಾಮೇನ ಕೃಷ್ಯತೇ ॥ ೧೫೪ ॥**
**ಅಪಾನಃ ಕರ್ಷತಿ ಪ್ರಾಣಂ ಪ್ರಾಣೋಽಪಾನಂ ಚ ಕರ್ಷತಿ ।**
**ಊರ್ಧ್ವಾಽಧಃ ಸಂಸ್ಥಿತಾವೇತೌ ಸಂಯೋಜಯತಿ ಯೋಗವಿತ್ ॥ ೧೫೫ ॥**
**ಹಕಾರೇಣ ಬಹಿರ್ಯಾತಿ ಸಕಾರೇಣ ವಿಶೇತ್ಪುನಃ ।**
**ಹಂಸ ಹಂಸೇತ್ಯತೋ ಮಂತ್ರಂ ಜೀವೋ ಜಪತಿ ಸರ್ವದಾ ॥ ೧೫೬ ॥**

---

ಸಮೂಹವು ಕಂಠದಲ್ಲಿ ತಡೆಯುವುದಕ್ಕೆ ಪಾಪವನ್ನು ನಾಶಗೊಳಿಸುವ ಜಾಲಂಧರ ಬಂಧವೆನ್ನುವರು.

೧೫೦. ಕಂಠವನ್ನು ಸಂಕೋಚಗೊಳಿಸುವ ಜಾಲಂಧರಬಂಧವನ್ನು ಮಾಡಲು ಹಣೆಯಲ್ಲಿರುವ ಅಮೃತವು ಜಠರಾಗ್ನಿಯಲ್ಲಿ ಬೀಳುವುದಿಲ್ಲ. ವಾಯುವು ಪ್ರಕೋಪಗೊಳ್ಳುವುದಿಲ್ಲ.

೧೫೧. ಕಾಲಿನ ಹಿಮ್ಮಡಿಯಿಂದ ಗುಹ್ಯೇಂದ್ರಿಯವನ್ನು ಒತ್ತಿಕೊಂಡು, ಅಪಾನವಾಯುವನ್ನು ಮೇಲಕ್ಕೆ ಸೆಳೆದು ಗುದವನ್ನು ಸಂಕೋಚಗೊಳಿಸಿದರೆ ಮೂಲಬಂಧವೆನ್ನಿಸಿಕೊಳ್ಳುವುದು.

೧೫೨. ಮೂಲಬಂಧನದಿಂದ ಅಪಾನಪ್ರಾಣಗಳ ಐಕ್ಯವಾಗಲು ಮಲಮೂತ್ರಗಳು ಕ್ಷಯಿಸುವುವು. ಅದರಿಂದ ವೃದ್ಧನೂ ಯುವಕನಾಗುವನು.

೧೫೩. ಪ್ರಾಣಾಪಾನಗಳಿಗೆ ಅಧೀನವಾದ ಜೀವವು ಕೆಳಗೂ, ಮೇಲೂ ಎಡಬಲ ಭಾಗಗಳಿಂದ ಸಂಚರಿಸುತ್ತದೆಯಾಗಿ ಸ್ಥಿರವಾಗಿ ನಿಲ್ಲುವುದಿಲ್ಲ.

೧೫೪. ದಾರದಿಂದ ಕಟ್ಟಲ್ಪಟ್ಟ ಪಕ್ಷಿಯು ಕೆಳಕ್ಕೂ ಮೇಲಕ್ಕೂ ಎಳೆಯುವಂತೆ ಸತ್ವರಜಸ್ತಮೋಗುಣಗಳಿಂದ ಬದ್ಧವಾದ ಜೀವವನನ್ನು ಪ್ರಾಣಾಯಾಮವು ಎಳೆಯುವುದು.

೧೫೫. ಅಪಾನವು ಪ್ರಾಣವನ್ನೂ, ಪ್ರಾಣವು ಅಪಾನವನ್ನೂ ಎಳೆಯುವುದು. ಯೋಗಿಯು ಕೆಳಗೂ ಮೇಲೂ ಇರುವ ಇವುಗಳನ್ನು ಸೇರಿಸುವನು.

೧೫೬. ಜೀವವು ಹಕಾರದಿಂದ ಹೊರಗೆ ಬರುವುದು. ಸಕಾರದಿಂದ ಮರಳಿ

ಷಟ್ಶತಾತಿದಿವಾರಾತ್ರೌ ಸಹಸ್ರಾಣ್ಯೇಕವಿಂಶತಿಃ ।
ಏತತ್ಸಂಖ್ಯಾನ್ವಿತಂ ಮಂತ್ರಂ ಜೀವೋ ಜಪತಿ ಸರ್ವದಾ ॥ ೧೫೭ ॥
ಅಜಪಾ ನಾಮ ಗಾಯತ್ರೀ ಯೋಗಿನಾಂ ಮೋಕ್ಷದಾಯಿನೀ ।
ಅಸ್ಯಾಃ ಸಂಕಲ್ಪಮಾತ್ರೇಣ ನರಃ ಪಾಪೈಃ ಪ್ರಮುಚ್ಯತೇ ॥ ೧೫೮ ॥
ಅಂತರಾಯಾ ಭವಂತೀಹ ಯೋಗಿನೋ ಯೋಗಹಾನಿದಾಃ ।
ಶ್ರೂಯತೇ ದೂರಗಾ ವಾರ್ತಾ ದೂರಸ್ಥಂ ದೃಶ್ಯತೇ ಪುರಃ ॥ ೧೫೯ ॥
ಯೋಜನಾನಾಂ ಶತಂ ಯಾತುಂ ಶಕ್ತಿಃ ಸ್ಯಾನ್ನಿಮಿಷಾರ್ಧತಃ ।
ಅಚಿಂತಿತಾನಿ ಶಾಸ್ತ್ರಾಣಿ ಕಂಠಪಾಠೀ ಭವಂತಿಹಿ ॥ ೧೬೦ ॥
ಧಾರಣಾಶಕ್ತಿರತ್ಯಗ್ರಾ ಮಹಾಭಾರೋ ಲಘುರ್ಭವೇತ್ ।
ಕ್ಷಣಂ ಕೃಶಃ ಕ್ಷಣಂ ಸ್ಥೂಲಃ ಕ್ಷಣಮಲ್ಪಃ ಕ್ಷಣಂ ಮಹಾನ್ ॥ ೧೬೧ ॥
ಪರಕಾಯಂ ಪ್ರವಿಶತಿ ತಿರಶ್ಚಾಂ ವೇತ್ತಿ ಭಾಷಿತಂ ।
ದಿವ್ಯಗಂಧಂ ತನೌ ಧತ್ತೇ ದಿವ್ಯಾಂ ವಾಣೀಂ ಪ್ರವಕ್ತಿಚ ॥ ೧೬೨ ॥

---

ಒಳಗೆ ಪ್ರವೇಶಿಸುವುದು. ಆದುದರಿಂದ ಜೀವವು ಯಾವಾಗಲೂ ಹಂಸ ಹಂಸ ಎಂಬ ಮಂತ್ರವನ್ನು ಜಪಿಸುತ್ತಿರುವುದು.

೧೫೭. ಜೀವವು ಹಗಲು ರಾತ್ರಿ ಯಾವಾಗಲೂ ಇಪ್ಪತ್ತೊಂದುಸಾವಿರದ ಆರನೂರುಸಾರಿ ಈ ಮಂತ್ರವನ್ನು ಜಪಿಸುವುದು.

೧೫೮. ಅಜಪಾ ಎಂಬ ಈ ಗಾಯತ್ರಿಯು ಯೋಗಿಗಳಿಗೆ ಮೋಕ್ಷವನ್ನೀಯುವುದು. ಇದರ ಸಂಕಲ್ಪದಿಂದಲೇ ಮನುಷ್ಯನು ಪಾಪಮುಕ್ತನಾಗುವನು.

೧೫೯. ಹೀಗೆ ಜಪಿಸುವಾಗ ಯೋಗಿಗೆ, ಯೋಗವನ್ನು ಕೆಡಿಸುವ ವಿಘ್ನಗಳು ಉಂಟಾಗುವುವು. ದೂರದ ವಾರ್ತೆಯು ಕೇಳಿಸುವುದು. ದೂರದಲ್ಲಿರುವ ವಸ್ತುವು ಮುಂದೆಯೇ ಕಾಣಿಸುವುದು.

೧೬೦. ಅವನು ಅರ್ಧನಿಮಿಷದಲ್ಲಿ ನೂರುಯೋಜನದ ದೂರ ಹೋಗಲು ಶಕ್ತನಾಗುವನು. ಆಲೋಚಿಸದ ಶಾಸ್ತ್ರಗಳೂ ಕಂಠಪಾಠವಾಗುವುವು.

೧೬೧. ಅತಿ ಕಠಿನವಾದ ಧಾರಣಾಶಕ್ತಿಯುಂಟಾಗುವುದು. ಮಹಾಭಾರವು ಲಘುವಾಗುವುದು. ಕ್ಷಣಕಾಲದಲ್ಲಿ ಕೃಶನೂ, ಕ್ಷಣಕಾಲದಲ್ಲಿ ಸ್ಥೂಲನೂ, ಇನ್ನೊಂದು ಕ್ಷಣದಲ್ಲಿ ಸಣ್ಣವನೂ, ಮತ್ತೊಂದು ಕ್ಷಣದಲ್ಲಿ ದೊಡ್ಡವನೂ ಆಗುವನು.

೧೬೨. ಪರರ ಶರೀರವನ್ನು ಪ್ರವೇಶಿಸುವನು. ತಿರ್ಯಗ್ಜಂತುಗಳ ಮಾತನ್ನು ಅರಿಯುವನು. ಶರೀರವು ದಿವ್ಯವಾಸನೆಯುಳ್ಳದ್ದಾಗುವುದು. ದಿವ್ಯವಾಣಿಯಿಂದ ಮಾತಾಡುವನು.

ಪ್ರಾರ್ಥ್ಯತೇ ದಿವ್ಯಕನ್ಯಾಭಿರ್ದಿವ್ಯಂ ಧಾರಯತೇ ವಪುಃ ।
ಇತ್ಯಾದಯೋಽಂತರಾಯಾಃ ಸ್ಯುರ್ಯೋಗಸಂಸಿದ್ಧಿಸೂಚಕಾಃ ॥ ೧೬೩ ॥
ಯದ್ಯೇಭಿರಂತರಾಯೈರ್ನ ಕ್ಷಿಪ್ಯತೇಽಸ್ಯೇಹ ಮಾನಸಂ ।
ತದಗ್ರೇ ತತ್ಸಮಾಪ್ನೋತಿ ಪದಂ ಬ್ರಹ್ಮಾದಿದುರ್ಲಭಂ ॥ ೧೬೪ ॥
ಯತ್ಪ್ರಾಪ್ಯ ನ ನಿವರ್ತೇತ ಯತ್ಪ್ರಾಪ್ಯ ನ ಚ ಶೋಚತಿ ।
ತಲ್ಲಭ್ಯತೇ ಷಡಂಗೇನ ಯೋಗೇನ ಕಲಶೋದ್ಭವ ॥ ೧೬೫ ॥
ಏಕೇನ ಜನ್ಮನಾ ಯೋಗಃ ಕಥಮಿತ್ಥಂ ಪ್ರಸಿಧ್ಯತಿ ।
ಋತೇಚ ಯೋಗಸಂಸಿದ್ಧೇಃ ಕಥಂ ಮುಕ್ತಿರಿಹಾಪ್ಯತೇ ॥ ೧೬೬ ॥
ಉಭೇ ಏವ ಹಿ ನಿರ್ವಾಣವರ್ತ್ಮನೀ ಕಿಲ ಕುಂಭಜ ।
ಕಿಂ ವಾ ಕಾಶ್ಯಾಂ ತನುತ್ಯಾಗಃ ಕಿಂ ವಾ ಯೋಗೋಽಯಮೀದೃಶಃ ॥
ಚಂಚಲೇಂದ್ರಿಯವೃತ್ತಿತ್ವಾತ್ಕಲಿಕಲ್ಮಷಜೃಂಭಣಾತ್ ।
ಅಲ್ಪಾಯುಷಾಂ ತಥಾ ನೄಣಾಂ ಕ್ವೇಹ ಯೋಗಮಹೋದಯಃ ॥
ಅತ ಏವಹಿ ಜಂತೂನಾಂ ಮಹೋದಯಪದಪ್ರದಃ ।
ಸದೈವ ಸದಯಾವಾರ್ಧಿಃ ಕಾಶ್ಯಾಂ ವಿಶ್ವೇಶ್ವರಃ ಸ್ಥಿತಃ ॥ ೧೬೯ ॥

---

೧೬೩. ಅವನನ್ನು ದಿವ್ಯಕನ್ಯೆಯರು ಪ್ರಾರ್ಥಿಸುವರು. ದಿವ್ಯಶರೀರವನ್ನು ಧರಿಸುವನು. ಯೋಗಸಿದ್ಧಿಯನ್ನು ಸೂಚಿಸುವ ಇವೇ ಮೊದಲಾದ ವಿಘ್ನಗಳು ಯೋಗಿಗೆ ಉಂಟಾಗುವುವು.

೧೬೪. ಅವನ ಮನಸ್ಸು ಈ ವಿಘ್ನಗಳಿಂದ ಚಂಚಲವಾಗದಿದ್ದರೆ ಅನಂತರ ಅವನು ಬ್ರಹ್ಮಾದಿಗಳಿಗೂ ಹೊಂದಲಾಗದ ಸ್ಥಾನವನ್ನು ಹೊಂದುವನು.

೧೬೫. ಅಗಸ್ತ್ಯ! ಷಡಂಗಯೋಗದಿಂದ ಯೋಗಿಯು ಪುನರಾವೃತ್ತಿ, ದುಃಖಗಳಿಲ್ಲದ ಸ್ಥಾನವನ್ನು ಪಡೆಯುವನು.

೧೬೬. ಒಂದೇ ಜನ್ಮದಿಂದ ಇಂತಹ ಯೋಗವು ಹೇಗೆ ಸಿದ್ಧಿಸುವುದು? ಯೋಗಸಿದ್ಧಿಯಿಲ್ಲದೆ ಮೋಕ್ಷವು ಹೇಗೆ ಲಭಿಸುವುದು?

೧೬೭. ಕಾಶಿಯಲ್ಲಿ ಶರೀರವನ್ನು ಬಿಡುವುದಾಗಲಿ, ಇಂತಹ ಯೋಗವಾಗಲಿ ಇವೆರಡೇ ಮೋಕ್ಷದ ದಾರಿಗಳು.

೧೬೮. ಮನುಷ್ಯರು ಚಂಚಲೇಂದ್ರಿಯರಾದುದರಿಂದಲೂ, ಕಲಿಕಲ್ಮಷವು ಹೆಚ್ಚುವುದರಿಂದಲೂ, ಅಲ್ಪಾಯುಷ್ಯವುಳ್ಳವರಾದುದರಿಂದಲೂ ಇಂತಹ ಯೋಗವು ಅವರಿಗೆ ಹೇಗೆ ಸಿದ್ಧಿಸುವುದು?

೧೬೯. ಆದುದರಿಂದ ಪ್ರಾಣಿಗಳಿಗೆ ಮಹೋದಯವನ್ನೀಯುವವನೂ, ದಯಾಸಮುದ್ರನೂ ಆದ ವಿಶ್ವೇಶ್ವರನು ಕಾಶಿಯಲ್ಲಿ ನೆಲೆಸಿರುವನು. ಅವನನ್ನು ಸೇವಿಸಬೇಕು.

ಕಾಶ್ಯಾಂ ಸುಖೇನ ಕೈವಲ್ಯಂ ಯಥಾ ಲಭ್ಯೇತ ಜಂತುಭಿಃ ।
ಯೋಗಯುಕ್ತ್ಯಾದ್ಯುಪಾಯೈಶ್ಚ ನ ತಥಾಽನ್ಯತ್ರ ಕುತ್ರಚಿತ್ ॥ ೧೭೦ ॥
ಕಾಶ್ಯಾಂ ಸ್ವದೇಹಸಂಯೋಗಃ ಸಮ್ಯಗ್ಯೋಗ ಉದಾಹೃತಃ ।
ಮುಚ್ಯತೇ ನೇಹ ಯೋಗೇನ ಕ್ಷಿಪ್ರಮನ್ಯೇನ ಕೇನಚಿತ್ ॥ ೧೭೧ ॥
ವಿಶ್ವೇಶ್ವರೋ ವಿಶಾಲಾಕ್ಷೀ ದ್ಯುನದೀ ಕಾಲಭೈರವಃ ।
ಶ್ರೀಮಾನ್ಢುಂಢಿರ್ದಂಡಪಾಣಿಃ ಷಡಂಗೋ ಯೋಗ ಏಷ ವೈ ॥ ೧೭೨ ॥
ಏತತ್ಷಡಂಗಂ ಯೋ ಯೋಗಂ ನಿತ್ಯಂ ಕಾಶ್ಯಾಂ ನಿಷೇವತೇ ।
ಸಂಪ್ರಾಪ್ಯ ಯೋಗನಿದ್ರಾಂ ಸ ದೀರ್ಘಾಮಮೃತಮಶ್ನುತೇ ॥ ೧೭೩ ॥
ಓಂಕಾರಃ ಕೃತ್ತಿವಾಸಾಶ್ಚ ಕೇದಾರಶ್ಚ ತ್ರಿವಿಷ್ಟಪಃ ।
ವೀರೇಶ್ವರೋಥ ವಿಶ್ವೇಶಃ ಷಡಂಗೋಽಯಮಿಹಾಽಪರಃ ॥ ೧೭೪ ॥
ಪಾದೋದಕಾಸಿಸಂಭೇದಜ್ಞಾನೋದಮಣಿಕರ್ಣಿಕಾಃ ।
ಷಡಂಗೋಽಯಂ ಮಹಾಯೋಗೋ ಬ್ರಹ್ಮಧರ್ಮಹ್ರದಾವಪಿ ॥ ೧೭೫ ॥
ಷಡಂಗಸೇವನಾದಸ್ಮಾದ್ವಾರಾಣಸ್ಯಾಂ ನರೋತ್ತಮ ।
ನ ಜಾತು ಜಾಯತೇ ಜಂತುರ್ಜನನೀಜಠರೇ ಪುನಃ ॥ ೧೭೬ ॥
ಗಂಗಾಸ್ನಾನಂ ಮಹಾಮುದ್ರಾ ಮಹಾಪಾತಕನಾಶನೀ ।
ಏತನ್ಮುದ್ರಾ ಕೃತಾಽಭ್ಯಾಸೋಽಪ್ಯಮೃತತ್ವಮವಾಪ್ನುಯಾತ್ ॥ ೧೭೭ ॥

---

೧೭೦. ಪ್ರಾಣಿಗಳಿಗೆ ಕಾಶಿಯಲ್ಲಿ ಸುಖವಾಗಿ ಮೋಕ್ಷವು ಲಭಿಸುವಂತೆ ಇತರ ಕಡೆಗಳಲ್ಲಿ ಯೋಗಾದ್ಯುಪಾಯಗಳಿಂದ ದೊರೆಯುವುದಿಲ್ಲ.

೧೭೧. ಕಾಶಿಯಲ್ಲಿ ಸ್ವದೇಹಸಂಬಂಧವೇ ಯೋಗವೆನ್ನಿಸಿಕೊಳ್ಳುವುದು. ಇಲ್ಲಿ ಇತರ ಯಾವ ಯೋಗದಿಂದಲೂ ಮೋಕ್ಷವಾಗುವುದಿಲ್ಲ.

೧೭೨. ಇಲ್ಲಿ ವಿಶ್ವೇಶ್ವರ, ವಿಶಾಲಾಕ್ಷೀ, ಗಂಗೆ, ಕಾಲಭೈರವ, ಢುಂಢಿ, ದಂಡಪಾಣಿ ಇವರೇ ಷಡಂಗಯೋಗಸ್ವರೂಪರು.

೧೭೩. ಕಾಶಿಯಲ್ಲಿ ಈ ಷಡಂಗಯೋಗವನ್ನು ನಿತ್ಯವೂ ಸೇವಿಸುವವನು ದೀರ್ಘವಾದ ಯೋಗನಿದ್ರೆಯನ್ನು ಹೊಂದಿ ಮೋಕ್ಷವನ್ನು ಪಡೆಯುವನು.

೧೭೪. ಓಂಕಾರ, ಕೃತ್ತಿವಾಸ, ಕೇದಾರ, ತ್ರಿವಿಷ್ಟಪ, ವೀರೇಶ್ವರ, ವಿಶ್ವೇಶ ಇವರು ಮತ್ತೊಂದು ಷಡಂಗಯೋಗವು.

೧೭೫. ಪಾದೋದಕ, ಅಸಿಸಂಭೇದ, ಜ್ಞಾನೋದ, ಮಣಿಕರ್ಣಿಕಾ, ಬ್ರಹ್ಮಹ್ರದ, ಧರ್ಮಹ್ರದ ಇವುಗಳು ಮಹಾಯೋಗಗಳು.

೧೭೬. ಕಾಶಿಯಲ್ಲಿ ಈ ಷಡಂಗಗಳನ್ನು ಸೇವಿಸುವ ಪ್ರಾಣಿಯು ಮರಳಿ ಯಾವಾಗಲೂ ತಾಯಿಯ ಜಠರದಲ್ಲಿ ಜನಿಸುವುದಿಲ್ಲ.

೧೭೭. ಗಂಗಾಸ್ನಾನವೆಂಬ ಮಹಾಮುದ್ರೆಯು ಮಹಾಪಾಪವನ್ನು ನಿವಾರಿ

**ಕಾಶೀವೀಥಿಷು ಸಂಚಾರೋ ಮುದ್ರಾಭವತಿ ಖೇಚರೀ ।**
**ಖೇಚರೋ ಜಾಯತೇ ನೂನಂ ಖೇಚರ್ಯಾ ಮುದ್ರಯಾಽನಯಾ ॥**
**ಉಡ್ಡೀಯ ಸರ್ವತೋ ದೇಶಾದ್ಯಾನಂ ವಾರಾಣಸೀಂ ಪ್ರತಿ ।**
**ಉಡ್ಡೀಯಾನೋ ಮಹಾಬಂಧ ಏಷ ಮುಕ್ತ್ಯೈ ಪ್ರಕಲ್ಪತೇ ॥ ೧೭೯ ॥**
**ಜಲಸ್ಯ ಧಾರಣಂ ಮೂರ್ಧ್ನಿ ವಿಶ್ವೇಶಸ್ನಾನಜನ್ಮನಃ ।**
**ಏಷ ಜಾಲಂಧರೋ ಬಂಧಃ ಸಮಸ್ತಸುರದುರ್ಲಭಃ ॥ ೧೮೦ ॥**
**ವೃತೋ ವಿಘ್ನಶತೇನಾಽಪಿ ಯನ್ನ ಕಾಶೀಂ ತ್ಯಜೇತ್ಸುಧೀಃ ।**
**ಮೂಲಬಂಧಃ ಸ್ಮೃತೋ ಹ್ಯೇಷ ದುಃಖಮೂಲನಿಕೃಂತನಃ ॥ ೧೮೧ ॥**
**ಇತಿ ಯೋಗಃ ಸಮಾಖ್ಯಾತೋ ಮಯಾ ತೇ ದ್ವಿವಿಧೋ ಮುನೇ ।**
**ಸ ಷಡಂಗಃ ಸಮುದ್ರಶ್ಚ ಮುಕ್ತಯೇ ಶಂಭುಭಾಷಿತಃ ॥ ೧೮೨ ॥**
**ಯಾವನ್ನೇಂದ್ರಿಯ ವೈಕ್ಲವ್ಯಂ ಯಾವದ್ವ್ಯಾಧಿರ್ನ ಬಾಧತೇ ।**
**ಯಾವತ್ಕಾಲವಿಲಂಬೋಽಸ್ತಿ ತಾವದ್ಯೋಗರತೋ ಭವೇತ್ ॥ ೧೮೩ ॥**
**ಉಭಯೋರ್ಯೋಗಯೋರ್ಮಧ್ಯೇ ಕಾಶೀಯೋಗೋಽಯಮುತ್ತಮಃ ।**
**ಕಾಶೀಯೋಗಂ ಸಮಭ್ಯಸ್ಯ ಪ್ರಾಪ್ನುಯಾದ್ಯೋಗಮುತ್ತಮಂ ॥ ೧೮೪ ॥**

---

ಸುವುದು. ಈ ಮುದ್ರೆಯನ್ನು ಅಭ್ಯಾಸಮಾಡಿದವನು ಮೋಕ್ಷವನ್ನು ಹೊಂದುವನು.

೧೭೮. ಕಾಶಿಯ ಬೀದಿಗಳಲ್ಲಿ ಸಂಚರಿಸುವುದು ಖೇಚರೀಮುದ್ರೆಯಾಗುವುದು. ಈ ಖೇಚರಮುಂದ್ರೆಯಿಂದ ಮಾನವನು ದೇವತೆಯಾಗುವನು.

೧೭೯. ಸಮಸ್ತದೇಶಗಳಿಂದಲೂ ಕಾಶಿಯನ್ನು ಕುರಿತು ಪ್ರಯಾಣಮಾಡುವುದು ಉಡ್ಡೀಯಾನವೆಂಬ ಮಹಾಬಂಧವು. ಇದರಿಂದ ಮುಕ್ತಿಯುಂಟಾಗುವುದು.

೧೮೦. ವಿಶ್ವೇಶ್ವರನಿಗೆ ಅಭಿಷೇಕಮಾಡಿದ ನೀರನ್ನು ತಲೆಯಲ್ಲಿ ಹೊರುವುದು ಜಾಲಂಧರವೆಂಬ ದೇವದುರ್ಲಭಯೋಗವು.

೧೮೧. ಜ್ಞಾನಿಯು ಅನೇಕ ವಿಘ್ನಗಳಿಂದಲೂ ಕಾಶಿಯನ್ನು ಬಿಡದಿರುವುದೇ ಮೂಲಬಂಧವೆಂಬ ಯೋಗವು. ಇದು ದುಃಖಕಾರಣವನ್ನು ನಾಶಗೊಳಿಸುವುದು.

೧೮೨. ಮುನಿಯೇ! ಈಗ ನಾನು ನಿನಗೆ ಮುಕ್ತಿಗಾಗಿ ಮಹೇಶ್ವರನು ಹೇಳಿದ ಷಡಂಗ ಮತ್ತು ಮುದ್ರೆಗಳಿಂದ ಸಹಿತವಾದ ದ್ವಿವಿಧಯೋಗವನ್ನು ಹೇಳಿರುವೆನು.

೧೮೩. ಇಂದ್ರಿಯವೈಕಲ್ಯ, ವ್ಯಾಧಿ, ಕಾಲವಿಳಂಬಗಳಾಗದಿರುವವರೆಗೆ ಯೋಗಾಭ್ಯಾಸದಲ್ಲಿ ಆಸಕ್ತನಾಗಿರಬೇಕು.

೧೮೪. ಈ ಎರಡು ಯೋಗಗಳಲ್ಲಿ ಕಾಶೀಯೋಗವೇ ಉತ್ತಮವಾದುದು. ಕಾಶೀಯೋಗವನ್ನು ಅಭ್ಯಾಸ ಮಾಡಿದರೆ ಉತ್ತಮಯೋಗವನ್ನು ಹೊಂದುವನು.

ಆಧಿವ್ಯಾಧಿಸಹಾಯಿನ್ಯಾ ಜರಯಾ ಮೃತ್ಯುಲಿಂಗಯಾ ।
ಕಾಲಂ ನಿಕಟತೋ ಜ್ಞಾತ್ವಾ ಕಾಶೀನಾಥಂ ಸಮಾಶ್ರಯೇತ್ ॥ ೧೪೫ ॥
ಕಾಶೀನಾಥಂ ಸಮಾಶ್ರಿತ್ಯ ಕುತಃ ಕಾಲಭಯಂ ನೃಣಾಂ ।
ಕ್ರುದ್ಧೋಽಪಿ ಜೀವಹೃತ್ಕಾಲಸ್ತತ್ರ ಕಾಶ್ಯಾಂ ಸುಮಂಗಲಂ ॥ ೧೪೬ ॥
ಆತಿಥ್ಯೇನೇಹನಿ ಯಥಾ ಪ್ರತೀಕ್ಷೇತಾಽತಿಥಿಂ ಕೃತೀ ।
ಕಾಶ್ಯಾಂ ಕಾಲಂ ತಥಾಯಾಂತಂ ಭಾಗ್ಯವಾನ್ಸಂಪ್ರತೀಕ್ಷತೇ ॥ ೧೪೭ ॥
ಕಲಿಃ ಕಾಲಃ ಕೃತಂ ಕರ್ಮ ತ್ರಿಕಂಟಕಮಿತೀರಿತಂ ।
ಏತತ್ತ್ರಯಂ ನ ಪ್ರಭವೇದಾನಂದವನವಾಸಿನಾಂ ॥ ೧೪೮ ॥
ಅನ್ಯತ್ರಾಽತರ್ಕಿತಃ ಕಾಲಃ ಕಲಯಿಷ್ಯತ್ಯಸಂಶಯಂ ।
ಕಾಲಾದಭಯಮಿಚ್ಛೇಚ್ಚೇತ್ತತಃ ಕಾಶೀಂ ಸಮಾಶ್ರಯೇತ್ ॥ ೧೪೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಯೋಗಾಽಽಖ್ಯಾನಂ"
ನಾಮೈಕಚತ್ವಾರಿಂಶೋಽಧ್ಯಾಯಃ

---

೧೪೫. ಮೃತ್ಯುವಿನ ಚಿಹ್ನೆಯಾದ ಆಧಿವ್ಯಾಧಿ ಸಹಾಯವುಳ್ಳ ಮುಪ್ಪಿನಿಂದ ಕಾಲನು ಹತ್ತಿರವಾಗಿರುವನೆಂದು ತಿಳಿದು ಕಾಶೀನಾಥನನ್ನು ಆಶ್ರಯಿಸಬೇಕು.

೧೪೬. ಕಾಶೀನಾಥನನ್ನಾಶ್ರಯಿಸಿದ ಮಾನವರಿಗೆ ಕಾಲಭಯವೆತ್ತಣದು ? ಜೀವವನ್ನು ಅಪಹರಿಸುವ ಕಾಲನು ಕುಪಿತನಾಗಿದ್ದರೂ ಕಾಶಿಯಲ್ಲಿ ಮಂಗಳ ವುಂಟಾಗುವುದು.

೧೪೭. ಪುಣ್ಯವಂತನು ಆತಿಥ್ಯಮಾಡುವ ದಿವಸ ಅತಿಥಿಯನ್ನು ನಿರೀಕ್ಷಿಸು ವಂತೆ ಕಾಶಿಯಲ್ಲಿ ಬರುತ್ತಿರುವ ಮರಣಕಾಲವನ್ನು ನಿರೀಕ್ಷಿಸುತ್ತಾನೆ.

೧೪೮. ಕಲಿಯುಗ, ಕಾಲ, ಕೃತಕರ್ಮ ಇವು ಮೂರೂ ತ್ರಿಕಂಟಕವೆನ್ನಿಸಿ ಕೊಳ್ಳುವುವು. ಆನಂದವನದಲ್ಲಿ ವಾಸಿಸುವ ಜನರಿಗೆ ಇವು ಮೂರು ಉಂಟಾಗು ವುದಿಲ್ಲ.

೧೪೯. ಇತರ ಕಡೆಗಳಲ್ಲಿ ಮರಣಕಾಲವು ಆಕಸ್ಮಿಕವಾಗಿ ಉಂಟಾಗುವುದು. ಮರಣಕಾಲದಿಂದ ಅಭಯವನ್ನಿಚ್ಛಿಸುವವನು ಕಾಶಿಯನ್ನಾಶ್ರಯಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಯೋಗಾಖ್ಯಾನ"ವೆಂಬ
ನಲವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಚತ್ವಾರಿಂಶೋಽಧ್ಯಾಯಃ

### ಕಾಲವಂಚನೋಪಾಯವರ್ಣನಂ

ಅಗಸ್ತಿರುವಾಚ :—

ಕಥಂ ನಿಕಟತಃ ಕಾಲೋ ಜ್ಞಾಯತೇ ಹರನಂದನ ।
ತಾನಿ ಚಿಹ್ನಾನಿ ಕತಿಚಿದ್ಬ್ರೂಹಿ ಮೇ ಪರಿಪೃಚ್ಛತಃ ॥ ೧ ॥

ಕುಮಾರ ಉವಾಚ :—

ವದಾಮಿ ಕಾಲಚಿಹ್ನಾನಿ ಜಾಯಂತೇ ಯಾನಿ ದೇಹಿನಾಮ್ ।
ಮೃತ್ಯೌ ನಿಕಟಮಾಪನ್ನೇ ಮುನೇ ತಾನಿ ನಿಶಾಮಯ ॥ ೨ ॥
ಯಾಮ್ಯನಾಸಾಪುಟೇ ಯಸ್ಯ ವಾಯುರ್ವಾತಿ ದಿವಾನಿಶಂ ।
ಅಖಂಡಮೇವ ತಸ್ಯಾಯುಃ ಕ್ಷಯತ್ಯಬ್ದತ್ರಯೇಣ ಹಿ ॥ ೩ ॥
ದ್ವ್ಯಹೋರಾತ್ರಂ ತ್ರ್ಯಹೋರಾತ್ರಂ ರವಿರ್ವಹತಿ ಸಂತತಂ ।
ಅಬ್ದಮೇಕಂ ಚ ತಸ್ಯೇಹ ಜೀವನಾಽವಧಿರುಚ್ಯತೇ ॥ ೪ ॥
ವಹೇನ್ನಾಸಾಪುಟಯುಗೇ ದಶಾಽಹಾನಿ ನಿರಂತರಂ ।
ವಾತಶ್ಚೇತ್ಸಹ ಸಂಕ್ರಾಂತಿಸ್ತ್ರಯಾ ಜೀವೇದ್ದಿನತ್ರಯಂ ॥ ೫ ॥

---

### ಕನ್ನಡದ ಅನುವಾದ

#### ಕಾಲವಂಚನೋಪಾಯವರ್ಣನ

೧. ಅಗಸ್ತ್ಯನು ಕೇಳುತ್ತಾನೆ:—ಸ್ಕಂದ! ಮರಣಕಾಲವು ಸಮೀಪಿಸಿದೆಯೆಂದು ತಿಳಿಯುವ ಬಗೆ ಹೇಗೆ? ಕೇಳುತ್ತಿರುವ ನನಗೆ ಆ ಚಿಹ್ನೆಗಳು ಕೆಲವನ್ನು ಹೇಳು.

೨. ಕುಮಾರನು ಹೇಳುತ್ತಾನೆ:—ಮುನಿಯೆ! ಮೃತ್ಯುವು ಸಮೀಪಸಲು ಪ್ರಾಣಿಗಳಿಗುಂಟಾಗುವ ಕಾಲಚಿಹ್ನೆಗಳನ್ನು ಹೇಳುವೆನು. ಅವುಗಳನ್ನು ಕೇಳು.

೩. ಯಾವನ ಎಡಮೂಗಿನ ರಂಧ್ರದಲ್ಲಿ ಹಗಲು ರಾತ್ರಿ ಶ್ವಾಸವು ಆಡುತ್ತಿರುವುದೊ, ಅವನ ಅಖಂಡವಾದ ಆಯುಸ್ಸು ಮೂರು ವರ್ಷಗಳಲ್ಲಿ ಕ್ಷಯಿಸುವುದು.

೪. ಬಲಮೂಗಿನಲ್ಲಿ ಎರಡು ಮೂರು ದಿವಸಗಳು ಎಡೆಬಿಡದೆ ಶ್ವಾಸವಾಡುತ್ತಿದ್ದರೆ ಅವನು ಒಂದುವರ್ಷಕಾಲ ಬದುಕುವನು.

೫. ಗಾಳಿಯು ಎರಡು ರಂಧ್ರಗಳಲ್ಲಿಯೂ ಎಡೆಬಿಡದೆ ಹತ್ತುದಿನಗಳು ಆಡುತ್ತಿದ್ದರೆ ಮೂರುದಿನಗಳಕಾಲ ಜೀವಿಸುವನು.

ನಾಸಾವರ್ತ್ಮದ್ವಯಂ ಹಿತ್ವಾ ಮಾತರಿಶ್ವಾ ಮುಖಾದ್ವಹೇತ್ ।
ಶಂಸೇದ್ದಿನದ್ವಯಾದರ್ವಾಕ್ತ್ರಯಾಣಾಂ ತಸ್ಯ ಚಾಽಧ್ವನಿ ॥ ೬ ॥
ಅಕಸ್ಮಾದೇವ ಯತ್ಕಾಲೇ ಮೃತ್ಯುಃ ಸನ್ನಿಹಿತೋ ಭವೇತ್ ।
ಚಿಂತನೀಯಃ ಪ್ರಯತ್ನೇನ ಸಕಾಲೋ ಮೃತ್ಯುಭೀರುಣಾ ॥ ೭ ॥
ಸೂರ್ಯೇ ಸಪ್ತಮರಾಶಿಸ್ಥೇ ಜನ್ಮರ್ಕ್ಷಸ್ಥೇ ನಿಶಾಕರೇ ।
ಪೌಷ್ಣಃ ಸ ಕಾಲೋ ದ್ರಷ್ಟವ್ಯೋ ಯದಾ ಯಾಮ್ಯೋ ರವಿರ್ವಹೇತ್ ॥೮॥
ಅಕಸ್ಮಾದ್ವೀಕ್ಷತೇ ಯಸ್ತು ಪುರುಷಂ ಕೃಷ್ಣಪಿಂಗಳಂ ।
ತಸ್ಮಿನ್ನೇವ ಕ್ಷಣೇಽರೂಪಂ ಸ ಜೀವೇದ್ವತ್ಸರದ್ವಯಂ ॥ ೯ ॥
ಯಸ್ಯ ಬೀಜಂ ಮಲಂ ಮೂತ್ರಂ ಕ್ಷುತಂ ಮೂತ್ರಂ ಮಲಂ ತು ವಾ ।
ಇಹೈಕದಾಽಪತೇದ್ಯಸ್ಯ ಅಬ್ದಂ ತಸ್ಯಾಯುರಿಷ್ಯತೇ ॥ ೧೦ ॥
ಇಂದ್ರನೀಲನಿಭಂ ವ್ಯೋಮ್ನಿ ನಾಗವೃಂದಂ ಯ ಈಕ್ಷತೇ ।
ಇತಸ್ತತಃ ಪ್ರಸೃಮರಂ ಷಣ್ಮಾಸಂ ನ ಸ ಜೀವತಿ ॥ ೧೧ ॥
ವ್ಯಭ್ರೇಽಹ್ನಿ ವಾರಿಪೂರ್ಣಾಸ್ಯಃ ಪೃಷ್ಠೀಕೃತ್ಯ ದಿವಾಕರಂ ।
ಫೂತ್ಕೃತ್ಯಾಶ್ವೇಂದ್ರಚಾಪಂ ನ ಪಶ್ಯೇತ್ಷಣ್ಮಾಸಜೀವಿತಃ ॥ ೧೨ ॥

---

೬. ಗಾಳಿಯು ಮೂಗಿನ ರಂಧ್ರಗಳನ್ನು ಬಿಟ್ಟು ಮುಖದಲ್ಲಿ ಆಡುತ್ತಿದ್ದರೆ ಅವನು ಮೂರುದಿನಗಳೊಳಗೆ ಮರಣಹೊಂದುವನೆಂದು ತಿಳಿಯಬೇಕು.

೭. ಅಕಾಲದಲ್ಲಿ ಮೃತ್ಯುವು ಸನ್ನಿಹಿತವಾಗಿದ್ದರೆ ಮರಣಭೀರುವು ಅದನ್ನು ಪ್ರಯತ್ನದಿಂದ ಆಲೋಚಿಸಬೇಕು.

೮. ಸೂರ್ಯನು ಸಪ್ತಮರಾಶಿಯಲ್ಲಿಯೂ, ಚಂದ್ರನು ಜನ್ಮನಕ್ಷತ್ರದಲ್ಲಿಯೂ ಇರಲು, ವಾಯುವು ಬಲಮೂಗಿನ ರಂಧ್ರದಲ್ಲಿ ಸಂಚರಿಸುತ್ತಿರಲು, ಅದು ಸೂರ್ಯದೇವತಾಕವಾದ ಕಾಲವೆಂದು ತಿಳಿಯಬೇಕು.

೯. ಆಗ ಆಕಸ್ಮಿಕವಾಗಿ ರೂಪರಹಿತನೂ, ಕೃಷ್ಣಪಿಂಗಲನೂ ಆದ ಪುರುಷನನ್ನು ಕಂಡರೆ ಅವನು ಎರಡುವರ್ಷಕಾಲ ಬದುಕುವನು.

೧೦–೧೧. ಯಾವನ ವೀರ್ಯ, ಮಲ, ಮೂತ್ರ ಅಥವಾ ಹಸಿವು, ಮಲ, ಮೂತ್ರ ಈ ಮೂರೂ ಒಂದೇಸಾರಿ ಬೀಳುವುದೋ ಅವನು ಒಂದುವರ್ಷ ಮಾತ್ರ ಬದುಕುವನು. ಯಾವನು ಆಕಾಶದಲ್ಲಿ ಇಂದ್ರನೀಲದಂತಿರುವುದೂ, ಇತ್ತ ಅತ್ತ ಸಂಚರಿಸುತ್ತಿರುವುದೂ ಆದ ಆನೆಗಳ ಗುಂಪನ್ನು ನೋಡುವನೊ ಅವನು ಆರು ತಿಂಗಳುಕಾಲವೂ ಜೀವಿಸುವುದಿಲ್ಲ.

೧೨. ಆರುತಿಂಗಳು ಮಾತ್ರ ಬದುಕುವವನು ಮೋಡವಿಲ್ಲದ ಹಗಲಿನಲ್ಲಿ ಸೂರ್ಯನನ್ನು ಹಿಂಭಾಗದಲ್ಲಿರಿಸಿಕೊಂಡು ಬಾಯಿಯಲ್ಲಿ ನೀರನ್ನು ತುಂಬಿಕೊಂಡು ಉಗುಳಿ ಅದರಲ್ಲಿ ಶೀಘ್ರವಾಗಿ ಕಾಮನಬಿಲ್ಲನ್ನು ನೋಡುವುದಿಲ್ಲ.

ಅರುಂಧತೀಂ ಧ್ರುವಂ ಚೈವ ವಿಷ್ಣೋಸ್ತ್ರೀಣಿ ಪದಾನಿಚ ।
ಆಸನ್ನಮೃತ್ಯುರ್ನೋಪಶ್ಯೇಚ್ಚತುರ್ಥಂ ಮಾತೃಮಂಡಲಂ ॥ ೧೩ ॥
ಅರುಂಧತೀ ಭವೇಜ್ಜಿಹ್ವಾ ಧ್ರುವೋ ನಾಸಾಗ್ರಮುಚ್ಯತೇ ।
ವಿಷ್ಣೋಃಪದಾನಿ ಭ್ರೂಮಧ್ಯೇ ನೇತ್ರಯೋರ್ಮಾತೃಮಂಡಲಂ ॥ ೧೪ ॥
ವೇತ್ತಿ ನೀಲಾದಿವರ್ಣಸ್ಯ ಕಟ್ವಮ್ಲಾದಿ ರಸಸ್ಯ ಹಿ ।
ಅಕಸ್ಮಾದನ್ಯಥಾಭಾವಂ ಷಣ್ಮಾಸೇನ ಸಮೃತ್ಯುಭಾಕ್ ॥ ೧೫ ॥
ಷಣ್ಮಾಸಮೃತ್ಯೋರ್ಮರ್ತ್ಯಸ್ಯ ಕಂಠೋಷ್ಠರಸನಾ ರದಾಃ ।
ಶುಷ್ಯಂತಿ ಸತತಂ ತದ್ವದ್ವಿಚ್ಛಾಯಾಸ್ತಾಲುಪಂಚಮಾಃ ॥ ೧೬ ॥
ರೇತಃ ಕರಜನೇತ್ರಾಂತಾ ನೀಲಿಮಾನಂ ಭಜಂತಿ ಚೇತ್ ।
ತರ್ಹಿ ಕೀನಾಶನಗರೀಂ ಷಷ್ಠೇ ಮಾಸಿ ವ್ರಜೇನ್ನರಃ ॥ ೧೭ ॥
ಸಂಪ್ರವೃತ್ತೇ ನಿಧುವನೇ ಮಧ್ಯೇಽಂತೇ ಕ್ಷೌತಿ ಚೇನ್ನರಃ ।
ನಿಶ್ಚಿತಂ ಪಂಚಮೇ ಮಾಸಿ ಧರ್ಮರಾಜಾತಿಥಿರ್ಭವೇತ್ ॥ ೧೮ ॥
ದ್ರುತಮಾರುಹ್ಯ ಶರಠಸ್ತ್ರಿವರ್ಣೋ ಯಸ್ಯ ಮಸ್ತಕೇ ।
ಪ್ರಯಾತಿ ಯಾತಿ ತಸ್ಯಾಯುಃ ಷಣ್ಮಾಸೇನ ಪರಿಕ್ಷಯಂ ॥ ೧೯ ॥

---

೧೩. ಸನ್ನಿಹಿತ ಮರಣಕಾಲವುಳ್ಳವನು ಅರುಂಧತಿ, ಧ್ರುವ, ವಿಷ್ಣು ಪದತ್ರಯ, ಮಾತೃಮಂಡಲ ಇವುಗಳನ್ನು ನೋಡಲಾರನು.

೧೪. ನಾಲಿಗೆಯು ಅರುಂಧತಿಯೆಂದೂ, ಮೂಗಿನ ಕೊನೆಯು ಧ್ರುವ ವೆಂದೂ, ಹುಬ್ಬಿನ ನಡುವೆ ವಿಷ್ಣುಪದವೆಂದೂ, ಕಣ್ಣುಗಳು ಮಾತೃಮಂಡಲ ವೆಂದೂ ಹೇಳಿಸಿಕೊಳ್ಳುವುವು.

೧೫. ನೀಲಾದಿ ವರ್ಣಗಳು, ಕಾರ ಹುಳಿ ಮೊದಲಾದ ರಸ ಇವುಗಳನ್ನು ಕಾರಣವಿಲ್ಲದೆ ವ್ಯತ್ಯಾಸವಾಗಿ ತಿಳಿಯುವವನು ಆರು ತಿಂಗಳಲ್ಲಿ ಸಾಯುವನು.

೧೬. ಆರು ತಿಂಗಳುಗಳಲ್ಲಿ ಮೃತಿಗೊಳ್ಳುವವನ ಕಂಠ, ತುಟಿ, ನಾಲಿಗೆ, ಹಲ್ಲುಗಳು ಒಣಗುವುವು. ಹಾಗೆಯೇ ಕಪೋಲಗಳು ಕಳೆಗುಂದುವುವು.

೧೭. ರೇತಸ್ಸು, ಉಗುರು, ಕಣ್ಣಿನ ಕೊನೆ ಇವುಗಳು ನೀಲವಾಗಿದ್ದರೆ ಮನುಷ್ಯನು ಆರನೆಯ ತಿಂಗಳಲ್ಲಿ ಮಡಿಯುವನು.

೧೮. ಮನುಷ್ಯನು ಸಂಭೋಗಕಾಲದಲ್ಲಿ ಮಧ್ಯದಲ್ಲಿಯೂ, ಕೊನೆ ಯಲ್ಲಿಯೂ ಸೀನಿದರೆ ನಿಶ್ಚಯವಾಗಿಯೂ ಐದನೆಯ ತಿಂಗಳಲ್ಲಿ ಯಮನಿಗೆ ಅತಿಥಿ ಯಾಗುವನು.

೧೯. ಯಾವನ ತಲೆಯಲ್ಲಿ ಮೂರುಬಣ್ಣವುಳ್ಳ ಓತಿಕೇತವು ಶೀಘ್ರವಾಗಿ ಹತ್ತಿ ಹೋಗುವುದೊ, ಅವನ ಆಯುಸ್ಸು ಆರುತಿಂಗಳಲ್ಲಿ ಕ್ಷಯಿಸುವುದು.

ಸುಸ್ನಾತಸ್ಯಾಽಪಿ ಯಸ್ಯಾಶು ಹೃದಯಂ ಪರಿಶುಷ್ಯತಿ ।
ಚರಣೌ ಚ ಕರೌ ವಾಪಿ ತ್ರಿಮಾಸಂ ತಸ್ಯ ಜೀವಿತಂ ॥ ೨೦ ॥
ಪ್ರತಿಬಿಂಬಂ ಭವೇದ್ಯಸ್ಯ ಪದಖಂಡಪದಾಕೃತಿ ।
ಪಾಂಸೌ ವಾ ಕರ್ದಮೇ ವಾಽಪಿ ಪಂಚಮಾಸಾನ್ಸಜೀವತಿ ॥ ೨೧ ॥
ಛಾಯಾ ಪ್ರಕಂಪತೇ ಯಸ್ಯ ದೇಹಬಂಧೇಽಪಿ ನಿಶ್ಚಲೇ ।
ಕೃತಾಂತದೂತಾ ಬಧ್ನಂತಿ ಚತುರ್ಥೇ ಮಾಸಿ ತಂ ನರಂ ॥ ೨೨ ॥
ನಿಜಸ್ಯ ಪ್ರತಿಬಿಂಬಸ್ಯ ನೀರಾಜ್ಯ ಮುಕುರಾದಿಷು ।
ಉತ್ತಮಾಂಗಂ ನಯಃ ಪಶ್ಯೇತ್ಸ ಮಾಸೇನ ವಿನಶ್ಯತಿ ॥ ೨೩ ॥
ಮತಿಭ್ರಶ್ಯೇತ್ಸ್ಖಲದ್ವಾಣೀ ಧನುರೈಂದ್ರಂ ನಿರೀಕ್ಷತೇ ।
ರಾತ್ರೌ ಚಂದ್ರದ್ವಯಂ ಚಾಽಪಿ ದಿವಾ ದ್ವೌಚ ದಿವಾಕರೌ ॥ ೨೪ ॥
ದಿವಾಚ ತಾರಕಾಚಕ್ರಂ ರಾತ್ರೌ ವ್ಯೋಮವಿತಾರಕಂ ।
ಯುಗಪಚ್ಚ ಚತುರ್ದಿಕ್ಷು ಶಾಕ್ರಂ ಕೋದಂಡಮಂಡಲಂ ॥ ೨೫ ॥
ಭೂರುಹೇ ಭೂಧರಾಗ್ರೇಚ ಗಂಧರ್ವನಗರಾಲಯಂ ।
ದಿವಾ ಪಿಶಾಚನೃತ್ಯಂ ಚ ಏತೇ ಪಂಚತ್ವಹೇತವಃ ॥ ೨೬ ॥
ಸರ್ವೇಷ್ವೇತೇಷು ಚಿಹ್ನೇಷು ಯದ್ಯೇಕಮಪಿ ವೀಕ್ಷತೇ ।
ತದಾ ಮಾಸಾಽವಧಿಂ ಮೃತ್ಯುಃ ಪ್ರತೀಕ್ಷೇತ ನ ಚಾಽಧಿಕಂ ॥ ೨೭ ॥

---

೨೦. ಚೆನ್ನಾಗಿ ಮಿಂದ ಯಾವನ ಹೃದಯವಾಗಲಿ, ಕೈಕಾಲುಗಳಾಗಲಿ ಶೀಘ್ರವಾಗಿ ಒಣಗುವುವೊ ಅವನು ಮೂರುತಿಂಗಳು ಮಾತ್ರ ಜೀವಿಸುವನು.

೨೧. ಯಾವನ ಪ್ರತಿಬಿಂಬವು ಧೂಳು, ಅಥವಾ ಕೆಸರಿನಲ್ಲಿ ಪಾದದ ಭಾಗ, ಪಾದದ ಆಕೃತಿಯುಳ್ಳದ್ದಾಗಿ ಕಾಣಿಸಿಗೊಳ್ಳುವುದೊ ಅವನು ಐದುತಿಂಗಳ ಜೀವಿಸುವನು.

೨೨. ಯಾವನ ದೇಹವು ನಿಶ್ಚಲವಾಗಿದ್ದರೂ ನೆರಳು ಅಲ್ಲಾಡುವುದೊ ಅವನನ್ನು ಯಮದೂತರು ನಾಲ್ಕನೆಯ ತಿಂಗಳಲ್ಲಿ ಒಯ್ಯುವರು.

೨೩. ನಿರ್ಮಲವಾದ ಕನ್ನಡಿ ಮೊದಲಾದುವುಗಳಲ್ಲಿರುವ ತನ್ನ ಪ್ರತಿಬಿಂಬದಲ್ಲಿ ತಲೆಯನ್ನು ಕಾಣದವನು ಒಂದುತಿಂಗಳಲ್ಲಿ ಮಡಿಯುವನು.

೨೪–೨೬. ಬುದ್ಧಿಭ್ರಂಶ, ವಾಕ್ಸ್ಖಾಲಿತ್ಯ, ಕಾಮನಬಿಲ್ಲಿನ ದರ್ಶನ, ರಾತ್ರಿ ಇಬ್ಬರು ಚಂದ್ರರ ದರ್ಶನ, ಹಗಲು ಇಬ್ಬರು ಸೂರ್ಯರನ್ನು ಕಾಣುವುದು, ಹಗಲು ನಕ್ಷತ್ರಗಳ ಸಮೂಹ, ರಾತ್ರಿ ನಕ್ಷತ್ರಗಳಿಲ್ಲದ ಆಕಾಶ, ಒಂದೇ ಸಾರಿ ನಾಲ್ಕು ದಿಕ್ಕುಗಳಲ್ಲಿ ಕಾಮನಬಿಲ್ಲುಗಳು, ವೃಕ್ಷಪರ್ವತಗಳ ತುದಿಯಲ್ಲಿ ಗಂಧರ್ವನಗರ, ಹಗಲು ಪಿಶಾಚಿಗಳ ಕುಣಿತ ಇವುಗಳು ಮರಣ ಕಾರಣಗಳು.

೨೭. ಈ ಚಿಹ್ನೆಗಳಲ್ಲಿ ಒಂದನ್ನಾದರೂ ನೋಡಿದರೆ ಒಂದುತಿಂಗಳಲ್ಲಿ ಮರಣ ಸಂಭವಿಸುವುದು. ಇದಕ್ಕಿಂತಲೂ ಹೆಚ್ಚುಕಾಲವನ್ನು ನಿರೀಕ್ಷಿಸಬೇಕಾಗಿಲ್ಲ.

ಕರಾವರುದ್ಧಶ್ರವಣಃ ಶೃಣೋತಿ ನ ಯದಾ ಧ್ವನಿಂ ।
ಸ್ಥೂಲಃ ಕೃಶಃ ಕೃಶಃ ಸ್ಥೂಲಸ್ತದಾ ಮಾಸಾನ್ನಿವರ್ತತೇ ॥ ೨೮ ॥
ಯಃಪಶ್ಯೇದಾತ್ಮನಶ್ಛಾಯಾಂ ದಕ್ಷಿಣಾಶಾಸಮಾಶ್ರಿತಾಂ ।
ದಿನಾನಿ ಪಂಚ ಜೀವಿತ್ವಾ ಪಂಚತ್ವಮುಪಯಾತಿ ಸಃ ॥ ೨೯ ॥
ಪ್ರೋಹ್ಯತೇ ಭಕ್ಷ್ಯತೇ ವಾಽಪಿ ಪಿಶಾಚಾಽಸುರವಾಯಸೈಃ ।
ಭೂತೈಃ ಪ್ರೇತೈಃಶ್ವಭಗ್ರ್ಯಧ್ರೈಗೋರ್ಮಾಯುಖರಸೂಕರೈಃ ॥ ೩೦ ॥
ರಾಸಭೈಃ ಕರಭೈಃ ಕೀಶೈಃ ಶ್ಯೇನೈರಶ್ವತರೈರ್ಬಕೈಃ ।
ಸ್ವಪ್ನೇ ನ ಜೀವಿತಂ ತ್ಯಕ್ತ್ವಾ ವರ್ಷಾಂತೇ ಯಮಮೀಕ್ಷತೇ ॥ ೩೧ ॥
ಗಂಧಪುಷ್ಪಾಂಶುಕೈಃ ಶೋಣೈಃ ಸ್ವಾಂ ತನುಂ ಭೂಷಿತಾಂ ನರಃ ।
ಯಃ ಪಶ್ಯೇಸ್ಸ್ವಪ್ನಸಮಯೇ ಸೋಽಷ್ಟೌ ಮಾಸಾನನಿತ್ಯಹೋ ॥ ೩೨ ॥
ಪಾಂಸುರಾಶಿಂಚ ವಲ್ಮೀಕಂ ಯೂಪದಂಡಮಥಾಽಪಿ ವಾ ।
ಯೋಽಧಿರೋಹತಿ ವೈ ಸ್ವಪ್ನೇ ಸ ಷಷ್ಠೇ ಮಾಸಿ ನಶ್ಯತಿ ॥ ೩೩ ॥
ರಾಸಭಾರೂಢಮಾತ್ಮಾನಂ ತೈಲಾಭ್ಯಕ್ತಂ ಚ ಮುಂಡಿತಂ ।
ನೀಯಮಾನಂ ಯಮಾಶಾಂ ಯಃ ಸ್ವಪ್ನೇ ಪಶ್ಯೇತ್ಸ್ವಪೂರ್ವಜಾನ್ ॥ ೩೪ ॥
ಸ್ವಮೌಲೌ ಸ್ವತನೌ ವಾಽಪಿ ಯಃಪಶ್ಯೇತ್ಸ್ವಪ್ನಗೋ ನರಃ ।
ತೃಣಾನಿ ಶುಷ್ಕಕಾಷ್ಠಾನಿ ಷಷ್ಠೇ ಮಾಸಿ ನ ತಿಷ್ಠತಿ ॥ ೩೫ ॥

---

೨೮. ಕೈಯಿಂದ ಕಿವಿಯನ್ನು ಮುಚ್ಚಿಕೊಂಡಾಗ ಧ್ವನಿಯು ಕೇಳಿಸದಿದ್ದರೆ, ಸ್ಥೂಲನು ಕೃಶನಾಗಿಯೂ, ಕೃಶನು ಸ್ಥೂಲನಾಗಿಯೂ ಆಗಿ ಒಂದು ತಿಂಗಳಲ್ಲಿ ಮಡಿಯುವನು.

೨೯. ದಕ್ಷಿಣದಿಕ್ಕಿನಲ್ಲಿ ಬಿದ್ದಿರುವ ತನ್ನ ನೆರಳನ್ನು ಕಾಣುವವನು ಐದು ದಿನಗಳು ಮಾತ್ರ ಬದುಕಿದ್ದು ಸಾಯುವನು.

೩೦–೩೧. ಸ್ವಪ್ನದಲ್ಲಿ ಪಿಶಾಚ, ಅಸುರ, ಕಾಗೆ, ಭೂತ, ಪ್ರೇತ, ನಾಯಿ, ಹದ್ದು, ನರಿ, ಕತ್ತೆ, ಹಂದಿ, ಒಂಟೆ, ಕಪಿ, ಗಿಡಗ, ಹೇಸರಕತ್ತೆ, ಬಕ ಇವುಗಳಿಂದ ಹೊರಲ್ಪಡುವವನಾಗಿಯೂ, ಭಕ್ಷಿಸಲ್ಪಡುವವನಾಗಿಯೂ ನೋಡುವವನು ಒಂದು ವರ್ಷದಲ್ಲಿ ಸಾಯುವನು.

೩೨. ಸ್ವಪ್ನದಲ್ಲಿ ಕೆಂಪುಗಂಧ, ಪುಷ್ಪ, ವಸ್ತ್ರಗಳಿಂದ ಅಲಂಕಾರಗೊಂಡ ತನ್ನ ದೇಹವನ್ನು ಕಾಣುವವನು ಎಂಟು ತಿಂಗಳು ಬದುಕುವನು.

೩೩. ಸ್ವಪ್ನದಲ್ಲಿ ದೂಳು, ಹುತ್ತ, ಯೂಪಸ್ತಂಭ ಇವುಗಳನ್ನು ಹತ್ತಿದವನಂತೆ ಕಂಡವನು ಆರು ತಿಂಗಳಲ್ಲಿ ಸಾಯುವನು.

೩೪–೩೫. ಸ್ವಪ್ನದಲ್ಲಿ ಕತ್ತೆಯನ್ನೇರಿದವನೂ, ತೈಲಾಭ್ಯಂಗಮಾಡಿಕೊಂಡವನೂ, ಕ್ಷೌರಮಾಡಿಸಿಕೊಂಡವನೂ, ದಕ್ಷಿಣದಿಕ್ಕಿಗೆ ಒಯ್ಯಲ್ಪಡುವವನೂ ಆದ ತನ್ನನ್ನೂ ತನ್ನ ಹಿಂದಿನವರನ್ನೂ ಕಾಣುವವನೂ, ತನ್ನ ತಲೆಯಲ್ಲಾಗಲಿ,

ಲೋಹದಂಡಧರಂ ಕೃಷ್ಣಂ ಪುರುಷಂ ಕೃಷ್ಣವಾಸಸಂ ।
ಸ್ವಯಂ ಯೋಽಗ್ರೇಸ್ಥಿತಂ ಪಶ್ಯೇತ್ಸತ್ರೀನ್ಮಾಸಾನ್ನ ಲಂಘಯೇತ್ ॥ ೩೬ ॥
ಕಾಲೀ ಕುಮಾರೀ ಯಂ ಸ್ವಪ್ನೇ ಬಧ್ನೀಯಾದ್ಬಾಹುಪಾಶಕೈಃ ।
ಸಮಾಸೇನ ಸವೀಕ್ಷೇತ ನಗರೀಂ ಶಮನೋಷಿತಾಂ ॥ ೩೭ ॥
ನರೋ ಯೋ ವಾನರಾರೂಢೋ ಯಾಯಾತ್ಪ್ರಾಚೀಂ ದಿಶಂ ಸ್ವಪನ್ ।
ದಿನೈಃ ಸ ಪಂಚಭಿರೇವ ಪಶ್ಯೇತ್ಸಂಯಮಿನೀಂ ಪುರೀಂ ॥ ೩೮ ॥
ಕೃಪಣೋಽಪಿ ವದಾನ್ಯಃ ಸ್ಯಾದ್ವದಾನ್ಯಃ ಕೃಪಣೋ ಯದಿ ।
ಪ್ರಕೃತೇರ್ವಿಕೃತಿಶ್ಚೇತ್ಸ್ಯಾತ್ತದಾ ಪಂಚತ್ವಮೃಚ್ಛತಿ ॥ ೩೯ ॥
ಏತಾನಿ ಕಾಲಚಿಹ್ನಾನಿ ಸಂತ್ಯನ್ಯಾನಿ ಬಹೂನ್ಯಪಿ ।
ಜ್ಞಾತ್ವಾಽಭ್ಯಸೇನ್ನರೋ ಯೋಗಮಥವಾ ಕಾಶಿಕಾಂ ಶ್ರಯೇತ್ ॥ ೪೦ ॥
ನ ಕಾಲವಂಚನೋಪಾಯಂ ಮುನೇಽನ್ಯಮವಯಾಮ್ಯಹಂ ।
ವಿನಾ ಮೃತ್ಯುಂಜಯಂ ಕಾಶೀನಾಥಂ ಗರ್ಭಾವರೋಧಕಂ ॥ ೪೧ ॥

---

ಶರೀರದಲ್ಲಾಗಲಿ ಹುಲ್ಲು, ಒಣಗಿದ ಕಟ್ಟಿಗೆ ಇವುಗಳನ್ನು ನೋಡುವವನೂ ಆರನೆಯ ತಿಂಗಳಲ್ಲಿ ಮಡಿಯುವನು.

೩೬. ಕಬ್ಬಿಣದ ದೊಣ್ಣೆಯನ್ನು ಹಿಡಿದವನೂ, ಕೃಷ್ಣವರ್ಣನೂ, ಕರಿಯ ಬಟ್ಟೆಯನ್ನುಟ್ಟವನೂ ಆಗಿ ಮುಂದೆ ನಿಂತಿರುವ ಮನುಷ್ಯನನ್ನು ಕಂಡವನು ಮೂರು ತಿಂಗಳುಗಳಿಗಿಂತ ಹೆಚ್ಚಾಗಿ ಬದುಕುವುದಿಲ್ಲ.

೩೭. ಯಾವನನ್ನು ಸ್ವಪ್ನದಲ್ಲಿ ಕೃಷ್ಣವರ್ಣಳಾದ ಕನ್ಯೆಯು ತೋಳುಗಳಿಂದ ತಬ್ಬಿಕೊಳ್ಳುವಳೊ ಅವನು ಒಂದು ತಿಂಗಳಲ್ಲಿ ಯಮನಗರಿಯನ್ನು ಕಾಣುವನು.

೩೮. ಸ್ವಪ್ನದಲ್ಲಿ ವಾನರವನ್ನೇರಿ ಪೂರ್ವದಿಕ್ಕಿಗೆ ಹೋಗುವಂತೆ ಕಾಣುವವನು ಐದು ದಿನಗಳಲ್ಲಿಯೇ ಯಮನಗರವನ್ನು ನೋಡುವನು.

೩೯. ದೀನನು ದಾನಶೌಂಡನೂ, ದಾನಶೌಂಡನು ದೀನನೂ ಆಗಿ ಸ್ವಭಾವವು ವ್ಯತ್ಯಾಸವಾದರೆ ಮರಣವನ್ನು ಹೊಂದುವನು.

೪೦. ಈ ಮರಣಕಾಲದ ಚಿಹ್ನೆಗಳಲ್ಲದೆ ಇತರ ಅನೇಕ ಚಿಹ್ನೆಗಳಿವೆ. ಮನುಷ್ಯನು ಇವುಗಳನ್ನು ತಿಳಿದುಕೊಂಡು ಯೋಗವನ್ನು ಅಭ್ಯಾಸಮಾಡಬೇಕು. ಅಥವಾ ಕಾಶಿಯನ್ನಾಶ್ರಯಿಸಬೇಕು.

೪೧. ಮುನಿಯೆ! ಪುನರ್ಜನ್ಮವನ್ನು ತಡೆಯುವ ಕಾಶೀಶ್ವರನನ್ನು ಬಿಟ್ಟು ಕಾಲನನ್ನು ವಂಚಿಸುವ ಇತರೋಪಾಯವನ್ನರಿಯೆನು.

ತಾವದ್ಗರ್ಜಂತಿ ಪಾಪಾನಿ ತಾವದ್ಗರ್ಜೇದ್ಯಮೋ ನೃಪಃ ।
ಯಾವದ್ವಿಶ್ವೇಶಶರಣಂ ನರೋ ನ ನಿರತೋ ವ್ರಜೇತ್ ॥ ೪೨ ॥
ಪ್ರಾಪ್ತವಿಶ್ವೇಶ್ವರಾವಾಸಃ ಪೀತೋತ್ತರವಹಾಪಯಾಃ ।
ಸ್ಪೃಷ್ಟ ವಿಶ್ವೇಶಸಲ್ಲಿಂಗಃ ಕಶ್ಚ ಯಾತಿ ನ ವಂದ್ಯತಾಂ ॥ ೪೩ ॥
ಕರಿಷ್ಯೇತ್ಕುಪಿತಃ ಕಾಲಃ ಕಿಂ ಕಾಶೀವಾಸಿನಾಂ ನೃಣಾಂ ।
ಕಾಲೇ ಶಿವಃ ಸ್ವಯಂ ಕರ್ಣೇ ಯತ್ರ ಮಂತ್ರೋಪದೇಶಕಃ ॥ ೪೪ ॥
ಯಥಾ ಪ್ರಯಾತಿ ಶಿಶುತಾ ಕೌಮಾರಂಚ ಯಥಾಗತಂ ।
ಸತ್ವರಂ ಗತ್ವರಂ ತದ್ವದ್ಯೌವನಂ ಚಾಽಪಿ ವಾರ್ಧಕಂ ॥ ೪೫ ॥
ಯಾವನ್ನಹಿ ಜರಾಕ್ರಾಂತಿರ್ಯಾವನ್ನೇಂದ್ರಿಯವೈಕ್ಲವಂ ।
ತಾವತ್ಸರ್ವಂ ಫಲ್ಗುರೂಪಂ ಹಿತ್ವಾ ಕಾಶೀಂ ಶ್ರಯೇತ್ಸುಧೀಃ ॥ ೪೬ ॥
ಅನ್ಯಾನಿ ಕಾಲಲಕ್ಷ್ಮಾಣಿ ತಿಷ್ಠಂತು ಕಲಶೋದ್ಭವ ।
ಜರೈವ ಪ್ರಥಮಂ ಲಕ್ಷ್ಮ ಚಿತ್ರಂ ತತ್ರಾಽಪಿ ಭೀರ್ನಹಿ ॥ ೪೭ ॥
ಪರಾಭೂತೋ ಹಿ ಜರಯಾ ಸರ್ವೈರ್ಶ್ಚ ಪರಿಭೂಯತೇ ।
ಹೃತತಾರುಣ್ಯಮಾಣಿಕ್ಯೋ ಧನಹೀನಃ ಪುಮಾನಿವ ॥ ೪೮ ॥

---

೪೨. ಮನುಷ್ಯನು ಆತ್ಯಾಸಕ್ತಿಯಿಂದ ವಿಶ್ವೇಶ್ವರನನ್ನು ಮರೆಹೋಗುವವರೆಗೆ ಪಾಪಗಳೂ, ಯಮನೂ ಗರ್ಜಿಸುತ್ತಿರುವರು.

೪೩. ವಿಶ್ವೇಶ್ವರನ ಆವಾಸಸ್ಥಾನವಾದ ಕಾಶಿಯನ್ನು ಹೊಂದಿದವನೂ, ಗಂಗೆಯ ಜಲವನ್ನು ಕುಡಿದವನೂ, ವಿಶ್ವೇಶ್ವರಲಿಂಗವನ್ನು ಮುಟ್ಟಿದವನೂ ಆದ ಯಾವನುತಾನೇ ಸತ್ಫಲವನ್ನು ಪಡೆಯನು ?

೪೪. ಕಾಶಿಯಲ್ಲಿ ವಾಸಿಸುವ ಮನುಷ್ಯರಿಗೆ ಮರಣಕಾಲದಲ್ಲಿ ಶಿವನು ಕಿವಿಯಲ್ಲಿ ಮಂತ್ರವನ್ನು ಉಪದೇಶಮಾಡುವುದರಿಂದ ಅವರನ್ನು ಕೋಪಗೊಂಡ ಯಮನು ಏನುಮಾಡುವನು ?

೪೫. ಶಿಶುತ್ವವೂ, ಕೌಮಾರವೂ ಹೋಗುವಂತೆ ಶೀಘ್ರವಾಗಿ ಯೌವನ ವಾರ್ಧಕ್ಯಗಳು ಕಳೆದುಹೋಗುವುವು.

೪೬. ಎಷ್ಟರಲ್ಲಿ ಮುಪ್ಪು ಆಕ್ರಮಿಸುವುದಿಲ್ಲವೊ, ಎಷ್ಟರಲ್ಲಿ ಇಂದ್ರಿಯ ವೈಕ್ಲವ್ಯವುಂಟಾಗುವುದಿಲ್ಲವೊ ಅಷ್ಟರಲ್ಲಿಯೇ ತುಚ್ಛವಾದ ಸರ್ವವನ್ನೂ ತ್ಯಜಿಸಿ ಕಾಶಿಯನ್ನು ಆಶ್ರಯಿಸಬೇಕು.

೪೭. ಎಲೈ ಅಗಸ್ತ್ಯನೆ! ಇತರ ಕಾಲಚಿಹ್ನೆಗಳಿರಲಿ. ಮುಪ್ಪೇ ಮೊದಲಿನ ಚಿಹ್ನೆಯು. ಮಾನವರಿಗೆ ಅದರಲ್ಲಿಯೇ ಭಯವಿಲ್ಲವಲ್ಲ. ಇದು ಆಶ್ಚರ್ಯ!

೪೮. ತಾರುಣ್ಯರತ್ನವನ್ನು ಕಳೆದುಕೊಂಡು ಜರಾಕ್ರಾಂತನಾದ ಮಾನವನು ಹಣವಿಲ್ಲದ ಮನುಷ್ಯನಂತೆ ಎಲ್ಲರಿಂದಲೂ ತಿರಸ್ಕೃತನಾಗುವನು.

ಸುತಾ ವಾಕ್ಯಂ ನ ಕುರ್ವಂತಿ ಪತ್ನೀ ಪ್ರೇಮಾಽಪಿ ಮುಂಚತಿ ।
ಬಾಂಧವಾ ನೈವ ಮನ್ಯಂತೇ ಜರಸಾಶ್ಲೇಷಿತಂ ನರಂ ॥ ೪೯ ॥
ಆಶ್ಲಿಷ್ಟಂ ಜರಯಾ ದೃಷ್ಟ್ವಾ ಪರಯೋಷಿದ್ವಿಶಂಕಿತಾ ।
ಭವೇತ್ಪರಾಙ್ಮುಖೀ ನಿತ್ಯಂ ಪ್ರಣಯಿನ್ಯಪಿ ಕಾಮಿನೀ ॥ ೫೦ ॥
ನ ಜರಾಸದೃಶೋ ವ್ಯಾಧಿರ್ನ ದುಃಖಂ ಜರಯಾ ಸಮಂ ।
ಕಾರಯಿತ್ರ್ಯಪಮಾನಸ್ಯ ಜರೈವ ಮರಣಂ ನೃಣಾಂ ॥ ೫೧ ॥
ನ ಜೀರ್ಯತೇ ತಥಾ ಕಾಲಸ್ತಪಸಾ ಯೋಗಯುಕ್ತಿಭಿಃ ।
ಯಥಾಽಚಿರೇಣ ಕಾಲೇನ ಕಾಶೀವಾಸಾದ್ವಿಜೀರ್ಯತೇ ॥ ೫೨ ॥
ವಿನಾ ಯಜ್ಞೈರ್ವಿನಾ ದಾನೈರ್ವಿನಾ ವ್ರತಜಪಾದಿಭಿಃ ।
ವಿನಾಽತಿಪುಣ್ಯಸಂಭಾರೈಃ ಕಃ ಕಾಶೀಂ ಪ್ರಾಪ್ತುಮಿಹಾರ್ಹತೇ ॥ ೫೩ ॥
ಕಾಶೀಪ್ರಾಪ್ತಿರಯಂ ಯೋಗಃ ಕಾಶೀಪ್ರಾಪ್ತಿರಿದಂ ತಪಃ ।
ಕಾಶೀಪ್ರಾಪ್ತಿರಿದಂ ದಾನಂ ಕಾಶೀಪ್ರಾಪ್ತಿಃ ಶಿವೈಕತಾ ॥ ೫೪ ॥
ಕಃ ಕಲಿಃ ಕೋಽಥ ವಾ ಕಾಲಃ ಕಾ ಜರಾ ಕಿಂಚ ದುಷ್ಕೃತಂ ।
ಕಾ ರುಜಃ ಕೇಽಂತರಾಯಾ ವಾ ಶ್ರಿತಾ ವಾರಾಣಸೀ ಯದಿ ॥ ೫೫ ॥
ಕಲಿಸ್ತಾನೇವ ಬಾಧೇತ ಕಾಲಸ್ತಾಂಶ್ಚ ಜಿಘಾಂಸತಿ ॥ ೫೬ ॥

---

೪೯. ಮುದುಕನಾದ ಮಾನವನ ಮಾತನ್ನು ಮಕ್ಕಳೂ ಕೇಳುವುದಿಲ್ಲ. ಹೆಂಡತಿಯು ಪ್ರೀತಿಯನ್ನು ತ್ಯಜಿಸುವಳು. ಬಾಂಧವರು ಲೆಕ್ಕಿಸುವುದಿಲ್ಲ.

೫೦. ಮುದುಕನನ್ನು ನೋಡಿ ಕಾಮಿನಿಯಾದ ಪರಸ್ತ್ರೀಯು ಪ್ರೀತಿಯುಳ್ಳವಳಾಗಿದ್ದರೂ ನಿರ್ಭಯವಾಗಿ ವಿಮುಖಳಾಗುವಳು.

೫೧. ಮುಪ್ಪಿಗೆ ಸಮಾನವಾದ ರೋಗವೂ, ದುಃಖವೂ ಇರುವುದಿಲ್ಲ. ಮುಪ್ಪೇ ನರರಿಗೆ ಅಪಮಾನವನ್ನೂ, ಮರಣವನ್ನೂ ಉಂಟುಮಾಡುವುದು.

೫೨. ಮರಣಕಾಲವನ್ನು ಬಹುಕಾಲ ಕಾಶಿಯಲ್ಲಿ ವಾಸಮಾಡುವುದರಿಂದ ಜಯಿಸುವಂತೆ ತಪಸ್ಸಿನಿಂದಲೂ, ಯೋಗೋಪಾಯಗಳಿಂದಲೂ ಜಯಿಸಲು ಸಾಧ್ಯವಿಲ್ಲ.

೫೩–೫೪. ಯಜ್ಞ, ದಾನ, ವ್ರತ, ಜಪ, ಪುಣ್ಯಗಳಿಲ್ಲದೆ ಯಾವನೂ ಕಾಶಿಯನ್ನು ಹೊಂದಲು ಶಕ್ತನಾಗನು. ಕಾಶೀಪ್ರಾಪ್ತಿಯೇ ಯೋಗ, ತಪಸ್ಸು, ದಾನ, ಶಿವೈಕ್ಯಗಳಾಗಿರುವುವು.

೫೫. ಕಾಶಿಯನ್ನಾಶ್ರಯಿಸಿದರೆ ಕಲಿ, ಕಾಲ, ಮುಪ್ಪು, ಪಾಪ, ರೋಗ, ವಿಘ್ನಗಳು ಹೇಗೆ ಸಂಭವಿಸುವುವು ?

೫೬–೫೭. ಕಾಶಿಯನ್ನು ಹೊಂದದಿರುವವರನ್ನೇ ಕಲಿಯು ಪೀಡಿಸುವುದು. ಕಾಲವು ಕೊಲ್ಲಲಪೇಕ್ಷಿಸುವುದು. ಪಾಪಗಳು ಪೀಡಿಸುವುವು. ಕಾಶಿಯನ್ನು

ಏನಾಂಸಿ ತಾಂಶ್ಚ ಬಾಧಂತೇ ಯೇ ನ ಕಾಶೀಂ ಸಮಾಶ್ರಿತಾಃ ।
ಕಾಶೀ ಸಮಾಶ್ರಿತಾ ಯೈಶ್ಚ ಯೈಶ್ಚ ವಿಶ್ವೇಶ್ವರೋಽರ್ಚಿತಃ ।
ತಾರಕಂ ಜ್ಞಾನಮಾಸಾದ್ಯ ತೇ ಮುಕ್ತಾಃ ಕರ್ಮಪಾಶತಃ ॥ ೫೭ ॥
ಧನಿನೋ ನ ತಥಾ ಸೌಖ್ಯಂ ಪ್ರಾಪ್ನುವಂತಿ ನರಾಃ ಕ್ವಚಿತ್ ।
ಯಥಾ ನಿಧನತಃ ಕಾಶ್ಯಾಂ ಲಭಂತೇ ಸುಖಮವ್ಯಯಂ ॥ ೫೮ ॥
ವರಂ ಕಾಶೀಸಮಾವಾಸೀ ನಾಸೀನೋ ದ್ಯುಸದಾಂ ಪದಂ ।
ದುಃಖಾಂತಂ ಲಭತೇ ಪೂರ್ವಃ ಸುಖಾಂತಂ ಲಭತೇ ಪರಃ ॥ ೫೯ ॥
ಸ್ಥಿತೋಽಪಿ ಭಗವಾನೀಶೋ ಮಂದರಂ ಚಾರುಕಂದರಂ ।
ಕಾಶೀಂ ವಿನಾ ರತಿಂ ನಾಽಽಪ ದಿವೋದಾಸನೃಪೋಷಿತಾಂ ॥ ೬೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಕಾಲವಂಚನೋಪಾಯವರ್ಣನಂ" ನಾಮ ದ್ವಿಚತ್ವಾರಿಂಶೋಽಧ್ಯಾಯಃ

---

ಆಶ್ರಯಿಸಿದವರೂ, ವಿಶ್ವೇಶ್ವರನನ್ನು ಪೂಜಿಸಿದವರೂ ತಾರಕಜ್ಞಾನವನ್ನು ಹೊಂದಿ ಕರ್ಮಪಾಶದಿಂದ ಮುಕ್ತರಾಗುವರು.

೫೮. ಕಾಶೀನಿಧನದಿಂದ ಶಾಶ್ವತಸುಖವನ್ನು ಪಡೆಯುವಂತೆ ಹಣಗಾರರೂ ಸೌಖ್ಯವನ್ನು ಹೊಂದುವುದಿಲ್ಲ.

೫೯. ಕಾಶಿಯಲ್ಲಿ ವಾಸಿಸುವವನು ಶ್ರೇಷ್ಠನು. ದೇವಪದವಿಯನ್ನು ಹೊಂದಿದವನು ಶ್ರೇಷ್ಠನಲ್ಲ. ಕಾಶೀವಾಸಿಯು ದುಃಖದ ಕೊನೆಯನ್ನು ಹೊಂದುವನು. ದೇವತ್ವವನ್ನು ಪಡೆದವನು ಸುಖದ ಪರಮಾವಧಿಯನ್ನು ಹೊಂದುವನು.

೬೦. ಪೂಜ್ಯನಾದ ಮಹೇಶ್ವರನು ಮನೋಹರವಾದ ಗುಹೆಗಳುಳ್ಳ ಮಂದರಾಚಲದಲ್ಲಿದ್ದರೂ ದಿವೋದಾಸನು ವಾಸಿಸಿದ ಕಾಶಿಯನ್ನು ಬಿಟ್ಟು ಸಂತೋಷವನ್ನು ಹೊಂದಲಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ಕಾಲವಂಚನೋಪಾಯವರ್ಣನ"ವೆಂಬ ನಲವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಚತ್ವಾರಿಂಶೋಽಧ್ಯಾಯಃ

## ದಿವೋದಾಸಪ್ರತಾಪವರ್ಣನಂ

ಅಗಸ್ತಿರುವಾಚ :—

ದಿವೋದಾಸಂ ನರಪತಿಂ ಕಥಂ ದೇವಸ್ತ್ರಿಲೋಚನಃ ।
ಕಾಶೀಂ ಸಂತ್ಯಾಜಯಾಮಾಸ ಕಥಮಾಗಾಚ್ಚ ಮಂದರಾತ್ ।
ಏತದಾಖ್ಯಾನಮಾಖ್ಯಾಹಿ ಶ್ರೋತೄಣಾಂ ಪ್ರಮುದೇ ಗುಹ ॥ ೧ ॥

ಸ್ಕಂದ ಉವಾಚ :—

ಮಂದರಂ ಗತವಾನ್ದೇವೋ ಬ್ರಹ್ಮಣೋ ವಾಕ್ಯಗೌರವಾತ್ ।
ತಪಸಾ ತಸ್ಯ ಸಂತುಷ್ಟೋ ಮಂದರಸ್ಯೈವ ಭೂಭೃತಃ ॥ ೨ ॥
ಗತೇ ವಿಶ್ವೇಶ್ವರೇ ದೇವೇ ಮಂದರಂ ಗಿರಿಸುಂದರಂ ।
ಗಿರಿಶೇನ ಸಮಂ ಜಗ್ಮುರಪಿ ಸರ್ವೇ ದಿವೌಕಸಃ ॥ ೩ ॥
ಕ್ಷೇತ್ರಾಣಿ ವೈಷ್ಣವಾನೀಹ ತ್ಯಕ್ತ್ವಾ ವಿಷ್ಣುರಪಿ ಕ್ಷಿತೇಃ ।
ಪ್ರಯಾತೋ ಮಂದರಂ ಯತ್ರ ದೇವದೇವ ಉಮಾಧವಃ ॥ ೪ ॥
ಸ್ಥಾನಾನಿ ಗಾಣಾಪತ್ಯಾನಿ ಗಣೇಶೋಽಪಿ ತತೋ ವ್ರಜೇತ್ ।
ಹಿತ್ವಾಽಹಮಪಿ ವಿಪ್ರೇಂದ್ರ ಗತವಾನ್ಮಂದರಂ ಪ್ರತಿ ॥ ೫ ॥

---

## ಕನ್ನಡದ ಅನುವಾದ

### ದಿವೋದಾಸಪ್ರತಾಪವರ್ಣನ

೧. ಅಗಸ್ತ್ಯನು ಕೇಳುತ್ತಾನೆ:— ಪೂಜ್ಯನಾದ ಗುಹನೆ! ಮಹೇಶ್ವರನು ದಿವೋದಾಸ ರಾಜನನ್ನು ಕಾಶಿಯಿಂದ ಬಿಡಿಸಿ ತಾನು ಮಂದರಪರ್ವತದಿಂದ ಹೇಗೆ ಬಂದನು. ಕೇಳುವವರ ಸಂತೋಷಕ್ಕಾಗಿ ಈ ಕಥೆಯನ್ನು ಹೇಳು.

೨. ಸ್ಕಂದನು ಹೇಳುತ್ತಾನೆ:—ಮಂದರನ ತಪಸ್ಸಿನಿಂದ ಸಂತುಷ್ಟನಾದ ಮಹಾದೇವನು ಬ್ರಹ್ಮನ ಮಾತಿನ ಗೌರವದಿಂದ ಆ ಮಂದರಶೈಲಕ್ಕೆ ಹೋದನು.

೩. ವಿಶ್ವೇಶ್ವರನು ಮಂದರಗಿರಿಗೆ ಹೋಗಲು ಅವನೊಡನೆ ಸಮಸ್ತ ದೇವತೆಗಳೂ ಹೋದರು.

೪. ವಿಷ್ಣುವೂ ಭೂಮಿಯಲ್ಲಿರುವ ವೈಷ್ಣವ ಕ್ಷೇತ್ರಗಳನ್ನು ತ್ಯಜಿಸಿ ಮಹೇಶ್ವರನಿರುವ ಮಂದರಪರ್ವತಕ್ಕೆ ಹೋದನು.

೫. ಬಳಿಕ ಗಣೇಶನು ತನ್ನ ಸ್ಥಳವನ್ನು ತ್ಯಜಿಸಿ ಮಂದರಪರ್ವತಕ್ಕೆ ಹೋದನು. ನಾನೂ ಮಂದರಶೈಲಕ್ಕೇ ತೆರಳಿದೆನು.

ಸೂರಃ ಸೌರಾಣಿ ಸಂತ್ಯಜ್ಯ ಗತಶ್ಚಾಯತನಾದರಂ ।
ಸ್ವಂ ಸ್ವಂ ಸ್ಥಾನಂ ಕ್ಷಿತೌ ತ್ಯಕ್ತ್ವಾ ಯಯುರನ್ಯೇಽಪಿ ನಿರ್ಜರಾಃ ॥ ೬ ॥
ಗತೇಷು ದೇವಸಂಘೇಷು ಪೃಥಿವ್ಯಾಃ ಪೃಥಿವೀಪತಿಃ ।
ಚಕಾರ ರಾಜ್ಯಂ ನಿರ್ದ್ವಂದ್ವಂ ದಿವೋದಾಸಃ ಪ್ರತಾಪವಾನ್ ॥ ೭ ॥
ವಿಧಾಯ ರಾಜಧಾನೀಂ ಸ ವಾರಾಣಸ್ಯಾಂ ಸುನಿಶ್ಚಲಾಂ ।
ವಿಧಾಂಚಕ್ರೇ ಮಹಾಬುದ್ಧಿಃ ಪ್ರಜಾ ಧರ್ಮೇಣ ಪಾಲಯನ್ ॥ ೮ ॥
ಸೂರ್ಯವತ್ಸ ಪ್ರತಪಿತಾ ದುರ್ಹೃದಾಂ ಹೃದಿ ನೇತ್ರಯೋಃ ।
ಸೋಮವತ್ಸುಹೃದಾಮಾಸೀನ್ಮಾನಸೇಷು ಸ್ವಕೇಷ್ವಪಿ ॥ ೯ ॥
ಅಖಂಡಮಾಖಂಡಲವತ್ಕೋದಂಡಂ ಕಲಯನ್ರಣೇ ।
ಪಲಾಯಮಾನೈರಾಲೋಕಿ ಶತ್ರುಸೈನ್ಯಬಲಾಹಕೈಃ ॥ ೧೦ ॥
ಸ ಧರ್ಮರಾಜವಜ್ಜಾತೋ ಧರ್ಮಾಧರ್ಮವಿವೇಚಕಃ ।
ಅದಂಡ್ಯಾನ್ಮಂಡಯನ್ರಾಜಾ ದಂಡ್ಯಾಂಶ್ಚ ಪರಿದಂಡಯನ್ ॥ ೧೧ ॥
ಧನಂಜಯ ಇವಾಧಾಕ್ಷೀತ್ಪರಾರಣ್ಯಾನ್ಯನೇಕಶಃ ।
ಪಾಶೀವ ಪಾಶಯಾಂಚಕ್ರೇ ವೈರಿಚಕ್ರಂ ವಿದೂರಗಃ ॥ ೧೨ ॥

---

೬. ಸೂರ್ಯನು ಸೌರಸ್ಥಾನಗಳನ್ನು ಬಿಟ್ಟು ಮಂದರಪರ್ವತಕ್ಕೆ ಹೋದನು. ಇತರ ದೇವತೆಗಳೂ ತಮ್ಮ ತಮ್ಮ ಸ್ಥಾನಗಳನ್ನು ತ್ಯಜಿಸಿ ಆ ಮಂದರಪರ್ವತಕ್ಕೆ ಹೋದರು.

೭. ದೇವತೆಗಳು ಭೂಮಿಯಿಂದ ಹೊರಟುಹೋಗಲು ಪ್ರತಾಪಶಾಲಿಯಾದ ದಿವೋದಾಸನು ನಿಷ್ಕಂಟಕವಾದ ರಾಜ್ಯವನ್ನಾಳಿದನು.

೮–೯. ಅತ್ಯಂತ ಬುದ್ಧಿಶಾಲಿಯಾದ ಆ ದಿವೋದಾಸನು ಕಾಶಿಯಲ್ಲಿ ದೃಢವಾದ ರಾಜಧಾನಿಯನ್ನು ರಚಿಸಿ ಪ್ರಜೆಗಳನ್ನು ಧರ್ಮದಿಂದ ಪಾಲಿಸುತ್ತ ಅಭಿವೃದ್ಧಿಗೊಂಡನು. ಅವನು ಶತ್ರುಗಳ ಹೃದಯಗಳಿಗೂ, ಕಣ್ಣುಗಳಿಗೂ ಸೂರ್ಯನಂತೆ ಪ್ರತಾಪಗೊಳ್ಳುವವನೂ, ಮಿತ್ರರ ಮನಸ್ಸುಗಳಿಗೂ, ಬಂಧುಗಳಿಗೂ ಚಂದ್ರನಂತಿರುವವನೂ ಆದನು.

೧೦. ಅವನು ಯುದ್ಧದಲ್ಲಿ ಅಖಂಡವಾದ ಬಿಲ್ಲನ್ನು ಹಿಡಿಯುವವನಾಗಿ ಓಡಿಹೋಗುತ್ತಿರುವ ಶತ್ರುಸೈನ್ಯವೆಂಬ ಮೋಡಗಳಿಗೆ ಇಂದ್ರನಂತೆ ವಿರಾಜಿಸಿದನು.

೧೧. ಶಿಕ್ಷಿಸಲನರ್ಹರನ್ನು ಪೂಜಿಸುವವನೂ, ಶಿಕ್ಷಿಸಲರ್ಹರನ್ನು ಶಿಕ್ಷಿಸುವವನೂ, ಧರ್ಮಾಧರ್ಮವಿವೇಚನೆಯುಳ್ಳವನೂ ಆದ ಅವನು ಧರ್ಮರಾಜನಿಗೆ ಸಾಟಿಯಾದನು.

೧೨. ಅವನು ಶತ್ರುಗಳೆಂಬ ಕಾಡುಗಳನ್ನು ಬೆಂಕಿಯಂತೆ ಅನೇಕ ಸಾರಿ ಸುಟ್ಟನು. ದೂರದಿಂದಲೆ ರಿಪುಗಳನ್ನು ವರುಣನಂತೆ ಬಂಧಿಸಿದನು.

ಸೋಽಭೂತ್ಪುಣ್ಯಜನಾಧೀಶೋ ರಿಪುರಾಕ್ಷಸಮರ್ದನಃ ।
ಜಗತ್ಪ್ರಾಣಸಮಾನಶ್ಚ ಜಗತ್ತ್ರಾಣನ ತತ್ಪರಃ ॥ ೧೩ ॥
ರಾಜರಾಜಃ ಸ ಏವಾಽಭೂತ್ಸರ್ವೇಷಾಂ ಧನದಃ ಸತಾಂ ।
ಸ ಏವ ರುದ್ರಮೂರ್ತಿಶ್ಚ ಪ್ರೈಕ್ಷಿಷ್ಟ ರಿಪುಭೀ ರಣೇ ॥ ೧೪ ॥
ವಿಶ್ವೇಷಾಂ ಸಹಿ ದೇವಾನಾಂ ತಪಸಾ ರೂಪಧೃಗ್ಯತಃ ।
ವಿಶ್ವೇದೇವಾಸ್ತತಸ್ತಂ ತು ಸ್ತುವಂತಿ ಚ ಭಜಂತಿ ಚ ॥ ೧೫ ॥
ಅಸಾಧ್ಯಃ ಸಹಿ ಸಾಧ್ಯಾನಾಂ ವಸುದೋ ವಸುನಾಽಧಿಕಃ ।
ಗ್ರಹಾಣಾಂ ವಿಗ್ರಹಧರೋ ದಸ್ರತೋಽಜಸ್ರ ರೂಪಭಾಕ್ ॥ ೧೬ ॥
ಮರುದ್ಗಣಾನಗಣಯಂಸ್ತುಷಿತಾಂ ಸ್ತೋಷಯನ್ಗುಣೈಃ ।
ಸರ್ವವಿದ್ಯಾಧರೋ ಯಸ್ತು ಸರ್ವವಿದ್ಯಾಧರೇಷ್ವಪಿ ॥ ೧೭ ॥
ಅಗರ್ವಾನೇವ ಗಂಧರ್ವಾನ್ಯಶ್ಚಕ್ರೇ ನಿಜಗೀತಿಭಿಃ
ರರಕ್ಷುರ್ಯಕ್ಷ ರಕ್ಷಾಂಸಿ ತದ್ದುರ್ಗಂ ಸ್ವರ್ಗಸೋದರಂ ॥ ೧೮ ॥
ನಾಗಾ ನಾಗಾಂಸಿ ಚಕ್ರುಶ್ಚ ತಸ್ಯ ನಾಗಬಲೀಯಸಃ ।
ದನುಜಾ ಮನುಜಾಕಾರಂ ಕೃತ್ವಾ ತಂ ಚ ಸಿಷೇವಿರೇ ॥ ೧೯ ॥

---

೧೩. ಪುಣ್ಯವಂತರಿಗೆ ಒಡೆಯನಾದ ಅವನು ರಾಕ್ಷಸರಾಜನಾದ ನಿರ್ಋತಿಯಂತೆಯೂ, ಶತ್ರುಗಳೆಂಬ ರಾಕ್ಷಸರನ್ನು ನಾಶಗೊಳಿಸುವವನೂ, ಜಗತ್ತನ್ನು ಕಾಪಾಡುವುದರಲ್ಲಿ ನಿರತನಾಗಿ ವಾಯುದೇವನಿಗೆ ಸಮಾನನೂ ಆದನು.

೧೪. ಸಮಸ್ತ ಸಜ್ಜನರಿಗೆ ಧನವನ್ನು ದಾನಮಾಡುವ ಅವನೇ ಕುಬೇರನಾದನು. ಅವನೇ ಯುದ್ಧದಲ್ಲಿ ಶತ್ರುಗಳಿಂದ ರುದ್ರನಾಗಿ ಕಾಣಲ್ಪಟ್ಟನು.

೧೫–೧೬. ಅವನು ತಪಸ್ಸಿನಿಂದ ಸಕಲದೇವತೆಗಳ ರೂಪಗಳನ್ನು ಧರಿಸಿರುವುದರಿಂದ ಸಮಸ್ತದೇವತೆಗಳೂ ಅವನನ್ನು ಸ್ತೋತ್ರಗೈಯುವರು. ಮತ್ತು ಸೇವಿಸುವರು. ಅವನು ಸಾಧ್ಯರಿಗೆ ಅಸಾಧ್ಯನೂ, ವಸುಗಳಿಗಿಂತ ದ್ರವ್ಯದಿಂದ ಅಧಿಕನೂ, ಗ್ರಹಗಳ ಶರೀರವನ್ನು ಧರಿಸಿದವನೂ, ಅಶ್ವಿನೀ ದೇವತೆಗಳಿಗಿಂತಲೂ ನಾನಾ ರೂಪಗಳನ್ನು ಹೊಂದಿದವನೂ ಆದನು.

೧೭–೧೮. ಮರುತ್ತುಗಳನ್ನು ಲೆಕ್ಕಿಸದವನೂ, ತುಷಿತರನ್ನು ಗುಣಗಳಿಂದ ಸಂತೋಷಗೊಳಿಸುವವನೂ, ಸಮಸ್ತ ವಿದ್ಯಾಧರರಲ್ಲಿ ಸಕಲ ವಿದ್ಯೆಗಳನ್ನು ಧರಿಸಿದವನೂ ಆದನು. ಅವನು ತನ್ನ ಗಾನಗಳಿಂದ ಗಂಧರ್ವರನ್ನು ಗರ್ವವಿಲ್ಲದವರನ್ನಾಗಿ ಮಾಡಿದನು. ಸ್ವರ್ಗದಂತಿರುವ ಅವನ ಕೋಟೆಯನ್ನು ಯಕ್ಷರಾಕ್ಷಸರು ರಕ್ಷಿಸಿದರು.

೧೯. ಆನೆಗಿಂತಲೂ ಬಲಿಷ್ಠನಾದ ಅವನಿಗೆ ನಾಗಗಳು ಅಪರಾಧಗಳನ್ನು ಮಾಡಲಿಲ್ಲ. ದಾನವರೂ ಮನುಷ್ಯಶರೀರವನ್ನು ತಾಳಿ ಅವನನ್ನು ಸೇವಿಸಿದರು.

ಜಾತಾ ಗುಹ್ಯಚರಾ ಯಸ್ಯ ಗುಹ್ಯಕಾಃ ಪರಿತೋ ನೃಷು ।
ಸಂಸೇವಿಷ್ಯಾಮಹೇ ರಾಜನ್ನಸುರಾಸ್ತ್ವಾಂ ಸ್ವ ವೈಭವೈಃ ॥ ೨೦ ॥
ವಯಂ ಯತಸ್ತ್ವದ್ವಿಷಯೇ ಸುರಾವಾಸೋಽಪಿ ದುರ್ಲಭಃ ।
ಅಶಿಕ್ಷಯತ್ಕ್ಷಿತಿಪತೇರಿಹ ಯಸ್ಯ ತುರಂಗಮಾನ್ ।
ಆಶುಗಶ್ಚಾಶುಗಾಮಿತ್ವಂ ಪಾವಮಾನೇ ಪಥಿಸ್ಥಿತಃ ॥ ೨೧ ॥
ಅಗಜಾನ್ಯಸ್ಯತು ಗಜಾನ್ನಗವರ್ಷ್ಮಸು ವರ್ಷ್ಮಣಃ ।
ಅಜಸ್ರದಾನಿನೋ ದೃಷ್ಟ್ವಾ ಭವನ್ನನ್ಯೇಽಪಿ ದಾನಿನಃ ॥ ೨೨ ॥
ಸದೋಜಿರೇಚ ಬೋದ್ಧಾರೋ ಯೋದ್ಧಾರಶ್ಚ ರಣಾಜಿರೇ ।
ನಯಸ್ಯ ಶಾಸ್ತ್ರೈರ್ವಿಜಿತಾ ನಶಸ್ತ್ರೈಃ ಕೇನಚಿತ್ಕ್ವಚಿತ್ ॥ ೨೩ ॥
ನ ನೇತ್ರವಿಷಯೇ ಜಾತಾ ವಿಷಯೇ ಯಸ್ಯ ಭೂಭೃತಃ ।
ಸದಾ ನಷ್ಟಪದಾ ದ್ವೇಷ್ಯಾಸ್ತದಾಽನಷ್ಟಪದಾಃ ಪ್ರಜಾಃ ॥ ೨೪ ॥
ಕಲಾವಾನೇಕ ಏವಾಽಸ್ತಿ ತ್ರಿದಿವೇಽಪಿ ದಿವೌಕಸಾಂ ।
ತಸ್ಯ ಕ್ಷೋಣಿಭೃತಃ ಕ್ಷೋಣ್ಯಾಂ ಜನಾಃ ಸರ್ವೇ ಕಲಾಲಯಾಃ ॥ ೨೫ ॥
ಏಕ ಏವಹಿ ಕಾಮೋಽಸ್ತಿ ಸ್ವರ್ಗೇ ಸೋಽಪ್ಯಂಗವರ್ಜಿತಃ ।
ಸಾಂಗೋಪಾಂಗಾಶ್ಚ ಸರ್ವೇಷಾಂ ಸರ್ವೇ ಕಾಮಾ ಹಿ ತದ್ಭುವಿ ॥ ೨೬ ॥

---

೨೦–೨೧. ಗುಹ್ಯಕರು ಸುತ್ತಲೂ ಮಾನವರ ನಡುವೆ ಗುಹ್ಯಚಾರರಾದರು. "ಅಸುರರಾದ ನಾವು ದೇವತೆಗಳ ಸಹವಾಸವಿಲ್ಲದೆ ನಿನ್ನ ದೇಶದಲ್ಲಿ ನಮ್ಮ ವೈಭವಗಳಿಂದ ಸೇವಿಸುವೆವು" ಎಂದರು. ಅವನ ಅಶ್ವಗಳನ್ನು ಆಶುಗಾಮಿಯಾದ ವಾಯುದೇವನು ವಾಯುಮಾರ್ಗದಲ್ಲಿದ್ದು ಶೀಘ್ರಗಾಮಿಗಳನ್ನಾಗಿಸಿದನು.

೨೨. ಪರ್ವತದಂತೆ ಶರೀರವುಳ್ಳವೂ, ಪರ್ವತದಲ್ಲಿ ಹುಟ್ಟಿದವೂ ಯಾವಾಗಲೂ ಮದೋದಕವನ್ನು ಸುರಿಸುವುವೂ ಆದ ಅವನ ಆನೆಗಳನ್ನು ನೋಡಿ ಇತರ ಆನೆಗಳೂ ಮದೋದಕವನ್ನು ಸುರಿಸಿದುವು.

೨೩–೨೪. ಅವನ ಸಭಾಂಗಣದಲ್ಲಿರುವ ಪಂಡಿತರೂ, ರಣಾಂಗದಲ್ಲಿರುವ ಭಟರೂ ಶಾಸ್ತ್ರಗಳಿಂದಲೂ, ಶಸ್ತ್ರಗಳಿಂದಲೂ ಯಾರಿಂದಲೂ ಎಲ್ಲಿಯೂ ಜಯಿಸಲ್ಪಡಲಿಲ್ಲ. ಅವನ ರಾಜ್ಯದಲ್ಲಿ ಯಾವಾಗಲೂ ಆಶ್ರಯರಹಿತರಲ್ಲದ ಶತ್ರುಗಳೂ, ಆಶ್ರಯವಿಲ್ಲದ ಪ್ರಜೆಗಳೂ ಕಾಣಿಸಲಿಲ್ಲ.

೨೫–೨೬. ದೇವತೆಗಳ ಸ್ವರ್ಗಲೋಕದಲ್ಲಿ ಕಲೆಯುಳ್ಳ ಒಬ್ಬನೇ ಚಂದ್ರನು ಇದ್ದನು. ಆ ದೊರೆಯ ರಾಜ್ಯದಲ್ಲಿಯಾದರೊ ಸಕಲ ಜನರೂ ಕಲೆಗಳನ್ನರಿತ ಚಂದ್ರರೇ ಆಗಿದ್ದರು. ಸ್ವರ್ಗಲೋಕದಲ್ಲಿ ಒಬ್ಬನೇ ಮನ್ಮಥನಿರುವನು. ಅವನಿಗೂ ಶರೀರವಿಲ್ಲ. ಆ ರಾಜನ ದೇಶದಲ್ಲಿ ಸಮಸ್ತಜನರ ಕಾಮಗಳೂ ಸಂಪೂರ್ಣವಾಗಿ ಎಲ್ಲರೂ ದೇಹಧಾರಿಗಳಾದ ಕಾಮರೇ ಆಗಿದ್ದರು.

ತಸ್ಯೋಪವರ್ತನೇಷ್ವೇಕೋ ನ ಶ್ರುತೋ ಗೋತ್ರಭಿತ್ಕ್ವಚಿತ್ ।
ಸ್ವರ್ಗೇ ಸ್ವರ್ಗಸದಾಮೀಶೋ ಗೋತ್ರಭಿತ್ಪರಿಕೀರ್ತಿತಃ ॥ ೨೭ ॥
ಕ್ಷಯಿಷ್ಣುಶ್ಚ ತಸ್ಯ ವಿಷಯೇ ಕೋಽಪ್ಯಾಕರ್ಣಿ ನ ಕೇನಚಿತ್ ।
ತ್ರಿವಿಷ್ಟಪೇ ಕ್ಷಪಾನಾಥಃ ಪಕ್ಷೇ ಪಕ್ಷೇ ಕ್ಷಯಿಷ್ಯತೇ ॥ ೨೮ ॥
ನಾಕೇ ನವಗ್ರಹಾಃ ಸಂತಿ ದೇಶಸ್ತಸ್ಯಾಽನವಗ್ರಹಃ ॥ ೨೯ ॥
ಹಿರಣ್ಯಗರ್ಭಃ ಸ್ವರ್ಲೋಕೇಽಪ್ಯೇಕ ಏವ ಪ್ರಕಾಶತೇ ।
ಹಿರಣ್ಯಗರ್ಭಾಃ ಸರ್ವೇಷಾಂ ತತ್ಪೌರಾಣಾಮಿಹಾಲಯಾಃ ॥ ೩೦ ॥
ಸಪ್ತಾಶ್ವ ಏಕಃ ಸ್ವರ್ಲೋಕೇ ನಿತರಾಂ ಭಾಸತೇಽಂಶುಮಾನ್ ।
ಸದಂಶುಕಾಃ ಪ್ರತಿದಿನಂ ಬಹ್ವಶ್ವಾಸ್ತತ್ಪುರೌಕಸಃ ॥ ೩೧ ॥
ಸದಪ್ಸರಾ ಯಥಾ ಸ್ವರ್ಭೂಸ್ತತ್ಪುರ್ಯಪಿ ಸದಪ್ಸರಾಃ ।
ಏಕೈವ ಪದ್ಮಾ ವೈಕುಂಠೇ ತಸ್ಯ ಪದ್ಮಾಕರಾಃ ಶತಂ ॥ ೩೨ ॥
ನಾನೀತಯಶ್ಚ ತದ್ಗ್ರಾಮಾ ನಾರಾಜಪುರುಷಾಃ ಕ್ವಚಿತ್ ।
ಗೃಹೇ ಗೃಹೇಽತ್ರ ಧನದಾ ನಾಕ ಏಕೋಽಲಕಾಪತಿಃ ॥ ೩೩ ॥

---

೨೭. ಅವನ ರಾಜ್ಯದಲ್ಲಿ ಎಲ್ಲರೂ ಗೋತ್ರೋದ್ಧಾರಕರೇ ಹೊರತು ಗೋತ್ರ ಭೇದಕನೊಬ್ಬನೂ ಇರಲಿಲ್ಲ. ಸ್ವರ್ಗಲೋಕದಲ್ಲಿ ದೇವತೆಗಳಿಗೆ ಒಡೆಯನಾದ ಇಂದ್ರನಾದರೊ "ಗೋತ್ರಭಿತ್" (ಪರ್ವತಗಳನ್ನು ಮುರಿದವನು) ಎಂದು ಕರೆಯಲ್ಪಡುತ್ತಿರುವನು.

೨೮. ಯಾವನೂ ಅವನ ರಾಜ್ಯದಲ್ಲಿ ಕ್ಷಯರೋಗಿಯಾಗಿರಲಿಲ್ಲ. ಸ್ವರ್ಗ ದಲ್ಲಿ ಚಂದ್ರನು ಪ್ರತಿಪಕ್ಷದಲ್ಲಿಯೂ ಕ್ಷಯಿಸುತ್ತಲೇ ಇರುವನು.

೨೯. ದೇವಲೋಕದಲ್ಲಿ ನವಗ್ರಹಗಳಿರುವುವು. ಅವನ ದೇಶವು ಅನವಗ್ರಹ ವಾಗಿರುವುದು; ಅಲ್ಲಿ ಯಾವ ಈತಿಬಾಧೆಗಳೂ ಇಲ್ಲದೆ ಸುಖವಾಗಿರುವುದು.

೩೦. ಸ್ವರ್ಗಲೋಕದಲ್ಲಿರುವವನು ಒಬ್ಬನೇ ಹಿರಣ್ಯಗರ್ಭನು. ಪ್ರಕಾಶಿಸು ತ್ತಿರುವ ಆ ಪಟ್ಟಣಿಗರ ಮನೆಗಳೆಲ್ಲವೂ ಹಿರಣ್ಯಗರ್ಭಗಳೇ ಆಗಿರುವುವು.

೩೧. ದೇವಲೋಕದಲ್ಲಿ ಏಳು ಕುದುರೆಗಳಿರುವುದು ಸೂರ್ಯನೊಬ್ಬನಿಗೇ. ಆದರೆ ತೇಜಸ್ವಿಗಳಾದ ಅವನ ಪಟ್ಟಣಿಗರು ಅನೇಕ ಕುದುರೆಗಳುಳ್ಳವರಾಗಿ ಪ್ರಕಾಶಿಸುತ್ತಾರೆ.

೩೨. ದೇವಲೋಕದಲ್ಲಿ ಹೇಗೆ ಅಪ್ಸರಸ್ತ್ರೀಯರಿರುವರೊ, ಹಾಗೆಯೇ ಅವನ ಪಟ್ಟಣವೂ ಸಜ್ಜನರೆಂಬ ಅಪ್ಸರಸ್ತ್ರೀಯರುಳ್ಳುದು. ವೈಕುಂಠದಲ್ಲಿ ಒಬ್ಬಳೇ ಪದ್ಮೆಯಿರುವಳು. ಅವನ ಪಟ್ಟಣದಲ್ಲಿ ನೂರಾರು ಪದ್ಮಾಕರಗಳಿರುವುವು.

೩೩. ಅವನ ಗ್ರಾಮಗಳು ಈತಿಬಾಧೆಯಿಲ್ಲದುವೂ, ರಾಜಪುರುಷರುಳ್ಳುದೂ, ಆಗಿರುವುವು. ಅವನ ದೇಶದಲ್ಲಿ ಪ್ರತಿಮನೆಯಲ್ಲಿಯೂ ಕುಬೇರರೇ ಇರುವರು. ಸ್ವರ್ಗದಲ್ಲಿ ಒಬ್ಬನೇ ಕುಬೇರನು.

ದಿವೋದಾಸಸ್ಯ ತಸ್ಯೈವಂ ಕಾಶ್ಯಾಂ ರಾಜ್ಯಂ ಪ್ರಶಾಸತಃ ।
ಗತಂ ವರ್ಷಂ ದಿನಪ್ರಾಯಂ ಶರದಾಮಯುತಾಷ್ಟಕಂ ॥ ೩೪ ॥
ಗೀರ್ವಾಣಾ ವಿಪ್ರತೀಕಾರಮಥ ತಸ್ಯ ಚಿಕೀರ್ಷವಃ ।
ಗುರುಣಾ ಮಂತ್ರಯಾಂಚಕ್ರುರ್ಧರ್ಮವರ್ತ್ಮಾನುಯಾಯಿನಃ ॥ ೩೫ ॥
ಭವಾದೃಶಾಮಿವ ಮುನೇ ಪ್ರಾಯಶೋ ಧರ್ಮಚಾರಿಣಾಂ ।
ವಿಬುಧಾ ವಿದಧತ್ಯೇವ ಮಹತೀರಾಪದಾಂ ತತೀಃ ॥ ೩೬ ॥
ಯದ್ಯಪ್ಯಸೌ ಧರಾಧೀಶೋ ವ್ಯಾಧಿನೋದ್ದುರ್ಧರಾಧ್ವರೈಃ ।
ತಾನಧ್ವರಭುಜೋಽತ್ಯಂತಂ ತಥಾಽಪಿ ಸುಹೃದೋ ನ ತೇ ॥ ೩೭ ॥
ಸ್ವಭಾವ ಏವ ದ್ಯುಸದಾಂ ಪರೋತ್ಕರ್ಷಾಸಹಿಷ್ಣುತಾ ।
ಬಲಿಬಾಣದಧೀಚ್ಯಾದ್ಯೈರಪರಾದ್ಧಂ ಕಿಮತ್ರ ತೈಃ ॥ ೩೮ ॥
ಅಂತರಾಯಾ ಭವಂತ್ಯೇವ ಧರ್ಮಸ್ಯಾಽಪಿ ಪದೇ ಪದೇ ।
ತಥಾಪಿ ನ ನಿಜೋ ಧರ್ಮೋ ಧರ್ಮಧೀಭಿರ್ವಿಮುಚ್ಯತೇ ॥ ೩೯ ॥
ಅಧರ್ಮಿಣಃ ಸಮೇಧಂತೇ ಧನಧಾನ್ಯಸಮೃದ್ಧಿಭಿಃ ।
ಅಧರ್ಮಾದೇವ ಚ ಪರಂ ಸಮೂಲಂ ಯಾಂತ್ಯಧೋಗತಿಂ ॥ ೪೦ ॥
ಪ್ರಜಾಃ ಪಾಲಯತಸ್ತಸ್ಯ ಪುತ್ರಾನಿವ ನಿಜೌರಸಾನ್ ।
ರಿಪುಂಜಯಸ್ಯ ನಾಽಲ್ಪೋಽಪಿ ಬಭೂವಾಧರ್ಮಸಂಗ್ರಹಃ ॥ ೪೧ ॥

---

೩೪. ಹೀಗೆ ದೀವೋದಾಸನು ಕಾಶಿಯಲ್ಲಿ ರಾಜ್ಯವನ್ನು ಆಳುತ್ತಿರಲು ಎಂಬತ್ತುಸಾವಿರ ವರ್ಷಗಳು ಒಂದು ದಿನದಂತೆ ಕಳೆಯಿತು.

೩೫. ಧರ್ಮಮಾರ್ಗದಲ್ಲಿಯೇ ನಡೆಯುತ್ತಿರುವ ಅವನಿಗೆ ದೇವತೆಗಳು ಅಪಕಾರಮಾಡಲಿಚ್ಛಿಸಿ ಬೃಹಸ್ಪತಿಯೊಡನೆ ಹೀಗೆ ಆಲೋಚಿಸಿದರು.

೩೬. "ಮುನಿಯೆ! ನಿನ್ನಂತೆ ಧರ್ಮವನ್ನಾಚರಿಸುವವರಿಗೆ ದೇವತೆಗಳು ಪ್ರಾಯಿಕವಾಗಿ ಬಹಳ ಕಷ್ಟಗಳನ್ನುಂಟುಮಾಡುವರು.

೩೭. ಈ ದಿವೋದಾಸನು ಮಹಾಯಜ್ಞಗಳಿಂದ ದೇವತೆಗಳನ್ನು ಆರಾಧಿಸಿದರೂ ಅವರು ಮಾತ್ರ ಅವನಿಗೆ ಮಿತ್ರರಾಗಲಿಲ್ಲ.

೩೮–೩೯. ಪರೋತ್ಕರ್ಷವನ್ನು ಸಹಿಸದಿರುವುದೇ ದೇವತೆಗಳ ಸ್ವಭಾವವು. ಬಲಿ, ಬಾಣ, ಧಧೀಚಿ ಮೊದಲಾದವರು ಇವರಿಗೆ ಏನು ಅಪರಾಧವನ್ನು ಮಾಡಿದರು? ಧರ್ಮಕ್ಕೆ ಆಗಾಗ ವಿಘ್ನಗಳು ಸಂಭವಿಸುವುವು. ಆದರೂ ಧರ್ಮ ಬುದ್ಧಿಯುಳ್ಳವರು ಅದನ್ನು ಬಿಡುವುದಿಲ್ಲ.

೪೦. ಧರ್ಮವನ್ನು ಮಾಡದವರು ಧನಧಾನ್ಯಗಳಿಂದ ವೃದ್ಧಿಗೊಳ್ಳುವರು. ಆದರೆ ಆ ಅಧರ್ಮದಿಂದಲೇ ಸಮೂಲರಾಗಿ ಅಧೋಗತಿಯನ್ನೂ ಹೊಂದುವರು.

೪೧. ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆ ಪ್ರಜೆಗಳನ್ನು ಕಾಪಾಡುತ್ತಿರುವ ಈ ದೊರೆಗೆ ಸ್ವಲ್ಪವೂ ಅಧರ್ಮವು ಸಂಗ್ರಹವಾಗಲಿಲ್ಲ.

ಷಾಡ್ಗುಣ್ಯವೇದಿನಸ್ತಸ್ಯ ತ್ರಿಶಕ್ತ್ಯೂರ್ಜಿತಚೇತಸಃ ।
ಚತುರೋಪಾಯವಿತ್ತಸ್ಯ ನ ರಂಧ್ರಂ ವಿವಿದುಃ ಸುರಾಃ ॥ ೪೨ ॥
ಬುದ್ಧಿಮಂತೋಽಪಿ ವಿಬುಧಾ ವಿಪ್ರತೀಕರ್ತುಮುದ್ಯತಾಃ ।
ಮನಾಗಪಿ ನಸಂಶೇಕುರಪಕರ್ತುಂ ತದೀಶಿತುಃ ॥ ೪೩ ॥
ಏಕಪತ್ನೀವ್ರತಾಃ ಸರ್ವೇ ಪುಮಾಂಸಸ್ತಸ್ಯ ಮಂಡಲೇ ।
ನಾರೀಷು ಕಾಚಿನ್ನೈವಾಽಽಸೀದಪತಿವ್ರತಧರ್ಮಿಣೀ ॥ ೪೪ ॥
ಅನಧೀತೋ ನ ವಿಪ್ರೋಽಭೂದಶೂರೋ ನೈವ ಬಾಹುಜಃ ।
ವೈಶ್ಯೋಽನಜ್ಞೋ ನೈವಾಸೀದರ್ಥೋಪಾರ್ಜನಕರ್ಮಸು ॥ ೪೫ ॥
ಅನನ್ಯವೃತ್ತಯಃ ಶೂದ್ರಾ ದ್ವಿಜಶುಶ್ರೂಷಣಂ ಪ್ರತಿ ।
ತಸ್ಯ ರಾಷ್ಟ್ರೇ ಸಮಭವನ್ನಿವೋದಾಸಸ್ಯ ಭೂಪತೇಃ ॥ ೪೬ ॥
ಅವಿಪ್ಲುತಬ್ರಹ್ಮಚರ್ಯಾಸ್ತದ್ರಾಷ್ಟ್ರೇ ಬ್ರಹ್ಮಚಾರಿಣಃ ।
ನಿತ್ಯಂ ಗುರುಕುಲಾಽಧೀನಾ ವೇದಗ್ರಹಣತತ್ಪರಾಃ ॥ ೪೭ ॥
ಆತಿಥ್ಯಧರ್ಮಪ್ರವಣಾ ಧರ್ಮಶಾಸ್ತ್ರವಿಚಕ್ಷಣಾಃ ।
ನಿತ್ಯಂ ಸಾಧುಸಮಾಚಾರಾ ಗೃಹಸ್ಥಾಸ್ತಸ್ಯ ಸರ್ವತಃ ॥ ೪೮ ॥

---

೪೨. ಸಂಧಿವಿಗ್ರಹಯಾನಾದಿ ಷಡ್ಗುಣಗಳನ್ನರಿತವನೂ, ಪ್ರಭು, ಮಂತ್ರ, ಉತ್ಸಾಹಶಕ್ತಿಗಳಿಂದ ಉತ್ಕೃಷ್ಟವಾದ ಮನಸ್ಸುಳ್ಳವನೂ, ಸಾಮಾದಿ ಚತುರೋಪಾಯಗಳನ್ನು ಬಲ್ಲವನೂ ಆದ ಅವನಲ್ಲಿ ದೇವತೆಗಳು ಅಪಕಾರಮಾಡಲು ಅವಕಾಶವನ್ನು ಹೊಂದಲಿಲ್ಲ.

೪೩. ಅಪಕಾರಮಾಡಲು ಉದ್ಯುಕ್ತರಾದ ದೇವತೆಗಳು ಬುದ್ಧಿಶಾಲಿಗಳಾಗಿದ್ದರೂ ಅವನಿಗೆ ಅಪಕಾರಮಾಡಲು ಸ್ವಲ್ಪವೂ ಶಕ್ತರಾಗಲಿಲ್ಲ.

೪೪. ಅವನ ದೇಶದಲ್ಲಿ ಎಲ್ಲ ಪುರುಷರೂ ಏಕಪತ್ನೀವ್ರತರಾಗಿರುವರು. ಸ್ತ್ರೀಯರಲ್ಲಿ ಒಬ್ಬಳೂ ಪತಿವ್ರತೆಯಲ್ಲದವಳಾಗಿರುವುದಿಲ್ಲ.

೪೫. ಅಧ್ಯಯನಮಾಡದ ಬ್ರಾಹ್ಮಣನೂ, ಶೂರನಲ್ಲದ ಕ್ಷತ್ರಿಯನೂ, ದ್ರವ್ಯಾರ್ಜನಕಾರ್ಯಗಳಲ್ಲಿ ಅಭಿಜ್ಞನಲ್ಲದ ವೈಶ್ಯನೂ ಇರುವುದಿಲ್ಲ.

೪೬. ಅವನ ದೇಶದಲ್ಲಿ ಶೂದ್ರರೆಲ್ಲರೂ ಬ್ರಾಹ್ಮಣಾದಿತ್ರಿವರ್ಣದವರ ಸೇವೆಯಲ್ಲಿ ನಿರತರಾಗಿರುವರು.

೪೭. ಅವನ ದೇಶದಲ್ಲಿ ಬ್ರಹ್ಮಚಾರಿಗಳು ಸ್ಥಿರಬ್ರಹ್ಮಚರ್ಯೆಯುಳ್ಳವರೂ, ಗುರುಕುಲಾಧೀನರೂ, ವೇದಗ್ರಹಣನಿರತರೂ ಆಗಿರುವರು.

೪೮. ಗೃಹಸ್ಥರು ಆತಿಥ್ಯನಿರತರೂ, ಧರ್ಮಶಾಸ್ತ್ರನಿಪುಣರೂ, ಒಳ್ಳೆಯ ನಡತೆಯುಳ್ಳವರೂ ಆಗಿರುವರು.

ತೃತೀಯಾಶ್ರಮಿಣೋ ಯಸ್ಮಿನ್ವನವೃತ್ತಿಕೃತಾಽಽದರಾಃ ।
ನಿಃಸ್ಪೃಹಾ ಗ್ರಾಮವಾರ್ತಾಸು ವೇದವರ್ತ್ಮಾಽನುಸಾರಿಣಃ ॥ ೪೯ ॥
ಸರ್ವಸಂಗವಿನಿರ್ಮುಕ್ತಾ ನಿರ್ಮುಕ್ತಾ ನಿಷ್ಪರಿಗ್ರಹಾಃ ।
ವಾಙ್ಮನಃಕರ್ಮದಂಡಾಢ್ಯಾ ಯತಯೋ ಯತ್ರ ನಿಃಸ್ಪೃಹಾಃ ॥ ೫೦ ॥
ಅನ್ಯೇಽನುಲೋಮಜನ್ಮಾನಃ ಪ್ರತಿಲೋಮಭವಾ ಅಪಿ ।
ಸ್ವಪಾರಂಪರ್ಯತೋ ದೃಷ್ಟಂ ಮನಾಗ್ವರ್ತ್ಮ ನ ತತ್ಯಜುಃ ॥ ೫೧ ॥
ಅನಪತ್ಯಾ ನ ತದ್ರಾಷ್ಟ್ರೇ ಧನಹೀನೋಽಪಿ ಕೋಽಪಿ ನ ।
ಅವೃದ್ಧಸೇವೀನೋ ಕಶ್ಚಿದಕಾಂಡಮೃತಿಭಾಕ್ಚ ನ ॥ ೫೨ ॥
ನ ಚಾಟೂ ನೈವ ವಾಚಾಟಾ ವಂಚಕಾ ನೋ ನ ಹಿಂಸಕಾಃ ।
ನ ಪಾಷಂಡಾ ನವೈ ಭಂಡಾ ನ ರಂಡಾ ನಚ ಶೌಂಡಿಕಾಃ ॥ ೫೩ ॥
ಶ್ರುತಿಘೋಷೋ ಹಿ ಸರ್ವತ್ರ ಶಾಸ್ತ್ರವಾದಃ ಪದೇ ಪದೇ ।
ಸರ್ವತ್ರ ಸುಭಗಾಲಾಪಾ ಮುದಾ ಮಂಗಲಗೀತಯಃ ॥ ೫೪ ॥
ವೀಣಾವೇಣುಪ್ರವಾದಾಶ್ಚ ಮೃದಂಗಾ ಮಧುರಸ್ವನಾಃ ।
ಸೋಮಪಾನಂ ವಿನಾಽನ್ಯತ್ರ ಪಾನಗೋಷ್ಠೀ ನ ಕರ್ಣಗಾ ॥ ೫೫ ॥

---

೪೯. ಅವನ ದೇಶದಲ್ಲಿ ವಾನಪ್ರಸ್ಥರು ವನವಾಸದಲ್ಲಿ ವಿಶ್ವಾಸವುಳ್ಳವರೂ, ಗ್ರಾಮಸಮಾಚಾರಗಳಲ್ಲಿ ಆಶೆಯಿಲ್ಲದವರೂ, ವೇದಮಾರ್ಗಾನುಸಾರಿಗಳೂ ಆಗಿರುವರು.

೫೦. ಯತಿಗಳು ಸರ್ವಸಂಗತ್ಯಾಗಿಗಳೂ, ದಾನ ತೆಗೆದುಕೊಳ್ಳದವರೂ, ವಾಕ್, ಮನಸ್ಸು, ಕರ್ಮಸಂಯಮವುಳ್ಳವರೂ, ಆಶೆಯಿಲ್ಲದವರೂ ಆಗಿರುವರು.

೫೧. ಇತರ ಅನುಲೋಮ ಪ್ರತಿಲೋಮ ಜಾತಿಯವರೂ ತಮ್ಮ ವಂಶ ಪಾರಂಪರ್ಯದಿಂದ ನೋಡಿದ ಧರ್ಮಮಾರ್ಗವನ್ನು ಸ್ವಲ್ಪವೂ ಬಿಟ್ಟಿರುವುದಿಲ್ಲ.

೫೨. ಅವನ ರಾಜ್ಯದಲ್ಲಿ ಮಕ್ಕಳಿಲ್ಲದವರೂ, ಹಣವಿಲ್ಲದವರೂ, ವೃದ್ಧರನ್ನು ಸೇವಿಸದವರೂ, ಆಕಸ್ಮಿಕ ಮರಣವನ್ನು ಹೊಂದುವವರೂ ಇರುವುದಿಲ್ಲ.

೫೩. ಚಂಚಲಚಿತ್ತರೂ, ಬಹು ನಿಂದ್ಯವಾದ ಮಾತುಗಳುಳ್ಳವರೂ, ಮೋಸಗಾರರೂ, ಹಿಂಸಕರೂ, ಪಾಷಂಡರೂ, ಭಂಡರೂ, ರಂಡೆಯರೂ, ಹೆಂಡವನ್ನು ಮಾರುವವರೂ ಇರುವುದಿಲ್ಲ.

೫೪–೫೫. ಎಲ್ಲೆಡೆಯೂ ವೇದಘೋಷವೂ, ಪ್ರತಿಕ್ಷಣದಲ್ಲಿಯೂ ಶಾಸ್ತ್ರವಾದವೂ, ಮಂಗಲಾಲಾಪವೂ, ಮಂಗಳಗಾನಗಳೂ, ವೀಣಾವೇಣು ಮೃದಂಗಗಳ ಇಂಪಾದ ಧ್ವನಿಗಳೂ ಮೊಳಗುತ್ತಿರುವುವು. ಸೋಮರಸಪಾನವನ್ನು ಬಿಟ್ಟು ಪಾನಗೋಷ್ಠಿಯೇ ಆ ದೇಶದಲ್ಲಿ ಕೇಳಬರುವುದಿಲ್ಲ.

ಮಾಂಸಾಶಿನಃ ಪುರೋಡಾಶೇ ನೈವಾಽನ್ಯತ್ರ ಕದಾಚನ ।
ನ ದುರೋದರಿಣೋ ಯತ್ರ ಸಾಽಧಮರ್ಣಾ ನ ತಸ್ಕರಾಃ ॥ ೫೬ ॥
ಪುತ್ರಸ್ಯ ಪಿತ್ರೋಃ ಪದಯೋಃ ಪೂಜನಂ ದೇವಪೂಜನಂ ।
ಉಪವಾಸೋ ವ್ರತಂ ತೀರ್ಥಂ ದೇವತಾರಾಧನಂ ಪರಂ ॥ ೫೭ ॥
ನಾರೀಣಾಂ ಭರ್ತೃಪದಯೋರರ್ಚನಂ ತದ್ವಚಃ ಶ್ರುತಿಃ ।
ಸಮರ್ಚಯಂತಿ ಸತತಂ ಮನುಜಾ ನಿಜಮಗ್ರಜಂ ॥ ೫೮ ॥
ಸಪರ್ಯಯಂತಿ ಮುದಿತಾ ಭೃತ್ಯಾಃ ಸ್ವಾಮಿಪದಾಂಬುಜಂ ।
ಹೀನವರ್ಣೈರಗ್ರವರ್ಣೋ ವರ್ಣ್ಯತೇ ಗುಣಗೌರವೈಃ ॥ ೫೯ ॥
ವರಿವಸ್ಯಂತಿ ಭೂಯೋಽಪಿ ತ್ರಿಕಾಲಂ ಕಾಶಿದೇವತಾಃ ।
ಸರ್ವತ್ರ ಸರ್ವೇ ವಿದ್ವಾಂಸಃ ಸಮರ್ಚ್ಯಂತೇ ಮನೋರಥೈಃ ॥ ೬೦ ॥
ವಿದ್ವದ್ಭಿಶ್ಚ ತಪೋನಿಷ್ಠಾಸ್ತಪೋ ನಿಷ್ಠೈರ್ಜಿತೇಂದ್ರಿಯಾಃ ।
ಜಿತೇಂದ್ರಿಯೈರ್ಜ್ಞಾನನಿಷ್ಠಾ ಜ್ಞಾನಿಭಿಃ ಶಿವಯೋಗಿನಃ ॥ ೬೧ ॥
ಮಂತ್ರಪೂತಂ ಮಹಾಽರ್ಹಂ ಚ ವಿಧಿಯುಕ್ತಂ ಸುಸಂಸ್ಕೃತಂ ।
ವಾಡವಾನಾಂ ಮುಖಾಽಗ್ನೌ ಚ ಹೂಯತೇಽಹರ್ನಿಶಂ ಹವಿಃ ॥ ೬೨ ॥

---

೫೬. ಯಜ್ಞದ ಪುರೋಡಾಶ ವಿಷಯದಲ್ಲಿ ಮಾತ್ರ ಮಾಂಸಭಕ್ಷಕರಿದ್ದರು. ಇತರ ಕಡೆಗಳಲ್ಲಿರುವುದಿಲ್ಲ. ಜೂಜುಗಾರರೂ, ಸಾಲಗಾರರೂ, ಕಳ್ಳರೂ ಇರುವುದಿಲ್ಲ.

೫೭. ಮಗನಿಗೆ ತಂದೆ ತಾಯಿಗಳ ಪಾದಪೂಜೆಯೇ ದೇವಪೂಜೆಯು; ಉಪವಾಸವೇ ವ್ರತವು; ದೇವಪೂಜೆಯೇ ಉತ್ತಮ ತೀರ್ಥವು.

೫೮–೫೯. ಸ್ತ್ರೀಯರಿಗೆ ಪತಿಪಾದಪೂಜೆಯೂ, ಅವನ ವಚನಶ್ರವಣವೂ ವ್ರತವಾಗಿರುವುದು. ಮನುಷ್ಯರು ಯಾವಾಗಲೂ ತಮಗಿಂತ ದೊಡ್ಡವರನ್ನು ಪೂಜಿಸುವರು. ಭೃತ್ಯರು ಸಂತೋಷದಿಂದ ಯಜಮಾನನ ಪಾದವನ್ನು ಪೂಜಿಸುವರು. ನೀಚಜಾತಿಯವರು ಉತ್ತಮ ಜಾತಿಯವರನ್ನು ಗುಣಗೌರವದಿಂದ ವರ್ಣಿಸುತ್ತಿರುವರು.

೬೦–೬೧. ಎಲ್ಲರೂ ಕಾಶಿಯನ್ನೂ, ವಿಶ್ವೇಶ್ವರನನ್ನೂ ಬಹುವಾಗಿ ಪೂಜಿಸುತ್ತಿರುವರು. ಎಲ್ಲೆಡೆಯಲ್ಲಿಯೂ ಸಾಮಾನ್ಯಜನರು ವಿದ್ವಾಂಸರನ್ನು ಆರಾಧಿಸುತ್ತಿರುವರು. ವಿದ್ವಾಂಸರು ತಪಸ್ವಿಗಳನ್ನೂ, ತಪಸ್ವಿಗಳು ಜಿತೇಂದ್ರಿಯರನ್ನೂ, ಜಿತೇಂದ್ರಿಯರು ಜ್ಞಾನಿಗಳನ್ನೂ, ಜ್ಞಾನಿಗಳು ಶಿವಯೋಗಿಗಳನ್ನೂ ಪೂಜಿಸುವರು.

೬೨. ಗೃಹಸ್ಥರು ಮಂತ್ರಶುದ್ಧವೂ, ಅತಿ ಪವಿತ್ರವೂ, ವಿಧಿಯುಕ್ತವೂ, ಚೆನ್ನಾಗಿ ಸಂಸ್ಕಾರಗೊಂಡುದೂ ಆದ ಹವಿಸ್ಸನ್ನು ಬ್ರಾಹ್ಮಣರ ಮುಖದಲ್ಲಿ ಹೋಮಿಸುತ್ತಿರುವರು.

ವಾಪೀಕೂಪತಡಾಗಾನಾಮಾರಾಮಾಣಾಂ ಪದೇ ಪದೇ ।
ಶುಚಿಭಿರ್ದ್ರವ್ಯಸಂಭಾರೈಃ ಕರ್ತಾರೋ ಯತ್ರ ಭೂರಿಶಃ ॥ ೬೩ ॥
ಯದ್ರಾಷ್ಟ್ರೇ ಹೃಷ್ಟಪುಷ್ಟಾಶ್ಚ ದೃಶ್ಯಂತೇ ಸರ್ವಜಾತಯಃ ।
ಅನಿಂದ್ಯಸೇವಾಸಂಪನ್ನಾ ವಿನಾ ಮೃಗಯುಸೈನಿಕಾನ್ ॥ ೬೪ ॥
ಇತ್ಥಂ ತಸ್ಯ ಮಹೀಜಾನೇಃ ಸರ್ವತ್ರ ಶುಚಿವರ್ತಿನಃ ।
ಉನ್ಮಿಷಂತೋಽಪ್ಯನಿಮಿಷಾ ಮನಾಕ್ಛಿದ್ರಂ ನಲೇಭಿರೇ ॥ ೬೫ ॥
ಅಥೋವಾಚಾಽಮರಗುರು ರ್ದೇವಾನಪಚಿಕೀರ್ಷುಕಾನ್ ।
ತಸ್ಮಿನ್ರಾಜನಿ ಧರ್ಮಿಷ್ಠೇ ವರಿಷ್ಠೇ ಮಂತ್ರವೇದಿಷು ॥ ೬೬ ॥

ಗುರುರುವಾಚ :—

ಸಂಧಿವಿಗ್ರಹಯಾನಾಸ್ತಿಸಂಶ್ರಯಂ ದ್ವೈಧಭಾವನಂ ।
ಯಥಾ ಸ ರಾಜಾ ಸಂವೇತ್ತಿ ನ ತಥಾಽತ್ರಾಽಪಿ ಕಶ್ಚನ ॥ ೬೭ ॥
ಉಪಾಯೋಽಪ್ಯೇಕ ಏವಾಽಸ್ತಿ ಚತುರ್ಷ್ವಿಹ ದಿವೌಕಸಃ ।
ಭೇದೋ ನಾಮ ಸಚೇತ್ಸಿಧ್ಯೇತ್ತಪೋ ಬಲಿನಿ ತತ್ರ ಹಿ ॥ ೬೮ ॥
ತೇನ ಯದ್ಯಪಿ ಭೂಭರ್ತ್ರಾ ಭೂಮೇರ್ದೇವಾ ವಿವಾಸಿತಾಃ ।
ತಥಾಽಪಿ ಭೂರಿಶಸ್ತತ್ರ ಸಂತ್ಯಸ್ಮತ್ಪಕ್ಷಪಾತಿನಃ ॥ ೬೯ ॥

---

೬೩. ಅವನ ದೇಶದಲ್ಲಿ ಜನರು ಬಾವಿ, ಕೊಳ, ಕೆರೆ, ಉದ್ಯಾನ, ಇವುಗಳನ್ನು ಶುದ್ಧವಾದ ದ್ರವ್ಯಸಂಭಾರಗಳಿಂದ ರಚಿಸುತ್ತಿರುವರು.

೬೪. ಅವನ ದೇಶದಲ್ಲಿ ಬೇಟೆಗಾರರು, ಕಟುಕರು ಇವರನ್ನು ಬಿಟ್ಟು ಸಕಲ ಜಾತಿಯ ಜನರೂ ಹೃಷ್ಟಪುಷ್ಟರೂ, ನಿಂದ್ಯರನ್ನು ಸೇವಿಸದವರೂ ಆಗಿರುವರು.

೬೫. ಹೀಗೆ ಎಲ್ಲ ವಿಷಯದಲ್ಲಿಯೂ ಶುದ್ಧನಾದ ಆ ದೊರೆಯ ವಿಷಯದಲ್ಲಿ ದೇವತೆಗಳು ಜಾಗರೂಕರಾಗಿದ್ದರೂ ಛಿದ್ರಾವಕಾಶವನ್ನು ಹೊಂದಲಿಲ್ಲ.

೬೬. ಅನಂತರ ಮಂತ್ರಜ್ಞರಲ್ಲಿ ಉತ್ತಮನಾದ ಬೃಹಸ್ಪತಿಯು ಧರ್ಮಿಷ್ಠನಾದ ಆ ದೊರೆಗೆ ಅಪಕಾರಮಾಡಲಿಚ್ಛಿಸುವ ದೇವತೆಗಳನ್ನು ಕುರಿತು ಇಂತೆಂದನು.

೬೭. ಬೃಹಸ್ಪತಿಯು ಹೇಳುತ್ತಾನೆ:—ದೇವತೆಗಳೆ! ಆ ದಿವೋದಾಸನು ಸಂಧಿ, ವಿಗ್ರಹ, ಯಾನ, ಆಸನ, ದ್ವೈಧ, ಆಶ್ರಯ ಇವುಗಳನ್ನು ತಿಳಿದಂತೆ ನಮ್ಮಲ್ಲಿ ತಿಳಿದವರು ಯಾರೂ ಇಲ್ಲ.

೬೮–೬೯. ಅಯ್ಯಾ ದೇವತೆಗಳಿರಾ! ಸಾಮಾದಿ ನಾಲ್ಕು ಉಪಾಯಗಳಲ್ಲಿ ಭೇದವೆಂಬ ಸಂಧ್ಯುಪಾಯವು ಮಾತ್ರ ತಪಸ್ಸಿನಿಂದ ಬಲಿಷ್ಠನಾದ ಅವನಲ್ಲಿ ಸಿದ್ಧಿಸಿದರೆ ಸಿದ್ಧಿಸಬಹುದು. ಅವನು ಭೂಮಿಯಿಂದ ದೇವತೆಗಳನ್ನು ಓಡಿಸಿದರೂ ಅಲ್ಲಿ ಇನ್ನೂ ನಮ್ಮಲ್ಲಿ ಸ್ನೇಹವುಳ್ಳವರಿದ್ದಾರೆ.

ಕಾಲೋ ನಿಮಿಷಮಾತ್ರೋಽಪಿ ಯಾನ್ವಿನಾ ನ ಸುಖಂ ವ್ರಜೇತ್ ।
ಅಸ್ಮಾಕಮಪಿ ತಸ್ಯಾಽಪಿ ಸಂತಿ ತೇ ತತ್ರ ಮಾನಿತಾಃ ॥ ೭೦ ॥
ಅಂತರ್ಬಹಿಶ್ಚರಾ ನಿತ್ಯಂ ಸರ್ವವಿಶ್ರಂಭಭೂಮಯಃ ।
ಸಮಾಗತೇಷು ತೇಷ್ವತ್ರ ಸರ್ವಂ ನಃ ಸೇತ್ಸ್ಯತಿ ಪ್ರಿಯಂ ॥ ೭೧ ॥
ಸಮಾಕರ್ಣ್ಯ ಚ ತೇ ಸರ್ವೇ ತ್ರಿದಶಾ ಗೀಷ್ಪತೀರಿತಂ ।
ನಿರ್ಣೀತವಂತಸ್ತಸ್ಯಾಽರ್ಥಂ ತಸ್ಮಾದಂತರ್ಬಹಿಶ್ಚರಾನ್ ।
ಅಭಿನಂದ್ಯಾಽಥ ತಂ ಸರ್ವೇ ಪ್ರೋಚುರಿತ್ಥಂ ಭವೇದಿತಿ ॥ ೭೨ ॥
ತತಃ ಶಕ್ರಃ ಸಮಾಹೂಯ ವೀತಿಹೋತ್ರಂ ಪುರಸ್ಥಿತಂ ।
ಊಚೇ ಮಧುರಯಾ ವಾಚಾ ಬಹುಮಾನಪುರಃಸರಂ ॥ ೭೩ ॥
ಹವ್ಯವಾಹನ ಯಾ ಮೂರ್ತಿಸ್ತವ ತತ್ರ ಪ್ರತಿಷ್ಠಿತಾ ।
ತಾಮುಪಸಂಹರ ಕ್ಷಿಪ್ರಂ ವಿಷಯಾತ್ತಸ್ಯ ಭೂಪತೇಃ ॥ ೭೪ ॥
ಸಮಾಗತಾಯಾಂ ತನ್ಮೂರ್ತೌ ಸರ್ವಾ ನಷ್ಟಾಗ್ನಯಃ ಪ್ರಜಾಃ ।
ಹವ್ಯಕವ್ಯಕ್ರಿಯಾಶೂನ್ಯಾ ವಿರಜಿಷ್ಯಂತಿ ರಾಜನಿ ॥ ೭೫ ॥
ಪ್ರಜಾಸು ಚ ವಿರಕ್ತಾಸು ರಾಜ್ಯಕಾಮದುಘಾಸು ವೈ ।
ಕೃಚ್ಛ್ರೇಣೋಪಾರ್ಜಿತೋಽಪಾರ್ಥೋ ರಾಜಶಬ್ದೋ ಭವಿಷ್ಯತಿ ॥ ೭೬ ॥

---

೭೦. ನಮಗೂ, ಅವನಿಗೂ ಪೂಜ್ಯರಾದವರಲ್ಲಿದ್ದಾರೆ. ಅವರಿಲ್ಲದಿದ್ದರೆ ಒಂದು ನಿಮಿಷಕಾಲವೂ ಸುಖವುಂಟಾಗುವುದಿಲ್ಲ.

೭೧. ಒಳಗೂ ಹೊರಗೂ ಸಂಚರಿಸುವವರೂ, ಎಲ್ಲರ ನಂಬಿಕೆಗೆ ಪಾತ್ರರೂ ಆದ ಅವರು ಇಲ್ಲಿಗೆ ಬಂದರೆ ನಮ್ಮ ಇಷ್ಟಾರ್ಥವು ಕೈಗೂಡುವುದು."

೭೨. ಸಮಸ್ತ ದೇವತೆಗಳೂ ಬೃಹಸ್ಪತಿಯ ಈ ಮಾತಿನ ಅರ್ಥವನ್ನು ನಿರ್ಣಯಿಸಿ ಅವನನ್ನು ಶ್ಲಾಘಿಸಿ ಹಾಗೆಯೇ ಆಗಲೆಂದರು.

೭೩. ತರುವಾಯ ಇಂದ್ರನು ತನ್ನ ಮುಂದಿರುವ ಅಗ್ನಿದೇವನನ್ನು ಕರೆದು ಬಹುಮಾನಪುರಸ್ಸರವಾಗಿ ಇಂಪಾದ ಈ ಮಾತನ್ನಾಡಿದನು.

೭೪. "ಎಲೈ ಅಗ್ನಿಯೆ! ನೀನು ಆ ದಿವೋದಾಸರಾಜನ ದೇಶದಲ್ಲಿ ಇಟ್ಟಿರುವ ನಿನ್ನ ಶರೀರವನ್ನು ಹಿಂದಕ್ಕೆ ತೆಗೆದುಕೊ.

೭೫. ನಿನ್ನ ಆ ಶರೀರವು ಇಲ್ಲಿಗೆ ಬರಲು ನಷ್ಟಾಗ್ನಿಗಳಾದ ಪ್ರಜೆಗಳು ಹವ್ಯಕವ್ಯ ಕಾರ್ಯರಹಿತರಾಗಿ ಆ ದೊರೆಯಲ್ಲಿ ಪ್ರೀತಿಯಿಲ್ಲದವರಾಗುವರು.

೭೬. ರಾಜ್ಯದಲ್ಲಿ ಇಷ್ಟಾರ್ಥವನ್ನುಂಟುಮಾಡುವ ಪ್ರಜೆಗಳು ಸ್ನೇಹವಿಲ್ಲದವರಾಗಲು ಕಷ್ಟದಿಂದ ಸಂಪಾದಿಸಿದ ರಾಜ ಎಂಬ ಶಬ್ದವು ಅರ್ಥವಿಲ್ಲದ್ದಾಗುವುದು.

ಪ್ರಜಾನಾಂ ರಂಜನಾದ್ರಾಜಾ ಯೇಯಂ ರೂಢಿರುಪಾರ್ಜಿತಾ ।
ತಸ್ಯಾಂ ರೂಢ್ಯಾಂ ಪ್ರಣಷ್ಟಾಯಾಂ ರಾಜ್ಯಮೇವ ವಿನಂಕ್ಷ್ಯತಿ ॥ ೭೭ ॥
ಪ್ರಜಾವಿರಹಿತೋ ರಾಜಾ ಕೋಶದುರ್ಗಬಲಾದಿಭಿಃ ।
ಸಮೃದ್ಧೋಽಪ್ಯಚಿರಾನ್ನಶ್ಯೇತ್ಕೂಲಸಂಸ್ಥ ಇವ ದ್ರುಮಃ ॥ ೭೮ ॥
ತ್ರಿವರ್ಗಸಾಧನಾಹೇತುಃ ಪ್ರಾಕ್ಪ್ರಜೈವ ಮಹೀಪತೇಃ ।
ಕ್ಷೀಣವೃತ್ಯಾಂ ಪ್ರಜಾಯಾಂ ವೈ ತ್ರಿವರ್ಗಃ ಕ್ಷೀಯತೇ ಸ್ವಯಂ ॥ ೭೯ ॥
ಕ್ಷೀಣೇ ತ್ರಿವರ್ಗೇ ಸಂಕ್ಷೀಣಾ ಗತಿರ್ಲೋಕದ್ವಯಾತ್ಮಿಕಾ ॥ ೮೦ ॥
ಇತೀಂದ್ರವಚನಾದ್ವಹ್ನಿರಹ್ನಾಯ ಕ್ಷೋಣಿಮಂಡಲಾತ್ ।
ಆಚಕರ್ಷ ನಿಜಾಂ ಮೂರ್ತಿಂ ಯೋಗಮಾಯಾಬಲಾಽನ್ವಿತಃ ॥ ೮೧ ॥
ನಿನ್ಯೇ ನ ಕೇವಲಂ ತ್ರೇತಾಂ ಜಾಠರಾಗ್ನಿಮಪಿ ಪ್ರಭುಃ ।
ವಜ್ರಿಣೋ ವಚಸಾ ವಹ್ನಿರ್ನಿಜಶಕ್ತಿಸಮನ್ವಿತಂ ॥ ೮೨ ॥
ವಹ್ನೌ ಸ್ವಲೋಕಮಾಪನ್ನೇ ಜಾತೇ ಮಧ್ಯಂದಿನೇ ನೃಪಃ ।
ಕೃತಮಾಧ್ಯಾಹ್ನಿಕಸ್ತೂರ್ಣಂ ಪ್ರಾವಿಶದ್ಭೋಜ್ಯಮಂಡಪಂ ॥ ೮೩ ॥
ಮಹಾನಸಾಽಧಿಕೃತಯೋ ನೇಶಮಾನಾಸ್ತತೋ ಮುಹುಃ ।
ಕ್ಷುಧಾರ್ತಮಪಿ ಭೂಪಾಲಮಿದಂ ಮಂದಂ ವ್ಯಜಿಜ್ಞಪನ್ ॥ ೮೪ ॥

---

೭೭. ಪ್ರಜೆಗಳನ್ನು ರಂಜಿಸುವುದರಿಂದ ರಾಜನಾಮವು ರೂಢಿಯಾಗಿರುವುದು. ಆ ರೂಢಿಯು ನಷ್ಟವಾಗಲು ರಾಜ್ಯವೇ ನಾಶವಾಗುವುದು.

೭೮. ಪ್ರಜೆಗಳ ಪ್ರೀತಿಯಿಲ್ಲದ ದೊರೆಯು ಬೊಕ್ಕಸ, ದುರ್ಗ, ಸೈನ್ಯಗಳಿಂದ ಸಮೃದ್ಧನಾಗಿದ್ದರೂ ಶೀಘ್ರವಾಗಿ ನದಿಯ ದಡದಲ್ಲಿರುವ ಮರದಂತೆ ಹಾಳಾಗುವನು.

೭೯–೮೦. ದೊರೆಗೆ ತ್ರಿವರ್ಗಸಾಧನವಾದ ಮೊದಲನೆಯ ಕಾರಣವೆಂದರೆ ಪ್ರಜೆಗಳೇ. ಪ್ರಜೆಗಳು ನಷ್ಟಜೀವನವುಳ್ಳವರಾಗಲು ತ್ರಿವರ್ಗವು ತಾನಾಗಿಯೆ ನಷ್ಟವಾಗುವುದು. ತ್ರಿವರ್ಗವು ಕ್ಷಯಿಸಲು ಉಭಯ ಲೋಕಗತಿಯೂ ನಷ್ಟವಾಗುವುದು.''

೮೧. ಅಗ್ನಿಯು ಇಂದ್ರನ ಈ ಮಾತಿನಂತೆ ಶೀಘ್ರವಾಗಿ ಭೂಮಂಡಲದಿಂದ ಯೋಗಮಾಯೆಯ ಬಲದಿಂದ ತನ್ನ ಮೂರ್ತಿಯನ್ನು ಸೆಳೆದುಕೊಂಡನು.

೮೨. ಅಗ್ನಿಯು ಇಂದ್ರನ ಮಾತಿನಿಂದ ತನ್ನ ತ್ರಿರೂಪಗಳನ್ನು ಮಾತ್ರವಲ್ಲದೆ ತನ್ನ ಶಕ್ತಿಯಿಂದ ಕೂಡಿದ ಜಠರಾಗ್ನಿಯನ್ನೂ ಸೆಳೆದನು.

೮೩–೮೪. ಅಗ್ನಿಯು ದೇವಲೋಕವನ್ನು ಹೊಂದಲು ಮಧ್ಯಾಹ್ನದಲ್ಲಿ ದೊರೆಯು ಮಾಧ್ಯಾಹ್ನಿಕವನ್ನು ಪೂರಯಿಸಿ ಶೀಘ್ರವಾಗಿ ಊಟದ ಮನೆಯನ್ನು ಪ್ರವೇಶಿಸಿದನು. ಬಳಿಕ ಅಡಿಗೆಯ ಮನೆಯ ಅಧಿಕಾರಿಗಳು ನಡುಗುತ್ತ ಹಸಿವುಗೊಂಡ ಆ ದೊರೆಯನ್ನು ಕುರಿತು ಮೆಲ್ಲನೆ ಹೀಗೆ ವಿಜ್ಞಾಪಿಸಿಕೊಂಡರು.

ಸೂಪಕಾರಾ ಊಚುಃ:—

ಅತ್ಯಹಸ್ಕರತೇಜಸ್ಕ ಪ್ರತಾಪವಿಜಿತಾಽನಲ ।
ಕಿಂಚಿದ್ವಿಜ್ಞಪ್ತುಕಾಮಾಃ ಸ್ಮೋಽಪ್ಯಕಾಂಡೇ ರಣಪಂಡಿತ ॥ ೪೫ ॥
ಯದಿ ವಿಶ್ರಾಣಯೇದ್ರಾಜನ್ಭವಾನಭಯದಕ್ಷಿಣಾಂ ।
ತದಾ ವಿಜ್ಞಾಪಯಿಷ್ಯಾಮಃ ಪ್ರಬದ್ಧಕರಸಂಪುಟಾಃ ॥ ೪೬ ॥
ಭ್ರೂಸಂಜ್ಞಯಾ ಕೃತಾದೇಶಾಃ ಪ್ರಸನ್ನಾಸ್ಯೇನ ಭೂಭುಜಾ ।
ಮೃದು ವಿಜ್ಞಾಪಯಾಂಚಕ್ರುಃ ಪಾಕಶಾಲಾಽಧಿಕಾರಿಣಃ ॥ ೪೭ ॥
ನ ಜಾನೀಮೋ ವಯಂ ನಾಥ ತ್ವತ್ಪ್ರತಾಪಭಯಾರ್ದಿತಃ ।
ಕುಸ್ಮೃತ್ಯಾಥ ಕಯಾ ವಿದ್ವನ್ನಷ್ಟೋ ವೈಶ್ವಾನರಃ ಪುರಾತ್ ॥ ೪೮ ॥
ಕೃಶಾನೌ ಕೃಶತಾಂ ಪ್ರಾಪ್ತೇ ಕಥಂ ಪಾಕಕ್ರಿಯಾ ಭವೇತ್ ।
ತಥಾಽಪಿ ಸೂರ್ಯಪಾಕೇನ ಸಿದ್ಧಾ ಪಕ್ತಿರ್ಹಿ ಕಾಚನ ॥ ೪೯ ॥
ಪ್ರಭೋರಾದೇಶಮಾಸಾದ್ಯ ತಾಮಿಹೈವಾನಯಾಮಹೇ ।
ಮನ್ಯಾಮಹೇ ಚ ಭೋಜಾನೇ ಪಕ್ತಿರದ್ಯತನೀ ಶುಭಾ ॥ ೫೦ ॥
ಶ್ರುತ್ವಾಂಧಸಿಕ ವಾಕ್ಯಂ ಸ ಮಹಾಸತ್ವೋ ಮಹಾಮತಿಃ ।
ನೃಪತಿಶ್ಚಿಂತಯಾಮಾಸ ದೇವಾನಾಂ ವೈ ಕೃತಂ ತ್ವಿದಂ ॥ ೫೧ ॥

---

೪೫. ಅಡಿಗೆಯವರು ಹೇಳುತ್ತಾರೆ:— "ಸೂರ್ಯನ ತೇಜಸ್ಸನ್ನು ಮೀರಿದವನೂ, ಪ್ರತಾಪದಿಂದ ಅಗ್ನಿಯನ್ನು ಗೆದ್ದವನೂ, ಆಕಸ್ಮಿಕವಾದ ಯುದ್ಧದಲ್ಲಿ ಪಂಡಿತನೂ ಆದ ದೊರೆಯೇ! ಒಂದು ವಿಷಯವನ್ನು ಬಿನ್ನೈಸಲಿಚ್ಛಿಸುವೆವು.

೪೬. ಅರಸ! ನೀನು ಅಭಯವನ್ನು ನೀಡುವುದಾದರೆ ನಾವು ಕೈಜೋಡಿಸಿಕೊಂಡು ಅದನ್ನು ವಿಜ್ಞಾಪಿಸಿಕೊಳ್ಳುವೆವು."

೪೭. ಪ್ರಸನ್ನಮುಖವುಳ್ಳ ರಾಜನು ಹುಬ್ಬಿನ ಸಂಜ್ಞೆಯಿಂದಲೇ ಅಪ್ಪಣೆಯನ್ನುಮಾಡಲು ಪಾಕಶಾಲಾಧಿಕಾರಿಗಳು ಮೆಲ್ಲಗೆ ಬಿನ್ನೈಸಿಕೊಂಡರು.

೪೮. "ಮೂರ್ಖನಾದ ಅಗ್ನಿದೇವನು ನಿನ್ನ ಪ್ರತಾಪಕ್ಕೆ ಹೆದರಿ ಯಾವುದೊ ಒಂದು ಶಾಠ್ಯದಿಂದ ಈ ಪಟ್ಟಣದಿಂದಲೇ ಹೊರಟುಹೋಗಿರುವನು.

೪೯. ಅಗ್ನಿಯು ಕೃಶವಾಗಲು ಅಡಿಗೆಯು ಹೇಗಾಗುವುದು? ಆದರೂ ಸೂರ್ಯಪಾಕದಿಂದ ಕೆಲವು ಅಡಿಗೆಯನ್ನು ಮಾಡಿದ್ದೇವೆ.

೫೦. ನಿನ್ನ ಅಪ್ಪಣೆಯಾದರೆ ಆ ಅಡಿಗೆಯನ್ನು ಇಲ್ಲಿಗೆ ತರುವೆವು. ದೊರೆಯೇ! ಈಗ ಮಾಡಿದ ಸೂರ್ಯಪಾಕದ ಅಡಿಗೆಯು ಶುಭಕರವೆಂದು ಭಾವಿಸುವೆವು."

೫೧. ಅತಿ ಬಲಶಾಲಿಯೂ, ಅತ್ಯಂತ ಬುದ್ಧಿವಂತನೂ ಆದ ಆ ದೊರೆಯು ಅಡಿಗೆಯವರ ಮಾತನ್ನು ಕೇಳಿ ಈ ಅಪಕಾರವು ದೇವತೆಗಳದೆಂದೇ ಆಲೋಚಿಸಿದನು.

ಕ್ಷಣಂ ಸಂಶೀಲಯಂಸ್ತತ್ರ ದದರ್ಶ ತಪಸೋ ಬಲಾತ್ ।
ನ ಕೇವಲಂ ಜಹೌ ಗೇಹಂ ಹುತ ಭುಕ್ತ್ವಾದರೀರ್ದರೀಃ ॥ ೯೨ ॥
ಅಸ್ವಹಾಸೀದಿತೋ ಲೋಕಾಜ್ಜಗಾಮ ಚ ಸುರಾಲಯಂ ।
ಭವತ್ವಿಹ ಹಿ ಕಾ ಹಾನಿರಸ್ಮಾಕಂ ಜ್ವಲನೇ ಗತೇ ॥ ೯೩ ॥
ತೇಷಾಮೇವ ವಿಚಾರಾಚ್ಚ ಹಾನಿರೇಷಾ ಸುಪರ್ವಣಾಂ ।
ತದ್ಬಲೇನ ಚ ಕಿಂ ರಾಜ್ಯಂ ಮಯೇದಮುರರೀಕೃತಂ ॥ ೯೪ ॥
ಪಿತಾಮಹೇನ ಮಹತೋ ಗೌರವಾತ್ಪ್ರತಿಪಾದಿತಂ ।
ಇತಿ ಚಿಂತಯತಸ್ತಸ್ಯ ಮಧ್ಯಲೋಕಶತಕ್ರತೋಃ ॥ ೯೫ ॥
ಪೌರಾಃ ಸಮಾಗತಾ ದ್ವಾರಿ ಸಹಜಾನಪದೈರ್ನರೈಃ ।
ದ್ವಾಸ್ಥೇನ ಚಾಜ್ಞಯಾ ರಾಜ್ಞಸ್ತತಸ್ತೇಽಂತಃಪ್ರವೇಶಿತಾಃ ॥ ೯೬ ॥
ದತ್ವೋಪದಂ ಯಥಾರ್ಹಂ ತೇ ಪ್ರಣೇಮುಃ ಕ್ಷೋಣಿವಜ್ರಿಣಂ ।
ಕೇಚಿತ್ಸಂಭಾಷಿತಾ ರಾಜ್ಞಾದರಸೋದರಯಾ ಗಿರಾ ॥ ೯೭ ॥
ಕೇಚಿಚ್ಚ ಸಮುದಾ ದೃಷ್ಟ್ಯಾ ಕೇಚಿಚ್ಚ ಕರಸಂಜ್ಞಯಾ ।
ವಿಸರ್ಜಿತಾಸನಾ ರಾಜ್ಞಾ ಬಹುಮಾನಪುರಃಸರಂ ॥ ೯೮ ॥

---

೯೨. ಅವನು ಹೀಗೆ ಸ್ವಲ್ಪಹೊತ್ತು ಆಲೋಚಿಸುತ್ತಿದ್ದು ತಪಸ್ಸಿನ ಬಲದಿಂದ ಅಗ್ನಿಯು ಮನೆಯನ್ನು ಮಾತ್ರವಲ್ಲದೆ, ಪ್ರಾಣಿಗಳ ಉದರವನ್ನೂ ತೊರೆದಿರುವನೆಂಬುದನ್ನರಿತನು.

೯೩–೯೪. "ಅವನು ಇಲ್ಲಿಂದ ಹೊರಟುಹೋದುದರಿಂದ ಇಲ್ಲಿ ಕೆಡಕುಂಟಾಗುವುದಂತಿರಲಿ. ವಿಚಾರಮಾಡಿದರೆ ಆ ದೇವತೆಗಳಿಗೇ ಇದರಿಂದ ಹಾನಿಯುಂಟಾಗಿರುವುದು. ನಾನು ಆ ದೇವತೆಗಳ ಬಲದಿಂದ ರಾಜ್ಯವನ್ನು ಅಂಗೀಕರಿಸಿರುವೆನೇ ?

೯೫–೯೬. ಬ್ರಹ್ಮನು ಅತಿ ಗೌರವದಿಂದ ಈ ರಾಜ್ಯವನ್ನು ನನಗಿತ್ತನಷ್ಟೆ ?" ಎಂದೂ ಭೂಲೋಕೇಂದ್ರನಾದ ಅವನು ಆಲೋಚಿಸುತ್ತಿರಲು, ಪಟ್ಟಣಿಗರು ದೇಶದ ಜನರೊಡನೆ ರಾಜದ್ವಾರಕ್ಕೆ ಬಂದರು. ಬಾಗಿಲನ್ನು ಕಾಯುವವನು ರಾಜನ ಅಪ್ಪಣೆಯಿಂದ ಅವರನ್ನು ಒಳಗೆ ಪ್ರವೇಶಮಾಡಿಸಿದನು.

೯೭. ಅವರು ಉಚಿತರೀತಿಯಿಂದ ಕಾಣಿಕೆಯನ್ನಿತ್ತು ಆ ಭೂಮೀಂದ್ರನನ್ನು ವಂದಿಸಿದರು. ದೊರೆಯು ಕೆಲವರೊಡನೆ ಆದರದಿಂದ ಮಾತನಾಡಿದನು.

೯೮. ಕೆಲವರನ್ನು ಸಂತೋಷದ ದೃಷ್ಟಿಯಿಂದಲೂ, ಕೆಲವರನ್ನು ಕೈಸಂಜ್ಞೆಯಿಂದಲೂ ಗೌರವಿಸಿದನು; ಅವರಿಗೆ ಬಹುಮಾನಪೂರ್ವಕವಾಗಿ ಆಸನಗಳನ್ನಿತ್ತನು.

ತೇಽಜಿರೇ ಭೇಜಿರೇ ಸರ್ವೇ ರತ್ನಾರ್ಚಿಃಪರಿಸೇವಿತೇ ।
ವಿಜಿತಾಮೋದಸಂದೋಹೇ ಸುರಾಽನೋಕಹಸೌರಭ್ಯೈಃ ।
ರಾಜ್ಞಃ ಶತಶಲಾಕಸ್ಯ ಛತ್ರಸ್ಯ ಚ್ಛಾಯಯಾ ಶುಭೇ ॥ ೯೯ ॥
ವಿಶಾಂಪತಿರಥೋವಾಚ ತನ್ಮುಖಚ್ಛಾಯಯೇರಿತಂ ।
ವಿಜ್ಞಾಯ ತದಭಿಪ್ರಾಯಮಲಂ ಭೀತ್ಯಾ ಪುರೌಕಸಃ ॥ ೧೦೦ ॥
ವಿಕಾರಕಾರಿಭಿರ್ದೇವೈರ್ಯದಿ ನೀತೋಽನಲೋ ಭುವಃ ।
ಏತಾವತೈವ ಕಿಂ ಸಿದ್ಧ್ಯೇನ್ಮಯಿ ತೇಷಾಂ ಪರಾಭವಃ ॥ ೧೦೧ ॥
ಚಿಕೀರ್ಷುರಹಮೇವಾಽಽಸಂ ಪೌರಾಃ ಕಾರ್ಯಮಿದಂ ಪುರಾ ।
ಪರಂ ಹ್ಯುಪೇಕ್ಷಿತಪ್ರಾಯಂ ದಿಷ್ಟ್ಯಾ ತೈಃ ಸ್ಮಾರಿತಂ ಚಿರಾತ್ ॥ ೧೦೨ ॥
ಗತೋಽನಲೋಽಭವದ್ಭದ್ರಂ ಜಗತ್ಪ್ರಾಣೋಽಪಿ ಯಾತ್ವಿತಃ ।
ವರುಣಃ ಪುಷ್ಪವಂತಾಭ್ಯಾಮವಿಲಂಬಂ ಪ್ರಯಾತ್ವಿತಃ ॥ ೧೦೩ ॥
ಅಹಮೇವಹಿ ಪರ್ಜನ್ಯೋ ಭವಿಷ್ಯಾಮಿ ತಪೋಬಲಾತ್ ।
ಮುದೇ ಜನಪದಾನಾಂ ಚ ಸರ್ವಸಸ್ಯಸಮೃದ್ಧಿದಃ ॥ ೧೦೪ ॥
ತಪೋಯೋಗಬಲೇನಾಹಮಾತ್ಮಾನಂ ಪರಿಕಲ್ಪ್ಯ ಚ ।
ತ್ರಿಧಾ ವಹ್ನಿಸ್ವರೂಪೇಣ ಪಕ್ತೀಷ್ಟಿವೃಷ್ಟಿಕೃತ್ತಮಃ ॥ ೧೦೫ ॥

---

೯೯. ಅವರೆಲ್ಲರೂ ರತ್ನದ ಕಾಂತಿಯುಳ್ಳದ್ದೂ, ದೇವತರುಗಳ ಸುವಾಸನೆಯನ್ನು ಜಯಿಸಿರುವುದೂ, ದೊರೆಯ ಶ್ವೇತಚ್ಛತ್ರದ ಕಾಂತಿಯಿಂದ ಮನೋಹರವೂ ಆದ ಸಭಾಂಗಣದಲ್ಲಿ ಕುಳಿತರು.

೧೦೦. ದೊರೆಯು ಅವರ ಮುಖದ ಕಾಂತಿಯಿಂದ ಅವರ ಅಭಿಪ್ರಾಯವನ್ನರಿತು, "ಪಟ್ಟಣಿಗರೆ! ಹೆದರಬೇಡಿರಿ" ಎಂದು ಹೇಳತೊಡಗಿದನು.

೧೦೧–೧೦೨. "ಅಪಕಾರಮಾಡುವ ದೇವತೆಗಳು ಭೂಮಿಯಿಂದ ಅಗ್ನಿಯನ್ನು ತೆಗೆದುಕೊಂಡುಹೋದರೆ ಇದರಿಂದ ಅವರು ನನಗೆ ಏನು ಅಪಕಾರ ಮಾಡಿದಂತೆ ಆಯಿತು. ಎಲೈ ಪಟ್ಟಣಿಗರೆ! ಹಿಂದೆ ನಾನೇ ಇವನ್ನು ಮಾಡಲೆಳಸಿದ್ದೆನು. ಆದರೆ ನಾನು ಉದಾಸೀನ ಮಾಡಿದೆನು. ಇದನ್ನು ಅವರು ಬಹಳಕಾಲದಮೇಲೆ ಸ್ಮರಿಸುವಂತೆ ಮಾಡಿದರು.

೧೦೩–೧೦೫. ಅಗ್ನಿಯು ಹೊರಟುಹೋದನು. ಒಳ್ಳೆಯದೇ ಆಯಿತು. ವಾಯುವೂ ತೆರಳಲಿ. ವರುಣನು ಚಂದ್ರಸೂರ್ಯರೊಡನೆ ಶೀಘ್ರವಾಗಿ ಇಲ್ಲಿಂದ ಹೊರಡಲಿ. ನಾನೇ ತಪೋಬಲದಿಂದ ದೇಶದ ಜನರ ಸಂತೋಷಕ್ಕಾಗಿ ಸಮಸ್ತ ಸಸ್ಯಸಮೃದ್ಧಿಯನ್ನುಂಟುಮಾಡುವ ಪರ್ಜನ್ಯನಾಗುವೆನು. ತಪಸ್ಸಿನ ಸಾಮರ್ಥ್ಯದಿಂದ ತ್ರಿವಿಧವಹ್ನಿಯಾಗಿ ಪಾಕ, ಯಜ್ಞ, ದಾಹಗಳನ್ನುಂಟುಮಾಡುವೆನು.

ಅಂತರ್ಬಹಿಶ್ಚ ಯೋ ದ್ವೇಧಾ ನಭಸ್ವತ್ಪದವೀಂ ದಧತ್ ।
ಸರ್ವೇಷಾಮೇವ ವೇತ್ಸ್ಯಾಮಿ ತ್ವಂತಃಕರಣಚೇಷ್ಟಿತಂ ॥ ೧೦೬ ॥
ವಿಧಾಯ ಚಾಂಭಸೀಂ ಮೂರ್ತಿಂ ಸರ್ವಜೀವೈಕಜೀವನೀಂ ।
ಪ್ರಜಾಃ ಸಂಜೀವಯಿಷ್ಯಾಮಿ ಕಿಂ ಜಡೈರ್ವಿಷಯೇ ಮಮ ॥ ೧೦೭ ॥
ಯದಾ ಖೇ ತಮಸಾ ಪೌರಾ ಗ್ರಸ್ಯೇತೇ ಶಶಿಭಾಸ್ಕರೌ ।
ತದಾ ನ ಕಿಂ ವಿನಾ ತಾಭ್ಯಾಂ ಜೀವಾಮಃ ಕ್ಷಿತಿಮಂಡಲೇ ॥ ೧೦೮ ॥
ಶ್ರಿಯಂ ಚಾಂದ್ರಮಸೀಂ ಪ್ರಾಪ್ಯ ಹ್ಲಾದಯಿಷ್ಯಾಮ್ಯಹಂ ಪ್ರಜಾಃ ।
ನಿಶಾಚರೇಣ ಕಿಮಿಹ ಕ್ಷಯಿಣಾ ಚ ಕಲಂಕಿನಾ ॥ ೧೦೯ ॥
ಅಸ್ಮತ್ಕುಲೇ ಮೂಲಭೂತೋ ಭಾಸ್ಕರೋ ಮಾನ್ಯ ಏವ ನಃ ।
ಸ ತಿಷ್ಠತು ಸುಖೇನಾಽತ್ರ ಯಾತಾಯಾತಂ ಕರೋತು ಚ ॥ ೧೧೦ ॥
ಸ ಏಕೋ ಜಗತಾಮಾತ್ಮಾ ವಿಶೇಷಾತ್ಕುಲದೇವತಾ ।
ಸೋಽಪಕರ್ತುಂ ನ ವೇತ್ತ್ಯೇವ ತಸ್ಯೇದಂ ವ್ರತಮುತ್ತಮಂ ॥ ೧೧೧ ॥

ಇತಿ ನರಪತಿ ವಾಕ್ಸುಧಾರಸೌಘಂ
ಶ್ರುತಿಪುಟಕೈಃ ಪರಿಪೀಯ ಪೌರವರ್ಗಃ ।
ವಿಕಸಿತವದನಾಂಬುಜೋ ಜಗಾಮ
ನಿಜನಿಜಮಾಲಯಮಾಧಿಮುಕ್ತಚಿತ್ತಃ ॥ ೧೧೨ ॥

---

೧೦೬. ಒಳಗೂ ಹೊರಗೂ ಎರಡು ವಿಧವಾಗಿ ವಾಯುವಿನ ಸ್ಥಾನವನ್ನು ಹೊಂದಿ ಸಮಸ್ತರ ಮನೋವ್ಯಾಪಾರವನ್ನರಿಯುವೆನು.

೧೦೭. ಸಮಸ್ತಜೀವಗಳನ್ನೂ ಬದುಕಿಸುವ ವಾರುಣದೇಹವನ್ನು ಧರಿಸಿ ನನ್ನ ದೇಶದ ಪ್ರಜೆಗಳನ್ನು ಬದುಕಿಸುವೆನು. ನನಗೆ ಜಡರಿಂದೇನು ಪ್ರಯೋಜನ?

೧೦೮. ಆಕಾಶದಲ್ಲಿ ಚಂದ್ರಸೂರ್ಯರು ತಮಸ್ಸಿನಿಂದ ವ್ಯಾಪ್ತರಾಗಲು ನಾವು ಭೂಮಿಯಲ್ಲಿ ಅವರಿಲ್ಲದೆ ಬದುಕುವುದಿಲ್ಲವೆ?

೧೦೯–೧೧೦. ನಾನು ಚಂದ್ರಕಾಂತಿಯನ್ನು ಹೊಂದಿ ಪ್ರಜೆಗಳನ್ನು ಸಂತೋಷ ಗೊಳಿಸುವೆನು. ಕ್ಷಯರೋಗಿಯೂ, ಕಲಂಕವುಳ್ಳವನೂ ಆದ ಈ ಚಂದ್ರನಿಂದೇನು ಪ್ರಯೋಜನ? ನಮ್ಮ ವಂಶದ ಮೂಲಪುರುಷನಾದ ಭಾಸ್ಕರನು ನಮಗೆ ಪೂಜ್ಯನೇ. ಅವನು ಇಲ್ಲಿ ಸುಖವಾಗಿರಲಿ. ಯಾತಾಯಾತವನ್ನು ಮಾಡುತ್ತಿರಲಿ.

೧೧೧. ಅವನೊಬ್ಬನೇ ಜಗದಾತ್ಮನು. ಅತಿಶಯವಾಗಿ ನಮ್ಮ ಕುಲದೇವತೆಯು. ಅವನು ಅಪಕಾರಮಾಡಲು ಅರಿಯನು. ಇದು ಅವನ ಉತ್ತಮ ವ್ರತವು.''

೧೧೨. ಪಟ್ಟಣಿಗರು ದೊರೆಯ ಈ ಅಮೃತರಸಪ್ರವಾಹವನ್ನು ಕಿವಿಯಿಂದ ಕೇಳಿ ವ್ಯಥೆಯನ್ನು ತ್ಯಜಿಸಿ ಅರಳಿದ ಮುಖವುಳ್ಳವರಾಗಿ ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು.

ಕ್ಷಿತಿಪತಿರಪಿ ತತ್ತಥಾ ವಿಧಾಯ
ತಪಸೋಽಸಾಧ್ಯಮಿಹಾಽಸ್ತಿ ಕಿಂ ತ್ರಿಲೋಕ್ಯಾಂ ।
ಅತಿವಹ್ನ್ಯರ್ಕಮಸೌ ದಧಚ್ಚ ತೇಜೋ
ದ್ಯುಸದಾಂ ಶಲ್ಯಮಿವೋಚ್ಚಕೈರ್ಬಭೂವ ॥ ೧೧೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ " ದಿವೋದಾಸಪ್ರತಾಪವರ್ಣನಂ " ನಾಮ ತ್ರಿಚತ್ವಾರಿಂಶೋಽಧ್ಯಾಯಃ

---

೧೧೩. ಅಂತಹ ತಪಸ್ಸಿಗೆ ಅಸಾಧ್ಯವಾದ ಕಾರ್ಯವು ಮೂರುಲೋಕಗಳಲ್ಲಿ ಯಾವುದು ತಾನೆ ಇರುವುದು. ಆ ದೊರೆಯು ಸೂರ್ಯಾಗ್ನಿಗಳನ್ನೂ ಮೀರಿದ ತೇಜಸ್ಸನ್ನು ಧರಿಸಿ ಮಹೋನ್ನತನಾಗಿ ದೇವತೆಗಳಿಗೆಲ್ಲ ಶಲ್ಯದಂತಾದನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ " ದಿವೋದಾಸಪ್ರತಾಪವರ್ಣನ "ವೆಂಬ ನಲವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಶ್ಚತ್ವಾರಿಂಶೋಽಧ್ಯಾಯಃ

### ಕಾಶೀವರ್ಣನಂ

ಸ್ಕಂದ ಉವಾಚ :—

ಅಥ ಮಂದರಕಂದರೋದರೋ
ಲ್ಲಸದಸಮದ್ಯುತಿ ರತ್ನ ಮಂದಿರೇ ।
ಪರಿತಃ ಸಮಧಿಷ್ಠಿತಾಮರೇ
ನಿಜಶಿಖರೈರ್ವಸನೀಕೃತಾಂಬರೇ ॥ ೧ ॥
ನಿವಸಂಜಗದೀಶ್ವರೋ ಹರಃ
ಕೃಶರಜನೀಶಕಲಾ ಮನೋಹರಃ ।
ಲಭತೇಸ್ಮ ನ ಶರ್ಮ ಶಂಕರಃ
ಪ್ರಸರತ್ಕಾಶಿವಿಯೋಗಜಜ್ವರಃ ॥ ೨ ॥
ವಿರಹಾಽನಲ ಶಾಂತಯೇ ತದಾ
ಸಮಲೇಪಿ ತ್ರಿಪುರಾಽರಿಣಾಽಪಿ ಯಃ ।
ಮಲಯೋದ್ಭವ ಪಂಕ ಏಷ ಸ
ಪ್ರತಿಪೇದೇ ಹ್ಯಧುನಾ ಪಿಪಾಂಸುತಾಂ ॥ ೩ ॥
ಪರಿತಾಪಹರಾಣಿ ಪದ್ಮಿನೀನಾಂ
ಮೃದುಲಾನ್ಯಪಿ ಕಂಕಣೀಕೃತಾನಿ ।
ಗದಿತಾನಿ ಯದೀಶ್ವರೇಣ ಸರ್ಪಾ
ಸ್ತದಭೂತ್ಸತ್ಯಮಹೋ ಮಹೇಶ್ವರೇಚ್ಛಾ ॥ ೪ ॥

---

### ಕನ್ನಡದ ಅನುವಾದ

#### ಕಾಶೀವರ್ಣನ

೧–೨. ಸ್ಕಂದನು ಹೇಳುತ್ತಾನೆ :—ಬಳಿಕ ಜಗದೊಡೆಯನಾದ ಶಂಕರನು, ಕೃಶವಾದ ಚಂದ್ರನ ಕಲೆಯಿಂದ ಮನೋಹರನಾಗಿ ಸುತ್ತಲೂ ದಿವಿಜರಿರುವುದೂ, ತನ್ನ ಶಿಖರಗಳಿಂದ ಆಕಾಶಕ್ಕೆ ಬಟ್ಟೆಯಾಗಿ ಮಾಡಿರುವುದೂ ಆದ ಮಂದರ ಪರ್ವತದ ಗುಹೆಯ ಅತಿಶಯ ಕಾಂತಿಯುಳ್ಳ ರತ್ನಮಂದಿರದಲ್ಲಿ ವಾಸಿಸುತ್ತ ಕಾಶೀವಿಯೋಗದಿಂದುಂಟಾದ ವ್ಯಥೆಯುಳ್ಳವನಾಗಿ ಸ್ವಲ್ಪವೂ ಸುಖಗೊಳ್ಳಲಿಲ್ಲ.

೩. ಆತನು ವಿರಹಾನಲಶಾಂತಿಗಾಗಿ ಹಚ್ಚಿಕೊಂಡ ಮಲಯಪರ್ವತದಲ್ಲಿ ಹುಟ್ಟಿದ ಶ್ರೀಗಂಧವು ಈಗ ಧೂಳಿಯಾಗಿರುವುದು.

೪. ಅವನು ಸಂತಾಪನಿವಾರಣೆಗಾಗಿ ವಲಯವಾಗಿ ಧರಿಸಿದ ತಾವರೆ

ಯದು ದುಗ್ಧನಿಧಿಂ ವಿಮಥ್ಯ ದೇವೈ
ರ್ಮೃದುಸಾರಃ ಸಮಕರ್ಷಿ ಪೂರ್ಣಚಂದ್ರಃ ।
ಸ ಬಭೂವ ಕೃಶೋ ವಿಯೋಗತಪ್ತೇ-
ಶ್ವರ ಮೂರ್ಧೋಷ್ಮಪರಿಕ್ಷರಚ್ಛರೀರಃ ॥ ೫ ॥
ಯದದೀಧರದೇಷ ಜಾತತಾಪಃ
ಪೃಥುಲೇ ಮೌಲಿಜಟಾನಿಕುಂಜಕೋಣೇ ।
ಪರಿತಾಪಹರಾಂ ಹರಸ್ತದಾನೀಂ
ದ್ಯುನದೀಂ ತಾಮಧುನಾಽಪಿ ನೋಜ್ಝಿಹೀತೇ ॥ ೬ ॥
ಮಹತೋ ವಿರಹಸ್ಯ ಶಂಕರಃ
ಪ್ರಸಭಂ ತಸ್ಯ ವಶೀ ವಶಂಗತಃ ।
ವಿವಿದೇ ನ ಸುರೈಃ ಸದೋಗತೈ
ರಪಿ ಸಂವೀತಸುತಾಪವೇಷ್ಟಿತಃ ॥ ೭ ॥
ಅತಿಚಿತ್ರಮಿದಂ ಯದಾತ್ಮನಾ
ಶುಚಿರಪ್ಯೇಷ ಕೃಪೀಟಯೋನಿನಾ ।
ಸ್ವಪುರೀ ವಿರಹೋದ್ಭವೇನ ವೈ
ಪರಿತಾಪ್ಯೇತ ಜಗತ್ತ್ರಯೇಶ್ವರಃ ॥ ೮ ॥
ನಿಜಭಾಲತಲಂ ಕಲಾನಿಧೇಃ
ಕಲಯಾ ನಿತ್ಯಮಲಂಕರೋತಿ ಯಃ ।
ಸ ತಮೀಶ್ವರಮುಷ್ಯತಾಪಯ
ದ್ವಿಧುರೇ ಕೋ ವಿಪರೀತ ಏವ ತು ॥ ೯ ॥

---

ದಂಟುಗಳನ್ನು ಸರ್ಪಗಳೆಂದು ಕರೆಯಲು ಅವು ಸತ್ಯವಾಗಿಯೂ ಸರ್ಪಗಳಾದುವು. ಈಶ್ವರೇಚ್ಛೆಯು ಅದ್ಭುತವಾದುದು !

೫. ದೇವತೆಗಳು ಕ್ಷೀರಸಮುದ್ರವನ್ನು ಕಡೆದು ಮೃದುಸಾರವುಳ್ಳ ಪೂರ್ಣ ಚಂದ್ರನನ್ನು ಪಡೆದರು. ಆ ಚಂದ್ರನು ವಿರಹತಾಪಗೊಂಡ ಶಂಕರನ ತಲೆಯ ಉಷ್ಣದಿಂದ ಕ್ಷೀಣಿಸಿಹೋದನು.

೬. ಸಂತಾಪಗೊಂಡ ಶಂಕರನು ವಿಶಾಲವಾದ ಜಟಾಕುಹರದಲ್ಲಿ ಧರಿಸಿದ ಸಂತಾಪ ನಿವಾರಿಣಿಯಾದ ಗಂಗೆಯನ್ನು ಈಗಲೂ ಬಿಟ್ಟಿರುವುದಿಲ್ಲ.

೭-೮. ಹೀಗೆ ಅತ್ಯಂತ ವಿರಹತಪ್ತನಾದ ಆ ಶಂಕರನನ್ನು ಸಭೆಯಲ್ಲಿರುವ ದೇವತೆಗಳೂ ಗುರುತಿಸಲಿಲ್ಲ. ತ್ರಿಭುವನೇಶ್ವರನೂ ಸ್ವಯಂಶುಚಿಯೂ ಆದ ಶಂಕರನನ್ನು ಕಾಶೀವಿರಹಾಗ್ನಿಯು ಸಂತಾಪಗೊಳಿಸುವುದು ಆಶ್ಚರ್ಯಕರವಾಗಿದೆ!

೯. ಈಶ್ವರನ ಹಣೆಯನ್ನು ತನ್ನ ಕಲೆಯಿಂದ ಅಲಂಕರಿಸುವ ಚಂದ್ರನು

ಗರಲಂ ಗಲನಾಲಿಕಾತಲೇ
ವಿಲಸೇದಸ್ಯ ನ ತೇನ ತಾಪಿತಃ ।
ಅಮೃತಾಂಶುತುಷಾರದೀಧಿತಿ
ಪ್ರಸರೈರೇವ ತು ತಾಪಿತೋಽದ್ಭುತಂ ॥ ೧೦ ॥
ವಿಲಸದ್ಘರಿಚಂದನೋದಕ
ಚ್ಛಟಯಾ ತದ್ವಿರಹಾಽಪನುತ್ತಯೇ ।
ಹೃದಯಂ ಹಿ ತಯಾಪ್ಯದೂಯತ
ಪ್ರಸರದ್ಭೋಗಿಫಟಾಭವೈರ್ನತು ॥ ೧೧ ॥
ಸಕಲಂ ಭ್ರಮಮೇಷ ನಾಶಯೇ
ತ್ಸ್ರಗಹಿತ್ವಾದ್ವಪದೇಶಜಂ ಹರಃ ।
ಇದಮದ್ಭುತಮಸ್ಯ ಯದ್ಭ್ರಮಃ
ಸ್ಫುಟಮಾಲ್ಯೇಽಪಿ ಮಹಾಽಹಿಸಂಭವಃ ॥ ೧೨ ॥
ಸ್ಮೃತಿಮಾತ್ರಪಥಂಗತೋಽಪಿ ಯ
ಸ್ತ್ರಿವಿಧಂ ತಾಪಮಪಾಕರೋತ್ಯಲಂ ।
ಸಹಿ ಕಾಶಿವಿಯೋಗತಾಪಿತಃ
ಸ್ವಗತಂ ಕಿಂಚಿದಜಲ್ಪದಿತ್ಯಜಃ ॥ ೧೩ ॥
ಅಪಿ ಕಾಶಿಸಮಾಗತೋಽನಿಲೋ
ಯದಿ ಗಾತ್ರಾಣಿ ಪರಿಷ್ವಜೇನ್ಮಮ ।
ದವಥುಃ ಪರಿಶಾಂತಿಮೇತಿ ತ
ನ್ನ ಹಿಮಾನೀಪರಿಗಾಹನೈರಪಿ ॥ ೧೪ ॥

---

ಆ ಈಶ್ವರನನ್ನೇ ಸಂತಾಪಗೊಳಿಸಿದನು. ಚಂದ್ರನೊಬ್ಬನೇ ಹೀಗೆ ವ್ಯತ್ಯಾಸಗೊಂಡವನು. ದುಃಖದಲ್ಲಿ ವಿಪರೀತನಾಗದವನಾರು ?

೧೦. ಕಂಠದಲ್ಲಿ ವಿಜೃಂಭಿಸುತ್ತಿರುವ ವಿಷದಿಂದ ವ್ಯಥೆಗೊಳ್ಳದ ಅವನು ಚಂದ್ರನ ಹಿಮಶೀತಳಕಾಂತಿಯಿಂದ ಸಂತಾಪಗೊಂಡನೆಂದರೆ ಆಶ್ಚರ್ಯವೇ ಸರಿ!

೧೧. ವಿರಹಶಾಂತಿಗಾಗಿ ಎದೆಯಲ್ಲಿಟ್ಟ ಗಂಧೋದಕದಿಂದ ಅವನು ಸಂತಾಪಗೊಂಡನು. ಸರ್ಪದ ಹೆಡೆಗಳಿಂದ ವ್ಯಥೆಗೊಳ್ಳಲಿಲ್ಲ.

೧೨–೧೩. ಆ ಹರನು ರಜ್ಜುಸರ್ಪತ್ವಾದಿ ಸಮಸ್ತಭ್ರಾಂತಿಯನ್ನೂ ನಿವಾರಿಸುವವನು. ಇಂಥವನು ಸ್ಪಷ್ಟವಾದ ಮಾಲೆಯಲ್ಲಿಯೂ ಸರ್ಪವೆಂದು ಭ್ರಮೆಗೊಳ್ಳುವನು. ಸ್ಮರಣಮಾತ್ರದಿಂದಲೇ ತ್ರಿವಿಧತಾಪಗಳನ್ನು ನೀಗಿಸುವ ಅಜನಾದ ಆ ಶಂಕರನು ಕಾಶೀವಿಯೋಗದಿಂದ ತನ್ನಲ್ಲಿಯೇ ಏನನ್ನೋ ಮಾತನಾಡಿಕೊಳ್ಳುವನು.

೧೪. "ಕಾಶಿಯಮೇಲೆ ಸುಳಿದು ಬಂದ ಗಾಳಿಯು ನನ್ನ ಶರೀರವನ್ನು

ಅಗಮಿಷ್ಯದಹೋ ಕಥಂ ಸ ತಾಪೋ
ನನು ದಕ್ಷಾಂಗಜಯಾ ಯ ಏಧಿತಃ ।
ಮಮ ಜೀವಾತುಲತಾ ಝಟಿತ್ಯಲಂ
ಹ್ಯಭವಿಷ್ಯನ್ನಹಿಮಾದ್ರಿಜಾ ಯದಿ ॥ ೧೫ ॥
ನ ತಥೋಜ್ಝಿತದೇಹಯಾ ತಯಾ
ಮಮ ದಕ್ಷೋದ್ಭವಯಾ ಮನೋಽದುನೋತ್ ।
ಅವಿಮುಕ್ತವಿಯೋಗಜನ್ಮನಾ
ಪರಿಗೀಯೇತ ಯಥಾ ಮಹೋಷ್ಮಣಾ ॥ ೧೬ ॥
ಅಯಿ ಕಾಶಿ ಮುದಾ ಕದಾ ಪುನ
ಸ್ತವ ಲಪ್ಸ್ಯೇ ಸುಖಮಂಗಸಂಗಜಂ ।
ಅತಿಶೀತಲಿತಾನಿ ಯೇನ ಮೇಽ–
ದ್ಭುತಗಾತ್ರಾಣಿ ಭವಂತಿ ತತ್ಕ್ಷಣಾತ್ ॥ ೧೭ ॥
ಅಯಿ ಕಾಶಿ ವಿನಾಶಿತಾಘಸಂಘೇ
ತವ ವಿಶ್ಲೇಷಜ ಆಶುಶುಕ್ಷಣಿಃ ।
ಅಮೃತಾಂಶುಕಲಾಮೃದುದ್ರವೈ
ರತಿಚಿತ್ರಂ ಹವಿಷೇವ ವರ್ಧತೇ ॥ ೧೮ ॥

---

ಆಲಂಗಿಸಿದರೆ ಸಾಕು. ಅದನ್ನುಳಿದು ನನ್ನ ಈ ತಾಪವು ಹಿಮರಾಶಿ ಪ್ರವಾಹದ ಪ್ರವೇಶದಿಂದಲೂ ಶಾಂತವಾಗುವುದಿಲ್ಲ.

೧೫. ನನ್ನ ಜೀವನಲತೆಯಂತಿರುವ ಪಾರ್ವತಿಯು ಹುಟ್ಟದೇ ಇದ್ದಿದ್ದರೆ ದಕ್ಷನ ಮಗಳಾದ ಸತಿಯು ಅಭಿವೃದ್ಧಿಗೊಳಿಸಿದ ಸಂತಾಪವು ಹೇಗೆತಾನೆ ಕಳೆದು ಹೋಗುತ್ತಿದ್ದಿತು !

೧೬. ಆದರೆ ಅವಿಮುಕ್ತಕ್ಷೇತ್ರದ ವಿಯೋಗದಿಂದುಂಟಾದ ಮಹಾತಾಪವು ನನ್ನನ್ನು ಸಂತಾಪಗೊಳಿಸಿದಂತೆ ಆ ದಕ್ಷತನಯಳ ಶರೀರತ್ಯಾಗದಿಂದಲೂ ಸಂತಾಪಗೊಳ್ಳಲಿಲ್ಲ.

೧೭. ಎಲೈ ಕಾಶಿಯೆ ! ನಿನ್ನ ಅಂಗಸಂಬಂಧವಾದ ಸೌಖ್ಯವನ್ನು ಸಂತೋಷ ದಿಂದ ಯಾವಾಗ ನಾನು ಮರಳಿಯೂ ಹೊಂದುವೆನೋ! ಅದರಿಂದ ನನ್ನ ಶರೀರವು ಯಾವಾಗ ತಂಪನ್ನು ಪಡೆಯುವುದೋ !

೧೮. ಎಲೈ ಕಾಶಿಯೆ ! ಪಾಪರಾಶಿಯನ್ನು ನಿವಾರಿಸಿದ ನಿನ್ನ ವಿಯೋಗ ದಿಂದ ನನ್ನಲ್ಲುಂಟಾದ ಅಗ್ನಿಯು, ಹವಿಸ್ಸಿನಿಂದ ಎಂತೋ ಅಂತು ಈ ಚಂದ್ರ ಕಲೆಯ ಮೃದುವಾದ ದ್ರವಗಳಿಂದ ವೃದ್ಧಿಗೊಳ್ಳುತ್ತಿರುವುದು.

ಅಗಮನ್ಮಮ ದಕ್ಷಜಾವಿಯೋಗಜೋ
ದವಥುಃ ಪ್ರಾಕ್ಪ್ರಶಮವತ್ಸುತೌಷಧೇನ ।
ಅಧುನಾ ಖಲು ನೈವ ಶಾಂತಿಮಾಯಾಂ
ಯದಿ ಕಾಶೀಂ ನ ವಿಲೋಕಯೇಽಹಮಾಶು ॥ ೧೯ ॥
ಮನಸೇತಿ ಗೃಣಂಸ್ತದಾ ಶಿವಃ
ಸುತರಾಂ ಸಂವೃತತಾಪವೈಕೃತಃ ।
ಜಗದಂಬಿಕಯಾ ಧಿಯಾಂ ಜನನ್ಯಾ
ಕಥಮಪ್ಯೇಷ ವಿಯುಕ್ತ ಇತ್ಯಮಾನಿ ॥ ೨೦ ॥
ಪ್ರಿಯಯಾ ವಪುಷೋಽರ್ಧಯಾಽನಯಾ-
ಪ್ಯಪರಿಜ್ಞಾತವಿಯೋಗಕಾರಣಃ ।
ವಚನೈರುಪಚರ್ಯತೇ ಸ್ಮ ಸ
ಪ್ರಣತಪ್ರಾಣಿನಿದಾಘದಾರುಣಃ ॥ ೨೧ ॥
ಶ್ರೀ ಪಾರ್ವತ್ಯುವಾಚ :—
ತವ ಸರ್ವಗ ಸರ್ವಮಸ್ತಿ ಹಸ್ತೇ
ವಿಲಸದ್ಯೋಗವಿಯೋಗ ಏವ ಕಸ್ತೇ ।
ತವ ಭೂತಿರಹೋ ವಿಭೂತಿದಾತ್ರೀ
ಸಕಲಾಪತ್ಕಲಿಕಾಪಿ ಭೂತಧಾತ್ರೀ ॥ ೨೨ ॥

---

೧೯. ಹಿಂದೆ ಸತಿಯ ವಿಯೋಗದಿಂದುಂಟಾದ ನನ್ನ ಸಂತಾಪವು ಪಾರ್ವತಿಯೆಂಬ ಔಷಧಿಯಿಂದ ಪರಿಹಾರವಾಯಿತು. ಈಗ ಕಾಶಿಯನ್ನು ಶೀಘ್ರವಾಗಿ ಕಾಣದಿದ್ದರೆ ಈ ಸಂತಾಪವು ಶಾಂತವಾಗಲಾರದು.''

೨೦. ಸದಾಶಿವನು ಮನಸ್ಸಿನಲ್ಲಿ ಹೀಗೆ ಸಂತಪಿಸುತ್ತ ಅತ್ಯಂತವಾಗಿ ವಿಕಾರಗೊಂಡನು. ಯಾವುದೋ ಒಂದು ಕಾರಣದಿಂದ ಬುದ್ಧಿಕಾರಣಳಾದ ಪಾರ್ವತಿಯಿಂದಲೂ ಆಗ ಅವನು, ಅಗಲಿದೆನೆಂದು ಭಾವಿಸಿದನು.

೨೧. ನಮಸ್ಕಾರಮಾಡಿದ ಸಕಲಪ್ರಾಣಿಗಳ ಸಂತಾಪವನ್ನು ನೀಗಿಸುವ ಶಿವನ ಅರ್ಧಾಂಗಿಯಾದರೂ, ಆ ಪಾರ್ವತಿಯು ಆ ತನ್ನ ಪ್ರಭುವಿನ ವಿರಹ ವೇದನೆಗೆ ಕಾರಣವನ್ನರಿಯದೆ ಸವಿಮಾತುಗಳಿಂದ ಉಪಚರಿಸಿ ಹೀಗೆಂದಳು.

೨೨. ಶ್ರೀಪಾರ್ವತಿಯು ಹೇಳುತ್ತಾಳೆ:— '' ಸರ್ವಾಂತರ್ಯಾಮಿಯಾದ ಓ ಮಹೇಶ್ವರನೆ! ಸಮಸ್ತವೂ ನಿನ್ನ ಕೈಯಲ್ಲಿರುವುದು. ನಿನಗೆ ಸಂಬಂಧವಿಯೋಗಗಳೆಂದರೇನು? ಬ್ರಹ್ಮಾದಿಗಳಿಗೆ ಐಶ್ವರ್ಯವನ್ನು ಕೊಡುವ ನಿನ್ನ ವಿಭೂತಿಯು ಸಮಸ್ತಾಪತ್ತುಗಳನ್ನು ನಿವಾರಿಸುವುದೂ, ಸಕಲಪ್ರಾಣಿಗಳನ್ನು ರಕ್ಷಿಸುವುದೂ ಆಗಿರುವುದು.

ತ್ವದವೇಕ್ಷಣತಃ ಕ್ಷಣಾದ್ವಿಭೋ
ಪ್ರಲಯಂ ಯಾಂತಿ ಜಗಂತಿ ಶೋಚ್ಯವತ್ ।
ಚ್ಯವತೇ ಭವತಃ ಕೃಪಾಲವಾ
ದಿತರೋಽಪೀಶ ನಯಸ್ತ್ವಯೋಂಕೃತಃ ॥ ೨೩ ॥
ಭವತಃ ಪರಿತಾಪಹೇತವೋ
ನ ಭವಂತೀಂದುದಿವಾಕರಾಗ್ನಯಃ ।
ನಯನಾನಿ ಯತಸ್ತ್ರಿನೇತ್ರ ತೇಽಮೀ
ಪ್ರಣಯಿನ್ಯಸ್ತಿ ಲಸಜ್ಜಲಾ ಚ ಮೌಲೌ ॥ ೨೪ ॥
ಭುಜಗಾ ಭುಜಗಾಃ ಸದೈವ ತೇಽಮೀ
ನ ವಿಷಂ ಸಂಕ್ರಮತೇ ಚ ನೀಲಕಂಠ ।
ಅಹಮಸ್ಮಿ ಚ ವಾಮದೇವ ವಾಮಾ
ತವ ವಾಮಂ ವಪುರತ್ರ ಚಿತ್ತಯುಕ್ತಾ ॥ ೨೫ ॥
ಇತಿ ಸಂಸೃತಿಸಂಬೀಜಜನನ್ಯಾಽಭಿಹಿತೇ ಹಿತೇ ।
ಗಿರಾಂ ನಿಗುಂಫೇ ಗಿರಿಶೋ ವಕ್ತುಮುಪ್ಚಾದದೇ ಗಿರಂ ॥ ೨೬ ॥
ಈಶ್ವರ ಉವಾಚ :—
ಅಯಿ ಕಾಶೀತ್ಯಷ್ಟಮೂರ್ತಿರ್ಭರ್ಗೋ ಭಾವಾಷ್ಟಕೋಽಭವತ್ ।
ಸತ್ವರಂ ಶಿವಯಾಽಜ್ಞಾಯಿ ಧ್ರುವಂ ಕಾಶ್ಯಾ ಹೃತೋ ಹರಃ ॥ ೨೭ ॥

---

೨೩. ಪ್ರಭುವೆ! ನೀನು ನೋಡದಿದ್ದರೆ ಜಗತ್ತುಗಳು ಕ್ಷಣಮಾತ್ರದಲ್ಲಿಯೆ ನಾಶವಾಗುವುವು. ನಿನ್ನ ದಯೆಗೆ ಪಾತ್ರರಾಗದ ಬ್ರಹ್ಮಾದಿಗಳೂ ಪದಚ್ಯುತರಾಗುವರು.

೨೪. ತ್ರಿನಯನ! ಸೂರ್ಯಚಂದ್ರಾಗ್ನಿರೂಪಗಳಾದ ನಯನಗಳೂ, ಪ್ರಿಯಳಾದ ಈ ಗಂಗೆಯೂ ನಿನ್ನ ತಲೆಯಲ್ಲಿರುವರು. ಅದರಿಂದ ಚಂದ್ರನೂ, ಸೂರ್ಯಾಗ್ನಿಗಳೂ ನಿನಗೆ ಸಂತಾಪವನ್ನುಂಟುಮಾಡುವುದಿಲ್ಲ.

೨೫. ನೀಲಕಂಠ! ಈ ಹಾವುಗಳು ನಿನ್ನ ತೋಳುಗಳಲ್ಲಿರುವುವು. ಆದರೆ ಅವುಗಳ ವಿಷವು ನಿನಗೆ ಸಂಬಂಧಿಸುವುದಿಲ್ಲ. ನಿನ್ನ ಚಿತ್ತಾನುಸಾರಿಣಿಯಾದ ನಾನು ನಿನ್ನ ಎಡಗಡೆ ಅರ್ಧಾಂಗಿಯಾಗಿರುವೆನು.''

೨೬. ಜಗಜ್ಜನನಿಯೂ, ಸಂಸಾರಕ್ಕೆ ಮೂಲಕಾರಣಳೂ ಆದ ಪಾರ್ವತಿಯು ಹೀಗೆ ಮನೋಹರವಾಗಿ ಮಾತನಾಡಲು ಶಿವನು ಹೇಳತೊಡಗಿದನು.

೨೭. ಈಶ್ವರನು ಹೇಳುತ್ತಾನೆ:—ಎಲೈ ಕಾಶಿಯೆ! ಪೃಥಿವ್ಯಾದ್ಯಷ್ಟವಸ್ತುಗಳ ಸ್ವರೂಪನೂ, ಪ್ರತ್ಯಕ್ಷಾದ್ಯಷ್ಟಪ್ರಮಾಣಪ್ರತಿಪಾದ್ಯನೂ ಆದ ನಾನು ನಿನ್ನ ಸಾನ್ನಿಧ್ಯದಿಂದ ಅಪಹೃತನಾಗಿರುವನೆಂದು ಈ ಪಾರ್ವತಿಯೂ ಖಂಡಿತವಾಗಿ ತಿಳಿದಿರುವಳು.

ಅಥ ಬಾಲಸಖೀಭೂತ ತತ್ತತ್ಕಾನನವೀರುಧಂ ।
ಶಿವಾ ಪ್ರಸ್ತಾವಯಾಂಚಕ್ರೇ ವಿಮುಕ್ತಾಂ ಮುಕ್ತಿದಾಂ ಪುರೀಂ ॥ ೨೮ ॥

ಪಾರ್ವತ್ಯುವಾಚ :—

ಗಗನತಲಮಿಲಿತಸಲಿಲೇ
ಪ್ರಲಯೇಽಪಿ ಭವತ್ರಿಶೂಲಪರಿವಿಧೃತಾಂ ।
ಕೃತಪುಂಡರೀಕ ಶೋಭಾಂ
ಸ್ಮರಹ ರಕಾಶೀಂ ಪುರೀಂ ಯಾವಃ ॥ ೨೯ ॥
ಧರಾಧರೇಂದ್ರಸ್ಯ ಧರಾಽತಿಸುಂದರಾ
ನ ಮಾಂ ತಥಾಸ್ಯಾಽಪಿ ಧಿನೋತಿ ಧೂರ್ಜಟೇ ।
ಧರಾಗತಾಽಪೀಹ್ಯನಯಾ ಧ್ರುವಂ ಧರಾ
ಪುರೀ ಧುರೀಣಾ ತವ ಕಾಶಿಕಾ ಯಥಾ ॥ ೩೦ ॥
ನ ಯತ್ರ ಕಾಶ್ಯಾಂ ಕಲಿಕಾಲಜಂ ಭಯಂ
ನ ಯತ್ರ ಕಾಶ್ಯಾಂ ಮರಣಾತ್ಪುನರ್ಭವಃ ।
ನ ಯತ್ರ ಕಾಶ್ಯಾಂ ಕಲುಷೋದ್ಭವಂ ಭಯಂ
ಕಥಂ ವಿಭೋ ಸಾ ನಯನಾಽತಿಥಿರ್ಭವೇತ್ ॥ ೩೧ ॥
ಕಿಮತ್ರ ನೋ ಸಂತಿ ಪುರಃ ಸಹಸ್ರಶಃ
ಪದೇ ಪದೇ ಸರ್ವಸಮೃದ್ಧಿ ಭೂಮಯಃ ।
ಪರಂ ನ ಕಾಶೀ ಸದೃಶೀ ದೃಶೋಃ ಪದಂ
ಕ್ವಚಿದ್ಗತಾ ಮೇ ಭವತಾ ಶಪೇ ಶಿವ ॥ ೩೨ ॥

---

೨೮. ಬಳಿಕ ಪಾರ್ವತಿಯು ಬಾಲ್ಯಾವಸ್ಥೆಯಲ್ಲಿ ತನಗೆ ಗೆಳೆಯರಾದ ಆಯಾ ಕಾಡುಗಳು ಬಳ್ಳಿಗಳಿಂದ ಕೂಡಿದ ಮುಕ್ತಿಯನ್ನೀಯುವ ಕಾಶಿಯನ್ನು ಪ್ರಸ್ತಾಪಿಸಿದಳು.

೨೯. ಪಾರ್ವತಿಯು ಹೇಳುತ್ತಾಳೆ :—ಸ್ಮರಹರ! ಆಕಾಶದವರೆಗೂ ತುಂಬಿ ತುಳುಕಿದ ನೀರುಳ್ಳ ಪ್ರಳಯಕಾಲದಲ್ಲಿಯೂ ತ್ರಿಶೂಲಾಗ್ರದಲ್ಲಿ ಕಮಲದ ಶೋಭೆಯನ್ನು ತಳೆದು ರಂಜಿಸುವ ಆ ಕಾಶೀಪುರಿಗೆ ಹೋಗೋಣ.

೩೦. ಓ ಶಂಕರ! ಭೂಮಿಯಲ್ಲಿರುವ ಪಟ್ಟಣಗಳಲ್ಲೆಲ್ಲ ಉತ್ಕೃಷ್ಟವಾಗಿರುವ ಕಾಶಿಯು ನನಗೆ ವಿರಹವ್ಯಥೆಯನ್ನುಂಟುಮಾಡುವಂತೆ ಸುಂದರವಾದ ಹಿಮಾಲಯದ ಭೂಮಿಯೂ ಉಂಟುಮಾಡುವುದಿಲ್ಲ.

೩೧. ನಾಥ! ಕಲಿಕಾಲದ ಭಯವಿಲ್ಲದಿರುವುದೂ, ಮರಣಾನಂತರ ಪುನರ್ಜನ್ಮರಹಿತವಾದ ಮೋಕ್ಷವನ್ನು ಕೊಡುವುದೂ, ಪಾಪಭಯರಹಿತವೂ ಆದ ಕಾಶಿಯು ನನ್ನ ದೃಷ್ಟಿಗೆ ಗೋಚರವಾಗುವುದೆಂತು ?

೩೨. ಶಂಕರ! ಇಲ್ಲಿ ಸಾವಿರಾರು ಪಟ್ಟಣಗಳಿದ್ದರೂ ಪ್ರತಿ ಹೆಜ್ಜೆಯಲ್ಲಿಯೂ

ತ್ರಿವಿಷ್ಟಪೇ ಸಂತಿ ನ ಕಿಂ ಪುರಃಶತಂ
ಸಮಸ್ತಕೌತೂಹಲಜನ್ಮಭೂಮಯಃ ।
ತೃಣೀಭವಂತೀಹ ಚ ತಾಃ ಪುರಃ ಪುರಃ–
ಪದಂ ಪುರಾರೇ ಭವತೋ ಭವದ್ವಿಷಃ ॥ ೩೩ ॥
ನ ಕೇವಲಂ ಕಾಶಿವಿಯೋಗಜೋ ಜ್ವರಃ
ಪ್ರಬಾಧತೇ ತ್ವಾಂ ತು ತಥಾ ಯಥಾಽತ್ರ ಮಾಂ ।
ಉಪಾಯ ಏಷೋಽತ್ರ ನಿದಾಘಶಾಂತಯೇ
ಪುರೀ ತು ಸಾ ವಾ ಮಮ ಜನ್ಮಭೂರಥ ॥ ೩೪ ॥
ಮಯಾ ನಮೋ ನ ಮಮ ಜನ್ಮಭೂಮಿಕಾ
ವಿಯೋಗಜನ್ಮಾ ಪರಿದಾಘ ಈಶಿತಃ ।
ಅಧ್ಯಾಸ ಕಾಶೀಂ ಪರಿತಃ ಪ್ರಶಾಂತಿದಾಂ
ಸಮಸ್ತಸಂತಾಪವಿಘಾತಹೇತುಕಾಂ ॥ ೩೫ ॥
ನ ಮೋಕ್ಷಲಕ್ಷ್ಮ್ಯಾಽತ್ರ ಸಮೀಕ್ಷಿತಾ
ಸ್ತನೂಭೃತಾ ಕೇನಚಿದೇವ ಕುತ್ರಚಿತ್ ।
ಅವೈಮ್ಯಹಂ ಶರ್ಮದ ಸರ್ವಶರ್ಮದಾ
ಸರೂಪಿಣೀ ಮುಕ್ತಿರಸೌ ಹಿ ಕಾಶಿಕಾ ॥ ೩೬ ॥

---

ಸಕಲೈಶ್ವರ್ಯಸ್ಥಾನಗಳಿದ್ದರೂ ಎಲ್ಲಿಯೂ ಕಾಶಿಯಂತಹ ಪಟ್ಟಣವನ್ನು ನಾನು ನೋಡಲಿಲ್ಲವೆಂದು ಶಪಥಮಾಡಿ ಹೇಳುವೆನು.

೩೩. ಸ್ವರ್ಗಲೋಕದಲ್ಲಿ ಸಮಸ್ತ ಕೌತೂಹಲಕ್ಕೆ ಆಶ್ರಯಗಳಾದ ನೂರಾರು ಪಟ್ಟಣಗಳಿದ್ದರೂ ಅವುಗಳೆಲ್ಲವೂ ಸಂಸಾರನಾಶಕನಾದ ನಿನ್ನ ಈ ಕಾಶೀಪಟ್ಟಣದ ಮುಂದೆ ತೃಣಸಮಾನಗಳೇ!

೩೪. ಕಾಶೀಪಟ್ಟಣದ ವಿರಹವು ನಿನ್ನನ್ನಲ್ಲದೆ ನನ್ನನ್ನೂ ಬಾಧಿಸುತ್ತಿರುವುದು. ಆ ಸಂತಾಪದ ಶಾಂತಿಯು ಆ ಕಾಶೀಪಟ್ಟಣದಿಂಲೇ ಆಗಬೇಕು; ಅಥವಾ ನನ್ನ ತವರುಮನೆಯಾದ ಹಿಮಾಲಯದಿಂದಾದರೂ ಆಗಬೇಕು.

೩೫. ಶಂಕರ! ಶಾಂತಿಯನ್ನೀಯುವುದೂ, ಸಕಲ ಸಂತಾಪಗಳ ನಾಶಕ್ಕೆ ಕಾರಣವೂ ಆದ ಕಾಶಿಯನ್ನು ಹೊಂದಿ ನಾನು ನನ್ನ ತವರುಮನೆಯಾದ ಹಿಮಾಲಯದ ವಿರಹದಿಂದುಂಟಾದ ವ್ಯಥೆಯನ್ನೂ ಅರಿಯಲಿಲ್ಲ.

೩೬. ಸುಖವನ್ನು ದೊರಕಿಸುವ ಓ ಶಂಕರ! ಈ ಜಗತ್ತಿನಲ್ಲಿ ಯಾವ ಮನುಷ್ಯನೂ ಎಲ್ಲಿಯೂ ಮೋಕ್ಷಸಂಪತ್ತನ್ನು ಕಾಣಲಿಲ್ಲ. ಕಾಶಿಯೇ ಸಮಸ್ತರಿಗೂ ಸುಖವನ್ನು ನೀಡುವ ಮೋಕ್ಷಸ್ವರೂಪವಾಗಿವೆಯೆಂದು ತಿಳಿಯುವೆನು.

ನ ಮುಕ್ತಿರಸ್ತೀಹ ತಥಾ ಸಮಾಧಿನಾ
ಸ್ಥಿರೇಂದ್ರಿಯತ್ವೋಜ್ಝಿತತತ್ಸಮಾಧಿನಾ ।
ಕ್ರತುಕ್ರಿಯಾಭಿರ್ನ ನ ವೇದವಿದ್ಯಯಾ
ಯಥಾ ಹಿ ಕಾಶ್ಯಾಂ ಪರಿಹಾಯ ವಿಗ್ರಹಂ ॥ ೩೭ ॥
ನ ನಾಕಲೋಕೇ ಸುಖಮಸ್ತಿ ತಾದೃಶಂ
ಕುತಸ್ತು ಪಾತಾಲತಲೇಽತಿಸುಂದರೇ ।
ವಾರ್ತಾಽಪಿ ಮರ್ತ್ಯೇ ಸುಖಸಂಶ್ರಯಾ ಕ್ವ ವಾ
ಕಾಶ್ಯಾಂ ಹಿ ಯಾದೃಕ್ತನುಮಾತ್ರಧಾರಿಣಿ ॥ ೩೮ ॥
ಕ್ಷೇತ್ರೇ ತ್ರಿಶೂಲಿಸ್ತ್ವವತೋಽವಿಮುಕ್ತೇ
ವಿಮುಕ್ತಿಲಕ್ಷ್ಮ್ಯಾ ನ ಕದಾಽಪಿ ಮುಕ್ತೇ ।
ಮನೋಽಪಿ ಯಃ ಪ್ರಾಣಿವರಃ ಪ್ರಯುಂಕ್ತೇ
ಷಡಂಗಯೋಗಂ ಸ ಸದೈವ ಯುಂಕ್ತೇ ॥ ೩೯ ॥
ಷಡಂಗಯೋಗಾನ್ನಹಿ ತಾದೃಶೀ ನೃಭಿಃ
ಶರೀರಸಿದ್ಧಿಃ ಸಹಸಾಽತ್ರ ಲಭ್ಯತೇ ।
ಸುಖೇನ ಕಾಶೀಂ ಸಮವಾಪ್ಯ ಯಾದೃಶೀ
ದೃಶೌ ಸ್ಥಿರೀಕೃತ್ಯ ಶಿವ ತ್ವಯಿ ಕ್ಷಣಂ ॥ ೪೦ ॥
ವರಂ ಹಿ ತಿರ್ಯಕ್ತ್ವಮಭುದ್ಧಿವೈಭವಂ
ನ ಮಾನವತ್ವಂ ಬಹುಬುದ್ಧಿಭಾಜನಂ ।
ಅಕಾಶಿಸಂದರ್ಶನನಿಷ್ಫಲೋದಯಂ
ಸಮಂತತಃ ಪುಷ್ಕರಬುದ್ಬುದೋಪಮಂ ॥ ೪೧ ॥

---

೩೭. ಕಾಶಿಯಲ್ಲಿ ಮೃತಿಯನ್ನೈದಿದರೆ ಮುಕ್ತಿಯುಂಟಾಗುವಂತೆ ಈ ಜಗತ್ತಿನಲ್ಲಿ ಜಿತೇಂದ್ರಿಯತೆಯಿಲ್ಲದ ಬ್ರಹ್ಮಸಮಾಧಿಯಿಂದಲೂ, ಯಜ್ಞಗಳಿಂದಲೂ, ವೇದವಿದ್ಯೆಯಿಂದಲೂ ಮೋಕ್ಷವು ಲಭಿಸುವುದಿಲ್ಲ.

೩೮. ಆದರೆ ಕಾಶಿಯಲ್ಲಿ ದೇಹವನ್ನು ಮಾತ್ರ ಧರಿಸಿದವನಿಗೆ ಉಂಟಾಗುವ ಸೌಖ್ಯವು ದೇವಲೋಕದಲ್ಲಿಯೂ, ಸುಂದರವಾದ ಪಾತಾಳದಲ್ಲಿಯೂ ಉಂಟಾಗುವುದಿಲ್ಲ. ಭೂಲೋಕದ ಇತರ ಪ್ರದೇಶಗಳಲ್ಲಿ ಸುಖದ ವಾರ್ತೆಯೆಲ್ಲಿ?

೩೯. ಮಹೇಶ್ವರ! ನೀನೂ, ಮೋಕ್ಷಲಕ್ಷ್ಮಿಯೂ ನೆಲೆಸಿರುವ ಕಾಶಿಯಲ್ಲಿ ಮನಸ್ಸನ್ನಿಡುವ ಪ್ರಾಣಿಗೆ ಯಾವಾಗಲೂ ಷಡಂಗಯೋಗವು ಸಿದ್ಧಿಸುವುದು.

೪೦. ಓ ಶಂಕರ! ಮನುಷ್ಯನು ಕಾಶಿಯನ್ನು ಸೇರಿ ನಿನ್ನಲ್ಲಿ ಕ್ಷಣಕಾಲ ದೃಷ್ಟಿಯನ್ನು ಸ್ಥಿರಗೊಳಿಸಲು ಸಿದ್ಧಿಯು ಲಭಿಸುವಂತೆ ಎಲ್ಲಿಯೂ ಅಂತಹ ಯೋಗಸಿದ್ಧಿಯು ಷಡಂಗಯೋಗದಿಂದಲೂ ಲಭಿಸುವುದಿಲ್ಲ.

೪೧. ಕಾಶಿಯನ್ನು ನೋಡದಿರುವುದರಿಂದ ನಿಷ್ಫಲಜನ್ಮವುಳ್ಳವನಾಗಿ ಅಧಿಕ

ದೃಶೌ ಕೃತಾರ್ಥೇ ಕೃತಕಾಶಿದರ್ಶನೇ
ತನುಃ ಕೃತಾರ್ಥಾ ಶಿವ ಕಾಶಿವಾಸಿನೀ ।
ಮನಃ ಕೃತಾರ್ಥಂ ಧೃತಕಾಶಿಸಂಶ್ರಯಂ
ಮುಖಂ ಕೃತಾರ್ಥಂ ಕೃತಕಾಶಿಸಂಮುಖಂ ॥ ೪೨ ॥
ವರಂ ಹಿ ತತ್ಕಾಶಿರಜೋಽತಿಪಾವನಂ
ರಜಸ್ತಮೋಧ್ವಂಸಿ ಶಶಿಪ್ರಭೋಜ್ಜ್ವಲಂ ।
ಕೃತಪ್ರಣಾಮೈರ್ಮಣಿಕರ್ಣಿಕಾಭುವೇ
ಲಲಾಟಗಂ ಯದ್ಬಹುಮನ್ಯತೇ ಸುರೈಃ ॥ ೪೩ ॥
ನ ದೇವಲೋಕೋ ನಚ ಸತ್ಯಲೋಕೋ
ನ ನಾಗಲೋಕೋ ಮಣಿಕರ್ಣಿಕಾಯಾಃ ।
ತುಲಾಂ ವ್ರಜೇದ್ಯತ್ರ ಮಹಾಪ್ರಯಾಣಕೃ
ಚ್ಛ್ರುತಿರ್ಭವೇದ್ಬ್ರಹ್ಮರಸಾಯನಾಸ್ಪದಂ ॥ ೪೪ ॥
ಮಹಾಮಹೋ ಭೂರ್ಮಣಿಕರ್ಣಿಕಾಸ್ಥಲೀ
ತಮಸ್ತತಿರ್ಯತ್ರ ಸಮೇತಿ ಸಂಕ್ಷಯಂ ।
ಪರಃಶತೈರ್ಜನ್ಮಭಿರೇಧಿತಾಽಪಿ ಯಾ
ದಿವಾಕರಾಗ್ನೀಂದುಕರೈರನಿಗ್ರಹಾ ॥ ೪೫ ॥

---

ಜ್ಞಾನದಿಂದ ವಿರಾಜಿಸುತ್ತಿದ್ದರೂ, ಕಮಲದೆಲೆಯ ಮೇಲಣ ನೀರಿನ ಹನಿಗಳಂತೆ ಚಂಚಲವಾದ ಮನುಷ್ಯತ್ವಕ್ಕಿಂತಲೂ ಬುದ್ಧಿಸಾಮರ್ಥ್ಯವಿಲ್ಲದ ತಿರ್ಯಗ್ಜಂತುತ್ವವು ಉತ್ತಮವಾದುದು.

೪೨. ಕಾಶಿಯನ್ನು ನೋಡಿದ ಕಣ್ಣುಗಳೂ, ಕಾಶಿಯಲ್ಲಿ ವಾಸಿಸುವ ಶರೀರವೂ, ಕಾಶಿಯನ್ನಾಶ್ರಯಿಸಿದ ಮನಸ್ಸೂ, ಕಾಶಿಗೆ ಅಭಿಮುಖವಾದ ಮುಖವೂ ಧನ್ಯವಾದುವು.

೪೩. ರಜಸ್ತಮೋಗುಣಗಳನ್ನು ನಾಶಮಾಡುವುದೂ, ಚಂದ್ರನ ಕಾಂತಿಯಂತೆ ಪ್ರಕಾಶಿಸುವುದೂ ಆದ ಕಾಶಿಯ ಧೂಳೂ ಉತ್ತಮವಾದುದು. ಮಣಿಕರ್ಣಿಕೆಗೆ ನಮಸ್ಕಾರ ಮಾಡಿದಾಗ ಹಣೆಯಲ್ಲಿ ಅಂಟಿಕೊಂಡ ಆ ಧೂಳನ್ನು ದೇವತೆಗಳೂ ಗೌರವಿಸುವರು.

೪೪. ದೇವಲೋಕ, ಸತ್ಯಲೋಕ, ನಾಗಲೋಕಗಳು ಎಂದಿಗೂ ಮಣಿಕರ್ಣಿಕೆಯ ಸಾಮ್ಯವನ್ನು ಹೊಂದುವುದಿಲ್ಲ. ಇಲ್ಲಿ ಮೃತಿಹೊಂದಿದವನ ಕಿವಿಯು ಬ್ರಹ್ಮರಸಾಯನಕ್ಕೆ ಆಶ್ರಯವಾಗುವುದು.

೪೫. ಮಣಿಕರ್ಣಿಕಾಸ್ಥಳವು ಮಹಾತೇಜಸ್ಸಿಗೆ ಆಶ್ರಯವಾದುದು. ಇಲ್ಲಿ ಅನೇಕ ಜನ್ಮಗಳಲ್ಲಿ ಅಭಿವೃದ್ಧಿಗೊಂಡಿದ್ದರೂ, ಸೂರ್ಯಚಂದ್ರಾಗ್ನಿಗಳಿಂದ ಪರಿಹರಿಸಲಶಕ್ಯವಾದ ಅಜ್ಞಾನಾಂಧಕಾರವು ನಾಶವಾಗುವುದು.

ಶಿವಮು ನಿರ್ವಾಣಪದಸ್ಯ ಭದ್ರಪೀಠಂ
ಮೃದುಲಂ ತಲ್ಪಮಥೋ ನು ಮೋಕ್ಷಲಕ್ಷ್ಮ್ಯಾಃ ।
ಅಥವಾ ಮಣಿಕರ್ಣಿಕಾಸ್ಥಲೀ
ಪರಮಾನಂದಸುಕಂದಜನ್ಮಭೂಮಿಃ ॥ ೪೬ ॥
ಸಮತೀತವಿಮುಕ್ತಜಂತುಸಂಖ್ಯಾ
ಕ್ರಿಯತೇ ಯತ್ರ ಜನೈಃ ಸುಖೋಪವಿಷ್ಟೈಃ ।
ವಿಲಸದ್ದ್ಯುತಿಸೂಕ್ಷ್ಮಶರ್ಕರಾಭಿಃ
ಸ್ವವಪುಃಪಾತಮಹೋತ್ಸವಾಭಿಲಾಷೈಃ ॥ ೪೭ ॥

ಸ್ಕಂದ ಉವಾಚ :—

ಅಪರ್ಣಾ ಪರಿವರ್ಣ್ಯೇತಿ ಪುರೀಂ ವಾರಾಣಸೀಂ ಮುನೇ ।
ಪುನರ್ವಿಜ್ಞಾಪಯಾಮಾಸ ಕಾಶೀಂ ಪ್ರಾಪ್ತ್ಯೈ ಪಿನಾಕಿನಂ ॥ ೪೮ ॥

ಪಾರ್ವತ್ಯುವಾಚ :—

ಪ್ರಮಥಾಧಿಪ ಸರ್ವೇಶ ನಿತ್ಯ ಸ್ವಾಧೀನವರ್ತನ ।
ಯಥಾನಂದವನಂ ಯಾಯಾಂ ತಥಾ ಕುರು ವರಪ್ರದ ॥ ೪೯ ॥

ಸ್ಕಂದ ಉವಾಚ :—

ಜಿತಪೀಯೂಷಮಾಧುರ್ಯಾಂ ಕಾಶೀಸ್ತವನಸುಂದರೀಂ ।
ಅಥಾಕರ್ಣ್ಯಾಹ ಮುದಿತೋ ಗಿರಿಶೋ ಗಿರಿಜಾಂ ಗಿರಂ ॥ ೫೦ ॥

---

೪೬. ಮಣಿಕರ್ಣಿಕಾಸ್ಥಳವು ಮೋಕ್ಷಪದದ ಭದ್ರಪೀಠವು. ಮೋಕ್ಷಲಕ್ಷ್ಮಿಯ ಶಯನವು. ಪರಮಾನಂದದ ಜನ್ಮಭೂಮಿಯು.

೪೭. ಮಣಿಕರ್ಣಿಕಾತೀರದಲ್ಲಿ ಸುಖವಾಗಿ ಕುಳಿತಿರುವವರೂ, ಅಲ್ಲಿ ತಮ್ಮ ಮರಣವನ್ನು ಅಪೇಕ್ಷಿಸುವವರೂ ಆದ ಜನರು, ಹೊಳೆಯುತ್ತಿರುವ ಸಣ್ಣ ನುರುಜುಕಲ್ಲುಗಳಿಂದ ಮುಕ್ತರಾದ ಪ್ರಾಣಿಗಳ ಸಂಖ್ಯೆಯನ್ನೆಣಿಸುತ್ತಿರುವರು.

೪೮. ಸ್ಕಂದನು ಹೇಳುತ್ತಾನೆ :—ಮುನಿಯೆ ! ಪಾರ್ವತಿಯು ಕಾಶಿಯನ್ನು ಈ ರೀತಿ ವರ್ಣಿಸಿ ಮರಳಿ ಈಶ್ವರನನ್ನು ಕಾಶಿಗೆ ಹೋಗಲು ವಿಜ್ಞಾಪಿಸಿಕೊಂಡಳು.

೪೯. ಶ್ರೀಪಾರ್ವತಿಯು ಹೇಳುತ್ತಾಳೆ :— ವರವನ್ನು ನೀಡುವವನೂ, ಪ್ರಮಥಗಣಗಳಿಗೆ ಒಡೆಯನೂ, ನಿತ್ಯನೂ, ಸ್ವಾಧೀನಾತ್ಮನೂ ಆದ ಓ ವಿಶ್ವೇಶ್ವರನೆ! ನಾನು ಆನಂದವನಕ್ಕೆ ಹೋಗುವಂತೆ ಮಾಡು.

೫೦. ಸ್ಕಂದನು ಹೇಳುತ್ತಾನೆ :—ಬಳಿಕ ಮಹೇಶ್ವರನು ಅಮೃತದ ಮಾಧುರ್ಯವನ್ನು ಜಯಿಸಿರುವ ಕಾಶೀಸ್ತೋತ್ರವನ್ನು ಕೇಳಿ ಮುದದಿಂದ ಸುಂದರಿಯಾದ ಆ ಪಾರ್ವತಿಯನ್ನು ಕುರಿತು ಇಂತೆಂದನು.

ಶ್ರೀ ದೇವದೇವ ಉವಾಚ :—

ಅಯಿ ಪ್ರಿಯತಮೇ ಗೌರಿ ತ್ವದ್ವಾಗಮೃತಸೀಕರೈಃ ।
ಆಪ್ಯಾಯಿತೋಽಸ್ಮಿ ನಿತರಾಂ ಕಾಶೀಪ್ರಾಪ್ತ್ಯೈ ಯತೇಽಧುನಾ ॥ ೫೧ ॥
ತ್ವಂ ಜಾನಾಸಿ ಮಹಾದೇವಿ ಮಮ ಯತ್ತನ್ಮಹದ್ವ್ರತಂ ।
ಅಭುಕ್ತಪೂರ್ವಮನ್ಯೇನ ವಸ್ತೂಪಾಶ್ನಾಮಿ ನೇತರತ್ ॥ ೫೨ ॥
ಪಿತಾಮಹಸ್ಯ ವಚನಾದ್ದಿವೋದಾಸೇ ಮಹೀಪತೌ ।
ಧರ್ಮೇಣ ಶಾಸತಿ ಪುರೀಂ ಕ ಉಪಾಯೋ ವಿಧೀಯತಾಂ ॥ ೫೩ ॥
ಕಥಂ ಸ ರಾಜಾ ಧರ್ಮಿಷ್ಠಃ ಪ್ರಜಾಪಾಲನತತ್ಪರಃ ।
ವಿಯೋಜ್ಯತೇ ಪುರಃ ಕಾಶ್ಯಾ ದಿವೋದಾಸೋ ಮಹೀಪತಿಃ ॥ ೫೪ ॥
ಅಧರ್ಮವರ್ತಿನೋ ಯಸ್ಮಾದ್ವಿಘ್ನಃ ಸ್ಯಾನ್ನೇತರಸ್ಯ ತು ।
ತಸ್ಮಾತ್ಕಂ ಪ್ರೇಷಯಾಮಿಶೇ ಯಸ್ತಂ ಕಾಶ್ಯಾ ವಿಯೋಜಯೇತ್ ॥೫೫॥
ಧರ್ಮವರ್ತ್ಮಾನುಸರತಾಂ ಯೋ ವಿಘ್ನಂ ಸಮುಪಾಚರೇತ್ ।
ತಸ್ಯೈವ ಜಾಯತೇ ವಿಘ್ನಃ ಪ್ರತ್ಯುತ ಪ್ರೇಮವರ್ಧಿನಿ ॥ ೫೬ ॥
ವಿನಾ ಛಿದ್ರೇಣ ತಂ ಭೂಪಂ ನೋತ್ಸಾದಯಿತುಮುತ್ಸಹೇ ।
ಮಯ್ಯೈವ ಹಿ ಯತೋ ರಕ್ಷ್ಯಾಃ ಪ್ರಿಯೇ ಧರ್ಮಧುರಂಧರಾಃ ॥ ೫೭ ॥

---

೫೧. ಮಹೇಶ್ವರನು ಹೇಳುತ್ತಾನೆ :—ಎಲೌ ಪ್ರಿಯಳಾದ ಗೌರಿಯೆ ! ನಾನು ನಿನ್ನ ವಚನಾಮೃತಕಣಗಳಿಂದ ಅತ್ಯಂತ ಸಂತೋಷಗೊಂಡಿರುವೆನು. ಈಗ ಕಾಶಿಯನ್ನು ಹೊಂದಲು ಪ್ರಯತ್ನಿಸುತ್ತೇನೆ.

೫೨. ದೇವಿ ! ನನ್ನ ಮಹಾವ್ರತವನ್ನು ನೀನರಿತಿರುವೆ. ನಾನು ಇತರರಾರೂ ಭುಜಿಸದ ವಸ್ತುವನ್ನೇ ಭುಜಿಸುವವನು. ಬೇರಾವ ವಸ್ತುವನ್ನೂ ಭುಜಿಸುವುದಿಲ್ಲ.

೫೩. ಬ್ರಹ್ಮನ ಮಾತಿನಂತೆ ದಿವೋದಾಸರಾಜನು ಧರ್ಮದಿಂದ ಕಾಶಿಯನ್ನು ಆಳುತ್ತಿರುವಲ್ಲಿ ಅದನ್ನು ಹೊಂದಲು ಯುಕ್ತಿಯನ್ನು ಹೇಳು.

೫೪. ಧರ್ಮಿಷ್ಠನೂ, ಪ್ರಜಾಪಾಲನೆಯಲ್ಲಿ ನಿರತನೂ ಆದ ಆ ದಿವೋದಾಸನನ್ನು ಕಾಶಿಯಿಂದ ಹೊರಡಿಸುವುದೆಂತು ?

೫೫. ದೇವಿ ! ಅಧರ್ಮಿಷ್ಠನಿಗೆ ವಿಘ್ನಗಳುಂಟಾಗುವುವು. ಇತರರಿಗೆ ಆಗುವುದಿಲ್ಲ. ಆದುದರಿಂದ ಅವನನ್ನು ಕಾಶಿಯಿಂದ ಹೊರಡಿಸಲು ಯಾರನ್ನು ಕಳುಹಿಸಲಿ.

೫೬. ಧರ್ಮಮಾರ್ಗನಿರತನಿಗೆ ವಿಘ್ನವನ್ನುಂಟುಮಾಡುವವನಿಗೆ ವಿಘ್ನಗಳೇ ಉಂಟಾಗುವವು. ಅಲ್ಲದೆ ಧರ್ಮಿಷ್ಠನಿಗೇ ಶುಭವಾಗುವುದು.

೫೭. ಪ್ರಿಯಳೆ ! ಧರ್ಮಿಷ್ಠರನ್ನು ನಾನೇ ರಕ್ಷಿಸಬೇಕಾಗಿರುವುದರಿಂದ ದೋಷವಿಲ್ಲದ ಆ ರಾಜನನ್ನು ಹಾಳುಮಾಡಲು ಬಯಸುವುದಿಲ್ಲ.

ನ ಜರಾ ತಮತಿಕ್ರಾಮೇನ್ನತಂ ಮೃತ್ಯುರ್ಜಿಘಾಂಸತಿ ।
ವ್ಯಾಧಯಸ್ತಂ ನ ಬಾಧಂತೇ ಧರ್ಮವರ್ತ್ಮಭೃದತ್ರ ಯಃ ॥ ೫೮ ॥
ಇತಿ ಸಂಚಿಂತಯನ್ದೇವೋ ಯೋಗಿನೀಚಕ್ರಮಗ್ರತಃ ।
ದದರ್ಶಾಽತಿಮಹಾಪ್ರೌಢಂ ಗಾಢಕಾರ್ಯಸ್ಯ ಸಾಧನಂ ॥ ೫೯ ॥
ಅಥ ದೇವ್ಯಾ ಸಮಾಲೋಚ್ಯ ವ್ಯೋಮಕೇಶೋ ಮಹಾಮುನೇ ।
ಯೋಗಿನೀವೃಂದಮಾಹೂಯ ಜಗೌ ವಾಕ್ಯಮಿದಂ ಹರಃ ॥ ೬೦ ॥
ಸತ್ವರಂ ಯಾತ ಯೋಗಿನ್ಯೋ ಮಮ ವಾರಾಣಸೀಂ ಪುರೀಂ ।
ಯತ್ರ ರಾಜಾ ದಿವೋದಾಸೋ ರಾಜ್ಯಂ ಧರ್ಮೇಣ ಶಾಸ್ತ್ಯಲಂ ॥ ೬೧ ॥
ಸ್ವಧರ್ಮವಿಚ್ಯುತಃ ಕಾಶೀಂ ಯಥಾ ತೂರ್ಣಂ ತ್ಯಜೇನ್ನೃಪಃ ।
ತಥೋಪಚರತ ಪ್ರಾಜ್ಞಾ ಯೋಗಮಾಯಾಬಲಾನ್ವಿತಾಃ ॥ ೬೨ ॥
ಯಥಾ ಪುನರ್ನವೀಕೃತ್ಯ ಪುರೀಂ ವಾರಣಸೀಮಹಂ ।
ಇತಃ ಪ್ರಯಾಮಿ ಯೋಗಿನ್ಯಸ್ತಥಾ ಕ್ಷಿಪ್ರಂ ವಿಧೀಯತಾಂ ॥ ೬೩ ॥
ಇತಿ ಪ್ರಸಾದಮಾಸಾದ್ಯ ಶಾಸನಂ ಶಿರಸಾ ವಹನ್ ।
ಕೃತಪ್ರಣಾಮೋ ನಿರ್ಯಾತೋ ಯೋಗಿನೀನಾಂ ಗಣಸ್ತತಃ ॥ ೬೪ ॥
ಯಯುರಾಕಾಶಮಾವಿಶ್ಯ ಮನಸೋಽಪ್ಯತಿರಂಹಸಾ ।
ಪರಸ್ಪರಂ ಭಾಷಮಾಣಾ ಯೋಗಿನ್ಯಸ್ತಾ ಮುದಾನ್ವಿತಾಃ ॥ ೬೫ ॥

---

೫೮. ಈ ಲೋಕದಲ್ಲಿ ಧರ್ಮಮಾರ್ಗಾವಲಂಬಿಯನ್ನು ಮುಪ್ಪು ವ್ಯಾಪಿಸುವುದಿಲ್ಲ; ಮೃತ್ಯುವು ಕೊಲ್ಲುವುದಿಲ್ಲ; ವ್ಯಾಧಿಗಳೂ ಪೀಡಿಸುವುದಿಲ್ಲ."

೫೯. ಶಂಕರನು ಹೀಗೆ ಚಿಂತಿಸುತ್ತ ಅತಿ ಪ್ರೌಢವೂ, ಮಹಾಕಾರ್ಯವನ್ನು ಸಾಧಿಸುವುದೂ ಆದ ಯೋಗಿನೀಚಕ್ರವನ್ನು ಮುಂಗಡೆಯೆ ಕಂಡನು.

೬೦. ಮುನಿಯೆ! ಬಳಿಕ ಮಹೇಶ್ವರನು ದೇವಿಯೊಡನೆ ಆಲೋಚಿಸಿ ಆ ಯೋಗಿನಿಯರ ಸಮೂಹವನ್ನು ಕರೆದು ಹೇಳಿದನು.

೬೧. "ಎಲೌ ಯೋಗಿನಿಯರೆ! ದಿವೋದಾಸರಾಜನು ಧರ್ಮದಿಂದ ಆಳುತ್ತಿರುವ ಕಾಶೀಪಟ್ಟಣಕ್ಕೆ ಶೀಘ್ರವಾಗಿ ತೆರಳಿರಿ.

೬೨. ನೀವು ನಿಮ್ಮ ಯೋಗಮಾಯಾಬಲದಿಂದ ಕೂಡಿದವರಾಗಿ, ಆದೊರೆಯು ಧರ್ಮಭ್ರಷ್ಟನಾಗಿ ಕಾಶಿಯನ್ನು ತ್ಯಜಿಸುವಂತೆ ಅವನನ್ನು ಉಪಚರಿಸಿರಿ.

೬೩. ನಾನು ವಾರಾಣಸಿಯನ್ನು ಹೊಸತುಮಾಡಿ ಮತ್ತೆ ಇಲ್ಲಿಂದ ಹೊರಡುವಂತೆ ಶೀಘ್ರವಾಗಿ ಕಾರ್ಯಸಾಧನೆ ಮಾಡಿರಿ."

೬೪. ಬಳಿಕ ಯೋಗಿನಿಯರ ಗುಂಪು ಈಶ್ವರನ ಅನುಗ್ರಹವನ್ನು ಹೊಂದಿ ಅವನ ಅಪ್ಪಣೆಯನ್ನು ಶಿರಸಾವಹಿಸಿ ನಮಸ್ಕರಿಸಿ ಹೊರಟಿತು.

೬೫. ಆ ಯೋಗಿನಿಯರು ಪರಸ್ಪರವಾಗಿ ಮಾತನಾಡಿಕೊಳ್ಳುತ್ತ ಸಂತೋಷದಿಂದ ಆಕಾಶವನ್ನಾಶ್ರಯಿಸಿ ಮನೋವೇಗದಿಂದ ಕಾಶಿಗೆ ಪ್ರಯಾಣಮಾಡಿದರು.

ಅದ್ಯ ಧನ್ಯತರಾಃ ಸ್ಮೋ ವೈ ದೇವದೇವೇನ ಯತ್ಸ್ವಯಂ ।
ಕೃತಪ್ರಸಾದಾಃ ಪ್ರಹಿತಾಃ ಶ್ರೀಮದಾನಂದಕಾನನಂ ॥ ೬೬ ॥
ಅದ್ಯ ಸದ್ಯೋ ಮಹಾಲಾಭಾವಭೂತಾಂ ನೋಽತಿ ದುರ್ಲಭೌ ।
ತ್ರಿನೇತ್ರರಾಜಸಂಮಾನಸ್ತಥಾ ಕಾಶೀವಿಲೋಕನಂ ॥ ೬೭ ॥
ಇತಿ ಮುದಿತ ಮನಾಃ ಸ ಯೋಗಿನೀನಾಂ
ನಿಕುರುಂಬಸ್ತ್ವಥ ಮಂದರಾದ್ರಿಕುಂಜಾತ್ ।
ನಭಸಿ ಲಘುಕೃತಪ್ರಯಾಣವೇಗೋ
ನಯನಾತಿಥ್ಯಮಲಂಭಯತ್ಪುರೀಂ ತಾಂ ॥ ೬೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಕಾಶೀವರ್ಣನಂ"
ನಾಮ ಚತುಶ್ಚತ್ವಾರಿಂಶೋಽಧ್ಯಾಯಃ

---

೬೬. ಮಹೇಶ್ವರನು ಅನುಗ್ರಹಿಸಿ ನಮ್ಮನ್ನು ಆನಂದಕಾನನಕ್ಕೆ ಕಳುಹಿಸಿದ್ದರಿಂದ ಈಗ ನಾವು ಧನ್ಯರಾದೆವು.

೬೭. ಈಗ ನಮಗೆ ನಮ್ಮ ದೊರೆಯಾದ ಮಹೇಶ್ವರನ ಸಮ್ಮಾನ, ಕಾಶೀ ಸಂದರ್ಶನ ಎಂಬ ಅತಿ ದುರ್ಲಭವಾದ ಎರಡು ಮಹಾಲಾಭಗಳುಂಟಾದುವು."

೬೮. ಹೀಗೆ ಸಂತೋಷಗೊಂಡ ಆ ಯೋಗಿನಿಯರ ಸಮೂಹವು ಮಂದರ ಶೈಲದ ಗುಹೆಯಿಂದ ಹೊರಟು ಆಕಾಶದಲ್ಲಿ ಶೀಘ್ರವಾಗಿ ಪ್ರಯಾಣಮಾಡುತ್ತ ಆ ಕಾಶಿಯನ್ನು ನೋಡಿತು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಕಾಶೀವರ್ಣನ"ವೆಂಬ
ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಚತ್ವಾರಿಂಶೋಽಧ್ಯಾಯಃ

### ಚತುಃಷಷ್ಟಿಯೋಗಿನ್ಯಾಗಮನಂ

ಸ್ಕಂದ ಉವಾಚ :—

ಅಥ ತದ್ಯೋಗಿನೀವೃಂದಂ ದೂರಾದ್ದೃಷ್ಟಿಂ ಪ್ರಸಾರ್ಯ ಚ ।
ಸ್ವನೇತ್ರದೈರ್ಘ್ಯನಿರ್ಮಾಣಂ ಪ್ರಶಶಂಸ ಫಲಾನ್ವಿತಂ ॥ ೧ ॥
ದಿವ್ಯಪ್ರಾಸಾದಮಾಲಾನಾಂ ಪತಾಕಾಪ್ಟಲಪಲ್ಲವಾಃ ।
ಸಾದರಂ ದೂರಮಾರ್ಗಸ್ಥಾನ್ಪಾಂಥಾನಾಹ್ವಯತೀರಿವ ॥ ೨ ॥
ಚಂಚತ್ಪ್ರಾಸಾದಮಾಣಿಕ್ಯೈರ್ವಿಜೃಂಭಿತಮರೀಚಿಭಿಃ ।
ಸುನೀಲಮಪಿ ಚ ವ್ಯೋಮ ವೀಕ್ಷ್ಯಮಾಣಂ ಸುನಿರ್ಮಲಂ ॥ ೩ ॥
ದೇವತ್ವಂ ಮಾಯಯಾಚ್ಛಾದ್ಯ ವೇಷಂ ಕಾರ್ಪಟಿಕೋಚಿತಂ ।
ವಿಧಾಯ ಕಾಶೀಮವಿಶದ್ಯೋಗಿನೀಚಕ್ರಮುಕ್ರಮಂ ॥ ೪ ॥
ಕಾಚಿಚ್ಚ ಯೋಗಿನೀಭೂತಾ ಕಾಚಿಜ್ಜಾತಾ ತಪಸ್ವಿನೀ ।
ಕಾಚಿದ್ಬಭೂವ ಸೈರಂಧ್ರೀ ಕಾಚಿನ್ಮಾಸೋಪವಾಸಿನೀ ॥ ೫ ॥

---

### ಕನ್ನಡದ ಅನುವಾದ

#### ಚತುಷಷ್ಟಿಯೋಗಿನ್ಯಾಗಮನ

೧. ಸ್ಕಂದನು ಹೇಳುತ್ತಾನೆ :—ಬಳಿಕ ಆ ಯೋಗಿನಿಯರು ದೂರದಿಂದಲೇ ಆ ಕಾಶೀಪಟ್ಟಣವನ್ನು ನೋಡಿ ಸಫಲಗೊಂಡ ತಮ್ಮ ದೀರ್ಘವಾದ ಕಣ್ಣುಗಳ ನಿರ್ಮಾಣವನ್ನು ಹೊಗಳಿಕೊಂಡರು.

೨. ಅವರು ದೂರದಲ್ಲಿರುವ ಮಾರ್ಗಸ್ಥರನ್ನು ಕರೆಯುವುವೊ ಎಂಬಂತೆ ಚಲಿಸುತ್ತಿರುವ ತಳಿರುತೋರಣಗಳುಳ್ಳ ಪತಾಕೆಗಳನ್ನು ಕಂಡರು.

೩. ಅಲ್ಲಿ ಆಕಾಶವು, ಪ್ರಕಾಶಿಸುತ್ತಿರುವ ಪ್ರಾಸಾದಗಳ ಮಾಣಿಕ್ಯಗಳಿಂದ ಅಭಿವೃದ್ಧಿಯನ್ನು ಹೊಂದಿದ ಕಾಂತಿಗಳಿಂದ ಅತ್ಯಂತ ನೀಲವೂ, ನಿರ್ಮಲವೂ ಆಗಿ ಕಾಣುತ್ತಿದ್ದಿತು.

೪. ಆ ಯೋಗಿನಿಯರ ಗುಂಪು ತಮ್ಮ ಯೋಗಮಾಯೆಯಿಂದ ದೇವತ್ವವನ್ನು ಮುಚ್ಚಿಕೊಂಡು ತಪಸ್ವಿಗಳಿಗುಚಿತವಾದ ವೇಷವನ್ನು ಧರಿಸಿ ಅಕ್ರಮವಾಗಿ ಪಟ್ಟಣವನ್ನು ಪ್ರವೇಶಿಸಿತು.

೫. ಒಬ್ಬಳು ಯೋಗಿನಿಯೂ, ಮತ್ತೊಬ್ಬಳು ತಪಸ್ವಿನಿಯೂ, ಇನ್ನೊಬ್ಬಳು ಸೈರಂಧ್ರಿಯೂ, ಮಗದೊಬ್ಬಳು ಮಾಸೋಪವಾಸಿನಿಯೂ ಆದಳು.

ಮಾಲಾಕಾರವಧೂಃ ಕಾಚಿತ್ಕಾಚಿನ್ನಾಪಿತಸುಂದರೀ ।
ಸೂತಿಕರ್ಮವಿಚಾರಜ್ಞಾಽಪರಾ ಭೈಷಜಕೋವಿದಾ ॥ ೬ ॥
ವೈಶ್ಯಾ ಚ ಕಾಚಿದಭೂತ್ಕ್ರಯವಿಕ್ರಯಚಂಚುರಾ ।
ವಾಲಗ್ರಾಹಿಣ್ಯಭೂತ್ಕಾಚಿದ್ದಾಸೀ ಧಾತ್ರೀ ಚ ಕಾಚನ ॥ ೭ ॥
ಏಕಾಚ ನೃತ್ಯಕುಶಲಾ ತ್ವನ್ಯಾ ಗಾನವಿಶಾರದಾ ।
ಅಪರಾ ವೇಣುವಾದಜ್ಞಾಽಪರಾ ವೀಣಾಧರಾಽಭವತ್ ॥ ೮ ॥
ಮೃದಂಗವಾದನಜ್ಞಾಽನ್ಯಾ ಕಾಚಿತ್ತಾಲಕಲಾವತೀ ।
ಕಾಚಿತ್ಕಾರ್ಮಣಿತತ್ವಜ್ಞಾ ಕಾಚಿನ್ಮೌಕ್ತಿಕಗುಂಫಿಕಾ ॥ ೯ ॥
ಗಂಧಭಾಗವಿಧಿಜ್ಞಾಽನ್ಯಾ ಕಾಚಿದಕ್ಷಕಲಾಲಯಾ ।
ಆಲಾಪೋಲ್ಲಾಪಕುಶಲಾ ಕಾಚಿಚ್ಛತ್ತ್ವರಚಾರಿಣೀ ॥ ೧೦ ॥
ವಂಶಾಽಧಿರೋಹಣೇ ದಕ್ಷಾ ರಜ್ಜುಮಾರ್ಗೇಣ ಚೇತರಾ ।
ಕಾಚಿದ್ವಾತುಲಚೇಷ್ಟಾಽಭೂತ್ಪಥಿ ಚೀವರವೇಷ್ಟನಾ ॥ ೧೧ ॥
ಅಪತ್ಯದಾಽನಪತ್ಯಾನಾಂ ಪರಾ ತತ್ರ ಪುರೇಽವಸತ್ ।
ಕಾಚಿತ್ಕರಾಂಘ್ರಿರೇಖಾಣಾಂ ಲಕ್ಷಣಾನಿ ಚಿಕೇತಿಚ ॥ ೧೨ ॥

---

೬–೧೯. ಒಬ್ಬಳು ಹೂವಾಡಿಗಿತ್ತಿಯೂ, ಇನ್ನೊಬ್ಬಳು ಕ್ಷೌರಿಕನ ಪತ್ನಿಯೂ, ಮತ್ತೊಬ್ಬಳು ಸೂಲಗಿತ್ತಿಯೂ, ಒಬ್ಬಳು ವೈದ್ಯಳೂ, ಒಬ್ಬಳು ವೈಶ್ಯಳೂ, ಇನ್ನೊಬ್ಬಳು ಕ್ರಯವಿಕ್ರಯನಿಪುಣಳೂ, ಮತ್ತೊಬ್ಬಳು ಹಾವಾಡಿಗಿತ್ತಿಯೂ, ಒಬ್ಬಳು ಸೇವಕಳೂ, ಒಬ್ಬಳು ದಾದಿಯೂ, ಒಬ್ಬಳು ನರ್ತಕಿಯೂ, ಇನ್ನೊಬ್ಬಳು ಸಂಗೀತಜ್ಞಳೂ, ಮತ್ತೊಬ್ಬಳು ಕೊಳಲನ್ನೂದುವವಳೂ, ಒಬ್ಬಳು ವೀಣೆಯನ್ನು ಧರಿಸಿದವಳೂ, ಇನ್ನೊಬ್ಬಳು ಮೃದಂಗವನ್ನು ಬಾರಿಸುವವಳೂ, ಮತ್ತೊಬ್ಬಳು ತಾಳದ ಕಲೆಯನ್ನು ತಿಳಿದವಳೂ, ಮಗದೊಬ್ಬಳು ವಶೀಕರಣವಿದ್ಯೆಯನ್ನರಿತವಳೂ, ಒಬ್ಬಳು ಮುತ್ತನ್ನು ಪೋಣಿಸುವವಳೂ, ಒಬ್ಬಳು ಗಂಧವಿಭಾಗದ ಕ್ರಮವನ್ನರಿತವಳೂ, ಒಬ್ಬಳು ಅಕ್ಷರಕಲೆಯನ್ನು ತಿಳಿದವಳೂ, ಒಬ್ಬಳು ಮಾತನಾಡುವುದರಲ್ಲಿ ನಿಪುಣಳೂ, ಒಬ್ಬಳು ಭಿಕ್ಷುಕಿಯಾಗಿ ಅಂಗಣದಲ್ಲಿ ಸಂಚರಿಸುವವಳೂ, ಒಬ್ಬಳು ದೊಂಬರಾಟದಲ್ಲಿ ನಿಪುಣಳೂ, ಇನ್ನೊಬ್ಬಳು ಹಗ್ಗದಮೇಲೆ ನಡೆಯುವವಳೂ, ಒಬ್ಬಳು ವಾತರೋಗಿಯ ಚೇಷ್ಟೆಯುಳ್ಳವಳೂ, ಮತ್ತೊಬ್ಬಳು ದಾರಿಯಲ್ಲಿ ಬಿದ್ದಿರುವ ಹರಕುಬಟ್ಟೆಯನ್ನುಟ್ಟವಳೂ, ಮತ್ತೊಬ್ಬಳು ಮಕ್ಕಳಿಲ್ಲದವರಿಗೆ ಮಕ್ಕಳನ್ನು ಕೊಡುವವಳೂ, ಒಬ್ಬಳು ಕೈಕಾಲುಗಳಲ್ಲಿರುವ ರೇಖೆಗಳ ಲಕ್ಷಣಗಳನ್ನು ತಿಳಿಯುವವಳೂ, ಒಬ್ಬಳು ಚಿತ್ರವನ್ನು ಬರೆಯುವುದರಲ್ಲಿ ನಿಪುಣಳಾಗಿ ಜನಗಳ ಮನಸ್ಸನ್ನು ಅಪಹರಿಸುವವಳೂ, ಒಬ್ಬಳು ವಶೀಕರಣ

ಚಿತ್ರಲೇಖನನೈಪುಣ್ಯಾತ್ಕಾಚಿಜ್ಜನಮನೋಹರಾ ।
ವಶೀಕರಣಮಂತ್ರಜ್ಞಾ ಕಾಚಿತ್ತತ್ರ ಚಚಾರ ಹ ॥ ೧೩ ॥
ಘುಟಿಕಾಸಿದ್ಧಿದಾ ಕಾಚಿತ್ಕಾಚಿದಂಜನಸಿದ್ಧಿದಾ ।
ಧಾತುವಾದವಿದಗ್ಧಾಽನ್ಯಾ ಪಾದುಕಾಸಿದ್ಧಿದಾಽಪರಾ ॥ ೧೪ ॥
ಅಗ್ನಿಸ್ತಂಭಂ ಜಲಸ್ತಂಭಂ ವಾಕ್ಸ್ತಂಭಂ ಚಾಽಪ್ಯಶಿಕ್ಷಯತ್ ।
ಖೇಚರೀತ್ವಂ ದದೌ ಕಾಚಿದದೃಶ್ಯತ್ವಂ ಪರಾ ದದೌ ॥ ೧೫ ॥
ಕಾಚಿದಾಕರ್ಷಣೀಂ ಸಿದ್ಧಿಂ ದದಾವುಚ್ಚಾಟನಂ ಪರಾ ।
ಕಾಚಿನ್ನಿಜಾಂಗಸೌಂದರ್ಯಯುವಚಿತ್ತವಿಮೋಹಿನೀ ॥ ೧೬ ॥
ಚಿಂತಿತಾರ್ಥಪ್ರದಾ ಕಾಚಿಜ್ಜ್ಯೋತಿಃಕಲಾವತೀ ।
ಇತ್ಯಾದಿ ವೇಷಭಾಷಾಭಿರನುಕೃತ್ಯ ಸಮಂತತಃ ॥ ೧೭ ॥
ಪ್ರತ್ಯಂಗಣಂ ಪ್ರತಿಗೃಹಂ ಪ್ರಾವಿಶದ್ಯೋಗಿನೀಗಣಃ ।
ಇತ್ಥಮಬ್ದಂ ಚರಂತ್ಯಸ್ತಾ ಯೋಗಿನ್ಯೋಽಹರ್ನಿಶಂ ಪುರಿ ॥ ೧೮ ॥
ನ ಚ್ಛಿದ್ರಂ ಲೇಭಿರೇ ಕ್ವಾಽಪಿ ನೃಪವಿಘ್ನಚಿಕೀರ್ಷವಃ ।
ತತಃ ಸಮೇತ್ಯ ತಾಃ ಸರ್ವಾ ಯೋಗಿನ್ಯೋ ವಂಧ್ಯವಾಂಛಿತಾಃ ।
ತಸ್ಥುಃ ಸಂಮಂತ್ರ್ಯ ತತ್ರೈವ ನ ಗತಾ ಮಂದರಂ ಪುನಃ ॥ ೧೯ ॥

---

ಮಂತ್ರವನ್ನರಿತು ಅಲ್ಲಲ್ಲಿ ಸಂಚರಿಸುವವಳೂ, ಒಬ್ಬಳು ಘುಟಿಕಾಸಿದ್ಧಿಯನ್ನು ನೀಡುವವಳೂ, ಒಬ್ಬಳು ಅಂಜನಸಿದ್ಧಿಯನ್ನು ಕೊಡುವವಳೂ, ಒಬ್ಬಳು ಸ್ವರ್ಣವಾದಚತುರಳೂ, ಒಬ್ಬಳು ಪಾದುಕಾಸಿದ್ಧಿಯನ್ನು ಕೊಡುವವಳೂ, ಒಬ್ಬಳು ಅಗ್ನಿ, ಜಲ, ವಾಕ್ಕುಗಳನ್ನು ಸ್ತಂಭಿಸುವ ವಿದ್ಯೆಯನ್ನು ಕಲಿತವಳೂ, ಒಬ್ಬಳು ಆಕಾಶದಲ್ಲಿ ಸಂಚರಿಸುವಿಕೆಯನ್ನು ಉಪದೇಶಿಸುವವಳೂ, ಒಬ್ಬಳು ಅಂತರ್ಧಾನವನ್ನು ಹೇಳಿಕೊಡುವವಳೂ, ಒಬ್ಬಳು ಆಕರ್ಷಣ, ಉಚ್ಚಾಟನಸಿದ್ಧಿಗಳನ್ನು ಕೊಡುವವಳೂ, ಒಬ್ಬಳು ತನ್ನ ಅಂಗಸೌಂದರ್ಯದಿಂದ ಯುವಕರ ಮನಸ್ಸನ್ನು ಮೋಹಗೊಳಿಸುವವಳೂ, ಒಬ್ಬಳು ಇಷ್ಟಾರ್ಥವನ್ನು ಕೊಡುವವಳೂ, ಒಬ್ಬಳು ಜ್ಯೋತಿಶ್ಶಾಸ್ತ್ರವನ್ನು ತಿಳಿದವಳೂ ಆದಳು. ಯೋಗಿನಿಯರು ಇವೇ ಮೊದಲಾದ ವೇಷಭಾಷಾಭೂಷಣಾದಿಗಳನ್ನು ಹೊಂದಿ ಆ ಪಟ್ಟಣದ ಪ್ರತ್ಯಂಗಣವನ್ನೂ, ಪ್ರತಿಮನೆಯನ್ನೂ ಪ್ರವೇಶಿಸಿದರು. ಹೀಗೆ ಅವರು ದಿವೋದಾಸರಾಜನಿಗೆ ವಿಘ್ನವನ್ನುಂಟುಮಾಡಲಿಚ್ಛೆಯುಳ್ಳವರಾಗಿ ಪಟ್ಟಣದಲ್ಲಿ ಹಗಲು ರಾತ್ರಿ ಒಂದು ವರ್ಷ ಸಂಚರಿಸುತ್ತ ಎಲ್ಲಿಯೂ ಅವಕಾಶವನ್ನೇ ಹೊಂದಲಿಲ್ಲ. ಬಳಿಕ ಅವರೆಲ್ಲರೂ ಒಟ್ಟಿಗೆ ಸೇರಿ ನಿಷ್ಫಲಮನೋರಥರಾಗಿ ಅಲ್ಲಿಯೇ ನೆಲಸಿದರು. ಮರಳಿ ಮಂದರ ಪರ್ವತಕ್ಕೆ ಹೋಗಲಿಲ್ಲ.

ಪ್ರಭುಕಾರ್ಯಮನಿಷ್ಪಾದ್ಯ ಸದಃಸಂಭಾವನೈಧಿತಃ ।
ಕಃ ಪುರಃ ಶಕ್ನುಯಾತ್ಸ್ಥಾತುಂ ಸ್ವಾಮಿನೋಕ್ಷತವಿಗ್ರಹಃ ॥ ೨೦ ॥
ಅನ್ಯಚ್ಚ ಚಿಂತಿತಂ ತಾಭಿರ್ಯೋಗಿನೀಭಿರಿದಂ ಮುನೇ ।
ಪ್ರಭುಂ ವಿನಾಽಪಿ ಜೀವಾಮೋ ನ ತು ಕಾಶೀಂ ವಿನಾ ಪುನಃ ॥ ೨೧ ॥
ಪ್ರಭೂ ರುಷ್ಟೋಽಪಿ ಸದ್ಭೃತ್ಯೇ ಜೀವಿಕಾಮಾತ್ರಹಾರಕಃ ।
ಕಾಶೀ ಹರೇತ್ಕರಾದ್ಭ್ರಷ್ಟಾ ಪುರುಷಾರ್ಥಚತುಷ್ಟಯಂ ॥ ೨೨ ॥
ನಾಽದ್ಯಾಪಿ ಕಾಶೀಂ ಸಂತ್ಯಜ್ಯ ತದಾರಭ್ಯ ಮಹಾಮುನೇ ।
ಯೋಗಿನ್ಯೋಽನ್ಯತ್ರ ತಿಷ್ಠಂತಿ ಚರಂತ್ಯೋಽಪಿ ಜಗತ್ತ್ರಯಂ ॥ ೨೩ ॥
ಪ್ರಾಪ್ಯಾಽಪಿ ಶ್ರೀಮತೀಂ ಕಾಶೀಂ ಯಸ್ತಿತಿಕ್ಷತಿ ದುರ್ಮತಿಃ ।
ಸ ಏವ ಪ್ರತ್ಯುತ ತ್ಯಕ್ತೋ ಧರ್ಮಕಾಮಾರ್ಥಮುಕ್ತಿಭಿಃ ॥ ೨೪ ॥
ಕಃ ಕಾಶೀಂ ಪ್ರಾಪ್ಯ ದುರ್ಬುದ್ಧಿರಪರತ್ರ ಯಿಯಾಸತಿ ।
ಮೋಕ್ಷನಿಕ್ಷೇಪಕಲಶೀಂ ತುಚ್ಛಶ್ರೀಕೃತಮಾನಸಃ ॥ ೨೫ ॥
ವಿಮುಖೋಽಪೀಶ್ವರೋಽಸ್ಮಾಕಂ ಕಾಶೀಸೇವನಪುಣ್ಯತಃ ।
ಸಂಮುಖೋ ಭವಿತಾ ಪುಣ್ಯಂ ಕೃತಕೃತ್ಯಾಃಸ್ಮ ತದ್ವಯಂ ॥ ೨೬ ॥

---

೨೦. ಸ್ವಾಮಿಕಾರ್ಯವನ್ನು ನೆರವೇರಿಸದೆ ಸಭಾಸಂಭಾವನೆಯಿಂದ ವೃದ್ಧಿಗೊಂಡ ಯಾವನು ತಾನೆ ಜೀವದಿಂದ ಸ್ವಾಮಿಯ ಮುಂದೆ ನಿಲ್ಲಲು ಶಕ್ತನಾದಾನು.

೨೧. ಮುನಿಯೆ! ಆ ಯೋಗಿನಿಯರು ಹೀಗೆ ಚಿಂತಿಸಿದರು. "ನಾವು ಸ್ವಾಮಿಯಿಲ್ಲದಿದ್ದರೂ ಬದುಕುವೆವು. ಕಾಶಿಯನ್ನು ಬಿಟ್ಟು ಮಾತ್ರ ಜೀವಿಸಲಾರೆವು.

೨೨. ಪ್ರಭುವು ಸದ್ಭೃತ್ಯನಲ್ಲಿ ಕುಪಿತನಾದರೆ ಪ್ರಾಣವನ್ನು ಮಾತ್ರ ಅಪಹರಿಸುವನು. ಕಾಶೀತ್ಯಾಗದಿಂದ ಪುರುಷಾರ್ಥಚತುಷ್ಟಯವೇ ನಾಶವಾಗುವುದು."

೨೩. ಮುನಿಯೆ! ಆ ಯೋಗಿನಿಯರು ಅದು ಮೊದಲ್ಗೊಂಡು ಮೂರು ಲೋಕದಲ್ಲಿ ಸಂಚರಿಸುತ್ತಿದ್ದರೂ ಕಾಶಿಯನ್ನುಳಿದು ಇತರ ಕಡೆಯಲ್ಲಿ ವಾಸಿಸಲಿಲ್ಲ.

೨೪. "ಶ್ರೀಕಾಶಿಯನ್ನು ಹೊಂದಿಯೂ ಅದನ್ನು ಬಿಡಲು ಅಪೇಕ್ಷಿಸುವ ದುಷ್ಟಬುದ್ಧಿಯು ಧರ್ಮಕಾಮಾರ್ಥಮೋಕ್ಷಗಳಿಲ್ಲದವನಾಗುವನು.

೨೫. ಯಾವ ದುರ್ಬುದ್ಧಿಯು ಅಲ್ಪಸಂಪತ್ತಿನಲ್ಲಿ ಆಶೆಯುಳ್ಳವನಾಗಿ ಮೋಕ್ಷನಿಧಿಗೆ ಕಲಶಪ್ರಾಯವಾದ ಕಾಶಿಯನ್ನು ಹೊಂದಿಯೂ ಬೇರೆ ಕಡೆಗೆ ಹೋಗಲಿಚ್ಛಿಸುವನು ?

೨೬. ಪುಣ್ಯಕಾರಣನಾದ ಮಹೇಶ್ವರನು ವಿಮುಖನಾಗಿದ್ದರೂ ಕಾಶಿಯನ್ನು ಸೇವಿಸುವುದರಿಂದುಂಟಾದ ಪುಣ್ಯದಿಂದ ಸಮ್ಮುಖನೇ ಆಗುವನು. ಅದರಿಂದ ನಾವು ಧನ್ಯರೇ ಆಗುವೆವು.

ದಿನೈಃ ಕತಿಪಯೈರೇವ ಸರ್ವಜ್ಞೋಽಪಿ ಸಮೇಷ್ಯತಿ ।
ವಿನಾ ಕಾಶೀಂ ನ ರಮತೇ ಯತೋಽನ್ಯತ್ರ ತ್ರಿಲೋಚನಃ ॥ ೨೭ ॥
ಶಂಭೋಃ ಶಕ್ತಿರಿಯಂ ಕಾಶೀ ಕಾಚಿತ್ಸರ್ವೈರಗೋಚರಾ ।
ಶಂಭುರೇವ ಹಿ ಜಾನೀಯಾದೇತಸ್ಯಾಃ ಪರಮಂ ಸುಖಂ ॥ ೨೮ ॥
ಇತಿ ನಿಶ್ಚಿತ್ಯ ಮನಸಿ ಶಂಭೋರಾನಂದ ಕಾನನೇ ।
ಅತಿಷ್ಠದ್ಯೋಗಿನೀವೃಂದಂ ಕಯಾಚಿನ್ಮಾಯಯಾ ವೃತಂ ॥ ೨೯ ॥

ವ್ಯಾಸ ಉವಾಚ :—

ಇತ್ಥಂ ಸಮಾಕರ್ಣ್ಯ ಮುನಿಃ ಪುನಃ ಪಪ್ರಚ್ಛ ಷಣ್ಮುಖಂ ।
ಕಾನಿ ಕಾನಿ ಚ ನಾಮಾನಿ ತಾಸಾಂ ತಾನಿ ವದೇಶ್ವರ ॥ ೩೦ ॥
ಭಜನಾದ್ಯೋಗಿನೀನಾಂ ಚ ಕಾಶ್ಯಾಂ ಕಿಂ ಜಾಯತೇ ಫಲಂ ।
ತಸ್ಮಿನ್ಪರ್ವಣಿ ತಾಃ ಪೂಜ್ಯಾಃ ಕಥಂ ಪೂಜ್ಯಾಶ್ಚ ತದ್ವದ ॥ ೩೧ ॥
ಶ್ರುತ್ವೇತಿ ಪ್ರಶ್ನಮೌಮೇಯೋ ಯೋಗಿನೀಸಂಶ್ರಯಂ ತತಃ ।
ಪ್ರತ್ಯುವಾಚ ಮುನೇ ವಚ್ಮಿ ಶೃಣೋತ್ವವಹಿತೋ ಭವಾನ್ ॥ ೩೨ ॥

ಸ್ಕಂದ ಉವಾಚ :—

ನಾಮಧೇಯಾನಿ ವಕ್ಷ್ಯಾಮಿ ಯೋಗಿನೀನಾಂ ಘಟೋದ್ಭವ ।
ಆಕರ್ಣ್ಯ ಯಾನಿ ಪಾಪಾನಿ ಕ್ಷಯಂತಿ ಭವಿನಾಂ ಕ್ಷಣಾತ್ ॥ ೩೩ ॥

---

೨೭. ಸರ್ವಜ್ಞನಾದ ವಿಶ್ವೇಶ್ವರನೂ ಕೆಲವು ದಿನಗಳಲ್ಲಿಯೇ ಇಲ್ಲಿಗೆ ಬರುವನು. ಅವನು ಕಾಶಿಯನ್ನು ಬಿಟ್ಟು ಇತರ ಕಡೆಗಳಲ್ಲಿ ಆನಂದಗೊಳ್ಳುವುದಿಲ್ಲ.

೨೮. ಈ ಕಾಶಿಯು ಸಮಸ್ತರೂ ತಿಳಿಯಬೇಕಾದ ಶಿವನ ಶಕ್ತಿರೂಪವಾಗಿರುವುದು. ಇದರ ಪರಮಸೌಖ್ಯವನ್ನು ಶಿವನೇ ಬಲ್ಲನು.''

೨೯. ಯೋಗಿನಿಯರ ಗುಂಪು ಹೀಗೆ ಮನಸ್ಸಿನಲ್ಲಿಯೆ ನಿಶ್ಚಯಿಸಿ ಯಾವುದೋ ಒಂದು ಮಾಯೆಯೊಡನೆ ಪ್ರಚ್ಛನ್ನವಾಗಿ ಕಾಶಿಯಲ್ಲಿ ನೆಲಸಿತು.

೩೦. ವ್ಯಾಸನು ಹೇಳುತ್ತಾನೆ:—ಅಗಸ್ತ್ಯನು ಇದನ್ನು ಕೇಳಿ ಮರಳಿ ಹೀಗೆ ಪ್ರಶ್ನಿಸಿದನು. ''ಸ್ಕಂದ! ಆ ಯೋಗಿನಿಯರ ನಾಮಗಳಾವುವು?

೩೧. ಕಾಶಿಯಲ್ಲಿ ಯೋಗಿನಿಯರನ್ನು ಸೇವಿಸುವುದರಿಂದ ಯಾವ ಫಲವುಂಟಾಗುವುದು? ಅವರನ್ನು ಯಾವ ಪರ್ವಕಾಲದಲ್ಲಿ ಹೇಗೆ ಪೂಜಿಸಬೇಕು. ಅದನ್ನು ಹೇಳು.''

೩೨. ಸ್ಕಂದನು ಯೋಗಿನಿಯರ ಸಂಬಂಧವಾದ ಮುನಿಯ ಪ್ರಶ್ನೆಯನ್ನು ಕೇಳಿ, ''ಮುನಿಯೆ! ಲಾಲಿಸು; ಹೇಳುವೆನು'' ಎಂದನು.

೩೩. ಸ್ಕಂದನು ಹೇಳುತ್ತಾನೆ:— ಅಯ್ಯಾ ಅಗಸ್ತ್ಯನೆ! ಯೋಗಿನಿಯರ ಹೆಸರನ್ನು ಹೇಳುವೆನು. ಇದನ್ನು ಕೇಳಿದ ಭಕ್ತರ ಪಾಪಗಳು ಕೂಡಲೆ ನಾಶವಾಗುವುವು.

ಗಜಾನನಾ ಸಿಂಹಮುಖೀ ಗೃಧ್ರಾಸ್ಯಾ ಕಾಕತುಂಡಿಕಾ ।
ಉಷ್ಟ್ರಗ್ರೀವಾ ಹಯಗ್ರೀವಾ ವಾರಾಹೀ ಶರಭಾನನಾ ॥ ೩೪ ॥
ಉಲೂಕಿಕಾ ಶಿವಾರಾವಾ ಮಯೂರೀ ವಿಕಟಾನನಾ ।
ಅಷ್ಟವಕ್ತ್ರಾ ಕೋಟರಾಕ್ಷೀ ಕುಬ್ಜಾ ವಿಕಟಲೋಚನಾ ॥ ೩೫ ॥
ಶುಷ್ಕೋದರೀ ಲಲಜ್ಜಿಹ್ವಾ ಶ್ವದಂಷ್ಟ್ರಾ ವಾನರಾಽಽನನಾ ।
ಋಕ್ಷಾಕ್ಷೀ ಕೇಕರಾಕ್ಷೀ ಚ ಬೃಹತ್ತುಂಡಾ ಸುರಾಪ್ರಿಯಾ ॥ ೩೬ ॥
ಕಪಾಲಹಸ್ತಾ ರಕ್ತಾಕ್ಷೀ ಶುಕೀ ಶ್ಯೇನೀ ಕಪೋತಿಕಾ ।
ಪಾಶಹಸ್ತಾ ದಂಡಹಸ್ತಾ ಪ್ರಚಂಡಾ ಚಂಡವಿಕ್ರಮಾ ॥ ೩೭ ॥
ಶಿಶುಘ್ನೀ ಪಾಪಹಂತ್ರೀ ಚ ಕಾಲೀ ರುಧಿರಪಾಯಿನೀ ।
ವಸಾಧಯಾ ಗರ್ಭಭಕ್ಷಾ ಶವಹಸ್ತಾಂತ್ರಮಾಲಿನೀ ॥ ೩೮ ॥
ಸ್ಥೂಲಕೇಶೀ ಬೃಹತ್ಕುಕ್ಷಿಃ ಸರ್ಪಾಸ್ಯಾ ಪ್ರೇತವಾಹನಾ ।
ದಂದಶೂಕಕರಾ ಕ್ರೌಂಚೀ ಮೃಗಶೀರ್ಷಾ ವೃಷಾನನಾ ॥ ೩೯ ॥
ವ್ಯಾತ್ತಾಸ್ಯಾ ಧೂಮನಿಃಶ್ವಾಸಾ ವ್ಯೋಮೈಕಚರಣೋರ್ಧ್ವದೃಕ್ ।
ತಾಪನೀ ಶೋಷಣೀ ದೃಷ್ಟಿಃ ಕೋಟರೀ ಸ್ಥೂಲನಾಸಿಕಾ ॥ ೪೦ ॥
ವಿದ್ಯುತ್ಪ್ರಭಾ ಬಲಾಕಾಸ್ಯಾ ಮಾರ್ಜಾರೀ ಕಟಪೂತನಾ ।
ಅಟ್ಟಾಟ್ಟಹಾಸಾ ಕಾಮಾಕ್ಷೀ ಮೃಗಾಕ್ಷೀ ಮೃಗಲೋಚನಾ ॥ ೪೧ ॥
ನಾಮಾನೀಮಾನಿ ಯೋ ಮರ್ತ್ಯಶ್ಚತುಃಷಷ್ಟಿಂ ದಿನೇ ದಿನೇ ।
ಜಪೇತ್ತ್ರಿಸಂಧ್ಯಂ ತಸ್ಯೇಹ ದುಷ್ಟಬಾಧಾ ಪ್ರಶಾಮ್ಯತಿ ॥ ೪೨ ॥

---

೩೪–೪೨. ಗಜಾನನಾ, ಸಿಂಹಮುಖೀ, ಗೃಧ್ರಾಸ್ಯಾ, ಕಾಕತುಂಡಿಕಾ, ಉಷ್ಟ್ರಗ್ರೀವಾ, ಹಯಗ್ರೀವಾ, ವಾರಾಹೀ, ಶರಭಾನನಾ, ಉಲೂಕಿಕಾ, ಶಿವಾರಾವಾ, ಮಯೂರೀ, ವಿಕಟಾನನಾ, ಅಷ್ಟವಕ್ತ್ರಾ, ಕೋಟರಾಕ್ಷೀ, ಕುಬ್ಜಾ, ವಿಕಟಲೋಚನಾ, ಶುಷ್ಕೋದರೀ, ಲಲಜ್ಜಿಹ್ವಾ, ಶ್ವದಂಷ್ಟ್ರಾ, ವಾನರಾನನಾ, ಋಕ್ಷಾಕ್ಷೀ, ಕೇಕರಾಕ್ಷೀ, ಬೃಹತ್ತುಂಡಾ, ಸುರಾಪ್ರಿಯಾ, ಕಪಾಲಹಸ್ತಾ, ರಕ್ತಾಕ್ಷೀ, ಶುಕೀ, ಶ್ಯೇನೀ, ಕಪೋತಿಕಾ, ಪಾಶಹಸ್ತಾ, ದಂಡಹಸ್ತಾ, ಪ್ರಚಂಡಾ, ಚಂಡವಿಕ್ರಮಾ, ಶಿಶುಘ್ನೀ, ಪಾಪಹಂತ್ರೀ, ಕಾಲೀ, ರುಧಿರಪಾಯಿನೀ, ವಸಾಧಯಾ, ಗರ್ಭಭಕ್ಷಾ, ಶವಹಸ್ತಾ, ಅಂತ್ರಮಾಲಿನೀ, ಸ್ಥೂಲಕೇಶೀ, ಬೃಹತ್ಕುಕ್ಷಿ, ಸರ್ಪಾಸ್ಯಾ, ಪ್ರೇತವಾಹನಾ, ದಂದಶೂಕಕರಾ, ಕ್ರೌಂಚೀ, ಮೃಗಶೀರ್ಷಾ, ವೃಷಾನನಾ, ವ್ಯಾತ್ತಾಸ್ಯಾ, ಧೂಮನಿಶ್ವಾಸಾ, ವ್ಯೋಮೈಕಚರಣಾ, ಊರ್ಧ್ವದೃಕ್, ತಾಪನೀ, ಶೋಷಣೀ, ದೃಷ್ಟಿ, ಕೋಟರೀ, ಸ್ಥೂಲನಾಸಿಕಾ, ವಿದ್ಯುತ್ಪ್ರಭಾ, ಬಲಾಕಾಸ್ಯಾ, ಮಾರ್ಜಾರೀ, ಕಟಪೂತನಾ, ಅಟ್ಟಾಟ್ಟಹಾಸಾ, ಕಾಮಾಕ್ಷೀ, ಮೃಗಾಕ್ಷೀ, ಮೃಗಲೋಚನಾ ಎಂಬ ಈ ಅರುವತ್ತು

ನ ಡಾಕಿನ್ಯೋ ನ ಶಾಕಿನ್ಯೋ ನ ಕೂಷ್ಮಾಂಡಾ ನ ರಾಕ್ಷಸಾಃ ।
ತಸ್ಯ ಪೀಡಾಂ ಪ್ರಕುರ್ವಂತಿ ನಾಮಾನೀಮಾನಿ ಯಃ ಪಠೇತ್ ॥ ೪೩ ॥
ಶಿಶೂನಾಂ ಶಾಂತಿಕಾರೀಣಿ ಗರ್ಭಶಾಂತಿಕರಾಣಿ ಚ ।
ರಣೇ ರಾಜಕುಲೇ ವಾऽಪಿ ವಿವಾದೇ ಜಯದಾನ್ಯಪಿ ॥ ೪೪ ॥
ಲಭೇದಭೀಪ್ಸಿತಾಂ ಸಿದ್ಧಿಂ ಯೋಗಿನೀಪೀಠಸೇವಕಃ ।
ಮಂತ್ರಾಂತರಾಣ್ಯಪಿ ಜಪಂಸ್ತತ್ಪೀಠೇ ಸಿದ್ಧಿಭಾಗ್ಭವೇತ್ ॥ ೪೫ ॥
ಬಲಿಪೂಜೋಪಹಾರೈಶ್ಚ ಧೂಪದೀಪಸಮರ್ಪಣೈಃ ।
ಕ್ಷಿಪ್ರಂ ಪ್ರಸನ್ನಾ ಯೋಗಿನ್ಯಃ ಪ್ರಯಚ್ಛೇಯುರ್ಮನೋರಥಾನ್ ॥ ೪೬ ॥
ಶರತ್ಕಾಲೇ ಮಹಾಪೂಜಾಂ ತತ್ರ ಕೃತ್ವಾ ವಿಧಾನತಃ ।
ಹವೀಂಷಿ ಹುತ್ವಾ ಮಂತ್ರಜ್ಞೋ ಮಹತೀಂ ಸಿದ್ಧಿಮಾಪ್ನುಯಾತ್ ॥ ೪೭ ॥
ಆರಭ್ಯಾऽಶ್ವಯುಜಃ ಶುಕ್ಲಾಂ ತಿಥಿಂ ಪ್ರತಿಪದಂ ಶುಭಾಂ ।
ಪೂಜಯೇನ್ನವಮೀಂ ಯಾವನ್ನರಶ್ಚಿಂತಿತಮಾಪ್ನುಯಾತ್ ॥ ೪೮ ॥
ಕೃಷ್ಣಪಕ್ಷಸ್ಯ ಭೂತಾಯಾಮುಪವಾಸೀ ನರೋತ್ತಮಃ ।
ತತ್ರ ಜಾಗರಣಂ ಕೃತ್ವಾ ಮಹತೀಂ ಸಿದ್ಧಿಮಾಪ್ನುಯಾತ್ ॥ ೪೯ ॥

---

ನಾಲ್ಕು ನಾಮಗಳನ್ನು ಪ್ರತಿದಿನವೂ ಮೂರು ಸಂಧ್ಯಾಕಾಲದಲ್ಲಿ ಜಪಿಸಿದವನಿಗೆ ದುಷ್ಟಗ್ರಹಗಳ ಬಾಧೆಯು ಶಾಂತವಾಗುವುದು. ಈ ನಾಮಗಳನ್ನು ಜಪಿಸಿದವನಿಗೆ ಡಾಕಿನೀ, ಶಾಕಿನೀಯರೂ, ಕೂಷ್ಮಾಂಡರೂ, ರಾಕ್ಷಸರೂ ಪೀಡೆಯನ್ನೆಸಗುವುದಿಲ್ಲ.

೪೪. ಇವು ಶಿಶು ಮತ್ತು ಗರ್ಭಗಳಿಗೆ ಶಾಂತಿಯನ್ನುಂಟುಮಾಡುವುವು; ವಿವಾದ, ಯುದ್ಧ, ರಾಜಗೃಹಗಳಲ್ಲಿ ಜಯವನ್ನು ಕೊಡುವುವು.

೪೫. ಯೋಗಿನೀಪೀಠವನ್ನು ಸೇವಿಸುವವನು ಇಷ್ಟಸಿದ್ಧಿಯನ್ನು ಪಡೆಯುವನು. ಆ ಪೀಠದಲ್ಲಿ ಇತರ ಮಂತ್ರಗಳನ್ನು ಜಪಿಸುವವನೂ ಸಿದ್ಧಿಯನ್ನು ಹೊಂದುವನು.

೪೬. ಬಲಿ, ಪೂಜೆಗಳನ್ನು ಮಾಡುವುದರಿಂದಲೂ, ಕಾಣಿಕೆ, ಧೂಪ, ದೀಪಗಳನ್ನು ಸಮರ್ಪಿಸುವುದರಿಂದಲೂ ಯೋಗಿನಿಯರು ಶೀಘ್ರವಾಗಿ ಪ್ರಸನ್ನರಾಗಿ ಇಷ್ಟಾರ್ಥಗಳನ್ನು ನೀಡುವರು.

೪೭. ಅಲ್ಲಿ ಮಂತ್ರಜ್ಞನು ಶರತ್ಕಾಲದಲ್ಲಿ ವಿಧಿಪೂರ್ವಕವಾಗಿ ಮಹಾಪೂಜೆಯನ್ನು ಮಾಡಿ ಹವಿಸ್ಸಿನಿಂದ ಹೋಮಿಸಿದರೆ ಮಹಾಸಿದ್ಧಿಯನ್ನು ಪಡೆಯುವನು.

೪೮. ಮನುಷ್ಯನು ಆಶ್ವಯುಜಶುಕ್ಲ ಪಾಡ್ಯವನ್ನಾರಂಭಿಸಿ ನವಮಿಯವರೆಗೆ ಯೋಗಿನಿಯರನ್ನು ಪೂಜಿಸಿದರೆ ಇಷ್ಟಾರ್ಥವನ್ನು ಪಡೆಯುವನು.

೪೯. ಕೃಷ್ಣಪಕ್ಷದ ಚತುರ್ದಶೀ ದಿನ ಅಲ್ಲಿ ಉಪವಾಸವಿದ್ದು ಜಾಗರಣೆ ಮಾಡಿದ ಮಾನವನು ಮಹಾಸಿದ್ಧಿಯನ್ನು ಹೊಂದುವನು.

ಪ್ರಣವಾದಿಚತುರ್ಥ್ಯಂತೈರ್ನಾಮಭಿರ್ಭಕ್ತಿಮಾನ್ನರಃ ।
ಪ್ರತ್ಯೇಕಂ ಹವನಂ ಕೃತ್ವಾ ಶತಮಷ್ಟೋತ್ತರಂ ನಿಶಿ ॥ ೫೦ ॥
ಸಸರ್ಪಿಷಾ ಗುಗ್ಗುಲುನಾ ಲಘುಕೋಲಿಪ್ರಮಾಣತಃ ।
ಯಾಂ ಯಾಂ ಸಿದ್ಧಿಮಭೀಪ್ಸೇತ ತಾಂ ತಾಂ ಪ್ರಾಪ್ನೋತಿ ಮಾನವಃ ॥೫೧॥
ಚೈತ್ರಕೃಷ್ಣ ಪ್ರತಿಪದಿ ತತ್ರ ಯಾತ್ರಾ ಪ್ರಯತ್ನತಃ ।
ಕ್ಷೇತ್ರವಿಘ್ನಪ್ರಶಾಂತ್ಯರ್ಥಂ ಕರ್ತವ್ಯಾ ಪುಣ್ಯಕೃಜ್ಜನೈಃ ॥ ೫೨ ॥
ಯಾತ್ರಾಂ ಚ ಸಾಂವತ್ಸರಿಕೀಂ ಯೋ ನ ಕುರ್ಯಾದವಜ್ಞಯಾ ।
ತಸ್ಯ ವಿಘ್ನಂ ಪ್ರಯಚ್ಛಂತಿ ಯೋಗಿನ್ಯಃ ಕಾಶಿವಾಸಿನಃ ॥ ೫೩ ॥
ಅಗ್ರೇ ಕೃತ್ವಾ ಸ್ಥಿತಾಃ ಸರ್ವಾಸ್ತಾಃ ಕಾಶ್ಯಾಂ ಮಣಿಕರ್ಣಿಕಾಂ ।
ತನ್ನಮಸ್ಕಾರಮಾತ್ರೇಣ ನರೋ ವಿಘ್ನೈರ್ನಬಾಧ್ಯತೇ ॥ ೫೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಚತುಃಷಷ್ಟಿಯೋಗಿನ್ಯಾಗಮನಂ"
ನಾಮ ಪಂಚಚತ್ವಾರಿಂಶೋಽಧ್ಯಾಯಃ

---

೫೦–೫೧. ಭಕ್ತಿಯಿಂದ ಪ್ರಣವಾದಿಯೂ, ಚತುರ್ಥ್ಯಂತವೂ ಆದ ನಾಮುಗಳಿಂದ ರಾತ್ರಿ ನೂರೆಂಟುಸಾರಿ ಸಣ್ಣಬದರೀಫಲದಷ್ಟು ಪ್ರಮಾಣದ ಹವಿಸ್ಸಿನಿಂದ ಗುಗ್ಗುಲು, ತುಪ್ಪಗಳೊಡನೆ ಪ್ರತ್ಯೇಕವಾಗಿ ಹೋಮಿಸಿದ ಮಾನವನು ಇಷ್ಟಾರ್ಥಸಿದ್ಧಿಯನ್ನು ಹೊಂದುವನು.

೫೨. ಪುಣ್ಯವಂತರಾದ ಮಾನವರು ಚೈತ್ರ ಬಹುಳ ಪಾಡ್ಯದ ದಿನ ಪ್ರಯತ್ನದಿಂದ ಕ್ಷೇತ್ರವಿಘ್ನಶಾಂತಿಗಾಗಿ ಅಲ್ಲಿ ಯಾತ್ರೆಯನ್ನು ಮಾಡಬೇಕು.

೫೩. ಅನಾದರದಿಂದ ಹೀಗೆ ಸಾಂವತ್ಸರಿಕಯಾತ್ರೆಯನ್ನು ಮಾಡದ ಮಾನವನಿಗೆ ಕಾಶಿಯಲ್ಲಿ ವಾಸಿಸುವ ಯೋಗಿನಿಯರು ವಿಘ್ನವನ್ನುಂಟುಮಾಡುವರು.

೫೪. ಆ ಯೋಗಿನಿಯರು ಕಾಶಿಯಲ್ಲಿ ಮಣಿಕರ್ಣಿಕೆಯನ್ನು ಮುಂದಿರಿಸಿಕೊಂಡೇ ವಾಸಿಸುತ್ತಿರುವರು. ಮನುಷ್ಯನು ಆ ಮಣಿಕರ್ಣಿಕೆಯನ್ನು ವಂದಿಸುವುದರಿಂದಲೇ ವಿಘ್ನಪೀಡಿತನಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಚತುಷಷ್ಟಿಯೋಗಿನ್ಯಾಗಮನ"ವೆಂಬ
ನಲವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್ಚತ್ವಾರಿಂಶೋಽಧ್ಯಾಯಃ

### ಲೋಲಾರ್ಕವರ್ಣನಂ

ಸ್ಕಂದ ಉವಾಚ :—

**ಗತೇಽಥ ಯೋಗಿನೀವೃಂದೇ ದೇವದೇವೋ ಘಟೋದ್ಭವ ।**
**ಕಾಶೀಪ್ರವೃತ್ತಿಂ ಜಿಜ್ಞಾಸುಃ ಪ್ರಾಹಿಣೋದಂಶುಮಾಲಿನಂ ॥ ೧ ॥**

ದೇವದೇವ ಉವಾಚ :—

**ಸಪ್ತಾಽಶ್ವ ತ್ವರಿತೋ ಯಾಹಿ ಪುರೀಂ ವಾರಾಣಸೀಂ ಶುಭಾಂ ।**
**ಯತ್ರಾಽಸ್ತಿ ಸ ದಿವೋದಾಸೋ ಧರ್ಮಮೂರ್ತಿರ್ಮಹೀಪತಿಃ ॥ ೨ ॥**
**ತಸ್ಯ ಧರ್ಮವಿರೋಧೇನ ಯಥಾ ತತ್ಕ್ಷೇತ್ರಮುದ್ವಸೇತ್ ।**
**ತಥಾ ಕುರುಷ್ವ ಭೋಃ ಕ್ಷಿಪ್ರಂ ಮಾಽವಮಂಸ್ಥಾಃ ಶ್ಚ ತಂ ನೃಪಂ ॥ ೩ ॥**
**ಧರ್ಮಮಾರ್ಗಪ್ರವೃತ್ತಸ್ಯ ಕ್ರಿಯತೇ ಯಾಽವಮಾನನಾ ।**
**ಸಾ ಭವೇದಾತ್ಮನೋ ನೂನಂ ಮಹದೇನಶ್ಚ ಜಾಯತೇ ॥ ೪ ॥**
**ತವ ಬುದ್ಧಿವಿಕಾಸೇನ ಚ್ಯವತೇ ಚೇತ್ಸಧರ್ಮತಃ ।**
**ತದಾ ಸಾ ನಗರೀ ಭಾನೋ ತ್ವಯೋದ್ವಾಸ್ಯಾಽಸಹ್ಯೈಃ ಕರೈಃ ॥ ೫ ॥**

---

## ಕನ್ನಡದ ಅನುವಾದ

### ಲೋಲಾರ್ಕವರ್ಣನ

೧. ಸ್ಕಂದನು ಹೇಳುತ್ತಾನೆ :—ಅಗಸ್ತ್ಯ ! ಯೋಗಿನಿಯರು ಹೊರಟುಹೋದ ತರುವಾಯ ಮಹೇಶ್ವರನು ಕಾಶಿಯ ವೃತ್ತಾಂತವನ್ನರಿಯಲಿಚ್ಛಿಸಿ ಸೂರ್ಯನನ್ನು ಅಲ್ಲಿಗೆ ಕಳುಹಿಸಿದನು.

೨. ಮಹೇಶ್ವರನು ಹೇಳುತ್ತಾನೆ :—''ಅಯ್ಯಾ ಸೂರ್ಯನೆ ! ಧರ್ಮಮೂರ್ತಿಯಾದ ದಿವೋದಾಸನು ವಾಸವಾಗಿರುವ ಮಂಗಳಕರವಾದ ಕಾಶೀಪುರಿಗೆ ಶೀಘ್ರವಾಗಿ ತೆರಳು.

೩. ಆ ರಾಜನ ಧರ್ಮವನ್ನು ಕೆಡಿಸಿ ಅವನು ಆ ಕಾಶೀಕ್ಷೇತ್ರದಿಂದ ಹೊರಡುವಂತೆ ಮಾಡು. ಆದರೆ ಅವನನ್ನು ಅವಮಾನಮಾಡಬೇಡ.

೪. ಧರ್ಮಮಾರ್ಗನಿರತನಾದವನಿಗೆ ಅವಮಾನಮಾಡಿದರೆ ಅದು ತನಗೇ ಹಿಂತಿರುಗುವುದು. ಅದರಿಂದ ಮಹಾಪಾಪವೂ ಸಂಭವಿಸುವುದು.

೫. ನಿನ್ನ ಬುದ್ಧಿವಿಕಾಸದಿಂದ ಆ ಅರಸನು ಧರ್ಮಭ್ರಷ್ಟನಾದರೆ ಮಾತ್ರ ನೀನು ಸಹಿಸಲಾಗದ ನಿನ್ನ ಕಿರಣಗಳಿಂದ ಆ ಕಾಶೀನಗರವನ್ನು ದಹಿಸು.

ಕಾಮಕ್ರೋಧೌ ಲೋಭಮೋಹೌ ಮತ್ಸರಾಽಹಂಕೃತೀ ಅಪಿ ।
ತೇ ತತ್ರ ನಭವೇತಾಂ ಯತ್ತತ್ಕಾಲೋಽಪಿ ನ ತಂ ಜಯೇತ್ ॥ ೬ ॥
ಯಾವದ್ಧರ್ಮೇ ಸ್ಥಿರಾ ಬುದ್ಧಿರ್ಯಾವದ್ಧರ್ಮೇ ಸ್ಥಿರಂ ಮನಃ ।
ತಾವದ್ವಿಘ್ನೋದಯಃ ಕ್ವಾಽಸ್ತಿ ವಿಪದ್ಯಪಿ ರವೇ ನೃಷು ॥ ೭ ॥
ಸರ್ವೇಷಾಮಿಹ ಜಂತೂನಾಂ ತ್ವಂ ವೇತ್ಸಿ ಬ್ರಧ್ನ ಚೇಷ್ಟಿತಂ ।
ಅತ ಏವ ಜಗಚ್ಚಕ್ಷುರ್ವ್ರಜ ತ್ವಂ ಕಾರ್ಯಸಿದ್ಧಯೇ ॥ ೮ ॥
ರವಿರಾದಾಯ ದೇವಾಜ್ಞಾಂ ಮೂರ್ತಿಮನ್ಯಾಂ ಪ್ರಕಲ್ಪ್ಯ ಚ ।
ನಭೋಧ್ವಗಾಮಹೋರಾತ್ರಂ ಕಾಶೀಮಭಿಮುಖೋಽಭವತ್ ॥ ೯ ॥
ಮನಸಾಽತೀವ ಲೋಲೋಽಭೂತ್ಕಾಶೀದರ್ಶನಲಾಲಸಃ ।
ಸಹಸ್ರಚರಣೋಽಪ್ಯೈಚ್ಛತ್ತದಾ ಖೇ ನೈಕಪಾದತಾಂ ॥ ೧೦ ॥
ಹಂಸತ್ವಂ ತಸ್ಯ ಸೂರ್ಯಸ್ಯ ತದಾ ಸಫಲತಾಮಗಾತ್ ।
ಸದಾ ನಭೋಧ್ವನೀನಸ್ಯ ಕಾಶೀಂ ಪ್ರತಿಯಿಯಾಸತಃ ॥ ೧೧ ॥
ಅಥ ಕಾಶೀಂ ಸಮಾಸಾದ್ಯ ರವಿರಂತರ್ಬಹಿಶ್ಚರನ್ ।
ಮನಾಗಪಿ ನ ತದ್ಭೂಪೇ ಧರ್ಮಧ್ವಸ್ತಿಮವೈಕ್ಷತ ॥ ೧೨ ॥

---

೬. ಅವನಲ್ಲಿ ಕಾಮ, ಕ್ರೋಧ, ಲೋಭ, ಮೋಹ, ಮತ್ಸರ, ಅಹಂಕಾರಗಳುಂಟಾಗದಿರುವುದರಿಂದ ಯಮನೂ ಅವನನ್ನು ಜಯಿಸಲಾರನು.

೭. ಭಾಸ್ಕರ! ಆಪತ್ತಿನಲ್ಲಿಯೂ ಧರ್ಮದಲ್ಲಿ ಸ್ಥಿರಬುದ್ಧಿ, ದೃಢಮನಸ್ಸುಗಳಿರುವವರಿಗೆ ಮನುಷ್ಯರಿಗೆ ವಿಘ್ನಗಳು ಹೇಗುಂಟಾಗುವುವು?

೮. ಅಯ್ಯಾ ಸೂರ್ಯನೆ! ನೀನು ಈ ಪ್ರಪಂಚದಲ್ಲಿರುವ ಸಕಲ ಪ್ರಾಣಿಗಳ ಕಾರ್ಯಗಳನ್ನು ತಿಳಿಯುವೆ. ಆದುದರಿಂದಲೇ ನೀನು ಜಗಚ್ಚಕ್ಷುವು. ಆದುದರಿಂದ ಈಗ ಕಾರ್ಯಸಿದ್ಧಿಗಾಗಿ ಕಾಶಿಗೆ ಹೊರಡು.''

೯. ಸೂರ್ಯನು ಮಹೇಶ್ವರನ ಆದೇಶವನ್ನು ಪರಿಗ್ರಹಿಸಿ ಆಕಾಶಮಾರ್ಗದಲ್ಲಿ ಸಂಚರಿಸುವ ಮತ್ತೊಂದು ಶರೀರವನ್ನು ಕಲ್ಪಿಸಿಟ್ಟು ತಾನು ಕಾಶಿಗೆ ಅಭಿಮುಖನಾದನು.

೧೦. ಅವನು ಕಾಶಿಯನ್ನು ನೋಡುವಾಶೆಯಿಂದ ಅತ್ಯಂತ ಚಂಚಲಚಿತ್ತನಾಗಿ ಸಾವಿರ ಪಾದಗಳುಳ್ಳವನಾಗಿದ್ದರೂ ತಾನು ಮತ್ತೆ ಅನೇಕ ಪಾದಗಳುಳ್ಳವನಾಗಬೇಕೆಂದು ಬಯಸಿದನು.

೧೧. ಯಾವಾಗಲೂ ಆಕಾಶಮಾರ್ಗದಿಂದ ಕಾಶಿಗೆ ಹೋಗುತ್ತಿರುವ ಆ ಸೂರ್ಯನಿಗೆ ಹಂಸತ್ವವು ಆಗ ಸಫಲವಾಯಿತು.

೧೨. ಬಳಿಕ ಸೂರ್ಯನು ಕಾಶಿಯನ್ನು ಹೊಂದಿ ಒಳಗೂ ಹೊರಗೂ ಸಂಚರಿಸುತ್ತ ಆ ದಿವೋದಾಸನಲ್ಲಿ ಸ್ವಲ್ಪವೂ ಧರ್ಮಭ್ರಷ್ಟತೆಯನ್ನು ಕಾಣಲಿಲ್ಲ.

ವಿಭಾವಸುರ್ವರ್ಷಸನ್ಕ್ಯಾಶ್ಯಾಂ ನಾನಾರೂಪೇಣ ವತ್ಸರಂ ।
ಕ್ವಚಿನ್ನಾಽವಸರಂ ಪ್ರಾಪ ತತ್ರ ರಾಜ್ಞಿ ಸುಧರ್ಮಿಣಿ ॥ ೧೩ ॥
ಕದಾಚಿದತಿಥಿರ್ಭೂತೋ ದುರ್ಲಭಂ ಪ್ರಾರ್ಥಯನ್ರವಿಃ ।
ನ ತಸ್ಯ ರಾಜ್ಞೋ ವಿಷಯೇ ದುರ್ಲಭಂ ಕಿಂಚಿದೈಕ್ಷತ ॥ ೧೪ ॥
ಕದಾಚಿದ್ಯಾಚಕೋ ಜಾತೋ ಬಹುದೋಽಪಿ ಕದಾಽಪ್ಯಭೂತ್ ।
ಕದಾಚಿದ್ದೀನತಾಂ ಪ್ರಾಪ್ತಃ ಕದಾಚಿದ್ಗಣಕೋಽಪ್ಯಭೂತ್ ॥ ೧೫ ॥
ವೇದಬಾಹ್ಯಾಂ ಕ್ರಿಯಾಂ ಚಾಽಪಿ ಕದಾಚಿತ್ಪ್ರತ್ಯಪಾದಯತ್ ।
ಕದಾಚಿತ್ಸ್ಥಾಪಯಾಮಾಸ ದೃಷ್ಟಪ್ರತ್ಯಯಮೈಹಿಕಂ ॥ ೧೬ ॥
ಕದಾಚಿಜ್ಜಟಿಲೋ ಜಾತಃ ಕದಾಚಿಚ್ಚ ದಿಗಂಬರಃ ।
ಸ ಕದಾಚಿಜ್ಜಾಂಗುಲಿಕೋ ವಿಷವಿದ್ಯಾವಿಶಾರದಃ ॥ ೧೭ ॥
ಸರ್ವಪಾಷಂಡಧರ್ಮಜ್ಞಃ ಕದಾಚಿದ್ಬ್ರಹ್ಮವಾದ್ಯಭೂತ್ ।
ಐಂದ್ರಜಾಲಿಕ ಆಸೀಚ್ಚ ಕದಾಚಿದ್ಭ್ರಾಮಯಂಜನಾನ್ ॥ ೧೮ ॥
ನಾನಾವ್ರತೋಪದೇಶೈಶ್ಚ ಕದಾಚಿತ್ಸಪತಿವ್ರತಾಃ ।
ಕ್ಷೋಭಯಾಮಾಸ ಬಹುಶಃ ಸದೃಷ್ಟಾಂತಕಥಾನಕೈಃ ॥ ೧೯ ॥

---

೧೩. ಸೂರ್ಯನು ಕಾಶಿಯಲ್ಲಿ ನಾನಾ ರೂಪದಿಂದ ಒಂದುವರ್ಷಕಾಲ ವಾಸಿಸುತ್ತ ಧರ್ಮಿಷ್ಠನಾದ ಆ ದೊರೆಯಲ್ಲಿ ಯಾವ ಛಿದ್ರವನ್ನೂ ಹೊಂದಲಿಲ್ಲ.

೧೪. ಅವನು ಒಂದು ದಿನ ಸಿಕ್ಕದಿರುವುದನ್ನು ಬೇಡುವುದಕ್ಕೋಸ್ಕರ ಆ ರಾಜನಿಗೆ ಅತಿಥಿಯಾಗಿ ಅವನ ದೇಶದಲ್ಲಿ ದುರ್ಲಭವಾದುದನ್ನೇ ಕಾಣಲಿಲ್ಲ ;

೧೫. ಒಂದು ಸಾರಿ ಯಾಚಕನೂ, ಒಂದು ಸಾರಿ ಬಹುವಾಗಿ ದಾನಮಾಡುವವನೂ, ಒಂದು ಸಲ ದೀನನೂ, ಒಂದು ಸಾರಿ ಜೋಯಿಸನೂ ಆಗಿ ಆ ದೊರೆಯನ್ನು ಪರೀಕ್ಷಿಸಿದನು ;

೧೬–೧೮. ಒಂದು ಸಾರಿ ವೇದಬಾಹ್ಯಕ್ರಿಯೆಯನ್ನು ಪ್ರತಿಪಾದಿಸುವವನೂ, ಒಂದು ಸಾರಿ ಚಾರ್ವಾಕಮತವನ್ನು ಸ್ಥಾಪಿಸುವವನೂ, ಒಂದು ಸಲ ಸನ್ಯಾಸಿಯೂ, ಒಂದು ಸಾರಿ ದಿಗಂಬರನೂ, ಒಂದು ಬಾರಿ ವಿಷವಿದ್ಯೆಯನ್ನರಿತ ವಿಷವೈದ್ಯನೂ, ಒಂದು ಸಾರಿ ಸಮಸ್ತ ಪಾಷಂಡಧರ್ಮವನ್ನರಿತವನೂ, ಒಂದು ಸಾರಿ ವೇದವನ್ನು ಹೇಳುವವನೂ, ಒಂದು ಸಾರಿ ಜನರಿಗೆ ಭ್ರಾಂತಿಯನ್ನುಂಟು ಮಾಡುವ ಇಂದ್ರಜಾಲ ವಿದ್ಯೆಯನ್ನು ತಿಳಿದವನೂ ಆದನು ;

೧೯. ಒಂದು ಸಾರಿ ಪತಿವ್ರತೆಯರನ್ನು ದೃಷ್ಟಾಂತಸಹಿತವಾದ ಅನೇಕ ವ್ರತೋಪದೇಶಗಳಿಂದ ಚಂಚಲಚಿತ್ತರನ್ನಾಗಿ ಮಾಡಿದನು.

ಕಾಪಾಲಿಕವ್ರತಧರಃ ಕದಾಚಿಚ್ಚಾಽಭವದ್ದ್ವಿಜಃ ।
ಕದಾಚಿದಪಿ ವಿಜ್ಞಾನೀ ಧಾತುವಾದೀ ಕದಾಚನ ॥ ೨೦ ॥
ಕ್ವಚಿದ್ವಿಪ್ರಃ ಕ್ವಚಿದ್ರಾಜಪುತ್ರೋ ವೈಶ್ಯೋಽಂತ್ಯಜಃ ಕ್ವಚಿತ್ ।
ಬ್ರಹ್ಮಚಾರೀ ಕ್ವಚಿದಭೂದ್ಗೃಹೀ ವನಚರಃ ಕ್ವಚಿತ್ ॥ ೨೧ ॥
ಯತಿಃ ಕದಾಚಿದಿತಿ ಸ ರೂಪೈರಭ್ರಾಮಯಜ್ಜನಾನ್ ।
ಸರ್ವವಿದ್ಯಾಸು ಕುಶಲಃ ಸರ್ವಜ್ಞಶ್ಚಾಭವತ್ಕ್ವಚಿತ್ ॥ ೨೨ ॥
ಇತಿ ನಾನಾವಿಧೈ ರೂಪೈಶ್ಚರನ್ಕಾಶ್ಯಾಂ ಗ್ರಹೇಶ್ವರಃ ।
ನಕದಾಽಪಿ ಜನೇ ಕ್ವಾಽಪಿ ಛಿದ್ರಂ ಪ್ರಾಪ ಕದಾಚನ ॥ ೨೩ ॥
ತತೋ ನಿನಿಂದ ಚಾತ್ಮಾನಂ ಚಿಂತಾರ್ತಃ ಕಶ್ಯಪಾತ್ಮಜಃ ।
ಧಿಕ್ಪರಪ್ರೇಷ್ಯತಾಂ ಯಸ್ಯಾಂ ಯಶೋಲಭ್ಯೇತ ನ ಕ್ವಚಿತ್ ॥ ೨೪ ॥

ಮಾರ್ತಂಡ ಉವಾಚ :—

ಮಂದರಂ ಯದಿ ಯಾಮ್ಯದ್ಯ ಸದ್ಯಸ್ತತ್ಕ್ರುದ್ಧ್ಯತೀಶ್ವರಃ ।
ಅನಿಷ್ಪಾದಿತ ಕಾರ್ಯಾರ್ಥೇ ಮಯಿ ಸಾಮಾನ್ಯಭೃತ್ಯವತ್ ॥ ೨೫ ॥
ಕೋಪಮುಪ್ಯುರರೀಕೃತ್ಯ ಯದಿ ಯಾಯಾಂ ಕಥಂಚನ ।
ಕಥಂ ತಿಷ್ಠೇ ಪುರಸ್ತಸ್ಯ ತರ್ಹಿ ವೈ ಮೂಢಭೃತ್ಯವತ್ ॥ ೨೬ ॥

---

೨೦. ಒಂದು ಸಾರಿ ಕಾಪಾಲಿಕವ್ರತವನ್ನು ಧರಿಸಿದ ಬ್ರಾಹ್ಮಣನೂ, ಒಂದು ಸಾರಿ ಬ್ರಹ್ಮಜ್ಞಾನಿಯೂ, ಒಂದು ಸಾರಿ ಧಾತುವಾದಿಯೂ ಆದನು ;

೨೧. ಒಂದೆಡೆಯಲ್ಲಿ ಬ್ರಾಹ್ಮಣನೂ, ಒಂದೆಡೆಯಲ್ಲಿ ರಾಜಕುಮಾರನೂ, ಒಂದೆಡೆಯಲ್ಲಿ ವೈಶ್ಯನೂ, ಒಂದೆಡೆಯಲ್ಲಿ ಚಂಡಾಲನೂ, ಒಂದೆಡೆಯಲ್ಲಿ ಬ್ರಹ್ಮಚಾರಿಯೂ, ಒಂದೆಡೆಯಲ್ಲಿ ಗೃಹಸ್ಥನೂ, ಒಂದೆಡೆಯಲ್ಲಿ ವನವಾಸಿಯೂ ಆದನು ;

೨೨. ಒಂದು ಸಾರಿ ಯತಿಯಾಗಿ ಜನರನ್ನು ಭ್ರಾಂತಿಗೊಳಿಸಿದನು ; ಒಂದೆಡೆಯಲ್ಲಿ ಸಮಸ್ತ ವಿದ್ಯಾಕುಶಲನೂ, ಸರ್ವಜ್ಞನೂ ಆದನು.

೨೩. ಹೀಗೆ ನಾನಾ ವಿಧ ರೂಪಗಳಿಂದ ಕಾಶಿಯಲ್ಲಿ ಸಂಚರಿಸುತ್ತಬಂದರೂ ಅವನು ಒಂದು ಸಾರಿಯೂ ಜನರಲ್ಲಿ ಧರ್ಮಲೋಪವನ್ನು ಕಾಣಲಿಲ್ಲ.

೨೪. ಬಳಿಕ ಕಶ್ಯಪಸುತನಾದ ಆ ಸೂರ್ಯನು ಚಿಂತಾಕ್ರಾಂತನಾಗಿ ತನ್ನನ್ನು ತಾನೇ ನಿಂದಿಸಿಕೊಂಡನು : "ಪರರ ಸೇವೆಯು ನಿಂದ್ಯವಾದುದು. ಈ ಸೇವೆಯಲ್ಲಿ ಒಂದೆಡೆಯಲ್ಲಿಯೂ ಕೀರ್ತಿಯು ದೊರೆಯುವುದಿಲ್ಲ."

೨೫. ಮಾರ್ತಂಡನು ಹೇಳುತ್ತಾನೆ:—ನಾನೀಗ ಮಂದರಾಚಲಕ್ಕೆ ಹೋದರೆ ಈಶ್ವರನು ಕಾರ್ಯವನ್ನು ನಿರ್ವಾಹಮಾಡದ ನನ್ನಲ್ಲಿ ಸಾಮಾನ್ಯ ಸೇವಕನಲ್ಲಿ ಹೇಗೋ ಹಾಗೆ ಕೋಪಿಸಿಕೊಳ್ಳುವನು.

೨೬. ಕೋಪವನ್ನೂ ಒಪ್ಪಿಕೊಂಡು ಹೇಗಾದರೂ ಅಲ್ಲಿಗೆ ಹೋದರೂ ಮೂಢಭೃತ್ಯನಂತೆ ಅವನ ಮುಂದೆ ಹೇಗೆತಾನೇ ನಿಲ್ಲಲಾದೀತು ?

ಅಥೋಂಕೃತ್ಯಾಽವಹೇಲಂ ವಾ ಯಾಮಿ ಚೇಚ್ಚ ಕಥಂಚನ ।
ಕ್ರೋಧಾಗ್ನಿರೀಕ್ಷೇತ್ತ್ರ್ಯಕ್ಷೋ ಮಾಂ ವಿಷಂ ಪೇಯಂ ತದಾ ಮಯಾ ॥
ಹರಕೋಪಾನಲೇ ನೂನಂ ಯದಿ ಯಾತಃ ಪತಂಗತಾಂ ।
ಪಿತಾಮಹೋಽಪಿ ಮಾಂ ತ್ರಾತುಂ ತದಾ ಶಕ್ಷ್ಯತಿ ನ ಸ್ಫುಟಂ ॥ ೨೮ ॥
ಸ್ಥಾಸ್ಯಾಮ್ಯತ್ರೈವ ತನ್ನಿತ್ಯಂ ನತ್ಯಕ್ಷ್ಯಾಮಿ ಕದಾಚನ ।
ಕ್ಷೇತ್ರಸನ್ಯಾಸವಿಧಿನಾ ವಾರಾಣಸ್ಯಾಂ ಕೃತಾಶ್ರಮಃ ॥ ೨೯ ॥
ಪುರಃ ಪುರಾರೇಃ ಕಾರ್ಯಾರ್ಥಮನಿವೇದ್ಯೇಹ ತಿಷ್ಠತಃ ।
ಯತ್ಪಾಪಂ ಭಾವಿ ಮೇ ತಸ್ಯ ಕಾಶೀ ಪಾಪಸ್ಯ ನಿಷ್ಕೃತಿಃ ॥ ೩೦ ॥
ಅನ್ಯಾನ್ಯಪಿ ಚ ಪಾಪಾನಿ ಮಹಾಂತ್ಯಲ್ಪಾನಿ ಯಾನಿ ಚ ।
ಕ್ಷಯಂತಿ ತಾನಿ ಸರ್ವಾಣಿ ಕಾಶೀಂ ಪ್ರವಿಶತಾಂ ಸತಾಂ ॥ ೩೧ ॥
ಬುದ್ಧಿಪೂರ್ವಂ ಮಯಾ ಚೈತನ್ನ ಪಾಪಂ ಸಮುಪಾರ್ಜಿತಂ ।
ಪುರಾರಿಣೈವ ಪುರಾಽಽಶಾಸಿ ಧರ್ಮೋ ಹಿ ರಕ್ಷ್ಯತಾಂ ॥ ೩೨ ॥
ಧರ್ಮೋ ಹಿ ರಕ್ಷಿತೋ ಯೇನ ದೇಹೇ ಸತ್ವರಗತ್ವರೇ ।
ತ್ರೈಲೋಕ್ಯಂ ರಕ್ಷಿತಂ ತೇನ ಕಿಂ ಕಾಮಾರ್ಥೈಃ ಸುರಕ್ಷಿತೈಃ ॥ ೩೩ ॥

---

೨೭. ಒಂದುವೇಳೆ ಅವಮಾನವನ್ನು ಸಹಿಸಿಕೊಂಡು ನಾನು ಅಲ್ಲಿಗೆ ಹೋದರೆ ಮಹೇಶ್ವರನು ನನ್ನನ್ನು ಕೋಪದಿಂದ ನೋಡಿಯಾನು. ಆಗ ನಾನು ವಿಷವನ್ನೇ ಕುಡಿಯಬೇಕಾಗುವುದು.

೨೮. ನಾನು ಆ ಶಿವನ ಕೋಪಾಗ್ನಿಯಿಂದ ಪತಂಗದಂತೆ ಬೂದಿಯಾದರೆ ಬ್ರಹ್ಮನೂ ನನ್ನನ್ನು ಕಾಪಾಡಲು ಸಮರ್ಥನಾಗುವುದಿಲ್ಲ.

೨೯. ಆದುದರಿಂದ ನಾನು ಇಲ್ಲಿಯೇ ಕ್ಷೇತ್ರಸನ್ನ್ಯಾಸವಿಧಿಯಿಂದ ಸನ್ನ್ಯಾಸಾಶ್ರಮವನ್ನು ಸ್ವೀಕರಿಸಿ ವಾಸಿಸುವೆನು. ಯಾವಾಗಲೂ ಇದನ್ನು ಬಿಡುವುದಿಲ್ಲ.

೩೦. ಮಹೇಶ್ವರನಿಗೆ ಕಾರ್ಯರೂಪಾರ್ಥವನ್ನು ತಿಳಿಸದೆ ಇಲ್ಲಿರುವುದರಿಂದ ನನಗುಂಟಾಗುವ ಪಾಪವು ಕಾಶೀವಾಸದಿಂದ ಪರಿಹಾರವಾಗುವುದು.

೩೧. ಸಜ್ಜನರ ಇತರ ಅಲ್ಪಪಾಪಗಳೂ, ಮಹಾಪಾಪಗಳೂ ಕಾಶೀಪ್ರವೇಶದಿಂದಲೇ ನಾಶವಾಗುವುವು.

೩೨. ನಾನು ಬುದ್ಧಿಪೂರ್ವಕವಾಗಿ ಈ ಪಾಪವನ್ನೆಸಗಲಿಲ್ಲ. ಮಹೇಶ್ವರನೇ ಹಿಂದೆ ಧರ್ಮವನ್ನು ರಕ್ಷಿಸೆಂದು ನನಗೆ ಆಜ್ಞೆಮಾಡಿರುವನು.

೩೩. ನಶ್ವರವಾದ ಈ ದೇಹದಿಂದ ಧರ್ಮವನ್ನು ರಕ್ಷಿಸಿದವನು ಮೂರು ಲೋಕಗಳನ್ನೂ ರಕ್ಷಿಸಿದವನಾಗುವನು. ಚೆನ್ನಾಗಿ ಕಾಪಾಡಿದ ಕಾಮ ಮತ್ತು ಅರ್ಥಗಳಿಂದೇನುತಾನೆ ಪ್ರಯೋಜನ?

ರಕ್ಷಣೀಯೋ ಯದಿ ಭವೇತ್ಕಾಮಃ ಕಾಮಾರಿಣಾ ಕಥಂ ।
ಕ್ಷಣಾದಸಂಗತಾಂ ನೀತೋ ಬಹೂನಾಂ ಸುಖಕಾರ್ಯಪಿ ॥ ೩೪ ॥
ಅರ್ಥಶ್ಚೇತ್ಸರ್ವಥಾ ರಕ್ಷ್ಯ ಇತಿ ಕೈಶ್ಚಿದುದಾಹೃತಂ ।
ತತ್ಕಥಂ ನ ಹರಿಶ್ಚಂದ್ರೋಽರಕ್ಷತ್ಕೌಶಿಕನಂದನೇ ॥ ೩೫ ॥
ಧರ್ಮಸ್ತು ರಕ್ಷಿತಃ ಸರ್ವೈರಪಿ ದೇಹವ್ಯಯೇನ ಚ ।
ಶಿಬಿಪ್ರಭೃತಿಭೂಪಾಲೈರ್ದಧೀಚಿಪ್ರಮುಖೈರ್ದ್ವಿಜೈಃ ॥ ೩೬ ॥
ಅಯಮೇವಹಿ ಮೇ ಧರ್ಮಃ ಕಾಶೀಸೇವನಸಂಭವಃ ।
ರುಷಿತಾದಪಿ ರುದ್ರಾನ್ಮಾಂ ರಕ್ಷಿಷ್ಯತಿ ನ ಸಂಶಯಃ ॥ ೩೭ ॥
ಅವಾಪ್ಯ ಕಾಶೀಂ ದುಷ್ಪ್ರಾಪಾಂ ಕೋ ಜಹಾತಿ ಸಚೇತನಃ ।
ರತ್ನಂ ಕರಸ್ಥಮುತ್ಸೃಜ್ಯ ಕಃ ಕಾಚಂ ಸಂಜಿಘೃಕ್ಷತಿ ॥ ೩೮ ॥
ವಾರಾಣಸೀಂ ಸಮುತ್ಸೃಜ್ಯ ಯಸ್ತ್ವನ್ಯತ್ರ ಯಿಯಾಸತಿ ।
ಹತ್ವಾ ನಿಧಾನಂ ಪಾದೇನ ಸೋಽರ್ಥಮಿಚ್ಛತಿ ಭಿಕ್ಷಯಾ ॥ ೩೯ ॥
ಪುತ್ರಮಿತ್ರಕಲತ್ರಾಣಿ ಕ್ಷೇತ್ರಾಣಿ ಚ ಧನಾನಿ ಚ ।
ಪ್ರತಿಜನ್ಮೇಹ ಲಭ್ಯಂತೇ ಕಾಶ್ಯೇಕಾ ನೈವ ಲಭ್ಯತೇ ॥ ೪೦ ॥

---

೩೪. ಕಾಮವು ರಕ್ಷಿಸಲರ್ಹವಾದರೆ ಕಾಮಾರಿಯಾದ ಶಿವನು ಸಕಲ ಜನರಿಗೂ ಸುಖವನ್ನುಂಟುಮಾಡುವ ಮನ್ಮಥನನ್ನು ಕೂಡಲೆ ಏಕೆ ನಾಶಗೊಳಿಸಿದನು ?

೩೫. ಕೆಲವರು ಹೇಳುವಂತೆ ದ್ರವ್ಯವು ರಕ್ಷಿಸಲರ್ಹವಾದರೆ ಹರಿಶ್ಚಂದ್ರನು ವಿಶ್ವಾಮಿತ್ರನ ವಿಷಯದಲ್ಲಿ ದ್ರವ್ಯವನ್ನು ಕಾಪಾಡಿಕೊಳ್ಳಲಿಲ್ಲವೇಕೆ.

೩೬–೩೭. ಶಿಬಿ ಮೊದಲಾದ ರಾಜರೂ, ದಧೀಚಿ ಮೊದಲಾದ ಬ್ರಾಹ್ಮಣರೂ ಎಲ್ಲರೂ ದೇಹನಾಶದಿಂದಲೂ ಧರ್ಮವನ್ನು ಕಾಪಾಡಿರುವರು. ನನಗೆ ಈ ಕಾಶೀಸೇವನೆಯೇ ಧರ್ಮವಾಗಿರುವುದು. ಇದು ಕೋಪಗೊಂಡ ರುದ್ರನವೆಸೆಯಿಂದಲೂ ನನ್ನನ್ನು ನಿಶ್ಚಯವಾಗಿಯೂ ಕಾಪಾಡುವುದು.

೩೮. ಜ್ಞಾನಿಯಾದ ಯಾವನುತಾನೆ ಹೊಂದಲಶಕ್ಯವಾದ ಕಾಶಿಯನ್ನು ಸೇರಿಯೂ ಅದನ್ನು ಬಿಡ ಬಯಸುವನು ? ಕೈಯಲ್ಲಿರುವ ರತ್ನವನ್ನು ತ್ಯಜಿಸಿ ಗಾಜನ್ನು ತೆಗೆದುಕೊಳ್ಳಲು ಯಾವನು ಬಯಸುವನು ?

೩೯. ಯಾವನು ಕಾಶಿಯನ್ನು ಬಿಟ್ಟು ಇತರ ಕಡೆಗಳಿಗೆ ಹೋಗಲಿಚ್ಛಿಸುವನೊ ಅವನು ನಿಧಿಯನ್ನು ಕಾಲಿನಿಂದ ತುಳಿದು ಭಿಕ್ಷೆಯಿಂದ ದ್ರವ್ಯವನ್ನು ಗಳಿಸಲಿಚ್ಛಿಸುವನು.

೪೦. ಪುತ್ರ, ಮಿತ್ರ, ಪತ್ನೀ, ಹೊಲಗದ್ದೆಗಳು, ದ್ರವ್ಯಗಳು ಇವು ಪ್ರತಿ ಜನ್ಮದಲ್ಲಿಯೂ ದೊರೆಯುವುವು. ಕಾಶಿಯು ಮಾತ್ರ ದೊರೆಯುವುದಿಲ್ಲ.

ಯೇನ ಲಬ್ಧಾ ಪುರೀ ಕಾಶೀ ತ್ರೈಲೋಕ್ಯೋದ್ಧರಣಕ್ಷಮಾ ।
ತ್ರೈಲೋಕ್ಯೈಶ್ವರ್ಯದುಷ್ಪ್ರಾಪಂ ತೇನ ಲಬ್ಧಂ ಮಹಾಸುಖಂ ॥ ೪೧ ॥
ಕುಪಿತೋಽಪಿ ಹಿ ಮೇ ರುದ್ರಸ್ತೇಜೋಹಾನಿಂ ವಿಧಾಸ್ಯತಿ ।
ಕಾಶ್ಯಾಂ ಚ ಲಪ್ಸ್ಯೇ ತತ್ತೇಜೋ ಯದ್ವೈ ಸ್ವಾತ್ಮಾವಬೋಧಜಂ ॥೪೨॥
ಇತರಾಣೀಹ ತೇಜಾಂಸಿ ಭಾಸಂತೇ ತಾವದೇವ ಹಿ ।
ಖದ್ಯೋತಾಭಾನಿ ಯಾವನ್ನೋ ಜೃಂಭತೇ ಕಾಶಿಜಂ ಮಹಃ ॥ ೪೩ ॥
ಇತಿ ಕಾಶೀಪ್ರಭಾವಜ್ಞೋ ಜಗಚ್ಚಕ್ಷುಸ್ತಮೋನುದಃ ।
ಕೃತ್ವಾ ದ್ವಾದಶಧಾಽಽತ್ಮಾನಂ ಕಾಶೀಪುರ್ಯಾಂ ವ್ಯವಸ್ಥಿತಃ ॥ ೪೪ ॥
ಲೋಲಾರ್ಕ ಉತ್ತರಾರ್ಕಶ್ಚ ಸಾಂಬಾದಿತ್ಯಸ್ತಥೈವಚ ।
ಚತುರ್ಥೋ ದ್ರುಪದಾದಿತ್ಯೋ ಮಯೂಖಾದಿತ್ಯ ಏವ ಚ ॥ ೪೫ ॥
ಖಖೋಲ್ಕಶ್ಚಾರುಣಾದಿತ್ಯೋ ವೃದ್ಧಕೇಶವ ಸಂಜ್ಞಕೌ ।
ದಶಮೋ ವಿಮಲಾದಿತ್ಯೋ ಗಂಗಾದಿತ್ಯಸ್ತಥೈವಚ ॥ ೪೬ ॥
ದ್ವಾದಶಶ್ಚ ಯಮಾದಿತ್ಯಃ ಕಾಶೀಪುರ್ಯಾಂ ಘಟೋದ್ಭವ ।
ತಮೋಽಧಿಕೇಭ್ಯೋ ದುಷ್ಟೇಭ್ಯಃ ಕ್ಷೇತ್ರಂ ರಕ್ಷಂತ್ಯಮೀ ಸದಾ ॥ ೪೭ ॥
ತಸ್ಯಾರ್ಕಸ್ಯ ಮನೋಲೋಲಂ ಯದಾಸೀತ್ಕಾಶಿದರ್ಶನೇ ।
ಅತೋ ಲೋಲಾರ್ಕ ಇತ್ಯಾಖ್ಯಾ ಕಾಶ್ಯಾಂ ಜಾತಾ ವಿವಸ್ವತಃ ॥ ೪೮ ॥

---

೪೧. ಯಾವನು ಮೂರು ಲೋಕಗಳನ್ನು ಉದ್ಧರಿಸಲು ಸಮರ್ಥವಾದ ಕಾಶಿಯನ್ನು ಪಡೆಯುವನೊ, ಅವನು ಮೂರು ಲೋಕದ ಐಶ್ವರ್ಯಗಳಿಂದಲೂ ಹೊಂದಲಶಕ್ಯವಾದ ಮಹಾಸುಖವನ್ನು ಪಡೆಯುವನು.

೪೨. ಕುಪಿತನಾದ ರುದ್ರನು ನನ್ನ ತೇಜಸ್ಸನ್ನು ನಾಶಗೊಳಿಸಿದರೂ ಕಾಶಿಯಲ್ಲಿ ಆತ್ಮಜ್ಞಾನದಿಂದ ಆ ತೇಜಸ್ಸು ಮತ್ತೆ ಲಭಿಸುವುದು.

೪೩–೪೪. ಕಾಶಿಯಿಂದುಂಟಾದ ತೇಜಸ್ಸು ಪ್ರಜ್ವಲಿಸುವವರೆಗೆ ಮಿಣುಕು ಹುಳುಗಳಂತಿರುವ ಇತರ ತೇಜಸ್ಸುಗಳೂ ಪ್ರಕಾಶಿಸುವುವು. ಕಾಶಿಯ ಪ್ರಭಾವವನ್ನರಿತ ಅಂಧಕಾರಾತಿಯಾದ ಸೂರ್ಯನು ಹೀಗೆ ಆಲೋಚಿಸಿ ತನ್ನನ್ನು ಹನ್ನೆರಡು ಬಗೆಯಾಗಿ ವಿಭಾಗಿಸಿಕೊಂಡು ಕಾಶಿಯಲ್ಲಿ ನೆಲೆಸಿದನು.

೪೫–೪೭. ಅಯ್ಯಾ ಅಗಸ್ತ್ಯನೆ! ಲೋಲಾರ್ಕ, ಉತ್ತರಾರ್ಕ, ಸಾಂಬಾದಿತ್ಯ, ದ್ರುಪದಾದಿತ್ಯ, ಮಯೂಖಾದಿತ್ಯ, ಖಖೋಲ್ಕ, ಅರುಣಾದಿತ್ಯ, ವೃದ್ಧಾದಿತ್ಯ, ಕೇಶವಾದಿತ್ಯ, ವಿಮಲಾದಿತ್ಯ, ಗಂಗಾದಿತ್ಯ, ಯಮಾದಿತ್ಯ ಎಂಬ ಹನ್ನೆರಡು ಮಂದಿ ಆದಿತ್ಯರು ಆ ಕ್ಷೇತ್ರವನ್ನು ಅತ್ಯಂತ ತಾಮಸರಾದ ದುಷ್ಟರಿಂದ ಯಾವಾಗಲೂ ರಕ್ಷಿಸುವರು.

೪೮. ಸೂರ್ಯನಿಗೆ ಕಾಶಿಯನ್ನು ನೋಡಿದ ಕೂಡಲೆ ಮನಸ್ಸು ಚಂಚಲವಾದುದರಿಂದ ಅವನಿಗೆ ಲೋಲಾರ್ಕನೆಂದು ಹೆಸರಾಯಿತು.

ಲೋಲಾರ್ಕಸ್ತ್ವಸಿಸಂಭೇದೇ ದಕ್ಷಿಣಸ್ಯಾಂ ದಿಶಿ ಸ್ಥಿತಃ ।
ಯೋಗಕ್ಷೇಮಂ ಸದಾ ಕುರ್ಯಾತ್ಕಾಶೀವಾಸಿಜನಸ್ಯ ಚ ॥ ೪೯ ॥
ಮಾರ್ಗಶೀರ್ಷಸ್ಯ ಸಪ್ತಮ್ಯಾಂ ಷಷ್ಠ್ಯಾಂ ವಾ ರವಿವಾಸರೇ ।
ವಿಧಾಯ ವಾರ್ಷಿಕೀಂ ಯಾತ್ರಾಂ ನರಃ ಪಾಪೈಃ ಪ್ರಮುಚ್ಯತೇ ॥ ೫೦ ॥
ಕೃತಾನಿ ಯಾನಿ ಪಾಪಾನಿ ನರೈಃ ಸಂವತ್ಸರಾಽವಧಿ ।
ನಶ್ಯಂತಿ ಕ್ಷಣತಸ್ತಾನಿ ಷಷ್ಠ್ಯರ್ಕೇ ಲೋಲದರ್ಶನಾತ್ ॥ ೫೧ ॥
ನರಃ ಸ್ನಾತ್ವಾಸಿಸಂಭೇದೇ ಸಂತರ್ಪ್ಯ ಪಿತೃದೇವತಾಃ ।
ಶ್ರಾದ್ಧಂ ವಿಧಾಯ ವಿಧಿನಾ ಪಿತ್ರ್ಯಾನೃಣ್ಯಮವಾಪ್ನುಯಾತ್ ॥ ೫೨ ॥
ಲೋಲಾರ್ಕಸಂಗಮೇ ಸ್ನಾತ್ವಾ ದಾನಂ ಹೋಮಂ ಸುರಾರ್ಚನಂ ।
ಯತ್ಕಿಂಚಿತ್ಕ್ರಿಯತೇ ಕರ್ಮ ತದಾನಂತ್ಯಾಯ ಕಲ್ಪತೇ ॥ ೫೩ ॥
ಸೂರ್ಯೋಪರಾಗೇ ಲೋಲಾರ್ಕೇ ಸ್ನಾನದಾನಾದಿಕಾಃ ಕ್ರಿಯಾಃ ।
ಕುರುಕ್ಷೇತ್ರಾದ್ದಶಗುಣಾ ಭವಂತೀಹ ನ ಸಂಶಯಃ ॥ ೫೪ ॥
ಲೋಲಾರ್ಕೇ ರಥಸಪ್ತಮ್ಯಾಂ ಸ್ನಾತ್ವಾ ಗಂಗಾಸಿಸಂಗಮೇ ।
ಸಪ್ತಜನ್ಮಕೃತೈಃ ಪಾಪೈರ್ಮುಕ್ತೋ ಭವತಿ ತತ್ಕ್ಷಣಾತ್ ॥ ೫೫ ॥
ಪ್ರತ್ಯರ್ಕವಾರಂ ಲೋಲಾರ್ಕಂ ಯಃ ಪಶ್ಯತಿ ಶುಚಿವ್ರತಃ ।
ನ ತಸ್ಯ ದುಃಖಂ ಲೋಕೇಽಸ್ಮಿನ್ಕದಾಚಿತ್ಸಂಭವಿಷ್ಯತಿ ॥ ೫೬ ॥

---

೪೯. ಈ ಲೋಲಾರ್ಕನು ಅಸಿಸಂಭೇದದಲ್ಲಿ ದಕ್ಷಿಣ ದಿಕ್ಕಿನಲ್ಲಿದ್ದು ಕಾಶಿಯಲ್ಲಿ ವಾಸಿಸುವ ಜನರ ಯೋಗಕ್ಷೇಮವನ್ನು ನೋಡಿಕೊಳ್ಳುವನು.

೫೦. ಮಾರ್ಗಶೀರ್ಷಮಾಸದ ಸಪ್ತಮಿಯಾ ಅಥವಾ ಷಷ್ಠೀ ಭಾನುವಾರದ ದಿನ ಇಲ್ಲಿ ವಾರ್ಷಿಕಯಾತ್ರೆಯನ್ನೆಸಗಿದವನು ಪಾಪಮುಕ್ತನಾಗುವನು.

೫೧. ಈ ಷಷ್ಠೀ ಭಾನುವಾರದ ದಿನ ಲೋಲಾರ್ಕನನ್ನು ದರ್ಶನಮಾಡುವುದರಿಂದ ಒಂದುವರ್ಷ ಕಾಲದಲ್ಲಿ ಮಾಡಿದ ಪಾಪಗಳು ಕೂಡಲೆ ನಾಶವಾಗುವುವು.

೫೨. ಅಸಿಸಂಭೇದದಲ್ಲಿ ಮಿಂದು ಪಿತೃದೇವತೆಗಳಿಗೆ ತರ್ಪಣಮಾಡಿ ವಿಧಿಯಂತೆ ಶ್ರಾದ್ಧಮಾಡಿದ ಮನುಷ್ಯನು ಪಿತೃಋಣದಿಂದ ಮುಕ್ತನಾಗುವನು.

೫೩. ಲೋಲಾರ್ಕನೆಡೆಯಲ್ಲಿ ಮಿಂದು ಮಾಡಿದ ದಾನ, ಹೋಮ, ದೇವಪೂಜೆಗಳು ಅನಂತವಾಗುವುವು.

೫೪. ಸೂರ್ಯಗ್ರಹಣಕಾಲದಲ್ಲಿ ಇಲ್ಲಿ ಮಾಡಿದ ಸ್ನಾನ, ದಾನ ಮೊದಲಾದುವುಗಳು ಕುರುಕ್ಷೇತ್ರಕ್ಕಿಂತಲೂ ಹತ್ತರಷ್ಟು ವೃದ್ಧಿಯಾಗುವುವು.

೫೫. ನರನು ರಥಸಪ್ತಮಿಯ ದಿನ ಲೋಲಾರ್ಕ ಗಂಗಾಸಂಗಮದಲ್ಲಿ ಮಿಂದರೆ ಕೂಡಲೆ ಏಳು ಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಮುಕ್ತನಾಗುವನು.

೫೬. ಪ್ರತಿ ಭಾನುವಾರದ ದಿನವೂ ಶುದ್ಧನಾಗಿ ಲೋಲಾರ್ಕನನ್ನು ದರ್ಶನಮಾಡಿದವನಿಗೆ ಈ ಲೋಕದಲ್ಲಿ ದುಃಖವು ಒಂದುವೇಳೆಯೂ ಉಂಟಾಗುವುದಿಲ್ಲ.

ಸತ್ಯ ನ ದುಃಖಂ ನೋಪಾಮಾ ನದದ್ರು ರ್ನವಿಚರ್ಚಿಕಾ ।
ಲೋಲಾರ್ಕಮರ್ಕೇ ಯಃ ಪಶ್ಯೇತ್ತತ್ಪಾದೋದಕಸೇವಕಃ ॥ ೫೭ ॥
ವಾರಾಣಸ್ಯಾಮುಷಿತ್ವಾಽಪಿ ಯೋ ಲೋಲಾರ್ಕಂ ನ ಸೇವತೇ ।
ಸೇವಂತೇ ತಂ ನರಂ ನೂನಂ ಕ್ಲೇಶಾಃ ಕ್ಷುದ್ವ್ಯಾಧಿಸಂಭವಾಃ ॥ ೫೮ ॥
ಸರ್ವೇಷಾಂ ಕಾಶಿತೀರ್ಥಾನಾಂ ಲೋಲಾರ್ಕಃ ಪ್ರಥಮಂ ಶಿರಃ ।
ತತೋಽಂಗಾನ್ಯನ್ಯತೀರ್ಥಾನಿ ತಜ್ಜಲಪ್ಲಾವಿತಾನಿ ಹಿ ॥ ೫೯ ॥
ತೀರ್ಥಾಂತರಾಣಿ ಸರ್ವಾಣಿ ಭೂಮಿಾವಲಯಗಾನ್ಯಪಿ ।
ಅಸಿಸಂಭೇದತೀರ್ಥಸ್ಯ ಕಲಾಂ ನಾಽರ್ಹಂತಿ ಷೋಡಶೀಂ ॥ ೬೦ ॥
ಸರ್ವೇಷಾಮೇವ ತೀರ್ಥಾನಾಂ ಸ್ನಾನಾದ್ಯಲ್ಲಭ್ಯತೇ ಫಲಂ ।
ತತ್ಫಲಂ ಸಮ್ಯಗಾಪ್ಯೇತ ನರೈರ್ಗಂಗಾಽಸಿಸಂಗಮೇ ॥ ೬೧ ॥
ನಾರ್ಥವಾದೋಽಯಮುದಿತಃ ಸ್ತುತಿವಾದೋ ನವೈ ಮುನೇ ।
ಸತ್ಯಂ ಯಥಾರ್ಥವಾದೋಽಯಂ ಶ್ರದ್ಧೇಯಃ ಸದ್ಭಿರಾದರಾತ್ ॥ ೬೨ ॥
ಯತ್ರ ವಿಶ್ವೇಶ್ವರಃ ಸಾಕ್ಷಾದ್ಯತ್ರ ಸ್ವರ್ಗತರಂಗಿಣೀ ।
ಮಿಥ್ಯಾ ತತ್ರಾಽನುಮನ್ಯಂತೇ ತಾರ್ಕಿಕಾಶ್ಚಾನಸೂಯಕಾಃ ॥ ೬೩ ॥
ಉದಾಹರಂತಿ ಯೇ ಮೂಢಾಃ ಕುತರ್ಕಬಲದರ್ಪಿತಾಃ ।
ಕಾಶ್ಯಾಂ ಸರ್ವೇಽರ್ಥವಾದೋಽಯಂ ತೇ ವಿಟ್ಕೀಟಾ ಯುಗೇ ಯುಗೇ ॥

---

೫೭. ಭಾನುವಾರದ ದಿನ ಆ ಲೋಲಾರ್ಕನನ್ನು ನೋಡಿ ಅವನ ಪಾದೋದಕವನ್ನು ಸೇವಿಸಿದವನಿಗೆ ದುಃಖವೂ, ಕಜ್ಜಿ ತುರಿಗಳೂ, ಕುಷ್ಠವೂ, ಉಂಟಾಗುವುದಿಲ್ಲ.

೫೮. ಕಾಶಿಯಲ್ಲಿ ವಾಸಿಸುತ್ತಿದ್ದರೂ ಲೋಲಾರ್ಕನನ್ನು ಸೇವಿಸದ ಮಾನವನನ್ನು ಹಸಿವು ಮೊದಲಾದ ರೋಗಗಳಿಂದುಂಟಾದ ದುಃಖಗಳು ಪೀಡಿಸುವುವು.

೫೯. ಕಾಶಿಯಲ್ಲಿರುವ ಸಮಸ್ತತೀರ್ಥಗಳಿಗೆಲ್ಲ ಲೋಲಾರ್ಕತೀರ್ಥವು ಮೊದಲನೆಯ ಶಿರಸ್ಸು. ಅದರ ಜಲದಿಂದ ಸೇರಿದ ಇತರ ತೀರ್ಥಗಳು ಅಂಗಗಳು.

೬೦. ಭೂಮಂಡಲದಲ್ಲಿರುವ ಸಕಲ ತೀರ್ಥಗಳೂ ಅಸಿಸಂಭೇದತೀರ್ಥದ ಹದಿನಾರನೆಯ ಒಂದು ಕಲೆಗೂ ಸಮಾನಗಳಲ್ಲ.

೬೧. ಸಕಲ ತೀರ್ಥಗಳಲ್ಲಿಯೂ ಸ್ನಾನಮಾಡುವುದರಿಂದುಂಟಾಗುವ ಫಲವು ಗಂಗಾಸಿಸಂಗಮದಲ್ಲಿ ಲಭಿಸುವುದು.

೬೨. ಮುನಿಯೆ! ನಾನೀಗ ಹೇಳಿರುವುದು ಅರ್ಥವಾದ ಸ್ತುತಿವಾದಗಳಲ್ಲ; ನಿಜವಾಗಿಯೂ ಯಥಾರ್ಥವಾದವು. ಸಜ್ಜನರು ಇದನ್ನು ಆದರದಿಂದ ನಂಬಬೇಕು.

೬೩. ಅಸೂಯೆಯುಳ್ಳ ತಾರ್ಕಿಕರು ವಿಶ್ವೇಶ್ವರನೂ, ಅಮರಗಂಗೆಯೂ ಇರುವುದು ಸುಳ್ಳೆಂದು ಅನುಮಾನದಿಂದ ವಾದಿಸುವರು.

೬೪. ಕುತರ್ಕಬಲದಿಂದ ಅಹಂಕಾರಗೊಂಡ ಯಾವ ಮೂಢರು ಕಾಶಿ

ಕಸ್ಯಚಿತ್ಕಾಶಿತೀರ್ಥಸ್ಯ ಮಹಿಮ್ನೋ ಮಹತಸ್ತುಲಾಂ ।
ನಾಽಧಿರೋಹೇನ್ಮುನೇ ನೂನಮಪಿ ತ್ರೈಲೋಕ್ಯಮಂಡಪಃ ॥ ೬೫ ॥
ನಾಸ್ತಿಕಾ ವೇದಬಾಹ್ಯಾಶ್ಚ ಶಿಶ್ನೋದರಪರಾಯಣಾಃ ।
ಅಂತ್ಯಜಾತಾಶ್ಚ ಯೇ ತೇಷಾಂ ಪುರಃ ಕಾಶೀ ನ ವರ್ಣ್ಯತಾಂ ॥ ೬೬ ॥
ಲೋಲಾರ್ಕಕರನಿಷ್ಟಪ್ತಾ ಅಸಿಧಾರವಿಖಂಡಿತಾಃ ।
ಕಾಶ್ಯಾಂ ದಕ್ಷಿಣದಿಗ್ಭಾಗೇ ನವಿಶೇಯುರ್ಮಹಾಮಲಾಃ ॥ ೬೭ ॥
ಮಹಿಮಾನಮಿಮಂ ಶ್ರುತ್ವಾ ಲೋಲಾರ್ಕಸ್ಯ ನರೋತ್ತಮಃ ।
ನ ದುಃಖೀ ಜಾಯತೇ ಕ್ವಾಽಪಿ ಸಂಸಾರೇ ದುಃಖಸಾಗರೇ ॥ ೬೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಲೋಲಾರ್ಕವರ್ಣನಂ"ನಾಮ
ಷಟ್ಚತ್ವಾರಿಂಶೋಽಧ್ಯಾಯಃ

---

ಯಲ್ಲಿರುವ ಸಮಸ್ತವೂ ಅರ್ಥವಾದವೆಂದು ಸಾಧಿಸುವರೊ; ಅವರು ಪ್ರತಿಯುಗದಲ್ಲಿಯೂ ಅಮೇಧ್ಯದ ಕೀಟಗಳಾಗಿ ಹುಟ್ಟುವರು.

೬೫. ಮಹತ್ತಾದ ಒಂದು ಕಾಶೀತೀರ್ಥದ ಸಾಮ್ಯವನ್ನು ಮೂರು ಲೋಕಗಳೂ ಹೊಂದಲಾರವು.

೬೬. ನಾಸ್ತಿಕರು, ವೇದಬಾಹ್ಯರು, ಗುಹ್ಯೇಂದ್ರಿಯ, ಹೊಟ್ಟೆಗಳಲ್ಲಿ ಆಸಕ್ತರು, ಚಂಡಾಲರು ಇವರ ಮುಂದೆ ಕಾಶಿಯನ್ನು ವರ್ಣಿಸಬಾರದು.

೬೭. ಲೋಲಾರ್ಕನ ಕಿರಣಗಳಿಂದ ಸಂತಪ್ತರೂ, ಅಸೀನದಿಯ ಜಲಪ್ರವಾಹದಿಂದ ದಾರಿತಪ್ಪಿದವರೂ, ಕಾಶೀದ್ವೇಷಿಗಳೂ ಕಾಶಿಯ ದಕ್ಷಿಣ ದಿಗ್ಭಾಗವನ್ನು ಪ್ರವೇಶಿಸಬಾರದು.

೬೮. ಈ ಲೋಲಾರ್ಕನ ಮಹಿಮೆಯನ್ನು ಕೇಳಿದ ಮಾನವೋತ್ತಮನು ದುಃಖಸಮುದ್ರರೂಪವಾದ ಸಂಸಾರದಲ್ಲೆಲ್ಲಿಯೂ ದುಃಖಗೊಳ್ಳುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಲೋಲಾರ್ಕವರ್ಣನ" ವೆಂಬ
ನಲವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಚತ್ವಾರಿಂಶೋಽಧ್ಯಾಯಃ

## ಉತ್ತರಾರ್ಕವರ್ಣನಂ

ಸ್ಕಂದ ಉವಾಚ:—

**ಅಥೋತ್ತರಸ್ಯಾಮಾಶಾಯಾಂ ಕುಂಡಮರ್ಕಾಖ್ಯಮುತ್ತಮಂ ।**
**ತತ್ರ ನಾಮ್ನೋತ್ತರಾರ್ಕೇಣ ರಶ್ಮಿಮಾಲೀ ವ್ಯವಸ್ಥಿತಃ ॥ ೧ ॥**
**ತಾಪಯನ್ದುಃಖಸಂಘಾತಂ ಸಾಧೂನಾಪ್ಯಾಯಯನ್ರವಿಃ ।**
**ಉತ್ತರಾರ್ಕೋ ಮಹಾತೇಜಾಃ ಕಾಶೀಂ ರಕ್ಷತಿ ಸರ್ವದಾ ॥ ೨ ॥**
**ತತ್ರೇತಿಹಾಸೋ ಯೋ ವೃತ್ತಸ್ತಂ ನಿಶಾಮಯ ಸುವ್ರತ ।**
**ವಿಪ್ರಃ ಪ್ರಿಯವ್ರತೋ ನಾಮ ಕಶ್ಚಿದಾತ್ರೇಯವಂಶಜಃ ॥ ೩ ॥**
**ಆಸೀತ್ಕಾಶ್ಯಾಂ ಶುಭಾಚಾರಃ ಸದಾಽತಿಥಿಜನಪ್ರಿಯಃ ।**
**ಭಾರ್ಯಾ ಶುಭವ್ರತಾ ತಸ್ಯ ಬಭೂವಾಽತಿಮನೋಹರಾ ॥ ೪ ॥**
**ಭರ್ತೃಶುಶ್ರೂಷಣರತಾ ಗೃಹಕರ್ಮಸುಪೇಶಲಾ ।**
**ತಸ್ಯಾಂ ಸ ಜನಯಾಮಾಸ ಕನ್ಯಾಮೇಕಾಂ ಸುಲಕ್ಷಣಾಂ ॥ ೫ ॥**
**ಮೂಲರ್ಕ್ಷಪ್ರಥಮೇ ಪಾದೇ ತಥಾ ಕೇಂದ್ರೇ ಬೃಹಸ್ಪತೌ ।**
**ವವೃಧೇ ಸಾ ಗೃಹೇ ಪಿತ್ರೋಃ ಶುಕ್ಲೇ ಪಕ್ಷೇ ಯಥಾ ಶಶೀ ॥ ೬ ॥**

---

## ಕನ್ನಡದ ಅನುವಾದ

### ಉತ್ತರಾರ್ಕವರ್ಣನ

೧. ಸ್ಕಂದನು ಹೇಳುತ್ತಾನೆ:—ಕಾಶಿಯ ಉತ್ತರದಿಕ್ಕಿನಲ್ಲಿ ಉತ್ತಮವಾದ ಅರ್ಕಕುಂಡವಿರುವುದು. ಅಲ್ಲಿ ಸೂರ್ಯನು ಉತ್ತರಾರ್ಕನೆಂಬ ಹೆಸರಿನಿಂದ ನೆಲಸಿರುವನು.

೨. ಈ ಉತ್ತರಾರ್ಕನು ಭಕ್ತರ ದುಃಖಸಮೂಹವನ್ನು ನಿವಾರಿಸುತ್ತ, ಸಜ್ಜನರನ್ನು ಸಂತೋಷಗೊಳಿಸುತ್ತ ಯಾವಾಗಲೂ ಕಾಶಿಯನ್ನು ರಕ್ಷಿಸುವನು.

೩–೪. ಅಲ್ಲಿ ನಡೆದ ಒಂದು ಕಥೆಯನ್ನು ಕೇಳು. ಕಾಶಿಯಲ್ಲಿ ಆತ್ರೇಯ ವಂಶದಲ್ಲಿ ಜನಿಸಿದವನೂ, ಸದಾಚಾರಸಂಪನ್ನನೂ, ಅತಿಥಿಗಳಲ್ಲಿ ಪ್ರೀತಿಯುಳ್ಳವನೂ ಆದ ಪ್ರಿಯವ್ರತನೆಂಬ ಓರ್ವ ಬ್ರಾಹ್ಮಣನಿದ್ದನು. ಅವನಿಗೆ ಅತ್ಯಂತ ಸುಂದರಿಯಾದ ಶುಭವ್ರತೆಯೆಂಬ ಪತ್ನಿಯಿದ್ದಳು.

೫. ಪತಿಸೇವಾನಿರತಳೂ, ಮನೆಗೆಲಸದಲ್ಲಿ ಕುಶಲಳೂ ಆದ ಆ ಶುಭವ್ರತೆಯಲ್ಲಿ ಸುಲಕ್ಷಣೆಯೆಂಬ ಕನ್ಯೆಯು ಹುಟ್ಟಿದಳು.

೬. ಮೂಲಾನಕ್ಷತ್ರದ ಪ್ರಥಮಪಾದದಲ್ಲಿಯೂ, ಬೃಹಸ್ಪತಿಯು ಕೇಂದ್ರ

ಸುರೂಪಾ ವಿನಯಾಚಾರಾ ಪಿತ್ರೋಶ್ಚ ಪ್ರಿಯಕಾರಿಣೀ ।
ಅತೀವ ನಿಪುಣಾ ಜಾತಾ ಗೃಹೋಪಸ್ಕರಮಾರ್ಜನೇ ॥ ೭ ॥
ಯಥಾ ಯಥಾ ಸವ್ಯೈಧಿಷ್ಟ ಸಾ ಕನ್ಯಾ ಪಿತೃಮಂದಿರೇ ।
ತಥಾ ತಥಾ ಪಿತುಸ್ತಸ್ಯಾಶ್ಚಿಂತಾ ಸಂಪವೃಧೇತರಾಂ ॥ ೮ ॥
ಕಸ್ಮೈ ದೇಯಾ ವರಾ ಕನ್ಯಾ ಸುರಮ್ಯೇಯಂ ಸುಲಕ್ಷಣಾ ।
ಅಸ್ಯಾ ಅನುಗುಣೋ ಲಭ್ಯಃ ಕ್ವ ಮಯಾ ವರ ಉತ್ತಮಃ ॥ ೯ ॥
ಕುಲೇನ ವಯಸಾ ಚಾಽಪಿ ಶೀಲೇನಾಽಪಿ ಶ್ರುತೇನ ಚ ।
ರೂಪೇಣಾರ್ಥೇನ ಸಂಯುಕ್ತಃ ಕಸ್ಮೈ ದತ್ತಾ ಸುಖಂ ಲಭೇತ್ ॥ ೧೦ ॥
ಇತಿ ಚಿಂತಯತಸ್ತಸ್ಯ ಜ್ವರೋಽಭೂದತಿದಾರುಣಃ ।
ಯಚ್ಚಿಂತಾಖ್ಯೋ ಜ್ವರಃ ಪುಂಸಾಮೌಷಧೈರ್ನಾಽಪಿ ಶಾಮ್ಯತಿ ॥ ೧೧ ॥
ತನ್ಮೂಲರ್ಕ್ಷವಿಪಾಕೇನ ಚಿಂತಾಖ್ಯೇನ ಜ್ವರೇಣ ಚ ।
ಸ ವಿಪ್ರಃ ಪಂಚತಾಂ ಪ್ರಾಪ್ತಸ್ತ್ಯಕ್ತ್ವಾ ಸರ್ವಂ ಗೃಹಾದಿಕಂ ॥ ೧೨ ॥
ಪಿತರ್ಯುಪರತೇ ತಸ್ಯಾಃ ಕನ್ಯಾಯಾಃ ಸಾ ಜನನ್ಯಪಿ ।
ಶುಭವ್ರತಾ ಪರಿತ್ಯಜ್ಯ ತಾಂ ಕನ್ಯಾಂ ಪತಿಮನ್ವಗಾತ್ ॥ ೧೩ ॥

---

ದಲ್ಲಿರುವಾಗಲೂ ಜನಿಸಿದ ಆ ಸುಲಕ್ಷಣೆಯು ತವರುಮನೆಯಲ್ಲಿ ಶುಕ್ಲಪಕ್ಷದ ಚಂದ್ರನಂತೆ ಬೆಳೆದಳು.

೭–೮. ಸುಂದರಳೂ, ವಿನಯವುಳ್ಳವಳೂ, ತಂದೆತಾಯಿಗಳಿಗೆ ಹಿತವನ್ನು ಉಂಟುಮಾಡುವವಳೂ ಆದ ಸುಲಕ್ಷಣೆಯು ಮನೆಯ ಮಾರ್ಜನಾದಿ ಕೆಲಸಗಳಲ್ಲಿ ಅತ್ಯಂತ ನಿಪುಣಳಾದಳು. ಹೀಗೆ ಅವಳು ತಂದೆಯ ಮನೆಯಲ್ಲಿ ಬೆಳೆದಂತೆಲ್ಲ ಅವಳ ತಂದೆಗೆ ಹೀಗೆ ಅತ್ಯಂತ ಚಿಂತೆಯುಂಟಾಯಿತು.

೯. "ಸುಂದರಿಯಾದ ಈ ಸುಲಕ್ಷಣೆಯನ್ನು ಯಾರಿಗೆ ದಾನಮಾಡಲಿ? ಇವಳಿಗೆ ಅನುರೂಪನಾದ ಉತ್ತಮ ವರನು ನನಗೆಲ್ಲಿ ಸಿಕ್ಕುವನು?

೧೦. ಕುಲ, ವಯಸ್ಸು, ಶೀಲ, ವಿದ್ಯೆ, ರೂಪ, ದ್ರವ್ಯ ಇವುಗಳಿಂದ ಕೂಡಿದ ಯಾವನಿಗೆ ಇವಳನ್ನು ಕೊಟ್ಟರೆ ಇವಳು ಸುಖಗೊಳ್ಳುವಳು."

೧೧–೧೨. ಅವನು ಹೀಗೆ ಚಿಂತಿಸುತ್ತಿರಲು, ಅವನಿಗೆ ಅತಿದಾರುಣವಾದ ಜ್ವರವುಂಟಾಯಿತು. ಮನುಷ್ಯರ ಚಿಂತೆಯೆಂಬ ಜ್ವರವು ಔಷಧದಿಂದಲೂ ಶಾಂತವಾಗುವುದಿಲ್ಲವಷ್ಟೆ. ಪುತ್ರಿಯು ಮೂಲಾನಕ್ಷತ್ರದಲ್ಲಿ ಹುಟ್ಟಿದ್ದರಿಂದುಂಟಾದ ಚಿಂತಾಜ್ವರದಿಂದ ಆ ಬ್ರಾಹ್ಮಣನು ಮನೆ ಮೊದಲಾದುವುಗಳನ್ನೆಲ್ಲ ತ್ಯಜಿಸಿ ಮೃತನಾದನು.

೧೩. ಆ ಕನ್ಯೆಯು ತಂದೆಯು ಮಡಿಯಲು ತಾಯಿಯಾದ ಶುಭವ್ರತೆಯೂ ಮಗಳನ್ನು ಬಿಟ್ಟು ಪತಿಯನ್ನನುಸರಿಸಿದಳು.

**ಧರ್ಮೋಽಯಂ ಸಹಚಾರಿಣ್ಯಾ ಜೀವತಾಽಜೀವತಾಽಪಿವಾ ।**
**ಪತ್ಯಾ ಸಹೈವ ಸ್ಥಾತವ್ಯಂ ಪತಿವ್ರತಯುಜಾ ಸದಾ ॥ ೧೪ ॥**
**ನಾಽಪತ್ಯಂ ಪಾತಿ ನೋ ಮಾತಾ ನ ಪಿತಾ ನೈವ ಬಾಂಧವಾಃ ।**
**ಪತ್ಯುಶ್ಚರಣಶುಶ್ರೂಷಾ ಪಾಯಾದ್ವೈ ಕೇವಲಂ ಸ್ತ್ರಿಯಂ ॥ ೧೫ ॥**
**ಸುಲಕ್ಷಣಾಽಪಿ ದುಃಖಾರ್ತಾ ಪಿತ್ರೋಃ ಪಂಚತ್ವಮಾಪ್ತಯೋಃ ।**
**ಔರ್ಧ್ವದೈಹಿಕಮಾಪಾದ್ಯ ದಶಾಽಹಂ ವಿನಿವರ್ತ್ಯ ಚ ॥ ೧೬ ॥**
**ಚಿಂತಾಮವಾಪ ಮಹತೀಮನಾಥಾ ದೈನ್ಯಮಾಗತಾ ।**
**ಕಥಮೇಕಾಕಿನೀ ಪಿತ್ರಾ ಮಾತ್ರಾ ಹೀನಾ ಭವಾಂಬುಧೇಃ ॥ ೧೭ ॥**
**ದುಸ್ತರಂ ಪಾರಮಾಪ್ಸ್ಯಾಮಿ ಸ್ತ್ರೀತ್ವಂ ಸರ್ವಾಭಿಭಾವಿ ಯತ್ ।**
**ನ ಕಸ್ಮೈಚಿದ್ವರಾಯಾಽಹಂ ಪಿತೃಭ್ಯಾಂ ಪ್ರತಿಪಾದಿತಾ ॥ ೧೮ ॥**
**ತದದತ್ತಾ ಕಥಂ ಸ್ವೈರಮಹಮನ್ಯಂ ವರಂ ವೃಣೇ ।**
**ವೃತೋಽಪಿ ನ ಕುಲೀನಶ್ಚೇದ್ಗುಣವಾನ್ನಚ ಶೀಲವಾನ್ ॥ ೧೯ ॥**
**ಸ್ವಾಧೀನೋಽಪಿ ನ ತತ್ತೇನ ವೃತೇನಾಽಪಿ ಹಿ ಕಿಂ ಭವೇತ್ ।**
**ಇತಿ ಸಂಚಿಂತಯಂತೀ ಸಾ ರೂಪೌದಾರ್ಯಗುಣಾನ್ವಿತಾ ॥ ೨೦ ॥**
**ಯುವಭಿರ್ಬಹುಭಿರ್ನಿತ್ಯಂ ಪ್ರಾರ್ಥಿತಾಽಪಿ ಮುಹುರ್ಮುಹುಃ ।**
**ನ ಕಸ್ಯಾಽಪಿ ದದೌ ಬಾಲಾ ಪ್ರವೇಶಂ ನಿಜಮಾನಸೇ ॥ ೨೧ ॥**

---

೧೪. ಪತಿವ್ರತೆಯಾದ ಸ್ತ್ರೀಯು ಪತಿಯು ಬದುಕಿರಲಿ ಅಥವಾ ಮೃತನಾಗಲಿ ಅವನನ್ನೇ ಅನುಸರಿಸಬೇಕು. ಇದೇ ಧರ್ಮವು.

೧೫. ಹೆಂಗಸನ್ನು ಮಕ್ಕಳಾಗಲಿ, ತಾಯಿ, ತಂದೆ, ಬಂಧುಗಳಾಗಲಿ ಸಲಹುವುದಿಲ್ಲ. ಕೇವಲ ಪತಿಪಾದ ಸೇವೆಯೊಂದೇ ಅವಳನ್ನು ಕಾಪಾಡುವುದು.

೧೬–೧೮. ಸುಲಕ್ಷಣೆಯೂ ದುಃಖದಿಂದ ಮೃತರಾದ ತಂದೆ ತಾಯಿಗಳಿಗೆ ಉತ್ತರಕ್ರಿಯೆಯನ್ನು ಪೂರಯಿಸಿ ಹತ್ತು ದಿನಗಳನ್ನು ಕಳೆದು ಅನಾಥಳೂ, ದೀನಳೂ ಆಗಿ ಹೀಗೆ ಮಹಾಚಿಂತೆಯನ್ನು ಹೊಂದಿದಳು. "ಸ್ತ್ರೀತ್ವವು ಸಕಲರಿಗೂ ತಿರಸ್ಕಾರ್ಯವಾದುದರಿಂದ ತಂದೆ ತಾಯಿಗಳಿಲ್ಲದೆ ತಬ್ಬಲಿಯಾದ ನಾನು ದಾಟಲಾಗದ ಈ ಸಂಸಾರಸಮುದ್ರದ ದಡವನ್ನು ಹೇಗೆ ಹೊಂದಲಿ. ತಂದೆ ತಾಯಿಗಳು ನನ್ನನ್ನು ಯಾವ ವರನಿಗೂ ದಾನಮಾಡಲಿಲ್ಲ.

೧೯–೨೧. ಪಿತೃಗಳಿಂದ ದಾನಮಾಡಲ್ಪಡದ ನಾನು ಸ್ವೇಚ್ಛೆಯಾಗಿ ಬೇರೆ ವರನನ್ನು ಹೇಗೆ ವರಿಸಲಿ, ಹಾಗೆ ವರಿಸಿದರೂ ಅವನು ಕುಲೀನನೂ, ಗುಣವಂತನೂ, ಶೀಲವಂತನೂ, ಸ್ವಾಧೀನನೂ ಅಲ್ಲದಿದ್ದರೆ ಏನು ಪ್ರಯೋಜನ! ಹೀಗೆ ಆಲೋಚಿಸುತ್ತಿರುವ ಸುಂದರಿಯಾದ ಅವಳನ್ನು ಅನೇಕ ಮಂದಿ ಯುವಕರು ಪ್ರಾರ್ಥಿಸಿದರೂ ಅವಳು ಒಬ್ಬನಿಗೂ ತನ್ನ ಮನಸ್ಸಿನಲ್ಲಿ ಅವಕಾಶವನ್ನೀಯಲಿಲ್ಲ.

ಪಿತ್ರೋರುಪರತಿಂ ದೃಷ್ಟ್ವಾ ವಾತ್ಸಲ್ಯಂ ಚ ತಥಾವಿಧಂ ।
ನಿನಿಂದ ಬಹುಧಾತ್ಮಾನಂ ಸಂಸಾರಂ ಚ ನಿನಿಂದ ಹ ॥ ೨೨ ॥
ಯಾಭ್ಯಾಮುತ್ಪಾದಿತಾ ಚಾಽಹಂ ಯಾಭ್ಯಾಂ ಚ ಪರಿಪಾಲಿತಾ ।
ಪಿತರೌ ಕುತ್ರ ತೌ ಯಾತೌ ದೇಹಿನೋ ಧಿಗನಿತ್ಯತಾಂ ॥ ೨೩ ॥
ಅಹೋ ದೇಹೇಽಪ್ಯಹೋಂಗತ್ವಂ ಯಥಾ ಪಿತ್ರೋಃ ಪುರೋ ಮಮ ।
ಇತಿ ನಿಶ್ಚಿತ್ಯ ಸಾ ಬಾಲಾ ವಿಜಿತೇಂದ್ರಿಯಮಾನಸಾ ॥ ೨೪ ॥
ಬ್ರಹ್ಮಚರ್ಯಂ ದೃಢಂ ಕೃತ್ವಾ ತಪ ಉಗ್ರಂ ಚಚಾರ ಹ ।
ಉತ್ತರಾರ್ಕಸ್ಯ ದೇವಸ್ಯ ಸಮೀಪೇ ಸ್ಥಿರಮಾನಸಾ ॥ ೨೫ ॥
ತಸ್ಯಾಂ ತಪಸ್ಯಮಾನಾಯಾಮೇಕಾ ಛಾಗೀ ಲಘೀಯಸೀ ।
ತತ್ರ ಪ್ರತ್ಯಹಮಾಗತ್ಯ ತಿಷ್ಠೇತ್ತತ್ಪುರತೋಽಚಲಾ ॥ ೨೬ ॥
ತೃಣಪರ್ಣಾದಿಕಂ ಕಿಂಚಿತ್ಸಾಯಮಭ್ಯವಹೃತ್ಯ ಸಾ ।
ತತ್ಕುಂಡಸೀತಪಾನೀಯಂ ಸ್ವಸ್ವಾಮಿಸದನಂ ವ್ರಜೇತ್ ॥ ೨೭ ॥
ತತ ಇತ್ಥಂ ವ್ಯತೀತಾಸು ಪಂಚಷಾಸು ಸಮಾಸು ಚ ।
ಲೀಲಯಾ ವಿಚರನ್ನೇವ ತತ್ರ ದೇವ್ಯಾ ಸಹಾಗತಃ ॥ ೨೮ ॥
ಸನ್ನಿಧಾವುತ್ತರಾರ್ಕಸ್ಯ ತಪಸ್ಯಂತೀಂ ಸುಲಕ್ಷಣಾಂ ।
ಸ್ಥಾಣುವನ್ನಿಶ್ಚಲಾಂ ಸ್ಥಾಣುರದ್ರಾಕ್ಷೀತ್ತಪಸಾ ಕೃಶಾಂ ॥ ೨೯ ॥

---

೨೨. ಅವಳು ತಂದೆತಾಯಿಗಳ ಮೃತಿಯನ್ನೂ, ಅಂತಹ ಪ್ರೀತಿಯನ್ನೂ, ನೋಡಿ ತನ್ನನ್ನೂ, ಸಂಸಾರವನ್ನೂ ಬಹಳವಾಗಿ ನಿಂದಿಸಿದಳು.

೨೩. "ನನ್ನ ಜನನಕ್ಕೆ ಕಾರಣರೂ, ಪಾಲಕರೂ ಆದ ಆ ತಂದೆತಾಯಿಗಳು ಎಲ್ಲಿಗೆ ಹೋದರೊ! ಅಯ್ಯೋ, ಪ್ರಾಣಿಗಳ ಅನಿತ್ಯತೆಯು ನಿಂದ್ಯವಾದುದು.

೨೪–೨೫. ನನ್ನ ತಂದೆತಾಯಿಗಳ ದೇಹಾಂಗಗಳಂತೆ ನನ್ನ ದೇಹಾಂಗಗಳೂ ಮುಂದೆ ನಾಶವಾಗುವುವು" ಎಂದು ಅವಳು ನಿಶ್ಚಯಿಸಿ, ಜಿತೇಂದ್ರಿಯಳೂ, ದೃಢಬ್ರಹ್ಮಚರ್ಯೆಯುಳ್ಳವಳೂ ಆಗಿ ಉತ್ತರಾರ್ಕನ ಸನ್ನಿಧಿಯಲ್ಲಿ ಸ್ಥಿರಮನಸ್ಸಿನಿಂದ ಉಗ್ರತಪಸ್ಸನ್ನಾಚರಿಸಿದಳು.

೨೬. ಅವಳು ತಪಸ್ಸನ್ನಾಚರಿಸುತ್ತಿರಲು ಚಿಕ್ಕ ಆಡೊಂದು ಪ್ರತಿದಿನವೂ ಅಲ್ಲಿಗೆ ಬಂದು ಅವಳ ಮುಂದೆ ಅಲ್ಲಾಡದೆ ನಿಲ್ಲುತ್ತಿದ್ದಿತು.

೨೭. ಅದು ಸಾಯಂಕಾಲ ಸ್ವಲ್ಪಹೊತ್ತು ಹುಲ್ಲು ಎಲೆ ಮೊದಲಾದುವುಗಳನ್ನು ತಿಂದು ಆ ಅರ್ಕಕುಂಡದ ನೀರನ್ನು ಕುಡಿದು ತನ್ನ ಸ್ವಾಮಿಯ ಮನೆಗೆ ಹೋಗುತ್ತಿದ್ದಿತು.

೨೮–೨೯. ಬಳಿಕ ಹೀಗೆ ಐದಾರು ವರ್ಷಗಳು ಕಳೆಯಲು ಮಹೇಶ್ವರನು ದೇವಿಯೊಡನೆ ಲೀಲೆಯಿಂದ ಸಂಚರಿಸುತ್ತ ಅಲ್ಲಿಗೆ ಬಂದನು. ಆಗಲಾ ಶಿವನು

**ತತೋ ಗಿರಿಜಯಾ ಶಂಭುರ್ವಿಜ್ಞಪ್ತಃ ಕರುಣಾತ್ಮನಾ ।**
**ವರೇಣಾಽನುಗೃಹಾಣೇಮಾಂ ಬಂಧುಹೀನಾಂ ಸುಮಧ್ಯಮಾಂ ॥ ೩೦ ॥**
**ಶರ್ವಾಣೀಗಿರಮಾಕರ್ಣ್ಯ ತತಃ ಶರ್ವಃ ಕೃಪಾನಿಧಿಃ ।**
**ಸಮಾಧಿಮೀಲಿತಾಕ್ಷೀಂ ತಾಮುವಾಚ ವರದೋ ಹರಃ ॥ ೩೧ ॥**
**ಸುಲಕ್ಷಣೇ ಪ್ರಸನ್ನೋಽಸ್ಮಿ ವರಂ ವರಯ ಸುವ್ರತೇ ।**
**ಚಿರಂ ಖಿನ್ನಾಽಸಿ ತಪಸಾ ಕಸ್ತೇಽಸ್ತೀಹ ಮನೋರಥಃ ॥ ೩೨ ॥**
**ಸಾಽಪಿ ಶಂಭೋರ್ಗಿರಂ ಶ್ರುತ್ವಾ ಮುಖಪೀಯೂಷವರ್ಷಿಣೀಂ ।**
**ಮಹಾಸಂತಾಪಶಮನೀಂ ಲೋಚನೇ ಉದಮೀಲಯತ್ ॥ ೩೩ ॥**
**ತ್ರ್ಯಕ್ಷಂ ಪ್ರತ್ಯಕ್ಷಮಾವೀಕ್ಷ್ಯ ವರದಾನೋನ್ಮುಖಂ ಪುರಃ ।**
**ದೇವೀಂ ಚ ವಾಮಭಾಗಸ್ಥಾಂ ಪ್ರಣನಾಮ ಕೃತಾಂಜಲಿಃ ॥ ೩೪ ॥**
**ಕಿಂ ವೃಣೇ ಯಾವದಿತ್ಥಂ ಸಾ ಚಿಂತಯೇಚ್ಚಾರುಮಧ್ಯಮಾ ।**
**ತಾವತ್ತಯಾ ನಿರೈಕ್ಷಿಷ್ಟ ವರಾಕೀ ಬರ್ಕರೀ ಪುರಃ ॥ ೩೫ ॥**
**ಆತ್ಮಾರ್ಥಂ ಜೀವಲೋಕೇಽಸ್ಮಿನ್ಕೋ ನ ಜೀವತಿ ಮಾನವಃ ।**
**ಪರಂ ಪರೋಪಕಾರಾರ್ಥಂ ಯೋ ಜೀವತಿ ಸ ಜೀವತಿ ॥ ೩೬ ॥**

---

ಉತ್ತರಾರ್ಕನ ಬಳಿ ತಪಸ್ಸನ್ನು ಮಾಡುತ್ತಿರುವವಳೂ, ಮೋಟುಮರದಂತೆ ನಿಶ್ಚಲಳೂ, ತಪಸ್ಸಿನಿಂದ ಕೃಶಳೂ ಆದ ಆ ಸುಲಕ್ಷಣೆಯನ್ನು ಕಂಡನು.

೩೦. ತರುವಾಯ ಗಿರಿಜೆಯು "ಬಂಧುಗಳಿಲ್ಲದ ಸುಂದರಿಯಾದ ಇವಳಲ್ಲಿ ದಯೆಮಾಡಿ ವರವನ್ನು ಅನುಗ್ರಹಿಸು" ಎಂದು ಶಿವನನ್ನು ಪ್ರಾರ್ಥಿಸಿದಳು.

೩೧. ಬಳಿಕ ದಯಾಳುವೂ, ವರವನ್ನು ಕೊಡುವವನೂ ಆದ ಶಿವನು ಪಾರ್ವತಿಯ ಮಾತನ್ನು ಕೇಳಿ ಧ್ಯಾನದಿಂದ ಕಣ್ಣನ್ನು ಮುಚ್ಚಿಕೊಂಡಿರುವ ಅವಳನ್ನು ಕುರಿತು ಇಂತೆಂದನು.

೩೨. "ಎಲೌ ಸುಲಕ್ಷಣೆಯೆ! ನಾನು ನಿನಗೆ ಪ್ರಸನ್ನನಾಗಿರುವೆನು. ವರವನ್ನು ವರಿಸು. ತಪಸ್ಸಿನಿಂದ ಬಹಳಕಾಲ ವ್ಯಥೆಗೊಂಡಿರುವೆ. ನಿನ್ನ ಅಭೀಷ್ಟ ವಾವುದು?"

೩೩. ಅವಳು ಅಮೃತೋಪಮವೂ, ಅತಿಶಯ ಸಂತಾಪವನ್ನು ಹೋಗಲಾಡಿಸುವುದೂ ಆದ ಆ ಮಹೇಶನ ಮಾತನ್ನು ಕೇಳಿ ಕಣ್ಣುಗಳನ್ನು ತೆರೆದಳು.

೩೪. ಅವಳು ಪ್ರತ್ಯಕ್ಷನಾಗಿ ವರವನ್ನೀಯಲುದ್ಯುಕ್ತನಾದ ಶಿವನನ್ನೂ, ವಾಮಭಾಗದಲ್ಲಿರುವ ದೇವಿಯನ್ನೂ ನೋಡಿ ಕೈಮುಗಿದು ವಂದಿಸಿದಳು.

೩೫. ಸುಂದರಿಯಾದ ಆ ಸುಲಕ್ಷಣೆಯು ಏನನ್ನು ವರಿಸಲೆಂದು ಆಲೋಚಿಸುತ್ತಿರಲು ಮುಂದೆ ಆ ಆಡು ಕಾಣಿಸಿಕೊಂಡಿತು.

೩೬. ಲೋಕದಲ್ಲಿ ಯಾವ ಮನುಷ್ಯನು ತನಗಾಗಿ ಜೀವಿಸುವುದಿಲ್ಲ? ಪರೋಪಕಾರಕ್ಕಾಗಿ ಜೀವಿಸುವವನೇ ಒಳ್ಳೆಯ ಜೀವನವುಳ್ಳವನು.

ಅನಯಾ ಮತ್ತಪೋವೃತ್ತಿಸಾಕ್ಷಿಣ್ಯಾ ಬಹ್ವನೇಹಸಂ ।
ಅಸೇವ್ಯಹಂ ತದೇತಸ್ಯೈ ವರಯಾಮಿ ಜಗತ್ಪತಿಂ ॥ ೩೭ ॥
ಪರಾಮೃಶ್ಯ ಮನಸ್ಯೇತತ್ಪ್ರಾಹ ತ್ರ್ಯಕ್ಷಂ ಸುಲಕ್ಷಣಾ ।
ಕೃಪಾನಿಧೇ ಮಹಾದೇವ ಯದಿ ದೇಯೋ ವರೋ ಮಮ ॥ ೩೮ ॥
ಅಜಶಾವೀ ವರಾರ್ಕ್ಯೇಷಾ ತರ್ಹಿ ಪ್ರಾಗನುಗೃಹ್ಯತಾಂ ।
ವಕ್ತುಂ ಪಶುತ್ವಾನ್ನೋ ವೇತ್ತಿ ಕಿಂಚಿನ್ಮದ್ಭಕ್ತಿಪೇಶಲಾ ॥ ೩೯ ॥
ಇತಿ ವಾಚಂ ನಿಶಮ್ಯೇಶಃ ಪರೋಪಕೃತಿಶಾಲಿನೀಂ ।
ಸುಲಕ್ಷಣಾಯಾ ನಿತರಾಂ ತುತೋಷ ಪ್ರಣತಾರ್ತಿಹಾ ॥ ೪೦ ॥
ದೇವದೇವಸ್ತತಃ ಪ್ರಾಹ ದೇವಿ ಪಶ್ಯ ಗಿರೀಂದ್ರಜೇ ।
ಸಾಧೂನಾಮೀದೃಶೀ ಬುದ್ಧಿಃ ಪರೋಪಕರಣೋರ್ಜಿತಾ ॥ ೪೧ ॥
ತೇ ಧನ್ಯಾಃ ಸರ್ವಲೋಕೇಷು ಸರ್ವಧರ್ಮಾಶ್ರಯಾಶ್ಚ ತೇ ।
ಯತಂತೇ ಸರ್ವಭಾವೇನ ಪರೋಪಕರಣಾಯ ಯೇ ॥ ೪೨ ॥
ಸಂಚಯಾಃ ಸರ್ವವಸ್ತೂನಾಂ ಚಿರಂ ತಿಷ್ಠಂತಿ ನೋ ಕ್ವಚಿತ್ ।
ಸುಚಿರಂ ತಿಷ್ಠತೇ ಚೈಕಂ ಪರೋಪಕರಣಂ ಪ್ರಿಯೇ ॥ ೪೩ ॥

---

೩೭. "ನನ್ನ ತಪಸ್ಸಿಗೆ ಸಾಕ್ಷಿಯಾದ ಈ ಆಡು ಅನೇಕ ದಿವಸಗಳಿಂದಲೂ ನನ್ನನ್ನು ಸೇವಿಸಿರುವುದು. ಆದುದರಿಂದ ಇದಕ್ಕಾಗಿ ವರವನ್ನು ಕೇಳುವೆನು."

೩೮–೩೯. ಹೀಗೆ ಸುಲಕ್ಷಣೆಯು ಮನಸ್ಸಿನಲ್ಲಿ ಆಲೋಚಿಸಿ ಶಿವನನ್ನು ಕುರಿತು ಇಂತೆಂದಳು. "ದಯಾಳುವಾದ ಮಹಾದೇವನೆ! ನೀನು ನನಗೆ ವರವನ್ನು ಕೊಡುವುದಾದರೆ ಮೊದಲು ದೀನವಾದ ಈ ಆಡಿನ ಮರಿಯನ್ನು ಅನುಗ್ರಹಿಸು. ನನ್ನಲ್ಲಿ ಭಕ್ತಿಯುಳ್ಳ ಇದು ಪಶುವಾದುದರಿಂದ ಏನನ್ನೂ ಹೇಳಲು ತಿಳಿವಿರುವುದಿಲ್ಲ."

೪೦. ನಮಸ್ಕರಿಸಿದವರ ದುಃಖವನ್ನು ಪರಿಹರಿಸುವ ಈಶ್ವರನು ಸುಲಕ್ಷಣೆಯ ಪರೋಪಕಾರದ ಈ ಮಾತನ್ನು ಕೇಳಿ ಅತ್ಯಂತ ಆನಂದಗೊಂಡನು.

೪೧. ಬಳಿಕ ಅವನು ಇಂತೆಂದನು :—ಪಾರ್ವತಿಯೆ! ನೋಡು. ಸಾಧುಗಳಿಗೆ ಪರೋಪಕಾರದಲ್ಲಿ ಉತ್ಕೃಷ್ಟವಾದ ಇಂತಹ ಬುದ್ಧಿಯುಂಟಾಗುವುದು.

೪೨. ಸಂಪೂರ್ಣ ಮನಸ್ಸಿನಿಂದ ಪರೋಪಕಾರಕ್ಕಾಗಿ ಪ್ರಯತ್ನಿಸುವವರೇ ಸಮಸ್ತ ಲೋಕಗಳಲ್ಲಿಯೂ ಧನ್ಯರು. ಅವರೇ ಸಮಸ್ತ ಧರ್ಮಾಶ್ರಯರು.

೪೩. ಪ್ರಿಯಳೆ! ಸಕಲ ವಸ್ತುಸಂಗ್ರಹಗಳೂ ಬಹುಕಾಲ ಒಂದೆಡೆಯಲ್ಲಿರುವುದಿಲ್ಲ. ಪರೋಪಕಾರವೊಂದೇ ಬಹುಕಾಲ ನಿಲ್ಲುವುದು.

ಧನ್ಯಾ ಸುಲಕ್ಷಣಾ ಚೈಷಾ ಯೋಗ್ಯಾಽನುಗ್ರಹಕರ್ಮಣಿ ।
ಬ್ರೂಹಿ ದೇವಿ ವರೋ ದೇಯಃ ಕೋಽಸ್ಯೈ ಚ್ಛಾಗ್ಯೈ ಚ ಕಃ ಪ್ರಿಯೇ ॥೪೪॥
ಶ್ರೀ ದೇವ್ಯುವಾಚ :—
ಸರ್ವಸೃಷ್ಟಿಕೃತಾಂ ಕರ್ತಃ ಸರ್ವಜ್ಞ ಪ್ರಣತಾರ್ತಿಹನ್ ।
ಸುಲಕ್ಷಣಾ ಶುಭಾಚಾರಾ ಸಖೀ ಮೇಽಸ್ತು ಶುಭೋದ್ಯಮಾ ॥ ೪೫ ॥
ಯಥಾ ಜಯಾ ಚ ವಿಜಯಾ ಯಥಾ ಚೈವ ಜಯಂತಿಕಾ ।
ಶುಭಾನಂದಾ ಸುನಂದಾ ಚ ಕೌಮುದೀ ಚ ಯಥೋರ್ಮಿಲಾ ॥ ೪೬ ॥
ಯಥಾ ಚಂಪಕಮಾಲಾ ಚ ಯಥಾ ಮಲಯವಾಸಿನೀ ।
ಕರ್ಪೂರಲತಿಕಾ ಯದ್ವದ್ಗಂಧಧಾರಾ ಯಥಾ ಶುಭಾ ॥ ೪೭ ॥
ಅಶೋಕಾ ಚ ವಿಶೋಕಾ ಚ ಯಥಾ ಮಲಯಗಂಧಿನೀ ।
ಯಥಾ ಚಂದನನಿಃಶ್ವಾಸಾ ಯಥಾ ಮೃಗಮದೋತ್ತಮಾ ॥ ೪೮ ॥
ಯಥಾ ಚ ಕೋಕಿಲಾಽಽಲಾಪಾ ಯಥಾ ಮಧುರಭಾಷಿಣೀ ।
ಗದ್ಯಪದ್ಯನಿಧಿರ್ಯದ್ವದನುಕ್ತಜ್ಞಾ ಯಥಾ ಚ ಸಾ ॥ ೪೯ ॥
ದೃಗಂಚಲೇಂಗಿತಜ್ಞಾ ಚ ಯಥಾ ಕೃತಮನೋರಥಾ ।
ಗಾನಚಿತ್ತಹರಾ ಯದ್ವತ್ತಥಾಽಸ್ತ್ವೇಷಾ ಸುಲಕ್ಷಣಾ ॥ ೫೦ ॥
ಅತಿಪ್ರಿಯಾ ಭವಿತ್ರೀ ಮೇ ಯದ್ಬಾಲಬ್ರಹ್ಮಚಾರಿಣೀ ।
ಅನೇನೈವ ಶರೀರೇಣ ದಿವ್ಯಾಽವಯವಭೂಷಣಾ ॥ ೫೧ ॥
ದಿವ್ಯಾಽಂಬರಾ ದಿವ್ಯಗಂಧಾ ದಿವ್ಯಜ್ಞಾನಸಮನ್ವಿತಾ ।
ಸ ಮಯಾ ಮಾಂ ಸದೈವಾಽಽಸ್ತಾಂ ಚಂಚಚ್ಚಾಮರಧಾರಿಣೀ ॥ ೫೨ ॥

---

೪೪. ಈ ಸುಲಕ್ಷಣೆಯು ಧನ್ಯಳು. ಅನುಗ್ರಹಮಾಡಲು ಯೋಗ್ಯಳು. ದೇವಿ! ಇವಳಿಗೂ, ಈ ಆಡಿಗೂ ಯಾವ ವರವನ್ನು ಕೊಡಲಿ, ಹೇಳು.''

೪೫–೫೨. ದೇವಿಯು ಹೇಳುತ್ತಾಳೆ:—ಸಮಸ್ತ ಸೃಷ್ಟಿಕರ್ತರಿಗೆ ಕರ್ತನೂ, ಸರ್ವಜ್ಞನೂ, ನಮಸ್ಕಾರ ಮಾಡಿದವರ ದುಃಖವನ್ನು ಪರಿಹರಿಸುವವನೂ ಆದ ಓ ಪ್ರಿಯನೆ! ಸದಾಚಾರಸಂಪನ್ನಳಾದ ಈ ಸುಲಕ್ಷಣೆಯು ಜಯಾ, ವಿಜಯಾ, ಜಯಂತಿಕಾ, ಶುಭಾನಂದಾ, ಸುನಂದಾ, ಕೌಮುದೀ, ಊರ್ಮಿಲಾ, ಚಂಪಕಮಾಲಾ, ಮಲಯವಾಸಿನೀ, ಕರ್ಪೂರಲತಿಕಾ, ಗಂಧಧಾರಾ, ಅಶೋಕಾ, ವಿಶೋಕಾ, ಮಲಯಗಂಧಿನೀ, ಚಂದನನಿಃಶ್ವಾಸಾ, ಮೃಗಮದೋತ್ತಮಾ, ಕೋಕಿಲಾಲಾಪಾ, ಮಧುರಭಾಷಿಣೀ, ಗದ್ಯಪದ್ಯನಿಧಿ, ಅನುಕ್ತಜ್ಞಾ, ದೃಗಂಚಲೇಂಗಿತಜ್ಞಾ, ಕೃತಮನೋರಥಾ, ಗಾನಚಿತ್ತಹರಾ–ಇವರಂತೆ ನನಗೆ ಸಖಿಯಾಗಿ ಇರಲಿ. ಬಾಲಬ್ರಹ್ಮಚಾರಿಣಿಯಾದ ಇವಳು ನನಗೆ ಅತಿಪ್ರಿಯಳಾಗುವಳು. ಇವಳು ಈ ಶರೀರದಿಂದಲೇ ದಿವ್ಯಾಲಂಕಾರವುಳ್ಳವಳೂ, ದಿವ್ಯವಸ್ತ್ರವನ್ನುಟ್ಟವಳೂ,

ಏಷಾಽಪಿ ಕಾಶಿರಾಜಸ್ಯ ಕುಮಾರ್ಯಸ್ತ್ವಿಹ ಬರ್ಕರೀ ।
ಅತ್ರೈವ ಭೋಗಾನ್ಸಂಪ್ರಾಪ್ಯ ಮುಕ್ತಿಂ ಪ್ರಾಪ್ಸ್ಯತ್ಯನುತ್ತಮಾಂ ॥ ೫೩ ॥
ಅನಯಾ ತ್ವರ್ಕಕುಂಡೇಽಸ್ಮಿನ್ಪುಷ್ಯೇ ಮಾಸಿ ರವೇರ್ದಿನೇ ।
ಸ್ನಾತಂ ತ್ವನುದಿತೇ ಸೂರ್ಯೇ ಶೀತಾದಕ್ಷುಬ್ಧಚಿತ್ತಯಾ ॥ ೫೪ ॥
ರಾಜಪುತ್ರೀ ತತಃ ಪುಣ್ಯಾದಸ್ತ್ವೇಷಾ ಶುಭಲೋಚನಾ ।
ವರದಾನಪ್ರಭಾವೇಣ ತವ ವಿಶ್ವೇಶ್ವರ ಪ್ರಭೋ ॥ ೫೫ ॥
ಬರ್ಕರೀಕುಂಡಮಿತ್ಯಾಖ್ಯಾ ತ್ವರ್ಕಕುಂಡಸ್ಯ ಜಾಯತಾಂ ।
ಏತಸ್ಯಾಃ ಪ್ರತಿಮಾ ಪೂಜ್ಯಾ ಭವಿಷ್ಯತ್ಯತ್ರ ಮಾನವೈಃ ॥ ೫೬ ॥
ಉತ್ತರಾರ್ಕಸ್ಯ ದೇವಸ್ಯ ಪುಷ್ಯೇ ಮಾಸಿ ರವೇರ್ದಿನೇ ।
ಕಾರ್ಯಾ ಸಾಂವತ್ಸರೀ ಯಾತ್ರಾ ನರೈಃ ಕಾಶೀಫಲೇಪ್ಸುಭಿಃ ॥ ೫೭ ॥
ಮೃಡಾನ್ಯಭಿಹಿತಂ ಸರ್ವಂ ಕೃತ್ವೈತದ್ವಿಶ್ವಗೋ ವಿಭುಃ ।
ವಿಶ್ವನಾಥೋ ವಿವೇಶಾಽಥ ಪ್ರಾಸಾದಂ ಸ್ವಮತರ್ಕಿತಃ ॥ ೫೮ ॥
ಸ್ಕಂದ ಉವಾಚ :—
ಲೋಲಾರ್ಕಸ್ಯ ಚ ಮಾಹಾತ್ಮ್ಯಮುತ್ತರಾರ್ಕಸ್ಯ ಚ ದ್ವಿಜ ।
ಕಥಿತಂ ತೇ ಮಹಾಭಾಗ ಸಾಂಬಾದಿತ್ಯಂ ನಿಶಾಮಯ ॥ ೫೯ ॥

---

ದಿವ್ಯಗಂಧ, ಜ್ಞಾನಗಳಿಂದ ಕೂಡಿದವಳೂ ಆಗಿ ನನ್ನ ಬಳಿ ಚಾಮರವನ್ನು ಬೀಸುತ್ತಿರಲಿ. ಈ ಆಡು ಇಲ್ಲಿಯೇ ಕಾಶೀರಾಜನ ಕುಮಾರಿಯಾಗಿ ಹುಟ್ಟಲಿ. ಇದು ಈ ಲೋಕದಲ್ಲಿ ಎಲ್ಲ ಭೋಗಗಳನ್ನನುಭವಿಸಿ ಉತ್ತಮ ಮುಕ್ತಿಯನ್ನು ಪಡೆಯುವುದು.

೫೪. ಈ ಆಡು ಅರ್ಕಕುಂಡದಲ್ಲಿ ಪುಷ್ಯಮಾಸದ ಭಾನುವಾರದ ದಿನ ಸೂರ್ಯನು ಉದಯಿಸುವುದಕ್ಕಿಂತ ಮುಂಚೆ ಶೈತ್ಯದಿಂದ ಚಂಚಲಮನಸ್ಸುಳ್ಳದ್ದಾಗದೆ ಮಿಂದಿರುವುದು.

೫೫. ವಿಶ್ವೇಶ್ವರ! ಆದುದರಿಂದ ಈ ಆಡು ಆ ಪುಣ್ಯದಿಂದಲೂ, ನಿನ್ನ ವರಪ್ರಭಾವದಿಂದಲೂ ಸುಂದರಿಯಾದ ರಾಜಪುತ್ರಿಯಾಗಲಿ.

೫೬. ಈ ಅರ್ಕಕುಂಡಕ್ಕೆ ಬರ್ಕರೀಕುಂಡವೆಂದು ಹೆಸರಾಗಲಿ. ಇಲ್ಲಿ ಇದರ ಪ್ರತಿಮೆಯು ಮಾನವಪೂಜ್ಯವಾಗಲಿ.

೫೭. ಕಾಶೀಫಲವನ್ನು ಬಯಸುವ ಭಕ್ತರು ಪುಷ್ಯಮಾಸದ ಭಾನುವಾರದ ದಿನ ಉತ್ತರಾರ್ಕನ ವಾರ್ಷಿಕಯಾತ್ರೆಯನ್ನು ಮಾಡಬೇಕು.

೫೮. ಸರ್ವಾಂತರ್ಯಾಮಿಯೂ, ಸರ್ವವ್ಯಾಪ್ತನೂ ಆದ ವಿಶ್ವನಾಥನು ಪಾರ್ವತಿಯು ನುಡಿದ ಈ ಮಾತನ್ನು ನೆರವೇರಿಸಿ ಆಕಸ್ಮಿಕವಾಗಿ ತನ್ನ ಪ್ರಾಸಾದವನ್ನು ಪ್ರವೇಶಿಸಿದನು.

೫೯. ಸ್ಕಂದನು ಹೇಳುತ್ತಾನೆ:—ಅಗಸ್ತ್ಯನೆ! ನಾನೀಗ ನಿನಗೆ ಲೋಲಾರ್ಕ,

**ಶ್ರುತ್ವೈತತ್ಪುಣ್ಯಮಾಖ್ಯಾನಂ ಶುಭಂ ಲೋಕೋತ್ತರಾರ್ಕಯೋಃ ।**
**ವ್ಯಾಧಿಭಿರ್ನಾಭಿಭೂಯೇತ ನ ದಾರಿದ್ರ್ಯೇಣ ಬಾಧ್ಯತೇ ॥ ೬೦ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಉತ್ತರಾರ್ಕವರ್ಣನಂ" ನಾಮ ಸಪ್ತಚತ್ವಾರಿಂಶೋಽಧ್ಯಾಯಃ**

---

ಉತ್ತರಾರ್ಕರ ಮಾಹಾತ್ಮ್ಯವನ್ನೆಲ್ಲ ಹೇಳಿರುವೆನು. ಇನ್ನು ಸಾಂಬಾದಿತ್ಯನ ಮಾಹಾತ್ಮ್ಯವನ್ನು ಕೇಳು.

೬೦. ಲೋಕಾರ್ಕ, ಉತ್ತರಾರ್ಕರ ಮಂಗಳಕರವಾದ ಈ ಪುಣ್ಯಾಖ್ಯಾನವನ್ನು ಕೇಳಿದವನು ರೋಗದಾರಿದ್ರ್ಯಗಳಿಂದ ಪೀಡಿಸಲ್ಪಡುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ಉತ್ತರಾರ್ಕವರ್ಣನ"ವೆಂಬ ನಲವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಽಷ್ಟಚತ್ವಾರಿಂಶೋಽಧ್ಯಾಯಃ

## ಸಾಂಬಾದಿತ್ಯಮಹಾತ್ಮ್ಯವರ್ಣನಂ

ಸ್ಕಂದ ಉವಾಚ :—

ಶೃಣುಷ್ವ ಮೈತ್ರಾವರುಣೇ ದ್ವಾರವತ್ಯಾಂ ಯದೂದ್ವಹಃ ।
ದಾನವಾನಾಂ ವಧಾರ್ಥಾಯ ಭುವೋ ಭಾರಾಽಪನುತ್ತಯೇ ॥ ೧ ॥
ಅವಿರಾಸೀತ್ಸ್ವಯಂ ಕೃಷ್ಣಃ ಕೃಷ್ಣವರ್ತ್ಮಪ್ರತಾಪವಾನ್ ।
ವಾಸುದೇವೋ ಜಗದ್ಧಾಮ ದೇವಕ್ಯಾಂ ವಸುದೇವತಃ ॥ ೨ ॥
ಸಾಶೀತಿಲಕ್ಷಂ ತಸ್ಯಾಽಽಸನ್ಕುಮಾರಾ ಅರ್ಕವರ್ಚಸಃ ।
ಸ್ವರ್ಗೇಽಪಿ ತಾದೃಶಾ ಬಾಲಾಃ ಸುಶೀಲಾ ನ ಹಿ ಕುಂಭಜ ॥ ೩ ॥
ಅತೀವರೂಪಸಂಪನ್ನಾ ಅತೀವಸುಮಹಾಬಲಾಃ ।
ಅತೀವ ಶಸ್ತ್ರಶಾಸ್ತ್ರಜ್ಞಾ ಅತೀವ ಶುಭಲಕ್ಷಣಾಃ ॥ ೪ ॥
ತಾನ್ ದ್ರಷ್ಟುಂ ಮಾನಸಃ ಪುತ್ರೋ ಬ್ರಹ್ಮಣಸ್ತಪಸಾಂ ನಿಧಿಃ ।
ಕೃತವಲ್ಕಲಕೌಪೀನೋ ಧೃತಕೃಷ್ಣಾಽಜಿನಾಽಂಬರಃ ॥ ೫ ॥
ಗೃಹೀತಬ್ರಹ್ಮದಂಡಶ್ಚ ತ್ರಿವೃನ್ಮೌಂಜೀಸುಮೇಖಲಃ ।
ಉರಃಸ್ಥಲಸ್ಥತುಲಸೀಮಾಲಯಾ ಸಮಲಂಕೃತಃ ॥ ೬ ॥

---

## ಕನ್ನಡದ ಅನುವಾದ

### ಸಾಂಬಾದಿತ್ಯಮಾಹಾತ್ಮ್ಯವರ್ಣನ

೧–೨. ಸ್ಕಂದನು ಹೇಳುತ್ತಾನೆ:—ಎಲೈ ಅಗಸ್ತ್ಯನೆ! ಕೇಳು. ಅಗ್ನಿಯಂತೆ ಪ್ರತಾಪವುಳ್ಳ ನಾರಾಯಣನು ದ್ವಾರಕೆಯಲ್ಲಿ ದಾನವರ ನಾಶಕ್ಕಾಗಿಯೂ, ಭೂಭಾರನಿವೃತ್ತಿಗಾಗಿಯೂ ದೇವಕಿಯಲ್ಲಿ ವಸುದೇವನಿಂದ ಅವತರಿಸಿದನು.

೩. ಅವನಿಗೆ ಸೂರ್ಯನಂತೆ ತೇಜಸ್ಸುಳ್ಳ ಎಂಬತ್ತುಲಕ್ಷ ಕುಮಾರರು ಜನಿಸಿದರು. ಅಂತಹ ಸುಶೀಲರಾದ ಬಾಲಕರು ಸ್ವರ್ಗದಲ್ಲಿಯೂ ಇರಲಿಲ್ಲ.

೪. ಅವರು ಅತ್ಯಂತ ಸುಂದರರೂ, ಬಹು ಬಲಶಾಲಿಗಳೂ, ಅತ್ಯಂತವಾಗಿ ಶಸ್ತ್ರಶಾಸ್ತ್ರಗಳನ್ನರಿತವರೂ, ಶುಭಲಕ್ಷಣರೂ ಆಗಿದ್ದರು.

೫–೮. ತರುವಾಯ ವಿಶ್ವಕರ್ಮನು ನಿರ್ಮಿಸಿರುವುದೂ, ಸ್ವರ್ಗದ ಸೌಭಾಗ್ಯವನ್ನು ಜಯಿಸಿರುವುದೂ ಆದ ಆ ದ್ವಾರಕಾಪುರಿಯನ್ನು ನೋಡಲೋಸುಗ ಬ್ರಹ್ಮ ಮಾನಸಪುತ್ರನೂ, ತಪಸ್ವಿಯೂ, ನಾರುಬಟ್ಟೆ, ಕೌಪೀನ, ಕೃಷ್ಣಾಜಿನಗಳನ್ನು ಧರಿಸಿದವನೂ, ಬ್ರಹ್ಮದಂಡವನ್ನು ಹಿಡಿದವನೂ, ಮೌಂಜಿಯುಳ್ಳವನೂ,

ಗೋಪೀಚಂದನನಿರ್ಯಾಸಲಸದಂಗವಿಲೇಪನಃ ।
ತಪಸಾ ಕೃಶಸರ್ವಾಂಗೋ ಮೂರ್ತೋ ಜ್ವಲನವಜ್ಜ್ವಲನ್ ॥ ೭ ॥
ಆಜಗಾಮಾಂಬರಚರೋ ನಾರದೋ ದ್ವಾರಕಾಂ ಪುರೀಂ ।
ವಿಶ್ವಕರ್ಮವಿನಿರ್ಮಾಣಾಂ ಜಿತಸ್ವರ್ಗಪುರೀಶ್ರಿಯಂ ॥ ೮ ॥
ತಂ ದೃಷ್ಟ್ವಾ ನಾರದಂ ಸರ್ವೇ ವಿನಮ್ರತರಕಂಧರಾಃ ।
ಪ್ರಬದ್ಧಮೂರ್ಧಾಂಜಲಯಃ ಪ್ರಣೇಮುರ್ವೃಷ್ಣಿನಂದನಾಃ ॥ ೯ ॥
ಸಾಂಬಃ ಸ್ವರೂಪಸೌಂದರ್ಯಗರ್ವಸರ್ವಸ್ವಮೋಹಿತಃ ।
ನ ನನಾಮ ಮುನಿಂ ತತ್ರ ಹಸಂಸ್ತದ್ರೂಪಸಂಪದಂ ॥ ೧೦ ॥
ಸಾಂಬಸ್ಯ ತಮಭಿಪ್ರಾಯಂ ವಿಜ್ಞಾಯ ಸ ಮಹಾಮುನಿಃ ।
ವಿವೇಶ ಸುಮಹಾರಮ್ಯಂ ನಾರದಃ ಕೃಷ್ಣಮಂದಿರಂ ॥ ೧೧ ॥
ಕೃಷ್ಣೋಽಥ ದೃಷ್ಟ್ವಾಽಽಗಚ್ಛಂತಂ ಪ್ರತ್ಯುದ್ಗಮ್ಯ ಚ ನಾರದಂ ।
ಮಧುಪರ್ಕೇಣ ಸಂಪೂಜ್ಯ ಸ್ವಾಸನೇ ಚೋಪವೇಶಯತ್ ॥ ೧೨ ॥
ಕೃತ್ವಾ ಕಥಾ ವಿಚಿತ್ರಾರ್ಥಾಸ್ತತಏಕಾಂತವರ್ತಿನಃ ।
ಕೃಷ್ಣಸ್ಯ ಕರ್ಣೇಽಕಥಯನ್ನಾರದಃ ಸಾಂಬಚೇಷ್ಟಿತಂ ॥ ೧೩ ॥
ಅವಶ್ಯಂ ಕಿಂಚಿದತ್ರಾಸ್ತಿ ಯಶೋದಾನಂದವರ್ಧನ ।
ಪ್ರಾಯಶಸ್ತನ್ನ ಘಟಿತೇಽಸಂಭಾವ್ಯಂ ನಾಥವಾ ಸ್ತ್ರಿಯಾಂ ॥ ೧೪ ॥

---

ಎದೆಯಲ್ಲಿ ತುಳಸೀಮಾಲೆಯಿಂದ ಅಲಂಕಾರಗೊಂಡವನೂ, ಗೋಪೀಚಂದನ ಲಿಪ್ತನೂ, ತಪಸ್ಸಿನಿಂದ ಕೃಶವಾದ ಶರೀರವುಳ್ಳವನೂ, ದೇಹವನ್ನು ಧರಿಸಿದ ಬೆಂಕಿಯಂತೆ ಜ್ವಲಿಸುವವನೂ ಆದ ನಾರದನು ಬಂದನು.

೯. ಯಾದವರೆಲ್ಲರೂ ಆ ನಾರದನನ್ನು ಕಂಡು ತಲೆತಗ್ಗಿಸಿ ಕೈಜೋಡಿಸಿಕೊಂಡು ವಂದಿಸಿದರು.

೧೦. ತನ್ನ ಸೌಂದರ್ಯದಿಂದ ಅಹಂಕಾರಗೊಂಡ ಸಾಂಬನು ಮಾತ್ರ ಆ ಮುನಿಯ ರೂಪವನ್ನು ಕಂಡು ನಗುತ್ತ ಅವನಿಗೆ ವಂದಿಸಲಿಲ್ಲ.

೧೧. ನಾರದಮಹಾಮುನಿಯು ಸಾಂಬನ ಅಭಿಪ್ರಾಯವನ್ನರಿತು ಅತಿ ರಮ್ಯವಾದ ಕೃಷ್ಣನ ಮನೆಯನ್ನು ಹೊಕ್ಕನು.

೧೨. ಬರುತ್ತಿರುವ ನಾರದನನ್ನು ಈಕ್ಷಿಸಿ ಕೃಷ್ಣನು ಅವನನ್ನು ಎದುರುಗೊಂಡು ಮಧುಪರ್ಕದಿಂದ ಪೂಜಿಸಿ ತನ್ನ ಆಸನದಲ್ಲಿ ಕುಳ್ಳಿರಿಸಿದನು.

೧೩. ಆ ನಾರದನು ನಾನಾಕಥೆಗಳನ್ನು ಹೇಳಿ ರಹಸ್ಯಸ್ಥಳದಲ್ಲಿರುವ ಕೃಷ್ಣನ ಕಿವಿಯಲ್ಲಿ ಸಾಂಬನ ಚೇಷ್ಟೆಯನ್ನು ಹೇಳಿದನು.

೧೪. "ಯಶೋದೆಗೆ ಆನಂದವನ್ನುಂಟುಮಾಡುವ ಎಲೈ ಕೃಷ್ಣನೆ! ಈ ಅಂತಃಪುರದಲ್ಲಿ ಒಂದು ವಿಷಯವಿದೆ. ಪ್ರಾಯಶಃ ಅದು ಸಂಭವಿಸುವುದಿಲ್ಲ, ಅಥವಾ ಸ್ತ್ರೀಯರಲ್ಲಿ ಅದು ಅಸಂಭಾವ್ಯವೂ ಅಲ್ಲ.

ಯೂನಾಂ ತ್ರಿಭುವನಸ್ಥಾನಾಂ ಸಾಂಬೋಽತೀವ ಸುರೂಪವಾನ್ ।
ಸ್ವಭಾವಚಂಚಲಾಕ್ಷೀಣಾಂ ಚೇತೋವೃತ್ತಿಃ ಸುಚಂಚಲಾ ॥ ೧೫ ॥
ಅಪೇಕ್ಷಂತೇ ನ ಮುಗ್ಧಾಕ್ಷ್ಯಃ ಕುಲಂ ಶೀಲಂ ಶ್ರುತಂ ಧನಂ ।
ರೂಪಮೇವ ಸಮೀಕ್ಷಂತೇ ವಿಷಮೇಷು ವಿಮೋಹಿತಾಃ ॥ ೧೬ ॥
ಅಥವಾ ವಿದಿತಂ ನೋ ತೇ ಬಲ್ಲವೀನಾಂ ವಿಚೇಷ್ಟಿತಂ ।
ವಿನಾಽಷ್ಟೌ ನಾಯಿಕಾಃ ಕೃಷ್ಣ ಕಾಮಯಂತೇಽಬಲಾ ಹ್ಯಮುಂ ॥ ೧೭ ॥
ವಾಮಭ್ರುವಾಂ ಸ್ವಭಾವಾಚ್ಚ ನಾರದಸ್ಯ ಚ ವಾಕ್ಯತಃ ।
ವಿಜ್ಞಾತಾಽಖಿಲವೃತ್ತಾಂತಸ್ತಥ್ಯಂ ಕೃಷ್ಣೋಽಪ್ಯಮನ್ಯತ ॥ ೧೮ ॥
ತಾವದ್ಧೈರ್ಯಂ ಚಲಾಕ್ಷೀಣಾಂ ತಾವಚ್ಚೇತೋವಿವೇಕಿತಾ ।
ಯಾವನ್ನಾಽರ್ಥೀ ವಿವಿಕ್ತಸ್ಥೋ ವಿವಿಕ್ತೇಽರ್ಥಿನಿ ನಾಽನ್ಯಥಾ ॥ ೧೯ ॥
ಇತ್ಥಂ ವಿವೇಚಯಂಶ್ಚಿತ್ತೇ ಕೃಷ್ಣಃ ಕೋಪನದೀರಯಂ ।
ವಿವೇಕಸೇತುನಾಸ್ತಭ್ಯ ನಾರದಂ ಪ್ರಾಹಿಣೋತ್ಸುಧೀಃ ॥ ೨೦ ॥
ಸಾಂಬಸ್ಯ ವೈಕೃತಂ ಕಿಂಚಿತ್ಕ್ವಚಿತ್ಕೃಷ್ಣೋ ನ ವೈಕ್ಷತ ।
ಗತೇ ದೇವಮುನೌ ತಸ್ಮಿನ್ವೀಕ್ಷಮಾಣೋಽಪ್ಯಹರ್ನಿಶಂ ॥ ೨೧ ॥
ಕಿಯತ್ಸ್ವಪಿ ಗತೇ ಕಾಲೇ ಪುನರಪ್ಯಾಯಯೌ ಮುನಿಃ ।
ಮಧ್ಯೇ ಲೀಲಾವತೀನಾಂ ಚ ಜ್ಞಾತ್ವಾ ಕೃಷ್ಣಮುಪಸ್ಥಿತಂ ॥ ೨೨ ॥

---

೧೫. ಮೂರು ಲೋಕದಲ್ಲಿರುವ ಯುವಕರಲ್ಲಿ ಸಾಂಬನು ಅತ್ಯಂತ ಸುಂದರನು. ಸ್ತ್ರೀಯರ ಚಿತ್ತವೃತ್ತಿಯು ಅತ್ಯಂತ ಚಂಚಲವಾದುದು.

೧೬. ಕಾಮಾಂಧರಾದ ಕಾಮಿನಿಯರು ಕುಲ, ಶೀಲ, ವಿದ್ಯೆ, ಧನಗಳನ್ನು ಅಪೇಕ್ಷಿಸುವುದಿಲ್ಲ. ಅವರು ನೋಡುವುದು ರೂಪವೊಂದನ್ನೇ.

೧೭. ನಿನಗೆ ಗೋಪಿಯರ ಮನಸ್ಸು ತಿಳಿಯಲಿಲ್ಲ. ಕೃಷ್ಣ! ಅಷ್ಟಮಹಿಷಿಯರನ್ನು ಬಿಟ್ಟು ಉಳಿದ ಗೋಪಾಂಗನೆಯರು ಈ ಸಾಂಬನನ್ನು ಕಾಮಿಸುವರು.''

೧೮. ಸ್ತ್ರೀಯರ ಸ್ವಭಾವದಿಂದಲೂ, ಈ ನಾರದನ ಮಾತಿನಿಂದಲೂ ಸಕಲ ವೃತ್ತಾಂತವನ್ನರಿತವನಾದರೂ ಆ ಕೃಷ್ಣನು ಆ ಮಾತನ್ನು ನಿಜವೆಂದೇ ನಂಬಿದನು.

೧೯. ''ರಹಸ್ಯದಲ್ಲಿ ಕಾಮುಕನು ಸಿಕ್ಕುವವರೆಗೆ ಸ್ತ್ರೀಯರ ಮನಸ್ಸಿನಲ್ಲಿ ಧೈರ್ಯವಿವೇಕಗಳಿರುವುವು.''

೨೦. ಜ್ಞಾನಿಯಾದ ಕೃಷ್ಣನು ಹೀಗೆ ಚಿಂತಿಸುತ್ತ ಕೋಪವೆಂಬ ನದೀ ವೇಗವನ್ನು ವಿವೇಕವೆಂಬ ಸೇತುವಿನಿಂದ ತಡೆದು ನಾರದನನ್ನು ಬೀಳ್ಕೊಟ್ಟನು.

೨೧. ನಾರದಮುನಿಯು ಹೊರಟುಹೋದಮೇಲೆ ಕೃಷ್ಣನು ಹಗಲು ರಾತ್ರಿ ನೋಡುತ್ತಿದ್ದರೂ ಸಾಂಬನಲ್ಲಿ ಯಾವ ವಿಕಾರವನ್ನೂ ಕಾಣಲಿಲ್ಲ.

೨೨. ಸ್ವಲ್ಪಕಾಲವಾದಮೇಲೆ ಆ ನಾರದನು ವಿಲಾಸಿನಿಯರ ನಡುವೆ ಕೃಷ್ಣನಿರುವುದನ್ನು ತಿಳಿದು ಮರಳಿ ಅಲ್ಲಿಗೆ ಬಂದನು.

ಬಹಿಃಕ್ರೀಡಂತಮಾಹೂಯ ಸಾಂಬಮಿತ್ಯಾಹ ನಾರದಃ ।
ಯಾಹಿ ಕೃಷ್ಣಾಂತಿಕಂ ತೂರ್ಣಂ ಕಥಯಾಽಽಗಮನಂ ಮಮ ॥ ೨೩ ॥
ಸಾಂಬೋಽಪಿ ಯಾಮಿ ನೋ ಯಾಮಿ ಕ್ಷಣಮಿತ್ಥಮಚಿಂತಯತ್ ।
ಕಥಂ ರಹಃಸ್ಥಂ ಪಿತರಂ ಯಾಮಿ ಸ್ತ್ರೈಣಸಖಂ ಪ್ರತಿ ॥ ೨೪ ॥
ನಯಾಮಿ ಚ ಕಥಂ ವಾಕ್ಯಾದಸ್ಯಾಽಹಂ ಬ್ರಹ್ಮಚಾರಿಣಃ ।
ಜ್ವಲದಂಗಾರಸಂಕಾಶಸ್ಫುರತ್ಸರ್ವಾಂಗತೇಜಸಃ ॥ ೨೫ ॥
ಪ್ರಣಮತ್ಸು ಕುಮಾರೇಷು ವ್ರೀಡಿತೋಽಯಂ ಮಯೈಕದಾ ।
ಇದಾನೀಮಪಿ ನೋ ಯಾಯಾಮಸ್ಯ ವಾಕ್ಯಾನ್ಮಹಾಮುನೇಃ ॥ ೨೬ ॥
ಅತ್ಯಾಹಿತಂ ತದಸ್ತೀಹ ತದಾಗೋದ್ವಯದರ್ಶನಾತ್ ।
ಪಿತುಃ ಕೋಪೋಽಪಿ ಸುಶ್ಲಾಘ್ಯೋ ಮಯಿ ನೋ ಬ್ರಾಹ್ಮಣಸ್ಯ ತು ॥
ಬ್ರಹ್ಮಕೋಪಾಽಗ್ನಿನಿರ್ದಗ್ಧಾಃ ಪರೋ ಹಂತಿ ನ ಜಾತುಚಿತ್ ।
ಅಪರಾಗ್ನಿವಿನಿರ್ದಗ್ಧಾ ರೋಹಂತೇ ದಾವದಗ್ಧವತ್ ॥ ೨೮ ॥
ಇತಿ ಧ್ಯಾತ್ವಾ ಕ್ಷಣಂ ಸಾಂಬೋಽವಿಶದಂತಃಪುರಂ ಪಿತುಃ ।
ಮಧ್ಯೇ ಸ್ತ್ರೈಣಸಭಂ ಕೃಷ್ಣಂ ಯಾವಜ್ಜಾಂಬವತೀಸುತಃ ॥ ೨೯ ॥

---

೨೩. ಅವನು ಹೊರಗೆ ಆಡುತ್ತಿರುವ ಸಾಂಬನನ್ನು ಕರೆದು "ಶೀಘ್ರವಾಗಿ ಕೃಷ್ಣನೆಡೆಗೆ ಹೋಗಿ ನಾನು ಬಂದಿರುವುದನ್ನು ತಿಳಿಸೆ"ಂದನು.

೨೪. ಸಾಂಬನೂ ಹೀಗೆ ಆಲೋಚಿಸಿದನು. "ತಂದೆಯೆಡೆಗೆ ಹೋಗಲೆ? ಬೇಡವೆ? ಸ್ತ್ರೀಯರ ನಡುವೆ ರಹಸ್ಯದಲ್ಲಿರುವ ತಂದೆಯ ಬಳಿ ಹೇಗೆ ಹೋಗಲಿ?

೨೫. ಬ್ರಹ್ಮಚಾರಿಯೂ, ಉರಿಯುತ್ತಿರುವ ಕೆಂಡದಂತೆ ಸರ್ವಾಂಗ ತೇಜಸ್ಸುಳ್ಳವನೂ ಆದ ಇವನ ಮಾತಿನಂತೆ ಹೋಗದಿರಲೆಂತು?

೨೬–೨೭. ಹಿಂದೊಮ್ಮೆ ನಾನು ಇವನನ್ನು ಗೋಪಕುಮಾರರು ನಮಸ್ಕರಿಸುತ್ತಿರಲು ಹಾಸ್ಯಮಾಡಿದ್ದೇನೆ. ಈಗಲೂ ಈ ಮಹಾಮುನಿಯ ಮಾತಿನಂತೆ ಹೋಗದಿದ್ದರೆ ನನ್ನಲ್ಲುಂಟಾಗುವ ಎರಡು ತಪ್ಪುಗಳಿಂದ ಭಯಂಕರವಾದ ಅನಿಷ್ಟವುಂಟಾಗುವುದು. ನನಗೆ ತಂದೆಯ ಕೋಪವೇ ಒಳ್ಳೆಯದು. ಬ್ರಾಹ್ಮಣ ಕೋಪವು ಕೋಪವಲ್ಲ.

೨೮. ಬ್ರಾಹ್ಮಣಕೋಪದಿಂದ ಕೆಟ್ಟವರು, ಮತ್ತೆ ಅಭ್ಯುದಯವನ್ನು ಹೊಂದುವುದಿಲ್ಲ. ಇತರಾಗ್ನಿಯಿಂದ ದಗ್ಧರಾದವರು ವನಾಗ್ನಿಯಿಂದ ಸುಟ್ಟ ವೃಕ್ಷಗಳಂತೆ ಮರಳಿ ವೃದ್ಧಿಯನ್ನೈದುವರು."

೨೯–೩೦. ಸಾಂಬನು ಕ್ಷಣಕಾಲ ಹೀಗೆ ಚಿಂತಿಸಿ ತಂದೆಯ ಅಂತಃಪುರವನ್ನು ಹೊಕ್ಕನು. ಜಾಂಬವತೀಪುತ್ರನಾದ ಸಾಂಬನು ಸ್ತ್ರೀಯರ ಮಧ್ಯದಲ್ಲಿ

ದೂರಾತ್ಪ್ರಣಮ್ಯ ವಿಜ್ಞಪ್ತಿಂ ಸ ಚಕಾರ ಸಶಂಕಿತಃ ।
ತಾವತ್ತಮನ್ವಗಚ್ಛಚ್ಚ ನಾರದಃ ಕಾರ್ಯಸಿದ್ಧಯೇ ॥ ೩೦ ॥
ಸ ಸಂಭ್ರಮೋಽಥ ಕೃಷ್ಣೋಽಪಿ ದೃಷ್ಟ್ವಾ ಸಾಂಬಂ ಚ ನಾರದಂ ।
ಸಮುತ್ತಸ್ಥೌ ಪರಿದಧತ್ಪೀತಕೌಶೇಯಮಂಬರಂ ॥ ೩೧ ॥
ಉತ್ಥಿತೇ ದೇವಕೀಸೂನೌ ತಾಃ ಸರ್ವಾ ಅಪಿ ಗೋಪಿಕಾಃ ।
ವಿಲಜ್ಜಿತಾಃ ಸಮುತ್ತಸ್ಥುರ್ಗೃಹ್ಣಂತ್ಯಃ ಸ್ವಂಸ್ವಮಂಬರಂ ॥ ೩೨ ॥
ಮಹಾರ್ಹಶಯನೀಯೇ ತಂ ಹಸ್ತೇ ಧೃತ್ವಾ ಮಹಾಮುನಿಂ ।
ಸಮುಪಾವೇಶಯತ್ಕೃಷ್ಣಃ ಸಾಂಬಶ್ಚ ಕ್ರೀಡಿತುಂ ಯಯೌ ॥ ೩೩ ॥
ತಾಸಾಂ ಸ್ಖಲಿತಮಾಲೋಕ್ಯ ತಿಷ್ಠಂತೀನಾಂ ಪುರೋ ಮುನಿಃ ।
ಕೃಷ್ಣಲೀಲಾದ್ರವೀಭೂತವರಾಂಗಾನಾಂ ಜಗೌ ಹರಿಂ ॥ ೩೪ ॥
ಪಶ್ಯ ಪಶ್ಯ ಮಹಾಬುದ್ಧೇ ದೃಷ್ಟ್ವಾ ಜಾಂಬವತೀಸುತಂ ।
ಇಮಾಃ ಸ್ಖಲಿತಮಾಪನ್ನಾಸ್ತದ್ರೂಪಕ್ಷುಬ್ಧಚೇತಸಃ ॥ ೩೫ ॥
ಕೃಷ್ಣೋಽಪಿ ಸಾಂಬಮಾಹೂಯ ಸಹ ಸ್ವೈನಾಽಶಪತ್ಸುತಂ ।
ಸರ್ವಾ ಜಾಂಬವತೀತುಲ್ಯಾಃ ಪಶ್ಯಂತಮಪಿ ದುರ್ವಿಧೇಃ ॥ ೩೬ ॥

---

ಇರುವ ಕೃಷ್ಣನನ್ನು ದೂರದಿಂದಲೆ ವಂದಿಸಿ ಕಳವಳದಿಂದ ಬಿನ್ನೈಸುವಷ್ಟರಲ್ಲಿ ನಾರದನೂ ಕಾರ್ಯಸಿದ್ಧಿಗಾಗಿ ಆ ಸಾಂಬನನ್ನು ಹಿಂಬಾಲಿಸಿದನು.

೩೧. ಬಳಿಕ ಕೃಷ್ಣನು ಸಾಂಬ ನಾರದರನ್ನು ನೋಡಿ ಪೀತಾಂಬರವನ್ನುಟ್ಟು ಕೊಳ್ಳುತ್ತ ತ್ವರಿತವಾಗಿ ಮೇಲಕ್ಕೆದ್ದನು.

೩೨. ಕೃಷ್ಣನು ಮೇಲಕ್ಕೇಳಲು ಸಕಲ ಗೋಪಿಯರೂ ಲಜ್ಜೆಯಿಂದ ತಮ್ಮ ತಮ್ಮ ಬಟ್ಟೆಗಳನ್ನು ತೆಗೆದುಕೊಳ್ಳುತ್ತ ಮೇಲಕ್ಕೆದ್ದರು.

೩೩. ಕೃಷ್ಣನು ಆ ನಾರದಮಹಾಮುನಿಯನ್ನು ಕೈಹಿಡಿದು ಅತ್ಯಮೂಲ್ಯ ವಾದ ಹಾಸಿಗೆಯಲ್ಲಿ ಕುಳ್ಳಿರಿಸಿದನು. ಸಾಂಬನು ಆಡಲು ಹೊರಟುಹೋದನು.

೩೪. ಮುನಿಯು ಕೃಷ್ಣಲೀಲೆಯಿಂದ ದ್ರವಗೊಂಡ ವರಾಂಗಗಳುಳ್ಳವರಾಗಿ ಮುಂದೆ ನಿಂತಿರುವ ಆ ಗೋಪಿಯರ ಸ್ಖಾಲಿತ್ಯವನ್ನು ಕಂಡು ಕೃಷ್ಣನನ್ನು ಕುರಿತು ಇಂತೆಂದನು.

೩೫. "ಬುದ್ಧಿಶಾಲಿಯಾದ ಓ ಕೃಷ್ಣ! ನೋಡು, ನೋಡು. ಈ ಗೋಪಿ ಯರು ಸಾಂಬನನ್ನು ಕಂಡು ಅವನ ರೂಪದಿಂದ ಚಂಚಲಮನಸ್ಸುಳ್ಳವರಾಗಿ ಸ್ಖಾಲಿತ್ಯವನ್ನು ಹೊಂದಿರುವರು."

೩೬. ಕೃಷ್ಣನೂ ಸಾಂಬನನ್ನು ಕರೆದು, ಎಲ್ಲಾ ಗೋಪಿಯರನ್ನು ತಾಯಿ ಯಾದ ಜಾಂಬವತಿಯಂತೆ ಕಾಣುತ್ತಿರುವ ಅವನನ್ನು ಕೂಡಲೇ ಶಪಿಸಿದನು.

ಯಸ್ಮಾತ್ತ್ವದ್ರೂಪಮಾಲೋಕ್ಯ ಗೋಪಾಲ್ಯಃ ಸ್ಖಲಿತಾ ಇಮಾಃ ।
ತಸ್ಮಾತ್ಕುಷ್ಠೀಭವ ಕ್ಷಿಪ್ರಮಕಾಂಡಾಗಮನೇನಚ ॥ ೩೭ ॥
ವೇಪಮಾನೋ ಮಹಾವ್ಯಾಧಿಭಯಾತ್ಸಾಂಬೋಽಪಿ ದಾರುಣಾತ್ ।
ಕೃಷ್ಣಂ ಪ್ರಸಾದಯಾಮಾಸ ಬಹುಶಃ ಪಾಪಶಾಂತಯೇ ॥ ೩೮ ॥
ಕೃಷ್ಣೋಽಪ್ಯನೇನ ಸಂಜಾನನ್ಸಾಂಬಂ ಸ್ವಸುತಮೌರಸಂ ।
ಅಬ್ರವೀತ್ಕುಷ್ಠಮೋಕ್ಷಾಯ ವ್ರಜ ವೈಶ್ವೇಶ್ವರೀಂ ಪುರೀಂ ॥ ೩೯ ॥
ತತ್ರ ಬ್ರಧ್ನಂ ಸಮಾರಾಧ್ಯ ಪ್ರಕೃತಿಂ ಸ್ವಾಮವಾಪ್ಸ್ಯಸಿ ।
ಮಹೈನಸಾಂ ಕ್ಷಯೋಽನ್ಯತ್ರ ನಾಽಸ್ತಿ ವಾರಾಣಸೀಂ ವಿನಾ ॥ ೪೦ ॥
ಯತ್ರ ವಿಶ್ವೇಶ್ವರಃ ಸಾಕ್ಷಾದ್ಯತ್ರ ಸ್ವರ್ಗಾಪಗಾ ಚ ಸಾ ।
ಯೇಷಾಂ ಮಹೈನಸಾಂ ದೃಷ್ಟಾ ಮುನಿಭಿರ್ನೈವ ನಿಷ್ಕೃತಿಃ ।
ತೇಷಾಂ ವಿಶುದ್ಧಿರಸ್ತ್ಯೇವ ಪ್ರಾಪ್ಯ ವಾರಾಣಸೀಂ ಪುರೀಂ ॥ ೪೧ ॥
ನ ಕೇವಲಂ ಹಿ ಪಾಪೇಭ್ಯೋ ವಾರಾಣಸ್ಯಾಂ ವಿಮುಚ್ಯತೇ ।
ಪ್ರಾಕೃತೇಭ್ಯೋಽಪಿ ಪಾಪೇಭ್ಯೋ ಮುಚ್ಯತೇ ಶಂಕರಾಜ್ಞಯಾ ॥ ೪೨ ॥
ಪುರಾ ಪುರಾರಿಣಾ ಸೃಷ್ಟಮವಿಮುಕ್ತಂ ವಿಮುಕ್ತಯೇ ।
ಸರ್ವೇಷಾಮೇವ ಜಂತೂನಾಂ ಕೃಪಯಾಽಂತೇ ತನುತ್ಯಜಾಂ ॥ ೪೩ ॥

---

೩೭. "ನಿನ್ನನ್ನು ನೋಡಿದಕೂಡಲೆ ಈ ಗೋಪಿಯರು ಸ್ಖಲಿತರಾದುದರಿಂದಲೂ, ನೀನು ಆಕಸ್ಮಿಕವಾಗಿ ಅಂತಃಪುರಕ್ಕೆ ಬಂದದ್ದರಿಂದಲೂ ಜಾಗ್ರತೆಯಾಗಿ ಕುಷ್ಠರೋಗವುಳ್ಳವನಾಗು."

೩೮. ಸಾಂಬನು ದಾರುಣವಾದ ಆ ಮಹಾರೋಗದ ಭಯದಿಂದ ನಡುಗುತ್ತ ಪಾಪಶಾಂತಿಗಾಗಿ ಕೃಷ್ಣನನ್ನು ಬಹುವಾಗಿ ಸಮಾಧಾನಪಡಿಸಿದನು.

೩೯. ಕೃಷ್ಣನೂ ತನ್ನ ಔರಸಪುತ್ರನಾದ ಸಾಂಬನು ಪಾಪವಿಲ್ಲದವನೆಂದರಿತು ಹೀಗೆಂದನು. "ನೀನು ಕುಷ್ಠರೋಗದ ಪರಿಹಾರಕ್ಕಾಗಿ ಕಾಶಿಗೆ ತೆರಳು.

೪೦. ಅಲ್ಲಿ ನೀನು ಸೂರ್ಯನನ್ನು ಆರಾಧಿಸಿದರೆ ಮೊದಲಿನಂತಾಗುವೆ. ಕಾಶಿಯನ್ನು ಬಿಟ್ಟರೆ ಬೇರೆ ಕಡೆಯಲ್ಲಿ ಮಹಾಪಾಪಗಳು ನಾಶವಾಗುವುದಿಲ್ಲ.

೪೧. ಅಲ್ಲಿ ಸಾಕ್ಷಾತ್ ವಿಶ್ವೇಶ್ವರನೂ, ಅಮರಗಂಗೆಯೂ ಇರುವರು. ಯಾವ ಮಹಾಪಾತಕಿಗಳಿಗೆ ಪ್ರಾಯಶ್ಚಿತ್ತವಿಲ್ಲವೆಂದು ಮುನಿಗಳು ಹೇಳುವರೊ, ಅವರೂ ಕಾಶಿಯನ್ನು ಹೊಂದಿ ಶುದ್ಧರಾಗುವರು.

೪೨. ಕಾಶಿಯಲ್ಲಿ ಮನುಷ್ಯನು ಮಹಾಪಾತಕಗಳಿಂದ ಮಾತ್ರ ಮುಕ್ತನಾಗುವುದಿಲ್ಲ. ಶಂಕರನ ಅಪ್ಪಣೆಯಿಂದ ಅವನು ಪ್ರಾಕೃತಪಾಪದಿಂದಲೂ ಮುಕ್ತನಾಗುವನು.

೪೩. ಹಿಂದೆ ಮಹೇಶ್ವರನು ಸಕಲ ಜಂತುಗಳ ಮುಕ್ತಿಗಾಗಿ ದಯೆಯಿಂದ ಅವಿಮುಕ್ತಕ್ಷೇತ್ರವನ್ನು ಸೃಜಿಸಿರುವನು.

ತತ್ರಾನಂದವನೇ ಶಂಭೋಸ್ತವ ಶಾಪನಿರಾಕೃತಿಃ ।
ಸಾಂಬ ತತ್ರೇರಿತಂ ಯಾಹಿ ನಾಽನ್ಯಥಾ ಶಾಪನಿರ್ವೃತಿಃ ॥ ೪೪ ॥
ತತಃ ಕೃಷ್ಣಂ ಸಮಾಪೃಚ್ಛ್ಯ ಕರ್ಮನಿರ್ಮುಕ್ತಚೇಷ್ಟಿತಃ ।
ನಾರದಃ ಕೃತಕೃತ್ಯಃ ಸನ್ಯಯಾವಾಕಾಶವರ್ತ್ಮನಾ ॥ ೪೫ ॥
ಸಾಂಬೋ ವಾರಾಣಸೀಂ ಪ್ರಾಪ್ಯ ಸಮಾರಾಧ್ಯಾಂಶುಮಾಲಿನಂ ।
ಕುಂಡಂ ತತ್ರ್ಪುಷ್ಟತಃ ಕೃತ್ವಾ ನಿಜಾಂ ಪ್ರಕೃತಿಮಾಪ್ತವಾನ್ ॥ ೪೬ ॥
ಸಾಂಬಾದಿತ್ಯಸ್ತದಾರಭ್ಯ ಸರ್ವವ್ಯಾಧಿಹರೋ ರವಿಃ ।
ದದಾತಿ ಸರ್ವಭಕ್ತೇಭ್ಯೋಽನಾಮಯಾಃ ಸರ್ವಸಂಪದಃ ॥ ೪೭ ॥
ಸಾಂಬಕುಂಡೇ ನರಃ ಸ್ನಾತ್ವಾ ರವಿವಾರೇಽರುಣೋದಯೇ ।
ಸಾಂಬಾದಿತ್ಯಂ ಚ ಸಂಪೂಜ್ಯ ವ್ಯಾಧಿಭಿರ್ನಾಽಭಿಭೂಯತೇ ॥ ೪೮ ॥
ನ ಸ್ತ್ರೀ ವೈಧವ್ಯಮಾಪ್ನೋತಿ ಸಾಂಬಾದಿತ್ಯಸ್ಯ ಸೇವನಾತ್ ।
ವಂಧ್ಯಾ ಪುತ್ರಂ ಪ್ರಸೂಯೇತ ಶುದ್ಧರೂಪಸಮನ್ವಿತಂ ॥ ೪೯ ॥
ಶುಕ್ಲಾಯಾಂ ದ್ವಿಜ ಸಪ್ತಮ್ಯಾಂ ಮಾಘೇ ಮಾಸಿ ರವೇರ್ದಿನೇ ।
ಮಹಾಪರ್ವ ಸಮಾಖ್ಯಾತಂ ರವಿಪರ್ವಸಮಂ ಶುಭಂ ॥ ೫೦ ॥

---

೪೪. ಸಾಂಬ! ಆ ಆನಂದವನದಲ್ಲಿ ನಿನ್ನ ಶಾಪವು ಪರಿಹಾರವಾಗುವುದು. ಆದುದರಿಂದ ನೀನು ಶೀಘ್ರವಾಗಿ ಅಲ್ಲಿಗೆ ಹೋಗು. ಬೇರೆ ವಿಧದಿಂದ ನಿನ್ನ ಶಾಪವು ಪರಿಹಾರವಾಗುವುದಿಲ್ಲ.''

೪೫. ಬಳಿಕ ಕರ್ಮಬಂಧನರಹಿತನಾದ ನಾರದನು ಕೃತಕೃತ್ಯನಾಗಿ ಕೃಷ್ಣನ ಅಪ್ಪಣೆ ಪಡೆದು ಆಕಾಶಮಾರ್ಗದಿಂದ ಹೊರಟುಹೋದನು.

೪೬. ಸಾಂಬನು ಕಾಶಿಯನ್ನು ಸೇರಿ ಸೂರ್ಯನನ್ನು ಪೂಜಿಸಿ ಅವನ ಹಿಂದೆ ಕುಂಡವನ್ನು ರಚಿಸಿ ಮೊದಲಿನಂತೆ ಶುದ್ಧಶರೀರವುಳ್ಳವನಾದನು.

೪೭. ಸಕಲವ್ಯಾಧಿನಾಶಕನಾದ ಸಾಂಬಾದಿತ್ಯನು ಅದು ಮೊದಲ್ಗೊಂಡು ಸಕಲಭಕ್ತರಿಗೂ ಆರೋಗ್ಯವನ್ನೂ, ಸಮಸ್ತ ಸಂಪತ್ತುಗಳನ್ನೂ ದೊರಕಿಸಿಕೊಡುತ್ತಿರುವನು.

೪೮. ಮನುಷ್ಯನು ಆದಿತ್ಯವಾರ ಅರುಣೋದಯಕಾಲದಲ್ಲಿ ಸಾಂಬಕುಂಡದಲ್ಲಿ ಮಿಂದು ಸಾಂಬಾದಿತ್ಯನನ್ನು ಪೂಜಿಸಿದರೆ ವ್ಯಾಧಿಪೀಡಿತನಾಗುವುದಿಲ್ಲ.

೪೯. ಈ ಸಾಂಬಾದಿತ್ಯನ ಸೇವೆಯಿಂದ ಹೆಂಗಸು ವೈಧವ್ಯವನ್ನು ಹೊಂದುವುದಿಲ್ಲ. ಬಂಜೆಯೂ ಶುದ್ಧರೂಪವುಳ್ಳ ಪುತ್ರನನ್ನು ಪ್ರಸವಿಸುವಳು.

೫೦. ಎಲೈ ಅಗಸ್ತ್ಯನೆ! ಮಾಘಶುಕ್ಲಸಪ್ತಮೀ ಭಾನುವಾರವು ಸೂರ್ಯಗ್ರಹಣಕ್ಕೆ ಸಮಾನವಾದ ಮಹಾಪರ್ವವೆನ್ನಿಸುವುದು.

ಮಹಾರೋಗಾತ್ಪ್ರಮುಚ್ಯೇತ ತತ್ರ ಸ್ನಾತ್ವಾಽರುಣೋದಯೇ ।
ಸಾಂಬಾದಿತ್ಯಂ ಪ್ರಪೂಜ್ಯಾಽಪಿ ಧರ್ಮಮಕ್ಷಯಮಾಪ್ನುಯಾತ್ ॥ ೫೧ ॥
ಸನ್ನಿಹತ್ಯಾಂ ಕುರುಕ್ಷೇತ್ರೇ ಯತ್ಪುಣ್ಯಂ ರಾಹುದರ್ಶನೇ ।
ತತ್ಪುಣ್ಯಂ ರವಿಸಪ್ತಮ್ಯಾಂ ಮಾಘೇ ಕಾಶ್ಯಾಂ ನ ಸಂಶಯಃ ॥ ೫೨ ॥
ಮಧೌ ಮಾಸಿ ರವೇರ್ವಾರೇ ಯಾತ್ರಾ ಸಾಂವತ್ಸರೀ ಭವೇತ್ ।
ಅಶೋಕೈಸ್ತತ್ರ ಸಂಪೂಜ್ಯ ಕುಂಡೇ ಸ್ನಾತ್ವಾ ವಿಧಾನತಃ ॥ ೫೩ ॥
ಸಾಂಬಾದಿತ್ಯಂ ನರೋ ಜಾತು ನಶೋಕೈರಭಿಭೂಯತೇ ।
ಸಂವತ್ಸರಕೃತಾತ್ಪಾಪಾದ್ಬಹಿರ್ಭವತಿ ತತ್ಕ್ಷಣಾತ್ ॥ ೫೪ ॥
ವಿಶ್ವೇಶಾತ್ಪಶ್ಚಿಮಾಶಾಯಾಂ ಸಾಂಬೇನಾಽತ್ರ ಮಹಾತ್ಮನಾ ।
ಸಮ್ಯಗಾರಾಧಿತಾ ಮೂರ್ತಿರಾದಿತ್ಯಸ್ಯ ಶುಭಪ್ರದಾ ॥ ೫೫ ॥
ಇಯಂ ಭವಿಷ್ಯಾ ತನ್ಮೂರ್ತಿರಗಸ್ತೇ ತ್ವತ್ಪುರೋಽಕಥಿ ।
ತಾಮರ್ಚ್ಯ ನಮಸ್ಕೃತ್ಯ ಕೃತ್ವಾಽಷ್ಟೌ ಚ ಪ್ರದಕ್ಷಿಣಾಃ ।
ನರೋ ಭವತಿ ನಿಷ್ಪಾಪಃ ಕಾಶೀವಾಸಫಲಂ ಲಭೇತ್ ॥ ೫೬ ॥
ಸಾಂಬಾದಿತ್ಯಸ್ಯ ಮಾಹಾತ್ಮ್ಯಂ ಕಥಿತಂ ತೇ ಮಹಾಮತೇ ।
ಯಚ್ಛ್ರುತ್ವಾಽಪಿ ನರೋ ಜಾತು ಯಮಲೋಕಂ ನಪಶ್ಯತಿ ॥ ೫೭ ॥

---

೫೧. ಅಲ್ಲಿ ಅರುಣೋದಯಕಾಲದಲ್ಲಿ ಮಿಂದು ಸಾಂಬಾದಿತ್ಯನನ್ನು ಪೂಜಿಸಿದವನು ಮಹಾರೋಗದಿಂದ ಮುಕ್ತನಾಗಿ ಅಕ್ಷಯಧರ್ಮವನ್ನು ಹೊಂದುವನು.

೫೨. ಕುರುಕ್ಷೇತ್ರದಲ್ಲಿ ರಾಹುಗ್ರಹಣಕಾಲದಲ್ಲಿ ಲಭಿಸುವ ಪುಣ್ಯವು ಮಾಘಮಾಸದ ಸಪ್ತಮಿಾ ಭಾನುವಾರದ ದಿನ ದೊರೆಯುವುದು.

೫೩–೫೪. ವೈಶಾಖಮಾಸದ ಭಾನುವಾರದ ದಿನ ಅಲ್ಲಿ ವಾರ್ಷಿಕಯಾತ್ರೆಯನ್ನು ಮಾಡಬೇಕು. ಅಲ್ಲಿ ಕುಂಡದಲ್ಲಿ ಮಿಂದು ಸಾಂಬಾದಿತ್ಯನನ್ನು ಅಶೋಕ ಪುಷ್ಪಗಳಿಂದ ಪೂಜಿಸಿದರೆ ಮನುಷ್ಯನು ದುಃಖಗೊಳ್ಳುವುದಿಲ್ಲ. ಮತ್ತು ಅವನ ಒಂದು ವರ್ಷದ ಪಾಪವು ನೀಗುವುದು.

೫೫. ಮಹಾತ್ಮನಾದ ಸಾಂಬನು ವಿಶ್ವೇಶ್ವರನ ಪಶ್ಚಿಮದಲ್ಲಿ ಶುಭವನ್ನು ನೀಡುವ ಆದಿತ್ಯನ ಮೂರ್ತಿಯನ್ನು ಪೂಜಿಸಿರುವನು.

೫೬. ಅಯ್ಯಾ ಅಗಸ್ತ್ಯನೆ! ಹೀಗೆ ಸಾಂಬಾದಿತ್ಯನ ಈ ಮೂರ್ತಿಯ ವಿಷಯವನ್ನು ನಿನಗೆ ಹೇಳಿದ್ದೇನೆ. ಈ ಮೂರ್ತಿಯನ್ನು ಪೂಜಿಸಿ ನಮಸ್ಕರಿಸಿ ಎಂಟು ಪ್ರದಕ್ಷಿಣೆಗಳನ್ನು ಮಾಡಿದ ಮಾನವನು ಪಾಪರಹಿತನಾಗಿ ಕಾಶೀವಾಸದ ಫಲವನ್ನು ಹೊಂದುವನು.

೫೭. ಎಲೈ ಪ್ರಾಜ್ಞನೆ! ನಿನಗೆ ಸಾಂಬಾದಿತ್ಯನ ಮಾಹಾತ್ಮ್ಯವನ್ನು ಹೇಳಿದ್ದೇನೆ. ಇದನ್ನು ಕೇಳಿದ ಮಾನವನು ಒಂದು ಸಾರಿಯೂ ಯಮಲೋಕವನ್ನು ನೋಡುವುದಿಲ್ಲ.

**ಇದಾನೀಂ ದ್ರೌಪದಾದಿತ್ಯಂ ಕಥಯಿಷ್ಯಾಮಿ ತೇಽನಘ ।**
**ತಥಾ ದ್ರೌಪದ ಆದಿತ್ಯಃ ಸಂಸೇವ್ಯೋ ಭಕ್ತಸಿದ್ಧಿದಃ ॥ ೫೮ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಸಾಂಬಾಂದಿತ್ಯಮಾಹಾತ್ಮ್ಯ ವರ್ಣನಂ" ನಾಮಾಷ್ಟಚತ್ವಾರಿಂಶೋಽಧ್ಯಾಯಃ**

---

೫೮. ಈಗ ದ್ರೌಪದಾದಿತ್ಯನ ವಿಚಾರವನ್ನು ಹೇಳುವೆನು. ಭಕ್ತರಿಗೆ ಸಿದ್ಧಿಯನ್ನು ಕೊಡುವ ಆ ದ್ರೌಪದಾದಿತ್ಯನನ್ನು ಎಲ್ಲರೂ ಸೇವಿಸಬೇಕು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ಸಾಂಬಾದಿತ್ಯಮಹಾತ್ಮ್ಯವರ್ಣನ"ವೆಂಬ ನಲವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನಪಂಚಾಶತ್ತಮೋಽಧ್ಯಾಯಃ

## ದ್ರೌಪದಾದಿತ್ಯಮಯೂಖಾದಿತ್ಯವರ್ಣನಂ

ಸೂತ ಉವಾಚ :—

ಪಾರಾಶರ್ಯಮುನೇ ವ್ಯಾಸ ಕುಮಾರಃ ಕುಂಭಜನ್ಮನೇ ।
ಯದಾಽವದತ್ಕಥಾಮೇತಾಂ ತದಾ ಕ್ವ ದ್ರುಪದಾತ್ಮಜಾ ॥ ೧ ॥

ವ್ಯಾಸ ಉವಾಚ :—

ಪುರಾಣಸಂಹಿತಾಂ ಸೂತ ಬ್ರೂತೇ ತ್ರೈಕಾಲಿಕೀಂ ಕಥಾಂ ।
ಸಂದೇಹೋ ನಾಽತ್ರ ಕರ್ತವ್ಯೋ ಯತಸ್ತದ್ಗೋಚರೋಽಖಿಲಂ ॥ ೨ ॥

ಸ್ಕಂದ ಉವಾಚ :—

ಆಕರ್ಣಯ ಮುನೇ ಪೂರ್ವಂ ಪಂಚವಕ್ತ್ರೋ ಹರಃ ಸ್ವಯಂ ।
ಪೃಥಿವ್ಯಾಂ ಪಂಚಧಾ ಭೂತ್ವಾ ಪ್ರಾದುರಾಸೀಜ್ಜಗದ್ಧಿತಃ ॥ ೩ ॥
ಉಮಾಽಪಿ ಚ ಜಗದ್ಧಾತ್ರೀ ದ್ರುಪದಸ್ಯ ಮಹೀಭುಜಃ ।
ಯಜತೋ ವಹ್ನಿಕುಂಡಾಚ್ಚ ಪ್ರಾದುಶ್ಚಕ್ರೇಽತಿಸುಂದರೀ ॥ ೪ ॥
ಪಂಚಾಽಪಿ ಪಾಂಡುತನಯಾಃ ಸಾಕ್ಷಾದ್ರುದ್ರವಪುರ್ಧರಾಃ ।
ಅವತೇರುರಿಹ ಸ್ವರ್ಗಾದ್ದುಷ್ಟಸಂಹಾರಕಾರಕಾಃ ॥ ೫ ॥

---

## ಕನ್ನಡದ ಅನುವಾದ

### ದ್ರೌಪದಾದಿತ್ಯಮಯೂಖಾದಿತ್ಯವರ್ಣನ

೧. ಸೂತನು ಕೇಳುತ್ತಾನೆ:—ಪರಾಶರಸುತನಾದ ಎಲೈ ವ್ಯಾಸನೆ! ಸ್ಕಂದನು ಅಗಸ್ತ್ಯನಿಗೆ ಹೇಳಿದಾಗ ದ್ರುಪದತನಯಳಾದ ದ್ರೌಪದಿಯು ಎಲ್ಲಿದ್ದಳು?

೨. ವ್ಯಾಸನು ಹೇಳುತ್ತಾನೆ :—ಸೂತ! ಪುರಾಣವು ತ್ರಿಕಾಲಗಳ ಕಥೆಯನ್ನೂ ಹೇಳುವುದು. ಸಮಸ್ತ ವಿಷಯಗಳೂ ಪುರಾಣಕ್ಕೆ ಗೋಚರವಾಗುವುವು.

೩. ಸ್ಕಂದನು ಹೇಳುತ್ತಾನೆ:—ಮುನಿಯೆ! ಕೇಳು. ಹಿಂದೆ ಪಂಚಮುಖನೂ, ಜಗತ್ತಿಗೆ ಹಿತವನ್ನುಂಟುಮಾಡುವವನೂ ಆದ ಶಿವನು ಐದು ಬಗೆಯಾಗಿ ಭೂಮಿಯಲ್ಲಿ ಅವತರಿಸಿದನು.

೪. ಜಗನ್ಮಾತೆಯಾದ ಉಮೆಯೂ ಯಾಗಮಾಡುತ್ತಿರುವ ದ್ರುಪದರಾಜನ ವಹ್ನಿಕುಂಡದಿಂದ ಉದ್ಭವಿಸಿದಳು.

೫. ಭಯಂಕರ ದೇಹವನ್ನು ಧರಿಸಿದ ಐದು ಮಂದಿ ಪಾಂಡವರು ದುಷ್ಟಸಂಹಾರಕ್ಕಾಗಿ ಸ್ವರ್ಗದಿಂದ ಭೂಮಿಗೆ ಇಳಿದುಬಂದರು.

ನಾರಾಯಣೋಽಪಿ ಕೃಷ್ಣತ್ವಂ ಪ್ರಾಪ್ಯ ತತ್ಸಾಹಚರ್ಯಕೃತ್ ।
ಉದ್ವೃತ್ತವೃತ್ತಶಮನಃ ಸದ್ವೃತ್ತಸ್ಥಿತಿಕಾರಕಃ ॥ ೬ ॥
ಪ್ರತಪಂತಃ ಪೃಥಿವ್ಯಾಂ ತೇ ಪಾರ್ಥಾಶ್ಚೇರುಃ ಪೃಥಕ್ಪೃಥಕ್ ।
ಉದಯಾಽಸುದಯೌ ತಸ್ಮಿನ್ಸಂಪದಾಂ ವಿಪದಾಮಪಿ ॥ ೭ ॥
ಕದಾಚಿತ್ತೇ ಮಹಾವೀರಾ ಭ್ರಾತೃವ್ಯಪ್ರತಿಪಾದಿತಾಂ ।
ವಿಪತ್ತಿಮಾಪ್ಯ ಮಹತೀಂ ಬಭೂವುಃ ಕಾನನೌಕಸಃ ॥ ೮ ॥
ಪಾಂಚಾಲ್ಯಪಿ ಚ ತತ್ಪತ್ನೀ ಪತಿವ್ಯಸನತಾಪಿತಾ ।
ಧರ್ಮಜ್ಞಾ ಪ್ರಾಪ್ಯ ತನ್ವಂಗೀ ಬ್ರಧ್ನಮಾರಾಧಯದ್ಭೃಶಂ ॥ ೯ ॥
ಆರಾಧಿತೋಽಥ ಸವಿತಾ ತಯಾ ದ್ರುಪದಕನ್ಯಯಾ ।
ಸದರ್ವೀಂ ಸಪಿಧಾನಾಂ ಚ ಸ್ಥಾಲಿಕಾಮಕ್ಷಯಾಂ ದದೌ ॥ ೧೦ ॥
ಉವಾಚ ಚ ಪ್ರಸನ್ನಾತ್ಮಾ ಭಾಸ್ಕರೋ ದ್ರುಪದಾತ್ಮಜಾಂ ।
ಆರಾಧಯಂತೀಂ ಭಾವೇನ ಸರ್ವತ್ರ ಶುಚಿಮಾನಸಾಂ ॥ ೧೧ ॥
ಸ್ಥಾಲ್ಯೈತಯಾ ಮಹಾಭಾಗೇ ಯಾವಂತೋಽನ್ನಾರ್ಥಿನೋ ಜನಾಃ ।
ತಾವಂತಸ್ತೃಪ್ತಿಮಾಪ್ಸ್ಯಂತಿ ಯಾವತ್ತ್ವಂ ನ ಭೋಕ್ಷ್ಯಸೇ ॥ ೧೨ ॥
ಭುಕ್ತಾಯಾಂ ತ್ವಯಿ ರಿಕ್ತೈಷಾ ಪೂರ್ಣಭಕ್ತಾ ಭವಿಷ್ಯತಿ ।
ರಸವದ್ವ್ಯಂಜನನಿಧಿರಿಚ್ಛಾಭಕ್ಷ್ಯಪ್ರದಾಯಿನೀ ॥ ೧೩ ॥

---

೬. ನಾರಾಯಣನೂ ಕೃಷ್ಣನ ರೂಪವನ್ನು ತಳೆದು ಪಾಂಡವರಿಗೆ ಸಹಾಯ ಮಾಡುವವನೂ, ದುಷ್ಟರನ್ನು ಶಿಕ್ಷಿಸುವವನೂ, ಶಿಷ್ಟರನ್ನು ಪಾಲಿಸುವವನೂ ಆದನು.

೭. ಪಾಂಡವರು ಆ ಸಮಯದಲ್ಲಿ ಸಂಪತ್ತು ಮತ್ತು ಆಪತ್ತುಗಳ ವೃದ್ಧಿಕ್ಷಯಗಳನ್ನು ಹೊಂದುತ್ತ ಭೂಮಿಯಲ್ಲಿ ಸಂಚರಿಸಿದರು.

೮. ಒಂದಾನೊಂದು ಸಮಯದಲ್ಲಿ ವೀರರಾದ ಆ ಪಾಂಡವರು ದಾಯಾದಿಗಳು ಉಂಟುಮಾಡಿದ ಮಹಾ ವಿಪತ್ತಿಗೆ ತುತ್ತಾಗಿ ಅರಣ್ಯವಾಸಿಗಳಾದರು.

೯. ಧರ್ಮವನ್ನರಿತ ಅವರ ಪತ್ನಿಯಾದ ದ್ರೌಪದಿಯು ಪತಿಗಳ ಆ ವ್ಯಸನದಿಂದ ದುಃಖಿತಳಾಗಿ ಸೂರ್ಯನನ್ನು ಅತಿಶಯವಾಗಿ ಪೂಜಿಸಿದಳು.

೧೦–೧೧. ಅವಳಿಂದ ಆರಾಧಿಸಲ್ಪಟ್ಟ ಸೂರ್ಯನು ಆ ದ್ರೌಪದಿಗೆ ಮುಚ್ಚಳದಿಂದಲೂ, ಸೌಟನಿಂದಲೂ ಸಹಿತವಾದ ಅಕ್ಷಯಪಾತ್ರೆಯನ್ನು ವರವಾಗಿ ಕೊಟ್ಟನು. ಪ್ರಸನ್ನನಾದ ಆ ಭಾಸ್ಕರನು ಆ ಬಳಿಕ, ಭಕ್ತಿಯಿಂದ ಪೂಜಿಸುತ್ತಿರುವ ಶುದ್ಧಮನಸ್ಕಳಾದ ಆ ದ್ರೌಪದಿಯನ್ನು ಕುರಿತು ಇಂತೆಂದನು.

೧೨. "ಎಲೌ ಭಾಗ್ಯವಂತಳೆ! ನೀನು ಭೋಜನಮಾಡದಿರುವವರೆಗೆ ಅನ್ನವನ್ನಿಚ್ಛಿಸುವ ಜನರೆಲ್ಲರೂ ಈ ಪಾತ್ರಾನ್ನದಿಂದಲೇ ತೃಪ್ತರಾಗುವರು.

೧೩. ನೀನು ಭೋಜನಮಾಡಿದಮೇಲೆ ಬರಿದಾಗುವ ಈ ಪಾತ್ರೆಯು ಮತ್ತೆ

ಇತ್ಥಂ ವರಸ್ತ್ವಯಾಲಬ್ಧಃ ಕಾಶ್ಯಾಮಾದಿತ್ಯತೋ ಮುನೇ ।
ಅಪರಶ್ಚ ವರೋ ದತ್ತಸ್ತಸ್ಯೈ ದೇವೇನ ಭಾಸ್ವತಾ ॥ ೧೪ ॥

ರವಿರುವಾಚ :—

ವಿಶ್ವೇಶಾದ್ದಕ್ಷಿಣೇಭಾಗೇ ಯೋ ಮಾಂ ತ್ವತ್ಪುರತಃ ಸ್ಥಿತಂ ।
ಆರಾಧಯಿಷ್ಯತಿ ನರಃ ಕ್ಷುದ್ಬಾಧಾ ತಸ್ಯ ನಶ್ಯತಿ ॥ ೧೫ ॥
ಅನ್ಯಶ್ಚ ಮೇ ವರೋ ದತ್ತೋ ವಿಶ್ವೇಶೇನ ಪತಿವ್ರತೇ ।
ತಪಸಾ ಪರಿತುಷ್ಟೇನ ತಂ ನಿಶಾಮಯ ವಚ್ಮಿ ತೇ ॥ ೧೬ ॥
ಪ್ರಾಗ್ರವೇ ತ್ವಾಂ ಸಮಾರಾಧ್ಯ ಯೋ ಮಾಂ ದ್ರಕ್ಷ್ಯತಿ ಮಾನವಃ ।
ತಸ್ಯ ತ್ವಂ ದುಃಖತಿಮಿರಮಪಾನುದ ನಿಜೈಃ ಕರೈಃ ॥ ೧೭ ॥
ಅತೋ ಧರ್ಮಪ್ರಿಯೇ ನಿತ್ಯಂ ಪ್ರಾಪ್ಯ ವಿಶ್ವೇಶ್ವರಾದ್ವರಂ ।
ಕಾಶೀಸ್ಥಿತಾನಾಂ ಜಂತೂನಾಂ ನಾಶಯಾಮ್ಯಘಸಂಚಯಂ ॥ ೧೮ ॥
ಯೇ ಮಾಮತ್ರ ಭಜಿಷ್ಯಂತಿ ಮಾನವಾಃ ಶ್ರದ್ಧಯಾಽನ್ವಿತಾಃ ।
ತ್ವದ್ವರೋದ್ಯತಪಾಣಿಂ ಚ ತೇಷಾಂ ದಾಸ್ಯಾಮಿ ಚಿಂತಿತಂ ॥ ೧೯ ॥

---

ಅನ್ನದಿಂದ ತುಂಬಿರುವುದೂ, ರಸವುಳ್ಳ ವ್ಯಂಜನವುಳ್ಳುದೂ, ಸ್ವೇಚ್ಛೆಯಾಗಿ ಭಕ್ಷ್ಯವನ್ನು ಕೊಡುವುದೂ ಆಗುವುದು.''

೧೪. ಮುನಿಯೆ! ಹೀಗೆ ಆ ದ್ರುಪದನಂದನೆಯು ಕಾಶಿಯಲ್ಲಿ ಸೂರ್ಯನಿಂದ ವರವನ್ನು ಪಡೆದಳು. ಅನಂತರ ಸೂರ್ಯನು ಅವಳಿಗೆ ಮತ್ತೊಂದು ವರವನ್ನಿತ್ತನು.

೧೫. ಸೂರ್ಯನು ಹೇಳುತ್ತಾನೆ:—ಎಲೌ ಪತಿವ್ರತೆಯೆ! ವಿಶ್ವೇಶ್ವರನ ದಕ್ಷಿಣದಿಕ್ಕಿನಲ್ಲಿ ನಿನ್ನ ಮುಂದಿರುವ ನನ್ನನ್ನು ಪೂಜಿಸಿದ ಮಾನವನ ಹಸಿವು ಪರಿಹಾರವಾಗುವುದು.

೧೬. ತಪಸ್ಸಿನಿಂದ ಸಂತುಷ್ಟನಾದ ವಿಶ್ವೇಶ್ವರನು ನನಗೆ ಮತ್ತೊಂದು ವರವನ್ನಿತ್ತಿರುವನು. ಅದನ್ನು ನಿನಗೆ ಹೇಳುವೆನು. ಕೇಳು.

೧೭. ''ಎಲೈ ಸೂರ್ಯನೆ! ಮೊದಲು ನಿನ್ನನ್ನು ಪೂಜಿಸಿ ಆ ಬಳಿಕ ನನ್ನ ದರ್ಶನವನ್ನು ಮಾಡುವ ಮಾನವನ ದುಃಖಾಂಧಕಾರವನ್ನು ನೀನು ನಿನ್ನ ಕಿರಣಗಳಿಂದ ನಿವಾರಿಸು.'' ಇದೇ ಆ ವರವು.

೧೮. ಆದುದರಿಂದ ಎಲೌ ಧರ್ಮರಾಜನ ಪತ್ನಿಯೆ! ನಾನು ವಿಶ್ವೇಶ್ವರನಿಂದ ಈ ರೀತಿ ವರವನ್ನು ಹೊಂದಿರುವೆನಾದುದರಿಂದ ಕಾಶಿಯಲ್ಲಿರುವ ಪ್ರಾಣಿಗಳ ಪಾಪಸಮೂಹವನ್ನು ಹೋಗಲಾಡಿಸುವೆನು.

೧೯. ಆದರೆ ಇಲ್ಲಿ ನಿನಗೆ ವರವನ್ನು ಕೊಡಲುದ್ಯುಕ್ತನಾದ ನನ್ನನ್ನು ಶ್ರದ್ಧೆಯಿಂದ ಸೇವಿಸುವ ಮಾನವರಿಗೆ ಇಷ್ಟಾರ್ಥವನ್ನೆಲ್ಲ ದೊರಕಿಸಿಕೊಡುವೆನು.

ಭವತೀಂ ಮತ್ಸಮೀಪಸ್ಥಾಂ ಯುಧಿಷ್ಠಿರಪತಿವ್ರತಾಂ ।
ವಿಶ್ವೇಶಾದ್ದಕ್ಷಿಣೇ ಭಾಗೇ ದಂಡಪಾಣೇಃ ಸಮೀಪತಃ ॥ ೨೦ ॥
ಯೇಽರ್ಚಯಿಷ್ಯಂತಿ ಭಾವೇನ ಪುರುಷಾ ವಾ ಸ್ತ್ರಿಯೋಽಪಿ ವಾ ।
ತೇಷಾಂ ಕದಾಚಿನ್ನೋ ಭಾವಿ ಭಯಂ ಪ್ರಿಯವಿಯೋಗಜಂ ॥ ೨೧ ॥
ನವ್ಯಾಧಿಜಂ ಭಯಂ ಕ್ವಾಽಪಿ ನ ಕ್ಷುತ್ತೃಡ್ದೋಷಸಂಭವಂ ।
ದ್ರೌಪದೀಕ್ಷಣತಃ ಕಾಶ್ಯಾಂ ತವ ಧರ್ಮಪ್ರಿಯೇಽನಘೇ ॥ ೨೨ ॥
ಇತಿ ದತ್ವಾ ವರಾನ್ದೇವ ಆದಿತ್ಯಃ ಸರ್ವದಃ ಸತಾಂ ।
ಶಂಭುಮಾರಾಧಯಾಮಾಸ ಧರ್ಮಂ ದ್ರೌಪದ್ಯುಪಾಯಯೌ ॥ ೨೩ ॥
ಆದಿತ್ಯಸ್ಯ ಕಥಾಮೇತಾಂ ದ್ರೌಪದ್ಯಾರಾಧಿತಸ್ಯ ವೈ ।
ಯಃ ಶ್ರೋಷ್ಯತಿ ನರೋ ಭಕ್ತ್ಯಾ ತಸ್ಯೈನಃ ಕ್ಷಯಮೇಷ್ಯತಿ ॥ ೨೪ ॥
ಸ್ಕಂದ ಉವಾಚ :—
ದ್ರೌಪದಾದಿತ್ಯಮಾಹಾತ್ಮ್ಯಂ ಸಂಕ್ಷೇಪಾತ್ಕಥಿತಂ ಮಯಾ ।
ಮಯೂಖಾದಿತ್ಯ ಮಾಹಾತ್ಮ್ಯಂ ಶೃಣ್ವಿದಾನೀಂ ಘಟೋದ್ಭವ ॥ ೨೫ ॥
ಪುರಾ ಪಂಚನದೇ ತೀರ್ಥೇ ತ್ರಿಷು ಲೋಕೇಷು ವಿಶ್ರುತೇ ।
ಸಹಸ್ರರಶ್ಮಿರ್ಭಗವಾಂಸ್ತಪಸ್ತೇಪೇ ಸುದಾರುಣಂ ॥ ೨೬ ॥

---

೨೦–೨೧. ನನ್ನ ಮತ್ತು ದಂಡಪಾಣಿಯ ಬಳಿ ವಿಶ್ವೇಶ್ವರನ ದಕ್ಷಿಣಕ್ಕಿರುವ ಯುಧಿಷ್ಠಿರನ ಪತ್ನಿಯಾದ ನಿನ್ನನ್ನು ಭಕ್ತಿಯಿಂದ ಪೂಜಿಸುವವರು ಪುರುಷರಾಗಲಿ ಸ್ತ್ರೀಯರಾಗಲಿ ಅವರಿಗೆ ಪ್ರಿಯಜನರ ವಿಯೋಗದಿಂದುಂಟಾದ ಭಯವು ಸಂಭವಿಸುವುದಿಲ್ಲ.

೨೨. ನಿರ್ದುಷ್ಟಳಾದ ಓ ಧರ್ಮಪತ್ನಿಯೆ! ಕಾಶಿಯಲ್ಲಿ ನಿನ್ನನ್ನು ಸಂದರ್ಶಿಸಿದ ಮಾನವರಿಗೆ ವ್ಯಾಧಿ, ಹಸಿವು, ಬಾಯಾರಿಕೆಗಳ ಭಯವುಂಟಾಗುವುದಿಲ್ಲ.''

೨೩. ಸಜ್ಜನರಿಗೆ ಸಮಸ್ತವನ್ನೂ ದಯೆಗೈಯುವ ಸೂರ್ಯದೇವನು ಹೀಗೆ ದ್ರೌಪದಿಗೆ ವರವನ್ನಿತ್ತು ಶಿವನನ್ನು ಪೂಜಿಸಿದನು. ದ್ರೌಪದಿಯೂ ಧರ್ಮರಾಜನೆಡೆಗೆ ಹೊರಟುಹೋದಳು.

೨೪. ದ್ರೌಪದಿಯು ಆರಾಧಿಸಿದ ಆದಿತ್ಯನ ಈ ಕಥೆಯನ್ನು ಭಕ್ತಿಯಿಂದ ಕೇಳಿದ ಮಾನವನ ಪಾಪವು ಕ್ಷಯಿಸುವುದು.

೨೫. ಸ್ಕಂದನು ಹೇಳುತ್ತಾನೆ:—ಎಲೈ ಅಗಸ್ತ್ಯನೆ! ನಾನು ದ್ರೌಪದಾದಿತ್ಯನ ಮಾಹಾತ್ಮ್ಯವನ್ನು ಸಂಕ್ಷೇಪವಾಗಿ ಹೇಳಿರುವೆನು. ಈಗ ಮಯೂಖಾದಿತ್ಯನ ಮಾಹಾತ್ಮ್ಯವನ್ನು ಕೇಳು.

೨೬. ಹಿಂದೆ ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ಪಂಚನದತೀರ್ಥದಲ್ಲಿ ಭಾಸ್ಕರನು ದಾರುಣವಾದ ತಪಸ್ಸನ್ನಾಚರಿಸಿದನು.

ಪ್ರತಿಷ್ಠಾಪ್ಯ ಮಹಾಲಿಂಗಂ ಗಭಸ್ತೀಶ್ವರಸಂಜ್ಞಿತಂ ।
ಗೌರೀಂ ಚ ಮಂಗಲಾನಾಮ್ನೀಂ ಭಕ್ತಮಂಗಲದಾಂ ಸದಾ ॥ ೨೭ ॥
ದಿವ್ಯಂ ವರ್ಷಸಹಸ್ರಂ ತು ಶತೇನ ಗುಣಿತಂ ಮುನೇ ।
ಆರಾಧಯಂಭಿವಂ ಸೋಮಂ ಸೋಮಾರ್ಧಕೃತಶೇಖರಂ ॥ ೨೮ ॥
ಸ್ವರೂಪತಸ್ತು ತಪನಸ್ತ್ರಿಲೋಕೀತಾಪನಕ್ಷಮಃ ।
ತತೋಽತಿತೀವ್ರತಪಸಾ ಜಜ್ವಾಲ ನಿತರಾಂ ಮುನೇ ॥ ೨೯ ॥
ಮಯೂಖೈಸ್ತತ್ರ ಸವಿತುಸ್ತ್ರೈಲೋಕ್ಯದಹನಕ್ಷಮೈಃ ।
ತತಂ ಸಮಸ್ತಂ ತತ್ಕಾಲೇ ದ್ಯಾವಾಭೂಮ್ಯೋರ್ಯದಂತರಂ ॥ ೩೦ ॥
ವೈಮಾನಿಕೈರ್ವಿಷ್ಣುಪದೇ ತತ್ಯಜೇ ಚ ಗತಾಗತಂ ।
ತೀವ್ರೇ ಪತಂಗಮಹಸಿ ಪತಂಗತ್ವಭಯಾದಿವ ॥ ೩೧ ॥
ಮಯೂಖಾ ಏವ ದೃಶ್ಯಂತೇ ತಿರ್ಯಗೂರ್ಧ್ವಮಧೋಽಪಿ ಚ ।
ಆದಿತ್ಯಸ್ಯ ನಚಾದಿತ್ಯೋ ನೀಪಪುಷ್ಪಸ್ಥಿತೇರಿವ ॥ ೩೨ ॥
ತಸ್ಯ ವೈ ಮಹಸಾಂ ರಾಶೇಸ್ತಪೋರಾಶೇಸ್ತಪೋರ್ಚಿಷಾಂ ।
ಚಕಂಪೇ ಸಾಧ್ವಸಾತ್ತೀವ್ರಾತ್ತ್ರೈಲೋಕ್ಯಂ ಸಚರಾಚರಂ ॥ ೩೩ ॥
ಸೂರ್ಯ ಆತ್ಮಾಽಸ್ಯ ಜಗತೋ ವೇದೇಷು ಪರಿಪಠ್ಯತೇ ।
ಸ ಏವ ಚೇಜ್ಜ್ವಲಯಿತಾ ಕೋನಸ್ತ್ರಾತಾ ಭವೇದಿಹ ॥ ೩೪ ॥

---

೨೭–೨೯. ಆ ಸೂರ್ಯನು ಗಭಸ್ತೀಶ್ವರನೆಂಬ ಮಹಾಲಿಂಗವನ್ನೂ, ಭಕ್ತರಿಗೆ ಮಂಗಳವನ್ನೀಯುವ ಮಂಗಳೆಯೆಂಬ ಗೌರಿಯನ್ನೂ ಪ್ರತಿಷ್ಠೆಮಾಡಿ ದಿವ್ಯಲಕ್ಷವರ್ಷಕಾಲ ಚಂದ್ರಮೌಳೀಶ್ವರನನ್ನು ಆರಾಧಿಸುತ್ತ ತಾನೇ ಮೂರು ಲೋಕಗಳನ್ನೂ ಸಂತಾಪಗೊಳಿಸಲು ಸಮರ್ಥನಾದರೂ ಕಠಿನವಾದ ತಪಸ್ಸಿನಿಂದ ಜ್ವಲಿಸಿದನು.

೩೦. ಆಗ ಆಕಾಶ ಭೂಮಿಗಳ ಮಧ್ಯಪ್ರದೇಶವು ಮೂರು ಲೋಕಗಳನ್ನೂ ಸುಡಲು ಸಮರ್ಥಗಳಾದ ಸೂರ್ಯನ ಕಾಂತಿಗಳಿಂದ ವ್ಯಾಪ್ತವಾಯಿತು.

೩೧. ದಿವಿಜರು ತಾವು ಕಠಿನವಾದ ಸೂರ್ಯನ ತೇಜಸ್ಸಿನಲ್ಲಿ ಪತಂಗ ದಂತಾಗುವೆವೆಂದು ಹೆದರಿ ಆಕಾಶದಲ್ಲಿ ಸಂಚರಿಸುವುದನ್ನೇ ಬಿಟ್ಟರು.

೩೨. ಈಚಲ ಹೂವಿನಂತೆ ಸೂರ್ಯನ ಮೇಲೂ, ಕೆಳಗೂ, ಸುತ್ತಲೂ ಕಾಂತಿಗಳೇ ಕಾಣಿಸಿದುವು. ಸೂರ್ಯನು ಮಾತ್ರ ಕಾಣಿಸಲಿಲ್ಲ.

೩೩. ಹೀಗೆ ತಪಸ್ಸಿನ ರಾಶಿಯುಳ್ಳ ಆ ಸೂರ್ಯನ ತೀವ್ರತಪೋಜ್ವಾಲೆಯ ಭಯದಿಂದ ಚರಾಚರಾತ್ಮಕವಾದ ಮೂರು ಲೋಕಗಳೂ ನಡುಗಿದುವು.

೩೪. "ಜಗತ್ತಿಗೆ ಸೂರ್ಯನೇ ಆತ್ಮವೆಂದು ವೇದವು ಸಾರುತ್ತಿರುವುದು. ಅವನೇ ಈ ರೀತಿ ಜ್ವಲಿಸಿದರೆ ನಮ್ಮನ್ನು ಕಾಪಾಡುವವರಾರು.

ಜಗಚ್ಚಕ್ಷುರಸೌ ಸೂರ್ಯೋ ಜಗದಾತ್ಮೈಷ ಭಾಸ್ಕರಃ ।
ಜಗದ್ಯೋ ಯಸ್ಮೃತಪ್ರಾಯಂ ಪ್ರಾತಃ ಪ್ರಾತಃ ಪ್ರಬೋಧಯೇತ್ ॥ ೩೫॥
ತಮೋಽಂಧಕೂಪಪತಿತಮುದ್ಯನ್ನೇಷ ದಿನೇ ದಿನೇ ।
ಪ್ರಸಾರ್ಯ ಪರಿತಃ ಪ್ರಾಣೀನ್ಪ್ರಾಣಿಜಾತಂ ಸಮುದ್ಧರೇತ್ ॥ ೩೬ ॥
ಉದಿತೇಽತ್ರೋದಿಮೋ ನಿತ್ಯಮಸ್ತಂ ಯಾತ್ಯಸ್ತಮಾಪ್ನುಮಃ ।
ಉದಯೇಽನುದಯೇ ತಸ್ಮಾದಸ್ಮಾಕಂ ಕಾರಣಂ ರವಿಃ ॥ ೩೭ ॥
ಇತಿ ವ್ಯಾಕುಲಿತಂ ವಿಶ್ವಂ ಪಶ್ಯನ್ವಿಶ್ವೇಶ್ವರಃ ಸ್ವಯಂ ।
ವಿಶ್ವತ್ರಾತಾ ವರಂ ದಾತುಂ ಸಂಜಗ್ಮೇ ತಿಗ್ಮರಶ್ಮಯೇ ॥ ೩೮ ॥
ಮಯೂಖಮಾಲಿನಂ ಶಂಭುಮಾಲೋಕ್ಯಾತಿಸುನಿಶ್ಚಲಂ ।
ಸಮಾಧಿವಿಸ್ಮೃತಾತ್ಮಾನಂ ವಿಸಿಸ್ಮಾಯ ತಪಃ ಪ್ರತಿ ॥ ೩೯ ॥
ಉವಾಚ ಚ ಪ್ರಸನ್ನಾತ್ಮಾ ಶ್ರೀಕಂಠಃ ಪ್ರಣತಾರ್ತಿಹೃತ್ ।
ಅಲಂ ತಪಸ್ತ್ವಾ ವರಂ ಬ್ರೂಹಿ ದ್ಯುಮಣೇ ಮಹಸಾಂ ನಿಧೇ ॥ ೪೦ ॥
ನಿರುದ್ಧೇಂದ್ರಿಯವೃತ್ತಿತ್ವಾದ್ಬ್ರಧ್ನೋ ಧ್ಯಾನಸಮಾಧಿನಾ ।
ನ ಜಗ್ರಾಹ ವಚಃ ಶಂಭೋರ್ದ್ವಿಸ್ತ್ರಿರುಕ್ತೋಽಪ್ಯಕರ್ಣವತ್ ॥ ೪೧ ॥

---

೩೫. ಜಗತ್ತಿನ ಕಣ್ಣೂ, ಆತ್ಮನೂ ಆದ ಸೂರ್ಯನು ಮೃತಪ್ರಾಯವಾದ ಲೋಕವನ್ನು ಬೆಳಗ್ಗೆ ಎಚ್ಚರಗೊಳಿಸುವನು.

೩೬. ಇವನು ಪ್ರತಿದಿನವೂ ಉದಯಿಸಿ ತನ್ನ ಕಿರಣಗಳನ್ನು ಸುತ್ತಲೂ ಹರಡಿ ಅಂಧಕಾರವೆಂಬ ಕತ್ತಲೆಯ ಬಾವಿಯಲ್ಲಿ ಬಿದ್ದಿರುವ ಪ್ರಾಣಿಗಳನ್ನು ಉದ್ಧರಿಸುವನು.

೩೭. ಈ ಸೂರ್ಯನು ಉದಯಿಸಲು ನಾವೂ ಜಾಗರಗೊಳ್ಳುವೆವು. ಇವನು ಅಸ್ತಂಗತನಾಗಲು ನಾವು ನಿದ್ರಿಸುವೆವು. ನಮ್ಮ ಉದಯಾನುದಯಗಳಿಗೆ ಈ ಸೂರ್ಯನೇ ಕಾರಣನು.''

೩೮. ಹೀಗೆ ವ್ಯಾಕುಲಗೊಂಡ ಪ್ರಪಂಚವನ್ನು ವಿಶ್ವರಕ್ಷಕನಾದ ವಿಶ್ವೇಶ್ವರನು ತಾನೇ ನೋಡಿ ಆ ಸೂರ್ಯನಿಗೆ ವರವನ್ನು ನೀಡಲು ಹೋದನು.

೩೯. ಶಂಭುವು ಅತಿ ನಿಶ್ಚಲನೂ, ಸಮಾಧಿಯಿಂದ ತನ್ನನ್ನು ಮರೆತವನೂ, ಆದ ಸೂರ್ಯನನ್ನು ಕಂಡು ಅವನ ತಪಸ್ಸಿನಿಂದ ಆಶ್ಚರ್ಯಗೊಂಡನು.

೪೦. ಪ್ರಸನ್ನವಾದ ಮನಸ್ಸುಳ್ಳವನೂ, ನಮಸ್ಕರಿಸಿದವರ ದುಃಖವನ್ನು ನೀಗಿಸುವವನೂ ಆದ ಶಿವನು ಹೀಗೆಂದನು. ''ಅಯ್ಯಾ ಕಿರಣಮಾಲಿಯೆ! ಇನ್ನು ತಪಸ್ಸನ್ನು ಸಾಕುಮಾಡು. ಬೇಕಾದ ವರವನ್ನು ಕೇಳಿಕೊ.''

೪೧. ಸೂರ್ಯನು ಧ್ಯಾನದಿಂದ ಇಂದ್ರಿಯವ್ಯಾಪಾರವನ್ನು ತಡೆದವನಾದ್ದರಿಂದ ಎರಡು ಮೂರು ಸಾರಿ ಹೀಗೆ ನುಡಿದರೂ ಶಿವನ ಮಾತನ್ನು ಕೇಳಲಿಲ್ಲ.

ಕಾಷ್ಠೀಭೂತಂತು ತಂ ಜ್ಞಾತ್ವಾ ಶಿವಃ ಪಸ್ಪರ್ಶ ಪಾಣಿನಾ ।
ಮಹಾತಪಃಸಮುದ್ಭೂತ ಸಂತಾಪಾಽಮೃತವರ್ಷಿಣಾ ॥ ೪೨ ॥
ತತ ಉನ್ಮೀಲಯಾಂಚಕ್ರೇ ಲೋಚನೇ ವಿಶ್ವಲೋಚನಃ ।
ತಸ್ಯೋದಯಮಿವ ಪ್ರಾಪ್ಯ ಪ್ರಗೇ ಪಂಕಜಿನೀವನೀ ॥ ೪೩ ॥
ಪರಿವ್ಯಪೇತಸಂತಾಪಸ್ತ್ವಪನಃ ಸ್ಪರ್ಶನಾದ್ವಿಭೋಃ ।
ಅವಗ್ರಹಿತಸಸ್ಯಶ್ರೀರುಲ್ಲಲಾಸ ಯಥಾಂಬುದಾತ್ ॥ ೪೪ ॥
ಮಿತ್ರೋ ನೇತ್ರಾತಿಥೀಕೃತ್ಯ ತ್ರ್ಯಕ್ಷಂ ಪ್ರತ್ಯಕ್ಷಮಗ್ರತಃ ।
ದಂಡವತ್ಪ್ರಣನಾಮೋಚ್ಚೈಸ್ತುಷ್ಟಾವ ಚ ಪಿನಾಕಿನಂ ॥ ೪೫ ॥

ರವಿರುವಾಚ :—

ದೇವದೇವ ಜಗತಾಂ ಪತೇ ವಿಭೋ
ಭರ್ಗ ಭೀಮ ಭವ ಚಂದ್ರಭೂಷಣ ।
ಭೂತನಾಥ ಭವಭೀತಿಹಾರಕ
ತ್ವಾಂ ನತೋಽಸ್ಮಿ ನತವಾಂಛಿತಪ್ರದ ॥ ೪೬ ॥
ಚಂದ್ರಚೂಡ ಮೃಡ ಧೂರ್ಜಟೇ ಹರ
ತ್ರ್ಯಕ್ಷ ದಕ್ಷಮಖಪ್ರಶಾತನ ।
ಶಾಂತ ಶಾಶ್ವತ ಶಿವಾಪತೇ ಶಿವ
ತ್ವಾಂ ನತೋಽಸ್ಮಿ ನತವಾಂಛಿತಪ್ರದ ॥ ೪೭ ॥

---

೪೨. ಆಗ ಶಿವನು ಆ ಸೂರ್ಯನು ಕಟ್ಟಿಗೆಯಂತಾಗಿರುವುದನ್ನರಿತು ಮಹಾತಪಸ್ಸಿನಿಂದುಂಟಾದ ತಾಪಕ್ಕೆ ಅಮೃತವರ್ಷದಂತಿರುವ ಕೈಯಿಂದ ಮುಟ್ಟಿದನು.

೪೩–೪೪. ಬಳಿಕ ಸೂರ್ಯನು ಅವನ ಉದಯದಿಂದ ಕಮಲವನವು ವಿಕಾಸಗೊಳ್ಳುವಂತೆ ಕಣ್ಣುಗಳನ್ನು ತೆರೆದನು. ಅವನು ಶಂಕರನ ಆ ಹಸ್ತಸ್ಪರ್ಶದಿಂದ ಸಂತಾಪರಹಿತನಾಗಿ ಮಳೆಯಿಲ್ಲದೆ ಒಣಗಿದ ಸಸ್ಯಸಂಪತ್ತು ಮೋಡದಿಂದ ಉಲ್ಲಾಸಗೊಳ್ಳುವಂತೆ ಉಲ್ಲಾಸಗೊಂಡನು.

೪೫. ಸೂರ್ಯನು ಮುಂದೆ ಪ್ರತ್ಯಕ್ಷನಾಗಿರುವ ತ್ರಿನೇತ್ರನನ್ನು ಈಕ್ಷಿಸಿ ಸಾಷ್ಟಾಂಗ ನಮಸ್ಕಾರಮಾಡಿ ಸ್ತುತಿಸಿದನು.

೪೬. ಸೂರ್ಯನು ಸ್ತುತಿಸುತ್ತಾನೆ:—ದೇವದೇವನೂ, ಜಗದೊಡೆಯನೂ, ವಿಭುವೂ, ಭರ್ಗನೂ, ಭಯಂಕರನೂ, ಭವನೂ, ಚಂದ್ರಮೌಲಿಯೂ, ಭೂತಗಳೊಡೆಯನೂ, ಸಂಸಾರಭಯನಾಶಕನೂ ಆದ ಓ ಶಂಕರ! ನಿನ್ನನ್ನು ವಂದಿಸುವೆನು.

೪೭. ಮೃಡನೂ, ಧೂರ್ಜಟಿಯೂ, ಪಾಪನಾಶಕನೂ, ತ್ರಿನೇತ್ರನೂ, ದಕ್ಷನ ಯಜ್ಞವನ್ನು ಭಂಗಗೊಳಿಸಿದವನೂ, ಶಾಂತನೂ, ಶಾಶ್ವತನೂ, ಪಾರ್ವತೀಪತಿಯೂ ಆದ ಎಲೈ ಶಿವನೆ! ನಿನ್ನನ್ನು ವಂದಿಸುವೆನು.

ನೀಲಲೋಹಿತ ಸಮೀಹಿತಾರ್ಥದ
ದ್ವ್ಯೇಕಲೋಚನ ವಿರೂಪಲೋಚನ ।
ವ್ಯೋಮಕೇಶ ಪಶುಪಾಶನಾಶನ
ತ್ವಾಂ ನತೋಽಸ್ಮಿ ನತವಾಂಛಿತಪ್ರದ ॥ ೪೮ ॥
ವಾಮದೇವ ಶಿತಿಕಂಠ ಶೂಲಭೃ
ಚ್ಚಂದ್ರಶೇಖರ ಫಣೀಂದ್ರಭೂಷಣ ।
ಕಾಮಕೃತ್ಪಶುಪತೇ ಮಹೇಶ್ವರ
ತ್ವಾಂ ನತೋಽಸ್ಮಿ ನತವಾಂಛಿತಪ್ರದ ॥ ೪೯ ॥
ತ್ರ್ಯಂಬಕ ತ್ರಿಪುರಸೂದನೇಶ್ವರ
ತ್ರಾಣಕೃತ್ತ್ರಿನಯನ ತ್ರಯೀಮಯ ।
ಕಾಲಕೂಟ ದಲನಾಂತಕಾಂತಕ
ತ್ವಾಂ ನತೋಽಸ್ಮಿ ನತವಾಂಛಿತಪ್ರದ ॥ ೫೦ ॥
ಶರ್ವರೀರಹಿತ ಶರ್ವ ಸರ್ವಗ
ಸ್ವರ್ಗಮಾರ್ಗ ಸುಖದಾಽಪವರ್ಗದ ।
ಅಂಧಕಾಽಸುರ ರಿಪೋ ಕಪರ್ದಭೃ
ತ್ತ್ವಾಂ ನತೋಽಸ್ಮಿ ನತವಾಂಛಿತಪ್ರದ ॥ ೫೧ ॥
ಶಂಕರೋಗ್ರ ಗಿರಿಜಾಪತೇ ಪತೇ
ವಿಶ್ವನಾಥ ವಿಧಿವಿಷ್ಣುಸಂಸ್ತುತ ।

---

೪೮. ನೀಲಲೋಹಿತನೂ, ಇಷ್ಟಾರ್ಥವನ್ನು ನೀಡುವವನೂ. ತ್ರಿಲೋಚನನೂ, ವಿರೂಪಾಕ್ಷನೂ, ವ್ಯೋಮಕೇಶನೂ, ಜೀವಿಗಳ ಪಾಶಭಂಜಕನೂ ಆದ ಎಲೈ ಶಂಕರನೆ! ನಿನ್ನನ್ನು ವಂದಿಸುವೆನು.

೪೯. ವಾಮದೇವನೂ, ನೀಲಕಂಠನೂ, ತ್ರಿಶೂಲಧಾರಿಯೂ, ಚಂದ್ರಮೌಲಿಯೂ, ನಾಗಭೂಷಣನೂ, ಕಾಮಜನಕನೂ, ಪಶುಪತಿಯೂ, ಇಷ್ಟಾರ್ಥದಾಯಕನೂ ಆದ ಓ ಮಹೇಶ್ವರನೆ! ನಿನ್ನನ್ನು ವಂದಿಸುವೆನು.

೫೦. ತ್ರ್ಯಂಬಕ! ತ್ರಿಪುರಾಂತಕನೂ, ಲೋಕಪಾಲಕನೂ, ವೇದರೂಪನೂ, ಕಾಲಕೂಟವನ್ನು ನಾಶಗೊಳಿಸಿದವನೂ, ಯಮನ ಶತ್ರುವೂ ಆದ ಓ ಮಹೇಶ್ವರನೆ! ನಿನ್ನನ್ನು ವಂದಿಸುವೆನು.

೫೧. ಮಾಯಾರಹಿತನೂ, ಸರ್ವವ್ಯಾಪಕನೂ, ಸ್ವರ್ಗಮಾರ್ಗಸ್ವರೂಪನೂ, ಸುಖ, ಮೋಕ್ಷಗಳನ್ನೀಯುವವನೂ, ಅಂಧಕಾಸುರಶತ್ರುವೂ, ಜಟಾಧಾರಿಯೂ ಆದ ಓ ಮಹೇಶ್ವರನೆ! ನಿನಗೆ ನಮಸ್ಕಾರ ಮಾಡುವೆನು.

೫೨. ಶಂಕರ! ಉಗ್ರ! ಗಿರಿಜಾರಮಣ! ಓ ವಿಶ್ವನಾಥ! ಬ್ರಹ್ಮವಿಷ್ಣು

ವೇದವೇದ್ಯ ವಿದಿತಾಽಖಿಲೇಂಗಿತ
ತ್ವಾಂ ನತೋಽಸ್ಮಿ ನತವಾಂಛಿತಪ್ರದ ॥ ೫೨ ॥
ವಿಶ್ವರೂಪ ಪರರೂಪವರ್ಜಿತ
ಬ್ರಹ್ಮಜಿಹ್ಮರಹಿತಾಽಮೃತಪ್ರದ ।
ವಾಙ್ಮನೋವಿಷಯದೂರ ದೂರಗ
ತ್ವಾಂ ನತೋಽಸ್ಮಿ ನತವಾಂಛಿತಪ್ರದ ॥ ೫೩ ॥
ಇತ್ಥಂ ಪರೀತ್ಯ ಮಾರ್ತಂಡೋ ಮೃಡಂ ದೇವಂ ಮೃಡಾನಿಕಾಂ ।
ಅಥ ತುಷ್ಟಾವ ಪ್ರೀತಾತ್ಮಾ ಶಿವವಾಮಾರ್ಧಹಾರಿಣೀಂ ॥ ೫೪ ॥
ರವಿರುವಾಚ :—
ದೇವಿ ತ್ವದೀಯ ಚರಣಾಂಬುಜರೇಣುಗೌರೀಂ
ಭಾಲಸ್ಥಲೀಂ ವಹತಿ ಯಃ ಪ್ರಣತಿಪ್ರವೀಣಃ ।
ಜನ್ಮಾಂತರೇಽಪಿ ರಜನೀಕರಚಾರುಲೇಖಾ
ತಾಂ ಗೌರಯತ್ಯತಿತರಾಂ ಕಿಲ ತಸ್ಯ ಪುಂಸಃ ॥ ೫೫ ॥
ಶ್ರೀಮಂಗಲೇ ಸಕಲಮಂಗಲಜನ್ಮಭೂಮೇ
ಶ್ರೀಮಂಗಲೇ ಸಕಲಕಲ್ಮಷತೂಲವಹ್ನೇ ।
ಶ್ರೀಮಂಗಲೇ ಸಕಲದಾನವದರ್ಪಹಂತ್ರಿ
ಶ್ರೀಮಂಗಲೇಽಖಿಲಮಿದಂ ಪರಿಪಾಹಿ ವಿಶ್ವಂ ॥ ೫೬ ॥

---

ಸ್ತುತ! ವೇದಪ್ರತಿಪಾದ್ಯ! ಶಂಕರ! ಸಕಲಜನರ ಇಂಗಿತವನ್ನೂ ಅರಿತ ನಿನಗೆ ನಮಸ್ಕಾರವು.

೫೩. ವಿಶ್ವರೂಪನೂ, ಉತ್ತಮನೂ, ರೂಪರಹಿತನೂ, ಬ್ರಹ್ಮನೂ, ಕಾಪಟ್ಯವಿಲ್ಲದವನೂ, ಮೋಕ್ಷದಾಯಕನೂ, ವಾಙ್ಮನಸ್ಸುಗಳಿಗೆ ನಿಲುಕದವನೂ, ಇಷ್ಟಾರ್ಥಪ್ರದನೂ ಆದ ಓ ಶಂಕರ! ನಿನಗೆ ನಮಸ್ಕಾರವು.''

೫೪. ಸೂರ್ಯನು ಹೀಗೆ ಶಿವನನ್ನೂ, ಪಾರ್ವತಿಯನ್ನೂ ಪ್ರದಕ್ಷಿಣ ಪೂರ್ವಕವಾಗಿ ಸ್ತುತಿಸಿ ಆ ಬಳಿಕ ಉಮೆಯನ್ನು ಸ್ತುತಿಸಿದನು.

೫೫. ಸೂರ್ಯನು ಸ್ತುತಿಸುತ್ತಾನೆ:— ಎಲೌ ಶಂಕರಿಯೆ! ನಿನ್ನನ್ನು ನಮಸ್ಕರಿಸಿ ನಿನ್ನ ಚರಣಾಂಬುಜಗಳ ಧೂಳಿನಿಂದ ಬಿಳುಪಾದ ಹಣೆಯುಳ್ಳ ಮಾನವನ ಲಲಾಟವನ್ನು ಜನ್ಮಾಂತರದಲ್ಲಿಯೂ ಚಂದ್ರನ ಕಲೆಯು ಗೌರವರ್ಣ ವನ್ನಾಗಿ ಮಾಡುವುದು.

೫೬. ಸಮಸ್ತ ಮಂಗಳಗಳಿಗೂ ಜನ್ಮಭೂಮಿಯೂ, ಸಮಸ್ತ ಪಾಪಗಳೆಂಬ ಹತ್ತಿಯ ರಾಶಿಗೆ ಅಗ್ನಿಯೂ, ಸಮಸ್ತ ದಾನವರ ಅಹಂಕಾರನಾಶಕಳೂ ಆದ ಶ್ರೀಮಂಗಳೆಯೆ! ಈ ಸಮಸ್ತ ಪ್ರಪಂಚವನ್ನೂ ಕಾಪಾಡು.

ವಿಶ್ವೇಶ್ವರಿ ತ್ವಮಸಿ ವಿಶ್ವಜನಸ್ಯಕರ್ತ್ರೀ
ತ್ವಂ ಪಾಲಯಿತ್ರ್ಯಸಿ ತಥಾ ಪ್ರಲಯೇಽಪಿ ಹಂತ್ರೀ ।
ತ್ವನ್ನಾಮಕೀರ್ತನ ಸಮುಲ್ಲಸದಚ್ಛಪುಣ್ಯಾ
ಸ್ರೋತಸ್ವಿನೀ ಹರತಿ ಪಾತಕಕೂಲವೃಕ್ಷಾನ್ ॥ ೫೭ ॥
ಮಾತರ್ಭವಾನಿ ಭವತೀ ಭವತೀವ್ರದುಃಖ
ಸಂಭಾರಹಾರಿಣಿ ಶರಣ್ಯಮಿಹಾಽಸ್ತಿ ನಾಽನ್ಯಾ ।
ಧನ್ಯಾಸ್ತ ಏವ ಭುವನೇಷು ತ ಏವ ಮಾನ್ಯಾ
ಯೇಷು ಸ್ಫುರೇತ್ತವ ಶುಭಃ ಕರುಣಾಕಟಾಕ್ಷಃ ॥ ೫೮ ॥
ಯೇ ತ್ವಾಂ ಸ್ಮರಂತಿ ಸತತಂ ಸಹಜಪ್ರಕಾಶಾಂ
ಕಾಶೀಪುರೀಸ್ಥಿತಿಮತೀಂ ನತಮೋಕ್ಷಲಕ್ಷ್ಮೀಂ ।
ತಾನ್ಸಂಸ್ಮರೇತ್ಸ್ಮರಹರೋ ಧೃತಶುದ್ಧಬುದ್ಧೀ
ನ್ನಿರ್ವಾಣರಕ್ಷಣವಿಚಕ್ಷಣಪಾತ್ರಭೂತಾನ್ ॥ ೫೯ ॥
ಮಾತಸ್ತವಾಂಘ್ರಿಯುಗಲಂ ವಿಮಲಂ ಹೃದಿಸ್ಥಂ
ಯಸ್ಯಾಽಸ್ತಿ ತಸ್ಯ ಭುವನಂ ನ ಕಲಂ ಕರಸ್ಥಂ ।
ಯೋ ನಾಮ ತೇ ಜಪತಿ ಮಂಗಲಗೌರಿ ನಿತ್ಯಂ
ಸಿದ್ಧ್ಯಷ್ಟಕಂ ನ ಪರಿಮುಂಚತಿ ತಸ್ಯ ಗೇಹಂ ॥ ೬೦ ॥

---

೫೭. ಓ ವಿಶ್ವೇಶ್ವರಿಯೆ! ನೀನು ಸಮಸ್ತ ಜನರನ್ನು ಸೃಜಿಸುವವಳೂ, ಪಾಲಿಸುವವಳೂ, ಪ್ರಳಯಕಾಲದಲ್ಲಿ ನಾಶಗೊಳಿಸುವವಳೂ ಆಗಿರುವೆ. ನಿನ್ನ ನಾಮಸಂಕೀರ್ತನದಿಂದುಂಟಾದ ಪುಣ್ಯವೆಂಬ ನದಿಯು, ಪಾಪವೆಂಬ ದಡದ ಮರಗಳನ್ನು ನಾಶಗೊಳಿಸುವುದು.

೫೮. ಜಗನ್ಮಾತೆಯೂ, ಸಂಸಾರದ ತೀವ್ರದುಃಖವನ್ನು ಪರಿಹರಿಸುವವಳೂ ಆದ ಭವಾನಿಯೇ! ನೀನೇ ಸರ್ವರಕ್ಷಕಳು. ಇತರರಾರೂ ರಕ್ಷಕರಿರುವುದಿಲ್ಲ. ಶುಭಕರವಾದ ನಿನ್ನ ಕರುಣಾಕಟಾಕ್ಷವು ಯಾರಲ್ಲಿ ಬೀಳುವುದೋ ಅವರೇ ಜಗತ್ತಿನಲ್ಲಿ ಧನ್ಯರೂ ಮಾನ್ಯರೂ ಆಗುವರು.

೫೯. ಸಹಜಪ್ರಕಾಶವುಳ್ಳವಳೂ, ಕಾಶೀಪಟ್ಟಣದಲ್ಲಿ ನೆಲೆಸಿರುವವಳೂ, ನಮಸ್ಕರಿಸಿದವರಿಗೆ ಮೋಕ್ಷವನ್ನು ಕೊಡುವವಳೂ ಆದ ನಿನ್ನನ್ನು ಸ್ಮರಿಸುವವರೆಲ್ಲರೂ ಶುದ್ಧಮನಸ್ಸುಳ್ಳವರು ; ಮೋಕ್ಷವನ್ನು ಕಾಪಾಡುವುದಕ್ಕೆ ಪಾತ್ರರಾದವರು ; ಅವರನ್ನು ಶಿವನೂ ಸ್ಮರಿಸುವನು.

೬೦. ಮಾತೆಯೆ! ಶುದ್ಧವಾದ ನಿನ್ನ ಪಾದಯುಗ್ಮವನ್ನು ಹೃದಯದಲ್ಲಿ ಸ್ಮರಿಸುವ ಮಾನವನಿಗೆ ಸಕಲಭುವನವೂ ಕರಗತವಾಗಿರುವುದು. ಓ ಮಂಗಳಗೌರಿಯೆ! ನಿನ್ನ ನಾಮವನ್ನು ಸ್ಮರಿಸುವವರ ಮನೆಯನ್ನು ಅಷ್ಟಸಿದ್ಧಿಯು ಯಾವಾಗಲೂ ಬಿಡುವುದಿಲ್ಲ.

ತ್ವಂ ದೇವಿ ವೇದಜನನೀ ಪ್ರಣವಸ್ವರೂಪಾ
ಗಾಯತ್ರ್ಯಸಿ ತ್ವಮಸಿ ವೈ ದ್ವಿಜಕಾಮಧೇನುಃ ।
ತ್ವಂ ವ್ಯಾಹೃತಿತ್ರಯಮಿಹಾಽಖಿಲಕರ್ಮಸಿದ್ಧ್ಯೈ
ಸ್ವಾಹಾ ಸ್ವಧಾಽಸಿ ಸುಮನಃಪಿತೃತೃಪ್ತಿಹೇತು ॥ ೬೧ ॥
ಗೌರಿ ತ್ವಮೇವ ಶಶಿಮೌಲಿನಿ ವೇಧಸಿ ತ್ವಂ
ಸಾವಿತ್ರ್ಯಸಿ ತ್ವಮಸಿ ಚಕ್ರಿಣಿ ಚಾರುಲಕ್ಷ್ಮೀಃ ।
ಕಾಶ್ಯಾಂ ತ್ವಮಸ್ಯಮಲರೂಪಿಣಿ ಮೋಕ್ಷಲಕ್ಷ್ಮೀ
ಸ್ತ್ವಂ ಮೇ ಶರಣ್ಯಮಿಹ ಮಂಗಲಗೌರಿ ಮಾತಃ ॥ ೬೨ ॥
ಸ್ತುತ್ವೇತಿ ತಾಂ ಸ್ಮರಹರಾರ್ಧಶರೀರಶೋಭಾಂ
ಶ್ರೀಮಂಗಲಾಷ್ಟಕಮಹಾಸ್ತವನೇನ ಭಾನುಃ ।
ದೇವೀಂ ಚ ದೇವಮಸಕೃತ್ಪರಿತಃ ಪ್ರಣಮ್ಯ
ತೂಷ್ಣೀಂ ಬಭೂವ ಸವಿತಾ ಶಿವಯೋಃ ಪುರಸ್ತಾತ್ ॥ ೬೩ ॥

**ದೇವದೇವ ಉವಾಚ :—**

**ಉತ್ತಿಷ್ಠೋತ್ತಿಷ್ಠ ಭದ್ರಂ ತೇ ಪ್ರಸನ್ನೋಽಸ್ಮಿ ಮಹಾಮತೇ ।**
**ಮಿತ್ರಮನ್ನೇತ್ರಗೋ ನಿತ್ಯಂ ಪ್ರಪಶ್ಯೇತಚ್ಚರಾಚರಂ ॥ ೬೪ ॥**
**ಮಮ ಮೂರ್ತಿರ್ಭವಾನ್ಸೂರ್ಯ ಸರ್ವಜ್ಞೋ ಭವ ಸರ್ವಗಃ ।**
**ಸರ್ವೇಷಾಂ ಮಹಸಾಂ ರಾಶಿಃ ಸರ್ವೇಷಾಂ ಸರ್ವಕರ್ಮವಿತ್ ॥ ೬೫ ॥**

---

೬೧. ಎಲೌ ದೇವಿಯೆ! ನೀನು ವೇದಜನನಿಯೂ, ಪ್ರಣವಸ್ವರೂಪಳೂ, ಗಾಯತ್ರಿಯೂ, ದ್ವಿಜರಿಗೆ ಕಾಮಧೇನುವೂ ಆಗಿರುವೆ. ನೀನು ಅಖಿಲಕರ್ಮ ಸಿದ್ಧಿಗಾಗಿ ವ್ಯಾಹೃತಿತ್ರಯಸ್ವರೂಪಳೂ, ದೇವಪಿತೃಗಳ ತೃಪ್ತಿಗಾಗಿ ಸ್ವಾಹಾಸ್ವಧಾ ರೂಪಳೂ ಆಗಿರುವೆ.

೬೨. ಓ ಗೌರಿಯೆ! ನೀನೇ ಶಿವನಲ್ಲಿ ಗೌರಿಯೂ, ಬ್ರಹ್ಮನಲ್ಲಿ ಸಾವಿತ್ರಿಯೂ, ವಿಷ್ಣುವಿನಲ್ಲಿ ಲಕ್ಷ್ಮಿಯೂ, ಕಾಶಿಯಲ್ಲಿ ಮೋಕ್ಷಲಕ್ಷ್ಮಿಯೂ ಆಗಿರುವೆ. ಮಂಗಳಗೌರಿ! ನೀನೇ ಈ ಲೋಕದಲ್ಲಿ ನಮಗೆ ರಕ್ಷಕಳು.''

೬೩. ಸೂರ್ಯನು ಹೀಗೆ ಆ ಶಿವನ ಅರ್ಧಶರೀರರೂಪಳಾದ ಪಾರ್ವತಿಯನ್ನು ಮಂಗಳಾಷ್ಟಕ ಮಹಾಸ್ತೋತ್ರದಿಂದ ಸ್ತುತಿಸಿ ಆ ಉಮಾಮಹೇಶ್ವರರನ್ನು ವಂದಿಸಿ ಅವರ ಮುಂದೆ ಸುಮ್ಮನೆ ಕುಳಿತನು.

೬೪. ಶಿವನು ಹೇಳುತ್ತಾನೆ:—ಪ್ರಾಜ್ಞನಾದ ಎಲೈ ಸೂರ್ಯನೆ! ನಾನು ಪ್ರಸನ್ನನಾಗಿರುವೆನು. ಮೇಲಕ್ಕೇಳು. ನಿನಗೆ ಮಂಗಳವಾಗಲಿ. ನೀನು ನನ್ನ ನೇತ್ರದಲ್ಲಿದ್ದು ಈ ಚರಾಚರಜಗತ್ತನ್ನು ನೋಡುತ್ತಿರು.

೬೫. ನನ್ನ ಮೂರ್ತಿಯಾದ ನೀನು ಸರ್ವಜ್ಞನೂ, ಎಲ್ಲೆಡೆಯಲ್ಲಿರು

ಸರ್ವೇಷಾಂ ಸರ್ವದುಃಖಾನಿ ಭಕ್ತಾನಾಂ ತ್ವಂ ನಿರಾಕುರು ।
ತ್ವಯಾ ನಾಮ್ನಾಂ ಚತುಃಷಷ್ಟ್ಯಾ ಯದಷ್ಟಕಮುದೀರಿತಂ ॥ ೬೬ ॥
ಅನೇನ ಮಾಂ ಪರಿಷ್ಟುತ್ಯ ನರೋ ಮದ್ಭಕ್ತಿಮಾಪ್ಸ್ಯತಿ ।
ಅಷ್ಟಕಂ ಮಂಗಲಾಗೌರ್ಯಾ ಮಂಗಲಾಷ್ಟಕಸಂಜ್ಞಕಂ ॥ ೬೭ ॥
ಅನೇನ ಮಂಗಲಾಗೌರೀಂ ಸ್ತುತ್ವಾ ಮಂಗಲಮಾಪ್ಸ್ಯತಿ ।
ಚತುಃಷಷ್ಟ್ಯಷ್ಟಕಂ ಸ್ತೋತ್ರಂ ಮಂಗಲಾಷ್ಟಕಮೇವಚ ॥ ೬೮ ॥
ಏತತ್ಸ್ತೋತ್ರವರಂ ಪುಣ್ಯಂ ಸರ್ವಪಾತಕನಾಶನಂ ।
ದೂರದೇಶಾಂತರಸ್ಥೋಽಪಿ ಜಪನ್ನಿತ್ಯಂ ನರೋತ್ತಮಃ ॥ ೬೯ ॥
ತ್ರಿಸಂಧ್ಯಂ ಪರಿಶುದ್ಧಾತ್ಮಾ ಕಾಶೀಂ ಪ್ರಾಪ್ಸ್ಯತಿ ದುರ್ಲಭಾಂ ।
ಅನೇನ ಸ್ತೋತ್ರಯುಗ್ಮೇನ ಜಪ್ತೇನ ಪ್ರತ್ಯಹಂ ನೃಭಿಃ ॥ ೭೦ ॥
ಧ್ರುವಂ ದೈನಂದಿನಂ ಪಾಪಂ ಕ್ಷಾಲಿತಂ ನಾಽತ್ರ ಸಂಶಯಃ ।
ನ ತಸ್ಯ ದೇಹಿನೋ ದೇಹೇ ಜಾತುಚಿತ್ಕಿಲ್ಬಿಷಸ್ಥಿತಿಃ ॥ ೭೧ ॥
ತ್ರಿಕಾಲಂ ಯೋ ಜಪೇನ್ನಿತ್ಯಮೇತತ್ಸ್ತೋತ್ರದ್ವಯಂ ಶುಭಂ ।
ಕಿಂ ಜಪ್ತೈರ್ಬಹುಭಿಃ ಸ್ತೋತ್ರೈಶ್ಚಂಚಲಶ್ರೀಪ್ರದಂ ನೃಣಾಂ ॥ ೭೨ ॥

---

ವವನೂ, ಸಕಲತೇಜೋರಾಶಿಯೂ, ಸಮಸ್ತ ಪ್ರಾಣಿಗಳ ಸಕಲ ಕರ್ಮಗಳನ್ನರಿತವನೂ ಆಗು.

೬೬–೬೭. ಸಕಲ ಭಕ್ತರ ಸಮಸ್ತ ದುಃಖವನ್ನೂ ನಿವಾರಿಸು. ನೀನು ಹೇಳಿದ ಅರುವತ್ತನಾಲ್ಕು ನಾಮಗಳುಳ್ಳ ಸ್ತುತ್ಯಷ್ಟಕದಿಂದ ನನ್ನನ್ನು ಸ್ತುತಿಸಿದ ಮಾನವನು ನನ್ನಲ್ಲಿ ಭಕ್ತಿಯನ್ನು ಹೊಂದುವನು. ಮಂಗಳಾಗೌರಿಯ ಅಷ್ಟಕವು ಮಂಗಳಾಷ್ಟಕವೆನ್ನಿಸಿಕೊಳ್ಳುವುದು.

೬೮–೭೧. ಈ ಮಂಗಳಾಷ್ಟಕದಿಂದ ಮಂಗಳಾಗೌರಿಯನ್ನು ಸ್ತುತಿಸಿದವನು ಮಂಗಳವನ್ನು ಹೊಂದುವನು. ಈ ಚತುಷ್ಷಷ್ಟ್ಯಷ್ಟಕವೂ, ಮಂಗಳಾಷ್ಟಕವೂ ಸಮಸ್ತ ಪಾಪಗಳನ್ನೂ ಪರಿಹರಿಸುವುವು. ಮೂರು ಸಂಧ್ಯಾಕಾಲಗಳಲ್ಲಿಯೂ ಪರಿಶುದ್ಧನಾಗಿ ಇದನ್ನು ಜಪಿಸಿದ ಮಾನವನು ದೂರದೇಶದಲ್ಲಿದ್ದರೂ ದುರ್ಲಭವಾದ ಕಾಶಿಯನ್ನು ಸೇರುವನು. ಮನುಷ್ಯರು ಈ ಎರಡು ಸ್ತೋತ್ರಗಳನ್ನೂ ಜಪಿಸುವುದರಿಂದ ಪ್ರತಿದಿನದ ಪಾಪವು ನಿಶ್ಚಯವಾಗಿಯೂ ಪರಿಹಾರವಾಗುವುದು. ಆ ಮನುಷ್ಯನ ಶರೀರದಲ್ಲಿ ಪಾಪವು ಎಂದಿಗೂ ನಿಲ್ಲುವುದಿಲ್ಲ.

೭೨. ಶುಭಕರವಾದ ಈ ಸ್ತೋತ್ರವನ್ನು ತ್ರಿಕಾಲದಲ್ಲಿ ಜಪಿಸಿದರೆ ಚಂಚಲ ಸಂಪತ್ತುಗಳನ್ನು ಕೊಡುವ ಬಹುಸ್ತೋತ್ರಗಳನ್ನು ಜಪಿಸುವುದರಿಂದೇನು ಪ್ರಯೋಜನ?

ಏತತ್ಸ್ತೋತ್ರದ್ವಯಂ ದದ್ಯಾತ್ಕಾಶ್ಯಾಂ ನೈಃಶ್ರೇಯಸೀಂ ಶ್ರಿಯಂ ।
ತಸ್ಮಾತ್ಸರ್ವಪ್ರಯತ್ನೇನ ಮಾನವೈರ್ಮೋಕ್ಷಕಾಂಕ್ಷಿಭಿಃ ॥ ೭೩ ॥
ಏತತ್ಸ್ತೋತ್ರದ್ವಯಂ ಜಪ್ಯಂ ತ್ಯಕ್ತ್ವಾ ಸ್ತೋತ್ರಾಣ್ಯನೇಕಶಃ ।
ಪ್ರಪಂಚ ಆವಯೋರೇವ ಸರ್ವ ಏಷ ಚರಾಚರಃ ॥ ೭೪ ॥
ತದಾವಯೋಃ ಸ್ತವಾದಸ್ಮಾನ್ನಿಷ್ಪ್ರಪಂಚೋ ಜನೋ ಭವೇತ್ ।
ಸಮೃದ್ಧಿಮಾಪ್ಯ ಮಹತೀಂ ಪುತ್ರಪೌತ್ರವತೀಮಿಹ ॥ ೭೫ ॥
ಅಂತೇ ನಿರ್ವಾಣಮಾಪ್ನೋತಿ ಜಪನ್ಸ್ತೋತ್ರಮಿದಂ ನರಃ ।
ಅನ್ಯಚ್ಚ ಶೃಣು ಸಪ್ತಾಶ್ವ ಗ್ರಹರಾಜ ದಿವಾಕರ ॥ ೭೬ ॥
ತ್ವಯಾ ಪ್ರತಿಷ್ಠಿತಂ ಲಿಂಗಂ ಗಭಸ್ತೀಶ್ವರಸಂಜ್ಞಿತಂ ।
ಸೇವಿತಂ ಭಕ್ತಿಭಾವೇನ ಸರ್ವಸಿದ್ಧಿಸಮರ್ಪಕಂ ॥ ೭೭ ॥
ತ್ವಯಾ ಗಭಸ್ತಿಮಾಲಾಭಿಶ್ಚಾಂಪೇಯಾಂಬುಜಕಾಂತಿಭಿಃ ।
ಯದರ್ಚಿತ್ವೈಶ್ವರಂ ಲಿಂಗಂ ಸರ್ವಭಾವೇನ ಭಾಸ್ಕರ ॥ ೭೮ ॥
ಗಭಸ್ತೀಶ್ವರ ಇತ್ಯಾಖ್ಯಾಂ ತತೋ ಲಿಂಗಮವಾಪ್ಸ್ಯತಿ ।
ಅರ್ಚಯಿತ್ವಾ ಗಭಸ್ತೀಶಂ ಸ್ನಾತ್ವಾ ಪಂಚನದೇ ನರಃ ॥ ೭೯ ॥
ನ ಜಾತು ಜಾಯತೇ ಮಾತುರ್ಜಠರೇ ಧೃತಕಲ್ಮಷಃ ।
ಇಮಾಂ ಚ ಮಂಗಲಾಗೌರೀಂ ನಾರೀ ವಾ ಪುರುಷೋಽಪಿ ವಾ ॥ ೮೦ ॥

---

೭೩–೭೪. ಈ ಎರಡು ಸ್ತೋತ್ರಗಳು ಕಾಶಿಯಲ್ಲಿ ಮೋಕ್ಷಸಂಪತ್ತನ್ನು ಕೊಡುವುವು. ಆದುದರಿಂದ ಮೋಕ್ಷವನ್ನಪೇಕ್ಷಿಸುವ ಮಾನವರು ಇತರ ಬಹು ಸ್ತೋತ್ರಗಳನ್ನು ತ್ಯಜಿಸಿ ಈ ಎರಡು ಸ್ತೋತ್ರಗಳನ್ನು ಜಪಿಸಬೇಕು. ಚರಾಚರಾತ್ಮಕವಾದ ಈ ಸಮಸ್ತ ಪ್ರಪಂಚವೂ ನಮ್ಮಿಂದಲೇ ಆದುದು.

೭೫. ಆದುದರಿಂದ ನಮ್ಮ ಈ ಸ್ತೋತ್ರದಿಂದ ಜನರು ಪುತ್ರಪೌತ್ರರಿಂದ ಸಹಿತವಾದ ಸಮೃದ್ಧಿಯನ್ನು ಹೊಂದಿ ಪ್ರಪಂಚಸಂಬಂಧವಿಲ್ಲದವರಾಗುವರು.

೭೬. ಕೊನೆಯಲ್ಲಿ ಮೋಕ್ಷವನ್ನೂ ಪಡೆಯುವರು. ಗ್ರಹಗಳೊಡೆಯನಾದ ಎಲೈ ಸೂರ್ಯನೆ! ಇನ್ನೊಂದು ವಿಷಯವನ್ನು ಹೇಳುವೆನು; ಕೇಳು.

೭೭–೮೬. ನೀನು ಪ್ರತಿಷ್ಠಿಸಿದ ಗಭಸ್ತೀಶ್ವರವೆಂಬ ಲಿಂಗವು ಭಕ್ತಿಯಿಂದ ಸೇವಿಸಿದರೆ ಸಮಸ್ತಸಿದ್ಧಿಗಳನ್ನೂ ಕೊಡುವುದು. ನೀನು ಸಂಪಿಗೆ ಮತ್ತು ಕಮಲದ ಹೂವುಗಳ ಕಾಂತಿಯುಳ್ಳ ಕಾಂತಿಸಮೂಹಗಳಿಂದ ಈಶ್ವರಲಿಂಗವನ್ನು ಭಕ್ತಿಯಿಂದ ಪೂಜಿಸಿದ್ದರಿಂದ ಗಭಸ್ತೀಶ್ವರವೆಂಬ ಹೆಸರನ್ನು ಹೊಂದುವೆ. ಮಾನವನು ಪಂಚನದದಲ್ಲಿ ಮಿಂದು ಗಭಸ್ತೀಶನನ್ನು ಪೂಜಿಸಿದರೆ ಸಕಲ ಪಾಪರಹಿತನಾಗಿ ಯಾವಾಗಲೂ ತಾಯಿಯ ಜಠರದಲ್ಲಿ ಜನಿಸುವುದಿಲ್ಲ. ಹೆಂಗಸಾಗಲಿ, ಗಂಡಸಾಗಲಿ ಚೈತ್ರಶುಕ್ಲ ತದಿಗೆಯ ದಿನ ಉಪವಾಸಮಾಡಿ ಮಹೋಪಚಾರಗಳಿಂದಲೂ, ಪಟ್ಟೆ

ಚೈತ್ರಶುಕ್ಲತೃತೀಯಾಯಾಮುಪೋಷಣಪರಾಯಣಃ ।
ಮಹೋಪಚಾರೈಃ ಸಂಪೂಜ್ಯ ದುಕೂಲಾಭರಣಾದಿಭಿಃ ॥ ೮೧ ॥
ರಾತ್ರೌ ಜಾಗರಣಂ ಕೃತ್ವಾ ಗೀತನೃತ್ಯಕಥಾದಿಭಿಃ ।
ಪ್ರಾತಃ ಕುಮಾರೀಃ ಸಂಪೂಜ್ಯ ದ್ವಾದಶಾಚ್ಛಾದನಾದಿಭಿಃ ॥ ೮೨ ॥
ಸಂಭೋಜ್ಯ ಪರಮಾನ್ನಾದ್ಯೈರ್ದತ್ವಾಽನ್ಯೇಭ್ಯೋಽಪಿ ದಕ್ಷಿಣಾಂ ।
ಹೋಮಂ ಕೃತ್ವಾ ವಿಧಾನೇನ ಜಾತವೇದಸ ಇತ್ಯೃಚಾ ॥ ೮೩ ॥
ಅಷ್ಟೋತ್ತರಶತಾಭಿಶ್ಚ ತಿಲಾಜ್ಯಾಹುತಿಭಿಃ ಪ್ರಗೇ ।
ಏಕಂ ಗೋಮಿಥುನಂ ದತ್ವಾ ಬ್ರಾಹ್ಮಣಾಯ ಕುಟುಂಬಿನೇ ॥ ೮೪ ॥
ಶ್ರದ್ಧಯಾ ಸಮಲಂಕೃತ್ಯ ಭೂಷಣೈರ್ದ್ವಿಜದಂಪತೀ ।
ಭೋಜಯಿತ್ವಾ ಮಹಾರ್ಹಾಽನ್ನೈಃ ಪ್ರೀಯೇತಾಂ ಮಂಗಲೇಶ್ವರೌ ॥ ೮೫ ॥
ಇತಿ ಮಂತ್ರಂ ಸಮುಚ್ಚಾರ್ಯ ಪ್ರಾತಃಕೃತ್ವಾಽಥ ಪಾರಣಂ ।
ನ ದುರ್ಭಗತ್ವಮಾಪ್ನೋತಿ ನ ದಾರಿದ್ರ್ಯಂ ಕದಾಚನ ॥ ೮೬ ॥
ನ ವೈ ಸಂತಾನವಿಚ್ಛಿತ್ತಿಂ ಭೋಗೋಚ್ಛಿತ್ತಿಂ ನ ಜಾತುಚಿತ್ ।
ಸ್ತ್ರೀ ವೈಧವ್ಯಂ ನ ಚಾಪ್ನೋತಿ ನ ನಾಯೋಷಿದ್ವಿಯೋಗಭಾಕ್ ॥ ೮೭ ॥
ಪಾಪಾನಿ ವಿಲಯಂ ಯಾಂತಿ ಪುಣ್ಯರಾಶಿಶ್ಚ ಲಭ್ಯತೇ ।
ಅಪಿ ವಂಧ್ಯಾ ಪ್ರಸೂಯೇತ ಕೃತ್ವೈತನ್ಮಂಗಲಾವ್ರತಂ ॥ ೮೮ ॥

---

ವಸ್ತ್ರ, ಒಡವೆ ಮೊದಲಾದುವುಗಳಿಂದಲೂ ಮಂಗಳಾಗೌರಿಯನ್ನು ಪೂಜಿಸಿ, ರಾತ್ರಿ ಸಂಗೀತ, ನೃತ್ಯ, ಪುಣ್ಯಕಥೆ ಮೊದಲಾದುವುಗಳಿಂದ ಜಾಗರಣೆಮಾಡಿ ಬೆಳಗ್ಗೆ ಹನ್ನೆರಡುಮಂದಿ ಕುಮಾರಿಯರನ್ನು ವಸ್ತ್ರಾಚ್ಛಾದನಾದಿಗಳಿಂದಪೂಜಿಸಿ ಪರಮಾನ್ನ ಮೊದಲಾದುವುಗಳಿಂದ ಭೋಜನಮಾಡಿಸಿ ಇತರರಿಗೂ ದಕ್ಷಿಣೆಯನ್ನು ಕೊಟ್ಟು ಬೆಳಗ್ಗೆ ಜಾತವೇದಸವೆಂಬ ಋಕ್ಕಿನಿಂದ ನೂರೆಂಟು ತಿಲಾಜ್ಯಾಹುತಿಗಳಿಂದ ಹೋಮಿಸಿ ಕುಟುಂಬಿಯಾದ ಬ್ರಾಹ್ಮಣನಿಗೆ ಒಂದು ಗೋಮಿಥುನವನ್ನಿತ್ತು ಶ್ರದ್ಧಾಪೂರ್ವಕವಾಗಿ ಒಡವೆಗಳಿಂದ ಬ್ರಾಹ್ಮಣ ದಂಪತಿಗಳನ್ನು ಅಲಂಕರಿಸಿ ಮಂಗಳೇಶ್ವರರು ಪ್ರೀತರಾಗಲಿ ಎಂದು ಅತ್ಯಮೂಲ್ಯಾನ್ನಗಳಿಂದ ಭೋಜನಮಾಡಿಸಿ ಬೆಳಗ್ಗೆ ಪಾರಣೆಗೈದರೆ ದೌರ್ಭಾಗ್ಯ ದಾರಿದ್ರ್ಯಗಳನ್ನು ಹೊಂದುವುದಿಲ್ಲ.

೮೭. ಸಂತಾನ, ಭೋಗಗಳು ನಾಶವಾಗುವುದಿಲ್ಲ. ಹೆಂಗಸು ವೈಧವ್ಯವನ್ನು ಹೊಂದುವುದಿಲ್ಲ. ಪುರುಷನು ಸ್ತ್ರೀಯಿಂದ ಅಗಲುವುದಿಲ್ಲ.

೮೮. ಈ ಮಂಗಲಾವ್ರತವನ್ನಾಚರಿಸಿದರೆ ಪಾಪಗಳು ಪರಿಹಾರವಾಗುವುವು. ಪುಣ್ಯಸಮೂಹವು ದೊರೆಯುವುದು. ಬಂಜೆಯೂ ಪುತ್ರನನ್ನು ಪ್ರಸವಿಸುವಳು.

ಏತದ್ವ್ರತಸ್ಯ ಕರಣಾತ್ಕುರೂಪತ್ವಂ ನ ಜಾತುಚಿತ್ ।
ಕುಮಾರೀ ವಿಂದತೇಽತ್ಯಂತಂ ಗುಣರೂಪಯುತಂ ಪತಿಂ ॥ ೮೯ ॥
ಕುಮಾರೋಽಪಿ ವ್ರತಂ ಕೃತ್ವಾ ವಿಂದತಿ ಸ್ತ್ರಿಯಮುತ್ತಮಾಂ ।
ಸಂತಿ ವ್ರತಾನಿ ಬಹುಶೋ ಧನಕಾಮಪ್ರದಾನಿ ಚ ॥ ೯೦ ॥
ನಾಪ್ನುಯುರ್ಜಾತುಚಿತ್ತಾನಿ ಮಂಗಲಾವ್ರತತುಲ್ಯತಾಂ ।
ಕರ್ತವ್ಯಾ ಚಾಬ್ದಿಕೀ ಯಾತ್ರಾ ಮಧೌ ತಸ್ಯಾಂ ತಿಥೌ ನರೈಃ ॥ ೯೧ ॥
ಸರ್ವವಿಘ್ನಪ್ರಶ್ಯಾಂತ್ಯರ್ಥಂ ಸದಾಕಾಶೀನಿವಾಸಿಭಿಃ ।
ಅಪರಂ ದ್ಯುಮಣೇ ವಚ್ಮಿ ತವ ಚಾತ್ರ ತಪಸ್ಯತಃ ॥ ೯೨ ॥
ಮಯೂಖಾ ಏವ ಖೇ ದೃಷ್ಟಾ ನ ಚ ದೃಷ್ಟಂ ಕಲೇವರಂ ।
ಮಯೂಖಾದಿತ್ಯ ಇತ್ಯಾಖ್ಯಾ ತತಸ್ತೇ ದಿತಿನಂದನ ॥ ೯೩ ॥
ತ್ವದರ್ಚನಾನ್ನೃಣಾಂ ಕಶ್ಚಿನ್ನವ್ಯಾಧಿಃ ಪ್ರಭವಿಷ್ಯತಿ ।
ಭವಿಷ್ಯತಿ ನ ದಾರಿದ್ರ್ಯಂ ರವಿವಾರೇ ತ್ವದೀಕ್ಷಣಾತ್ ॥ ೯೪ ॥
ಇತ್ಥಂ ಮಯೂಖಾದಿತ್ಯಸ್ಯ ಶಿವೋ ದತ್ವಾ ಬಹೂನ್ವರಾನ್ ।
ತತ್ರೈವಾಂತರ್ಹಿತೋ ಭೂತೋ ರವಿಸ್ತತ್ರೈವ ತಸ್ಥಿವಾನ್ ॥ ೯೫ ॥

---

೮೯. ಈ ವ್ರತವನ್ನು ಮಾಡುವುದರಿಂದ ಕುರೂಪತ್ವವುಂಟಾಗುವುದಿಲ್ಲ. ಕುಮಾರಿಯು ಅತ್ಯಂತ ಗುಣಶಾಲಿಯಾದ ಪತಿಯನ್ನು ಪಡೆಯುವಳು.

೯೦. ಕುಮಾರನೂ ಈ ವ್ರತವನ್ನಾಚರಿಸಿದರೆ ಉತ್ತಮಸ್ತ್ರೀಯನ್ನು ಹೊಂದುವನು. ಧನಕಾಮಗಳನ್ನೀಯುವ ಬಹುವ್ರತಗಳಿರುವುವು. ಅವು ಯಾವುವೂ ಯಾವಾಗಲೂ ಈ ಮಂಗಳಾವ್ರತಕ್ಕೆ ಸರಿತೂಗಲಾರವು.

೯೧–೯೩. ಯಾವಾಗಲೂ ಕಾಶಿಯಲ್ಲಿ ವಾಸಿಸುವವರು ಚೈತ್ರಶುಕ್ಲತೃತೀಯಾ ದಿನ ಸಕಲವಿಘ್ನನಿವಾರಣೆಗಾಗಿ ಮಂಗಲಾಸ್ಥಾನದಲ್ಲಿ ವಾರ್ಷಿಕಯಾತ್ರೆಯನ್ನು ಮಾಡಬೇಕು. ಎಲೈ ಸೂರ್ಯನೆ! ಮತ್ತೊಂದು ವಿಷಯವನ್ನು ನಿನಗೆ ಹೇಳುವೆನು. ಇಲ್ಲಿ ತಪಸ್ಸನ್ನಾಚರಿಸುತ್ತಿರುವ ನಿನ್ನ ಕಿರಣಗಳು ಮಾತ್ರ ಕಾಣಿಸಿಕೊಂಡವು. ಶರೀರವು ಕಾಣಿಸಲಿಲ್ಲವಾದ್ದರಿಂದ ನಿನಗೆ ಮಯೂಖಾದಿತ್ಯನೆಂಬ ಹೆಸರು ಬಂದಿರುವುದು.

೯೪. ನಿನ್ನನ್ನು ಪೂಜಿಸುವುದರಿಂದ ಮಾನವರಿಗೆ ಯಾವ ವ್ಯಾಧಿಯೂ ಉಂಟಾಗುವುದಿಲ್ಲ. ಭಾನುವಾರ ನಿನ್ನನ್ನು ನೋಡುವುದರಿಂದ ಜಡತೆಯುಂಟಾಗುವುದಿಲ್ಲ.''

೯೫. ಶಿವನು ಹೀಗೆ ಮಯೂಖಾದಿತ್ಯನಿಗೆ ಬಹುವರಗಳನ್ನಿತ್ತು ಅಲ್ಲಿಯೇ ಅಂತರ್ಧಾನವಾದನು. ಸೂರ್ಯನು ಅಲ್ಲಿಯೇ ನೆಲೆಸಿದನು.

ಶ್ರುತ್ವಾಖ್ಯಾನಮಿದಂ ಪುಣ್ಯಂ ಮಯೂಖಾದಿತ್ಯಸಂಶ್ರಯಂ ।
ದ್ರೌಪದಾದಿತ್ಯ ಸಹಿತಂ ನರೋ ನ ನಿರಯಂ ವ್ರಜೇತ್ ॥ ೯೬ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ದ್ರೌಪದಾದಿತ್ಯಮಯೂಖಾದಿತ್ಯ ವರ್ಣನಂ" ನಾಮೈಕೋನಪಂಚಾಶತ್ತಮೋಽಧ್ಯಾಯಃ

---

೯೬. ದ್ರೌಪದಾದಿತ್ಯನಿಂದ ಸಹಿತನಾದ ಮಯೂಖಾದಿತ್ಯನ ಈ ಪುಣ್ಯಾಖ್ಯಾನವನ್ನು ಕೇಳಿದ ಮಾನವನು ನರಕಕ್ಕೆಂದಿಗೂ ತೆರಳುವುದಿಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಉತ್ತರಾರ್ಧದಲ್ಲಿ "ದ್ರೌಪದಾದಿತ್ಯಮಯೂಖಾದಿತ್ಯವರ್ಣನ"ವೆಂಬ ನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಾಶತ್ತಮೋಽಧ್ಯಾಯಃ

## ಖಖೋಲ್ಕಾದಿತ್ಯಗರುಡೇಶವರ್ಣನಂ

ಸ್ಕಂದ ಉವಾಚ :—

**ವಾರಾಣಸ್ಯಾಂ ತಥಾದಿತ್ಯಾ ಯೇಽಚಾನ್ಯೇ ತಾನ್ವದಾಮ್ಯತಃ ।**
**ಕಲಶೋದ್ಭವ ತೇ ಪ್ರೀತ್ಯಾ ಸರ್ವೇ ಸರ್ವಾಘನಾಶನಾಃ ॥ ೧ ॥**
**ಖಖೋಲ್ಕೋ ನಾಮ ಭಗವಾನಾದಿತ್ಯಃ ಪರಿಕೀರ್ತಿತಃ ।**
**ತ್ರಿವಿಷ್ಟಪೋತ್ತರೇ ಭಾಗೇ ಸರ್ವವ್ಯಾಧಿವಿಘಾತಕೃತ್ ॥ ೨ ॥**
**ಯಥಾ ಖಖೋಲ್ಕ ಇತ್ಯಾಖ್ಯಾ ತಸ್ಯಾದಿತ್ಯಸ್ಯ ತಚ್ಛೃಣು ।**
**ಪುರಾ ಕದ್ರೂಶ್ಚ ವಿನತಾ ದಕ್ಷಸ್ಯ ತನಯೇ ಶುಭೇ ॥ ೩ ॥**
**ಕಶ್ಯಪಸ್ಯ ಚ ತೇ ಪತ್ನ್ಯೌ ಮಾರೀಚೇಃ ಪ್ರಾಕ್ಪ್ರಜಾಪತೇಃ ।**
**ಕ್ರೀಡಂತಾವೇಕದಾಽನ್ಯೋಽನ್ಯಂ ಮುನೇ ತೇ ಊಚತುಸ್ತ್ವಿತಿ ॥ ೪ ॥**

ಕದ್ರೂರುವಾಚ :—

**ವಿನತೇ ತ್ವಂ ವಿಜಾನಾಸಿ ಯದಿ ತದ್ಬ್ರೂಹಿ ಮೇಽಗ್ರತಃ ।**
**ಅಖಂಡಿತಾ ಗತಿಸ್ತೇಽಸ್ತಿ ಯತೋ ಗಗನಮಂಡಲೇ ॥ ೫ ॥**
**ಯೋಽಸಾವುಚ್ಚೈಃಶ್ರವಾ ವಾಜೀ ಶ್ರೂಯತೇ ಸವಿತೂ ರಥೇ ।**
**ಕಿಂ ರೂಪಃ ಸೋಽಸ್ತಿ ಶಬಲೋ ಧವಲೋ ವಾ ವದಾಽಽಶು ಮೇ ॥ ೬ ॥**

---

## ಕನ್ನಡದ ಅನುವಾದ

### ಖಲೋಲ್ಕಾದಿತ್ಯಗರುಡೇಶವರ್ಣನ

೧. ಸ್ಕಂದನು ಹೇಳುತ್ತಾನೆ:—ಅಗಸ್ತ್ಯ! ಕಾಶಿಯಲ್ಲಿರುವ ಇತರ ಸೂರ್ಯ ಮೂರ್ತಿಗಳನ್ನು ನಿನಗೆ ಪ್ರೀತಿಯಿಂದ ಹೇಳುವೆನು. ಅವರೆಲ್ಲರೂ ಪಾಪವನ್ನು ಪರಿಹರಿಸುವವರು.

೨. ವಿಶ್ವೇಶ್ವರನ ಉತ್ತರದಿಕ್ಕಿನಲ್ಲಿರುವವನೂ, ಸಕಲರೋಗಗಳನ್ನು ನಾಶ ಗೊಳಿಸುವವನೂ ಆದ ಆದಿತ್ಯನು ಖಖೋಲ್ಕನೆಂದು ವಿಖ್ಯಾತನಾಗಿರುವನು.

೩–೪. ಅವನಿಗೆ ಖಖೋಲ್ಕನೆಂದು ಹೆಸರುಬರಲು ಕಾರಣವನ್ನು ಕೇಳು. ಹಿಂದೆ ದಕ್ಷನ ಪುತ್ರಿಯರೂ, ಕಶ್ಯಪನ ಪತ್ನಿಯರೂ ಆದ ಕದ್ರೂ ವಿನತೆಯ ರೀರ್ವರೂ ಒಂದಾನೊಂದು ದಿನ ಆಟವಾಡುತ್ತ ಹೀಗೆ ಮಾತನಾಡಿಕೊಂಡರು.

೫. ಕದ್ರುವು ಹೇಳುತ್ತಾಳೆ:—ವಿನತೆ! ನೀನು ಆಕಾಶದಲ್ಲಿ ತಡೆಯಿಲ್ಲದೆ ಸಂಚರಿಸುತ್ತಿರುವೆ. ನೀನು ಇದನ್ನು ಅರಿತಿದ್ದರೆ ಹೇಳು.

೬. ಸೂರ್ಯನ ರಥದಲ್ಲಿ ಉಚ್ಚೈಃಶ್ರವಸ್ಸೆಂಬ ಅಶ್ವವಿರುವುದೆಂದು ಕೇಳಿರುವೆ ಯಲ್ಲವೆ? ಅದು ಬೆಳ್ಳಗಿರುವುದೊ? ಅಥವಾ ನಾನಾ ಬಣ್ಣವಾಗಿರುವುದೊ? ಶೀಘ್ರವಾಗಿ ನನಗೆ ಹೇಳು.

ಪಣಂ ಚ ಕುರು ಕಲ್ಯಾಣಿ ತುಭ್ಯಂ ಯೋ ರೋಚತೇಽನಘೇ ।
ಏವಮೇವ ನ ಯಾತ್ವೇಷ ಕಾಲಃ ಕ್ರೀಡನಕಂ ವಿನಾ ॥ ೭ ॥

ವಿನತೋವಾಚ :—

ಕಿಂ ಪಣೇನ ಭಗಿನ್ಯತ್ರ ಕಥಯಾಮ್ಯೇವಮೇವ ಹಿ ।
ತ್ವಜ್ಜಯೇ ಕಾ ಚ ಮೇ ಪ್ರೀತಿರ್ಮಜ್ಜಯೇ ಕಿಂನು ತೇ ಸುಖಂ ॥ ೮ ॥
ಜ್ಞಾತ್ವಾ ಪಣೋ ನ ಕರ್ತವ್ಯೋ ಮಿಥಃ ಸ್ನೇಹಮಭೀಪ್ಸತಾ ।
ಧ್ರುವಮೇಕಸ್ಯ ವಿಜಯೇ ಕ್ರೋಧೋಽನ್ಯಸ್ಯೇಹ ಜಾಯತೇ ॥ ೯ ॥

ಕದ್ರೂರುವಾಚ :—

ಕ್ರೀಡೇಯಂ ನಾತ್ರ ಭಗಿನಿ ಕಾರಣಂ ಕಿಮಪಿ ಕ್ರುಧಃ ।
ಖೇಲಸ್ಯ ವ್ಯವಹಾರೋಽಯಂ ಪಣೇ ಯತ್ಕಿಂಚಿದುಚ್ಯತೇ ॥ ೧೦ ॥

ವಿನತೋವಾಚ :—

ತಥಾ ಕುರು ಯಥಾ ಪ್ರೀತಿಸ್ತವಾಸ್ತಿ ಪನಸಾಽಶಿನಿ ।
ಅಥ ತಾಂ ವಿನತಾಮಾಹ ಕದ್ರೂಃ ಕುಟಿಲಮಾನಸಾ ॥ ೧೧ ॥
ತಸ್ಯಾಸ್ತು ಸಾ ಭವೇದ್ದಾಸೀ ಪರಾಜೀಯೇತ ಯಾ ಯಯಾ ।
ಅಸ್ಮಿನ್ಪಣೇ ಇಮಾಃ ಸರ್ವಾಃ ಸಖ್ಯಃ ಸಾಕ್ಷಿಣ್ಯ ಏವ ನೌ ॥ ೧೨ ॥

---

೭. ಈ ವಿಷಯದಲ್ಲಿ ನೀನು ನಿನಗಿಷ್ಟವಾದ ಪಣವನ್ನು ಇಡು. ಆಟದಲ್ಲಿ ಪಣವಿಲ್ಲದೆ ಹೀಗೆಯೇ ಕಾಲವು ಕಳೆಯದಿರಲಿ.

೮. ವಿನತೆಯು ಹೇಳುತ್ತಾಳೆ:—ಸಹೋದರಿ! ಈ ವಿಷಯದಲ್ಲಿ ಪಣವೇಕೆ? ಸುಮ್ಮನೆಯೇ ಹೇಳುತ್ತೇನೆ. ನಿನ್ನನ್ನು ಜಯಿಸಿದರೆ ನನಗಾವ ಪ್ರೀತಿಯುಂಟಾಗುವುದು? ನನ್ನನ್ನು ಜಯಿಸಿದರೆ ನಿನಗಾಗುವ ಸಂತೋಷವೇನು?

೯. ಪರಸ್ಪರ ಸ್ನೇಹವನ್ನು ಅಪೇಕ್ಷಿಸುವವರು ಅರಿತರಿತೂ ಪಣವನ್ನು ಇಡಬಾರದು. ಒಬ್ಬನಿಗೆ ಜಯವಾದರೆ ನಿಶ್ಚಯವಾಗಿಯೂ ಇನ್ನೊಬ್ಬನಿಗೆ ಕೋಪವುಂಟಾಗುವುದು.

೧೦. ಕದ್ರುವು ಹೇಳುತ್ತಾಳೆ:—ಎಲೆ ಸಹೋದರಿ! ಇದು ಆಟವಾದ್ದರಿಂದ ಕೋಪಕ್ಕೆ ಕಾರಣವೇನೂ ಇರುವುದಿಲ್ಲ. ಈ ವ್ಯವಹಾರವು ಆಟದ ಪಣದಲ್ಲಿ ಮಾತ್ರ. ಆದುದರಿಂದ ಯಾವುದೋ ಒಂದನ್ನು ಹೇಳುತ್ತೇನೆ.

೧೧. ವಿನತೆಯು ಹೇಳುತ್ತಾಳೆ:—"ಕದ್ರು! ನಿನ್ನ ಇಷ್ಟಬಂದಂತೆ ಮಾಡು." ವಿನತೆಯು ಹೀಗೆಂದ ಬಳಿಕ ಕದ್ರುವು ವಕ್ರಮನಸ್ಸುಳ್ಳವಳಾಗಿ ಅವಳನ್ನು ಕುರಿತು ಇಂತೆಂದಳು.

೧೨. ಈಗ ಆಟದಲ್ಲಿ ಸೋತವರು ಗೆದ್ದವರಿಗೆ ದಾಸಿಯರಾಗಬೇಕು. ಈ ಸಖಿಯರೆಲ್ಲ ಈ ಪಣದಲ್ಲಿ ಸಾಕ್ಷಿಗಳು.

ಇತ್ಯನ್ಯೋನ್ಯಂ ಪಣೀಕೃತ್ಯ ಸರ್ಪಿಣ್ಯಪಿ ಪತತ್ರಿಣೀ ।
ಉವಾಚ ಕರ್ಬುರಂ ಕದ್ರೂರಶ್ವಂ ಶ್ವೇತಂ ಗರುತ್ಮತೀ ॥ ೧೩ ॥
ಕದಾ ಗಂತವ್ಯಮಿತಿ ಚ ಚಕ್ರಾತೇ ತೇ ಗಮಾಽವಧಿಂ ।
ಜಗ್ಮತುಶ್ಚ ವಿರಮ್ಯಾಥ ಕ್ರೀಡನಾತ್ಸ್ವಂ ಸ್ವಮಾಲಯಂ ॥ ೧೪ ॥
ವಿನತಾಯಾಂ ಗತಾಯಾಂತು ಕದ್ರೂರಾಹೂಯ ಚಾಽಂಗಜಾನ್ ।
ಉವಾಚ ಯಾತ ವೈ ಪುತ್ರಾ ದ್ರುತಂ ವಚನತೋ ಮಮ ॥ ೧೫ ॥
ತುರಂಗಮುಚ್ಚೈಃಶ್ರವಸಂ ಪ್ರೋದ್ಭೂತಂ ಕ್ಷೀರನೀರಧೇಃ ।
ಸುರಾಽಸುರೈರ್ಮಥ್ಯಮಾನಾನ್ಮಂದರಾಽಘಾತಸಾಧ್ವಸಾತ್ ॥ ೧೬ ॥
ಕಾರ್ಯಂ ಕಾರಣರೂಪಸ್ಯ ಸಾದೃಶ್ಯಮಧಿಗಚ್ಛತಿ ।
ಅತಸ್ತಂ ಕ್ಷೀರವರ್ಣಾಭಂ ಕಲ್ಮಾಷಯತ ಪುತ್ರಕಾಃ ॥ ೧೭ ॥
ತಸ್ಯ ವಾಲಧಿಮಧ್ಯಾಸ್ಯ ಕೃಷ್ಣಕುಂತಲತಾಂ ಗತಾಃ ।
ತಥಾ ತದಂಗಲೋಮಾನಿ ವಿಧತ್ತ ವಿಷಸೀತ್ಕೃತೈಃ ॥ ೧೮ ॥
ಇತಿ ಶ್ರುತ್ವಾ ವಚೋ ಮಾತುಃ ಕಾದ್ರವೇಯಾಃ ಪರಸ್ಪರಂ ।
ಸಂಮಂತ್ರ್ಯ ಮಾತರಂ ಪ್ರೋಚುಃ ಕದ್ರೂಂ ತದ್ರೂಪಮಾಗತಾಃ ॥ ೧೯ ॥

---

೧೩. ಸರ್ಪ ಮತ್ತು ಪಕ್ಷಿಗಳಿಗೆ ಮಾತೆಯರಾದ ಆ ಕದ್ರು ವಿನತೆಯರು ಹೀಗೆ ಪಣತೊಟ್ಟರು. ಕದ್ರುವು ಅಶ್ವವು ನಾನಾ ಬಣ್ಣವಾಗಿದೆಯೆಂದೂ, ವಿನತೆಯು ಬೆಳ್ಳಗಿದೆಯೆಂದೂ ಹೇಳಿದರು.

೧೪. ಅವರು ಯಾವಾಗ ಹೋಗಬೇಕೆಂದು, ಹೋಗುವ ವೇಳೆಯ ಅವಧಿಯನ್ನು ನಿಶ್ಚಯಿಸಿ ಆಟವನ್ನು ಮುಗಿಸಿ ತಮ್ಮ ತಮ್ಮ ಮನೆಗೆ ತೆರಳಿದರು.

೧೫–೧೬. ವಿನತೆಯು ಹೊರಟುಹೋಗಲು ಕದ್ರುವು ತನ್ನ ಮಕ್ಕಳನ್ನು ಕರೆದು, ಮಕ್ಕಳಿರಾ! ನೀವು ನನ್ನ ಮಾತಿನಂತೆ ದೇವದಾನವರು ಕಡೆಯುತ್ತಿರುವಾಗ ಮಂದರಪರ್ವತದ ಘರ್ಷಣಭಯದಿಂದ ಆ ಕ್ಷೀರಸಮುದ್ರದಲ್ಲಿ ಹುಟ್ಟಿದ ಉಚ್ಚೈಶ್ರವಸ್ಸಿನ ಬಳಿಗೆ ಹೋಗಿರಿ.

೧೭. ಈಗ ನಡೆಯಬೇಕಾಗಿರುವ ಕಾರ್ಯವು ಕಾರಣದ ರೂಪಸಾಮ್ಯವನ್ನು ಹೊಂದಬೇಕು. ಆದುದರಿಂದ ನೀವು ಕ್ಷೀರವರ್ಣವಾಗಿರುವ ಆ ಅಶ್ವವನ್ನು ಕೃಷ್ಣವರ್ಣವನ್ನಾಗಿಸಿರಿ.

೧೮. ನೀವು ಆ ಉಚ್ಚೈಶ್ರವಸ್ಸಿನ ಬಾಲದಲ್ಲಿ ನೆಲೆಸಿ ಕರಿಗೂದಲುಗಳಾಗಿರಿ. ಹಾಗೆಯೇ ಅದರ ಅವಯವಗಳ ಕೂದಲುಗಳನ್ನು ವಿಷಸೀತ್ಕಾರಗಳಿಂದ ಕೃಷ್ಣವರ್ಣಗಳನ್ನಾಗಿ ಮಾಡಿರಿ.

೧೯. ಸರ್ಪಗಳು ತಾಯಿಯ ಈ ಮಾತನ್ನು ಕೇಳಿ ಪರಸ್ಪರವಾಗಿ ಆಲೋಚಿಸಿಕೊಂಡು ಕುಟಿಲರೂಪವನ್ನೇ ಹೊಂದಿ ಹೇಳತೊಡಗಿದುವು.

ನಾಗಾ ಊಚುಃ :–

ಮಾತರ್ವಯಂ ತ್ವದಾಹ್ವಾನಾದ್ವಿಹಾಯ ಕ್ರೀಡನಂ ಬಲಾತ್ ।
ಪ್ರಾಪ್ತಾಃ ಪ್ರಹೃಷ್ಟಾ ಮೃಷ್ಟಾನ್ನಂ ದಾಸ್ಯತ್ಯದ್ಯ ಪ್ರಸೂರಿತಿ ॥ ೨೦ ॥
ಮೃಷ್ಟಂ ತಿಷ್ಠತು ತದ್ದೂರಂ ವಿಷಾದಪ್ಯಧಿಕಂ ಕಟು ।
ತತ್ತ್ವಯಾಽನಾದಿ ಯನ್ಮಂತ್ರೈರೌಷಧೈರ್ನೋಪಶಾಮ್ಯತಿ ॥ ೨೧ ॥
ವಯಂ ನ ಯಾಮೋ ಯದ್ಭಾವ್ಯಂ ತದಸ್ಮಾಕಂ ಭವತ್ವಿಹ ।
ಇತಿ ಪ್ರೋಕ್ತಂ ವಿಷಾಸ್ಯೈಸ್ತೈಸ್ತದಾ ಕುಟಿಲಗಾಮಿಭಿಃ ॥ ೨೨ ॥

ಸ್ಕಂದ ಉವಾಚ :–

ಅನ್ಯೇಽಪಿ ಯೇ ಕುಟಿಲಗಾಃ ಪರರಂಧ್ರನಿಷೇವಿಣಃ ।
ಅಕರ್ಣಾಃ ಕ್ರೂರಹೃದಯಾಃ ಪಿತರೌ ವ್ರೀಡಯಂತಿ ತೇ ॥ ೨೩ ॥
ಪಿತ್ರೋರ್ಗಿರಂ ನಿರಾಕೃತ್ಯ ಯೇ ತಿಷ್ಠೇಯುಃ ಸುದುರ್ಮದಾಃ ।
ಅನ್ಯಾಹಿತಮಿಹ ಪ್ರಾಪ್ಯ ಗಚ್ಛೇಯುಸ್ತೇಽಚಿರಾಲ್ಲಯಂ ॥ ೨೪ ॥
ತೇಷಾಂ ವಚನಮಾಕರ್ಣ್ಯ ನಯಾಮ ಇತಿ ಸೋರಗೀ ।
ಶಶಾಪ ತಾನ್ಕ್ರುಧಾವಿಷ್ಟಾ ನಾಗಾಂಶ್ಚಾಗಃಸಮಾಗತಾನ್ ॥ ೨೫ ॥
ತಾರ್ಕ್ಷ್ಯಸ್ಯ ಭಕ್ಷ್ಯಾ ಭವತ ಯೂಯಂ ಮದ್ವಾಕ್ಯಲಂಘನಾತ್ ।
ಜಾತಮಾತ್ರಾಂಶ್ಚ ಸರ್ಪಿಣ್ಯೋ ಭಕ್ಷಯಂತು ಸ್ವಬಾಲಕಾನ್ ॥ ೨೬ ॥

---

೨೦. ನಾಗಗಳು ಹೇಳುತ್ತವೆ:—ಅಮ್ಮ! ನೀನು ಈಗ ಮೃಷ್ಟಾನ್ನವನ್ನು ನೀಡುವೆಯೆಂದು ನಾವು ನಿನ್ನ ಆಹ್ವಾನದಿಂದ ಆಟವನ್ನೂ ಬಿಟ್ಟು ಬಂದೆವು.

೨೧. ಆ ಮೃಷ್ಟಾನ್ನವಂತಿರಲಿ. ನೀನು ವಿಷಕ್ಕಿಂತಲೂ ಕಟುವೂ, ಮಂತ್ರ ಔಷಧಗಳಿಂದಲೂ ಶಾಂತವಾಗದಿರುವುದೂ ಆದ ಮಾತನ್ನಾಡಿರುವೆ.

೨೨. ನಾವು ಅಲ್ಲಿಗೆ ಹೋಗುವುದಿಲ್ಲ. ಏನಾಗುವುದೊ, ಅದು ನಮಗಾಗಲಿ" ಎಂದು ವಕ್ರಗಾಮಿಗಳಾದ ಆ ಸರ್ಪಗಳು ಹೇಳಿದುವು.

೨೩. ಸ್ಕಂದನು ಹೇಳುತ್ತಾನೆ:—ವಕ್ರಮಾರ್ಗಗಾಮಿಗಳಾಗಿ, ಪರರ ಛಿದ್ರವನ್ನು ಹುಡುಕುತ್ತ, ಹೇಳಿದರೂ ಕೇಳಿಸದಂತಿರುವವರೂ ಆದ ಕಠಿನಚಿತ್ತರಾದ ಪುತ್ರರು ತಂದೆ ತಾಯಿಗಳನ್ನು ಲಜ್ಜೆಗೊಳಿಸುತ್ತಾರೆ.

೨೪. ಈ ಲೋಕದಲ್ಲಿ ತಂದೆ ತಾಯಿಗಳ ಮಾತುಗಳನ್ನು ಮೀರಿ ಮತ್ತರಾಗಿರುವರು ಅತಿಭಯಂಕರವಾದ ಅನಿಷ್ಟವನ್ನು ಹೊಂದಿ ಶೀಘ್ರವಾಗಿ ನಾಶವಾಗುವರು.

೨೫. ಆ ಕದ್ರುವು ಮಕ್ಕಳು ಹೋಗುವುದಿಲ್ಲವೆಂದು ಹೇಳಿದ ಮಾತನ್ನು ಕೇಳಿ ಕುಪಿತಳಾಗಿ ತಪ್ಪುಮಾಡಿದ ಆ ಸರ್ಪಗಳನ್ನು ಹೀಗೆ ಶಪಿಸಿದಳು.

೨೬. "ನೀವು ನನ್ನ ಮಾತನ್ನು ಮೀರಿದ್ದರಿಂದ ಗರುಡನಿಗೆ ಆಹಾರವಾಗಿರಿ. ಹೆಣ್ಣುಸರ್ಪಗಳು ತಮ್ಮ ಮಕ್ಕಳನ್ನು ಹುಟ್ಟಿದಕೂಡಲೇ ಭಕ್ಷಿಸಲಿ.

ಇತಿ ಶಾಪಾಽನಲಾದ್ಭೀತೈಃ ಕೈಶ್ಚಿತ್ಪಾತಾಲಮಾಶ್ರಿತಂ ।
ಜಿಜೀವಿಷುಭಿರನ್ಯೈಶ್ಚ ದ್ವಿತ್ರೈಶ್ಚಕ್ರೇ ಪ್ರಸೂವಚಃ ॥ ೨೭ ॥
ತೇ ಪುಚ್ಛಮೌಚ್ಚೈಃಶ್ರವಸಮಧಿಗಮ್ಯ ಮಹಾಧಿಯಃ ।
ಸುನೀಲಚಿಕುರಾಭಾಸಂ ಚಕ್ರುರಂಗಂಚ ಕರ್ಬುರಂ ॥ ೨೮ ॥
ತತ್ಕೈಃ ವೇಡಾಽನಲ ಧೂಮೌಘೈಃ ಫೂತ್ಕಾರಭರನಿಃಸೃತೈಃ ।
ಮಾತೃವಾಕ್ಯಕೃತಿಜಾದ್ಧರ್ಮಾನ್ನದಗ್ಧಾ ಭಾನುಭಾನುಭಿಃ ॥ ೨೯ ॥
ವಿನತಾಪೃಷ್ಠಮಾರುಹ್ಯ ಕದ್ರೂಃ ಸ್ನೇಹವಶಾತ್ತತಃ ।
ವಿಯನ್ಮಾರ್ಗಮಲಂಕೃತ್ಯ ದದರ್ಶೋಽಷ್ಣಾಂಶುಮಂಡಲಂ ॥ ೩೦ ॥
ತಿಗ್ಮರಶ್ಮಿಪ್ರಭಾವೇಣ ವ್ಯಾಕುಲೀಭೂತಮಾನಸಾ
ಕದ್ರೂಸ್ತತಃ ಖಗೀಂ ಪ್ರಾಹ ವಿಸ್ರಬ್ಧಂ ವಿನತೇ ವ್ರಜ ॥ ೩೧ ॥
ಉಷ್ಣಗೋರುಷ್ಣಗೋಭಿರ್ಮೇ ತಾಪ್ಯತೇ ನಿತರಾಂ ತನುಃ ।
ವಿಸ್ರಬ್ಧಾಽಹಂ ಸ್ವಭಾವೇನ ತ್ವಂ ಸಾಪೇಕ್ಷಾ ಹಿ ಸರ್ವತಃ ॥ ೩೨ ॥
ಸ್ವರೂಪೇಣ ಪತಂಗೀ ತ್ವಂ ಪತಂಗೋಽಸೌ ಸಹಸ್ರಗುಃ ।
ಅತ ಏವ ನತೇ ಬಾಧಾ ಗಗನೇ ತಾಪಸಂಭವಾ ॥ ೩೩ ॥

---

೨೭. ಹೀಗೆ ಶಾಪಾಗ್ನಿಯಿಂದ ಭಯಗೊಂಡ ಅವುಗಳಲ್ಲಿ ಕೆಲವು ಪಾತಾಳವನ್ನಾಶ್ರಯಿಸಿದುವು. ಬದುಕಬೇಕೆಂದು ಬಯಸಿದ ಎರಡು ಮೂರು ಸರ್ಪಗಳು ಮಾತ್ರ ತಾಯಿಯ ಮಾತನ್ನು ನಡೆಸಿದುವು.

೨೮–೨೯. ಅವು ಉಚ್ಚೈಃಶ್ರವಸ್ಸಿನ ಬಾಲವನ್ನು ಸೇರಿ ತಮ್ಮ ಫೂತ್ಕಾರಗಳಿಂದ ಹೊರಟ ವಿಷಾಗ್ನಿಯ ಹೊಗೆಯ ಮೊತ್ತದಿಂದ ಕೃಷ್ಣವರ್ಣವನ್ನಾಗಿಸಿ ಅದರ ಶರೀರವನ್ನು ನಾನಾ ಬಣ್ಣವನ್ನಾಗಿ ಮಾಡಿದುವು. ಅವು ತಾಯಿಯ ವಾಕ್ಯವನ್ನು ನಡೆಯಿಸಿದ್ದರಿಂದುಂಟಾದ ಧರ್ಮದ ಸಹಾಯದಿಂದ ಸೂರ್ಯಕಿರಣಗಳಿಂದ ಸುಡಲ್ಪಡಲಿಲ್ಲ.

೩೦. ಬಳಿಕ ಕದ್ರುವು ಸ್ನೇಹದಿಂದ ವಿನತೆಯ ಬೆನ್ನಿನ ಮೇಲೆ ಕುಳಿತು ಆಕಾಶಮಾರ್ಗದಲ್ಲಿ ಹೋಗುತ್ತ ಸೂರ್ಯಮಂಡಲವನ್ನು ನೋಡಿದಳು.

೩೧–೩೨. ಬಳಿಕ ಸೂರ್ಯನ ಪ್ರಭಾವದಿಂದ ವ್ಯಾಕುಲಗೊಂಡ ಆ ಕದ್ರುವು ವಿನತೆಯನ್ನು ಕುರಿತು ಇಂತೆಂದಳು. "ವಿನತೆ! ಆಕಾಶದಲ್ಲಿ ಸ್ವಲ್ಪ ಕೆಳಭಾಗದಲ್ಲಿ ಸಂಚರಿಸು. ಸೂರ್ಯನ ಉಷ್ಣಕಿರಣಗಳಿಂದ ನನ್ನ ಶರೀರವು ಬಹಳ ಸಂತಾಪಗೊಳ್ಳುತ್ತಿದೆ. ನಾನು ಸ್ವಭಾವದಿಂದಲೇ ವಿಶ್ವಾಸವುಳ್ಳವಳು. ನೀನು ಎಲ್ಲಾ ವಿಷಯದಲ್ಲಿಯೂ ಸಾಪೇಕ್ಷಳು.

೩೩. ನೀನು ಪತಂಗಿಯು. ಈ ಸೂರ್ಯನೂ ಪತಂಗನು. ಆದುದರಿಂದಲೇ ನಿನಗೆ ತಾಪದಿಂದುಂಟಾದ ಪೀಡೆಯಿರುವುದಿಲ್ಲ.

ವಿಯತ್ಸರಸಿ ಹಂಸೋಽಯಂ ಭವತೀ ಹಂಸಗಾಮಿನೀ ।
ಚಂಡರಶ್ಮಿಪ್ರತಾಪಾಗ್ನಿಸ್ತ್ವಾಮತೋ ನೇಹ ಬಾಧತೇ ॥ ೩೪ ॥
ಖಗೀಮುಡ್ಡೀಯಮಾನಾಂ ಖೇ ಪುನರೂಚೇ ಬಿಲೇಶಯಾ ।
ತ್ರಾಹಿ ತ್ರಾಹಿ ಭಗಿನ್ಯತ್ರ ಯಾವೋಽನ್ಯತ್ರ ವಿಯತ್ಪಥಃ ॥ ೩೫ ॥
ವಿನತೇ ವಿನತಾಂ ಮಾಂ ತ್ವಂ ಕಿಂ ನಾವಸಿ ಪತತ್ರಿಣೀ ।
ತವ ದಾಸೀ ಭವಿಷ್ಯಾಮಿ ತ್ವದುಚ್ಛಿಷ್ಟನಿಷೇವಿಣೀ ॥ ೩೬ ॥
ಯಾವಜ್ಜೀವಮಹಂ ಭೂಯಾಂ ತ್ವತ್ಪಾದೋದಕಪಾಯಿನೀ ।
ಖಖೋಲ್ಕಾ ನಿಪತೇದೇಷಾ ಭೃಶಂ ಗದ್ಗದಭಾಷಿಣೀ ॥ ೩೭ ॥
ಮೂರ್ಛಾಂ ಗತವತೀ ಪಕ್ಷಪುಟಾದ್ಧೃತ್ವಾ ಬಿಡೋರಗೀ ।
ಸಖ್ಯುಲ್ಕಾ ನಿಪತೇದೇಷ್ಯಾ ವಕ್ತವ್ಯೇತ್ಯಿತಿ ಸಂಭ್ರಮಾತ್ ॥ ೩೮ ॥
ಖಖೋಲ್ಕೇತಿ ಯದುಕ್ತಾ ಗೀಃ ಕದ್ರ್ವಾ ಸಂಭ್ರಾಂತಚೇತಸಾ ।
ತದಾ ಖಖೋಲ್ಕನಾಮಾರ್ಕಃ ಸ್ತುತೋ ವಿನತಯಾ ಬಹು ॥ ೩೯ ॥
ಮನಾಗತಿಗ್ಮತಾಂ ಪ್ರಾಪ್ತೇ ಖೇ ಪ್ರಯಾತಿ ವಿವಸ್ವತಿ ।
ತಾಭ್ಯಾಂ ತುರಂಗಮೋಽದರ್ಶಿ ಕಿಂಚಿತ್ಕಿರ್ಮೀರವಾನ್ರಥೇ ॥ ೪೦ ॥

---

೩೪. ಈ ಸೂರ್ಯನು ಆಕಾಶಸರೋವರದಲ್ಲಿ ಹಂಸರೂಪನಾಗಿರುವನು. ನೀನು ಹಂಸದಂತೆ ಸಂಚರಿಸುವವಳು. ಆದುದರಿಂದ ನಿನ್ನನ್ನು ಸೂರ್ಯಕಿರಣವು ಬಾಧಿಸುವುದಿಲ್ಲ.

೩೫. ಆಕಾಶದಲ್ಲಿ ಮೇಲಮೇಲಕ್ಕೆ ಹಾರಿಹೋಗುತ್ತಿರುವ ವಿನತೆಯನ್ನು ಕುರಿತು ಕದ್ರುವು ಮರಳಿಯೂ ಇಂತೆಂದಳು. "ಸಹೋದರಿಯೆ! ಕಾಪಾಡು. ಆಕಾಶದಿಂದ ಇನ್ನೊಂದೆಡೆಗೆ ತೆರಳೋಣ.

೩೬. ವಿನತೆ! ನೀನು ನಮ್ರಳಾದ ನನ್ನನ್ನು ಕಾಪಾಡುವುದಿಲ್ಲವೆ! ನಾನು ನಿನ್ನ ಉಚ್ಛಿಷ್ಟವನ್ನು ತಿನ್ನುವ ದಾಸಿಯಾಗುವೆನು.

೩೭–೩೯. ನಾನು ಬದುಕಿರುವವರೆಗೂ ನಿನ್ನ ಪಾದೋದಕವನ್ನು ಪಾನಮಾಡುವೆನು. ಈ ಆಕಾಶದ ಬೆಂಕಿಯ ಕೋಳಿಯು ಕೆಳಗೆ ಬಿದ್ದೀತು." ಕದ್ರುವು ಹೀಗೆ ಗದ್ಗದಸ್ವರದಿಂದ ಮಾತನಾಡುತ್ತ ರೆಕ್ಕೆಗಳನ್ನು ಹಿಡಿದುಕೊಂಡು ಮೂರ್ಛೆಗೊಂಡಳು. ಆ ಕದ್ರುವು "ಸಖ್ಯುಲ್ಕಾನಿಪತೇದೇಷಾ" ಎಂಬುದಕ್ಕೆ ಬದಲಾಗಿ "ಖಖೋಲ್ಕಾ" ಎಂದು ತ್ವರೆಯಿಂದ ಹೇಳಿದ್ದರಿಂದ ವಿನತೆಯು ಖಖೋಲ್ಕನೆಂದು ಸೂರ್ಯನನ್ನು ಬಹುವಾಗಿ ಸ್ತುತಿಸಿದಳು.

೪೦. ಸೂರ್ಯನು ಸ್ವಲ್ಪ ಮೃದುವಾಗಿ ಆಕಾಶದಲ್ಲಿ ಹೋಗುತ್ತಿರಲು ಆ ಕದ್ರೂ ವಿನತೆಯರು ರಥದಲ್ಲಿ ಸ್ವಲ್ಪ ಶಬಲವರ್ಣವಾದ ಅಶ್ವವನ್ನು ಕಂಡರು.

ಉಕ್ತ್ವಾ ವಿನತಯೈವೈಷಾ ತಾಪೋಪಹತಲೋಚನಾ ।
ಕ್ರೂರಾ ಸರೀಸೃಪೀ ಸತ್ಯವಾದಿನ್ಯಾ ವಿಶ್ವಮಾನ್ಯಯಾ ॥ ೪೧ ॥
ಕದ್ರು ತ್ವಯಾ ಜಿತಂ ಭದ್ರೇ ಯತ ಉಚ್ಚೈಃಶ್ರವಾ ಹಯಃ ।
ಚಂದ್ರರಶ್ಮಿಪ್ರಭೋಽಪ್ಯೇಷ ಕಲ್ಮಾಷ ಇವ ಭಾಸತೇ ॥ ೪೨ ॥
ವಿಧಿರ್ಬಲೀಯಾನ್ಭುಜಗಿ ಚಿತ್ರಂ ಜಯಪರಾಜಯೋ ।
ಕ್ರೂರೋಽಪಿ ವಿಜಯೀ ಕ್ವಾಽಪಿ ತ್ವಕ್ರೂರೋಽಪಿ ಪರಾಜಯೀ ॥ ೪೩ ॥
ವಿನತಾ ವಿನತಾಧಾರಾ ವದಂತೀತಿ ಯಥಾಗತಂ ।
ಕದ್ರೂನಿವೇಶನಂ ಪ್ರಾಪ್ಯ ತಸ್ಯಾ ದಾಸ್ಯಮಚೀಕರತ್ ॥ ೪೪ ॥
ಕದಾಚಿದ್ವಿನತಾಽದರ್ಶಿ ಸುಪರ್ಣೇನಾಶ್ರುಲೋಚನಾ ।
ವಿಚ್ಛಾಯಾ ಮಲಿನಾ ದೀನಾ ದೀರ್ಘನಿಃಶ್ವಾಸವತ್ಯಪಿ ॥ ೪೫ ॥

ಸುಪರ್ಣ ಉವಾಚ :—

ಪ್ರಾತಃ ಪ್ರಾತರಹೋ ಮಾತಃ ಕ್ವ ಯಾಸಿ ತ್ವಂ ದಿನೇ ದಿನೇ ।
ಸಾಯಮಾಯಾಸಿ ಚ ಕುತೋ ವಿಚ್ಛಾಯಾ ದೀನಮಾನಸಾ ॥ ೪೬ ॥
ಕುತೋ ನಿಃಶ್ವಸಿಸಿ ಪ್ರೋಚ್ಚೈರಶ್ರುಪೂರ್ಣವಿಲೋಚನಾ ।
ಯಥಾ ಕ್ಲೀಬಸುತಾ ಯೋಷಿದ್ಯಥಾ ಪತಿತಿರಸ್ಕೃತಾ ॥ ೪೭ ॥

---

೪೧. ಸತ್ಯವಾದಿನಿಯೂ, ವಿಶ್ವಪೂಜ್ಯೆಯೂ ಆದ ವಿನತೆಯು ಸೂರ್ಯನ ತಾಪದಿಂದ ಕುರುಡಾದ ಕಣ್ಣುಗಳುಳ್ಳ ಆ ಕ್ರೂರ ಕದ್ರುವನ್ನು ಕುರಿತು ಹೀಗೆಂದಳು.

೪೨. "ಮಂಗಳಕರಳಾದ ಕದ್ರುವೆ! ಉಚ್ಚೈಃಶ್ರವಸ್ಸು ಬೆಳ್ಳಗಿದ್ದರೂ ಶಬಲವರ್ಣವಾಗಿ ಕಾಣುವುದರಿಂದ ನಾನು ನಿನಗೆ ಸೋತೆನು.

೪೩. ಎಲೆ ಸರ್ಪಿಣಿ! ಜಯಪರಾಜಯಗಳ ವಿಷಯದಲ್ಲಿ ದೈವವು ಬಲವಾದುದು. ಆಶ್ಚರ್ಯ! ಒಂದೆಡೆಯಲ್ಲಿ ಕ್ರೂರಿಯೂ ಜಯಶಾಲಿಯಾಗುವನು. ಇನ್ನೊಂದೆಡೆ ಕ್ರೂರಿಯಲ್ಲದವನು ಸೋಲುವನು."

೪೪. ವಿನೀತಳಾದ ವಿನತೆಯು ಹೀಗೆ ಸತ್ಯವನ್ನು ನುಡಿಯುತ್ತ ಕದ್ರುವಿನ ಮನೆಯನ್ನು ಹೊಂದಿ ಅವಳ ದಾಸ್ಯವನ್ನು ಅನುಭವಿಸತೊಡಗಿದಳು.

೪೫. ಒಂದಾನೊಂದು ಸಲ ಗರುಡನು ಅಳುತ್ತಿರುವವಳೂ, ಕಳೆಗುಂದಿದವಳೂ, ಮಲಿನಳೂ, ದೀನಳೂ, ದೀರ್ಘವಾಗಿ ನಿಟ್ಟುಸಿರಿಡುತ್ತಿರುವವಳೂ ಆದ ಆ ವಿನತೆಯನ್ನು ಕಂಡನು.

೪೬. ಸುಪರ್ಣನು ಕೇಳುತ್ತಾನೆ:—ಅಮ್ಮ! ನೀನು ಪ್ರತಿದಿನವೂ ಬೆಳಿಗ್ಗೆ ಎಲ್ಲಿಗೆ ಹೋಗುವೆ? ಸಾಯಂಕಾಲ ಕಾಂತಿಹೀನಳೂ, ದೀನಮನಸ್ಕಳೂ ಆಗಿ ಏತಕ್ಕೆ ಬರುತ್ತಿರುವೆ?

೪೭. ಅಮ್ಮ! ನಪುಂಸಕರಾದ ಮಕ್ಕಳುಳ್ಳವಳೂ, ಪತಿಯಿಂದ ತಿರಸ್ಕೃತಳೂ ಆದ ನಾರಿಯರಂತೆ ಅಳುತ್ತ ಏತಕ್ಕೆ ಗಟ್ಟಿಯಾಗಿ ಹೀಗೆ ನಿಟ್ಟುಸಿರುಬಿಡುವೆ?

ಬ್ರೂಹಿ ಮಾತರ್ಘುರ್ಟಿತ್ಯದ್ಯ ಕುತೋ ದೂನಾಽಸಿ ಪತ್ರಿಣಿ ।
ಮಯಿ ಜೀವತಿ ತೇ ಬಾಲೇ ಕಾಲೇಽಪಿ ಕೃತಸಾಧ್ವಸೇ ॥ ೪೮ ॥
ಅಶ್ರುನಿರ್ಮಾಣಕರಣೇ ಕಾರಣಂ ಕಿಂ ತಪಸ್ವಿನಿ ।
ಸುಚರಿತ್ರಾಸು ನಾರೀಷು ನಾಽಮಂಗಲಮಿಹೇಷ್ಯತೇ ॥ ೪೯ ॥
ಧಿಕ್ತಾಂಶ್ಚ ಪುತ್ರಾನ್ಯನ್ಮಾತಾ ತೇಷು ಜೀವತ್ಸು ದುಃಖಭಾಕ್ ।
ವರಂ ವಂಧ್ಯೈವ ಸಾ ಯಸ್ಯಾಃ ಸುತಾ ವಂಧ್ಯಮನೋರಥಾಃ ॥ ೫೦ ॥
ಇತ್ಯೂರ್ಜಸ್ವಲಮಾಕರ್ಣ್ಯ ವಚಃ ಸೂನೋರ್ಗರುತ್ಮತಃ ।
ವಿನತಾ ಪ್ರಾಹ ತಂ ಪುತ್ರಂ ಮಾತೃಭಕ್ತಿಸಮನ್ವಿತಂ ॥ ೫೧ ॥
ಅಹಂ ದಾಸ್ಯಸ್ಮಿ ರೇ ಬಾಲ ಕದ್ರ್ವಾಶ್ಚ ಕ್ರೂರಚೇತಸಃ ।
ಪೃಷ್ಠೇ ವಹಾಮಿ ತಾನಿತ್ಥಂ ತತ್ಸುತಾನಪಿ ಪುತ್ರಕ ॥ ೫೨ ॥
ಕದಾಚಿನ್ಮಂದರಂ ಯಾಮಿ ಕದಾಚಿನ್ಮಲಯಾಚಲಂ ।
ಕದಾಚಿದಂತರೀಕ್ಷೇಷು ಚರೇಯಂ ತದುದನ್ವತಾಂ ॥ ೫೩ ॥
ಯತ್ರ ಯತ್ರ ನಯೇಯುಸ್ತೇ ಕಾದ್ರವೇಯಾಃ ಸುದುರ್ಮದಾಃ ।
ವ್ರಜೇಯಂ ತತ್ರ ತತ್ರಾಽಹಂ ತದಧೀನಾ ಯತಃ ಸುತ ॥ ೫೪ ॥

---

೪೮. ಅಮ್ಮ! ಯಮನನ್ನೂ ಹೆದರಿಸಿದ ಬಾಲಕನಾದ ಈ ಗರುಡನು ಬದುಕಿರಲು ನೀನೇತಕ್ಕೆ ವ್ಯಥೆಗೊಳ್ಳಬೇಕು? ಶೀಘ್ರವಾಗಿ ಹೇಳು.

೪೯. ನೀನು ಕಂಬನಿಗರೆಯಲು ಕಾರಣವೇನು? ಸುಚರಿತೆಯರಾದ ಸ್ತ್ರೀಯರಿಗೆ ಎಂದಿಗೂ ಅಮಂಗಳವುಂಟಾಗುವುದಿಲ್ಲ.

೫೦. ಪುತ್ರರು ಜೀವಿಸುತ್ತಿರಲು ತಾಯಿಯು ದುಃಖವನ್ನು ಅನುಭವಿಸುವುದಾದರೆ ಅಂತಹ ಪುತ್ರರು ನಿಂದ್ಯರು. ಯಾವಳ ಮಕ್ಕಳು ನಿಷ್ಫಲಮನೋರಥರೊ, ಆ ಹೆಂಗಸು ತಾಯಿಯಾಗಿರುವುದಕ್ಕಿಂತಲೂ ಬಂಜೆಯಾಗಿರುವುದೇ ಲೇಸು.''

೫೧. ವಿನತೆಯು ಮಗನಾದ ಗರುಡನ ವೀರ್ಯವತ್ತಾದ ಈ ನುಡಿಯನ್ನು ಕೇಳಿ ಮಾತೃಭಕ್ತಿಯುಳ್ಳ ಅವನನ್ನು ಕುರಿತು ಇಂತೆಂದಳು.

೫೨. ''ಮಗು! ನಾನು ಕ್ರೂರಮತಿಯಾದ ಕದ್ರುವಿಗೆ ಸೇವಕಳಾಗಿರುವೆನು. ಪ್ರತಿನಿತ್ಯವೂ ಅವಳನ್ನೂ, ಅವಳ ಮಕ್ಕಳನ್ನೂ ಬೆನ್ನಿನ ಮೇಲೆ ಹೊತ್ತು ಹೋಗುವೆನು.

೫೩. ಒಮ್ಮೆ ಮಂದರಾಚಲಕ್ಕೂ, ಒಮ್ಮೆ ಮಲಯಶೈಲಕ್ಕೂ, ಮತ್ತೊಮ್ಮೆ ಸಮುದ್ರಗಳಲ್ಲಿರುವ ದ್ವೀಪಗಳಿಗೂ ಹೋಗುವೆನು.

೫೪. ನಾನು ಸರ್ಪಗಳಿಗೆ ಅಧೀನಳಾಗಿರುವುದರಿಂದ ಮದಿಸಿದ ಆ ಸರ್ಪಗಳು ಎಲ್ಲೆಲ್ಲಿಗೆ ಕರೆದುಕೊಂಡುಹೋಗುವವೊ, ಅಲ್ಲಲ್ಲಿಗೆಲ್ಲ ಹೋಗುವೆನು.

ಗರುಡ ಉವಾಚ :—

ದಾಸೀತ್ವಕಾರಣಂ ಮಾತಃ ಕಿಂ ತೇ ಜಾತಂ ಸುಲಕ್ಷಣೇ ।
ದಕ್ಷಪ್ರಜಾಪತೇಃ ಪುತ್ರಿ ಕಶ್ಯಪಸ್ಯ ಪ್ರಿಯೇಽನಘೇ ॥ ೫೫ ॥
ವಿನತೋವಾಚ ಗರುಡಂ ಪುರಾವೃತ್ತಮಶೇಷತಃ ।
ದಾಸೀತ್ವಕಾರಣಂ ಯದ್ವದಾದಿತ್ಯಾಶ್ವವಿಲೋಕನಂ ॥ ೫೬ ॥
ಶ್ರುತ್ವೇತಿ ಗರುಡಃ ಪ್ರಾಹ ಮಾತರಂ ಸತ್ವರಂ ವ್ರಜ ।
ಪೃಚ್ಛಾಽದ್ಯ ಮಾತಸ್ತಾನ್ದುಷ್ಟಾನ್ನಾಗ್ರಪ್ರಮೇಯಾನಿದಂ ವಚಃ ॥ ೫೭ ॥
ಯದ್ದುರ್ಲಭಂ ಹಿ ಭವತಾಂ ಯತ್ರಾಽತ್ಯಂತರುಚಿಶ್ಚ ವಃ ।
ಮದ್ದಾಸೀತ್ವವಿಮೋಕ್ಷಾಯ ತದ್ಯಾಚಧ್ವಂ ದದಾಮ್ಯಹಂ ॥ ೫೮ ॥
ತಥಾಽಕರೋಚ್ಚ ವಿನತಾ ತೇಽಪಿ ಶ್ರುತ್ವಾ ತದೀರಿತಂ ।
ಸರ್ಪಾಃ ಸಂಮಂತ್ರ್ಯ ತಾಂ ಪ್ರೋಚುರ್ವಿನತಾಂ ಹೃಷ್ಟಮಾನಸಾಃ ॥೫೯॥
ಮಾತೃಶಾಪವಿಮೋಕ್ಷಾಯ ಯದಿ ದಾಸ್ಯತಿ ನಃ ಸುಧಾಂ ।
ತದಾ ಸಮಿಾಹಿತಂ ತೇಽಸ್ತು ನದಾಸ್ಯತ್ಯಥ ದಾಸ್ಯಸಿ ॥ ೬೦ ॥
ಇತ್ಯೋಂಕೃತ್ಯ ಸಮಾಪೃಚ್ಛ್ಯ ಕದ್ರೂಂ ದ್ರುತಗತಿಃ ಖಗೀ ।
ಗರುತ್ಮಂತಂ ಸಮಾಚಷ್ಟ ದೃಷ್ಟ್ವಾ ಸಂಹೃಷ್ಟಮಾನಸಂ ॥ ೬೧ ॥

---

೫೫. ಗರುಡನು ಹೇಳುತ್ತಾನೆ:—ಅಮ್ಮ! ದಕ್ಷಸುತೆಯೂ, ಕಶ್ಯಪಪತ್ನಿಯೂ ಆದ ನಿನ್ನ ಈ ದಾಸ್ಯಕ್ಕೆ ಕಾರಣವೇನು?

೫೬. ಗರುಡನಿಂತು ಕೇಳಲು, ವಿನತೆಯು ಸೂರ್ಯಾಶ್ವದರ್ಶನವೇ ಕದ್ರೂ ದಾಸ್ಯಕ್ಕೆ ಕಾರಣವೆಂದು ನಡೆದ ಸಂಗತಿಗಳನ್ನೆಲ್ಲ ಸಂಪೂರ್ಣವಾಗಿ ಅವನಿಗೆ ಹೇಳಿದಳು.

೫೭. ಗರುಡನು ತಾಯಿಯ ಈ ಮಾತನ್ನು ಕೇಳಿ ಇಂತೆಂದನು. "ಅಮ್ಮ! ಶೀಘ್ರವಾಗಿ ಆ ದುಷ್ಟಸರ್ಪಗಳ ಬಳಿಗೆ ಹೋಗಿ ಹೀಗೆ ಪ್ರಶ್ನಿಸು.

೫೮. "ನಿಮಗೆ ಯಾವುದು ದುರ್ಲಭವೊ, ಯಾವುದು ಅತ್ಯಂತ ಪ್ರೀತಿಕರವೊ ಆ ಪದಾರ್ಥವನ್ನು ಬೇಡಿರಿ. ನನ್ನ ದಾಸ್ಯವಿಮೋಚನೆಗಾಗಿ ಅದನ್ನು ನಾನು ನಿಮಗೆ ಕೊಡುವೆನು."

೫೯. ವಿನತೆಯು ಹಾಗೆಯೇ ಮಾಡಿದಳು. ಆ ಸರ್ಪಗಳು ಅವಳು ಹೇಳಿದ್ದನ್ನು ಕೇಳಿ ಸಂತೋಷದಿಂದ ಒಟ್ಟಿಗೆ ಆಲೋಚಿಸಿ ಹೀಗೆಂದುವು.

೬೦. " ನೀನು ನಮ್ಮ ತಾಯಿಯು ನಮಗಿತ್ತ ಶಾಪಮೋಚನೆಗಾಗಿ ಅಮೃತ ವನ್ನೀಯುವುದಾದರೆ ಈಗ ನಿನ್ನ ಇಷ್ಟಾರ್ಥವು ನೆರವೇರಲಿ. ಹಾಗೆ ಅಮೃತ ವನ್ನು ತಂದುಕೊಡದಿದ್ದರೆ ನೀನು ದಾಸಿಯಾಗಿಯೇ ಇರುವೆ."

೬೧. ವಿನತೆಯು ಹಾಗೆಯೇ ಆಗಲೆಂದು ಒಪ್ಪಿಕೊಂಡು ಕದ್ರುವನ್ನು ಕೇಳಿ

ನಾಗಾಂತಕಸ್ತತಃ ಪ್ರಾಹ ಮಾತರಂ ಚಿಂತಯಾತುರಾಂ ।
ಆನೀತಂ ವಿದ್ಧಿ ಪೀಯೂಷಂ ಮಾತರ್ಮೇ ದೇಹಿ ಭೋಜನಂ ॥ ೬೨ ॥
ವಿನತಾ ಪ್ರಾಹ ತಂ ಪುತ್ರಂ ಸಂಪ್ರಹೃಷ್ಟತನೂರುಹಾ ।
ಭೋಃ ಸುಪರ್ಣಾರ್ಽರ್ಣವಂ ತೂರ್ಣಂ ಯಾಹಿ ಮಂಗಲಮಸ್ತು ತೇ ॥೬೩॥
ಸಂತಿ ತತ್ರಾಽಪಿ ಬಹುಶೋ ನಿಷಾದಾ ಮತ್ಸ್ಯಘಾತಿನಃ ।
ವೇಲಾತಟನಿವಾಸಾಶ್ಚ ತಾನ್ಭಕ್ಷಯ ದುರಾತ್ಮನಃ ॥ ೬೪ ॥
ಪರಪ್ರಾಣೈರ್ನಿಜಪ್ರಾಣಾನ್ಯೇ ಪುಷ್ಣಂತೀಹ ದುರ್ಧಿಯಃ ।
ಶಾಸನೀಯಾಃ ಪ್ರಯತ್ನೇನ ಶ್ರೇಯಸ್ತಚ್ಛಾಸನಂ ಪರಂ ॥ ೬೫ ॥
ಬಹುಹಿಂಸಾಕೃತಾಂ ಹಿಂಸಾಭವೇತ್ಸ್ವರ್ಗಸ್ಯ ಸಾಧನಂ ।
ವಿಹಿಂಸಿತೇಷು ದುಷ್ಟೇಷು ರಕ್ಷ್ಯಂತೇ ಭೂರಿಶೋ ಯತಃ ॥ ೬೬ ॥
ನಿಷಾದೇಷ್ವಪಿ ಚೇದ್ವಿಪ್ರಃ ಕಶ್ಚಿದ್ಭವತಿ ಪುತ್ರಕ ।
ಸ ರಕ್ಷಣೀಯೋ ಯತ್ನೇನ ಭಕ್ಷಣೀಯೋ ನ ಕರ್ಹಿಚಿತ್ ॥ ೬೭ ॥

ಗರುಡ ಉವಾಚ :—

ಮತ್ಸ್ಯಾದಿನಾಂ ವಸನ್ಮಧ್ಯೇ ಕಥಂ ಜ್ಞೇಯೋ ದ್ವಿಜೋ ಮಯಾ ।
ಅಭಕ್ಷ್ಯೋ ಯಸ್ತ್ವಯಾ ಪ್ರೋಕ್ತಸ್ತಚ್ಚಿಹ್ನಂ ಕಿಂಚನಾಽತ್ಥ ಮೇ ॥೬೮॥

---

ಕೊಂಡು ಶೀಘ್ರವಾಗಿ ಮನೆಗೆ ಬಂದು ಹರ್ಷಗೊಂಡು ಆ ವಿಷಯವನ್ನು ಗರುಡನಿಗೆ ತಿಳಿಸಿದಳು.

೬೨. ಬಳಿಕ ನಾಗಾಂತಕನಾದ ಗರುಡನು ಚಿಂತಾಕ್ರಾಂತಳಾದ ಆ ತಾಯಿಯನ್ನು ಕುರಿತು, "ಅಮ್ಮ! ಅಮೃತವನ್ನು ತಂದೆನೆಂದೇ ತಿಳಿ. ಈಗ ನನಗೆ ಭೋಜನವನ್ನು ನೀಡು" ಎಂದನು.

೬೩–೬೪. ಆ ಮಾತನ್ನು ಕೇಳಿ ರೋಮಾಂಚಗೊಂಡ ವಿನತೆಯು ಆ ಪುತ್ರನನ್ನು ಕುರಿತು ಇಂತೆಂದಳು. "ಮಗು ಗರುಡ! ಶೀಘ್ರವಾಗಿ ಸಮುದ್ರಕ್ಕೆ ತೆರಳು. ನಿನಗೆ ಮಂಗಳವುಂಟಾಗಲಿ. ಅಲ್ಲಿ ದಡದಲ್ಲಿ ವಾಸಿಸುವ ಮತ್ಸ್ಯಘಾತುಕರಾದ ಅನೇಕ ಮಂದಿ ಬೆಸ್ತರಿರುವರು. ದುರಾತ್ಮರಾದ ಅವರನ್ನು ಭಕ್ಷಿಸು.

೬೫–೬೬. ಈ ಲೋಕದಲ್ಲಿ ಪರಪ್ರಾಣಗಳಿಂದ ತಮ್ಮನ್ನು ಪೋಷಿಸಿಕೊಳ್ಳುವ ದುರಾತ್ಮರನ್ನು ಶಿಕ್ಷಿಸಬೇಕು. ಅವರನ್ನು ಶಿಕ್ಷಿಸುವುದು ಉತ್ತಮ ಶ್ರೇಯಸ್ಸಿಗೆ ಕಾರಣವಾದುದು. ದುಷ್ಟರನ್ನು ಹಿಂಸಿಸಿದರೆ ಅನೇಕರನ್ನು ಕಾಪಾಡಿದಂತಾಗುವುದರಿಂದ ಅಂತಹ ಬಹು ಪ್ರಾಣಿಗಳನ್ನು ಹಿಂಸಿಸುವುದು ಸ್ವರ್ಗಕ್ಕೆ ಕಾರಣವು.

೬೭. ಮಗು ! ಬೆಸ್ತರಲ್ಲಿ ಯಾವನಾದರೂ ಒಬ್ಬ ಬ್ರಾಹ್ಮಣನಿದ್ದರೆ ಅವನನ್ನು ರಕ್ಷಿಸಬೇಕು. ಅವನನ್ನು ಭಕ್ಷಿಸಬಾರದು."

೬೮. ಗರುಡನು ಹೇಳುತ್ತಾನೆ:—ನಾನು ಬೆಸ್ತರ ನಡುವೆ ಯಾವನಾದರೂ

ವಿನತೋವಾಚ :—

ಯಜ್ಞಸೂತ್ರಂ ಗಲೇ ಯಸ್ಯ ಸೋತ್ತರೀಯಂ ಸುನಿರ್ಮಲಂ ।
ನಿತ್ಯಧೌತಾನಿ ವಾಸಾಂಸಿ ಭಾಲಂ ತಿಲಕಲಾಂಛಿತಂ ॥ ೬೯ ॥
ಸಪವಿತ್ರೌ ಕರೌ ಯಸ್ಯ ಯನ್ನೀವೀ ಕುಶಗರ್ಭಿಣೀ ।
ಯನ್ಮೌಲಿಃ ಸಶಿಖಾಗ್ರಂಥಿಃ ಸ ಜ್ಞೇಯೋ ಬ್ರಾಹ್ಮಣಸ್ತ್ವಯಾ ॥ ೭೦ ॥
ಉಚ್ಚರೇದೃಗ್ಯಜುಃಸಾಮ್ನಾಮೃಚಮೇಕಾಮಪೀಹ ಯಃ ।
ಗಾಯತ್ರೀಮಾತ್ರಮಂತ್ರೋಽಪಿ ಸವಿಜ್ಞೇಯೋ ದ್ವಿಜಸ್ತ್ವಯಾ ॥ ೭೧ ॥

ಗರುಡ ಉವಾಚ :—

ಮಧ್ಯೇ ಸದಾ ನಿಷಾದಾನಾಂ ಯೋ ವಸೇಜ್ಜನನಿ ದ್ವಿಜಃ ।
ತಸ್ಯೈತೇಷ್ವೇಕಮಪ್ಯೇವ ನ ಮನ್ಯೇ ಲಕ್ಷ್ಮಬೋಧಕಂ ॥ ೭೨ ॥
ಲಕ್ಷ್ಮಾಂತರಂ ಸಮಾಚಕ್ಷ್ವ ದ್ವಿಜಬೋಧಕರಂ ಪ್ರಸೂಃ ।
ಯೇನ ವಿಜ್ಞಾಯ ತಂ ವಿಪ್ರಂ ತ್ಯಜೇಯಮಪಿ ಕಂಠಗಂ ॥ ೭೩ ॥
ತಚ್ಛ್ರುತ್ವಾ ವಿನತಾ ಪ್ರಾಹ ಯಸ್ತೇ ಕಂಠಗತೋಽಂಗಜ ।
ಖದಿರಾಂಗಾವದ್ದಹ್ಯಾತ್ತಮಪಾಕುರು ದೂರತಃ ॥ ೭೪ ॥

---

ಬ್ರಾಹ್ಮಣನನ್ನು ತಿಳಿಯುವ ಬಗೆ ಹೇಗೆ? ಬ್ರಾಹ್ಮಣನನ್ನು ತಿನ್ನಕೂಡದೆಂದಿರುವೆ. ಅವನ ಮುಖ್ಯವಾದ ಚಿಹ್ನೆಗಳನ್ನು ನನಗೆ ಹೇಳು.

೬೯–೭೦. ವಿನತೆಯು ಹೇಳುತ್ತಾಳೆ:—ಯಾವನ ಕಂಠದಲ್ಲಿ ಯಜ್ಞೋಪವೀತವೂ, ನಿರ್ಮಲವಾದ ಉತ್ತರೀಯವೂ ಇರುವುದೊ, ವಸ್ತ್ರಗಳು ಪರಿಶುದ್ಧವಾಗಿರುವುವೊ, ಹಣೆಯಲ್ಲಿ ತಿಲಕವೂ, ಕೈಯಲ್ಲಿ ಪವಿತ್ರವೂ, ವಸ್ತ್ರಗ್ರಂಥಿಯಲ್ಲಿ ದರ್ಭೆಯೂ, ತಲೆಯಲ್ಲಿ ಶಿಖೆಯೂ ಇರುವುವೊ, ಅವನು ಬ್ರಾಹ್ಮಣನೆಂದು ತಿಳಿ.

೭೧. ಯಾವನು ಋಕ್, ಯಜುಸ್, ಸಾಮವೇದಗಳಲ್ಲಿ ಒಂದು ಋಕ್ಕನ್ನಾದರೂ ಅಥವಾ ಗಾಯತ್ರಿಯನ್ನಾದರೂ ಉಚ್ಚರಿಸುವನೊ ಅವನನ್ನು ನೀನು ಬ್ರಾಹ್ಮಣನೆಂದು ತಿಳಿ.

೭೨. ಗರುಡನು ಹೇಳುತ್ತಾನೆ:—ಅಮ್ಮ! ಬೆಸ್ತರ ನಡುವೆ ವಾಸಿಸುವ ದ್ವಿಜನಲ್ಲಿ ಈ ಚಿಹ್ನೆಗಳಲ್ಲೊಂದನ್ನೂ ತಿಳಿಯದೇಹೋದರೊ?

೭೩. ಬ್ರಾಹ್ಮಣನೆಂಬ ಜ್ಞಾನವನ್ನುಂಟುಮಾಡುವ ಬೇರೆ ಚಿಹ್ನೆಯನ್ನು ಹೇಳು. ಅದರಿಂದ ನಾನು ಕಂಠಗತನಾಗಿದ್ದರೂ ಬ್ರಾಹ್ಮಣನೆಂದರಿತು ಅವನನ್ನು ತೊರೆದುಬಿಡುವೆನು.

೭೪. ಅದನ್ನು ಕೇಳಿ ವಿನತೆಯು ಹೀಗೆಂದಳು. "ಮಗು! ಯಾವನು ನಿನ್ನ ಕಂಠವನ್ನು ನೋಡಿ ಖದಿರವೃಕ್ಷದ ಕೆಂಡದಂತೆ ಸುಡುವನೊ, ಅವನನ್ನು ದೂರದಲ್ಲಿ ತ್ಯಜಿಸು.

ದ್ವಿಜಮಾತ್ರೇಽಪಿ ಯಾ ಹಿಂಸಾ ಸಾ ಹಿಂಸಾ ಕುಶಲಾಯ ನ ।
ದೇಶಂ ವಂಶಂ ಶ್ರಿಯಂ ಸ್ವಂ ಚ ನಿರ್ಮೂಲಯತಿ ಕಾಲತಃ ॥ ೭೫ ॥
ನಿಶಮ್ಯ ಕಾಶ್ಯಪಿರಿತಿ ಪ್ರಸೂಪಾದೌ ಪ್ರಣಮ್ಯ ಚ ।
ಗೃಹೀತಾಶೀರ್ಯಯೌ ಶೀಘ್ರಂ ಖಮಾರ್ಗೇಣ ಖಗೇಶ್ವರಃ ॥ ೭೬ ॥
ದೂರಾದಾಲೋಕಯಾಂಚಕ್ರೇ ನಿಷಾದಾನ್ಮತ್ಸ್ಯಜೀವಿನಃ ।
ಪಕ್ಷೌ ವಿಧೂಯ ಪಕ್ಷೀಂದ್ರೋ ರಜಸಾಪೂರ್ಯ ರೋದಸೀ ॥ ೭೭ ॥
ಅಂಧೀಕೃತ್ಯ ದಿಶೋಭಾಗಾನಬ್ಧಿರೋಧಸ್ಯುಪಾವಿಶತ್ ।
ವ್ಯಾದಾಯ ವಂದನಂ ಘೋರಂ ಮಹಾಕಂದರಸನ್ನಿಭಂ ॥ ೭೮ ॥
ಕಾಂದಿಶೀಕಾ ನಿಷಾದಾಸ್ತು ವಿವಿಶುಸ್ತತ್ರ ಚ ಸ್ವಯಂ ।
ಮನ್ವಾನೇಷ್ವಥ ಪಂಥಾನಂ ತೇಷು ಕಂಠಂ ವಿಶತ್ಸ್ವಪಿ ॥ ೭೯ ॥
ಜಜ್ವಾಲೇಂಗಲಸಂಸ್ಪರ್ಶೋ ದ್ವಿಜಸ್ತತ್ಕಂಠಕಂದಲೀಂ ।
ಪ್ರಾಕ್ಪ್ರವಿಷ್ಟಾನಘೋ ತಾರ್ಕ್ಷ್ಯೋ ನಿಷಾದಾನೌದರೀಂ ದರೀಂ ॥ ೮೦ ॥
ಪ್ರವೇಶ್ಯ ಕಂಠತಾಲುಸ್ಥಂ ತಂ ವಿಜ್ಞಾಯ ದ್ವಿಜಂ ಸ್ಫುಟಂ ।
ಭಯಾದಗಿರತ್ತೂರ್ಣಂ ಮಾತೃವಾಕ್ಯನಿಯಂತ್ರಿತಃ ॥ ೮೧ ॥

---

೭೫. ಗರುಡ! ಸಾಮಾನ್ಯ ಬ್ರಾಹ್ಮಣನ ಹಿಂಸೆಯಿಂದಲೂ ನಮಗೆ ಕ್ಷೇಮ ವುಂಟಾಗುವುದಿಲ್ಲ. ಆ ಹಿಂಸೆಯು ಕಾಲಕ್ರಮವಾಗಿ ದೇಶ, ವಂಶ, ಸಂಪತ್ತು, ಧನ ಇವುಗಳನ್ನು ನಿರ್ಮೂಲಗೊಳಿಸುವುದು.''

೭೬. ಗರುಡನು ಜನನಿಯ ಈ ಮಾತನ್ನು ಕೇಳಿ ತಾಯಿಯ ಪಾದಗಳಿಗೆರಗಿ ಆಶೀರ್ವಾದವನ್ನು ಸ್ವೀಕರಿಸಿ ಆಕಾಶಮಾರ್ಗದಿಂದ ಶೀಘ್ರವಾಗಿ ತೆರಳಿದನು.

೭೭–೭೮. ಅವನು ದೂರದಿಂದಲೇ ಮತ್ಸ್ಯದಿಂದ ಜೀವಿಸುವ ಬೆಸ್ತರನ್ನು ಕಂಡನು. ಅವನು ರೆಕ್ಕೆಗಳನ್ನು ಅಲ್ಲಾಡಿಸಿ ಧೂಳಿನಿಂದ ಆಕಾಶ ಭೂಮಿಗಳನ್ನು ತುಂಬಿ ದಿಕ್ಕುಗಳ ಪ್ರದೇಶಗಳೆಲ್ಲವನ್ನೂ ಕತ್ತಲೆಯಾಗಿಸಿ ಭಯಂಕರವೂ, ದೊಡ್ಡ ಗುಹೆಗೆ ಸಮಾನವೂ ಆದ ಮುಖವನ್ನು ತೆರೆದುಕೊಂಡು ಸಮುದ್ರದ ದಡದಲ್ಲಿ ಕುಳಿತುಕೊಂಡನು.

೭೯–೮೧. ಭಯಗೊಂಡ ಆ ಬೇಡರು ಅವನ ಬಾಯಿಯಲ್ಲಿ ತಾವಾಗಿಯೇ ಪ್ರವೇಶಿಸಿದರು. ಅವರು ಅದು ದಾರಿಯೆಂದೇ ತಿಳಿದು ಪ್ರವೇಶಿಸುತ್ತಿದ್ದರು. ಆ ಗರುಡನ ಬಾಯಿಯಲ್ಲಿ ಪ್ರವೇಶಿಸಿದ ಒಬ್ಬ ಬ್ರಾಹ್ಮಣನು ಅವನ ಕಂಠವನ್ನು ಬೆಂಕಿಯ ಕೆಂಡದಂತೆ ಸುಡತೊಡಗಿದನು. ಆಗ ಗರುಡನು ಮೊದಲು ಪ್ರವೇಶಿಸಿ ಹೊಟ್ಟೆಯನ್ನು ಸೇರಿದವರು ಬೆಸ್ತರೆಂದೂ, ಕಂಠದಲ್ಲಿರುವವನು ಬ್ರಾಹ್ಮಣನೆಂದೂ ಅರಿತು ಭಯದಿಂದ ತಾಯಿಯ ಮಾತಿನಂತೆ ಬೇಗನೆ ಅವನನ್ನು ಉಗುಳಿದನು.

ತಮುದ್ಗೀರ್ಣಂ ನರಂ ದೃಷ್ಟ್ವಾ ಪಕ್ಷಿರಾಟ್ಸಮಭಾಷತ ।
ಕಸ್ತ್ವಂ ಜಾತ್ಯಾಽಸಿ ನಿಗದ ಮಮ ಕಂಠವಿದಾಹಕೃತ್ ॥ ೮೨ ॥
ಸ ತದಾಹೇತಿ ವಿಪ್ರೋಽಹಂ ಪೃಷ್ಟಃ ಸನ್ಗರುಡಾಽಗ್ರತಃ ।
ವಸಾಮ್ಯೇಷು ನಿಷಾದೇಷು ಜಾತಿಮಾತ್ರೋಪಜೀವಕಃ ॥ ೮೩ ॥
ತಂ ಪ್ರೇಷ್ಯ ಗರುಡೋ ದೂರಂ ಭಕ್ಷಯಿತ್ವಾಽಥ ಭೂರಿಶಃ ।
ನಭೋ ವಿಕ್ಷೋಭಯಾಂಚಕ್ರೇ ಪ್ರಲಯಾಽನಿಲಸನ್ನಿಭಃ ॥ ೮೪ ॥
ತಂ ದೃಷ್ಟ್ವಾ ತಿಗ್ಮತೇಜಸ್ಕಂ ಜ್ವಾಲಾತತದಿಗಂತರಂ ।
ಜ್ವಲದ್ದಾವಾನಲಂ ಶೈಲಮಿವ ಬಿಭ್ಯುರ್ದಿವೌಕಸಃ ॥ ೮೫ ॥
ತೇ ಸನ್ನಹ್ಯಂತ ಯುದ್ಧಾಯ ಸಜ್ಜೀಕೃತಬಲಾಯುಧಾಃ ।
ಅಧ್ಯಾಸ್ಯ ವಾಹನಾನ್ಯಾಶು ಸರ್ವೇ ವರ್ಮಭೃತಃ ಸುರಾಃ ॥ ೮೬ ॥
ತಿರ್ಯಗ್ಗತೀ ರವಿರ್ನಾಽಯಂ ನಾಯಮಗ್ನಿಃ ಸಧೂಮವಾನ್ ।
ಕ್ಷಣಪ್ರಭಾಪ್ರಸೌ ನೈವ ಕೋ ನಃ ಸಂಮುಖ ಏತ್ಯಸೌ ॥ ೮೭ ॥
ನ ದೈತ್ಯೇಷು ಪ್ರಭೋ ದೃಕ್ಸ್ಯನ್ನಾಕೃತಿರ್ದಾನವೇಷ್ವಿಯಂ ।
ಮಹಾಸಾಧ್ವಸದಃ ಕೋಽಯಮಸ್ಮಾಕಂ ಹೃತ್ಪ್ರಕಂಪನಃ ॥ ೮೮ ॥

---

೮೨. ಗರುಡನು ತಾನು ಉಗುಳಿದ ಮನುಷ್ಯನನ್ನು ಕಂಡು, ನನ್ನ "ಕಂಠವನ್ನು ಸುಡುತ್ತಿರುವ ನೀನಾರು? ಹೇಳು" ಎಂದು ಕೇಳಿದನು.

೮೩. ಆಗ ಅವನು, "ನಾನು ಬ್ರಾಹ್ಮಣನು. ಈ ಬೇಡರ ನಡುವೆ ಅವರಂತೆಯೇ ಜೀವಿಸುತ್ತ ವಾಸಿಸುವೆನು" ಎಂದನು.

೮೪. ಗರುಡನು ಅವನನ್ನು ದೂರ ಕಳುಹಿಸಿ ಅನೇಕಮಂದಿ ಬೆಸ್ತರನ್ನು ತಿಂದು ಪ್ರಳಯಕಾಲದ ಗಾಳಿಯಂತೆ ಆಕಾಶವನ್ನು ಕ್ಷೋಭೆಗೊಳಿಸಿದನು.

೮೫. ಆಗ ದೇವತೆಗಳು ಕಠಿನವಾದ ತೇಜಸ್ಸುಳ್ಳವನೂ, ಜ್ವಾಲೆಯಿಂದ ವ್ಯಾಪ್ತವಾದ ದಿಕ್ಕುಗಳ ಪ್ರದೇಶವುಳ್ಳವನೂ, ಬೆಂಕಿಯಿಂದ ಉರಿಯುತ್ತಿರುವ ಬೆಟ್ಟದಂತಿರುವವನೂ ಆದ ಗರುಡನನ್ನು ಕಂಡು ಬಹಳವಾಗಿ ಹೆದರಿದರು.

೮೬. ಅವರು ಒಡನೆಯೆ ಬಲಾಯುಧಗಳನ್ನು ಸಜ್ಜುಗೊಳಿಸಿಕೊಂಡು ಕವಚಗಳನ್ನು ತೊಟ್ಟು ವಾಹನಗಳಲ್ಲಿ ಕುಳಿತು ಶೀಘ್ರವಾಗಿ ಯುದ್ಧಕ್ಕೆ ಸಿದ್ಧವಾದರು.

೮೭. "ಅಡ್ಡವಾಗಿ ಸಂಚರಿಸುವ ಇವನು ಸೂರ್ಯನಲ್ಲ; ಹೊಗೆಯುಳ್ಳ ಅಗ್ನಿಯೂ ಅಲ್ಲ. ಮಿಂಚೂ ಅಲ್ಲ. ನಮ್ಮ ಎದುರಿಗೆ ಬರುತ್ತಿರುವ ಇವನಾರಿರಬಹುದೊ?

೮೮. ದೈತ್ಯರಲ್ಲಿ ಇಂತಹ ಕಾಂತಿಯೂ, ದಾನವರಲ್ಲಿ ಇಂತಹ ಆಕೃತಿಯೂ ಇರುವುದಿಲ್ಲ. ನಮಗೆ ಅತಿ ಭಯವನ್ನುಂಟುಮಾಡುವವನೂ, ಹೃದಯವನ್ನು ನಡುಗಿಸುವವನೂ ಆದ ಇವನಾರಾಗಿರಬಹುದು?"

ಯಾವತ್ಸಂಭಾವಯಂತೀತಿ ನೀತಿಜ್ಞಾ ಅಪಿ ನಿರ್ಜರಾಃ ।
ತಾವದ್ದುಧಾವ ಸ್ವೌ ಪಕ್ಷೌ ಪಕ್ಷಿರಾಜೋ ಮಹಾಬಲಃ ॥ ೮೯ ॥
ನಿಪೇತುಃ ಪಕ್ಷವಾತೇನ ಸಾಯುಧಾಶ್ಚ ಸವಾಹನಾಃ ।
ನ ಜ್ಞಾಯಂತೇ ಕ್ವ ಸಂಪ್ರಾಪ್ತಾನಾತ್ಯಯಾ ಪಾರ್ಣತಾರ್ಣವತ್ ॥ ೯೦ ॥
ಅಥ ತೇಷು ಪ್ರಣಷ್ಟೇಷು ಬುದ್ಧ್ಯಾ ವಿಜ್ಞಾಯ ಪಕ್ಷಿರಾಟ್ ।
ಕೋಶಾಗಾರಃ ಸುಧಾಯಾಃ ಸ ತತ್ರಾಽಪಶ್ಯಚ್ಚ ರಕ್ಷಿಣಃ ॥ ೯೧ ॥
ಶಸ್ತ್ರಾಸ್ತ್ರೋದ್ಯತಪಾಣೀಂಸ್ತಾನ್ಸುರಾನಾಧೂಯ ಸರ್ವಶಃ ।
ದದರ್ಶ ಕರ್ತರೀಯಂತ್ರಮಮೃತೋಪರಿಸಂಸ್ಥಿತಂ ॥ ೯೨ ॥
ಮನಃ ಪವನವೇಗೇನ ಭ್ರಮಮಾಣಂ ಮಹಾರಯಂ ।
ಅಪಿ ಸ್ಪೃಶಂತಂ ಮಶಕಂ ಯತ್ಖಂಡಯತಿ ಕೋಟಿಶಃ ॥ ೯೩ ॥
ಉಪೋಪವಿಶ್ಯ ಪಕ್ಷೀಂದ್ರಸ್ತಸ್ಯ ಯಂತ್ರಸ್ಯ ನಿರ್ಭಯಃ ।
ಕ್ಷಣಂ ವಿಚಾರಯಾಮಾಸ ಕಿಮತ್ರ ಕರವಾಣ್ಯಹೋ ॥ ೯೪ ॥
ಸ್ಪ್ರಷ್ಟುಂ ನಲಭ್ಯತೇ ಚೈತದ್ವಾತ್ಯಾ ನ ಪ್ರಭವೇದಿಹ ।
ಕ ಉಪಾಯೋಽತ್ರ ಕರ್ತವ್ಯೋ ವೃಥಾ ಜಾತೋ ಮಮೋದ್ಯಮಃ ॥ ೯೫ ॥

---

೮೯. ನೀತಿಜ್ಞರಾದ ದೇವತೆಗಳು ಹೀಗೆ ಊಹಿಸುತ್ತಿರುವಷ್ಟರಲ್ಲಿಯೆ ಬಲಿಷ್ಠನಾದ ಪಕ್ಷಿರಾಜನು ರೆಕ್ಕೆಗಳನ್ನೊಮ್ಮೆ ಹೊಡೆದನು.

೯೦. ಆಗ ಆಯುಧ, ವಾಹನಗಳಿಂದ ಕೂಡಿದ ಆ ದೇವತೆಗಳು ಗರುಡನ ರೆಕ್ಕೆಯ ಗಾಳಿಯಿಂದ ಕೆಳಗೆ ಬಿದ್ದರು. ಗಾಳಿಯಿಂದ ಎಲೆ, ಹುಲ್ಲುಗಳಂತೆ ಅವರು ತಾವು ಎಲ್ಲಿಗೆ ಬಂದೆವೆಂಬುದನ್ನೇ ಅರಿಯಲಿಲ್ಲ.

೯೧. ಬಳಿಕ ಆ ದೇವತೆಗಳೆಲ್ಲರೂ ಅಡಗಿಹೋಗಲು ಗರುಡನು ಬುದ್ಧಿಯಿಂದ ಅಮೃತದ ಬೊಕ್ಕಸವನ್ನು ತಿಳಿದುಕೊಂಡು, ಅದನ್ನು ರಕ್ಷಿಸುವ ಜನರನ್ನೂ ಕಂಡನು.

೯೨–೯೩. ಅವನು ಅಲ್ಲಿ ಶಸ್ತ್ರಾಸ್ತ್ರಗಳನ್ನು ಹಿಡಿದುಕೊಂಡಿರುವ ಆ ದೇವತೆಗಳನ್ನು ದೂರಮಾಡಿ ಅಮೃತದಮೇಲೆ ಮನೋವೇಗದಿಂದ ಸುತ್ತುತ್ತಿರುವುದೂ, ಅತ್ಯಂತ ವೇಗವುಳ್ಳುದೂ, ಅಮೃತಕ್ಕೆ ಮುಸರಲುಬರುವ ಸೊಳ್ಳೆಯನ್ನೂ ಕೋಟಿ ಪ್ರಕಾರವಾಗಿ ಕತ್ತರಿಸುವುದೂ ಆಗಿರುವ ಕರ್ತರೀಯಂತ್ರವನ್ನು ನೋಡಿದನು.

೯೪. ಆ ಪಕ್ಷಿರಾಜನು ಆ ಯಂತ್ರದ ಸಮೀಪದಲ್ಲಿ ನಿರ್ಭಯನಾಗಿ ಕುಳಿತು 'ಈ ವಿಷಯದಲ್ಲಿ ಏನುಮಾಡಲಿ' ಎಂದು ಕ್ಷಣಕಾಲ ವಿಚಾರಮಾಡಿದನು.

೯೫. "ಇದು ಮುಟ್ಟುವುದಕ್ಕೆ ಸಿಕ್ಕುವುದಿಲ್ಲ. ಇದರಲ್ಲಿ ಗಾಳಿಯ ಶಕ್ತಿಯು ಏನೂ ನಡೆಯುವುದಿಲ್ಲ. ಏನು ಉಪಾಯ ಮಾಡಲಿ. ನನ್ನ ಪ್ರಯತ್ನವೇ ನಿಷ್ಫಲವಾಗುವುದಲ್ಲವೆ!

**ನ ಬಲಂ ಪ್ರಭವೇದತ್ರ ನಕಿಂಚಿದಪಿ ಪೌರುಷಂ ।**
**ಅಹೋ ಪ್ರಯತ್ನೋ ದೇವಾನಾಮೇತತ್ಪೀಯೂಷರಕ್ಷಣೇ ॥ ೯೬ ॥**
**ಯದಿ ಮೇ ಶಂಕರೇ ಭಕ್ತಿರ್ನಿರ್ದ್ವಂದ್ವಾಽತೀವನಿಶ್ಚಲಾ ।**
**ತದಾ ಸ ದೇವದೇವೋ ಮಾಂ ನಿಯುನಕ್ತು ಮಹಾಽಧಿಯಾ ॥ ೯೭ ॥**
**ಯದ್ಯಹಂ ಮಾತೃಭಕ್ತೋಽಸ್ಮಿ ಸ್ವಾಮಿನಃ ಶಂಕರಾದಪಿ ।**
**ತದಾ ಮೇ ಬುದ್ಧಿರತ್ರಾಸ್ತು ಪೀಯೂಷಹರಣಕ್ಷಮಾ ॥ ೯೮ ॥**
**ಆತ್ಮಾರ್ಥಂ ನೋದ್ಯಮಶ್ಚಾಽಯಂ ಹೃತ್ಸ್ಥೋ ವೇತ್ತೀತಿ ವಿಶ್ವಗಃ ।**
**ಮಾತುರ್ದಾಸ್ಯವಿಮೋಕ್ಷಾಯ ಯತೇಽಹಮಮೃತಂ ಪ್ರತಿ ॥ ೯೯ ॥**
**ಜರಿತೌ ಪಿತರೌ ಯಸ್ಯ ಬಾಲಾಽಪತ್ಯಶ್ಚ ಯಃ ಪುಮಾನ್ ।**
**ಸಾಧ್ವೀ ಭಾರ್ಯಾ ಚ ತತ್ಪುಷ್ಟ್ಯೈ ದೋಷೋಽಕೃತ್ಯೇಽಪಿ ತಸ್ಯ ನ ॥ ೧೦೦ ॥**
**ಇತಿ ಚಿಂತಯತಸ್ತಸ್ಯ ಬುದ್ಧಿರಾಸೀನ್ಮಹಾತ್ಮನಃ ॥ ೧೦೧ ॥**
**ದೇಹಂ ಚಕಾರ ಸೋಽತ್ಯಂತಮಣೀಯಾಂಸಮಣೋರಪಿ ।**
**ಪರಮಾಣುಸಹಸ್ರಾಂಶಂ ಕೃತ್ವಾ ರೂಪಂ ಮಹಾಽದ್ಭುತಂ ॥ ೧೦೨ ॥**

---

೯೬. ಈ ಚಕ್ರದ ವಿಷಯದಲ್ಲಿ ಬಲವಾಗಲಿ, ಪುರುಷಪ್ರಯತ್ನವಾಗಲಿ ನಡೆಯಲಾರದು. ಈ ಅಮೃತರಕ್ಷಣೆಯ ವಿಷಯದಲ್ಲಿ ದೇವತೆಗಳ ಪ್ರಯತ್ನವು ಆಶ್ಚರ್ಯಕರವಾದುದು !

೯೭. ನನಗೆ ಶಂಕರನಲ್ಲಿ ದೃಢವಾದ ಭಕ್ತಿಯಿರುವುದಾದರೆ ಆತನೇ ನನ್ನ ಈ ಮೂಢತನವನ್ನು ನಿವಾರಿಸಲಿ.

೯೮. ಸ್ವಾಮಿಯಾದ ಶಂಕರನಲ್ಲಿರುವುದಕ್ಕಿಂತಲೂ ನನಗೆ ತಾಯಿಯಲ್ಲಿ ಹೆಚ್ಚು ಭಕ್ತಿಯಿರುವುದಾದರೆ ಅಮೃತವನ್ನು ಅಪಹರಿಸಲು ಸಮರ್ಥವಾದ ಬುದ್ಧಿಯುಂಟಾಗಲಿ.

೯೯. ಈ ಪ್ರಯತ್ನವು ನನಗಾಗಿ ಅಲ್ಲ. ನನ್ನ ಮನಸ್ಸಿನಲ್ಲಿರುವುದನ್ನು ಸರ್ವಾಂತರ್ಯಾಮಿಯಾದ ಶಂಕರನು ತಿಳಿಯುವನು. ನಾನು ತಾಯಿಯ ದಾಸ್ಯಮೋಚನೆಗಾಗಿ ಅಮೃತವನ್ನು ಕುರಿತು ಪ್ರಯತ್ನಿಸುವೆನು.

೧೦೦. ಯಾವನ ತಾಯಿ ತಂದೆಗಳು ಮುದುಕರೊ, ಯಾವನು ಸಣ್ಣ ಮಕ್ಕಳುಳ್ಳವನೊ, ಯಾವಳು ಸಾಧ್ವಿಯಾದ ಪತ್ನಿಯೊ ಅವರ ಪೋಷಣೆಗಾಗಿ ಅಕಾರ್ಯವನ್ನೆಸಗಿದರೂ ದೋಷವಿಲ್ಲ.”

೧೦೧–೧೦೪. ಹೀಗೆ ಆಲೋಚಿಸುತ್ತಿರುವ ಅವನಿಗೆ ಈ ರೀತಿ ಬುದ್ಧಿಯು ಉಂಟಾಯಿತು. ಒಡನೆಯೆ ಅವನು ದೇಹವನ್ನು ಅಣುವಿಗಿಂತಲೂ ಸಣ್ಣದಾಗಿಸಿಕೊಂಡನು. ಹೀಗೆ ಪರಮಾಣುವಿನ ಸಾವಿರಪಾಲಿನಷ್ಟು ಸೂಕ್ಷ್ಮಾದ್ಭುತ

ಪ್ರವಿಶ್ಯ ಕರ್ತರೀಯಂತ್ರಮಧೋ ದೇಹಸ್ಯ ಲಾಘವಾತ್ ।
ಬಿಭ್ಯತ್ತದ್ಯಂತ್ರತೋ ದೇಹಂ ಸಂಚಯನ್ವಾಯುಖಂಡನಾತ್ ।
ಮೂಲಮುತ್ಪಾಟ್ಯ ತರಸಾ ಗೃಹೀತ್ವಾಽಮೃತಭಾಜನಂ ॥ ೧೦೩ ॥
ನಿರ್ಯಯೌ ಪಾವನೇ ಮಾರ್ಗೇ ಕ್ರೋಶತ್ಸು ಸ್ವರ್ಗಸದ್ಮಸು ॥ ೧೦೪ ॥
ತಥಾ ವೈಕುಂಠನಾಥಂ ತೇ ಗತ್ವಾ ಪ್ರೋಚುಃ ಸುಧಾಭುಜಃ ।
ನಿರ್ಜಿತ್ಯ ನೀಯತೇ ಚಕ್ರಿನ್ಸುಧಾ ನೋ ಜೀವಿತಂ ಪರಂ ॥ ೧೦೫ ॥
ಇತ್ಯಾಕರ್ಣ್ಯ ಹರಿಸ್ತೇಭ್ಯೋಽಭಯಂ ದತ್ವಾ ತ್ವರಾಯುತಃ ।
ಕೃತ್ವಾ ಯುದ್ಧಂ ಚ ಸುಮಹದ್ವಿಂಶಾರ್ಕಘಟಿಕಾದ್ವಯಂ ॥ ೧೦೬ ॥
ಶುಂಭದೇವ್ಯೋರ್ಯಥಾಸೂತ ಗರುಡಸ್ತತ್ರಚಾಽಧಿಕಃ ।
ತದಾ ಪ್ರಸನ್ನೋ ಭಗವಾನ್ಮಹಾಯುದ್ಧೇನ ಸರ್ವದಃ ॥ ೧೦೭ ॥
ಗತ್ವಾ ಗರುಡಮಾಹೇದಂ ಪ್ರಸನ್ನೋಽಸ್ಮಿ ಖಗೇಶ್ವರ ।
ವರಂ ವೃಣೀಹಿ ಭದ್ರಂ ತೇ ಜಿತವೃಂದಾರವೃಂದಕ ॥ ೧೦೮ ॥
ಹಸಿತ್ವಾ ಗರುಡಃ ಪ್ರಾಹ ವಿಶ್ವರೂಪಂ ಜನಾರ್ದನಂ ।
ಅಹಮೇವ ಪ್ರಸನ್ನೋಽಸ್ಮಿ ತ್ವಂ ಪ್ರಾರ್ಥಯ ವರದ್ವಯಂ ॥ ೧೦೯ ॥

---

ರೂಪವನ್ನು ತಾಳಿ ದೇಹಲಾಘವದಿಂದ ಕರ್ತರೀಯಂತ್ರದ ಕೆಳಭಾಗವನ್ನು ಪ್ರವೇಶಿಸಿ ವಾಯುವನ್ನು ಭೇದಿಸುವ ಆ ಯಂತ್ರದಿಂದ ಹೆದರುತ್ತಲೂ, ದೇಹವನ್ನು ತಪ್ಪಿಸಿಕೊಳ್ಳುತ್ತಲೂ ಆ ಯಂತ್ರದ ಬುಡವನ್ನು ಬಲದಿಂದಲೇ ಕತ್ತರಿಸಿ ಅಮೃತ ಪಾತ್ರೆಯನ್ನು ತೆಗೆದುಕೊಂಡು ದೇವತೆಗಳು ಎತ್ತೆತ್ತಲೂ ಕೂಗುತ್ತಿರುವಾಗಲೆ ವಾಯುವೇಗದಿಂದ ಹೊರಟನು.

೧೦೫. ಆ ದೇವತೆಗಳು ಹಾಗೆಯೇ ವಿಷ್ಣುವಿನ ಬಳಿಗೈದಿ, " ಓ ಸ್ವಾಮಿಯೆ ! ನಮ್ಮ ಪ್ರಾಣಕ್ಕಿಂತಲೂ ಅಧಿಕವಾದ ಅಮೃತವನ್ನು ಗರುಡನು ನಮ್ಮನ್ನು ಜಯಿಸಿ ತೆಗೆದುಕೊಂಡು ಹೋಗುತ್ತಿರುವನು " ಎಂದರು.

೧೦೬. ಹರಿಯು ದೇವತೆಗಳ ಮಾತನ್ನು ಕೇಳಿ ಅವರಿಗೆ ಅಭಯವನ್ನಿತ್ತು ತ್ವರೆಯಿಂದ ಆರುವತ್ತನಾಲ್ಕು ಘಳಿಗೆಗಳಕಾಲ ಆ ಗರುಡನೊಡನೆ ಘೋರ ಯುದ್ಧವನ್ನೆಸಗಿದನು.

೧೦೭–೧೦೯. ಆ ವಿಷ್ಣು ಗರುಡರಲ್ಲಿ ಶುಂಭದೇವಿಯರ ನಡುವೆ ಶುಂಭನಂತೆ ಗರುಡನು ಅಧಿಕನಾಗಲು ಸರ್ವದಾತನಾದ ಹರಿಯು ಆ ಮಹಾಯುದ್ಧದಿಂದ ಪ್ರಸನ್ನನಾಗಿ ಗರುಡನ ಬಳಿಗೈದಿ, " ಪಕ್ಷಿರಾಜ ! ನಿನಗೆ ಒಲಿದಿರುವೆನು. ದೇವತೆಗಳನ್ನು ಗೆದ್ದ ನೀನು ವರವನ್ನು ಕೇಳಿಕೊ. ನಿನಗೆ ಮಂಗಳವಾಗಲಿ" ಎಂದನು. ಗರುಡನು ನಕ್ಕು, ಶ್ರೀಹರಿಯನ್ನು ಕುರಿತು ಇಂತೆಂದನು. " ನಾನೇ ಪ್ರಸನ್ನನಾಗಿರುವೆನು. ನೀನೇ ಎರಡು ವರಗಳನ್ನು ಕೇಳಿಕೊ " ಎಂದನು.

ತತಃ ಕೈಟಭಜಿತ್ಪ್ರಾಹ ವೈನತೇಯಂ ಮುದಾಽನ್ವಿತಃ ।
ವೃತಂ ವೃತಂ ಮಹೋದಾರ ದೇಹಿ ದೇಹಿ ವರದ್ವಯಂ ॥ ೧೧೦ ॥
ಇತಿ ವಿಷ್ಣೂದಿತಂ ಶ್ರುತ್ವಾ ಪ್ರಹಸನ್ನಾಹ ಪಕ್ಷಿರಾಟ್ ।
ಕಿಂ ವಿಲಂಬೇನ ತದ್ಬ್ರೂಹಿ ದತ್ತಂ ದತ್ತಂ ವರದ್ವಯಂ ॥ ೧೧೧ ॥
ಅಲಬ್ಧಲಾಭೇ ಸಂಜಾತೇ ದ್ಯೂತಾದಿ ವಿಜಯೋದಯೇ ।
ದಾತವ್ಯಂ ಸುಧಿಯಾ ಪಾತ್ರೇ ಸದಾ ಲಾಭಜಯೌ ಕ್ವವಾ ॥ ೧೧೨ ॥

ಶ್ರೀ ವಿಷ್ಣುರುವಾಚ :—

ಬಲವಾನಸಿ ಪಕ್ಷೀಂದ್ರ ತನ್ಮೇ ವಾಹನತಾಂ ವ್ರಜ ।
ಏಕೋ ವರೋಽಯಂ ವರದ ದ್ವಿತೀಯಂ ಶೃಣು ಕಾಶ್ಯಪ ॥ ೧೧೩ ॥
ದರ್ಶಯಿತ್ವಾಽಮೃತಂ ಪ್ರಾಜ್ಞ ಮಾತೃದಾಸ್ಯವಿಮೋಕ್ಷಕಂ ।
ದ್ವಿಜಿಹ್ವೇಭಃ ಕುರು ತಥಾ ದ್ರಾಗಶ್ನಂತಿ ನ ತೇ ಯಥಾ ॥ ೧೧೪ ॥
ದೇಯಾ ಸುಧಾ ಸುಧಾಭುಗ್ಭ್ಯೋ ದ್ವಿತೀಯೋಽಸ್ತು ವರೋ ಮಮ ।
ತಥೇತಿ ಸ ಪ್ರತಿಜ್ಞಾಯ ನಿರ್ಯಯೌ ಪಕ್ಷಿರಾಡ್ದಿವಃ ॥ ೧೧೫ ॥
ಸ ಮಾತರಂ ವಿನಿರ್ಮೋಚ್ಯ ದಾಸ್ಯಾತ್ಕಾಶ್ಯಪನಂದನಃ ।
ನಾಗಾನಾಂ ಪುರತೋ ಧೃತ್ವಾ ಮಹಾಽಮೃತಕಮಂಡಲುಂ ॥ ೧೧೬ ॥

---

೧೧೦. ಬಳಿಕ ಕೈಟಭಾರಿಯಾದ ವಿಷ್ಣುವು ಗರುಡನನ್ನು ಕುರಿತು ಸಂತೋಷ ದಿಂದ ಹೀಗೆಂದನು, "ಅಯ್ಯಾ ದಾನಶೂರನೆ! ಎರಡು ವರಗಳನ್ನು ಕೇಳುವೆನು. ಕೊಡು, ಕೊಡು."

೧೧೧. ಪಕ್ಷಿರಾಜನು ಹೀಗೆ ವಿಷ್ಣುವು ಹೇಳಿದ ಮಾತನ್ನು ಕೇಳಿ ನಗುತ್ತ ಇಂತೆಂದನು. "ವಿಳಂಬವೇಕೆ? ವರವನ್ನು ಶೀಘ್ರವಾಗಿ ಕೇಳಿಕೊ.

೧೧೨. ಅಲಬ್ಧಲಾಭವೂ, ಜೂಜು ಮೊದಲಾದುವುಗಳ ಜಯವೂ ಉಂಟಾ ಗಲು ಜ್ಞಾನಿಯು ಸತ್ಪಾತ್ರನಲ್ಲಿ ದಾನಮಾಡಬೇಕು. ಯಾವಾಗಲೂ ಲಾಭ ಜಯಗಳಲ್ಲುಂಟಾಗುವುವು?"

೧೩೩. ಆಗ ವಿಷ್ಣುವು, "ಪಕ್ಷಿರಾಜ! ನೀನು ಬಲಿಷ್ಠನಾಗಿರುವೆ. ಆದುದ ರಿಂದ ನನಗೆ ವಾಹನವಾಗು. ಇದೊಂದು ವರವು. ಎರಡನೆ ವರವನ್ನು ಕೇಳು.

೧೧೪—೧೧೫. ಎಲೈ ಪ್ರಾಜ್ಞನೆ! ತಾಯಿಯ ದಾಸ್ಯವನ್ನು ನೀಗಿಸುವ ಅಮೃತ ವನ್ನು ಸರ್ಪಗಳಿಗೆ ತೋರಿಸಿ, ಕೂಡಲೆ ಅವು ಕುಡಿಯದಂತೆ ಮಾಡಿ ದೇವತೆಗಳಿಗೆ ಅದನ್ನು ಕೊಡು. ಇದು ನನ್ನ ಎರಡನೆ ವರವು" ಎಂದನು. ಗರುಡನು ಹಾಗೆಯೇ ಆಗಲೆಂದು ಸ್ವರ್ಗದಿಂದ ಹೊರಟನು.

೧೧೬—೧೧೭. ಬಳಿಕ ಆತನು ತಾಯಿಯನ್ನು ದಾಸ್ಯದಿಂದ ಬಿಡಿಸಿ ಅಮೃತ ಕಮಂಡಲುವನ್ನು ನಾಗಗಳ ಮುಂದಿರಿಸಿ ಅಮೃತವನ್ನು ಕುಡಿಯಲಿಚ್ಛಿಸಿದ

**ಅಮೃತಂ ಪಾತುಕಾಮಾಂಸ್ತಾನಿತ್ಯಾಚಷ್ಟ ಮಹಾಮತಿಃ ।**
**ನಾಗಾಃ ಶುಚಿತ್ವಮಾಸಾದ್ಯ ಭೋಕ್ತ್ರವ್ಯೈಷಾ ಸುಧಾ ಶುಭಾ ॥ ೧೧೭ ॥**
**ನೋಚೇದಶುಚಿಭಿಃ ಸ್ಪೃಷ್ಟಾ ಸ್ನಾನಾದಿಪರಿವರ್ಜಿತೈಃ ।**
**ಯಾಸ್ಯತ್ಯದೃಶ್ಯತಾಮೇಷಾ ಸುಧಾಽನಿಮಿಷರಕ್ಷಿತಾ ॥ ೧೧೮ ॥**
**ಸಾಮಾನ್ಯಮಪಿ ಯದ್ಭಕ್ಷ್ಯಂ ಸ್ಪೃಶ್ಯತೇಽಶುಭಾಃ ಕ್ವಚಿತ್ ।**
**ಹರಂತಿ ತದ್ರಸಂ ದೇವಾಸ್ತಚ್ಚ ತಿಷ್ಠತಿ ನೀರಸಂ ॥ ೧೧೯ ॥**
**ಇತ್ಯುಕ್ತ್ವಾ ಸಹಿತೋ ಮಾತ್ರಾ ವೈನತೇಯೋ ವಿನಿರ್ಯಯೌ ।**
**ಕುಶಾಸನೇ ಚ ತೈರುಕ್ತೋ ಧೃತ್ವಾ ಪೀಯೂಷಭಾಜನಂ ॥ ೧೨೦ ॥**
**ಯಾವತ್ಸ್ನಾತುಂ ಗತಾಃ ಸರ್ಪಾಸ್ತಾವತ್ಪೀಯೂಷ ಭಾಜನಂ ।**
**ಆದಾಯ ವಿಷ್ಣುನಾ ದತ್ತಂ ದೇವೇಭ್ಯ ಇವ ಜೀವಿತಂ ॥ ೧೨೧ ॥**
**ಆಗತ್ಯ ಭುಜಗಾಃ ಸ್ನಾತ್ವಾ ನ ದೃಷ್ಟ್ವಾಽಮೃತಭಾಜನಂ ।**
**ಅಹೋ ಪ್ರತಾರಿತಾ ನೀತಮಮೃತಂ ಚೇತಿ ಚುಕ್ರುಶುಃ ॥ ೧೨೨ ॥**
**ತತಃ ಪ್ರಲಿಲಿಹನ್ದರ್ಭಾನ್ಪೀಯೂಷಸ್ಪರ್ಶಕಾಂಕ್ಷಿಣಃ ।**
**ಆಸ್ತಾಂ ತಾವತ್ಸುಧಾ ದೂರಂ ಜಿಹ್ವಾಸ್ತೇಷಾಂ ದ್ವಿಧಾಽಭವನ್ ॥ ೧೨೩ ॥**

---

ಅವುಗಳನ್ನು ಕುರಿತು ಹೀಗೆಂದನು. "ಎಲೈ ನಾಗಗಳೆ! ಶುಚಿಯಾಗಿ ಈ ಅಮೃತವನ್ನು ಕುಡಿಯಬೇಕು.

೧೧೮. ಹಾಗಿಲ್ಲದೆ ಸ್ನಾನಾದಿಗಳನ್ನು ಮಾಡದ ಅಪವಿತ್ರರು ಮುಟ್ಟಿದರೆ ದೇವತೆಗಳು ಕಾಪಾಡಿದ ಇದು ಅಡಗಿಹೋಗುವುದು.

೧೧೯. ಸಾಮಾನ್ಯಭಕ್ಷ್ಯವನ್ನೂ ಅಶುದ್ಧರು ಮುಟ್ಟಿದರೆ ದೇವತೆಗಳು ಅದರ ರಸವನ್ನು ಅಪಹರಿಸುವರು. ಅದು ನೀರಸವಾಗುವುದು."

೧೨೦. ಗರುಡನು ಹೀಗೆ ನುಡಿದು, ಆ ಸರ್ಪಗಳ ಮಾತಿನಂತೆ ಅಮೃತಕಲಶವನ್ನು ಕುಶಾಸನದಲ್ಲಿಟ್ಟು ತಾಯಿಯೊಡನೆ ಹೊರಟುಹೋದನು.

೧೨೧. ಸರ್ಪಗಳು ಸ್ನಾನಮಾಡಲು ಹೊರಡಲು ವಿಷ್ಣುವು ದೇವತೆಗಳ ಜೀವದಂತಿರುವ ಆ ಅಮೃತವನ್ನು ತೆಗೆದುಕೊಂಡುಹೋಗಿ ಮತ್ತೆ ಆ ದೇವತೆಗಳಿಗಿತ್ತನು.

೧೨೨. ಸರ್ಪಗಳು ಮಿಂದು ಬಂದು ನೋಡಲು ಅಮೃತವು ಕಾಣಿಸಲಿಲ್ಲ. ಆಗ ಅವು "ಅಯ್ಯೊ ನಾವು ವಂಚಿತರಾದೆವು. ಅಮೃತವು ಅಪಹೃತವಾಗಿರುವುದು" ಎಂದು ಕೂಗಿಕೊಂಡುವು.

೧೨೩. ಬಳಿಕ ಆ ಸರ್ಪಗಳು ಅಮೃತದ ಸ್ಪರ್ಶವನ್ನಪೇಕ್ಷಿಸುತ್ತ ಅಲ್ಲಿದ್ದ ದರ್ಭೆಗಳನ್ನು ನೆಕ್ಕಿದುವು. ಅಮೃತವು ದೂರವಾದುದಂತಿರಲಿ. ಆ ಸರ್ಪಗಳ ನಾಲಿಗೆಗಳು ಎರಡಾಗಿಹೋದುವು.

ಅನ್ಯೇಽಪ್ಯನ್ಯಾಯಲಬ್ಧಾರ್ಥಂ ಯೇ ಬುಭುಕ್ಷಂತಿ ಕೇವಲಂ ।
ತನ್ನೋ ಪರಿಣತಿಂ ಗಚ್ಛೇದ್ಭೋಕ್ತುಂ ವಾ ತೈರ್ನಲಭ್ಯತೇ ॥ ೧೨೪ ॥
ನ್ಯಾಯಾಧ್ವಸ್ತೇನ ತಾರ್ಕ್ಷ್ಯೇಣ ಸುಧಾಪ್ರಾಪ್ತಾಽತಿದುರ್ಲಭಾ ।
ಲಬ್ಧಾಽಪ್ಯನ್ಯಾಯತೋ ನಾಗೈರ್ದೃಷ್ಟಮಾತ್ರಾತ್ ಕ್ಷಣಾದ್ಗತಾ ॥ ೧೨೫ ॥
ಅಥ ದಾಸ್ಯಾದ್ವಿನಿರ್ಮುಕ್ತಾ ವಿನತೋವಾಚ ಖೇಚರಂ ।
ಪುತ್ರ ಕಾಶೀಂ ಪ್ರಯಾಸ್ಯಾಮಿ ದಾಸ್ಯಪಾಪಾಽಪನುತ್ತಯೇ ॥ ೧೨೬ ॥
ತಾವತ್ಪಾಪಾನಿ ಜೃಂಭಂತೇ ನಾನಾ ಜನ್ಮಾರ್ಜಿತಾನ್ಯಪಿ ।
ಯಾವತ್ಕಾಶೀ ನ ಹೃತ್ಸಂಸ್ಥಾ ಪುನರ್ಭವವಿಘಾತಿನೀ ॥ ೧೨೭ ॥
ಕಾಶೀಸ್ಮರಣಮಾತ್ರೇಣ ಕಿಂ ಚಿತ್ರಂ ಯದಘಂ ವ್ರಜೇತ್ ।
ಗರ್ಭವಾಸೋಽಪಿ ನಶ್ಯೇತ ವಿಶ್ವೇಶಾನುಗ್ರಹಾತ್ಪರಾತ್ ॥ ೧೨೮ ॥
ಯತ್ರ ವಿಶ್ವೇಶ್ವರಃ ಸಾಕ್ಷಾತ್ತಾರಾಪತಿವಿಭೂಷಣಃ ।
ತಾರಯೇತ್ತಾರಕದ್ರೋಣ್ಯಾದುಸ್ತರಾದ್ಭವಸಾಗರಾತ್ ॥ ೧೨೯ ॥
ವಿಶ್ವೇಶಾಽನುಗೃಹೀತಾನಾಂ ವಿಚ್ಛಿನ್ನಾಽಖಿಲಕರ್ಮಣಾಂ ।
ಭವೇತ್ಕಾಶೀಂ ಪ್ರತಿಮತಿರ್ನೇತರೇಷಾಂ ಕದಾಚನ ॥ ೧೩೦ ॥

---

೧೨೪. ಹೀಗೆ ಅನ್ಯಾಯಲಬ್ಧವಾದ ವಸ್ತುವನ್ನು ತಿನ್ನಬಯಸುವ ಇತರರಿಗೂ ಆ ವಸ್ತುವು ದೊರೆಯುವುದಿಲ್ಲ. ಪಕ್ವವೂ ಆಗುವುದಿಲ್ಲ.

೧೨೫. ನ್ಯಾಯಮಾರ್ಗವನ್ನವಲಂಬಿಸಿದ ಗರುಡನು ಅತಿದುರ್ಲಭವಾದ ಅಮೃತವನ್ನು ಪಡೆದನು. ನಾಗಗಳು ಅನ್ಯಾಯದಿಂದ ಹೊಂದಿದ ವಸ್ತುವನ್ನು ನೋಡಿದಕೂಡಲೆ ಅದು ನಷ್ಟವಾಯಿತು.

೧೨೬. ತರುವಾಯ ದಾಸ್ಯಮುಕ್ತಳಾದ ವಿನತೆಯು ಗರುಡನನ್ನು ಕುರಿತು ಇಂತೆಂದಳು. '' ಮಗು ! ದಾಸ್ಯಪಾಪದ ಪರಿಹಾರಕ್ಕಾಗಿ ಕಾಶಿಗೆ ಹೋಗುವೆನು.

೧೨೭. ಸಂಸಾರವನ್ನು ನಾಶಗೊಳಿಸುವ ಕಾಶೀಸ್ಮರಣೆಯು ಮನಸ್ಸಿಗೆ ಬಾರದಿರುವವರೆಗೆ ನಾನಾ ಜನ್ಮಗಳಲ್ಲಿ ಸಂಚಿತವಾದ ಪಾಪಗಳು ವಿಜೃಂಭಿಸುವುವು.

೧೨೮. ಕಾಶೀಸ್ಮರಣಮಾತ್ರದಿಂದಲೇ ಪಾಪವು ಪರಿಹಾರವಾಗುವುದು ಏನಾಶ್ಚರ್ಯ? ವಿಶ್ವೇಶಾನುಗ್ರಹದಿಂದ ಗರ್ಭವಾಸವೂ ನೀಗುವುದು.

೧೨೯. ಆ ಕಾಶಿಯಲ್ಲಿ ಚಂದ್ರಮೌಳೀಶ್ವರನು ತಾರಕಮಂತ್ರವೆಂಬ ದೋಣಿಯಿಂದ ಎಲ್ಲರನ್ನೂ ದುಸ್ತರವಾದ ಈ ಭವಸಾಗರವನ್ನು ದಾಟಿಸುವನು.

೧೩೦. ವಿಶ್ವೇಶ್ವರಾನುಗ್ರಹಕ್ಕೆ ಪಾತ್ರರೂ, ಸಕಲಕರ್ಮಗಳಿಂದ ವಿಮುಕ್ತರೂ ಆದವರಿಗೆ ಕಾಶಿಗೆ ಹೋಗಲು ಬುದ್ಧಿಯುಂಟಾಗುವುದು. ಇತರರಿಗೆ ಉಂಟಾಗುವುದಿಲ್ಲ.

ಕಾಶೀಂಪ್ರತಿ ಮನೋ ಯೇಷಾಂ ನಿಃಶೇಷಕ್ಷಾಲಿತೈನಸಾಂ ।
ತ ಏವ ಮಾನವಾ ಲೋಕೇ ಸತ್ಯಂ ನೃಪಶವೋಽಪರೇ ॥ ೧೩೧ ॥
ತೈರೇವ ಕಾಲೋ ವಿಜಿತಸ್ತ ಏವ ಹಿ ಗತೈನಸಃ ।
ಅಪುನರ್ಗರ್ಭವಾಸಾಸ್ತೇ ಪ್ರಾಪ್ತಾ ವಾರಾಣಸೀಹ ಯೈಃ ॥ ೧೩೨ ॥
ಶ್ರೇಯಸಾಂ ಭಾಜನಂ ಚೈವ ನೃಜನ್ಮ ನ ಮುಧಾ ನಯೇತ್ ॥
ದೇವಾನಾಮಪಿ ದುಷ್ಪ್ರಾಪ್ಯಂ ಕಾಶೀಸಂದರ್ಶನಾದೃತೇ ॥ ೧೩೩ ॥
ಕಃ ಕಲಿಃ ಕೋಽಥವಾ ಕಾಲಃ ಕಿಂ ವಾ ಕರ್ಮಾಣ್ಯನೇಕಧಾ ।
ಪರಾಽಽನಂದಪ್ರದಂ ಕ್ಷೇತ್ರಮವಿಮುಕ್ತಂ ಯದೀಕ್ಷಿತಂ ॥ ೧೩೪ ॥
ತೇ ಗರ್ಭವಾಸೇ ತಿಷ್ಠಂತಿ ಪುನಸ್ತೇ ಗರ್ಭವಾಸಿನಃ ।
ಯೇನ ಗರ್ಭವನಚ್ಛೇತ್ರೀಂ ಸೇವಂತೇ ವರಣಾಮಪಿ ॥ ೧೩೫ ॥
ನಿಶಮ್ಯೇತಿ ವಚಃ ಪ್ರಾಹ ತಾರ್ಕ್ಷ್ಯೋ ನತ್ವಾಽಥ ಮಾತರಂ ।
ಅಹಮಪ್ಯಾಗಮಿಷ್ಯಾಮಿ ಕಾಶೀಂ ದ್ರಷ್ಟುಂ ಶಿವಾರ್ಚಿತಾಂ ॥ ೧೩೬ ॥
ಮಾತುರಾಜ್ಞಾಮಥ ಪ್ರಾಪ್ಯ ಜನನ್ಯಾ ಸಹ ಪಕ್ಷಿರಾಟ್ ।
ಕ್ಷಣಾದ್ವಾರಾಣಸೀಂ ಪ್ರಾಪ ಮೋಕ್ಷನಿಕ್ಷೇಪಭೂಮಿಕಾಂ ॥ ೧೩೭ ॥
ಉಭಾವಪಿ ಚ ತೇಪಾತೇ ತಪ ಉಗ್ರಂ ಮಹಾಮತೇ ।
ಸಂಸ್ಥಾಪ್ಯ ಶಾಂಭವಂ ಲಿಂಗಂ ಪತತ್ರೀಂದ್ರೋಽಚಲೇಂದ್ರಿಯಃ ॥ ೧೩೮ ॥

---

೧೩೧. ಸಂಪೂರ್ಣವಾಗಿ ಪಾಪವನ್ನು ಪರಿಹರಿಸಿಕೊಂಡು ಕಾಶಿಗೆ ಹೋಗಲು ಮನಮಾಡುವವರೇ ಮಾನವರು. ಇತರರು ಮನುಷ್ಯಪಶುಗಳು.

೧೩೨. ವಾರಾಣಸಿಯನ್ನು ಹೊಂದಿದವರೇ ಯಮನನ್ನು ಜಯಿಸಿದವರೂ, ಪಾಪರಹಿತರೂ, ಗರ್ಭವಾಸವಿಲ್ಲದವರೂ ಆಗುವರು.

೧೩೩. ಕಾಶಿಯನ್ನು ದರ್ಶನಮಾಡದೆ ಶ್ರೇಯಸ್ಸಿಗೆ ಪಾತ್ರವೂ, ದೇವತೆಗಳಿಗೆ ದುಷ್ಪ್ರಾಪ್ಯವೂ ಆದ ನರಜನ್ಮವನ್ನು ವ್ಯರ್ಥವಾಗಿಸಬಾರದು.

೧೩೪. ಮೋಕ್ಷನನ್ನೀಯುವ ಅವಿಮುಕ್ತಕ್ಷೇತ್ರವನ್ನು ಸಂದರ್ಶಿಸಿದರೆ ಕಲಿಯೂ, ಯಮನೂ, ಬಗೆಬಗೆಯ ಕರ್ಮಗಳೂ ಏನುಮಾಡಿಯಾವು?

೧೩೫. ವಾರಾಣಸಿಯನ್ನು ಸೇವಿಸದವರು ಮತ್ತೆ ಮತ್ತೆ ಗರ್ಭವಾಸಿಗಳಾಗುವರು.''

೧೩೬. ಗರುಡನು ಈ ಮಾತನ್ನು ಕೇಳಿ ತಾಯಿಯನ್ನು ವಂದಿಸಿ ಇಂತೆಂದನು. ``ನಾನೂ ಶಿವಪೂಜಿತವಾದ ಕಾಶಿಯನ್ನೀಕ್ಷಿಸಲು ನಿನ್ನೊಡನೆ ಬರುವೆನು.''

೧೩೭. ಬಳಿಕ ಗರುಡನು ತಾಯಿಯ ಆಜ್ಞೆಯನ್ನು ಪಡೆದು ಅವಳೊಡನೆ ಕ್ಷಣಕಾಲದಲ್ಲಿ ಮೋಕ್ಷಭೂಮಿಯಾದ ಕಾಶಿಯನ್ನು ಸೇರಿದನು.

೧೩೮–೧೪೧. ಅಲ್ಲಿ ಗರುಡನು ಜಿತೇಂದ್ರಿಯನಾಗಿ ಶಿವಲಿಂಗವನ್ನೂ,

ನಾಮ್ನಾ ಖಖೋಲ್ಕಮಾದಿತ್ಯಂ ಸಂಸ್ಥಾಪ್ಯ ವಿನತಾ ಶುಭಂ ।
ಅಚಿರೇಣೈವ ಕಾಲೇನ ಮಹತಸ್ತಪಸಸ್ತಯೋಃ ॥ ೧೩೯ ॥
ಕಾಶ್ಯಾಂ ಪ್ರಸನ್ನೌ ಸಂಜಾತೌ ದೇವೌ ಶಂಕರಭಾಸ್ಕರೌ ।
ಗರುಡಸ್ಥಾಪಿತಾಲ್ಲಿಂಗಾದಾವಿರಾಸೀದುಮಾಪತಿಃ ॥ ೧೪೦ ॥
ಗರುಡಾಯ ವರಾನ್ಪ್ರಾದಾತ್ಸುಬಹೂನತಿದುರ್ಲಭಾನ್ ।
ಖಗೇಂದ್ರ ಮಮ ಭಕ್ತೋಽಸಿ ತವ ಜ್ಞಾನಂ ಭವಿಷ್ಯತಿ ॥ ೧೪೧ ॥
ವೇತ್ಸ್ಯಸಿ ತ್ವಂ ರಹಸ್ಯಂ ಮೇ ಯನ್ನಜ್ಞಾತಂ ಸುರೈರಪಿ ।
ತ್ವಯೈತತ್ಸ್ಥಾಪಿತಂ ಲಿಂಗಂ ಗರುಡೇಶ್ವರಸಂಜ್ಞಿತಂ ॥ ೧೪೨ ॥
ಪರಮಜ್ಞಾನದಂ ಪುಂಸಾಂ ದೃಷ್ಟಂ ಸ್ಪೃಷ್ಟಂ ಸಮರ್ಚಿತಂ ।
ಅನ್ಯಚ್ಚ ಶೃಣು ಪಕ್ಷೀಂದ್ರ ಹಿತಂ ತೇ ವಚ್ಮಿ ಸಾಂಪ್ರತಂ ॥ ೧೪೩ ॥
ಅಸಾವಹಂ ಸ ವೈ ವಿಷ್ಣುರ್ಮಾಽಸ್ತು ತೇ ಭೇದದೃಕ್ಚ ನೌ ।
ಏವಂ ತಸ್ಯೈವ ಪಕ್ಷೀಂದ್ರ ದೈತ್ಯೇಂದ್ರಬಲಹಾರಿಣಃ ॥ ೧೪೪ ॥
ಪ್ರಾಪ್ಯ ಸತ್ಪತ್ರತಾಂ ಪತ್ರಿಂಸ್ತ್ವಮಪ್ಯರ್ಚ್ಯೋ ಭವಿಷ್ಯಸಿ ।
ಇತಿ ದತ್ವಾ ವರಂ ಶಂಭುಃ ಸ್ವಭಕ್ತಾಯ ಗರುತ್ಮತೇ ॥ ೧೪೫ ॥
ತತ್ರೈವಾಂತರ್ಹಿತೋ ಜಾತೋ ಗರುಡೋಽಪಿ ಹರಿಂ ಯಯೌ ।
ಹರೇ ರಥತ್ವಂ ಸಂಪ್ರಾಪ್ಯ ಸೋಽಪಿ ಪೂಜ್ಯೋಽಭವದ್ಭುವಿ ॥ ೧೪೬ ॥

---

ವಿನತೆಯು ಶುಭಕರನಾದ ಖಖೋಲ್ಕಾದಿತ್ಯನನ್ನೂ ಪ್ರತಿಷ್ಠೆಮಾಡಿದರು. ಬಳಿಕ ಅವರು ಉಗ್ರತಪಸ್ಸನ್ನಾಚರಿಸಿದರು. ಸ್ವಲ್ಪಕಾಲದಲ್ಲಿಯೇ ಅವರಿಗೆ ಶಿವಾದಿತ್ಯರು ಪ್ರಸನ್ನರಾದರು. ಗರುಡನು ಸ್ಥಾಪಿಸಿದ ಲಿಂಗದಿಂದ ಶಿವನುದ್ಭವಿಸಿ ಆ ಗರುಡನಿಗೆ ಅತಿ ದುರ್ಲಭವಾದ ಬಹುವರಗಳನ್ನು ಕೊಟ್ಟು ಹೀಗೆಂದನು. "ಖಗರಾಜ! ನೀನು ನನ್ನ ಭಕ್ತನಾಗಿರುವೆ. ನಿನಗೆ ದಿವ್ಯಜ್ಞಾನವುಂಟಾಗುವುದು.

೧೪೨–೧೪೩. ನೀನು ದೇವತೆಗಳೂ ತಿಳಿಯದ ರಹಸ್ಯವನ್ನು ತಿಳಿಯುವೆ. ನೀನು ಸ್ಥಾಪಿಸಿದ ಲಿಂಗವು ಗರುಡೇಶ್ವರನೆಂದು ಹೆಸರನ್ನಾಂತು ದರ್ಶನ ಸ್ಪರ್ಶಗಳಿಂದ ಉತ್ತಮಜ್ಞಾನವನ್ನೀಯುವುದು. ಪಕ್ಷಿರಾಜ! ಹಿತವಾದ ಇನ್ನೊಂದು ಮಾತನ್ನು ಕೇಳು. ಅದನ್ನೀಗ ನಿನಗೆ ಹೇಳುವೆನು.

೧೪೪–೧೪೬. ನಾನೂ ವಿಷ್ಣುವೂ ಬೇರೆಯಲ್ಲ. ನೀನು ನಮ್ಮಿರ್ವರಲ್ಲಿ ಭೇದವನ್ನೆಣಿಸಬೇಡ. ಗರುಡ! ನೀನು ದೈತ್ಯರಾಜನ ಬಲವನ್ನು ಅಪಹರಿಸಿದ ವಿಷ್ಣುವಿಗೆ ವಾಹನವಾಗು. ನೀನೂ ಪೂಜ್ಯನಾಗುವೆ." ಶಂಕರನು ಹೀಗೆ ತನ್ನ ಭಕ್ತನಾದ ಗರುಡನಿಗೆ ವರವನ್ನು ನೀಡಿ ಅಲ್ಲಿಯೆ ಮಾಯವಾದನು. ಗರುಡನೂ ಹರಿಯೆಡೆಗೆ ಹೋಗಿ ಅವನ ವಾಹನನಾಗಿ ಭೂಮಿಯಲ್ಲಿ ಸರ್ವಪೂಜ್ಯನಾದನು.

ತಪಸ್ಯಂತೀಮುಥಾಲೋಕ್ಯ ಕದಾಚಿದ್ವಿನತಾಂ ಪ್ರಭುಃ ।
ಶಿವಸ್ಯೈವ ಪರಾಮೂರ್ತಿಃ ಖಖೋಲ್ಕೋ ನಾಮ ಭಾಸ್ಕರಃ ॥ ೧೪೭ ॥
ದತ್ವಾ ವರಂ ಚ ಪಾಪಘ್ನಂ ಶಿವಜ್ಞಾನಸಮನ್ವಿತಂ ।
ಕಾಶೀವಾಸಿಜನಾನೇಕ ಭವಪಾಪಕ್ಷಯಂಕರಃ ॥ ೧೪೮ ॥
ವಿನತಾಽಽದಿತ್ಯ ಇತ್ಯಾಖ್ಯಃ ಖಖೊಲ್ಕಸ್ತತ್ರಸಂಸ್ಥಿತಃ ।
ಇತ್ಥಂ ಖಖೋಲ್ಕ ಆದಿತ್ಯಃ ಕಾಶೀವಿಘ್ನತಮೋಹರಃ ॥ ೧೪೯ ॥
ತಸ್ಯ ದರ್ಶನ ಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ।
ಕಾಶ್ಯಾಂ ಪೈಶಂಗಿಲೇ ತೀರ್ಥೇ ಖಖೋಲ್ಕಸ್ಯ ವಿಲೋಕನಾತ್ ।
ನರಶ್ಚಿಂತಿತಮಾಪ್ನೋತಿ ನೀರೋಗೋ ಜಾಯತೇ ಕ್ಷಣಾತ್ ॥ ೧೫೦ ॥
ನರಃ ಶ್ರುತ್ವೈತದಾಖ್ಯಾನಂ ಖಖೋಲ್ಕಾದಿತ್ಯಸಂಭವಂ ।
ಗರುಡೇಶೇನ ಸಹಿತಂ ಸರ್ವಪಾಪೈಃ ಪ್ರಮುಚ್ಯತೇ ॥ ೧೫೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಖಖೋಲ್ಕಾದಿತ್ಯ ಗರುಡೇಶಯೋ ರ್ವರ್ಣನಂ" ನಾಮ ಪಂಚಾಶತ್ತಮೋಽಧ್ಯಾಯಃ

ಇತಿ ಕಾಶೀಖಂಡ ಪೂರ್ವಾರ್ಧಂ ಸಮಾಪ್ತಂ

---

೧೪೭–೧೪೯. ಬಳಿಕ ಮತ್ತೊಮ್ಮೆ ಶಿವನ ಮತ್ತೊಂದು ಮೂರ್ತಿಯಾದ ಖಖೋಲ್ಕನೆಂಬ ಭಾಸ್ಕರನು ತಪಸ್ಸನ್ನುಮಾಡುತ್ತಿರುವ ವಿನತೆಯನ್ನು ಕಂಡು ಶಿವಜ್ಞಾನದಿಂದ ಸಹಿತವಾದ ಪಾಪನಾಶಕ ವರವನ್ನಿತ್ತು ಕಾಶೀವಾಸಿ ಜನರ ಅನೇಕ ಜನ್ಮಗಳ ಪಾಪವನ್ನು ಪರಿಹರಿಸುವವನೂ, ವಿನತಾದಿತ್ಯನೆಂಬ ಹೆಸರುಳ್ಳವನೂ ಆಗಿ ಅಲ್ಲಿಯೇ ನೆಲೆಸಿದನು. ಹೀಗೆ ಖಖೋಲ್ಕಾದಿತ್ಯನು ಕಾಶಿಯಲ್ಲಿ ವಿಘ್ನಾಂಧಕಾರವನ್ನು ಪರಿಹರಿಸುತ್ತಿರುವನು.

೧೫೦. ಮನುಷ್ಯನು ಅವನ ದರ್ಶನದಿಂದಲೇ ಸಮಸ್ತ ಪಾಪವಿಮುಕ್ತನಾಗುವನು. ಅಲ್ಲದೆ ಪೈಶಂಗಿಲವೆಂಬ ಶಿವತೀರ್ಥದಲ್ಲಿರುವ ಅವನ ದರ್ಶನದಿಂದ ಇಷ್ಟಾರ್ಥವನ್ನು ಪಡೆದು ಕೂಡಲೆ ನೀರೋಗನಾಗುವನು.

೧೫೧. ಗರುಡೇಶನಿಂದ ಸಹಿತನಾದ ಖಖೋಲ್ಕಾದಿತ್ಯನ ಚರಿತ್ರೆಯನ್ನು ಕೇಳಿದ ಮನುಷ್ಯನು ಸಕಲ ಪಾಪಗಳಿಂದಲೂ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಖಖೋಲ್ಕಾದಿತ್ಯಗರುಡೇಶವರ್ಣನ"ವೆಂಬ
ಐವತ್ತನೆಯ ಅಧ್ಯಾಯವು ಮುಗಿದುದು

ಇಲ್ಲಿಗೆ ಕಾಶೀಖಂಡದ ಪೂರ್ವಾರ್ಧವು ಸಂಪೂರ್ಣವಾದುದು

